ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ವೈಷ್ಣವಖಂಡ

## ೨

## ಪುರುಷೋತ್ತಮ (ಜಗನ್ನಾಥ) ಕ್ಷೇತ್ರಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ವೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೭

# ಅರಿಕೆ

ಶ್ರೀ ಸ್ಕಾಂದಮಹಾಪುರಾಣದ ದ್ವಿತೀಯ ಮೂಲಖಂಡವಾದ ವೈಷ್ಣವ ಖಂಡದ ದ್ವಿತೀಯೋಪಖಂಡವಾದ "ಪುರುಷೋತ್ತಮ (ಜಗನ್ನಾಥ) ಕ್ಷೇತ್ರ" ಮಾಹಾತ್ಮ್ಯವು ಈ ಸಂಪುಟದಲ್ಲಿ ಸಂಪೂರ್ಣವಾಗಿರುತ್ತದೆ.

ಭಾರತ ವರ್ಷದ ಚತುರ್ದಿಶೆಗಳಲ್ಲಿಯೂ ನೆಲಸಿ ಅಖಂಡ ಮಹಾತ್ಮ್ಯೆ ವನ್ನೂಳಕೊಂಡು ಅಸಂಖ್ಯಾತ ಭಕ್ತಮಹಾಜನರಿಗೆ ಮನಃಪ್ರಸನ್ನತೆಯನ್ನೂ, ಮುಕ್ತಿಯನ್ನೂ ದೊರಕಿಸಿ "ಚತುರ್ಧಾಮ"ಗಳೆಂದು ಪ್ರಸಿದ್ಧವಾಗಿರುವ (ಬದರೀನಾರಾಯಣ, ದ್ವಾರಕ, ಜಗನ್ನಾಥ, ರಾಮೇಶ್ವರ) ಕ್ಷೇತ್ರಗಳಲ್ಲಿ ಜಗನ್ನಾಥ ಕ್ಷೇತ್ರವೂ ಒಂದು. ಇದು ಈ ಶ್ಲೋಕದಲ್ಲಿ ಸೂಚಿಸಿರುವ

ಅಯೋಧ್ಯಾ ಮಧುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ ।
**ಪುರೀ ದ್ವಾರವತೀ** ಚೈವ ಸಪ್ತೈತೇ ಮೋಕ್ಷದಾಯಕಾಃ ॥

ಸಪ್ತಪುರಗಳಲ್ಲಿ ಒಂದೊಂದು ಪರಿಗಣಿತವಾಗಿರುತ್ತದೆ. ಇಲ್ಲಿ, 'ದ್ವಾರವತೀಪುರೀ' ಎಂದೇ ಅರ್ಥವಾದರೂ, ಕೆಲವರು ದ್ವಾರಕಾಪುರಿಯಲ್ಲಿ ಶ್ರೀಕೃಷ್ಣ ಮಂದಿರವೂ, ಜಗನ್ನಾಥಪುರಿಯಲ್ಲಿ ರಾಮ - ಕೃಷ್ಣ - ಸುಭದ್ರಾ - ಸುದರ್ಶನ ಮೂರ್ತಿಗಳ (ಚತುರ್ಮೂರ್ತಿ ಜಗನ್ನಾಥ) ಮಂದಿರವೂ ಇರುವುದರಿಂದ ಇದನ್ನು ಸಪ್ತಪುರಿ ಗಳಲ್ಲಿಯೇ ಒಂದೆಂದು ವಾದಿಸುತ್ತಾರೆ. ಇದಕ್ಕೆ 'ಪುರಿ (ಪೂರಿ) ಜಗನ್ನಾಥ' ಎಂದೇ ಅಂಕಿತವಿರುತ್ತದೆ. ಅಂತು ಉತ್ತರಭಾರತ ಯಾತ್ರೆಯು ಈ ಕ್ಷೇತ್ರ ವನ್ನು ಸಂದರ್ಶಿಸದೆ ಸಂಪೂರ್ಣವಾಗುವುದಿಲ್ಲ.

"ಪುರುಷೋತ್ತಮ ಅಥವಾ ಜಗನ್ನಾಥ"ವೆಂದು ಪ್ರಸಿದ್ಧವಾಗಿರುವ ಈ ಕ್ಷೇತ್ರಕ್ಕೆ 'ಶ್ರೀಕ್ಷೇತ್ರ'ವೆಂದೂ ಒಂದು ಹೆಸರುಂಟು. ಇದು ಪೂರ್ವಸಾಗರದ ತೀರದಲ್ಲಿದೆ. ಓಢ್ರ (ಒರಿಸ್ಸಾ) ದೇಶಕ್ಕೆ ಸೇರಿದ ಕ್ಷೇತ್ರವಿದು. ಈ ಕ್ಷೇತ್ರದ ಮಧ್ಯದಲ್ಲಿ ಒಂದು ಗುಡ್ಡವಿದೆ. ಇದಕ್ಕೆ ನೀಲಾಚಲವೆಂದು ಹೆಸರು. ಅಲ್ಲಿಯವರು ಇದನ್ನು 'ನೀಲಗಿರಿ' ಎನ್ನುತ್ತಾರೆ. ಈ ನೀಲಗಿರಿಯಮೇಲೆಯೇ 'ದಾರು ಬ್ರಹ್ಮ'ವೆಂದು ಪ್ರಖ್ಯಾತನಾದ ಶ್ರೀಜಗನ್ನಾಥನ ಭವ್ಯದೇವಾಲಯವು ವಿರಾಜಿ ಸುತ್ತಿರುವುದು.

ಈ ದೇವಾಲಯವನ್ನು ನಿರ್ಮಿಸಿದ ಪುಣ್ಯಪುರುಷನು ಪುರಾಣಗಳಲ್ಲೆಲ್ಲ ಮಹಾವ್ಯಕ್ತಿಯೆಂದು ಪ್ರಖ್ಯಾತನಾಗಿರುವ ಇಂದ್ರದ್ಯುಮ್ನ ಮಹಾರಾಜನು. ಈತನು ನೀಲಾಚಲದಲ್ಲಿ ನೀಲಮಣಿಮಯಮೂರ್ತಿಯಾಗಿ ನೆಲಸಿದ್ದ ಶ್ರೀ ಜಗನ್ನಾಥನ ಮಾಹಾತ್ಮ್ಯವನ್ನು ವಿಷ್ಣುಭಕ್ತರಿಂದ ಕೇಳಿ ಸಂದರ್ಶನಕ್ಕಾಗಿ ಅಲ್ಲಿಗೆ ಸಪರಿವಾರನಾಗಿ ಹೋಗುವನು. ಅಲ್ಲಿಗೆ ಹೋದಬಳಿಕ ಶ್ರೀ ಜಗನ್ನಾಥ ಮೂರ್ತಿಯು ಸ್ವರ್ಣವಾಲುಕೆಗಳಿಂದ ಮುಚ್ಚಿಹೋಗಿರುವುದು ಅವನಿಗೆ ಗೊತ್ತಾ

ಗುವುದು. ತನ್ನ ಮನೋರಥವು ವಿಫಲವಾದುದಕ್ಕೆ ಖಿನ್ನನಾಗಿ ಅವನು ಪರಿತಪಿಸುತ್ತಿರಲು ದೇವಮುನಿಯಾದ ನಾರದನು ತನ್ನ ಜನಕನಾದ ಕಮಲಾಸನನು, "ಇಂದ್ರದ್ಯುಮ್ನ ರಾಜನು ಸಹಸ್ರಾಶ್ವಮೇಧಯಾಗಗಳನ್ನು ಮಾಡಲಿ. ಯಾಗಾಂತ್ಯದಲ್ಲಿ ಸ್ವಾಮಿಯು ಅಲ್ಲಿಯೇ ಆವಿರ್ಭವಿಸುತ್ತಾನೆ" ಎಂದು ಹೇಳಿದುದನ್ನು ಅವನಿಗೆ ತಿಳಿಸುತ್ತಾನೆ. ಇಂದ್ರದ್ಯುಮ್ನನು ಅಂತೆಯೇ ಯಾಗಗಳನ್ನು ಮಾಡುತ್ತಾನೆ. ಅವಭೃಥಸ್ನಾನಸಮಯದಲ್ಲಿ ಶಂಖ ಚಕ್ರಾಂಕಿತವಾದ ಕಲ್ಪವೃಕ್ಷದ ಶಾಖೆಯೊಂದು ಸಾಗರದಲ್ಲಿ ತೇಲಿಬರುತ್ತದೆ. ಈ ಸುದ್ದಿಯು ಅವನಿಗೆ ತಿಳಿದ ತರುವಾಯ ಅಶರೀರವಾಣಿಯ ಆಜ್ಞೆಯಂತೆ ಆ ಶಾಖೆಯನ್ನು ಉತ್ಸವದಿಂದ ತಂದು ವೇದಿಕೆಯಮೇಲಿರಿಸಿ, ವೃದ್ಧತಕ್ಷಕವೇಷಧಾರಿಯಾದ ಪರಮಾತ್ಮನೇ ಅದರಿಂದ ಬಲಭದ್ರ-ಕೃಷ್ಣ-ಸುಭದ್ರಾ-ಸುದರ್ಶನ ಮೂರ್ತಿಗಳನ್ನು ಕಡೆದು ಸಿದ್ಧಗೊಳಿಸಲು ವಲ್ಕಲಲೇಪನ, ವರ್ಣಕ್ರಿಯೆಗಳಿಂದ ಅವುಗಳನ್ನು ಅಲಂಕರಿಸುವನು. ಆಮೇಲೆ ದೇವಾಲಯ ರಚನೆಯಾಗುವುದು. ದೇವಾಲಯವು ಸಿದ್ಧವಾದ ಬಳಿಕ ದೊರೆಯು ನಾರದನೊಡನೆ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವನನ್ನು ಕರೆತಂದು ಆತನಿಂದಲೇ ಮೂರ್ತಿಪ್ರತಿಷ್ಠಾದಿ ಮಹಾಕಾರ್ಯಗಳನ್ನು ವೈಭವದಿಂದ ನಡಸುವನು.

ಇದು ಇಲ್ಲಿಯ ಕಥಾಸಂಗ್ರಹ. ಜಗನ್ನಾಥ ಕ್ಷೇತ್ರದಲ್ಲಿ ನೆಲಸಿರುವ ತೀರ್ಥಗಳು, ಇತರ ದೇವತಾಮೂರ್ತಿಗಳು, ವಿವಿಧ ಪ್ರಸಂಗಗಳ ನಿರೂಪಣ ಮುಂತಾದ ವಿಷಯಗಳ ತುಂಬಿನಿಂದ ಈ ಮಾಹಾತ್ಮ್ಯವು ಬಹಳವಾಗಿ ಬೆಳೆದಿದೆ. ವಿಷ್ಣುಭಕ್ತಿಪ್ರಭಾವವನ್ನೂ, ವಿಷ್ಣುಭಕ್ತರ ವೈಭವವನ್ನೂ, ಶಿಷ್ಟಾಚಾರ ಅದರಿಂದ ದೊರಕುವ ಫಲವನ್ನೂ ವಿವಿಧ ದೇವತಾಮೂರ್ತಿಗಳ ಮಾಹಾತ್ಮ್ಯಗಳನ್ನೂ ಶ್ರೀನೃಸಿಂಹ ಪ್ರಭಾವವನ್ನೂ ವಿಶೇಷವಾಗಿ ಪ್ರತಿಪಾದಿಸಿರುವ ಈ ಪುರುಷೋತ್ತಮ (ಜಗನ್ನಾಥ)ಮಾಹಾತ್ಮ್ಯವು ಸಮಸ್ತರಿಗೂ ಪಠನ ಪಾರಾಯಣಾದಿಗಳಿಗೆ ಅನುವಾಗಿ ತನ್ಮೂಲಕ ಶ್ರೇಯಸ್ಸಾಧನೆಗೆ ಅತ್ಯಂತೋಪಯುಕ್ತವಾಗುವಂಥದು.

ಇಂತಹ ಅನೇಕಾನೇಕ ಕ್ಷೇತ್ರ ಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯನ್ನೆಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಜಗನ್ನಾಥನಾದ ಶ್ರೀ ಪುರುಷೋತ್ತಮನು ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಪುರುಷೋತ್ತಮ (ಜಗನ್ನಾಥ) ಕ್ಷೇತ್ರ ಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ಪ್ರಥಮೋಽಧ್ಯಾಯಃ

#### ಪುರುಷೋತ್ತಮಕ್ಷೇತ್ರಸ್ಯ ಮುಖ್ಯತ್ವವರ್ಣನಂ

ಮುನಯ ಊಚುಃ :–

**ಭಗವನ್ಸರ್ವಶಾಸ್ತ್ರಜ್ಞ ಸರ್ವತೀರ್ಥಮಹತ್ವವಿತ್ ।**
**ಕಥಿತಂ ಯತ್ತ್ವಯಾ ಪೂರ್ವಂ ಪ್ರಸ್ತುತೇ ತೀರ್ಥಕೀರ್ತನೇ ।**
**ಪುರುಷೋತ್ತಮಾಖ್ಯಂ ಸುಮಹತ್ಕ್ಷೇತ್ರಂ ಪರಮಪಾವನಂ ॥ ೧ ॥**
**ಯತ್ರಾಸ್ತೇ ದಾರವತನುಃ ಶ್ರೀಶೋ ಮಾನವಲೀಲಯಾ ।**
**ದರ್ಶನಾನ್ಮುಕ್ತಿದಃ ಸಾಕ್ಷಾತ್ಸರ್ವತೀರ್ಥಫಲಪ್ರದಃ ॥ ೨ ॥**

---

### ಕನ್ನಡದ ಅನುವಾದ

#### ಪುರುಷೋತ್ತಮಕ್ಷೇತ್ರದ ಮುಖ್ಯತ್ವವರ್ಣನ

೧. ಮುನಿಗಳು ಕೇಳುತ್ತಾರೆ:—“ ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಜೈಮಿನಿಮುನಿಯೆ ! ಸಮಸ್ತತೀರ್ಥಗಳ ಮಾಹಾತ್ಮ್ಯಗಳನ್ನರಿತ ನೀನು ಈಗ ತಾನೆ ಅಪ್ಪಣೆಕೊಡಿಸಿದ ತೀರ್ಥಗಳ ಕೀರ್ತನಪ್ರಸಂಗದಲ್ಲಿ ಪುರುಷೋತ್ತಮವೆಂಬ ಪರಮಪಾವನವೂ, ಪ್ರಸಿದ್ಧವೂ ಆದ ಮಹಾಕ್ಷೇತ್ರವೊಂದಿರುವುದೆಂದು ಹೇಳಿದೆ.

೨. ಆ ಕ್ಷೇತ್ರದಲ್ಲಿ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಮಾನುಷ ಲೀಲೆಯನ್ನು ಮೆರೆಯುವವನಾಗಿ, ಮರದ ಮೈಯೊಡಗೂಡಿ ನೆಲಸಿ ತನ್ನನ್ನು ಸಂದರ್ಶಿಸಿದ ಭಕ್ತರಿಗೆ ಮುಕ್ತಿಯನ್ನು ಕರುಣಿಸುತ್ತಲೂ, ಸಮಸ್ತ ತೀರ್ಥ

ತನ್ನೋ ವಿಸ್ತರತೋ ಭ್ರೂಹಿ ತತ್‌ಕ್ಷೇತ್ರಂ ಕೇನ ನಿರ್ಮಿತಂ ।
ಜ್ಯೋತಿಃ ಪ್ರಕಾಶೋ ಭಗವಾನ್ಸಾಕ್ಷಾನ್ನಾರಾಯಣಃ ಪ್ರಭುಃ ॥ ೩ ॥
ಕಥಂ ದಾರುಮಯಸ್ತಸ್ಮಿನ್ನಾಸ್ತೇ ಪರಮಪೂರುಷಃ ।
ವದ ತ್ವಂ ವದತಾಂ ಶ್ರೇಷ್ಠ ಸರ್ವಲೋಕಗುರೋ ಮುನೇ ।
ಶ್ರೋತುಮಿಚ್ಛಾಮಹೇ ಬ್ರಹ್ಮನ್ಪರಂ ಕೌತೂಹಲಂ ಹಿ ನಃ ॥ ೪ ॥

ಜೈಮಿನಿರುವಾಚ :—

ಶೃಣುಧ್ವಂ ಮುನಯಸ್ಸರ್ವೇ ರಹಸ್ಯಂ ಪರಮಂ ಹಿ ತತ್ ।
ಅವೈಷ್ಣವಾನಾಂ ಶ್ರವಣೇ ಭಕ್ತಿಸ್ತತ್ರ ನ ಜಾಯತೇ ॥ ೫ ॥
ತಸ್ಯ ಸಂಕೀರ್ತನಾದೇವ ಸಕಲಂ ಲೀಯತೇ ತಮಃ ॥ ೬ ॥
ಯದ್ಯಪ್ಯೇಷ ಜಗನ್ನಾಥಃ ಸರ್ವಗಃ ಸರ್ವಭಾವನಃ ।
ಸ್ಕಂದೇನ ಕಥಿತಂ ಪೂರ್ವಂ ಶ್ರುತ್ವಾ ಶಂಭೋರ್ಮುಖಾಂಬುಜಾತ್ ।
ಸಂತಿ ಕ್ಷೇತ್ರಾಣಿ ಚಾನ್ಯಾನಿ ಸರ್ವಪಾಪಹರಾಣಿವೈ ॥ ೭ ॥

---

ಕ್ಷೇತ್ರಗಳನ್ನು ಸಂದರ್ಶಿಸಿದ ಫಲವನ್ನನುಗ್ರಹಿಸುತ್ತಲೂ ವಿರಾಜಿಸುತ್ತಿರುವನೆಂದು ಹೇಳಿದೆಯಷ್ಟೆ.

೩–೪. ಆ ವಿಷಯವನ್ನು ನಮಗೆ ವಿಸ್ತರಿಸಿ ಹೇಳಬೇಕು. ಆ ಕ್ಷೇತ್ರವು ಯಾರಿಂದ ನಿರ್ಮಿತವಾಯಿತು ? ಜ್ಯೋತಿಯಂತೆ ಸ್ವಯಂಪ್ರಕಾಶನಾಗಿ, ಸರ್ವ ಪ್ರಭುವಾಗಿ, ಷಡ್ಗುಣೈಶ್ವರ್ಯ ಪರಿಪೂರ್ಣನಾಗಿರುವ ಸಾಕ್ಷಾತ್ ನಾರಾಯಣ ಮೂರ್ತಿಯು ಪರಮಪುರುಷನಾಗಿದ್ದೂ ಆ ಕ್ಷೇತ್ರದಲ್ಲಿ ಮರದ ಮೈಯುಳ್ಳವನಾಗಿರುವುದೆಂತು ? ಎಲೈ ಸರ್ವಲೋಕಗುರುವಾದ ಜೈಮಿನಿಮುನಿಯೆ ! ಇಂತಹ ಮಾಹಾತ್ಮ್ಯವಿಚಾರಗಳನ್ನು ಬಣ್ಣಿಸುವುದರಲ್ಲಿ ಶ್ರೇಷ್ಠನಾದ ನೀನು ಈ ವಿಷಯವನ್ನು ನಮಗೆ ಹೇಳಬೇಕು. ಎಲೈ ಬ್ರಹ್ಮಜ್ಞಾನಿಯೆ ! ನಾವೆಲ್ಲರೂ ಈ ವಿಷಯವನ್ನು ನಿನ್ನಿಂದಾಲಿಸಿ ಕೇಳಲು ಪರಮ ಕುತೂಹಲಿಗಳಾಗಿರುವೆವು.''

೫. ಜೈಮಿನಿಯು ಹೇಳುತ್ತಾನೆ :—ಎಲೈ ಮುನಿಗಳೇ ! ಕೇಳಿರಿ. ನೀವು ಪ್ರಶ್ನಿಸಿದ ವಿಷಯವು ಪರಮ ರಹಸ್ಯವಾದುದು. ಇದನ್ನು ವೈಷ್ಣವರಲ್ಲದವರು (ವಿಷ್ಣುಭಕ್ತರಲ್ಲದವರು) ಕೇಳಿದಲ್ಲಿ ಅವರಿಗೆ ಭಕ್ತಿಯುಂಟಾಗುವುದಿಲ್ಲವು.

೬. ಈ ಕ್ಷೇತ್ರವನ್ನೂ ಇಲ್ಲಿ ನೆಲಸಿರುವ ಪುರುಷೋತ್ತಮನನ್ನೂ ಸ್ಮರಿಸಿದ ಮಾತ್ರದಿಂದಲೇ ಅಜ್ಞಾನವೆಂಬಕತ್ತಲೆಯೆಲ್ಲವೂ ಕೂಡಲೇ ಅಡಗಿಹೋಗುವುದು.

೭–೮. ಶ್ರೀಜಗನ್ನಾಥಸ್ವಾಮಿಯು ಎಲ್ಲೆಡೆಯಲ್ಲಿಯೂ ಸಂಚರಿಸುವವನೂ, ಸರ್ವಭಾವವನೂ, ಸರ್ವಾಂತರ್ಯಾಮಿಯೂ ಆಗಿರುವನೆಂದು ಶ್ರೀ ಸ್ಕಂದಸ್ವಾಮಿಯು ತನ್ನ ತಂದೆಯಾದ ಶ್ರೀ ಶಂಭುವಿನಿಂದ ಕೇಳಿ ತಿಳಿದು ಹೇಳಿರುತ್ತಾನೆ. ಆದುದರಿಂದ ಸಮಸ್ತ ಪಾಪಗಳನ್ನೂ ಪರಿಹಾರಮಾಡುವ ಎಷ್ಟೋ

ಏತತ್‌ಕ್ಷೇತ್ರಂ ಪರಂ ಚಾಸ್ಯ ವಪುರ್ಭೂತಂ ಮಹಾತ್ಮನಃ ।
ಸ್ವಯಂ ವಪುಷ್ಮಾಂಸ್ತತ್ರಾಸ್ತೇ ಸ್ವನಾಮ್ನಾ ಖ್ಯಾಪಿತಂ ಹಿ ತತ್ ॥ ೮ ॥
ತತ್ರ ಯೇ ಸ್ಥಾತುಮಿಚ್ಛಂತಿ ತೇಽಪಿ ಸರ್ವೇ ಹತಾಂಹಸಃ ।
ಕಿಪುನಸ್ತತ್ರ ತಿಷ್ಠಂತೋ ಯೇ ಪಶ್ಯಂತಿ ಗದಾಧರಂ ॥ ೯ ॥
ಅಹೋ ತತ್ಪರಮಂ ಕ್ಷೇತ್ರಂ ವಿಸ್ತೃತಂ ದಶಯೋಜನಂ ।
ತೀರ್ಥರಾಜಸ್ಯ ಸಲಿಲಾದುತ್ಥಿತಂ ವಾಲುಕಾಚಿತಂ ॥ ೧೦ ॥
ನೀಲಾಚಲೇನ ಮಹತಾ ಮಧ್ಯಸ್ಥೇನ ವಿರಾಜಿತಂ ।
ಏಕಸ್ತನಮಿವ ಪೃಥ್ವ್ಯಾಃ ಸುದೂರಾತ್ಪರಿಭಾವಿತಂ ॥ ೧೧ ॥
ವರಾಹರೂಪಿಣಾ ಪೂರ್ವಂ ಸಮುದ್ಧೃತ್ಯ ವಸುಂಧರಾಂ ।
ಸರ್ವತಃ ಸುಸಮಾಂ ಕೃತ್ವಾ ಪರ್ವತೈಃ ಸುಸ್ಥಿರೀಕೃತಾಂ ॥ ೧೨ ॥
ಸೃಷ್ಟ್ವಾ ಚರಾಚರಂ ಸರ್ವಂ ತೀರ್ಥಾನಿ ಸರಿದಬ್ಧಿಕಾನ್ ।
ಕ್ಷೇತ್ರಾಣಿ ಚ ಯಥಾಸ್ಥಾನಂ ಸಂನಿವೇಶ್ಯ ಯಥಾಪುರಾ ॥ ೧೩ ॥
ಬ್ರಹ್ಮಾ ವಿಚಿಂತಯಾಮಾಸ ಸೃಷ್ಟಿಭಾರನಿಪೀಡಿತಃ ।
ಪುನರೇತಾಂ ಕ್ರಿಯಾಂ ಗುರ್ವೀಂ ನಾರಭೇಯಂ ಕಥಂ ತ್ವಿತಿ ॥ ೧೪ ॥

---

ಇತರ ಕ್ಷೇತ್ರಗಳಿದ್ದರೂ ಈ ಪುರುಷೋತ್ತಮಕ್ಷೇತ್ರವು ಆ ಪರಮಾತ್ಮನ ವೈರಿಯೇ ಆಗಿ ಎಲ್ಲಕ್ಕಿಂತಲೂ ಶ್ರೇಷ್ಠವಾಗಿರುವುದು. ಇಲ್ಲಿಯೇ ಆ ಪುರುಷೋತ್ತಮನು ಶರೀರಧಾರಿಯಾಗಿ ನೆಲಸಿ ತನ್ನ ಹೆಸರಿನಿಂದಲೇ ಈ ಕ್ಷೇತ್ರವನ್ನು ಪ್ರಸಿದ್ಧಗೊಳಿಸಿರುವನು.

೯–೧೦. ಅಯ್ಯಾ ಮುನಿಗಳಿರಾ! ಆ ಕ್ಷೇತ್ರದಲ್ಲಿ ನೆಲಸಬಯಸುವಂತಹ ಮಾನವರ ಪಾಪಗಳೆಲ್ಲವೂ ಕಳೆಯುತ್ತವೆಯೆಂದಬಳಿಕ ಅಲ್ಲಿಯೇ ವಾಸವಾಗಿ ಆ ಗದಾಧರಸ್ವಾಮಿಯನ್ನು ಸಂದರ್ಶಿಸುವ ಮಾನವರ ವಿಷಯದಲ್ಲಿ ಹೇಳತಕ್ಕುದೇನುಂಟು? ಆಹಾ! ಪರಮಪುಣ್ಯಕರವಾದ ಆ ಕ್ಷೇತ್ರವು ಹತ್ತುಯೋಜನಗಳ ವಿಸ್ತಾರವಾಗಿರುವುದು; ತೀರ್ಥರಾಜದ ಜಲದಿಂದ ಮೇಲೆದ್ದುಬಂದುದಾಗಿ ಎತ್ತೆತ್ತಲೂ ಮರಳಿನಿಂದಲೇ ತುಂಬಿ ಬೆಳಗುತ್ತಿರುವುದು.

೧೧. ಮಧ್ಯದಲ್ಲಿ ನೀಲಾಚಲದಿಂದ ವಿರಾಜಿಸುತ್ತ ದೂರದಿಂದ ನೋಡಿದರೆ ಪೃಥ್ವೀದೇವಿಯ ಸ್ತನವೋ ಎಂಬಂತೆ ತೋರುತ್ತಿರುವುದು.

೧೨–೧೪. ಪೂರ್ವದಲ್ಲಿ ವರಾಹರೂಪಿಯಾದ ಭಗವಂತನು ಈ ವಸುಂಧರೆಯನ್ನುದ್ಧರಿಸಿ ಎಲ್ಲೆಡೆಗಳಲ್ಲಿಯೂ ಅದನ್ನು ಸಮಗೊಳಿಸಿ ಪರ್ವತಗಳಿಂದ ಸ್ಥಿರಗೊಳಿಸಿದನಷ್ಟೆ! ಆಗ ಚತುರ್ಮುಖಬ್ರಹ್ಮನು ಮತ್ತೆ ಚರಾಚರಜಗತ್ತನ್ನೂ, ಸಮಸ್ತ ತೀರ್ಥಗಳನ್ನೂ, ನದೀಸಮುದ್ರಗಳನ್ನೂ, ಕ್ಷೇತ್ರಗಳನ್ನೂ ಹಿಂದೆ ಹೇಗಿದ್ದುವೋ ಹಾಗೆಯೆ ಅವವುಗಳ ಸ್ಥಾನಗಳಲ್ಲಿರಿಸಿ ಸೃಷ್ಟಿಕಾರ್ಯದ ಹೊರೆ

ತಾಪತ್ರಯಾಭಿಭೂತಾ ಹಿ ಮುಚ್ಯಂತೇ ಜಂತವಃ ಕಥಂ ।
ಏವಂ ಚಿಂತಯಮಾನಸ್ಯ ಮತಿರಾಸೀತ್ಪ್ರಜಾಪತೇಃ ॥ ೧೫ ॥
ಮುಕ್ತ್ಯೇಕಕಾರಣಂ ವಿಷ್ಣುಂ ಸ್ತೋಷ್ಯೇಽಹಂ ಪರಮೇಶ್ವರಂ ।
ಬ್ರಹ್ಮೋವಾಚ :–
ನಮಸ್ತೇ ಜಗದಾಧಾರ ಶಂಖಚಕ್ರಗದಾಧರ ॥ ೧೬ ॥
ಯನ್ನಾಭಿಪಂಕಜಾದೇವ ಜಾತೋಽಹಂ ವಿಶ್ವಸೃಷ್ಟಿಕೃತ್ ।
ಪರಮಾರ್ಥಸ್ವರೂಪಂ ತೇ ತ್ವಂ ವೈ ವೇತ್ಸಿ ಜಗನ್ಮಯ ॥ ೧೭ ॥
ಯನ್ಮಾಯಯಾ ಜಗತ್ಸರ್ವಂ ನಿರ್ಮಿತಂ ಮಹದಾದಿಕಂ ।
ಯನ್ನಿಶ್ವಾಸಸಮುದ್ಭೂತಂ ಶಬ್ದಬ್ರಹ್ಮ ತ್ರಿಧಾಽಭವತ್ ॥ ೧೮ ॥
ಉಪಜೀವ್ಯ ತದೇವಾಹಮಸೃಜಂ ಭುವನಾನಿ ವೈ ।
ತ್ವತ್ತೋ ನಾನ್ಯತ್ ಸ್ಥೂಲಸೂಕ್ಷ್ಮದೀರ್ಘಹ್ರಸ್ವಾದಿ ಕಿಂಚನ ॥ ೧೯ ॥

---

ಯಿಂದ ಬೇಸತ್ತು ಮತ್ತೆ ಮಹತ್ತರವಾದ ಈ ಸೃಷ್ಟಿಕ್ರಿಯೆಯನ್ನು ಮೊದಲು ಮಾಡದಿರಲು ಏನುಮಾಡಬೇಕೆಂದು ಚಿಂತಿಸಿದನು.

೧೫. ತಾಪತ್ರಯಗಳಿಂದ ತಿರಸ್ಕೃತಗಳಾದ ಈ ಜಗತ್ತಿನ ಜಂತುಗಳು ಮುಕ್ತಿಯನ್ನು ಪಡೆಯುವುದೆಂತೆಂದೂ ಆ ಕಮಲಾಸನನು ಯೋಚಿಸಿದನು. ಈ ರೀತಿ ಚಿಂತಿಸುತ್ತಿರುವಂತೆಯೇ ಆ ಪ್ರಜಾಪತಿಗೆ ಒಂದು ಯೋಚನೆಯು ಹೊಳೆಯಿತು.

೧೬. "ಮುಕ್ತಿಗೆ ಏಕಕಾರಣಸ್ವರೂಪನಾದ ಶ್ರೀಮನ್ಮಹಾವಿಷ್ಣುವನ್ನು ಭಕ್ತಿಯಿಂದ ಸ್ತುತಿಸುತ್ತೇನೆ." ಎಂದುಕೊಂಡು ಆತನು ಆ ಪರಮೇಶ್ವರನನ್ನು ಈ ರೀತಿ ಸ್ತುತಿಸಿದನು. ಬ್ರಹ್ಮನು ಹೇಳುತ್ತಾನೆ:—"ಜಗದಾಧಾರನೂ, ಶಂಖಚಕ್ರಗದಾಧರನೂ ಆದ ಎಲೈ ಮಹಾವಿಷ್ಣುವೇ! ನಿನಗೆ ನಮಸ್ಕಾರವು!!

೧೭. ಸೃಷ್ಟಿಕರ್ತನಾದ ನಾನೇ ನಿನ್ನ ನಾಭೀಕಮಲದಿಂದುತ್ಪನ್ನನಾಗಿರುವೆನಾದುದರಿಂದ, ಎಲೈ ಜಗನ್ಮಯನೇ! ನಿನ್ನ ಪರಮಾರ್ಥರೂಪವನ್ನು ನೀನೊಬ್ಬನೇ ತಿಳಿದಿರುವೆಯಲ್ಲದೆ ಮತ್ತಾರೂ ಅದನ್ನು ತಿಳಿದಿಲ್ಲವು.

೧೮–೧೯. ಯಾವ ನಿನ್ನ ಮಾಯೆಯಿಂದ ಮಹತ್ತೇ ಮೊದಲಾದ ಈ ಜಗತ್ತೆಲ್ಲವೂ ನಿರ್ಮಿತವಾಗಿರುವುದೋ, ಯಾವ ನಿನ್ನ ನಿಶ್ವಾಸದಿಂದಲೇ ಶಬ್ದಬ್ರಹ್ಮವು ಮೂರುಬಗೆಯಾಗಿ ಕಂಗೊಳಿಸಿತೋ ಅವುಗಳನ್ನೇ ಆಶ್ರಯಿಸಿ ಅವುಗಳನ್ನೇ ಉಜ್ಜೀವನಗೊಳಿಸಿ ಬ್ರಹ್ಮನಾದ ನಾನು ಈ ಚತುರ್ದಶಭುವನಗಳನ್ನು ನಿರ್ಮಿಸಿರುವೆನು. ಎಲೈ ಸ್ವಾಮಿಯೇ! ನಿನಗಿಂತಲೂ ಸ್ಥೂಲವೂ, ಸೂಕ್ಷ್ಮವೂ, ದೀರ್ಘವೂ, ಹ್ರಸ್ವವೂ ಆದುದು ಮತ್ತಾವುದೂ ಇರುವುದಿಲ್ಲ.

ವಿಕಾರಭೇದೈರ್ಭಗವಂಸ್ತ್ವಮೇವೇದಂ ಚರಾಚರಂ ।
ಕಟಕಾದಿ ಯಥಾ ಸ್ವರ್ಣಂ ಗುಣತ್ರಯವಿಭಾಗಶಃ ॥ ೨೦ ॥
ಸ್ರಷ್ಟಾ ಸೃಜ್ಯಂ ತ್ವಮೇವಾತ್ರ ಪೋಷ್ಟಾ ಪೋಷ್ಯಂ ಜಗತ್ಪ್ರಭೋ ।
ಆಧಾರೋ ಧ್ರಿಯಮಾಣಂ ಚ ಧರ್ತಾ ತ್ವಂ ಪರಮೇಶ್ವರ ॥ ೨೧ ॥
ತ್ವತ್ಪ್ರೇರಿತಮತಿಃ ಸರ್ವಶ್ಚರತೇ ಚ ಶುಭಾಽಶುಭಂ ।
ತತಃ ಪ್ರಾಪ್ನೋತಿ ಸದೃಶೀಂ ತ್ವಯೈವ ವಿಹಿತಾಂ ಗತಿಂ ॥ ೨೨ ॥
ಜಗತೋಽಸ್ಯ ಗತಿರ್ಭರ್ತಾ ಸಾಕ್ಷೀ ತ್ವಂ ಪರಮೇಶ್ವರ ।
ಚರಾಚರಗುರೋ ಸರ್ವಜೀವಭೂತ ಕೃಪಾಮಯ ।
ಪ್ರಸೀದಾಽದ್ಯ ಜಗನ್ನಾಥ ನಿತ್ಯಂ ತ್ವಚ್ಛರಣಸ್ಯ ಮೇ ॥ ೨೩ ॥

ಜೈಮಿನಿರುವಾಚ :—

ಏವಂ ಸಂಸ್ತೂಯಮಾನಶ್ಚ ಬ್ರಹ್ಮಣಾ ಗರುಡಧ್ವಜಃ ।
ನೀಲಜೀಮೂತಸಂಕಾಶಃ ಶಂಖಚಕ್ರಾದಿ ಚಿಹ್ನಿತಃ ॥ ೨೪ ॥

---

೨೦. ಹೇ ಭಗವಾನ್! ವಿಕಾರಭೇದದಿಂದ ಚರಾಚರಾತ್ಮಕವಾದ ಜಗತ್ತೆಲ್ಲವೂ ನೀನೇ ಆಗಿರುವೆ. ಬಳೆಯೆ ಮೊದಲಾದ ಒಡವೆಗಳೆಲ್ಲವೂ ಹೇಗೆ ಚಿನ್ನವೇ ಆಗಿವೆಯೋ ಹಾಗೆಯೇ ನೀನೂ ಏಕಸ್ವರೂಪನೇ ಆಗಿದ್ದರೂ ವಿಕಾರಭೇದದಿಂದ ಬೇರೆ ಬೇರೆಯಾಗಿ ಕಾಣುವೆ. ನೀನೀರೀತಿ ತೋರುವುದೆಲ್ಲ ಸತ್ವರಜಸ್ಸುತಮಸ್ಸುಗಳೆಂಬ ಮೂರು ಗುಣಗಳ ವಿಭಾಗದಿಂದಲೇ!

೨೧. ಎಲೈ ಜಗತ್ಪ್ರಭುವೇ! ಸೃಷ್ಟಿಕರ್ತೃವೂ, ಸೃಷ್ಟಿಮಾಡಬೇಕಾದುದೂ (ಜಗತ್ತೂ) ಹೀಗೆ ಸೃಷ್ಟಿಸಿದ ಈ ಜಗತ್ತನ್ನು ಪೋಷಿಸಬೇಕಾದುದೂ, ಆಧಾರವೂ, ಆಧಾರವನ್ನು ನೆಮ್ಮಿರುವುದೂ, ಧರಿಸುವವನೂ ಎಲ್ಲವೂ ನೀನೇ!

೨೨. ಈ ಜಗತ್ತಿನಲ್ಲಿ ಸಮಸ್ತ ಪ್ರಾಣಿಗಳೂ ನಿನ್ನಿಂದ ಪ್ರೇರಿತವಾದ ಮತಿಯನ್ನೊಳಗೊಂಡೇ ಶುಭಾಶುಭಕರ್ಮಗಳನ್ನೂ ಮಾಡುತ್ತವೆ; ನಿನ್ನಿಂದಲೇ ವಿಧಿಸಲಾಗುವ ಶುಭಾಶುಭ ಕರ್ಮಕ್ಕನುಗುಣವಾದ ಗತಿಯನ್ನೂ ಪಡೆಯುತ್ತವೆ.

೨೩. ಈ ಜಗತ್ತಿನ ಗತಿಯೂ, ಸ್ವಾಮಿಯೂ, ಸಾಕ್ಷಿಯೂ ಪರಮೇಶ್ವರನಾದ ನೀನೇ ಆಗಿರುವೆ! ಎಲೈ ಚರಾಚರಗುರುವೆ! ಸಮಸ್ತ ಜೀವಿಗಳಲ್ಲಿಯೂ ಅಂತರ್ಯಾಮಿಯಾಗಿರುವ ಓ ಪ್ರಭುವೇ, ಕೃಪಾಮಯ, ಜಗನ್ನಾಥ! ಯಾವಾಗಲೂ ನಿನ್ನನ್ನೇ ಶರಣುಹೊಕ್ಕಿರುವ ನನಗೆ ಪ್ರಸನ್ನನಾಗು.''

೨೪–೨೫. ಜೈಮಿನಿಯು ಹೇಳುತ್ತಾನೆ:— ಅಯ್ಯಾ ಮಹರ್ಷಿಗಳಿರಾ! ಈ ಪ್ರಕಾರವಾಗಿ ಬ್ರಹ್ಮನು ಸ್ತುತಿಸಲು ಗರುಡಧ್ವಜನಾದ ಶ್ರೀಮನ್ನಾರಾಯಣನು ಶಂಖಚಕ್ರಗದಾಶಾರ್ಙ್ಗಭೂಷಿತನಾಗಿ, ಪತಗೇಂದ್ರನನ್ನೇರಿ ಕುಳಿತು

ಪತಗೇಂದ್ರಸಮಾರೂಢಃ ಸ್ಫುರದ್ವದನಪಂಕಜಃ ।
ಆವಿರಾಸೀದ್ದ್ವಿಜಶ್ರೇಷ್ಠಾ ವಿವಕ್ಷುಃ ಸ್ಫುರಿತಾಧರಃ ॥ ೨೫ ॥

ಶ್ರೀ ಭಗವಾನುವಾಚ :—

ಯದರ್ಥಂ ಮಾಂ ಸ್ತುಷೇ ಬ್ರಹ್ಮನ್ನಶಕ್ಯಃ ಪ್ರತಿಭಾತಿ ಸಃ ॥ ೨೬ ॥
ಅನಾದ್ಯವಿದ್ಯಾ ಸುದೃಢಾ ಽಸುಚ್ಛೇದ್ಯಾ ಕರ್ಮಬಂಧನೈಃ ।
ಪ್ರಭವಂತ್ಯಾಂ ಕಥಂ ತಸ್ಯಾಂ ಹ್ರೀಯತೇ ಮೃತಿಜನ್ಮನೀ ॥ ೨೭ ॥
ತಥಾತಿಚೇದತ್ರಕೃತೇ ವ್ಯವಸಾಯಸ್ತ್ವಾನಘ ।
ಕ್ರಮೇಣ ಯೇನ ಹಿ ಭವೇತ್ತತ್ತೇ ವಕ್ಷ್ಯಾಮಿ ಕಾರಣಂ ॥ ೨೮ ॥
ಅಹಂ ತ್ವಂ ತ್ವಮಹಂ ಬ್ರಹ್ಮನ್ಮಯಂ ಚಾಖಿಲಂ ಜಗತ್ ।
ರುಚಿಸ್ತೇ ಯತ್ರ ಮೇ ತತ್ರ ನಾನ್ಯಥೇತಿ ವಿಚಾರಯ ॥ ೨೯ ॥
ಸಾಗರಸ್ಯೋತ್ತರೇ ತೀರೇ ಮಹಾನದ್ಯಾಸ್ತು ದಕ್ಷಿಣೇ ।
ಸ ಪ್ರದೇಶಃ ಪೃಥಿವ್ಯಾಂ ಹಿ ಸರ್ವತೀರ್ಥಫಲಪ್ರದಃ ॥ ೩೦ ॥

---

ಹೊಳೆಹೊಳೆವ ವದನಕಮಲವುಳ್ಳವನಾಗಿ ಏನೋ ಹೇಳತೊಡಗಿ ತುಟಿಗಳಲುಗುತ್ತಿರುವಂತೆ ತೋರಿ ಅಲ್ಲಿಯೇ ಆವಿರ್ಭವಿಸಿದನು.

೨೬. ಶ್ರೀ ಭಗವಂತನು ಹೇಳುತ್ತಾನೆ:—"ಅಯ್ಯಾ ಬ್ರಹ್ಮನೇ! ನೀನು ಏತಕ್ಕಾಗಿ ನನ್ನನ್ನು ಸ್ತುತಿಸಿದೆಯೋ ಆ ಕಾರ್ಯವು ಸಾಧ್ಯವಾಗುವುದಿಲ್ಲವೆಂದೇ ನನಗೆ ತೋರುವುದು.

೨೭. ಅವಿದ್ಯೆಯೆಂಬುದು ಬಹಳ ಬಲವತ್ತರವಾದುದು; ಅನಾದಿಯಾದುದು. ಅದು ಕರ್ಮಬಂಧನಗಳಿಂದಲೇ ಸುಲಭವಾಗಿ ಛೇದಿಸಲಾಗುವುದು. ಅಂತಹ ಕರ್ಮಬಂಧವು ಬಲವತ್ತರವಾಗಿರುವಾಗ ಸಾವು ಹುಟ್ಟುಗಳು ಕಳೆಯುವುದೆಂತು.

೨೮. ಆದರೂ, ಎಲೈ ಅನಘನೇ! ಈ ಜಗತ್ತಿನ ಜನರು ಉದ್ಧಾರವಾಗಬೇಕೆಂದು ನೀನು ಮಾಡುತ್ತಿರುವ ಈ ಪ್ರಯತ್ನವು ಯಾವುದರಿಂದ ಕ್ರಮವಾಗಿ ಸಫಲವಾಗುವುದೋ ಅದಕ್ಕೆ ಕಾರಣವನ್ನೀಗ ಹೇಳುವೆನು ಕೇಳು.

೨೯. ಎಲೈ ಬ್ರಹ್ಮನೇ! ನಾನೇ ನೀನು; ನೀನೇ ನಾನೂ ಆಗಿರುವೆನು. ಈ ಜಗತ್ತೆಲ್ಲವೂ ನನ್ನ ಸ್ವರೂಪವಾಗಿಯೇ ಇರುವುದು. ನಿನಗೆ ಯಾವುದರಲ್ಲಿ ರುಚಿಯೋ, ನನಗೂ ಅದರಲ್ಲಿಯೇ ರುಚಿಯಿರುತ್ತದೆ. ಈ ವಿಷಯದಲ್ಲಿ ನಿನಗಾವ ಸಂಶಯವೂ ಬೇಡ.

೩೦. ದಕ್ಷಿಣಸಾಗರದ ಉತ್ತರತೀರದಲ್ಲಿ, ಮಹಾನದಿಯ ದಕ್ಷಿಣದಿಕ್ಕಿನಲ್ಲಿರುವ ಪ್ರದೇಶವು ಈ ಪೃಥ್ವಿಯಲ್ಲಿರುವ ಸಮಸ್ತತೀರ್ಥಗಳ ಫಲಗಳನ್ನೂ ಉಂಟುಮಾಡುವುದಾಗಿದೆ.

ತತ್ರ ಯೇ ಮನುಜಾ ಬ್ರಹ್ಮನ್ನಿವಸಂತಿ ಸುಬುದ್ಧಯಃ ।
ಜನ್ಮಾಂತರಕೃತಾನಾಂಚ ಪುಣ್ಯಾನಾಂ ಫಲಭಾಗಿನಃ ॥ ೩೧ ॥
ನಾಲ್ಪಪುಣ್ಯಾಃ ಪ್ರಜಾಯಂತೇ ನಾಭಕ್ತಾ ಮಯಿ ಪದ್ಮಜ ।
ಏಕಾಮ್ರಕಾನನಾದ್ಯಾವದ್ದಕ್ಷಿಣೋದಧಿತೀರಭೂಃ ॥ ೩೨ ॥
ಪದಾತ್ಪದಾಚ್ಛ್ರೇಷ್ಠತಮಃ ಕ್ರಮಾತ್ಪರಮಪಾವನಃ ।
ಸಿಂಧುತೀರೇ ತು ಯೋ ಬ್ರಹ್ಮನ್ರಾಜತೇ ನೀಲಪರ್ವತಃ ॥ ೩೩ ॥
ಪೃಥಿವ್ಯಾಂ ಗೋಪಿತಂ ಸ್ಥಾನಂ ತವ ಚಾಪಿ ಸುದುರ್ಲಭಂ ।
ಸುರಾಸುರಾಣಾಂ ದುರ್ಜ್ಞೇಯಂ ಮಾಯಯಾಚ್ಛಾದಿತಂ ಮಮ ॥
ಸರ್ವಸಂಗಪರಿತ್ಯಕ್ತಸ್ತತ್ರ ತಿಷ್ಠಾಮಿ ದೇಹಭೃತ್ ।
ಕ್ಷರಾಕ್ಷರಾವತಿಕ್ರಮ್ಯ ವರ್ತೇಽಹಂ ಪುರುಷೋತ್ತಮೇ ॥ ೩೪ ॥
ಸೃಷ್ಟ್ಯಾ ಲಯೇನ ನಾಕ್ರಾಂತಂ ಕ್ಷೇತ್ರಂ ಮೇ ಪುರುಷೋತ್ತಮಂ ।
ಯಥಾ ಮಾಂ ಪಶ್ಯಸಿ ಬ್ರಹ್ಮನ್ರೂಪಂ ಚಕ್ರಾದಿ ಚಿಹ್ನಿತಂ ॥ ೩೫ ॥
ಈದೃಶಂ ತತ್ರ ಗತ್ವೈವ ದ್ರಕ್ಷ್ಯಸೇ ಮಾಂ ಪಿತಾಮಹ ।
ನೀಲಾದ್ರೇರಂತರಭುವಿ ಕಲ್ಪನ್ಯಗ್ರೋಧಮೂಲತಃ ॥ ೩೬ ॥

---

೩೧. ಕಮಲಾಸನ! ಅಲ್ಲಿ ವಾಸಮಾಡುತ್ತಿರುವ ಮಾನವರೆಲ್ಲರೂ ಒಳ್ಳೆಯ ಬುದ್ಧಿಯುಳ್ಳವರಾಗಿ ಪೂರ್ವಜನ್ಮಗಳಲ್ಲೆಸಗಿದ ಪುಣ್ಯಕರ್ಮಗಳ ಫಲಗಳನ್ನನುಭವಿಸಲೋಸುಗವೇ ಜನ್ಮವನ್ನು ತಾಳಿರುತ್ತಾರೆ.

೩೨–೩೪. ಆ ಕ್ಷೇತ್ರದಲ್ಲಿ ಅಲ್ಪಪುಣ್ಯಶಾಲಿಯಾಗಲಿ, ನನ್ನ ಭಕ್ತನಲ್ಲದವನಾಗಲಿ ಹುಟ್ಟುವುದಿಲ್ಲವು. ಎಲೈ ಪದ್ಮಜನೇ! ದಕ್ಷಿಣಸಮುದ್ರತೀರದಲ್ಲಿರುವ ಆ ಕ್ಷೇತ್ರದ ಒಂದೊಂದು ಅಡಿಯೂ ಕ್ರಮವಾಗಿ ಏಕಾಮ್ರಕಾನನಕ್ಕಿಂತಲೂ ಪರಮಪಾವನವಾದುದು. ದಕ್ಷಿಣಸಾಗರದ ತೀರದಲ್ಲಿರುವ ನೀಲಾಚಲವಾದರೋ ಭೂಮಂಡಲದಲ್ಲಿಯೇ ಗುಪ್ತಸ್ಥಾನವೆನಿಸಿ, ನಿನಗೂ ತಿಳಿಯಲಸದಳವಾಗಿ, ನನ್ನ ಮಾಯೆಯಿಂದ ಮುಚ್ಚಿ ಸುರಾಸುರರಿಗೂ ದುರ್ಜ್ಞೇಯವಾಗಿರುವುದು.

೩೪. ಕಮಲಸಂಭವ! ನಾನು ಆ ಪುರುಷೋತ್ತಮಕ್ಷೇತ್ರದಲ್ಲಿ ಸರ್ವಸಂಗವನ್ನೂ ಪರಿತ್ಯಾಗಮಾಡಿ, ಚರಾಚರವನ್ನೇ ಅತಿಕ್ರಮಿಸಿ ದೇಹಧಾರಿಯಾಗಿರುತ್ತೇನೆ.

೩೫–೩೬. ಓ ಪಿತಾಮಹ! ಆ ಪುರುಷೋತ್ತಮಕ್ಷೇತ್ರವನ್ನು ಸೃಷ್ಟಿಲಯಗಳು ಆಕ್ರಮಿಸಿರುವುದಿಲ್ಲವು. ಇಲ್ಲಿ ನನ್ನನ್ನು ಶಂಖಚಕ್ರಾದಿ ಚಿಹ್ನಿತನನ್ನಾಗಿ ಹೇಗೆ ಕಾಣುತ್ತಿರುವೆಯೋ ಹಾಗೆಯೇ ಆ ಕ್ಷೇತ್ರದಲ್ಲಿಯೂ ನೀಲಾಚಲದ ಅಂತರ್ಭೂಮಿಯಲ್ಲಿರುವ ಕಲ್ಪವೃಕ್ಷೋಪಮವಾದ ನ್ಯಗ್ರೋಧವೃಕ್ಷದ ಬುಡದಲ್ಲಿಯೂ ಕಾಣುವೆ

ವಾರುಣ್ಯಾಂ ದಿಶಿ ಯತ್ಕುಂಡಂ ರೌಹಿಣಂ ನಾಮ ವಿಶ್ರುತಂ ।
ತತ್ತೀರೇ ನಿವಸಂತಂ ಮಾಂ ಪಶ್ಯಂತಶ್ಚರ್ಮಚಕ್ಷುಷಾ ॥ ೩೮ ॥
ತದಂಭಸಾ ಕ್ಷೀಣಪಾಪಾ ಮಮ ಸಾಯುಜ್ಯಮಾಪ್ನುಯುಃ ।
ತತ್ರ ವ್ರಜ ಮಹಾಭಾಗ ದೃಷ್ಟ್ವಾ ಮಾಂ ಧ್ಯಾಯತಸ್ತವ ॥ ೩೯ ॥
ಪ್ರಕಾಶಂ ಯಾಸ್ಯತೇ ತಸ್ಯ ಕ್ಷೇತ್ರಸ್ಯ ಮಹಿಮಾಽಪರಃ ।
ಆಶ್ಚರ್ಯಭೂತಃ ಪರಮಸ್ತವಾಪಿ ಚ ಭವಿಷ್ಯತಿ ॥ ೪೦ ॥
ಶ್ರುತಿಸ್ಮೃತೀತಿಹಾಸ ಪುರಾಣಗೋಪಿತಂ
ಮನ್ಮಾಯಯಾ ತನ್ನಹಿ ಕಸ್ಯ ಗೋಚರಂ ।
ಪ್ರಸಾದತೋ ಮೇ ಸ್ತುವತಸ್ತವಾಧುನಾ
ಪ್ರಕಾಶಮಾಯಾಸ್ಯತಿ ಸರ್ವಗೋಚರಂ ॥ ೪೧ ॥
ವ್ರತೇಷು ತೀರ್ಥೇಷು ಚ ಸರ್ವದಾನಯೋಃ
ಪುಣ್ಯಂ ಯದುಕ್ತಂ ವಿಮಲಾತ್ಮನಾಂ ಹಿ ತತ್ ।
ಅಹರ್ನ್ನಿವಾಸಾಲ್ಲಭತೇಽತ್ರ ಸರ್ವಂ
ನಿಃಶ್ವಾಸವಾಸಾತ್ಫಲು ಚಾಶ್ವಮೇಧಿಕಂ ॥ ೪೨ ॥

---

೩೮–೪೦. ಆ ಕ್ಷೇತ್ರದ ವರುಣದಿಶೆಯಲ್ಲಿ ರೌಹಿಣವೆಂದು ಪ್ರಖ್ಯಾತವಾದ ಯಾವ ಕುಂಡವುಂಟೋ ಆ ತೀರ್ಥದ ತೀರದಲ್ಲಿಯೇ ನೆಲಸಿರುವ ನನ್ನನ್ನು ಚರ್ಮಚಕ್ಷುಸ್ಸಿನಿಂದ ಸಂದರ್ಶಿಸಿ, ಅದರಲ್ಲಿ ಸ್ನಾನಮಾಡಿದುದಾದರೆ ಮಾನವರು ಕ್ಷೀಣಪಾಪರಾಗಿ ನನ್ನ ಸಾಯುಜ್ಯವನ್ನು ಪಡೆಯುತ್ತಾರೆ. ಎಲೈ ಮಹಾಭಾಗನೇ! ಪ್ರಕೃತದಲ್ಲಿ ನೀನು ಆ ಪುರುಷೋತ್ತಮಕ್ಷೇತ್ರಕ್ಕೆ ಹೊರಡು. ಅಲ್ಲಿ ನನ್ನನ್ನು ಧ್ಯಾನಿಸುತ್ತಿರುವಂತೆಯೆ ಆ ಕ್ಷೇತ್ರದ ಪರಮಾಶ್ಚರ್ಯಕರವಾದ ಮತ್ತೊಂದು ಮಹಿಮೆಯೂ ನಿನಗೆ ಕಂಡುಬರುವುದು.

೪೧–೪೨. ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿ ಎಲ್ಲಿಯೂ ತಿಳಿದುಬಾರದಿರುವುದೂ, ಕೇವಲ ನನ್ನ ಮಾಯೆಯಿಂದಲೇ ರಹಸ್ಯವಾಗಿ ಯಾರೊಬ್ಬರಿಗೂ ಗೋಚರವಾಗದಿರುವುದೂ ಆದ ಆ ಪುರುಷೋತ್ತಮಕ್ಷೇತ್ರವು ಈಗ ನೀನು ನನ್ನನ್ನು ಸ್ತುತಿಸಿ ಸಂತೋಷಗೊಳಿಸಿರುವುದರಿಂದ ಸಮಸ್ತರಿಗೂ ಗೋಚರವಾಗಿ ಪ್ರಸಿದ್ಧವಾಗುತ್ತದೆ. ಪರಿಶುದ್ಧವಾದ ಮನಸ್ಸುಳ್ಳ ಮಹಾತ್ಮರಿಗೆ ವ್ರತಗಳನ್ನೆಸಗುವುದರಿಂದಲೂ, ತೀರ್ಥಯಾತ್ರೆಗಳಿಂದಲೂ, ಯಜ್ಞದಾನಾದಿಗಳಿಂದಲೂ ಯಾವ ಪುಣ್ಯವು ಲಭಿಸುತ್ತದೆಯೆಂದು ಹೇಳಿದೆಯೊ ಆ ಎಲ್ಲ ಪುಣ್ಯವೂ ಆ ಕ್ಷೇತ್ರದಲ್ಲಿ ಒಂದು ಹಗಲು ಮಾತ್ರ ವಾಸಮಾಡುವುದರಿಂದಲೇ ಲಭಿಸುತ್ತದೆ. ಅಲ್ಲಿ ಒಂದು ನಿಃಶ್ವಾಸಸಮಯವಿದ್ದರೂ ಅಶ್ವಮೇಧಾದಿ ಯಜ್ಞಗಳ ಫಲಗಳು ಲಭಿಸುತ್ತವೆ. ಆದುದರಿಂದ ನೀನು ಆ ಕ್ಷೇತ್ರಕ್ಕೆ ಹೋಗು.''

**ಇತ್ಯಾದಿಶ್ಯ ವಿಧಿಂ ವಿಪ್ರಾಸ್ತದಾಸೌ ಪುರುಷೋತ್ತಮಃ ।**
**ಪಶ್ಯತಸ್ತಸ್ಯ ತತ್ರೈವ ಪ್ರಭುರಂತರಧೀಯತ ॥ ೪೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ "ಪುರುಷೋತ್ತಮಕ್ಷೇತ್ರಸ್ಯ ಮುಖ್ಯತ್ವವರ್ಣನಂ"ನಾಮ ಪ್ರಥಮೋಽಧ್ಯಾಯಃ**

---

೪೩. ಎಲೈ ಮುನಿಗಳಿರಾ! ಈ ಪ್ರಕಾರ ಆ ಪುರುಷೋತ್ತಮನು ಬ್ರಹ್ಮನಿಗೆ ಬೆಸಸಿ ಆತನು ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನವನ್ನೈದಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಪುರುಷೋತ್ತಮಕ್ಷೇತ್ರದ ಮುಖ್ಯತ್ವವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

**ಬ್ರಹ್ಮಣಃ ಪುರುಷೋತ್ತಮಕ್ಷೇತ್ರ ಪ್ರತ್ಯಾಗಮನಂ — ವಾಯಸವೃತ್ತಾಂತ ವರ್ಣನಂ**

**ಜೈಮಿನಿರುವಾಚ :—**

**ತತೋ ಬ್ರಹ್ಮಾಗಮತ್ತೂರ್ಣಂ ಯತ್ರಾಸ್ತೇ ಭಗವಾನ್ಸ್ವಯಂ ।**
**ಸ್ತವಾಂತೇಽಸೌ ಯಥಾದೃಷ್ಟಸ್ತಥಾದ್ರಾಕ್ಷೀತ್ಪ್ರಭುಂ ತದಾ ॥ ೧ ॥**
**ಪ್ರತ್ಯಭಿಜ್ಞಾನಸಂಹೃಷ್ಟಸ್ತಂ ದೃಷ್ಟ್ವಾ ಪರಮೇಶ್ವರಂ ।**
**ಅತ್ಯದ್ಭುತಜ್ಞಾನನಿಧಿರ್ಬಭೂವಾಸೌ ದ್ವಿಜೋತ್ತಮಾಃ ॥ ೨ ॥**
**ಯಾವತ್ ಸ್ತೋತುಂ ಸಮಾರೇಭೇ ಹರ್ಷಸಂಫುಲ್ಲಲೋಚನಃ ।**
**ತಾವದೇವ ಸಮಾಗತ್ಯ ಕುತಶ್ಚಿದ್ವಾಯಸೋತ್ತಮಃ ॥ ೩ ॥**
**ಕಾರುಣ್ಯೋದಕಸಂಪೂರ್ಣೇ ತಸ್ಮಿನ್ಕುಂಡೇ ನಿಮಜ್ಯ ತಂ ।**
**ವಿಲೋಕ್ಯ ಮಾಧವಂ ನೀಲರತ್ನಕಾಂತಿಂ ಕೃಪಾನಿಧಿಂ ॥ ೪ ॥**
**ಕಾಕದೇಹಂ ಸಮುತ್ಸೃಜ್ಯ ಲುಠಮಾನೋ ಮುಹುಃ ಕ್ಷಿತೌ ।**
**ಶಂಖಚಕ್ರಗದಾಪಾಣಿಸ್ತಸ್ಯ ಪಾರ್ಶ್ವೇ ವ್ಯವಸ್ಥಿತಃ ॥ ೫ ॥**

---

## ಕನ್ನಡದ ಅನುವಾದ

**ಬ್ರಹ್ಮನು ಪುರುಷೋತ್ತಮಕ್ಷೇತ್ರಕ್ಕೆ ಬಂದುದು— ವಾಯಸವೃತ್ತಾಂತ ವರ್ಣನ**

೧. ಜೈಮಿನಿಯು ಹೇಳುತ್ತಾನೆ:—ತರುವಾಯ ಬ್ರಹ್ಮದೇವನು ಸಾಕ್ಷಾತ್ ಶ್ರೀಮನ್ನಾರಾಯಣಮೂರ್ತಿಯು ನೆಲಸಿರುವ ಆ ಪುರುಷೋತ್ತಮಕ್ಷೇತ್ರಕ್ಕೆ ಬಂದನು. ಅಲ್ಲಿಯಾದರೋ ಆ ಕಮಲಸಂಭವನು ಹಿಂದೆ ತಾನು ವೈಕುಂಠದಲ್ಲಿ ಸ್ತುತಿಸಿದಂದು, ಆ ಸ್ವಾಮಿಯು ಎಂತೋ ಅಂತೆಯೇ ಬೆಳಗುತ್ತಿರುವುದನ್ನು ಕಂಡನು.

೨. ಆ ಪರಮೇಶ್ವರನನ್ನು ಗುರುತಿಸಿನೋಡಿ ಹರ್ಷಗೊಂಡು ಆ ವಿಧಾತನು ಕೂಡಲೇ ಅತ್ಯದ್ಭುತಜ್ಞಾನನಿಧಿಯಾದನು.

೩–೫. ಎಲೈ ವಿಪ್ರರೇ! ಆತನು ಸಂತೋಷದಿಂದರಳಿದ ಕಂಗಳುಳ್ಳವನಾಗಿ ಆ ದೇವನನ್ನು ಸ್ತುತಿಸಲಾರಂಭಿಸುವಷ್ಟರಲ್ಲಿಯೇ ಎಲ್ಲಿಂದಲೋ ಒಂದು ವಾಯಸೋತ್ತಮವು ಕಾರುಣ್ಯವೆಂಬ ಜಲದಿಂದ ತುಂಬಿದ ಆ ರೌಹಿಣಕುಂಡದಲ್ಲಿ ಮುಳುಗಿ ನೀಲರತ್ನಕಾಂತಿಯನ್ನು ತಳೆದು, ಕೃಪಾನಿಧಿಯಾಗಿ ಬೆಳಗುತ್ತಿದ್ದ ಮಾಧವನನ್ನು ಸಂದರ್ಶಿಸಿ ನೆಲದಮೇಲೆ ಬಾರಿಬಾರಿಗೂ ಹೊರಳಿ ಆ ಕಾಗೆಯ ಶರೀರವನ್ನು ತೊರೆಯಿತು. ಆಗ ನಾರಾಯಣಮೂರ್ತಿಯು ಶಂಖಚಕ್ರಗದಾಪಾಣಿಯಾಗಿ ಅದರ ಪಕ್ಕದಲ್ಲಿ ಆವಿರ್ಭವಿಸಿ ನಿಂತನು.

ಶಿರಶ್ಚ ಸ್ವಾಂ ಗತಿಂ ದೃಷ್ಟ್ವಾ ಯೋಗೀಂದ್ರಾಣಾಂ ಸುದುರ್ಲಭಾಂ ।
ಮೇನೇಽಸೌ ಮುನಯಃ ಸೃಷ್ಟಿಃ ಕ್ರಮಾತ್ ಕ್ಷೀಣಾ ಭವಿಷ್ಯತಿ ॥ ೬ ॥
ಮನುಷ್ಯಾಧಿಕೃತೇ ಮುಕ್ತೌ ವೇದಾಂತೇ ಸಂಶಯೋಽಭವತ್ ।
ನ ಕಿಂಚಿದ್ದುರ್ಲಭಂ ಚೇಹ ವಿಷ್ಣುಭಕ್ತಸ್ಯ ವಿದ್ಯತೇ ॥ ೭ ॥
ಪ್ರತ್ಯಕ್ಷೋಽಭೂದ್ದ್ವಿಜಶ್ರೇಷ್ಠಾಃ ಪುರಾಣಪುರುಷೋದಿತೇ ।
ಸಂಕೀರ್ತ್ಯ ಯನ್ನಾಮ ನರಃ ಸರ್ವಪಾಪೈಃ ಪ್ರಮುಚ್ಯತೇ ॥ ೮ ॥
ತಸ್ಯ ಸಂದರ್ಶನೇ ವಿಪ್ರಾಃ ಮುಕ್ತಿಃ ಕಿಂ ಖಲು ದುರ್ಲಭಾ ।
ಮನಸಾ ಧ್ಯಾಯಯನ್ವಿಷ್ಣುಂ ತ್ಯಜನ್ಪ್ರಾಣಾನ್ವಿಮುಚ್ಯತೇ ॥ ೯ ॥
ಸಾಕ್ಷಾತ್ಕೃತೋ ಭಗವತಃ ಕಿಂ ಚಿತ್ರಂ ಮುಕ್ತಿಮೇತಿ ಯತ್ ।
ಪುರುಷೋತ್ತಮಸಂಜ್ಞಸ್ಯ ಕ್ಷೇತ್ರಸ್ಯ ಮಹಿಮಾದ್ಭುತಃ ॥ ೧೦ ॥
ಯತ್ರ ಕಾಕೋಽಪಿ ಚ ಹರಿಂ ಸಾಕ್ಷಾತ್ಪಶ್ಯತಿ ಭೋ ದ್ವಿಜಾಃ ।
ಸುದುರ್ಲಭಂ ಕ್ಷೇತ್ರಮಿದಮಜ್ಞಾನಾಂ ಚ ವಿಮೋಚನಂ ॥ ೧೧ ॥

---

೬. ಯೋಗೀಂದ್ರರಿಗೂ ಪರಮ ದುರ್ಲಭವಾಗಿ, ಆ ಕಾಗೆಗೆ ಮಾತ್ರ ದೊರೆತ ಸದ್ಗತಿಯನ್ನು ಕಂಡು ಬ್ರಹ್ಮನು, "ಇನ್ನುಮೇಲೆ ನನ್ನ ಸೃಷ್ಟಿಯು ಕ್ರಮವಾಗಿ ಕ್ಷೀಣವಾಗತೊಡಗುವುದು" ಎಂದುಕೊಂಡನು.

೭. ಮಾನವನಿಗೆ ಮುಕ್ತಿಯು ದೊರಕುವುದೇ ಇಲ್ಲವೇ ಎಂಬ ವಿಷಯದಲ್ಲಿ ವೇದಾಂತಶಾಸ್ತ್ರದಲ್ಲಿಯೂ ಸಂಶಯವೇ ತುಂಬಿದೆ. ಆದರೆ ಈ ಪುರುಷೋತ್ತಮ ಕ್ಷೇತ್ರದಲ್ಲಿ ಮಾತ್ರ ವಿಷ್ಣುಭಕ್ತನಾದವನಿಗೆ ದುರ್ಲಭವೆಂಬುದು ಸ್ವಲ್ಪವೂ ಇರುವುದಿಲ್ಲವು.

೮. ಎಲೈ ದ್ವಿಜಶ್ರೇಷ್ಠರೇ! 'ನನ್ನ ನಾಮವನ್ನು ಸಂಕೀರ್ತನಮಾಡಿದ ಮಾನವನು ಸಮಸ್ತಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ' ಎಂದು ಪುರಾಣ ಪುರುಷನಾದ ಶ್ರೀಮನ್ನಾರಾಯಣನು ನುಡಿದ ನುಡಿಯು ಈ ಕ್ಷೇತ್ರದಲ್ಲಿ ಪ್ರತ್ಯಕ್ಷವಾಯಿತು.

೯–೧೨. ಇಲ್ಲಿ ಭಗವಂತನ ಸಾಕ್ಷಾತ್ಕಾರವೇ ಆಗುವಾಗ ಮುಕ್ತಿಯು ದುರ್ಲಭವೆಂದರೇನು? ಮನಸ್ಸಿನಲ್ಲಿಯೇ ಶ್ರೀಮಹಾವಿಷ್ಣುವನ್ನು ಧ್ಯಾನಮಾಡುತ್ತ ಪ್ರಾಣಗಳನ್ನು ತೊರೆದವನು ಮುಕ್ತಿಯನ್ನು ಪಡೆದೇ ಪಡೆಯುತ್ತಾನೆ. ಎಂದ ಮೇಲೆ ಆ ಪ್ರಭುವನ್ನು ಸಾಕ್ಷಾತ್ತಾಗಿಯೇ ಸಂದರ್ಶಿಸಿದ ಬಳಿಕ ಮುಕ್ತಿಯನ್ನು ಪಡೆಯುವನೆಂಬುದರಲ್ಲಿ ಆಶ್ಚರ್ಯವೇನು? ಪುರುಷೋತ್ತಮವೆಂದು ಹೆಸರಾದ ಈ ಕ್ಷೇತ್ರದ ಮಾಹಾತ್ಮ್ಯವು ಅದ್ಭುತವಾದುದು. ಈ ಕ್ಷೇತ್ರದಲ್ಲಿ ತಿರ್ಯಕ್ಕಾದ ಒಂದು ಕಾಗೆಯೂ ಸಹ ಶ್ರೀಹರಿಯನ್ನು ಸಾಕ್ಷಾತ್ತಾಗಿ ಸಂದರ್ಶಿಸುತ್ತದೆ. ಕೇವಲ ತಿಳುವಳಿಕೆಯೇ ಇಲ್ಲದ ಪ್ರಾಣಿಗಳಿಗೂ ಮೋಕ್ಷಪ್ರದವಾದ ಈ ಕ್ಷೇತ್ರವು

**ಅಹೋ ಕ್ಷೇತ್ರಸ್ಯ ಮಾಹಾತ್ಮ್ಯಂ ಕಾಕಸ್ಯಾಪಿ ವಿಮುಕ್ತಿದಂ ।**
**ಕಿಂ ಪುನಃ ಸತತಂ ಶಾಂತಿವೈರಾಗ್ಯಜ್ಞಾನಸಂಯುಜಾಂ ॥ ೧೨ ॥**

**ಋಷಯ ಊಚುಃ :–**

**ನೀಲಾಖ್ಯಂ ಮಾಧವಂ ದೃಷ್ಟ್ವಾ ಕಿಂ ಚಕಾರ ಪಿತಾಮಹಃ ।**
**ತದ್ದರ್ಶನೇ ಕ್ಷಣಾನ್ನಷ್ಟದೇಹಬಂಧಂ ಚ ವಾಯಸಂ ॥ ೧೩ ॥**

**ಜೈಮಿನಿರುವಾಚ :—**

**ಅತ್ಯದ್ಭುತಮಯಂ ದೃಷ್ಟ್ವಾ ಯಾವದ್ಧ್ಯಾಯತಿ ಮಾಧವಂ ।**
**ತಾವತ್ಪಿತೃಪತಿಃ ಸ್ವಾಧಿಕಾರ ಸಂಯಮನಾಕುಲಃ ॥ ೧೪ ॥**
**ದೀನಾನನೋ ನಿಃಶ್ವಸನ್ವೈ ತತ್ರ ಯಾತಸ್ತ್ವರಾನ್ವಿತಃ ।**
**ನೀಲಾದ್ರೌ ಮಾಧವಂ ದೃಷ್ಟ್ವಾ ಸಾಽಷ್ಟಾಂಗಂ ಪ್ರಣಿಪತ್ಯ ಚ ।**
**ತುಷ್ಟಾವ ಸ ಜಗನ್ನಾಥಂ ಸ್ವಾಧಿಕಾರದೃಢಸ್ಥಿತೌ ॥ ೧೫ ॥**

**ಯಮ ಉವಾಚ :—**

**ನಮಸ್ತೇ ದೇವದೇವೇಶ ಸೃಷ್ಟಿಸ್ಥಿತ್ಯಂತಕಾರಣ ॥ ೧೬ ॥**
**ತ್ವಯಿ ಪ್ರೋತಮಿದಂ ಸರ್ವಂ ಸೂತ್ರೇ ಮಣಿಗಣಾ ಯಥಾ ।**
**ತ್ವಯಾ ಧೃತಂ ತ್ವಯಾ ಸೃಷ್ಟಂ ತ್ವಯಾ ಚಾಪ್ಯಾಯಿತಂ ಜಗತ್ ॥ ೧೭ ॥**

---

ಬಹು ದುರ್ಲಭವಾದುದು. ಆಹಾ! ಕಾಗೆಗೂ ಮುಕ್ತಿಯನ್ನು ದೊರಕಿಸಿದ ಈ ಕ್ಷೇತ್ರದ ಮಾಹಾತ್ಮ್ಯವು ಪರಮಾಶ್ಚರ್ಯಕರವಾದುದು! ಇದರ ಮೇಲಾಗಿ ಸತತವೂ ಶಾಂತಿಯನ್ನೊಳಗೊಂಡು ವೈರಾಗ್ಯಜ್ಞಾನಸಂಪನ್ನರಾಗಿರುವವರಿಗೆ ಇಲ್ಲಿ ಮೋಕ್ಷವು ದೊರೆತೇ ದೊರೆಯುವುದೆಂದು ಮತ್ತೆ ಹೇಳಬೇಕಾದುದೇನು?

೧೩. ಋಷಿಗಳು ಕೇಳುತ್ತಾರೆ:—"ಎಲೈ ಜೈಮಿನಿಯೇ! ಪಿತಾಮಹನು, ನೀಲನೆಂದು ಪ್ರಖ್ಯಾತನಾದ ಆ ಪರಮಾತ್ಮನನ್ನೂ ಆ ಸ್ವಾಮಿಯ ಸಂದರ್ಶನದಿಂದ ಒಂದು ಕ್ಷಣಕಾಲದಲ್ಲಿಯೇ ದೇಹಬಂಧುವನ್ನು ಕಳೆದ ಆ ಕಾಗೆಯನ್ನೂ ಕಂಡಬಳಿಕ ಏನುಮಾಡಿದನು?"

೧೪–೧೫. ಜೈಮಿನಿಯು ಹೇಳುತ್ತಾನೆ:—ಅಯ್ಯಾ ವಿಪ್ರರೇ! ಅತ್ಯದ್ಭುತವಾದ ಈ ಸಂಗತಿಯನ್ನು ಕಂಡು ಬ್ರಹ್ಮದೇವನು ಆ ಪರಮಾತ್ಮನನ್ನು ಸ್ತುತಿಸುವಷ್ಟರಲ್ಲಿಯೇ, ಯಮಧರ್ಮರಾಜನು ತನ್ನ ಅಧಿಕಾರದಲ್ಲಿಯೇ ಸಂಶಯವುಳ್ಳವನಾಗಿ, ಕುಗ್ಗಿದ ಮುಖದಿಂದ ನಿಟ್ಟುಸಿರಿಡುತ್ತ ತ್ವರೆಯೊಡಗೂಡಿ ಅಲ್ಲಿಗೈತಂದು, ನೀಲಾದ್ರಿಯಲ್ಲಿ ಮಾಧವನನ್ನು ಕಂಡು ಸಾಷ್ಟಾಂಗ ಪ್ರಣಾಮಮಾಡಿ ತನ್ನ ಅಧಿಕಾರವು ಸ್ಥಿರವಾಗಿರಲೋಸುಗ ಈ ರೀತಿ ಸ್ತುತಿಸಿದನು:—

೧೬. ಯಮನು ಹೇಳುತ್ತಾನೆ:—ಸೃಷ್ಟಿಸ್ಥಿತಿಲಯಗಳಿಗೆ ಕಾರಣಸ್ವರೂಪನಾಗಿರುವ ಓ ದೇವದೇವೇಶ್ವರ! ನಿನಗೆ ನಮಸ್ಕಾರವು!!

೧೭. ದೇವಾ! ಈ ಜಗತ್ತೆಲ್ಲವೂ, ನಿನ್ನಲ್ಲಿಯೇ ದಾರದಲ್ಲಿ ಮಣಿಗಳ

ಚಂದ್ರಸೂರ್ಯಾದಿ ರೂಪೇಣ ನಿತ್ಯಂ ಭಾಸಯಸೇಽಖಿಲಂ ।
ವಿಶ್ವೇಶ್ವರಂ ಜಗದ್ಯೋನಿಂ ವಿಶ್ವಾವಾಸಂ ಜಗದ್ಗುರುಂ ॥ ೧೮ ॥
ವಿಶ್ವಸಾಕ್ಷಿಣಮಾದ್ಯಂತವರ್ಜಿತಂ ಪ್ರಣಮಾಮ್ಯಹಂ ।
ನಮಃ ಪರಮಕಾರುಣ್ಯಜಲಸಂಭೃತಸಿಂಧವೇ ॥ ೧೯ ॥
ಪರಾಪರಪರಾತೀತ ವಿಭವೇ ವಿಶ್ವಸಂಭವೇ ॥ ೨೦ ॥
ಭವಸಂತಾಪನೀಹಾರಭಾನವೇ ದೀನಬಂಧವೇ ।
ಸ್ವಮಾಯಾರಚಿತಾಶೇಷವಿಭವೇ ಗುಣರಜ್ಜವೇ ॥ ೨೧ ॥
ನಮಃ ಕಮಲಕಿಂಜಲ್ಕಪೀತನಿರ್ಮಲವಾಸಸೇ ।
ಮಹಾಹವರಿಪುಸ್ಕಂಧಕೃಂತಚಕ್ರಾಯ ಚಕ್ರಿಣೇ ॥ ೨೨ ॥
ದಂಷ್ಟ್ರೋದ್ಧೃತಕ್ಷಿತಿಭೃತೇ ತ್ರಯೀಮೂರ್ತಿಮತೇ ನಮಃ ।
ನಮೋ ಯಜ್ಞವರಾಹಾಯ ಚಂದ್ರಸೂರ್ಯಾಗ್ನಿಚಕ್ಷುಷೇ ॥ ೨೩ ॥

---

ಸಮೂಹಗಳೆಂತೋ ಅಂತು ಪೋಣಿಸಲಾಗಿದೆ. ನೀನೇ ಇದನ್ನೂ ಧರಿಸಿರುವೆ. ಇದನ್ನು ಸೃಷ್ಟಿಸಿದವನೂ ನೀನೆ! ನೀನೇ ಈ ಜಗತ್ತನ್ನು ತೃಪ್ತಿಸಂತೋಷಗಳಿಂದ ತುಂಬಿರುವೆ.

೧೮–೧೯. ಚಂದ್ರಸೂರ್ಯಾದಿಜ್ಯೋತಿಗಳ ಸ್ವರೂಪನಾಗಿ ನಿರಂತರವೂ ನೀನೇ ಈ ವಿಶ್ವವನ್ನು ಬೆಳಗಿಸುತ್ತಿರುವೆ. ಇಂತಹ ವಿಶ್ವೇಶ್ವರನೂ, ಜಗತ್ಕಾರಣನೂ, ಜಗದಂತರ್ಯಾಮಿಯೂ ಜಗದ್ಗುರುವೂ, ಜಗತ್ತಿಗೆ ಸಾಕ್ಷಿಭೂತನೂ, ಆದ್ಯಂತರಹಿತನೂ ಆದ ಎಲೈ ಸ್ವಾಮಿಯೇ! ನಿನ್ನನ್ನು ಇದೋ ನಮಸ್ಕರಿಸುತ್ತೇನೆ. ಪರಮಕಾರುಣ್ಯವೆಂಬ ಜಲದಿಂದ ಪೂರ್ಣವಾಗಿರುವ ಸಮುದ್ರಸ್ವರೂಪನಾದ (ಕೃಪಾಜಲಧಿಯಾದ) ನಿನಗೆ ನಮೋ ನಮಃ!

೨೦. ಪರಾ ಅಪರಾ ಎಂಬೆರಡು ವಿದ್ಯೆಗಳಿಗೂ ನಿಲುಕದ ವೈಭವವುಳ್ಳವನಾಗಿ, ವಿಶ್ವವನ್ನೇ ನಿರ್ಮಾಣಮಾಡಿದ ನಿನಗೆ ನಮಸ್ಕಾರವು!

೨೧. ಸಂಸಾರದುಃಖವೆಂಬ ಮಂಜನ್ನು ಹೊರದೂಡುವ (ಕರಗಿಸುವ) ಸೂರ್ಯನೂ, ದೀನಬಂಧುವೂ, ಮಾಯೆಯಿಂದಲೇ ರಚಿಸಲಾದ ಅಖಂಡ ವೈಭವವುಳ್ಳವನೂ, ಸತ್ವರಜಸ್ತಮೋಗುಣಗಳು ಹೆಣೆದ ಹಗ್ಗವೆನಿಸಿದವನೂ ಆದ ನಿನಗೆ ನಮಸ್ಕಾರವು!

೨೨. ಕಮಲಕೇಸರಗಳಂತೆ ಹಳದಿಯ ಬಣ್ಣದ ಸ್ವಚ್ಛವಾದ ವಸ್ತ್ರವುಳ್ಳವನಾಗಿ, ಮಹಾಯುದ್ಧದಲ್ಲಿ ಶತ್ರುಗಳಾದ ಅಸುರರ ಹೆಗಲುಗಳನ್ನು ಕತ್ತರಿಸಿ ಕೆಡವಿದ ಚಕ್ರವನ್ನು ಧರಿಸಿ ಚಕ್ರಿಯೆನಿಸಿದ ನಿನಗೆ ನಮೋ ನಮಃ !

೨೩. ವರಾಹರೂಪವನ್ನು ತಾಳಿ ಕೋರೆದಾಡೆಗಳಿಂದಲೇ ಭೂಮಿಯನ್ನುದ್ಧರಿಸಿದವನೂ, ಬ್ರಹ್ಮವಿಷ್ಣುಶಿವರೆಂಬ ತ್ರಿಮೂರ್ತಿಸ್ವರೂಪನೂ ಆದ ನಿನಗೆ

ನರಸಿಂಹಾಯ ದಂಷ್ಟ್ರೋಗ್ರಮೂರ್ತಿದ್ರಾವಿತಶತ್ರವೇ ।
ಯದಪಾಂಗವಿಲಾಸೈಕಸೃಷ್ಟಿಸ್ಥಿತ್ಯುಪಸಂಹೃತಿಃ ॥ ೨೪ ॥
ಉಚ್ಚಾವಚಾತ್ಮಕೋ ಹ್ಯೇಷಃ ಭವಃ ಸಭವತೇ ಮುಹುಃ ।
ತಮಮುಂ ನೀಲಮೇಘಾಭಂ ನೀಲಾತ್ಮಮಣಿವಿಗ್ರಹಂ ॥ ೨೫ ॥
ನೀಲಾಚಲಗುಹಾವಾಸಂ ಪ್ರಣಮಾಮಿ ಕೃಪಾನಿಧಿಂ ।
ಶಂಖ ಚಕ್ರ ಗದಾ ಪದ್ಮಧಾರಿಣಂ ಶುಭದಾಯಿನಂ ॥ ೨೬ ॥
ಪ್ರಣತಾಶೇಷಪಾಪೌಘದಾರಿಣಂ ಮುರವೈರಿಣಂ ।
ನಮಸ್ತೇ ಕಮಲಾಪಾಂಗಸಂಘಸಂಸ್ಕಾರಚಕ್ಷುಷೇ ॥ ೨೭ ॥
ಶ್ರೀವತ್ಸಕೌಸ್ತುಭೋದ್ಭಾಸಿಮನೋಹೃದ್ವ್ಯೂಢವಕ್ಷಸೇ ।
ಯತ್ಪಾದಪಂಕಜದ್ವಂದ್ವಸಂಶ್ರಯೈಶ್ವರ್ಯಭಾಗಿನೀ ॥ ೨೮ ॥
ಶ್ರೀಃ ಸಂರಕ್ಷಿತಾ ಜನೈಃ ಶಶ್ವತ್ಪೃಥಗೈಶ್ವರ್ಯದಾಯಿನೀ ।
ಯಾ ಪರಾಪರಸಂಭಿನ್ನಾ ಪ್ರಕೃತಿಸ್ತೇ ಸಿಸೃಕ್ಷಯಾ ॥ ೨೯ ॥

---

ನಮೋ ನಮೋ ! ಎಲೈ ಯಜ್ಞವರಾಹಮೂರ್ತಿಯೆ ! ಚಂದ್ರಸೂರ್ಯಾಗ್ನಿಗಳೇ ನೇತ್ರಗಳಾಗಿ ಉಳ್ಳ ಸ್ವಾಮಿಯೆ !! ನಿನಗೆ ನಮೋ ನಮೋ !

೨೪–೨೬. ನರಸಿಂಹನಾಗಿ, ಕೋರೆದಾಡೆಗಳಿಂದ ಭಯಂಕರಾಕಾರವುಳ್ಳವನಾಗಿ ಶತ್ರುವಾದ ಹಿರಣ್ಯಕಶಿಪುವನ್ನು ಸಿಗಿದವನೂ, ಕುಡಿಗಣ್ನೋಟವೆಂಬ ವಿಲಾಸದಿಂದಲೇ ಸೃಷ್ಟಿಸ್ಥಿತಿಲಯಗಳನ್ನು ಆಗಮಾಡುವವನೂ ಆದ ನಿನಗೆ ಇದೋ ಮಣಿಯುವೆನು ! ಅತ್ಯುತ್ಕೃಷ್ಟವಾದ ಈ ಭವವು ಅಡಿಗಡಿಗೂ ಯಾರಿಂದ ಉಂಟಾಗುವುದೋ ಅಂತಹ ನೀಲಮೇಘಕಾಂತಿಯನ್ನು ತಳೆದು, ನೀಲಮಣಿ ವಿಗ್ರಹನಾಗಿ, ಇಲ್ಲಿ ಕಾಣುತ್ತಿರುವ ನೀಲಾಚಲದ ಗುಹೆಯಲ್ಲಿ ವಾಸವಾಗಿರುವವನೂ, ಕೃಪಾನಿಧಿಯಾಗಿ ಶಂಖಚಕ್ರಗದಾಪದ್ಮಧಾರಿಯಾಗಿ, ಮಂಗಳದಾಯಕನಾಗಿ ಬೆಳಗುತ್ತಿರುವ ಎಲೈ ನಾರಾಯಣಮೂರ್ತಿಯೇ ನಿನಗೆ ನಮೋ ನಮಃ !

೨೭. ಶರಣೆಂದು ಪ್ರಣತರಾಗಿ ಬರುವ ಸಮಸ್ತ ಭಕ್ತರ ಪಾಪಸಮೂಹಗಳನ್ನು ಸೀಳುವವನೂ ನೀನೇ ! ಮುರಾಸುರನ ಹಗೆಯೂ, ಲಕ್ಷ್ಮಿಯ ಅಪಾಂಗದೊಡಬೆರತು ಸಂಸ್ಕೃತವಾದ ಕಣ್ಣುಗಳುಳ್ಳವನೂ ನೀನೇ! ದೇವಾ, ನಿನಗೆ ನಮಸ್ಕಾರವು !

೨೮–೨೯. ಶ್ರೀವತ್ಸಕೌಸ್ತುಭಗಳಿಂದ ಬೆಳಗಿ ಮನೋಹರವಾಗಿ ಕಂಗೊಳಿಸುವ ವಿಶಾಲವಕ್ಷಸ್ಥಳವುಳ್ಳ ನಿನ್ನ ಪಾದಕಮಲಗಳನ್ನಾಶ್ರಯಿಸಿದುದರಿಂದಲೇ ಐಶ್ವರ್ಯವತಿಯಾಗಿರುವ ಈ ಶ್ರೀದೇವಿಯೂ ಭಕ್ತಜನರಿಂದ ಸಂಸ್ತುತೆಯಾಗಿ ಅವರವರಿಗೆ ಬೇಕುಬೇಕಾದ ಸಂಪತ್ತುಗಳನ್ನೆಲ್ಲ ಕೊಡುವವಳಾಗಿರುವಳು. ಆಕೆಯೇ ಸೃಷ್ಟಿಗೋಸುಗವಾಗಿ ಪರಾ ಅಪರಾ ಎಂಬ ಭೇದದಿಂದ ನಿನ್ನಿಂದ ಸೃಷ್ಟಳಾಗಿರುವಳು.

ಸರ್ವಲಕ್ಷಣಸಂಪೂರ್ಣಾಂ ಲಕ್ಷಿತಾಂ ಶುಭಲಕ್ಷಣೈಃ ।
ಲಕ್ಷ್ಮೀಶೋರಸಿ ನಿತ್ಯಸ್ಥಾಂ ಲಕ್ಷ್ಮೀಂ ತಾಂ ಪ್ರಣಮಾಮ್ಯಹಂ ॥ ೩೦ ॥
ಜೈಮಿನಿರುವಾಚ :—
ತದೇವಂ ಧರ್ಮರಾಜೇನ ಶ್ರೀಕಾಂತಃ ಪರಿತೋಷಿತಃ ।
ಪಾರ್ಶ್ವಸ್ಥಾಂ ವಲ್ಲಕೀಹಸ್ತಾಂ ನೇತ್ರಾಂತೇನಾದಿಶಚ್ಛ್ರಿಯಂ ॥ ೩೧ ॥
ತೇನ ಸಂಭಾವಿತಾ ಲಕ್ಷ್ಮೀರ್ಭವದುಃಖವಿನಾಶಿನೀ ।
ಶುಭಾಯ ಸರ್ವಲೋಕಾನಾಂ ಯಮಂ ಪ್ರೋವಾಚ ಲೀಲಯಾ ॥
ಲಕ್ಷ್ಮೀರುವಾಚ :—
ಯದರ್ಥಮಾವಾಂ ಸಂಸ್ತೌಷಿ ಕ್ಷೇತ್ರೇಸ್ಮಿನ್ದುರ್ಲಭಂ ಹಿ ತತ್ ।
ಅತ್ಯಾಜ್ಯಮಾವಯೋರೇತತ್ ಕ್ಷೇತ್ರಂ ಶ್ರೀಪುರುಷೋತ್ತಮಂ ॥ ೩೩ ॥
ಕಲ್ಪಾವಸಾನೇಪ್ಯಾವಾಂ ವೈ ಧ್ರಿಯತೇ ಪರಮೇಷ್ಠಿನಾ ।
ಬ್ರಹ್ಮಾದಿದಿಕ್ಪಭೂಣಾಂ ಹಿ ಸ್ವಾಮಿತ್ವಂ ನೇಹ ವಿದ್ಯತೇ ॥ ೩೪ ॥
ನೇಹ ಕರ್ಮಪರೀಪಾಕಾಃ ಸಂಭವಂತಿ ಕದಾಚನ ।
ಅತ್ರ ಪ್ರವಸತಾಂ ನೄಣಾಂ ತಿರಶ್ಚಾಮಪಿ ದುಷ್ಕೃತಾಂ ॥ ೩೫ ॥

---

೩೦. ನಿರ್ವಿಕಾರವಾದ ಪರಬ್ರಹ್ಮನೇ ನೀನಾಗಿ, ವಿಕಾರಗೊಳ್ಳುವ ಈ ಜಗತ್ತನ್ನು ಸೃಜಿಸಿರುವೆ! ಸರ್ವಲಕ್ಷಣ ಸಂಪೂರ್ಣಳಾಗಿ ಸಮಸ್ತ ಶುಭಲಕ್ಷಣ ಗಳಿಂದ ಲಕ್ಷಿತಳಾಗಿ ಲಕ್ಷ್ಮೀಶನಾದ ನಿನ್ನ ವಕ್ಷಸ್ಥಳದಲ್ಲಿಯೇ ಸತತವೂ ನೆಲ ಸಿರುವ ಶ್ರೀ ಲಕ್ಷ್ಮೀದೇವಿಯನ್ನು ನಮಸ್ಕರಿಸುವೆನು!''

೩೧. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ! ಈ ಪ್ರಕಾರವಾಗಿ ಆ ಯಮಧರ್ಮರಾಜನಿಂದ ಸಂಸ್ತುತನಾದ ಆ ಶ್ರೀಕಾಂತನು ಪರಮಸಂತುಷ್ಟ ನಾಗಿ ತನ್ನ ಪಾರ್ಶ್ವದಲ್ಲಿಯೇ ಇದ್ದ ವೀಣಾಪಾಣಿಯಾದ ಶ್ರೀ ಮಹಾಲಕ್ಷ್ಮಿ ಯನ್ನು ಕಡೆಗಣ್ಣಿನಿಂದಲೇ ಸನ್ನೆ ಮಾಡಿ ಅನುಗ್ರಹಿಸೆಂದು ಅಪ್ಪಣೆಮಾಡಿದನು.

೩೨. ಈ ರೀತಿ ನಾರಾಯಣನಿಂದ ಸಂಭಾವಿತೆಯಾದ ಲಕ್ಷ್ಮೀದೇವಿಯು ಭವದುಃಖವನ್ನು ನಾಶಮಾಡುವವಳಾಗಿ ಸಮಸ್ತಪ್ರಜೆಗಳ ಮಂಗಳಕ್ಕಾಗಿ ಯಮ ಧರ್ಮರಾಜನನ್ನು ಕುರಿತು ಲೀಲೆಯಿಂದಿಂತೆಂದು ನುಡಿದಳು.

೩೩. ಲಕ್ಷ್ಮೀದೇವಿಯು ಹೇಳುತ್ತಾಳೆ:—''ಎಲೈ ಯಮನೇ! ನೀನು ನಮ್ಮೀರ್ವರನ್ನು ಏತಕ್ಕಾಗಿ ಸ್ತುತಿಸಿದೆಯೋ ಅದು ದೊರಕುವುದು ಅಸದಳವೇ ಸರಿ. ಈ ಪುರುಷೋತ್ತಮಕ್ಷೇತ್ರವು ನಮ್ಮಿರ್ವರಿಗೂ ಅತ್ಯಾಜ್ಯವಾಗಿರುವುದು.

೩೪. ಈ ಕಲ್ಪವು ಕಳೆದ ಬಳಿಕಲೂ ಪರಮೇಷ್ಠಿಯು ನಮ್ಮಿರ್ವರನ್ನೂ ಧರಿಸಿಯೇ ಇರುತ್ತಾನೆ. ಬ್ರಹ್ಮನೇ ಮೊದಲಾದ ದಿಕ್ಪಾಲಕರಿಗೆ ಸ್ವಾಮಿತ್ವ ವೆಂಬುದು ಈ ಕ್ಷೇತ್ರದಲ್ಲಿಯೇ ಇರುವುದಿಲ್ಲವು.

೩೫. ಇಷ್ಟೆಯಲ್ಲದೆ ಈ ಪುರುಷೋತ್ತಮ ಕ್ಷೇತ್ರದಲ್ಲಿ ವಾಸಮಾಡುವವರು

ದಹ್ಯತೇ ಜ್ವಲಿತಾಗ್ನೌ ಹಿ ತೂಲರಾಶಿರ್ಯಥಾ ಭೃಶಂ ।
ಯೇ ಬದ್ಧಾ ಪಾಪಪುಣ್ಯಾಭ್ಯಾಂ ನಿಗಾಢಾಭ್ಯಾಮಹರ್ನಿಶಂ ॥ ೩೬ ॥
ತೇಷಾಂ ಸಂಯಮಿತಾ ತ್ವಂ ಹಿ ಯಮಃ ಪೂರ್ವವಿನಿರ್ಮಿತಃ ।
ಅತ್ರ ಸಾಕ್ಷಾದ್ವಪುಷ್ಮಂತಂ ನೀಲೇಂದ್ರಮಣಿಮಂಜುಲಂ ॥ ೩೭ ॥
ದೃಷ್ಟ್ವಾ ನಾರಾಯಣಂ ದೇವಂ ಮುಚ್ಯತೇ ಕರ್ಮಬಂಧನಾತ್ ।
ಅತೋಽನ್ಯತಃ ಕರ್ಮಭೂಮೌ ಪ್ರಭುತ್ವಂ ಸೂರ್ಯಸಂಭವ ॥ ೩೮ ॥
ವೈಕ್ಲವ್ಯಂ ಕ್ಷೇತ್ರರಾಜೇಽಸ್ಮಿನ್ಮಾಗಾಸ್ತ್ವಂ ಯಮ ಸಂಯಮೇ ।
ತವಾಪಿ ಭಗವಾನೇಷ ವಿಧಾತಾ ಪ್ರಪಿತಾಮಹಃ ॥ ೩೯ ॥
ತಿರ್ಯಂಚಂ ವಿಷ್ಣುಸಾರೂಪ್ಯಂ ಪ್ರಾಪ್ತಂ ಪಶ್ಯತಿ ಕೌತುಕಾತ್ ।
ಏಷ ಕರ್ಮಪರೀಪಾಕಂ ಸರ್ವೇಷಾಂ ವೇತ್ತಿ ಕಂಜಜಃ ॥ ೪೦ ॥
ಜ್ಞಾತ್ವಾ ಕ್ಷೇತ್ರಸ್ಯ ಮಾಹಾತ್ಮ್ಯಂ ಸ್ತೌತಿ ದೇವಂ ಗದಾಧರಂ ।
ತ್ವದ್ವಶಂ ಗಂತುಮುಚಿತಾ ನೇಹ ತಿಷ್ಠಂತಿ ಜಂತವಃ ॥ ೪೧ ॥

---

ಮಾನವರಿಗಾಗಲಿ, ತಿರ್ಯಕ್‌ಜಂತುಗಳಿಗೇ ಆಗಲಿ, ಪಾಪಿಗಳಿಗೇ ಆಗಲಿ ಕರ್ಮಪರಿಪಾಕವೆಂಬುದೇ ಇರುವುದಿಲ್ಲವು.

೩೬–೩೮. ಅವರೆಲ್ಲರ ಪೂರ್ವಜನ್ಮದ್ದೇ ಅಲ್ಲದೆ ಈ ಜನ್ಮದ ಪಾಪಗಳೂ ಹತ್ತಿಯ ರಾಶಿಯು ಬೆಂಕಿಯಲ್ಲಿಂತೋ ಅಂತು ದಗ್ಧವಾಗಿಹೋಗುತ್ತವೆ. ಅಯ್ಯಾ ಯಮಧರ್ಮರಾಜನೇ! ಪಾಪಪುಣ್ಯಗಳ ಸಂಕೋಲೆಗಳಿಂದ ಸತತವೂ ಬಿಗಿಸಲಾಗಿರುವ ಮಾನವರ ಸಂಯಮನಕ್ಕಾಗಿ ಪೂರ್ವದಲ್ಲಿ ನೀನು ಬ್ರಹ್ಮನಿಂದ ನಿರ್ಮಿಸಲಾಗಿರುವೆ. ಆದರೆ ಈ ಕ್ಷೇತ್ರದಲ್ಲಿ ಸಾಕ್ಷಾತ್ತಾಗಿ ದೇಹವನ್ನು ಧರಿಸಿ ನೆಲಸಿ ಇಂದ್ರನೀಲಮಣಿಕಾಂತಿಯನ್ನು ತಳೆದು ವಿರಾಜಿಸುತ್ತಿರುವ ಶ್ರೀಮನ್ನಾರಾಯಣಮೂರ್ತಿಯನ್ನು ಸಂದರ್ಶಿಸಿದ ಮಾನವರೆಲ್ಲರೂ ಕರ್ಮಬಂಧನಗಳಿಂದ ಬಿಡುಗಡೆಯಾಗುತ್ತಾರೆ. ಆದುದರಿಂದ ಇಲ್ಲಿ ನಿನ್ನ ಪ್ರಭುತ್ವವೇನೂ ನಡೆಯುವುದಿಲ್ಲವು. ನಿನ್ನ ಪ್ರಭುತ್ವವು ಇಲ್ಲಿಂದ ಬೇರೆಯಾಗಿರುವ ಕರ್ಮಭೂಮಿಯಲ್ಲಿ ನಡೆಯುತ್ತದೆ.

೩೯. ಎಲೈ ಯಮನೇ! ನೀನು ದಂಡನೆಯ ವಿಷಯದಲ್ಲಿ ಈ ಕ್ಷೇತ್ರದಲ್ಲೆಂದಿಗೂ ತಳಮಳಗೊಳ್ಳಬೇಡ. ಇಲ್ಲಿ ಸಾಕ್ಷಾತ್ತಾಗಿರುವ ಮಹಾವಿಷ್ಣುವು ನಿನಗೂ ವಿಧಾತೃವೂ, ಪ್ರಪಿತಾಮಹನೂ ಆಗಿರುವನೆಂಬದನ್ನು ತಿಳಿ.

೪೦. ಈ ಕ್ಷೇತ್ರದಲ್ಲಿ ಬ್ರಹ್ಮನು, ತಿರ್ಯಕ್‌ಜಂತುವಾದ ಒಂದು ಕಾಗೆಯು ವಿಷ್ಣುಸಾರೂಪ್ಯವನ್ನು ಪಡೆದುದನ್ನು ಆಶ್ಚರ್ಯದಿಂದ ನೋಡಿದನಾಗಿ ಇಲ್ಲಿ ವಾಸವಾಗಿರುವ ಸಮಸ್ತರ ಕರ್ಮಪರಿಪಾಕವನ್ನೂ ಬಲ್ಲವನಾಗಿರುವನು.

೪೧. ಆ ಕಮಲಸಂಭವನು ಈ ಕ್ಷೇತ್ರದ ಮಹಿಮೆಯನ್ನು ಚೆನ್ನಾಗಿ

ವೈವಸ್ವತ ವಸಂತ್ಯತ್ರ ಜೀವನ್ಮುಕ್ತಾ ಮುಮುಕ್ಷವಃ ।
ತಯಾ ಸಂಬೋಧಿತಸ್ತ್ವೇವಂ ವಿಷ್ಣುನಾ ಸ್ತ್ರೀಸ್ವರೂಪಿಣಾ ।
ತತೋಽಹಂಕಾರಲಜ್ಜಾಭ್ಯಾಂ ವಿನೀತಃ ಪ್ರಾಬ್ರವೀದ್ಯಮಃ ॥ ೪೨ ॥
ಯಮ ಉವಾಚ :—
ಮಾತಸ್ತ್ವಯಾ ಯದಾಜ್ಞಪ್ತಂ ಪುರಾ ನೈತನ್ಮಯಾ ಶ್ರುತಂ ॥ ೪೩ ॥
ಅಜ್ಞಾನೋಪಹತೋ ವೇದ್ಮಿ ರಹಸ್ಯಂ ಕಥಮುತ್ತಮಂ ।
ಯಸ್ಯ ಸ್ವರೂಪಂ ವೇದಾಶ್ಚ ನ ಚ ವೇತ್ತಿ ಪಿತಾಮಹಃ ॥ ೪೪ ॥
ಮಹಿಮಾನಂ ಕಥಂ ತಸ್ಯ ವೇದ್ಮ್ಯಹಂಕಾರಮೋಹಿತಃ ।
ಯದಾದಿಷ್ಟಂ ಸುರೇಶಾನಿ ಕ್ಷೇತ್ರಮೇತದ್ವಿಮುಕ್ತಿದಂ ॥ ೪೫ ॥
ಸಾನ್ನಿಧ್ಯಾದ್ವಾಸುದೇವಸ್ಯ ಈಶ್ವರೇಚ್ಛಾ ನಿರಂಕುಶಾ ।
ಅನ್ಯತ್ರ ಬಂಧದೋ ವಿಷ್ಣುರತ್ರ ಮೋಕ್ಷಂ ದದಾತಿ ಯತ್ ॥ ೪೬ ॥
ಮಮಾಪಿ ನಿರಯಾಣಾಂ ಚ ಸ್ರಷ್ಟಾಽಸೌ ತ್ರಿದಿವಸ್ಯ ಚ ।
ಮೃತಾನಾಮತ್ರಮುಕ್ತಿಶ್ಚೇತ್ ತನ್ಮಾಮಂಬ ಸುವಿಸ್ತರಂ ॥ ೪೭ ॥

---

ತಿಳಿದು ಅಂತಹ ಮಹಿಮೆಗೆ ಕಾರಣನಾಗಿರುವ ಗದಾಧರಸ್ವಾಮಿಯನ್ನು ಸ್ತುತಿಸು ತ್ತಿರುವನು. ಎಲೈ ಧರ್ಮರಾಜನೇ! ಕೇಳು; ನಿನ್ನ ಬಳಿಗೈದುವ ಯೋಗ್ಯತೆ ಯುಳ್ಳ ಯಾವ ಜಂತುವೂ ಇಲ್ಲಿರುವುದಿಲ್ಲವು.

೪೨. ವೈವಸ್ವತಾ! ಈ ಕ್ಷೇತ್ರದಲ್ಲಿ ಜೀವನ್ಮುಕ್ತರಾಗಿ ಮೋಕ್ಷವನ್ನು ಪಡೆಯಲಪೇಕ್ಷಿಸುತ್ತಿರುವವರು ಮಾತ್ರ ವಾಸವಾಗಿರುತ್ತಾರೆ. ಆದುದರಿಂದ ನೀನು ಯೋಚಿಸದಿರು.'' ಎಂಬೀ ಪ್ರಕಾರವಾಗಿ ಸ್ತ್ರೀ (ಲಕ್ಷ್ಮೀ) ಸ್ವರೂಪನಾದ ಶ್ರೀ ಮಹಾವಿಷ್ಣುವಿನಿಂದ ಸಂಬೋಧಿತನಾದ ಆ ಯಮಧರ್ಮನು ತಾನು ಅಹಂಕಾರಪಟ್ಟುದಕ್ಕೆ ತನ್ನಲ್ಲಿಯೆ ನಾಚಿ ನಮ್ರನಾಗಿ ಆ ದೇವಿಯನ್ನು ಕುರಿತು ಹೀಗೆಂದನು :—

೪೩–೪೭. ಯಮನು ಹೇಳುತ್ತಾನೆ:—ತಾಯೇ! ನೀನು ಈಗ ಅಪ್ಪಣೆ ಕೊಡಿಸಿದ ವಿಷಯವನ್ನು ನಾನು ಹಿಂದಾವಾಗಲೂ ಕೇಳಿರಲಿಲ್ಲ. ಅಜ್ಞಾನದಿಂದ ಬುದ್ಧಿಶೂನ್ಯನಾಗಿರುವ ನಾನು ಈ ಉತ್ತಮ ರಹಸ್ಯವನ್ನೆಂತುತಾನೆ ತಿಳಿದು ಕೊಂಡೇನು? ವೇದಸ್ವರೂಪನೇ ಆಗಿರುವ ಪಿತಾಮಹನೂ ಸಹ ಈ ರಹಸ್ಯವನ್ನು ತಿಳಿದಿಲ್ಲವೆಂದ ಬಳಿಕ ನನ್ನ ಪಾಡೇನು? ಅಹಂಕಾರ ಮೋಹಿತನಾದ ನಾನದನ್ನು ಹೇಗೆ ತಾನೇ ತಿಳಿದೇನು? ಎಲೌ ಸುರೇಶ್ವರಿಯೇ! ವಾಸುದೇವನು ಈ ಕ್ಷೇತ್ರ ದಲ್ಲಿ ನೆಲಸಿರುವುದರಿಂದ ಇದು ಮುಕ್ತಿಪ್ರದವಾಗಿರುವುದು. ಈಶ್ವರೇಚ್ಛೆಯು ನಿರಂಕುಶವಾದುದು. ಇತರ ಪ್ರದೇಶಗಳಲ್ಲಿ ಸಂಸಾರಬಂಧನದಲ್ಲಿ ತೊಡಗಿಸುವ ಭಗವಾನ್ ವಿಷ್ಣುವು ಈ ಕ್ಷೇತ್ರದಲ್ಲಿ ಪ್ರಾಣಿಗಳಿಗೆ ಮುಕ್ತಿಯನ್ನು ಕೊಡುತ್ತಿರು

**ಕ್ಷೇತ್ರಸಂಸ್ಥಾ ಪ್ರಮಾಣಂ ಹಿ ತತ್ರಸ್ಥಾಥಿಫಲಂ ಹಿ ಯತ್ ।**
**ತೀರ್ಥಾನಿ ಕಾನಿ ಸಂತ್ಯತ್ರ ಕಿಮನ್ಯದ್ವಾ ರಹಸ್ಯಕಂ ॥ ೪೮ ॥**
**ಕಿಮಧಿಷ್ಠಾತೃಕಂ ಕ್ಷೇತ್ರಂ ತತ್ಸರ್ವಂ ಕಥಯಸ್ವ ಮೇ ।**
**ತದಹಂ ಸಂಪರಿತ್ಯಜ್ಯ ನಿರ್ಭಯಂ ಸಂಚರೇ ಯಥಾ ॥ ೪೯ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ
ಜೈಮಿನಿಋಷಿಸಂವಾದೇ "ಬ್ರಹ್ಮಣಃ ಪುರುಷೋತ್ತಮಕ್ಷೇತ್ರಪ್ರತ್ಯಾಗಮನಂ —
ವಾಯುಸವೃತ್ತಾಂತವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

ವನು. ನನ್ನನ್ನೂ, ನರಕಗಳನ್ನೂ, ಸ್ವರ್ಗವನ್ನೂ ಸೃಷ್ಟಿಸಿರುವವನು ಆ ಭಗವಂತನೇ! ಎಲೌ ದೇವೀ! ಇಲ್ಲಿ ಮೃತರಾದವರಿಗೆ ಮುಕ್ತಿಯೇ ದೊರಕುವುದಾದರೆ ಈ ಕ್ಷೇತ್ರದ ವಿಷಯವನ್ನು ವಿಸ್ತಾರವಾಗಿ ನನಗೆ ತಿಳಿಸಬೇಕು.

೪೮–೪೯. ಈ ಕ್ಷೇತ್ರವಿರುವುದೆಷ್ಟು? ಇಲ್ಲಿ ವಾಸಮಾಡುವುದರಿಂದಾವ ಫಲವುಂಟಾಗುವುದು? ಇಲ್ಲಿ ಯಾವ ಯಾವ ತೀರ್ಥಗಳಿರುವುವು? ಇಲ್ಲಿಯ ಇತರ ರಹಸ್ಯಗಳೇನು? ಈ ಕ್ಷೇತ್ರವು ಯಾವುದನ್ನು ಅಧಿಷ್ಠಿಸಿರುವುದು? ಇದೆಲ್ಲವನ್ನೂ ತಿಳಿದುಕೊಂಡು ನಾನು ನಿರ್ಭಯವಾಗಿ ಸಂಚರಿಸುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ
ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಬ್ರಹ್ಮನು ಪುರುಷೋತ್ತಮಕ್ಷೇತ್ರಕ್ಕೆ
ಬಂದುದು — ವಾಯುಸವೃತ್ತಾಂತವರ್ಣನ"ವೆಂಬ
ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಯಮಲಕ್ಷ್ಮೀಸಂವಾದಃ— ಯಮೇಶ್ವರಲಿಂಗಸ್ಥಾಪನವರ್ಣನಂ

ಶ್ರೀರುವಾಚ :—

**ಸಾಧು ತೇ ಬುದ್ಧಿರುತ್ಪನ್ನಾ ವಿಷ್ಣೋಃ ಸನ್ನಿಧಿಮಾಶ್ರಿತಾ ।**
**ಅದ್ಭುತಂ ಕಥಯಾಮ್ಯೇತತ್ಕ್ಷೇತ್ರಸ್ಯ ರವಿನಂದನ ॥ ೧ ॥**
**ಯಥಾಹಂ ಭಗವದ್ವಕ್ಷಃಸ್ಥಲಸ್ಥಾ ದದೃಶೇ ಪುರಾ ।**
**ಚರಾಚರೇ ಜಗತ್ಯಸ್ಮಿನ್ಪ್ರಲೀನೇ ಪ್ರಲಯೇ ಯಮ ॥ ೨ ॥**
**ಏತತ್ಕ್ಷೇತ್ರಮಹಂ ಚೈವ ದ್ವೇ ಏವೋಪಸ್ಥಿತೇ ತದಾ ।**
**ಸ ತದಾ ಸಪ್ತಕಲ್ಪಾಯುರ್ಮಾರ್ಕಂಡೋಽರಾತ್ಮಜೋ ಮುನಿಃ ॥ ೩ ॥**
**ಪಣಷ್ಟೇ ಸ್ಥಾವರಚರೇ ನಿಮಗ್ನಃ ಪ್ರಲಯಾರ್ಣವೇ ।**
**ನಾವಸ್ಥಾನಮವಾಪ್ಯೈವ ಶರ್ಮ ಲೇಭೇ ನ ಕುತ್ರಚಿತ್ ॥ ೪ ॥**
**ಜಲಾರ್ಣವೇ ಭ್ರಾಮ್ಯಮಾಣಃ ಪ್ರಲಯೇ ಸ ಇತಸ್ತತಃ ।**
**ಪುರುಷೋತ್ತಮಸಾದೃಶ್ಯೇ ಕ್ಷೇತ್ರೇ ಸ ವಟಮೈಕ್ಷತ ॥ ೫ ॥**

---

## ಕನ್ನಡದ ಅನುವಾದ

### ಯಮಲಕ್ಷ್ಮೀಸಂವಾದ— ಯಮೇಶ್ವರಲಿಂಗಸ್ಥಾಪನವರ್ಣನ

೧. ಶ್ರೀದೇವಿಯು ಹೇಳುತ್ತಾಳೆ:—" ಎಲೈ ಯಮಧರ್ಮರಾಜನೇ! ಈಗ ನೀನು ಶ್ರೀಮನ್ಮಹಾವಿಷ್ಣುವಿನ ಸನ್ನಿಧಿಯನ್ನಾಶ್ರಯಿಸಿರುವುದರಿಂದ ನಿನಗೆ ಸದ್ಬುದ್ಧಿಯುಂಟಾಗಿರುವುದು. ಬಹಳ ಸಂತೋಷ. ಓ ರವಿನಂದನ! ಪ್ರಕೃತದಲ್ಲಿ ನಾನು ನಿನಗೀಕ್ಷೇತ್ರದ ಅದ್ಭುತವನ್ನು ಹೇಳುವೆನು ಕೇಳು.

೨. ನಾನು ಷಡ್ಗುಣೈಶ್ವರ್ಯಸಂಪನ್ನನಾದ ಈ ಮಹಾವಿಷ್ಣುವಿನ ವಕ್ಷಸ್ಥಳದಲ್ಲಿಯೇ ಸತತವೂ ವಾಸಮಾಡುತ್ತಿರುವೆನಾದುದರಿಂದ, ಪೂರ್ವದಲ್ಲಿ ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಈತನಲ್ಲಿ ಲೀನವಾದಂದು ಆ ಅದ್ಭುತವನ್ನು ಕಂಡೆನು.

೩-೪. ಆ ಸಮಯದಲ್ಲಿ ನಾನು, ಈ ಪುರುಷೋತ್ತಮಕ್ಷೇತ್ರ ಈ ಎರಡು ಮಾತ್ರ ಲಯವಾಗದೆ ನೆಲೆಯಾಗಿ ನಿಂತೆವು. ಏಳು ಕಲ್ಪಗಳ ಆಯುಷ್ಯವುಳ್ಳವನಾದ ಮಾರ್ಕಂಡೇಯಮುನಿಯು ಆಗ ಚರಾಚರ ಜಗತ್ತೆಲ್ಲವೂ ಪ್ರಳಯಸಮುದ್ರದಲ್ಲಿ ಲಯಿಸಿಹೋಗಲು ನಾವೆಯಿದ್ದೆಡೆಯನ್ನು ಸೇರಿ ಎಲ್ಲಿಯೂ ಶಾಂತಿಯನ್ನೇ ಪಡೆಯಲಿಲ್ಲವು.

೫. ಆ ಮುನಿಯು ಆ ನಾವೆಯಲ್ಲಿಯೇ ಕುಳಿತು ಅಪಾರವಾದ ಆ ಪ್ರಳಯ

ಉತ್ಪ್ಲುತ್ಯೋತ್ಪ್ಲುತ್ಯ ಮೂಲಂ ತು ನ್ಯಗ್ರೋಧಸ್ಯ ಸಮೀಪತಃ ।
ಸುಶ್ರಾವ ಬಾಲವಚನಂ ಮಾರ್ಕಂಡೇಯ ಮಮಾಂತಿಕಂ ॥ ೬ ॥
ಪ್ರವಿಶ್ಯ ದುಃಖಮತುಲಂ ಜಹೀಹಿ ಖಲು ಮಾಶುಚಃ ।
ತಚ್ಛ್ರುತ್ವಾ ಚಿತ್ರವಚನಮಪ್ರತರ್ಕ್ಯಂ ತದಾ ಮುನಿಃ ॥ ೭ ॥
ವಿಸ್ಮಯಂ ಪರಮಂ ಲೇಭೇ ಸ್ವದುಃಖಂ ನಾಪ್ಯಚಿಂತಯತ್ ।
ವಾರಿಭಿಃ ಶೀರ್ಯತೇ ನೈತದ್ದಹ್ಯತೇ ಕಾಲವಹ್ನಿನಾ ॥ ೮ ॥
ಸಂವರ್ತಕಾದಿಭಿರ್ನೈತಚ್ಛೋಷ್ಯತೇ ನಾಪಿ ಚಾಲ್ಯತೇ ।
ಏಕಾರ್ಣವೇ ಮಹಾಘೋರೇ ನೌರಿವ ಕ್ಷೇತ್ರಮೀಕ್ಷ್ಯತೇ ॥ ೯ ॥
ತತ್ರಾಯಂ ಯೂಪಸದೃಶೋ ನ್ಯಗ್ರೋಧಸ್ತಿಷ್ಠತೇ ಮಹಾನ್ ।
ಯಂ ಗೃಹೀತ್ವಾ ಕ್ಷೇತ್ರಮಿದಂ ನ್ಯಗ್ರೋಧ ಈಶಿತಸ್ತನುಃ ॥ ೧೦ ॥
ಮಹಾಪ್ರಲಯವಾತೇನ ಶಾಖಾ ನಾಸ್ಯ ಹಿ ಕಂಪತೇ ।
ತಸ್ಯಾಧಸ್ತಾತ್ಸ ಹಿ ಮುನಿಃ ಸ್ಥಿತ್ವಾ ಚೈತದಚಿಂತಯತ್ ॥ ೧೧ ॥

---

ಸಾಗರದಲ್ಲಿ ಅತ್ತಿತ್ತ ಸುತ್ತುತ್ತ ಕಡೆಗೆ ಈ ಪುರುಷೋತ್ತಮ ಕ್ಷೇತ್ರಕ್ಕೆ ಸಮಾನವಾದ ಒಂದಾನೊಂದು ಕ್ಷೇತ್ರದಲ್ಲಿ ಒಂದಾನೊಂದು ವಟವೃಕ್ಷವನ್ನು ಕಂಡನು.

೬–೯. ಆಗಲಾತನು ಆ ನ್ಯಗ್ರೋಧದ ಬುಡಕ್ಕೆ ಹಾರುವ ಪ್ರಯತ್ನದಲ್ಲಿರುವಾಗ ಅದರ ಬಳಿಯಲ್ಲಿಯೇ ಬಾಲಕನೋರ್ವನಾಡಿದ ಈ ಮಾತನ್ನು ಕೇಳಿದನು. "ಎಲೈ ಮಾರ್ಕಂಡೇಯನೇ! ನನ್ನ ಬಳಿಗೆ ಬಾ; ಅಪಾರವಾದ ಈ ದುಃಖವನ್ನು ತೊರೆ; ಶೋಕಿಸಬೇಡ." ಆಗಲಾಮುನಿಯು ಊಹೆಗೂ ನಿಲುಕದ ವಿಚಿತ್ರವಾದ ಆ ಮಾತನ್ನು ಕೇಳಿ ಅತ್ಯಾಶ್ಚರ್ಯಭರಿತನಾಗಿ ತನ್ನ ದುಃಖವನ್ನು ಕುರಿತು ಸ್ವಲ್ಪವೂ ಶೋಕಿಸಲಿಲ್ಲವು. ಆ ಸಮಯದಲ್ಲಿ ಈ ಕ್ಷೇತ್ರವಾದರೋ ಪ್ರಳಯ ಸಮುದ್ರದ ನೀರಿನಿಂದ ಸೀಳಲಿಲ್ಲ; ಪ್ರಳಯಾಗ್ನಿಯಿಂದಲೂ ಸುಡಲಿಲ್ಲ; ಸಂವರ್ತಕಾದಿಗಳಿಂದ ಶೋಷಿಸದೆಯೂ, ಕಟ್ಟಕದಲದೆಯೂ, ಎತ್ತೆತ್ತಲೂ ಏಕಾಕಾರವಾಗಿಯೇ ಕಾಣುತ್ತಿರುವ ಮಹಾಘೋರವಾದ ಆ ಸಾಗರದಲ್ಲಿ ಒಂದು ಹಡಗಿನಂತೆ ಕಾಣುತ್ತಿರುವುದು.

೧೦. ಅಲ್ಲಿಯೇ ಮಹತ್ತರವಾದ ಈ ನ್ಯಗ್ರೋಧ ವೃಕ್ಷವು ಯೂಪಸ್ತಂಭಕ್ಕೆ ಸಮಾನವಾಗಿ ನೆಲಸಿರುವುದು. ಈ ಮಹಾವೃಕ್ಷವನ್ನೊಳಕೊಂಡೇ ಈ ಕ್ಷೇತ್ರವಾಗಿರುವುದು. ಇದು ಪರಮಾತ್ಮನ ಮೈಯಾಗಿರುವುದು.

೧೧. ಮಹಾಪ್ರಳಯದ ಗಾಳಿಯಿಂದಲೂ ಈ ವೃಕ್ಷದ ಕೊಂಬೆಗಳು ಅಲುಗುವುದಿಲ್ಲವು. ಅಯ್ಯಾ ಯಮನೇ! ಆ ಮಾರ್ಕಂಡೇಯನು ಈ ಮರದಡಿಯಲ್ಲಿಯೇ ನಿಂತು ಈ ರೀತಿ ಯೋಚಿಸಿದನು.

ಏಕಾರ್ಣವೇಽಸ್ಮಿನ್ಪ್ರಲಯೇ ನಷ್ಟೇ ಸ್ಥಾವರಜಂಗಮೇ ।
ಭೂಪ್ರದೇಶಃ ಸ್ಥಿರತರಃ ಕಥಮೇಷ ವಿಭಾವ್ಯತೇ ॥ ೧೨ ॥
ಯತ್ರಾಯಂ ಶಾಖಿಪ್ರವರಃ ಕೋಮಲಃ ಪರಿದೃಶ್ಯತೇ ।
ಮಾರ್ಕಂಡೇಯಾಗಚ್ಛ ಮುಹುರಿತಿ ಸ ಪ್ರಶ್ರಯಂ ವಚಃ ॥ ೧೩ ॥
ಕುತೋ ನಿರಾಶ್ರಯಮಿದಂ ಚಿಂತಯನ್ನಿತಿ ಪೂರ್ವವತ್ ।
ಶಂಖಚಕ್ರಗದಾಪಾಣಿಂ ನಾರಾಯಣಮಲೋಕಯತ್ ॥ ೧೪ ॥
ತದಂಗಪದ್ಮಾಸನಗಾಂ ಮಾಂ ಚ ವೈವಸ್ವತೈಕ್ಷತ ।
ವಿವಶೋ ಜಲವಾತಾಭ್ಯಾಂ ತದಾ ಸುಸ್ಥೋಽವ್ಯವಸ್ಥಿತಃ ॥ ೧೫ ॥
ಹೃಷ್ಟಾಂತರಾತ್ಮಾ ಸ ಮುನಿರಾವಾಂ ಸಾಷ್ಟಾಂಗಮಾನತಃ ।
ಪ್ರಸಾದನಾಯ ದೇವಸ್ಯ ಸ್ತೋತ್ರಮೇತದುದಾಹರತ್ ॥ ೧೬ ॥

ಮಾರ್ಕಂಡೇಯ ಉವಾಚ:—

ತ್ವತ್ಪಾದಪದ್ಮಾನುಸರಾನುಷಂಗಂ
ರುದ್ರೇಂದ್ರಪದ್ಮಾಸನಸಂಪದಾಢ್ಯಂ ।
ತ್ವದ್ಭಕ್ತಿಹೀನಂ ಪರಿತಃ ಪ್ರತಪ್ತಂ
ದೀನಂ ಪರಿತ್ರಾಹಿ ಕೃಪಾಂಬುಧೇ ಮಾಂ ॥ ೧೭ ॥

---

೧೨. "ಪ್ರಳಯ ಮಹಾಸಮುದ್ರದಲ್ಲಿ ಸ್ಥಾವರಜಂಗಮಾತ್ಮಕವಾದ ಈ ಜಗತ್ತೇ ನಾಶವಾಗಿರುವಾಗ ಈ ಭೂಪ್ರದೇಶವು ಮಾತ್ರ ಸ್ಥಿರವಾಗಿರುವುದೆಂತು?

೧೩–೧೪. ಇಲ್ಲಿಯಾದರೋ ಈ ವಟವೃಕ್ಷವು ಕೋಮಲವಾಗಿ ಕಂಗೊಳಿಸುತ್ತ "ಮಾರ್ಕಂಡೇಯ ಬಾ, ಬಾರೆಂದು ಕನಿಕರದಿಂದ ಅಡಿಗಡಿಗೂ ನುಡಿಯುತ್ತಿದೆ. ಆಶ್ರಯವೇ ಇಲ್ಲದೆ ಈ ವೃಕ್ಷವು ಇಲ್ಲಿ ನಿಂತಿರುವುದು ಹೇಗೆ" ಎಂದು ಚಿಂತಿಸುತ್ತ ಆ ಮುನಿಯು ಅಂತೆಯೇ ತೇಲಿಕೊಂಡು ಹೋಗಿ ಅಲ್ಲಿ ಶಂಖಚಕ್ರಗದಾಪಾಣಿಯಾಗಿ ವಿರಾಜಿಸುತ್ತಿದ್ದ ಶ್ರೀಮನ್ನಾರಾಯಣನನ್ನು ಕಂಡನು.

೧೫. ಎಲೈ ವೈವಸ್ವತನೇ! ಆ ಮುನಿಯು ಪರಮಾತ್ಮನ ಅಂಗಕಮಲದಲ್ಲಿ ಸುಖಾಸೀನೆಯಾಗಿದ್ದ ನನ್ನನ್ನೂ ಕಂಡನು. ತರುವಾಯ ಆತನು ನಮ್ಮ ಪ್ರಸಾದದಿಂದಲೇ ಆ ಪ್ರಳಯಸಾಗರದ ಜಲದಿಂದ ಪಾರಾಗಿ ಸುಖವಾಗಿ ನಿಂತನು.

೧೬. ಬಳಿಕ ಸಂತುಷ್ಟಾಂತರಂಗನಾಗಿ ಆತನು ನಮ್ಮಿರ್ವರಿಗೂ ಸಾಷ್ಟಾಂಗನಮಸ್ಕಾರಗಳನ್ನೆಸಗಿ, ಶ್ರೀಮನ್ನಾರಾಯಣನನ್ನು ಪ್ರಸನ್ನಗೊಳಿಸುವವನಾಗಿ ಈ ರೀತಿ ಸ್ತುತಿಸಿದನು.

೧೭. ಮಾರ್ಕಂಡೇಯನು ಹೇಳುತ್ತಾನೆ:—"ಓ ಪರಮಾತ್ಮಾ, ದಯಾಸಾಗರ! ರುದ್ರೇಂದ್ರಕಮಲಾಸನಾದಿಗಳ ಸಂಪತ್ತಿನಿಂದ ಪ್ರಪೂರ್ಣವಾದ ನಿನ್ನ

ಬ್ರಹ್ಮಾದಿಭಿರ್ಯತ್ಪರಿಚರ್ಯಮಾಣಂ
ಪದಾಂಬುಜದ್ವಂದ್ವಮಚಿಂತ್ಯಶಕ್ತಿ ।
ಶ್ವಃಶ್ರೇಯಸಪ್ರಾಪ್ತಿನಿಧಾನತತ್ವಂ
ದೀನಂ ಪರಿತ್ರಾಹಿ ಕೃಪಾಂಬುಧೇ ಮಾಂ ॥ ೧೮ ॥
ಯದಂಗಭೂತಂ ಜಗದಂಡಮೇತ
ದನೇಕಕೋಟಿ ಪ್ರಗುಣಂ ವಿಭಾತಿ ।
ಲೀಲಾವಿಲಾಸ ಸ್ಥಿತಿಸೃಷ್ಟಿಲೀನಂ
ತನ್ಮಾಂ ಸುದೀನಂ ಪರಿರಕ್ಷ ವಿಷ್ಣೋ ॥ ೧೯ ॥
ಏಕಂ ಸುವರ್ಣಂ ಕಟಕಾದಿಭೇದೈ
ರ್ನಾನಾವಿಧಂ ವಾ ನಭಸೋದಿತೋಽರ್ಕಃ ।
ಆಧಾರ ವೈಷಮ್ಯ ಜಲೇಷು ತಾದೃಗ್
ವಿಭಾವ್ಯಸೇ ನಿರ್ಗುಣ ಏಕ ಏವ ॥ ೨೦ ॥
ಅಶೇಷ ಸಂಪೂರ್ಣರುಚಿಪ್ರಹೀಣೋ
ಪಾದಾನಸಂಕಲ್ಪ ವಿವರ್ಜಿತೋಽಪಿ ।
ದೀನಾನುಕಂಪಾನುಗುಣಂ ಬಿಭರ್ಷಿ
ಯುಗೇ ಯುಗೇ ದೇಹಮಪಾರಶಕ್ತೇ ॥ ೨೧ ॥

---

ಪಾದಪದ್ಮವನ್ನು ನೆಮ್ಮಿ, ನಿನ್ನಲ್ಲಿ ಸ್ಥಿರ ಭಕ್ತಿಯಿಲ್ಲದೆ ಕೇವಲ ದೀನನಾಗಿರುವ ನನ್ನನ್ನು ಕಾಪಾಡು !

೧೮. ಎಲೈ ವಿಷ್ಣುವೇ ! ಬ್ರಹ್ಮಾದಿದೇವತೆಗಳಿಂದ ಸಂಸೇವಿತವಾದ ಪಾದ ಕಮಲದ್ವಂದ್ವವುಳ್ಳವನಾಗಿ, ಯೋಚಿಸಲಸದಳವಾದ ಶಕ್ತಿಯುಳ್ಳವನಾಗಿ, ಪರಮಶ್ರೇಯೋರೂಪವಾದ ಮೋಕ್ಷಪ್ರಾಪ್ತಿಗೆ ನಿದಾನನಾಗಿರುವ ಓ ಪರಮಾತ್ಮನೇ! ಕೃಪಾಸಮುದ್ರನೇ! ದೀನನಾಗಿರುವ ನನ್ನನ್ನು ಕಾಪಾಡು !!

೧೯. ನಿನ್ನ ಅಂಗಭೂತವೇ ಆಗಿರುವ ಈ ಬ್ರಹ್ಮಾಂಡವೆಲ್ಲವೂ ಅನೇಕ ಕೋಟಿಸಂಖ್ಯಾಕವಾಗಿ ವಿರಾಜಿಸುತ್ತಿರುವುದು. ಇದರ ಸೃಷ್ಟಿಸ್ಥಿತಿಲಯಗಳೆಲ್ಲವೂ ನಿನ್ನ ಲೀಲಾವಿಲಾಸಕ್ಕಾಗಿಯೇ ಪ್ರವೃತ್ತವಾಗಿರುವುದು. ಇಂತಹ ಮಹಾ ಪ್ರಭಾವಶಾಲಿಯಾದ ನೀನು ಬಹುದೀನನಾಗಿರುವ ನನ್ನನ್ನು ರಕ್ಷಿಸಬೇಕು.

೨೦. ಒಂದೇ ಬಂಗಾರದಿಂದಲೇ ಮಾಡಿದ ಕಟಕಾದಿಗಳು ಹೇಗೆ ಬೇರೆ ಬೇರೆಯಾಗಿ ತೋರುವುದೋ, ಗಗನದಲ್ಲುದಿಸಿದ ಸೂರ್ಯನು ಹಳ್ಳತಿಟ್ಟುಗಳ ನೀರುಗಳಲ್ಲಿ ಬೇರೆಬೇರೆಯಾಗಿ ಹೇಗೆ ತೋರುವನೋ ಹಾಗೆಯೇ ನಿರ್ಗುಣನಾದ ನೀನು ಒಬ್ಬನೇ ಆದರೂ ಬೇರೆಬೇರೆಯಾಗಿ ತೋರುವೆ !

೨೧. ಅಶೇಷಸಂಪೂರ್ಣಗಳೆಂಬ ರುಚಿಗಳಿಲ್ಲದವನೂ, ಉಪಾದಾನಸಂಕಲ್ಪ

ತ್ವತ್ಪಾದಪದ್ಮಂ ಜಗದೀಶ ಪೂರ್ವ
ಮಸೇವ್ಯತಾನಾತ್ಮಧಿಯಾ ಮಯಾ ಯತ್ ।
ತತ್ಕರ್ಮಣಾ ದಾರುಣಪಾಕಭಾಜಂ
ದೀನಂ ಪರಿತ್ರಾಹಿ ಕೃಪಾಂಬುಧೇ ಮಾಂ ॥ ೨೨ ॥
ಅಶೇಷ ಲೋಕಸ್ಥಿತಿಸೃಷ್ಟಿಲೀನ
ವಿಲಾಸಿ ಯತ್ತೇ ತ್ರಿಗುಣಂ ವಿಭಾತಿ ।
ವಪುರ್ಮಹಾತ್ಮನ್ಮಹದಾದಿ ಹೇತುಃ
ಹೇತುರ್ನಮಸ್ತೇ ಪ್ರಕೃತೇಃ ಪರಸ್ಯ ॥ ೨೩ ॥
ಸರ್ವತ್ರ ಗತ್ವಾ ಬೃಹದಪ್ರಮೇಯಂ
ಪ್ರವರ್ಧಮಾನಂ ತ್ವಯಿ ಬೃಂಹಿತಂ ಚ ।
ತದ್ಬ್ರಹ್ಮರೂಪಂ ಪರಿಣಾಮಹೇತುಂ
ಸ್ವಾಧ್ಯಾತ್ಮ ವಿಶ್ವಾತ್ಮಕಮಾಶ್ರಯಾಮಿ ॥ ೨೪ ॥
ಏಕಾರ್ಣವೇ ಮಹಾಘೋರೇ ನಾವಸ್ಥಾತುಂ ಪ್ರದೇಶಭೂಃ ।
ಅಸ್ತಿ ಲಕ್ಷ್ಮೀಪತೇ ಮೇಘವಾರಿವಾತಪ್ರಕಂಪನಾತ್ ॥ ೨೫ ॥

---

ಗಳಿಂದ ಬಿಡಲಾದವನೂ ಆದರೂ, ದೀನರಲ್ಲಿ ಅನುಕಂಪವನ್ನು ತಾಳುವ ಗುಣವುಳ್ಳವನಾದುದರಿಂದ ಅಪಾರಶಕ್ತಿಯುತನಾದ ನೀನು ಯುಗಯುಗದಲ್ಲಿಯೂ ಅವತಾರಗಳನ್ನು ತಾಳುವೆ!

೨೨. ಓ ಜಗದೀಶ! ಪೂರ್ವದಲ್ಲಿ ನಾನು ಅಜ್ಞಾನದ ದೆಸೆಯಿಂದ ನಿನ್ನ ಪಾದಪದ್ಮಗಳನ್ನು ಸೇವಿಸದಿದ್ದ ಕರ್ಮಪರಿಪಾಕದಿಂದ ಈಗ ಭಯಂಕರವಾದ ಫಲವನ್ನನುಭವಿಸುತ್ತಿರುವೆನು. ಓ ಕೃಪಾಂಬುಧಿಯೇ! ಇಂತಹ ದೀನನಾದ ನನ್ನನ್ನು ಕಾಪಾಡು!

೨೩–೨೪. ಸಮಸ್ತ ಪ್ರಪಂಚದ ಸೃಷ್ಟಿಸ್ಥಿತಿಲಯಗಳೆಂಬ ವಿಲಾಸರೂಪವಾದ ನಿನ್ನ ಶರೀರವು ಸತ್ತ್ವರಜಸ್ಸು ತಮಸ್ಸೆಂಬ ಮೂರುಗುಣಗಳುಳ್ಳದಾಗಿ ಪ್ರಕಾಶಿಸುತ್ತಿದೆ. ಎಲೈ ಮಹಾತ್ಮನೇ! ಮಹತ್ತೇ ಮೊದಲಾದುವುಗಳಿಗೆ ಹೇತುಸ್ವರೂಪನೂ, ಮೂಲಕಾರಣನೂ, ಪ್ರಕೃತಿಗೂ ನಿಲುಕದಿರುವವನೂ ಆದ ನಿನಗೆ ನಮಸ್ಕಾರವು. ಎಲೈ ಸ್ವಾಮಿಯೇ! ನಾನು ಎಲ್ಲಿಗೇಹೋದರೂ ಬೃಹತ್ತೂ, ಅಪ್ರಮೇಯವೂ, ನಿನ್ನಲ್ಲಿಯೇ ಬೆಳೆಯುತ್ತ ವ್ಯಾಪಿಸುತ್ತಿರುವುದೂ, ಪರಿಣಾಮಹೇತುವೂ, ಸ್ವಾಧ್ಯಾತ್ಮವಿಶ್ವಾತ್ಮಕವೂ ಆದ ಬ್ರಹ್ಮರೂಪವನ್ನೇ ಆಶ್ರಯಿಸುತ್ತೇನೆ.

೨೫. ಎಲೈ ಲಕ್ಷ್ಮೀಪತಿಯೇ! ಮಹಾಘೋರವಾಗಿ ಎತ್ತೆತ್ತಲೂ ಏಕಾಕಾರವಾಗಿರುವ ಈ ಪ್ರಳಯ ಸಾಗರದಲ್ಲಿ ಎಲ್ಲಿಯೂ ಮಳೆಗಾಳಿಗಳೇ ಆವರಿಸಿ ನಡುಗಿಸುತ್ತಿರುವುದರಿಂದ ನಿಲ್ಲಲವಕಾಶವೇ ಇಲ್ಲವಾಗಿದೆ.

ತ್ರಾಹಿ ವಿಷ್ಣೋ ಜಗನ್ನಾಥ ಮಗ್ನಂ ಸಂಸಾರಸಾಗರೇ ।
ಮಾಮುದ್ಧರಾಸ್ಮಾದ್ಗೋವಿಂದ ಕೃಪಾಪಾಂಗವಿಲೋಕನಾತ್ ॥ ೨೬ ॥
ಶ್ರೀರುವಾಚ :—
ಸ್ತುವಂತಮೇವಂ ಬ್ರಹ್ಮರ್ಷಿಂ ಸಾಕ್ಷಾನ್ನಾರಾಯಣೋ ವಿಭುಃ ।
ವಿಲೋಕ್ಯಾನುಗ್ರಹದೃಶಾ ವಾಕ್ಯಂ ಚೇದಮುವಾಚಹ ॥ ೨೭ ॥
ಶ್ರೀಭಗವಾನುವಾಚ :—
ಮಾರ್ಕಂಡೇಯ ಸುದೀನೋಽಸಿ ಮಾಮಜ್ಞಾಯ ದ್ವಿಜೋತ್ತಮ ।
ದುಶ್ಚರಂ ತು ತಪಸ್ತಪ್ತ್ವಾ ದೀರ್ಘಾಯುಸ್ತೇನ ಕೇವಲಂ ॥ ೨೮ ॥
ಶಯಾನಂ ಪತ್ರಪುಟಕೇ ಪಶ್ಯ ಕಲ್ಪವಟೋರ್ಧ್ವಗಂ ।
ಬಾಲಸ್ವರೂಪಂ ಸರ್ವೇಷಾಂ ಕಾಲಾತ್ಮಾನಂ ಮಹಾಮುನೇ ।
ಪ್ರವಿಶ್ಯ ವಿಸ್ತೃತಂ ವಕ್ತ್ರಂ ತತ್ರಾವಸ್ಥಾತುಮರ್ಹಸಿ ॥ ೨೯ ॥
ಶ್ರೀರುವಾಚ :—
ಏವಮುಕ್ತೋ ಭಗವತಾ ಸ ಮುನಿರ್ವಿಸ್ಮಿತಾನನಃ ॥ ೩೦ ॥
ಆರುಹ್ಯ ದದೃಶೇ ಬಾಲರೂಪಂ ತಸ್ಯಾವಿಶನ್ಮುಖೇ ।
ಪ್ರವಿಷ್ಟಃ ಕಂಠಮಾರ್ಗೇಣ ಮಹಾಯಾಮಂ ಮಹೋದರಂ ॥ ೩೧ ॥

---

೨೬. ಎಲೈ ವಿಷ್ಣುವೇ! ಜಗನ್ನಾಥನೇ, ಗೋವಿಂದ!! ಸಂಸಾರಸಾಗರದಲ್ಲಿ ಮುಳುಗಿರುವ ನನ್ನನ್ನು ನಿನ್ನ ಕೃಪಾದೃಷ್ಟಿಯಿಂದ ಉದ್ಧರಿಸು!"

೨೭. ಶ್ರೀದೇವಿಯು ಹೇಳುತ್ತಾಳೆ:— ಎಲೈ ಯಮುನೇ! ಈ ರೀತಿ ಸ್ತುತಿ ಸುತ್ತಿರುವ ಆ ಬ್ರಹ್ಮರ್ಷಿಯನ್ನು ಕಂಡು ವಿಭುವಾದ ಸಾಕ್ಷಾತ್‌ನಾರಾಯಣ ಮೂರ್ತಿಯು ಆತನನ್ನು ಅನುಗ್ರಹದೃಷ್ಟಿಯಿಂದೀಕ್ಷಿಸಿ ಈ ಮಾತನ್ನು ಹೇಳಿದನು.

೨೮. ಶ್ರೀ ಭಗವಂತನು ಹೇಳುತ್ತಾನೆ:— "ಅಯ್ಯಾ ದ್ವಿಜೋತ್ತಮನಾದ ಮಾರ್ಕಂಡೇಯನೇ! ನೀನು ನನ್ನನ್ನು ಅರಿತುಕೊಳ್ಳದೆ ಬಹಳ ಕಂಗೆಟ್ಟಿರುವೆ. ನೀನು ದುಶ್ಚರವಾದ ತಪಸ್ಸನ್ನಾಚರಿಸಿ ದೀರ್ಘಾಯುಷ್ಯವನ್ನು ಪಡೆದಿರುವುದು ನಿಷ್ಫಲವೇಸರಿ.

೨೯. ಎಲೈ ಮುನಿಯೇ! ಈ ಕಲ್ಪ (ವಟ) ವೃಕ್ಷದ ಮೇಲೆ ಪತ್ರ ಪುಟ ದಲ್ಲಿ ಮಲಗಿರುವವನೂ, ಬಾಲರೂಪಧರನೂ, ಎಲ್ಲರಿಗೂ ಕಾಲಸ್ವರೂಪನೂ ಆಗಿರುವ ನನ್ನನ್ನು ನೋಡು. ನೀನು ಅಗಲವಾಗಿ ತೆರೆದಿರುವ ನನ್ನ ಬಾಯನ್ನು ಹೊಕ್ಕು ಅಲ್ಲಿ ನಿಲ್ಲುವವನಾಗು"

೩೦–೩೧. ಶ್ರೀ ದೇವಿಯು ಹೇಳುತ್ತಾಳೆ:—ಎಲೈ ಧರ್ಮರಾಜನೇ! ಭಗವಂತನಿಂತೆನಲು ಆ ಮಾರ್ಕಂಡೇಯನು ಆಶ್ಚರ್ಯಭರಿತನಾಗಿ ಆ ವಟವೃಕ್ಷ ವನ್ನೇರಿ ಅಲ್ಲಿ ಬಾಲರೂಪನಾಗಿದ್ದ ಆತನನ್ನು ಕಂಡು ಒಡನೆಯೇ ಆತನ

ತತ್ರಾಽಸೌ ದದೃಶೇ ವಿಪ್ರೋ ಭುವನಾನಿ ಚತುರ್ದಶ ।
ಬ್ರಹ್ಮಾದಿ ದಿಕ್ಪಾಲಕಾನ್ಸುರಾನ್ಸಿದ್ಧಗಂಧರ್ವ ರಾಕ್ಷಸಾನ್ ॥ ೩೨ ॥
ಋಷೀನ್ದಿವ್ಯಋಷೀಂಶ್ಚೈವ ಭೂತಲಂ ಸಾಗರಾಂಕಿತಂ ।
ನಾನಾತೀರ್ಥೈರ್ನದೀಭಿಶ್ಚ ಪರ್ವತೈಃ ಕಾನನೈಸ್ತಥಾ ॥ ೩೩ ॥
ಲಕ್ಷಿತಂ ಪತ್ತನಪುರಂ ಗ್ರಾಮಖರ್ವಟಕೈರ್ಯುತಂ ।
ಪಾತಾಲಾನಿ ತಥಾ ಸಪ್ತ ನಾಗಕನ್ಯಾಃ ಸಹಸ್ರಶಃ ॥ ೩೪ ॥
ಮಹಾರ್ಘ್ಯಮಣಿಸೌಧೈಶ್ಚ ಸುಧಾಪಾತ್ರೈಃ ಸಮುಜ್ಜ್ವಲೈಃ ।
ಅನರ್ಘ್ಯಮಣಿಭಿರ್ನಾಗೈಃ ಸೇವಿತಂ ಪರಮಾದ್ಭುತಂ ॥ ೩೫ ॥
ಜಗತಾಂ ಧಾರಿಣಂ ಶೇಷಂ ಸಹಸ್ರಫಣಮಂಡಿತಂ ।
ವ್ಯಾಕರ್ತಾರಮಶೇಷಾಣಾಂ ಶಾಸ್ತ್ರಾಣಾಂ ಶಿಷ್ಯಮಧ್ಯಗಂ ॥ ೩೬ ॥
ಬ್ರಹ್ಮಾಂಡೋದರಗಂ ವಸ್ತು ಯತ್ಕಿಂಚಿತ್ಪರಮೇಷ್ಠಿನಾ ।
ಸೃಷ್ಟಂ ಸರ್ವಂ ದದೃಶೇಽಸೌ ತತ್ಕುಕ್ಷೌ ಸ ಮಹಾಮುನಿಃ ॥ ೩೭ ॥
ನಾಪಶ್ಯದಂತಂ ಕುಕ್ಷೇಸ್ತು ಭ್ರಮಮಾಣ ಇತಸ್ತತಃ ।
ತತೋ ವಿನಿಷ್ಕ್ರಮ್ಯ ಪುನರ್ದದೃಶೇ ಚ ಮಯಾ ಸಹ ॥ ೩೮ ॥

---

ಬಾಯನ್ನು ಹೊಕ್ಕು ಕಂಠಮಾರ್ಗವಾಗಿ ಬಹು ವಿಶಾಲವಾಗಿದ್ದ ಆತನ ಉದರವನ್ನು ಪ್ರವೇಶಿಸಿದನು. ಅಲ್ಲಿಯಾದರೋ ಆ ವಿಪ್ರನು ಹದಿನಾಲ್ಕು ಲೋಕಗಳನ್ನೂ ಕಂಡನು. ಬ್ರಹ್ಮಾದಿ ಲೋಕಪಾಲಕರನ್ನೂ, ದೇವತೆಗಳನ್ನೂ, ಸಿದ್ಧರನ್ನೂ, ಗಂಧರ್ವರಾಕ್ಷಸರನ್ನೂ ಕಂಡನು.

೩೩–೩೬. ಇಷ್ಟೆಯಲ್ಲದೆ ಆ ಮುನಿಯು ಆ ಭಗವಂತನುದರದಲ್ಲಿ ಋಷಿಗಳನ್ನೂ, ದಿವ್ಯ ಋಷಿಗಳನ್ನೂ, ಸಾಗರಪರಿವೇಷ್ಟಿತವಾದ ಭೂತಲವನ್ನೂ, ಅದರಲ್ಲಿರುವ ನಾನಾ ತೀರ್ಥ ನದಿಗಳನ್ನೂ, ಗಿರಿ ಕಾನನಗಳನ್ನೂ ಒಳಗೊಂಡಿರುವ ಪಟ್ಟಣಗಳನ್ನೂ, ಪುರಗಳನ್ನೂ, ಗ್ರಾಮ, ಖರ್ವಟಗಳನ್ನೂ, ಇದಾದ ಬಳಿಕ ಸಪ್ತಪಾತಾಳಗಳನ್ನೂ, ಅಲ್ಲಿರುವ ಸಹಸ್ರಾರು ನಾಗಕನ್ನಿಕೆಯರನ್ನೂ ಕಂಡನು. ಅಲ್ಲಿಯೇ ಬಹು ಅಮೂಲ್ಯಗಳಾದ ರತ್ನದುಪ್ಪರಿಗೆಗಳಿಂದೊಪ್ಪಿ ಸುಧಾಪಾತ್ರೆಗಳಿಂದ ಕಂಗೊಳಿಸಿ, ಅನರ್ಘ್ಯಮಣಿಗಳುಳ್ಳನಾಗರಿಂದ ಸೇವಿತನಾಗಿ ಪರಮಾದ್ಭುತವಾಗಿ ತೋರುತ್ತ, ಜಗತ್ತನ್ನೇ ಧರಿಸಿರುವ ಸಹಸ್ರಫಣಾಮಂಡಿತನಾದ ಆದಿಶೇಷನು ಸಮಸ್ತ ಶಾಸ್ತ್ರಗಳನ್ನೂ ವ್ಯಾಖ್ಯಾನಿಸುತ್ತ ಶಿಷ್ಯರ ಮಧ್ಯದಲ್ಲಿ ಶೋಭಿಸುತ್ತಿರುವುದನ್ನೂ ಕಂಡನು.

೩೭. ಎಲೈ ಯಮನೇ! ಆ ಮುನಿಯು ಭಗವಂತನುದರದಲ್ಲಿ ಈ ಬ್ರಹ್ಮಾಂಡದಲ್ಲಿ ಆತನು ಸೃಜಿಸಿರುವ ಸಮಸ್ತ ವಸ್ತುಗಳನ್ನೂ ಕಂಡನು.

೩೮. ಅಲ್ಲಿಂದಿಲ್ಲಿಗೆ ಸುತ್ತುತ್ತ ಆತನು ಎಲ್ಲಿಯೂ ಆ ಪರಮಾತ್ಮನುದರದಲ್ಲಿ

ಪೂರ್ವಮಾಲಕ್ಷಿತಂ ಯದ್ವದಾಸ್ಥಿತಂ ಪುರುಷೋತ್ತಮಂ ।
ವಿಸ್ಮಯೋತ್ಫುಲ್ಲನಯನಃ ಪ್ರಣಪತ್ಯೇದಮಬ್ರವೀತ್ ॥ ೩೯ ॥
ಮಾರ್ಕಂಡೇಯ ಉವಾಚ :—
ಭಗವನ್ದೇವದೇವೇಶ ಕಿಮದ್ಭುತಮಿದಂ ಪ್ರಭೋ ।
ಮಹಾಪ್ರಲಯಸಂರೋಧೇ ಸೃಷ್ಟಿರತ್ರವಿಭಾವ್ಯತೇ ॥ ೪೦ ॥
ತ್ವನ್ಮಾಯಾ ದುರವಚ್ಛೇದ್ಯಾ ಕಥಂ ವೈ ಜ್ಞಾಯತೇ ಮಯಾ ॥ ೪೧ ॥
ಶ್ರೀಭಗವಾನುವಾಚ :—
ಮುನೇ ಕ್ಷೇತ್ರಮಿದಂ ಚಿತ್ರಂ ಶಾಶ್ವತಂ ನೋ ವಿಭಾವಯ ।
ನ ಸೃಷ್ಟಿಪ್ರಲಯಾವತ್ರ ವಿದ್ಯತೇ ನ ಚ ಸಂಸೃತಿಃ ॥ ೪೨ ॥
ಸದೈಕರೂಪಂ ಪುರುಷೋತ್ತಮಾಖ್ಯಂ
ಮುಕ್ತಿಪ್ರದಂ ಮಾಮಿಹ ಸಂಪ್ರಬುದ್ಧ್ವಾ ।
ಅತ್ರ ಪ್ರವಿಷ್ಟೋ ನ ಪುನಃ ಪ್ರಯಾತಿ
ಗರ್ಭಸ್ಥಿತಿಂ ಸಾಂದ್ರಸುಖಸ್ವರೂಪಃ ॥ ೪೩ ॥

---

ತಡಿಯನ್ನೇ ಕಾಣದೆ ಹೋದನು. ತರುವಾಯ ಅಲ್ಲಿಂದ ಹೊರಬಂದು ನನ್ನೊಡನಿದ್ದ ಆ ಸ್ವಾಮಿಯನ್ನು ನೋಡಿದನು.

೩೯. ಆ ಪ್ರಭುವು ಹಿಂದೆಂತೋ ಅಂತೆಯೇ ಬಾಲರೂಪನಾಗಿದ್ದುದನ್ನು ಕಂಡು ಆ ಮಾರ್ಕಂಡೇಯನು ಆಶ್ಚರ್ಯದಿಂದರಳಿದ ಕಂಗಳುಳ್ಳವನಾಗಿ ಆ ಪುರುಷೋತ್ತಮನಿಗೆ ಪ್ರಣಾಮಮಾಡಿ ಇಂತೆಂದನು.

೪೦–೪೧. ಮಾರ್ಕಂಡೇಯನು ಹೇಳುತ್ತಾನೆ:—"ಭೋ ಭಗವನ್, ದೇವದೇವೇಶ! ಇದೇನೀ ಅದ್ಭುತವು!! ಮಹಾಪ್ರಲಯದ ಈ ದುಷ್ಕಾಲದಲ್ಲಿಯೂ ನಿನ್ನೀ ಉದರದಲ್ಲಿ ಬ್ರಹ್ಮಾಂಡ ಸೃಷ್ಟಿಯು ಕಾಣುತ್ತಿರುವುದು? ಪ್ರಭುವೇ! ನಿನ್ನ ಮಾಯೆಯು ಬಿಡಿಸಲಾಗದ ಒಂದು ದೊಡ್ಡ ತೊಡಕು. ಅದನ್ನರಿಯಲು ನನ್ನಿಂದೆಂತು ಸಾಧ್ಯವಾದೀತು?"

೪೨–೪೩. ಶ್ರೀ ಭಗವಂತನು ಹೇಳುತ್ತಾನೆ:—"ಎಲೈ ಮಾರ್ಕಂಡೇಯ ಮುನಿಯೇ! ಈ ಕ್ಷೇತ್ರವೇ ಅಂತಹ ವಿಚಿತ್ರವೂ, ಶಾಶ್ವತವೂ ಆಗಿರುವುದೆಂದು ತಿಳಿ. ಇಲ್ಲಿ ಸೃಷ್ಟಿಸ್ಥಿತಿಲಯಗಳಾವುವೂ ನಡೆಯುವುದಿಲ್ಲ. ಎಲ್ಲ ಕಾಲಗಳಲ್ಲಿಯೂ ಪುರುಷೋತ್ತಮವೆಂಬ ಈ ನನ್ನ ಕ್ಷೇತ್ರವು ಒಂದೇ ರೂಪವುಳ್ಳುದು; ಇಲ್ಲಿರುವ ಮುಕ್ತಿದಾಯಕನಾದ ನನ್ನನ್ನು ಅರಿತು ಇಲ್ಲಿ ಪ್ರವೇಶಿಸುವ ಮಾನವನು ಮತ್ತೆ ಇಲ್ಲಿಂದ ಹಿಂತಿರುಗಿ ಜನ್ಮವನ್ನು ಪಡೆಯುವುದಿಲ್ಲ. ಅವನು ಆನಂದ ಸ್ವರೂಪವನ್ನು ತಳೆದು ಮುಕ್ತಿಯನ್ನೇ ಪಡೆಯುತ್ತಾನೆ.

**ಇತ್ಯಾಜ್ಞಪ್ತೇ ಭಗವತೌ ಮಾರ್ಕಂಡೇಯೋ ಮಹಾಮುನಿಃ ।**
**ಅತ್ರ ವಾಸಂ ಕರಿಷ್ಯಾಮಿತ್ಯನ್ಯತೀರ್ಥಪರಾಙ್ಮುಖಃ ।**
**ಪ್ರಹೃಷ್ಟವದನಃ ಪ್ರಾಹ ಪ್ರಣಿಪತ್ಯ ಜಗದ್ಗುರುಂ ।**
**ಉವಾಚ ಸ ತಥಾವಿಷ್ಣುಂ ಭಕ್ತಿಶ್ರದ್ಧಾಸಮನ್ವಿತಃ ॥ ೪೪ ॥**

**ಮಾರ್ಕಂಡೇಯ ಉವಾಚ :—**

**ಅನುಗ್ರಹೀಷ್ವ ಭಗವನ್ಕ್ಷೇತ್ರೇಸ್ಮಿನ್ಪುರುಷೋತ್ತಮೇ ।**
**ತಥಾ ಸ್ಥಿತೋ ಮೃತ್ಯುವಶಂ ನ ವ್ರಜೇ ಪುರುಷೋತ್ತಮ ॥ ೪೫ ॥**

**ಶ್ರೀಭಗವಾನುವಾಚ :—**

**ಅತ್ರ ಸ್ಥಿತಿಂ ಮೇ ವಿಪ್ರರ್ಷೇ ಕ್ಷೇತ್ರೇ ಮೋಕ್ಷಪ್ರಸಾಧಕೇ ।**
**ಕರಿಷ್ಯಾಮಿ ನ ಸಂದೇಹೋ ಯಾವದಾಭೂತಸಂಪ್ಲವಂ ॥ ೪೬ ॥**
**ಪ್ರಲಯಾವಸಾನೇ ತೀರ್ಥಂ ತೇ ರಚಯಿಷ್ಯಾಮಿ ಶಾಶ್ವತಂ ॥ ೪೭ ॥**
**ಯತ್ತೀರೇ ತಪ ಆಸ್ಥಾಯ ಮದ್ದ್ವಿತೀಯತನುಂ ಶಿವಂ ।**
**ಆರಾಧ್ಯ ಮದನುಕ್ರೋಶಾನ್ಮೃತ್ಯುಂ ಜೇಷ್ಯಸಿ ನಿಶ್ಚಿತಂ ॥ ೪೮ ॥**

---

೪೪. ಷಡ್ಗುಣೈಶ್ವರ್ಯಪರಿಪೂರ್ಣನಾದ ಆ ಪುರುಷೋತ್ತಮನಿಂತು ಅಣತಿಯಾಯಲು ಮಾರ್ಕಂಡೇಯ ಮಹಾಮುನಿಯು ಇತರ ತೀರ್ಥಕ್ಷೇತ್ರಗಳಲ್ಲಿ ವಾಸಮಾಡಬೇಕೆಂದು ತನಗಿದ್ದ ಅಪೇಕ್ಷೆಯನ್ನು ದೂರಮಾಡಿ ಅಲ್ಲಿಯೇ ವಾಸಮಾಡುವುದಾಗಿ ಸಂಕಲ್ಪಿಸಿ ಜಗದ್ಗುರುವಾದ ಆ ಪ್ರಭುವಿಗೆ ಮಣಿದು ಬಹು ಸಂತೋಷದಿಂದಲೂ ಭಕ್ತಿಶ್ರದ್ಧೆಗಳಿಂದಲೂ ಆ ಮಹಾವಿಷ್ಣುವನ್ನು ಕುರಿತು ಈ ರೀತಿ ವಿಜ್ಞಾಪಿಸಿಕೊಂಡನು :—

೪೫. ಮಾರ್ಕಂಡೇಯನು ಹೇಳುತ್ತಾನೆ :—"ಭಗವನ್ ಓ ಪುರುಷೋತ್ತಮಾ! ಉತ್ತಮೋತ್ತಮವಾದ ಈ ಕ್ಷೇತ್ರದಲ್ಲಿ ನೆಲಸುವ ನಾನು ಮೃತ್ಯುಮುಖವನ್ನು ಹೊಗದಂತೆ ನನ್ನನ್ನು ಅನುಗ್ರಹಿಸು."

೪೬. ಶ್ರೀಭಗವಂತನು ಹೇಳುತ್ತಾನೆ:—"ಎಲೈ ಬ್ರಹ್ಮರ್ಷಿಯೆ! ಸಮಸ್ತ ಭೂತಗಳೂ ಪ್ರಳಯವಾಗುವವರೆಗೆ ಈ ನನ್ನ ಕ್ಷೇತ್ರದಲ್ಲಿ ನಿನಗೆ ವಾಸವನ್ನು ಕಲ್ಪಿಸಿಕೊಡುತ್ತೇನೆ.

೪೭–೪೮. ತರುವಾಯ (ಪ್ರಳಯವಾದ ಬಳಿಕ) ನಿನ್ನ ಹೆಸರಿನಿಂದ ಶಾಶ್ವತವಾಗಿರುವಂತಹ ತೀರ್ಥವೊಂದನ್ನು ನಿರ್ಮಾಣಮಾಡುತ್ತೇನೆ. ಅದರ ತೀರದಲ್ಲಿ ತಪಸ್ಸನ್ನೆಸಗಿ ನನ್ನ ಎರಡನೆಯ ಶರೀರವೆನಿಸಿರುವ ಶಿವನನ್ನಾರಾಧಿಸಿ ನನ್ನ ಕೃಪೆಯಿಂದ ನೀನು ಮೃತ್ಯುವನ್ನೂ ಜಯಿಸುವೆಯೆಂಬುದರಲ್ಲಿ ಸಂದೇಹವಿಲ್ಲವು."

ಜೈಮಿನಿರುವಾಚ :—

ಏವಂ ಪುರಾ ದತ್ತವರೋ ಮಾರ್ಕಂಡೇಯೋ ಮಹಾಮುನಿಃ ।
ನ್ಯಗ್ರೋಧವಾಯುವ್ಯಕೋಣೇ ಖಾತಂ ಚಕ್ರೇಣ ವೈ ಹರೇಃ ॥ ೪೯ ॥
ಪಾವನಂ ಗರ್ತಮಾಸ್ಥಾಯ ಪೂಜಯಿತ್ವಾ ಮಹೇಶ್ವರಂ ।
ಮಹತಾ ತಪಸೋ ವಿಪ್ರೋ ಜಿತವಾನ್ಮೃತ್ಯುಮಂಜಸಾ ॥ ೫೦ ॥
ಮುನೇಸ್ತಸ್ಯೈವ ನಾಮ್ನಾಽಯಂ ಪ್ರಖ್ಯಾತೋ ಗರ್ತ ಉತ್ತಮಃ ।
ಯತ್ರ ಸ್ನಾತ್ವಾ ಶಿವಂ ದೃಷ್ಟ್ವಾ ವಾಜಿಮೇಧಫಲಂ ಲಭೇತ್ ॥ ೫೧ ॥

ಶ್ರೀರುವಾಚ :—

ಪಂಚಕ್ರೋಶಮಿದಂ ಕ್ಷೇತ್ರಂ ಸಮುದ್ರಾಂತರ್ವ್ಯವಸ್ಥಿತಂ ।
ದ್ವಿಕ್ರೋಶಂ ತೀರ್ಥರಾಜಸ್ಯ ತಟಭೂಮೌ ಸುನಿರ್ಮಲಂ ॥ ೫೨ ॥
ಸುವರ್ಣವಾಲುಕಾಕೀರ್ಣಂ ನೀಲಪರ್ವತಶೋಭಿತಂ ।
ಯೋಽಸೌ ವಿಶ್ವೇಶ್ವರೋ ದೇವಃ ಸಾಕ್ಷಾನ್ನಾರಾಯಣಾತ್ಮಕಃ ॥ ೫೩ ॥
ಸಂಯಮ್ಯ ವಿಷಯಗ್ರಾಮಂ ಸಮುದ್ರತಟಮಾಸ್ಥಿತಃ ।
ಉಪಾಸಿತುಂ ಜಗನ್ನಾಥಂ ಚತುಃಷಷ್ಟಿಸಮಃ ಪ್ರಭುಃ ॥ ೫೪ ॥

---

೪೯–೫೦. ಜೈಮಿನಿಯು ಹೇಳುತ್ತಾನೆ:—"ಎಲೈ ಮಹರ್ಷಿಗಳಿರಾ! ಇಂತು ಆಜ್ಞಾಪಿತನಾದ ಮಾರ್ಕಂಡೇಯ ಮುನಿಯು ಆ ನ್ಯಗ್ರೋಧವೃಕ್ಷದ ವಾಯುವ್ಯಕೋಣದಲ್ಲಿ ಶ್ರೀ ಹರಿಯೇ ಚಕ್ರದಿಂದ ತೋಡಿದ ಪಾವನವಾದ ಗರ್ತದ ತೀರದಲ್ಲಿ ಕುಳಿತು ಮಹೇಶ್ವರನನ್ನು ಪೂಜಿಸಿ ಮಹತ್ತರವಾದ ತಪಸ್ಸನ್ನೆಸಗಿ ಬಹು ಜಾಗ್ರತೆಯಾಗಿಯೇ ಮೃತ್ಯುವನ್ನು ಜಯಿಸಿದನು.

೫೧. ಉತ್ತಮೋತ್ತಮವಾದ ಆ ಗರ್ತವು ಮಾರ್ಕಂಡೇಯ ಮಹಾಮುನಿಯ ಹೆಸರಿನಿಂದಲೇ ಇಂದಿಗೂ ಪ್ರಸಿದ್ಧವಾಗಿರುವುದು. ಅಲ್ಲಿ ಸ್ನಾನಮಾಡಿ ಪರಮಶಿವನನ್ನು ಸಂದರ್ಶಿಸಿದುದಾದರೆ ಮಾನವರಿಗೆ ಅಶ್ವಮೇಧಯಾಗದ ಫಲವು ದೊರಕುತ್ತದೆ.

೫೨–೫೪. ಶ್ರೀ ದೇವಿಯು ಹೇಳುತ್ತಾಳೆ:—"ಅಯ್ಯಾ ಯಮನೇ! ಈ ಪುರುಷೋತ್ತಮ ಕ್ಷೇತವು ಐದು ಕ್ರೋಶಗಳ ವಿಸ್ತಾರವುಳ್ಳುದಾಗಿ ಸಮುದ್ರ ಮಧ್ಯದಲ್ಲಿ ನೆಲಸಿರುವುದು; ಎರಡು ಕ್ರೋಶಗಳ ವಿಸ್ತಾರವುಳ್ಳ ಮಾರ್ಕಂಡೇಯ ತೀರ್ಥರಾಜದಿಂದ ಕೂಡಿ ಬಹು ನಿರ್ಮಲವಾದುದಾಗಿ, ಚಿನ್ನದ ಮರಳು ಹರಡಿರುವ ಅದರ ತೀರದಲ್ಲಿಯೇ ಶೋಭಿಸುತ್ತಿರುವ ನೀಲ ಪರ್ವತದಿಂದ ಕಂಗೊಳಿಸುತ್ತಿರುವುದು. ಅಲ್ಲಿಯೇ ಸಾಕ್ಷಾತ್ ನಾರಾಯಣಸ್ವರೂಪನಾದ ವಿಶ್ವೇಶ್ವರನು ಜಿತೇಂದ್ರಿಯನಾಗಿ ಜಗನ್ನಾಥಸ್ವಾಮಿಯನ್ನು ತಪಸ್ಸಿನಿಂದ ಸೇವಿಸಲು ಸಮುದ್ರತೀರಕ್ಕೆ ಬಂದುದು; ಆತನೇ ಅರುವತ್ತನಾಲ್ಕನೆಯ ಜಗತ್

**ಯಮೇಶ್ವರ ಇತಿ ಖ್ಯಾತೋ ಯಮಸಂಯಮನಾಶನಃ ।**
**ಯಂ ದೃಷ್ಟ್ವಾ ಪೂಜಯಿತ್ವಾ ತು ಕೋಟಿಲಿಂಗಫಲಂ ಲಭೇತ್ ॥ ೫೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ ''ಯಮಲಕ್ಷ್ಮೀಸಂವಾದಃ—ಯಮೇಶ್ವರಲಿಂಗಸ್ಥಾಪನ ವರ್ಣನಂ''ನಾಮ ತೃತೀಯೋಽಧ್ಯಾಯಃ**

---

ಪ್ರಭುವಾಗಿ, ಯಮನನ್ನು ಸಂಯಮನಗೈದು ನಾಶಮಾಡಿದವನೂ ಆದ ಮೃತ್ಯುಂಜಯನನ್ನು ಸಂದರ್ಶಿಸಿ ಪೂಜಿಸಿದುದಾದರೆ ಕೋಟಿಲಿಂಗಪೂಜೆಯ ಫಲವು ಲಭಿಸುತ್ತದೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ ''ಯಮಲಕ್ಷ್ಮೀಸಂವಾದ—ಯಮೇಶ್ವರಲಿಂಗಸ್ಥಾಪನವರ್ಣನ''ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ಥೋಽಧ್ಯಾಯಃ

## ಪುರುಷೋತ್ತಮಕ್ಷೇತ್ರಸ್ಥಿತ ವಿವಿಧತೀರ್ಥಕಥಾಕಥನ ವರ್ಣನಂ

ಶ್ರೀರುವಾಚ :—

**ಸೀಮಾಪ್ರತೀಚೀ ಕ್ಷೇತ್ರಸ್ಯ ಶಂಖಾಕಾರಸ್ಯಮೂರ್ಧನಿ ।**
**ಸರ್ವಕಾಮಪ್ರದೋ ದೇವಃ ಸ ಆಸ್ತೇ ವೃಷಭಧ್ವಜಃ ॥ ೧ ॥**
**ಶಂಖಾಗ್ರೇ ನೀಲಕಂಠಃ ಸ್ಯಾದೇತತ್ಕ್ಷೇತ್ರಂ ಸುದುರ್ಲಭಂ ।**
**ಪರಮಂ ಪಾವನಂ ಕ್ಷೇತ್ರಂ ಸಾಕ್ಷಾನ್ನಾರಾಯಣಸ್ಯ ವೈ ॥ ೨ ॥**
**ಸಿಂಧುರಾಜಸ್ಯ ಸಲಿಲಾದ್ಯಾವನ್ಮೂಲಂ ವಟಸ್ಯ ವೈ ।**
**ಶಂಖಸ್ಯೋದರಭಾಗಸ್ತು ಸಮುದ್ರೋದಕಸಂಪ್ಲುತಃ ॥ ೩ ॥**
**ಯತ್ಸಂಪರ್ಕಾತ್ಸಮುದ್ರೋಽತ್ರ ತೀರ್ಥರಾಜತ್ವಮಾಗತಃ ।**
**ಯಥಾಯಂ ಭಗವಾನ್ಮುಕ್ತಿಪ್ರದೋ ದೃಷ್ಟಿಪಥಂಗತಃ ॥ ೪ ॥**
**ತಥೇದಂ ಮರಣಾತ್ಕ್ಷೇತ್ರಂ ಸಿಂಧುಃ ಸ್ನಾನಾದ್ವಿಮುಕ್ತಿದಃ ।**
**ಚಿಚ್ಛೇದ ಬ್ರಹ್ಮಣಃ ಪೂರ್ವಂ ರುದ್ರಃ ಕ್ರೋಧಾತ್ತು ಪಂಚಮಂ ॥ ೫ ॥**

---

## ಕನ್ನಡದ ಅನುವಾದ

### ಪುರುಷೋತ್ತಮಕ್ಷೇತ್ರಸ್ಥಿತ ವಿವಿಧತೀರ್ಥಕಥಾಕಥನ ವರ್ಣನ

೧–೩. ಶ್ರೀದೇವಿಯು ಹೇಳುತ್ತಾಳೆ:— 'ಎಲೈ ಯಮಧರ್ಮನೇ! ಶಂಖಾಕಾರವಾಗಿರುವ ಈ ಪುರುಷೋತ್ತಮಕ್ಷೇತ್ರದ ಪಶ್ಚಿಮ ದಿಕ್ಕಿನ ತುದಿಯೆನಿಸಿರುವ ಶಂಖಾಗ್ರಭಾಗದಲ್ಲಿ ಭಕ್ತರ ಸಕಲಾಭೀಷ್ಟಗಳನ್ನೂ ನೆರವೇರಿಸಿ ಕೊಡುವವನಾಗಿರುವ, ವೃಷಭವಾಹನನಾದ ನೀಲಕಂಠನು ನೆಲಸಿರುವನು. ಪರಮ ದುರ್ಲಭವೂ, ಪರಮ ಪಾವನವೂ ಆದ ಈ ನಾರಾಯಣಕ್ಷೇತ್ರವು ಸಮುದ್ರ ತೀರದಿಂದ ಮೊದಲ್ಗೊಂಡು ವಟವೃಕ್ಷದ ಬುಡದವರೆಗೂ ವ್ಯಾಪಿಸಿರುತ್ತದೆ. ಈ ಕ್ಷೇತ್ರದ ಶಂಖೋದರ ಭಾಗವೆನಿಸಿರುವ ಪ್ರದೇಶವು ಸಮುದ್ರೋದಕದಿಂದ ತೋಯ್ದಿರುತ್ತದೆ.

೪–೬. ಈ ಕ್ಷೇತ್ರದ ಸಂಪರ್ಕವಿರುವುದರಿಂದಲೇ ಇಲ್ಲಿರುವ ಸಾಗರವು ತೀರ್ಥರಾಜವೆಂದು ಪ್ರಸಿದ್ಧಿಯನ್ನೈದಿರುವುದು. ಇಲ್ಲಿ ಭಕ್ತಜನರಿಗೆ ಮುಕ್ತಿಯನ್ನು ಕೊಡುವ ಪುರುಷೋತ್ತಮನು ದೃಗ್ಗೋಚರನಾಗುವುದರಿಂದ ಇಲ್ಲಿ ನೆಲಸಿ ಮೃತಿಯೊಂದುವುದರಿಂದಲೂ, ಇಲ್ಲಿಯ ಸಮುದ್ರಸ್ನಾನದಿಂದಲೂ ಮಾನವರಿಗೆ ಮೋಕ್ಷವು ಲಭಿಸುತ್ತದೆ. ಪೂರ್ವದಲ್ಲಿ ರುದ್ರನು ಬಹಳವಾಗಿ ಕನಲಿ, ಬ್ರಹ್ಮನ ಐದನೆಯ ಶಿರಸ್ಸನ್ನು ಕತ್ತರಿಸಿ ಕೆಡವಿದನಷ್ಟೆ! ಆತನು ದುಸ್ತ್ಯಜ

ತಚ್ಛಿರೋ ದುಸ್ತ್ಯಜಂ ಗೃಹ್ಣನ್ಬ್ರಹ್ಮಾಂಡಂ ಪರಿಬಭ್ರಮೇ ।
ಅತ್ರಾಗತೋ ಯದಾ ಬ್ರಹ್ಮಕಪಾಲಂ ಪರಿಮುಕ್ತವಾನ್ ॥ ೬ ॥
ಕಪಾಲಮೋಚನಂ ಲಿಂಗಂ ದ್ವಿತೀಯಾವರ್ತಸಂಸ್ಥಿತಂ ।
ಕಪಾಲಮೋಚನಂ ಪಶ್ಯೇತ್ಪೂಜಯೇತ್ಪ್ರಣಮೇಚ್ಚ ಯಃ ॥ ೭ ॥
ಬ್ರಹ್ಮಹತ್ಯಾದಿ ಪಾಪಾನಾಂ ಕಂಚುಕಂ ವಿಜಹಾತ್ಯಸೌ ।
ತಸ್ಯದಕ್ಷಿಣಪಾರ್ಶ್ವೇ ತು ಮರಣಂ ಭವಮೋಚನಂ ॥ ೮ ॥
ತೃತೀಯಾವರ್ತಗಾಮಾದ್ಯಾಂ ಶಕ್ತಿಂ ಮೇ ವಿಮಲಾಹ್ವಯಾಂ ।
ಜಾನೀಹಿ ಧರ್ಮರಾಜ ತ್ವಂ ಭಕ್ತಿಮುಕ್ತಿಫಲಪ್ರದಾಂ ॥ ೯ ॥
ಯ ಇಮಾಂ ಪೂಜಯೇದ್ಭಕ್ತ್ಯಾ ಪ್ರಣಮೇತ್ಕೀರ್ತಯೇತ್ತಥಾ ।
ಸರ್ವಾನ್ಕಾಮಾನವಾಪ್ನೋತಿ ಮುಕ್ತಿಂ ಚಾಂತೇ ಚ ವಿಂದತಿ ॥ ೧೦ ॥
ನಾಭಿದೇಶೇ ಸ್ಥಿತಂ ಹ್ಯೇತತ್ತ್ರಯಂ ಕುಂಡಂ ವಟೋ ವಿಭುಃ ।
ಕಪಾಲಮೋಚನಾದ್ಯಾವದರ್ಧಾಶಿನೀ ಪ್ರತಿಷ್ಠಿತಾ ॥ ೧೧ ॥
ಮಧ್ಯಂ ಶಂಖಸ್ಯ ಜಾನೀಯಾತ್ಸುಗುಪ್ತಂ ಚಕ್ರಪಾಣಿನಾ ।
ಅರ್ಧಮಶ್ನಾತಿಸಲಿಲಂ ಮಹಾಪ್ರಲಯವರ್ಧಿತಂ ॥ ೧೨ ॥

---

ವಾದ ಆ ಶಿರಸ್ಸನ್ನೇ ಹಿಡಿದುಕೊಂಡು ಬ್ರಹ್ಮಾಂಡವೆಲ್ಲವನ್ನೂ ಸುತ್ತುತ್ತ ಕಟ್ಟ ಕಡೆಗೆ ಈ ಪುರುಷೋತ್ತಮ ಕ್ಷೇತ್ರಕ್ಕೆ ಬಂದನು. ಆಗಲಾ ಬ್ರಹ್ಮಕಪಾಲವು ಆತನ ಕೈಯಿಂದ ಕಳಚಿಬಿದ್ದಿತು.

೭–೮. ಆ ಕಪಾಲಮೋಚನ ಲಿಂಗವು ಕ್ಷೇತ್ರದ ದ್ವಿತೀಯಾವರ್ತದಲ್ಲಿರುವುದು. ಅದನ್ನು ಯಾರು ಸಂದರ್ಶಿಸಿ ಪೂಜಿಸುವರೋ ಅವರು ಬ್ರಹ್ಮಹತ್ಯಾದಿ ಪಾಪಗಳ ತೊಡಿಗೆಯನ್ನು ಕಳಚಿಹಾಕುವದು. ಅಲ್ಲದೆ ಆ ಕಪಾಲಮೋಚನದ ದಕ್ಷಿಣ ಪಾರ್ಶ್ವದಲ್ಲಿ ಮರಣವು ಭವಮೋಚನವೆಸುತ್ತದೆ.

೯. ಎಲೈ ಧರ್ಮರಾಜನೇ! ಈ ಕ್ಷೇತ್ರದ ತೃತೀಯಾವರ್ತದಲ್ಲಿ ಭಕ್ತಿ ಮುಕ್ತಿ ಫಲಪ್ರದೆಯೆನಿಸಿ, ವಿಮಲೆಯೆಂದು ಹೆಸರುಗೊಂಡಿರುವ ನನ್ನ ಆದಿ ಶಕ್ತಿಯು ನೆಲಸಿರುವುದಾಗಿ ತಿಳಿಯುವವನಾಗು.

೧೦. ಈಕೆಯನ್ನು ಭಕ್ತಿಯಿಂದ ಪೂಜೆಗೈದು, ನಮಸ್ಕರಿಸಿ, ಸ್ತುತಿಸುವವನು ಸಕಲಾಭೀಷ್ಟಗಳನ್ನೂ ಪಡೆಯುವನಲ್ಲದೆ ಕಡೆಗೆ ಮೋಕ್ಷವನ್ನೂ ಹೊಂದುತ್ತಾನೆ.

೧೧. ಈ ಕ್ಷೇತ್ರದ ನಾಭಿದೇಶದಲ್ಲಿ ಕುಂಡ, ವಟವೃಕ್ಷ, ಪುರುಷೋತ್ತಮ ಪ್ರಭು ಈ ಮೂರೂ ನೆಲಸಿರುತ್ತವೆ. ಕಪಾಲಮೋಚನವಾದೆಡೆಯಲ್ಲಿಯೇ ಅರ್ಧಾಶಿನೀದೇವಿಯು ಪ್ರತಿಷ್ಠಿತೆಯಾಗಿರುತ್ತಾಳೆ.

೧೨. ಶಂಖದ ಮಧ್ಯಭಾಗವು ಚಕ್ರಪಾಣಿಯಾದ ಪುರುಷೋತ್ತಮನಿಂದ

ಸೃಷ್ಟ್ಯಾದೌ ಧರ್ಮರಾಜೇಯಂ ಶಕ್ತಿರ್ಮೇऽರ್ಧಾಂಶಿನೀ ಸ್ಮೃತಾ ।
ತಾಂ ದೃಷ್ಟ್ವಾ ಪ್ರಣಮೇದ್ಯಸ್ತು ಭೋಗಾನ್ಭೋऽಶ್ನಾತಿ ಶಾಶ್ವತಾನ್ ॥
ಸಿಂಧುರಾಜಸ್ಯ ಸಲಿಲಾದ್ಯಾವನ್ಮೂಲಂ ವಟಸ್ಯ ವೈ ।
ಕೀಟಪಕ್ಷಿಮನುಷ್ಯಾಣಾಂ ಮರಣಾನ್ಮುಕ್ತಿದೋ ಮತಃ ॥ ೧೪ ॥
ಅಂತರ್ವೇದೀ ತ್ವಿಯಂ ಪುಣ್ಯಾ ಪ್ರಾಂಚ್ಯತೇ ತ್ರಿದಶೈರಪಿ ।
ಯತ್ರ ಸ್ಥಿತಾಂ ಹಿ ಪಶ್ಯಂತಿ ಸರ್ವಾಂಶ್ಚಕ್ರಾಬ್ಜಧಾರಿಣಃ ॥ ೧೫ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಗಗನೇ ಚ ತ್ರಿವಿಷ್ಟಪೇ ।
ಸಾರ್ಧತ್ರಿಕೋಟಿಸಂಖ್ಯಾನಿ ಸ್ವರ್ಗಮೋಕ್ಷಪ್ರದಾನಿವೈ ॥ ೧೬ ॥
ತೇಷಾಮಯಂ ತೀರ್ಥರಾಜಃ ಕೀರ್ತಿತಃ ಪುರುಷೋತ್ತಮಃ ।
ಸರ್ವೇಷಾಂ ಮುಕ್ತಿಕ್ಷೇತ್ರಾಣಾಮಿದಂ ಸಾಯುಜ್ಯದಂ ಮತಂ ॥ ೧೭ ॥
ಅತ್ರ ಸ್ಥಿತಾ ನ ಶೋಚಂತಿ ಜರಾಜನ್ಮಮೃತಿಷ್ವಪಿ ।
ಕುಂಡಂ ಹ್ಯೇತದ್ರೋಹಿಣಾಖ್ಯಂ ಕಾರುಣ್ಯಾಖ್ಯಜಲೇನ ವೈ ॥ ೧೮ ॥

---

ಸಂರಕ್ಷಿತವಾಗಿರುತ್ತದೆ. ಇಲ್ಲಿಯ ಶಂಖಮಧ್ಯಭಾಗವು ಮಹಾಪ್ರಳಯಕಾಲದಲ್ಲಿ ವೃದ್ಧಿಗೊಳ್ಳುವ ಜಲದ ಅರ್ಧಭಾಗವನ್ನು ನುಂಗುತ್ತದೆ.

೧೩. ಎಲೈ ಬ್ರಹ್ಮನೇ! ಸೃಷ್ಟ್ಯಾದಿಯಲ್ಲಿ ಈ ನನ್ನ ಶಕ್ತಿಯು ಅರ್ಧಾಂಶಿನಿ ಯೆಂಬ ಹೆಸರಿನಿಂದ ಸ್ಮರಿಸಲಾಗಿರುವುದು. ಯಾವನಾದರೆ ಆರ್ಧಾಂಶಿನೀ ದೇವಿಯನ್ನು ಸಂದರ್ಶಿಸಿ ನಮಸ್ಕರಿಸುವನೋ ಅವನು ಶಾಶ್ವತ ಭೋಗಭಾಗ್ಯ ಗಳನ್ನನುಭವಿಸುತ್ತಾನೆ.

೧೪. ಸಮುದ್ರತೀರವು ಮೊದಲಾಗಿ ವಟವೃಕ್ಷಮೂಲದವರೆಗಣ ಈ ಪುಣ್ಯ ಕ್ಷೇತ್ರದ ಭೂಮಿಯು ಕೀಟ ಪಕ್ಷಿ ಮೃಗಾದಿಗಳಿಗೂ ಮಾನವರಿಗೂ ಮರಣಾ ನಂತರ ಮುಕ್ತಿ ಪ್ರದವಾದುದೆಂದು ತಿಳಿಯಲಾಗಿದೆ.

೧೫. ಚಕ್ರವನ್ನೂ, ಕಮಲವನ್ನೂ ಧರಿಸಿ ನೆಲಸಿರುವ ಶ್ರೀಪುರುಷೋತ್ತಮ ಸ್ವಾಮಿಯ ಈ ಪುಣ್ಯಕ್ಷೇತ್ರದಲ್ಲಿರುವ ಅಂತರ್ವೇದಿಯಾದರೋ ನಿಂತು ನೋಡುವವರಿಗೆ ಎಲ್ಲವೂ ಕಾಣುವುದರಿಂದ ಪುಣ್ಯಕರವೆನಿಸಿ ದೇವತೆಗಳಿಂದಲೂ ಆಶಿಸಲ್ಪಟ್ಟುದಾಗಿದೆ.

೧೬-೧೭. ಭೂಮಂಡಲದಲ್ಲಿಯೂ, ಗಗನದಲ್ಲಿಯೂ, ಸ್ವರ್ಗಲೋಕ ದಲ್ಲಿಯೂ ಸ್ವರ್ಗಮೋಕ್ಷಪ್ರದಗಳೆನಿಸಿರುವ ಮೂರೂವರೆಕೋಟಿ ಮಹಾತೀರ್ಥ ಕ್ಷೇತ್ರಗಳಿಗೂ ಈ ಪುರುಷೋತ್ತಮಕ್ಷೇತ್ರವು ತೀರ್ಥರಾಜವೆನಿಸಿರುವುದಲ್ಲದೆ ಎಲ್ಲಾ ಮುಕ್ತಿಕ್ಷೇತ್ರಗಳಿಗಿಂತಲೂ ಸಾಯುಜ್ಯಪ್ರದವೆಂದೂ ತಿಳಿಯಲಾಗಿದೆ.

೧೮-೨೦. ಇಲ್ಲಿ ವಾಸಮಾಡುವವರು ಮುಪ್ಪು, ಹುಟ್ಟು, ಸಾವುಗಳಲ್ಲಿಯೂ ಸಹ ದುಃಖಿಸುವುದಿಲ್ಲವು. ಇಲ್ಲಿರುವ ರೋಹಿಣವೆಂಬ ಕುಂಡವಾದರೋ

ಸಂಭೃತಂ ತಿಷ್ಠತೇ ನಿತ್ಯಂ ಸ್ಪರ್ಶನಾದ್ಬಂಧಮುಕ್ತಿದಂ ।
ಅತ್ರ ಪ್ರತಿಷ್ಠಿತಂ ವಾರಿ ಪ್ರಲಯೇ ಯತ್ಪ್ರವರ್ಧತೇ ॥ ೧೯ ॥
ಅತ್ರೈವ ಲೀಯತೇ ಪಶ್ಚಾತ್ತಸ್ಮಾದ್ರೋಹಿಣಸಂಜ್ಞಿತಂ ।
ತಸ್ಮಾತ್ತ್ವೇ ಮಾಽತ್ರ ಚಿಂತಾಸ್ತು ಸ್ವಾಧಿಕಾರವಿಪರ್ಯಯೇ ॥ ೨೦ ॥
ಮೋಕ್ಷಾಧಿಕಾರಿಣಾಮತ್ರ ನೇಶ್ವರತ್ವಂ ಪರೇತರಾಟ್ ।
ಧರ್ಮರಾಜಂ ಸಮಾದಿಶ್ಯ ಲಕ್ಷ್ಮೀರೇವಂ ಪುರಃಸ್ಥಿತಾಂ ॥ ೨೧ ॥
ಬ್ರಹ್ಮಾಣಮಾಹ ಜಗತಾಮಂಬಾ ಸಪ್ರಶ್ರಯಾಗಿರಾ ।
ಪಿತಾಮಹ ಜಗನ್ನಾಥ ವಿದಿತಂ ಸರ್ವಮೇವ ಯತ್ ॥ ೨೨ ॥
ಮೋಕ್ಷದಂ ಸರ್ವಜಂತೂನಾಮೇತತ್ ಕ್ಷೇತ್ರಂ ಸಮಾದಿಶ ।
ಕಾಮಾಖ್ಯಂ ಕ್ಷೇತ್ರಪಾಲಂ ಚ ವಿಮಲಂ ವಾ ತಪಸ್ವಿತಾ ॥ ೨೩ ॥
ಸಾಕ್ಷಾದ್ಬ್ರಹ್ಮಸ್ವರೂಪೋಽಸೌ ನೃಸಿಂಹೋ ದಕ್ಷಿಣೇ ವಿಭೋಃ ।
ಹಿರಣ್ಯಕಶಿಪೋರ್ವಕ್ಷೋ ವಿದಾರ್ಯಾಯಂ ಪ್ರಭೋಜ್ಜ್ವಲಃ ॥ ೨೪ ॥
ದರ್ಶನಾದಸ್ಯ ನಶ್ಯಂತಿ ಪಾತಕಾನಿ ನ ಸಂಶಯಃ ।
ಭಕ್ತೇರ್ಮುಕ್ತೇಶ್ಚ ಯೋಗ್ಯಃ ಸ್ಯಾನ್ನಾತ್ರಕಾರ್ಯಾ ವಿಚಾರಣಾ ॥ ೨೫ ॥

---

ಕರುಣಾರಸಪರಿಪೂರ್ಣವಾದುದಾಗಿ ಸ್ಪರ್ಶನಮಾತ್ರದಿಂದಲೇ ಮುಕ್ತಿಪ್ರದವೆನಿಸಿರುತ್ತದೆ. ಇಲ್ಲಿ ಪ್ರತಿಷ್ಠಿತವಾಗಿರುವ ಜಲವು ಪ್ರಳಯಕಾಲದಲ್ಲಿ ವರ್ಧಿಸುತ್ತಲೂ, ಆ ತರುವಾಯ ಇಲ್ಲಿಯೇ ಅಡಗುತ್ತಲೂ ಇರುತ್ತದೆಯಾಗಿ ಈ ಕುಂಡಕ್ಕೆರೋಹಿಣವೆಂದು ಹೆಸರು ಬಂದಿರುವುದು. ಆದುದರಿಂದೆಲೈ ಯಮನೇ! ಇಲ್ಲಿ ನಿನ್ನ ಅಧಿಕಾರವು ನಡೆಯದುದಕ್ಕಾಗಿ ಚಿಂತಿಸಬೇಡ.

೨೧–೨೬. ಈ ಕ್ಷೇತ್ರದಲ್ಲಿ ವಾಸಮಾಡುತ್ತಿರುವವರೆಲ್ಲರೂ ಮೋಕ್ಷಕ್ಕೆ ಅಧಿಕಾರಿಗಳು. ಇವರಿಗೆ ಪ್ರೇತರಾಜನಾದ ನೀನು ಪ್ರಭುವಲ್ಲ.'' ಎಂಬೀಪ್ರಕಾರವಾಗಿ ಆ ಧರ್ಮರಾಜನಿಗೆ ಬೆಸಸಿ ಜಗದಂಬೆಯಾದ ಶ್ರೀ ಲಕ್ಷ್ಮೀದೇವಿಯು ತನ್ನೆದುರಿನಲ್ಲಿಯೇ ಇದ್ದ ಬ್ರಹ್ಮನನ್ನು ಕುರಿತು ಮಧುರವಾದ ಮಾತುಗಳಿಂದ "ಎಲೈ ಜಗನ್ನಾಥನಾದ ಪಿತಾಮಹನೇ! ಸಮಸ್ತ ಜಂತುಗಳಿಗೂ ಈ ಪುರುಷೋತ್ತಮಕ್ಷೇತ್ರವು ಮೋಕ್ಷಪ್ರದವೆಂಬುದೇ ಮೊದಲಾದ ವಿಷಯಗಳೆಲ್ಲವೂ ತಿಳಿಯಿತಷ್ಟೆ! ಇನ್ನು ನೀನು ಇಲ್ಲಿ ವಿರಾಜಿಸುತ್ತಿರುವ ಕಾಮನೆಂಬ ಕ್ಷೇತ್ರಪಾಲನನ್ನೂ, ತಪಸ್ವಿತೆಯಾದ ವಿಮಲಾಂಬಿಕೆಯನ್ನೂ ಸಮಸ್ತಪ್ರಪಂಚಕ್ಕೂ ಸಾರುವವನಾಗು. ಇದೂ ಅಲ್ಲದೆ ಇಲ್ಲಿ ನೆಲಸಿರುವ ಶ್ರೀ ಪುರುಷೋತ್ತಮಸ್ವಾಮಿಯ ಬಲಗಡೆಯಲ್ಲಿರುವ ನೃಸಿಂಹಮೂರ್ತಿಯು ಸಾಕ್ಷಾತ್ ಬ್ರಹ್ಮಸ್ವರೂಪನಾಗಿರುವನು. ಈತನು ಹಿರಣ್ಯಕಶಿಪುವಿನ ವಕ್ಷಸ್ಥಳವನ್ನು ಸೀಳಿ, ಪ್ರಭೆಯಿಂದ ಉಜ್ಜ್ವಲವಾಗಿ ಬೆಳಗುತ್ತಿರುವನು. ಈತನನ್ನು ಸಂದರ್ಶಿಸುವುದರಿಂದ ಮಾನವನು ಪಾತಕಗಳೆಲ್ಲವನ್ನೂ

ಅಸ್ಯಾಗ್ರೇ ಸಂತ್ಯಜನ್ಪ್ರಾಣಾನ್ಬ್ರಹ್ಮಸಾಯುಜ್ಯಮಾಪ್ನುಯಾತ್ ।
ಯತ್ಕಿಂಚಿತ್ಕುರುತೇ ಕರ್ಮ ಕೋಟಿಕೋಟಿಗುಣಂ ಭವೇತ್ ॥ ೨೬ ॥
ಛಾಯೈಷಾ ಕಲ್ಪವೃಕ್ಷಸ್ಯ ನೃಸಿಂಹಾರ್ಕೇಣ ಭಾಸಿತಾ ।
ತಸ್ಯಾಂ ನಶ್ಯತ್ಯವಿದ್ಯಾ ಹಿ ಜ್ಞಾನತೋಽಜ್ಞಾನತೋ ಮೃತೌ ॥ ೨೭ ॥
ವೇದಾಂತೇಷು ಪ್ರಸಿದ್ಧೈಸ್ತೈರ್ವಿಜ್ಞಾನೈಃ ಶ್ರವಣಾದಿಭಿಃ ।
ಮೂಢಾನಾಂ ದುರ್ಲಭೈರ್ವಿಪ್ರಾ ವಿನಾಪ್ಯತ್ರ ವಿಮೋಚನಂ ॥ ೨೮ ॥
ಅವಿಮುಕ್ತೇ ಮುಮುಕ್ಷೋಽಸ್ತು ಕರ್ಣಮೂಲೇ ಮಹೇಶ್ವರಃ ।
ದಿಶತಿ ಬ್ರಹ್ಮಸಂಜ್ಞಾನಂ ಬೋಧೋಪಾಯಂ ಕೃಪಾನಿಧಿಃ ॥ ೨೯ ॥
ತೇನ ಬುಧ್ವಾ ಸಮಭ್ಯಸ್ಯ ಕ್ರಮಾನ್ಮೋಕ್ಷಮವಾಪ್ನುಯಾತ್ ।
ಉಪದೇಷ್ಟುರ್ಮಹಿಮ್ನಾ ಹಿ ತಸ್ಯ ಜ್ಞಾನಂ ನ ಹೀಯತೇ ॥ ೩೦ ॥
ಅತ್ರ ತ್ಯಜಂತಿ ಯೇ ಪ್ರಾಣಾಂಸ್ತೇಷಾಂ ತತ್ಕ್ಷಣ ಏವ ಹಿ ।
ಸ್ವರೂಪಾತ್ ಜಾಯತೇ ಮುಕ್ತಿಃ ಸಂಶಯೋ ಮಾಽಸ್ತು ತೇ ಯಮ ॥

---

ಕಳೆದು, ಭುಕ್ತಿಮುಕ್ತಿಗಳಿಗೆ ಯೋಗ್ಯನಾಗುವನೆಂಬುದರಲ್ಲಿ ಯಾವ ವಿಚಾರವನ್ನೂ ಮಾಡಬೇಕಾಗಿಲ್ಲವು. ಈ ಪ್ರಭುವಿನಮುಂಗಡೆ ಪ್ರಾಣಗಳನ್ನು ತೊರೆದವನು ಬ್ರಹ್ಮಸಾಯುಜ್ಯವನ್ನು ಪಡೆಯುತ್ತಾನೆ. ಮಾನವನು ಈ ಕ್ಷೇತ್ರದಲ್ಲಿ ಎಷ್ಟು ಸ್ವಲ್ಪಕರ್ಮವನ್ನೇ ಮಾಡಿದರೂ ಅದು ಕೋಟಿಯಷ್ಟು ಅಧಿಕವಾಗುತ್ತದೆ.

೨೭–೨೮. ನೃಸಿಂಹಸ್ವಾಮಿಯೆಂಬ ಸೂರ್ಯನಿಂದ ಬೆಳಗುತ್ತಿರುವ ಈ ಕಲ್ಪವೃಕ್ಷದ ನೆರಳಿನಲ್ಲಿ ಅವಿದ್ಯೆಯು ನಾಶಹೊಂದುವುದು. ಈ ನೆರಳನ್ನಾಶ್ರಯಿಸುವವರೆಲ್ಲರಿಗೂ ಜ್ಞಾನಪ್ರಾಪ್ತಿಯಾಗುವುದು. ಜ್ಞಾನವಿದ್ದಾಗಲಿ, ಜ್ಞಾನವಿಲ್ಲದೆಯಾಗಲಿ ಇಲ್ಲಿ ಮರಣವಾದರೂ ಮೋಕ್ಷವೇ ಲಭಿಸುತ್ತದೆ. ಮೂಢರಾದವರಿಗೆ ದೊರಕಲಸದಳವಾಗಿ ವೇದಾಂತ ಶಾಸ್ತ್ರದಲ್ಲಿ ಪ್ರಸಿದ್ಧವಾದ ತತ್ತ್ವವಿಜ್ಞಾನಗಳಾಗಲಿ, ಅವುಗಳ ಶ್ರವಣವಾಗಲಿ ಇಲ್ಲದೆಯೇ ಈ ಪ್ರದೇಶದಲ್ಲಿ ಮೋಕ್ಷವು ದೊರಕುತ್ತದೆ.

೨೯–೩೦. ಅವಿಮುಕ್ತಕ್ಷೇತ್ರದಲ್ಲಿ ಮುಮುಕ್ಷುವಾದವನಿಗೆ ಕೃಪಾನಿಧಿಯಾದ ಮಹೇಶ್ವರನು ಕಿವಿಯಲ್ಲಿ ಜ್ಞಾನೋಪಾಯವನ್ನುಪದೇಶಮಾಡುವನು. ಅದನ್ನು ಅವನು ಬುದ್ಧಿಬಲದಿಂದ ಅಭ್ಯಾಸಮಾಡಿ ಕ್ರಮವಾಗಿ ಮೋಕ್ಷವನ್ನು ಹೊಂದುತ್ತಾನೆ. ಉಪದೇಷ್ಟೃವಾದ ಮಹೇಶ್ವರನ ಮಹಿಮೆಯಿಂದ ಉಪದಿಷ್ಟನಾದ ಮುಮುಕ್ಷುವಿನ ಜ್ಞಾನವು ಕುಂದುವುದಿಲ್ಲ."

೩೧. ಅಯ್ಯಾ ಯಮನೇ! ಈ ಕ್ಷೇತ್ರದಲ್ಲಿಯಾದರೋ ಯಾರು ಪ್ರಾಣಗಳನ್ನು ತ್ಯಜಿಸುವರೋ ಅವರಿಗೆ ಆ ಕ್ಷಣದಲ್ಲಿಯೇ ಸಾರೂಪ್ಯಮೋಕ್ಷವು ದೊರಕುವುದು. ಇದರಲ್ಲಿ ನಿನಗೆ ಯಾವ ಸಂಶಯವೂ ಇಲ್ಲದಿರಲಿ

ಗತಾಗತಪ್ರಸಕ್ತಾನಾಂ ಕರ್ಮಿಣಾಂ ಮೂಢಚೇತಸಾಂ ।
ನೈವಸ್ವತ ಕದಾಚಿನ್ನೋ ವಿಶ್ವಾಸೋ ಹ್ಯತ್ರ ಜಾಯತೇ ॥ ೩೨ ॥
ಉತ್ಸೃಜ್ಯ ವಾರಿ ಗಾಂಗೇಯಂ ಸ್ವಾದು ಶಾಂತಂ ಸುನಿರ್ಮಲಂ ।
ಪಿಪಾಸುಃ ಪಲ್ವಲಂ ಯಾತಿ ತದ್ವತ್ತೇ ಮೂಢಚೇತಸಃ ॥ ೩೩ ॥
ಭ್ರಮಂತಿ ತೀರ್ಥಾನ್ಯನ್ಯಾನಿ ತ್ಯಕ್ತ್ವೈತತ್ ಕ್ಷೇತ್ರಮುತ್ತಮಂ ।
ಫಲಾಶಾಮೋದಕೈಸ್ತೃಪ್ತಾ ಲಭಂತೇ ಶ್ರಮಜಂ ಫಲಂ ॥ ೩೪ ॥
ಸ್ನಾನಾದಬ್ಧಿರ್ದಶಾ ದೇವಶ್ಛಾಯಯಾ ಕಲ್ಪಪಾದಪಃ ।
ಯತ್ರ ಕುತ್ರಾಪಿ ಚ ಕ್ಷೇತ್ರಂ ಮರಣಾನ್ಮುಕ್ತಿದಂ ನೃಪ ॥ ೩೫ ॥
ಯೋ ಯತ್ರ ವಿಷಯೇ ಭಕ್ತ್ಯಾ ವಿಶ್ವಾಸಂ ಕುರುತೇ ನರಃ ।
ಸ ತು ತೇನೈವ ಮುಚ್ಯೇತ ನೇದೃಶಂ ತೀರ್ಥಮಸ್ತಿ ವೈ ॥ ೩೬ ॥
ಏತತ್ತ್ಯಕ್ತ್ವಾನ್ಯತೀರ್ಥೇ ವೈ ವಿದಧಾತಿ ರುಚಿಂ ತು ಯಃ ।
ನೂನಂ ಸ ಮಾಯಯಾ ವಿಷ್ಣೋರ್ವಂಚಿತೋ ಲೋಭಲಾಲಸಃ ॥ ೩೭ ॥
ಉಪದೇಶೇನ ಬಹುನಾ ನ ಪ್ರಯೋಜನಮಸ್ತಿ ತೇ ।
ಪ್ರತ್ಯಕ್ಷೋ ಹ್ಯನುಭೂತೋಽಯಂ ಕರಟೋ ವಿಷ್ಣುರೂಪಧೃಕ್ ॥

---

೩೨. ಎಲೈ ವೈವಸ್ವತನೇ! ಗತಾಗತಗಳಲ್ಲಿ ತೊಡಗಿರುವ ಮೂಢಬುದ್ಧಿಗಳಾದ ಕರ್ಮಿಗಳಿಗೆ ಈ ಕ್ಷೇತ್ರದ ವಿಷಯದಲ್ಲಿ ನಂಬಿಕೆಯುಂಟಾಗುವುದಿಲ್ಲವು.

೩೩–೩೫. ಬಾಯಾರಿದವನು ಯಾವರೀತಿ, ರುಚಿಯೂ ಶುಚಿಯೂ, ಶೀತಳವೂ ಆದ ಗಂಗಾಜಲವನ್ನು ತೊರೆದು ಯಾವುದೋ ಒಂದು ಹಳ್ಳಕ್ಕೆ ಹೋಗುವನೋ, ಅದೇ ರೀತಿ ತಿಳಿವಿಲ್ಲದವರೂ ಈ ಕ್ಷೇತ್ರವನ್ನು ಬಿಟ್ಟು ಇತರ ತೀರ್ಥಗಳನ್ನು ಕುರಿತು ಅಲೆಯುತ್ತಾರೆ. ಅವರು ಕೇವಲ ಫಲಾಶಾಮೋದಕಗಳಿಂದ ಮಾತ್ರವೇ ತಮ್ಮ ಶ್ರಮದಿಂದುಂಟಾದ ಫಲವನ್ನು ಪಡೆಯುತ್ತಾರೆ. ಸ್ನಾನದಿಂದ ಸಮುದ್ರವೂ, ದರ್ಶನದಿಂದ ಪುರುಷೋತ್ತಮಸ್ವಾಮಿಯೂ, ನೆರಳನ್ನಾಶ್ರಯಿಸುವುದರಿಂದ ಕಲ್ಪವೃಕ್ಷವೂ, ನೆಲಸುವುದರಿಂದ ಈ ಕ್ಷೇತ್ರವೂ ಮಾನವರಿಗೆ ಮರಣಾನಂತರ ಮುಕ್ತಿಪ್ರದವಾದುದು.

೩೬. ಯಾವನು ಯಾವ ಕ್ಷೇತ್ರದಲ್ಲಿ ಭಕ್ತಿಯಿಂದ ನಂಬುಗೆಯನ್ನಿಡುವನೋ ಅವನು ಅದರಿಂದಲೇ ಮೋಕ್ಷವನ್ನು ಪಡೆಯುತ್ತಾನೆ. ಆದರೆ ಇಂತಹ ತೀರ್ಥವು ಎಲ್ಲಿಯೂ ಇರುವುದಿಲ್ಲವು.

೩೭. ಈ ಕ್ಷೇತ್ರವನ್ನು ತೊರೆದು ಯಾವನು ಇತರ ಕ್ಷೇತ್ರಗಳಲ್ಲಿ ಅಭಿಲಾಷೆಗೊಳ್ಳುವನೋ ಆ ಲೋಭಿಯು ದಿಟವಾಗಿಯೂ ವಿಷ್ಣುಮಾಯೆಯಿಂದ ವಂಚಿತನೇ ಸರಿ.

೩೮. ಸುಮ್ಮನೆ ಬಹಳವಾಗಿ ನಿನಗೆ ಉಪದೇಶಮಾಡುವುದರಿಂದ ಏನೂ

ಅಂತರ್ವೇದೀರಕ್ಷಣಾರ್ಥಂ ಶಕ್ತಯೋಽಷ್ಟೌ ಪ್ರಕೀರ್ತಿತಾಃ ।
ಉಗ್ರೇಣ ತಪಸಾ ಪೂರ್ವಮಹಂ ರುದ್ರೇಣ ಭಾವಿತಾ ॥ ೩೯ ॥
ಪತ್ನ್ಯರ್ಥಂ ಸಾ ಮಯಾ ಸೃಷ್ಟಾ ಗೌರೀ ತಸ್ಯಾಥ ಭಾಮಿನೀ ।
ಸರ್ವಸೌಂದರ್ಯವಸತಿರ್ವಪುಷೋ ಮೇ ವಿನಿರ್ಗತಾ ॥ ೪೦ ॥
ತದಾದಿಷ್ಟಾ ಮಯಾ ಭದ್ರೇ ವಚನಂ ಮೇ ಪ್ರಿಯಂ ಕುರು ।
ಅಂತರ್ವೇದೀಂ ರಕ್ಷ ಮಮ ಪರಿತಸ್ತ್ವಂ ಸ್ವಮೂರ್ತಿಭಿಃ ॥ ೪೧ ॥
ಸಾ ತು ತಿಷ್ಠತಿ ಮತ್ಪ್ರೀತ್ಯಾ ಅಷ್ಟಧಾ ದಿಕ್ಷು ಸಂಸ್ಥಿತಾ ।
ಮಂಗಲಾ ವಟಮೂಲೇ ತು ಪಶ್ಚಿಮೇ ವಿಮಲಾ ತಥಾ ॥ ೪೨ ॥
ಶಂಖಸ್ಯ ಪೃಷ್ಠಭಾಗೇ ತು ಸಂಸ್ಥಿತಾ ಸರ್ವಮಂಗಳಾ ।
ಅರ್ಧಾಶಿನೀ ತಥಾ ಲಂಬಾ ಕುಬೇರದಿಶಿ ಸಂಸ್ಥಿತಾ ॥ ೪೩ ॥
ಕಾಲರಾತ್ರಿರ್ದಕ್ಷಿಣಸ್ಯಾಂ ಪೂರ್ವಸ್ಯಾಂ ತು ಮರೀಚಿಕಾ ।
ಕಾಲರಾತ್ರ್ಯಾಸ್ತಥಾ ಪಶ್ಚಾಚ್ಚಂಡರೂಪಾ ವ್ಯವಸ್ಥಿತಾ ॥ ೪೪ ॥

---

ಪ್ರಯೋಜನವಿಲ್ಲ. ಇಲ್ಲಿ ಕಾಗೆಯೂ ವಿಷ್ಣುಸಾರೂಪ್ಯವನ್ನು ಪಡೆದುದು ನೀನು ಪ್ರತ್ಯಕ್ಷವಾಗಿ ಕಂಡು ಅನುಭವಿಸಿದ ವಿಷಯವಷ್ಟೆ!

೩೯-೪೦. ಈ ಕ್ಷೇತ್ರದ ಅಂತರ್ವೇದಿಯನ್ನು ರಕ್ಷಿಸುವುದಕ್ಕಾಗಿ ಇಲ್ಲಿ ಎಂಟು ಮಂದಿ ಶಕ್ತಿದೇವಿಯರಿರುವರೆಂದು ಹೇಳಲ್ಪಟ್ಟಿದೆ. ಪೂರ್ವದಲ್ಲಿ ರುದ್ರನು ನನ್ನನ್ನು ಕುರಿತು ಉಗ್ರವಾದ ತಪಸ್ಸನ್ನೆಸಗಿದನು. ಆಗ ನಾನು ಮುಂದೆ ಆತನಿಗೆ ಪತ್ನಿಯಾಗುವ ಗೌರಿದೇವಿಯನ್ನು ಸೃಜಿಸಿದೆನು. ಸರ್ವ ಸೌಂದರ್ಯಕ್ಕೂ ವಸತಿಯೆನಿಸಿದ ಆ ದೇವಿಯು ನನ್ನ ಮೈಯಿಂದಲೇ ಹೊರ ಬಂದವಳು.

೪೧. ಆಗ ನಾನು ಆಕೆಗೆ "ಎಲೆ ಭದ್ರೇ! ನೀನು ನನಗೊಂದು ಪ್ರಿಯ ವನ್ನೆಸಗು. ನೀನು ನಿನ್ನ ಮೂರ್ತಿಗಳಿಂದಲೇ ಇಲ್ಲಿ ನೆಲಸಿ ಈ ಕ್ಷೇತ್ರದ ಅಂತರ್ವೇದಿಯನ್ನು ರಕ್ಷಿಸು" ಎಂದು ಅಣತಿಯಿತ್ತೆನು.

೪೨-೪೪. ಆ ಗೌರಿಯಾದರೋ ನನಗೆ ಪ್ರೀತಿಯನ್ನುಂಟುಮಾಡುವ ನಿಮಿತ್ತದಿಂದ ಈ ಕ್ಷೇತ್ರದ ಎಂಟು ದಿಕ್ಕುಗಳಲ್ಲಿಯೂ ಎಂಟು ರೂಪಗಳನ್ನು ತಾಳಿ ನೆಲಸಿರುತ್ತಾಳೆ. ವಟವೃಕ್ಷದ ಬುಡದಲ್ಲಿ ಮಂಗಲೆ, ಪಶ್ಚಿಮದಲ್ಲಿ ವಿಮಲೆ, ಶಂಖದ ಹಿಂಭಾಗದಲ್ಲಿ ಸರ್ವಮಂಗಲೆ, ಅರ್ಧಾಶಿನೀ, ಲಂಬಾ ಇವರು ಕುಬೇರದಿಕ್ಕಿನಲ್ಲಿ, ದಕ್ಷಿಣದಲ್ಲಿ ಕಾಳರಾತ್ರಿ, ಪೂರ್ವದಿಶೆಯಲ್ಲಿ ಮರೀಚಿಕೆ, ಕಾಳರಾತ್ರಿಯ ಹಿಂಭಾಗದಲ್ಲಿಯೇ ಚಂಡರೂಪೆ— ಈ ರೀತಿ ಆ ದೇವಿಯು ಎಂಟು ರೂಪಗಳನ್ನು ತಾಳಿ ಇಲ್ಲಿ ನೆಲಸಿರುವಳು.

**ಏತಾಭಿರುಗ್ರರೂಪಾಭಿಃ ಶಕ್ತಿಭಿಃ ಪರಿರಕ್ಷಿತಂ ।**
**ಅಲ್ಪಪುಣ್ಯಸ್ಯ ಪುಂಸೋ ಹಿ ಸ್ಥಾನಮೇತತ್ಸುದುರ್ಲಭಂ ॥ ೪೫ ॥**
**ಏತಾಸಾಮಷ್ಟಶಕ್ತೀನಾಂ ದರ್ಶನಾತ್ಕೀರ್ತನಾತ್ತಥಾ ।**
**ನಶ್ಯಂತಿ ಸರ್ವಪಾಪಾನಿ ಹಯಮೇಧಫಲಂ ಲಭೇತ್ ॥ ೪೬ ॥**
**ರುದ್ರಾಣ್ಯಾಶ್ಚಾಷ್ಟಧಾ ಭೇದಂ ದೃಷ್ಟ್ವಾ ರುದ್ರೋಽಪಿ ಶಂಕರಃ ।**
**ಆತ್ಮಾನಮಷ್ಟಧಾ ಭಿತ್ವಾ ಉಪಾಸ್ತೇ ಪರಮೇಶ್ವರಂ ॥ ೪೭ ॥**
**ಆರಾಧ್ಯ ತಪಸಾ ವಿಷ್ಣುಂ ಪ್ರಾರ್ಥಯ ದ್ವಾರಮುತ್ತಮಂ ।**
**ಯತ್ರ ತ್ವಂ ದೇವ ತತ್ರಾಹಂ ವಸೇಯಂ ಹಿ ಯಥಾಸುಖಂ ॥ ೪೮ ॥**
**ತ್ವಾಮೃತೇ ಕಮಲಾಕಾಂತ ನಾನ್ಯನ್ನಿರ್ವಾಣಕಾರಣಂ ।**
**ಅಂತರ್ಯಾಮಿನ್ಪ್ರಭೋ ಮೇ ತ್ವಂ ತ್ವಾಂ ವಿನಾ ವಿಗ್ರಹಃ ಕುತಃ ॥ ೪೯ ॥**
**ಮೂಢಾ ಯೇ ತ್ವಾಂ ನ ಜಾನಂತಿ ಹೃಷ್ಯಂತಿ ವಿಷಯೇಽಶುಚೌ ।**
**ನಿರ್ಮಲಾಂಬರಸಂಕಾಶಂ ತ್ವಾಮಹಂ ಶರಣಂಗತಃ ॥ ೫೦ ॥**

---

೪೫. ಅಯ್ಯಾ ಧರ್ಮರಾಜನೇ! ಉಗ್ರರೂಪಿಣಿಯರಾದ ಈ ಎಂಟು ಮಂದಿ ಶಕ್ತಿದೇವಿಯರಿಂದ ಪರಿರಕ್ಷಿತವಾಗಿರುವ ಈ ಕ್ಷೇತ್ರವು ಅಲ್ಪಪುಣ್ಯನಾದ ಮಾನವನಿಗೆ ಸುದುರ್ಲಭವಾದುದೇ ಸರಿ.

೪೬. ಈ ಎಂಟು ಮಂದಿ ಶಕ್ತಿದೇವಿಯರ ದರ್ಶನದಿಂದಲೂ, ಕೀರ್ತನದಿಂದಲೂ ಸಮಸ್ತ ಪಾಪಗಳೂ ಕಳೆದು ಅಶ್ವಮೇಧಯಜ್ಞದ ಫಲವು ಲಭಿಸುತ್ತದೆ.

೪೭. ರುದ್ರಾಣಿಯ ಈ ಎಂಟು ರೂಪಗಳನ್ನು ಕಂಡು ರುದ್ರನಾದ ಶಂಕರನೂ ಸಹ ಎಂಟು ರೂಪಗಳನ್ನು ತಳೆದು ಪರಮೇಶ್ವರನನ್ನು ಉಪಾಸನೆಗೈಯುತ್ತಿರುವನು.

೪೮–೪೯. ಆತನು ಮಹಾವಿಷ್ಣುವನ್ನು ತಪಸ್ಸಿನಿಂದ ಸಂತೋಷಗೊಳಿಸಿ ಉತ್ತಮೋತ್ತಮವಾದ ಈ ವರವನ್ನು ಕೋರಿದನು :— "ದೇವ! ನೀನು ಎಲ್ಲಿರುವೆಯೋ ಅಲ್ಲಿಯೇ ನಾನೂ ಸುಖವಾಗಿ ವಾಸಮಾಡಿಕೊಂಡಿರುತ್ತೇನೆ. ಓ ಕಮಲಾಕಾಂತ! ನಿನ್ನನ್ನು ಬಿಟ್ಟರೆ ಮೋಕ್ಷಕ್ಕೆ ಕಾರಣನಾದ ಬೇರಾವ ದೇವನೂ ಇರುವುದಿಲ್ಲವು. ಎಲೈ ಅಂತರ್ಯಾಮಿಯೇ! ನೀನೇ ನನ್ನ ಪ್ರಭುವು. ನಿನ್ನನ್ನು ಬಿಟ್ಟರೆ ನನಗೆ ಈ ಮೂರ್ತಿಯೆತ್ತಣದು?

೫೦. ಎಲೈ ಸ್ವಾಮಿಯೆ! ಯಾರು ನಿನ್ನನ್ನರಿಯದೆ ಅಶುಚಿಯಾದ ವಿಷಯಗಳಲ್ಲಿ ತೊಡಗಿ ಸಂತೋಷಗೊಳ್ಳುವರೋ ಅವರು ತಿಳಿಗೇಡಿಗಳೇ ಸರಿ! ನಾನಾದರೋ ನಿರ್ಮಲಾಕಾಶಪ್ರಕಾಶನಾಗಿ ಬೆಳಗುತ್ತಿರುವ ನಿನ್ನನ್ನೇ ಶರಣು ಹೊಕ್ಕಿರುವೆನು.

ಜೈಮಿನಿರುವಾಚ :—
ಭಗವಾನಪಿ ರುದ್ರಂ ತಂ ಕ್ಷೇತ್ರಪಾಲಂ ತಥಾ ವಿಭುಃ ।
ಸ್ಥಾಪಯಾಮಾಸ ಪರಿತಃ ಸ್ವಯಂ ಮಧ್ಯೇ ವ್ಯವಸ್ಥಿತಃ ॥ ೫೧ ॥
ಕಪಾಲಮೋಚನಂ ನಾಮ ಕ್ಷೇತ್ರಪಾಲಂ ಯಮೇಶ್ವರಂ ।
ಮಾರ್ಕಂಡೇಯಂ ತಥೇಶಾನಂ ಬಿಲ್ವೇಶಂ ನೀಲಕಂಠಕಂ ॥ ೫೨ ॥
ವಟಮೂಲೇ ವಟೇಶಂ ಚ ಲಿಂಗಾನ್ಯಷ್ಟೌ ಮಹೇಶಿತುಃ ।
ಯಾನಿ ದೃಷ್ಟ್ವಾ ತಥಾ ಸ್ಪೃಷ್ಟ್ವಾ ಪೂಜಯಿತ್ವಾ ವಿಮುಚ್ಯತೇ ॥ ೫೩ ॥
ಅತ್ರ ಕ್ಷೇತ್ರೇ ಮೃತಾ ಯೇಚ ನ ತೇಷಾಂ ತ್ವಂ ಪ್ರಭುರ್ಯಮ ।
ಯದರ್ಥಮಾಗತಸ್ತ್ವಂ ಹಿ ತದನ್ಯತ್ರ ಪ್ರಸಾದಯ ॥ ೫೪ ॥
ತಥಾಪ್ಯಸೌ ಜಗನ್ನಾಥೋ ಭಕ್ತ್ಯಾಯಾತ್ಮಸಮರ್ಪಕಃ ।
ಯಮೇನ ತೋಷಿತೋ ಭಕ್ತ್ಯಾ ಪ್ರಸನ್ನಾರ್ತಿಹರಃ ಪ್ರಭುಃ ॥ ೫೫ ॥
ಸುದರ್ಶನೇನ ಚಕ್ರೇಣ ಮಾಯಾಂ ಚ ವ್ಯವದಾಸ್ಯತಿ ।
ಅತ್ಯಾಜ್ಯೇಽಸ್ಮಿನ್ ಕ್ಷೇತ್ರವರೇ ಸ್ವರ್ಣವಾಲುಕಯಾ ವೃತೇ ॥ ೫೬ ॥

---

೫೧. ಜೈಮಿನಿಯು ಹೇಳುತ್ತಾನೆ:—ಅಯ್ಯಾ ವಿಪ್ರರೇ! ಶ್ರೀ ಮಹಾವಿಷ್ಣುವೂ ಸಹ ಕ್ಷೇತ್ರಪಾಲನಾದ ಆ ರುದ್ರನನ್ನು ಕ್ಷೇತ್ರದ ಸುತ್ತಲೂ ಸ್ಥಾಪಿಸಿ ತಾನೇ ಮಧ್ಯಭಾಗದಲ್ಲಿ ನೆಲಸಿದನು.

೫೨-೫೩. ಅಯ್ಯಾ ಋಷಿಗಳಿರಾ! ಕಪಾಲಮೋಚನ, ಕ್ಷೇತ್ರಪಾಲ, ಯಮೇಶ್ವರ, ಮಾರ್ಕಂಡೇಯ, ಈಶಾನ, ಬಿಲ್ವೇಶ, ನೀಲಕಂಠ, ವಟಮೂಲದಲ್ಲಿ ಪ್ರತಿಷ್ಠಿತವಾಗಿರುವ ವಟೇಶ ಎಂಬಿವೇ ಮಹೇಶ್ವರನ ಎಂಟು ಲಿಂಗಗಳು. ಇವುಗಳನ್ನು ಸಂದರ್ಶಿಸಿ, ಸ್ಪರ್ಶಿಸಿ, ಪೂಜಿಸಿದುದಾದರೆ ಮಾನವನು ಮೋಕ್ಷವನ್ನು ಪಡೆಯುತ್ತಾನೆ.

೫೪. ತರುವಾಯ ಶ್ರೀದೇವಿಯು ಯಮನನ್ನು ಕುರಿತು, "ಎಲೈ ಯಮನೇ! ಈ ಪುಣ್ಯಕ್ಷೇತ್ರದಲ್ಲಿ ಮೃತಿಹೊಂದಿದವರಿಗೆ ನೀನು ಪ್ರಭುವಲ್ಲ. ಆದುದರಿಂದ ನೀನು ಯಾವ ಕಾರ್ಯಕ್ಕಾಗಿ ಬಂದಿರುವೆಯೋ ಅದನ್ನು ಬೇರೊಂದೆಡೆಯಲ್ಲಿ ವಿಶೇಷವಾಗಿ ಸಾಧಿಸು" ಎಂದು ಅಪ್ಪಣೆಮಾಡಿದಳು.

೫೫. ಅಂತೆಯೇ ನಡೆಸುವವನಾಗಿ ಆ ಯಮನು ಭಕ್ತರಾದವರಿಗೆ ತನ್ನನ್ನೇ ಒಪ್ಪಿಸುವವನೂ, ಪ್ರಪನ್ನರ ದುಃಖಗಳನ್ನು ಕಳೆಯುವವನೂ ಆದ ಜಗನ್ನಾಥ ಪ್ರಭುವನ್ನು ಭಕ್ತಿಯಿಂದ ಸ್ತುತಿಸಿ ಸಂತೋಷಗೊಳಿಸಿದನು.

೫೬. ಚಿನ್ನದ ಮರಳಿನಿಂದ ಸುತ್ತಲೂ ಹರಡಿರುವುದಾಗಿಯೂ, ಪುಣ್ಯಾತ್ಮರಾರೂ ಬಿಡಬಾರದುದಾಗಿಯೂ ಇರುವ ಈ ಕ್ಷೇತ್ರದಲ್ಲಿ ಶ್ರೀ ಜಗನ್ನಾಥನು ಭಕ್ತರನ್ನು ತಳಮಳಗೊಳಿಸುವ ಮಾಯೆಯನ್ನು ತನ್ನ ಸುದರ್ಶನಚಕ್ರದಿಂದ ಕತ್ತರಿಸುವನು.

ತಂ ಯಮಂ ವಂಚಯಿತ್ವಾತು ಪ್ರಸ್ಥಾಪ್ಯಚ ಯಮಾಲಯಂ ।
ಸಾಧು ಮತ್ವಾ ತತಃ ಪ್ರಾಹ ಬ್ರಹ್ಮಾಣಂ ಪುರತಃ ಸ್ಥಿತಂ ॥ ೫೭ ॥
ಶ್ರೀರುವಾಚ :—
ಇಂದ್ರದ್ಯುಮ್ನೋ ನಾಮ ರಾಜಾ ಯುಗೇ ಸತ್ಯೇ ಭವಿಷ್ಯತಿ ।
ವೈಷ್ಣವಃ ಸರ್ವಯಜ್ಞಾನಾಮಾಹರ್ತಾ ಶಾಸ್ತ್ರಕೋವಿದಃ ॥ ೫೮ ॥
ಅತ್ರಾಗತ್ಯ ಮಹಾಭಕ್ತ್ಯಾ ಕರಿಷ್ಯತಿ ನೃಪೋತ್ತಮಃ ।
ಭಗವತ್ಪ್ರೀತಯೇ ಯೇನ ವಾಜಿಮೇಧಸಹಸ್ರಕಂ ॥ ೫೯ ॥
ಕರಿಷ್ಯತೇ ಪ್ರಜಾನಾಥಸ್ತದನುಗ್ರಹಕಾರಣಾತ್ ।
ಏಕದಾರುಸಮುತ್ಪನ್ನಶ್ಚತುರ್ಧಾ ಸಂಭವಿಷ್ಯತಿ ॥ ೬೦ ॥
ದಾರವಪ್ರತಿಮಾನಾನಿ ವಿಶ್ವಕರ್ಮಾ ಘಟಿಷ್ಯತಿ ।
ಪ್ರತಿಷ್ಠಾಪಯಿತಾ ತ್ವಂ ಹಿ ಇಂದ್ರದ್ಯುಮ್ನಪ್ರಸಾದಿತಃ ॥ ೬೧ ॥
ಅಸ್ಮಾಕಂ ಸದೃಶಾನಾಂಚ ಪ್ರತಿಮಾನಾಂ ಪಿತಾಮಹ ।
ತದ್ರೂಪಕಾ ಪ್ರತಿಷ್ಠಾ ಹಿ ಘಟನಾ ಚ ಭವಿಷ್ಯತಿ ॥ ೬೨ ॥
ಇತಿ ಶ್ರುತ್ವಾ ಶ್ರಿಯೋ ವಾಕ್ಯಂ ಚತುರ್ವಕ್ತ್ರೋ ಯಮಶ್ಚ ಸಃ ।
ಸ್ವಂ ಸ್ವಂ ಪುರಂ ಜಗ್ಮತುಸ್ತೌ ಮುದಾ ಪರಮಯಾಯುತೌ ॥ ೬೩ ॥

---

೫೭. ಎಲೈ ವಿಪ್ರರೇ! ಈ ರೀತಿ ಶ್ರೀದೇವಿಯು ಯಮನನ್ನು ವಂಚಿಸಿ ಯಮಾಲಯಕ್ಕೆ ಕಳುಹಿಸಿದ ತರುವಾಯ ತನ್ನಲ್ಲಿಯೆ ಚೆನ್ನಾಗಿ ಯೋಚಿಸಿ ತನ್ನ ಮುಂಗಡೆಯೇ ಇದ್ದ ಬ್ರಹ್ಮನನ್ನು ಕುರಿತು ಈ ರೀತಿ ಹೇಳಿದಳು :—

೫೮. ಶ್ರೀದೇವಿಯು ಹೇಳುತ್ತಾಳೆ:— "ಎಲೈ ಬ್ರಹ್ಮನೇ! ಮುಂದಿನ ಸತ್ಯಯುಗದಲ್ಲಿ ವಿಷ್ಣುಭಕ್ತನೂ, ಸಮಸ್ತ ಯಜ್ಞಗಳನ್ನು ಮಾಡುವವನೂ, ಶಾಸ್ತ್ರಕೋವಿದನೂ ಆದ ಇಂದ್ರದ್ಯುಮ್ನನೆಂಬ ದೊರೆಯು ಹುಟ್ಟುತ್ತಾನೆ.

೫೯–೬೨. ಆ ನೃಪೋತ್ತಮನು ಈ ಕ್ಷೇತ್ರಕ್ಕೆ ಬಂದು ಭಗವತ್ಪ್ರೀತಿಗಾಗಿ ಸಹಸ್ರಸಂಖ್ಯೆಯ ಅಶ್ವಮೇಧಯಾಗಗಳನ್ನು ಮಾಡುತ್ತಾನೆ. ಅವನನ್ನು ಅನುಗ್ರಹಿಸಲೋಸುಗ ಒಂದೇ ಮರದಿಂದ ಆವಿರ್ಭವಿಸುವ ಈ ಜಗನ್ನಾಥ ಸ್ವಾಮಿಯು ನಾಲ್ಕು ಭಾಗವಾಗಿ ಅವತರಿಸುತ್ತಾನೆ. ಆಗ ವಿಶ್ವಕರ್ಮನು ಆ ನಾಲ್ಕು ಮರದ ತುಂಡುಗಳಿಂದಲೂ ಪ್ರಭುವಿನ ನಾಲ್ಕುಮೂರ್ತಿಗಳನ್ನು ನಿರ್ಮಿಸುತ್ತಾನೆ. ನೀನು ಆ ಸಮಯದಲ್ಲಿ ಇಂದ್ರದ್ಯುಮ್ನಮಹಾರಾಜನಿಂದ ಸಂತೋಷಗೊಳಿಸಲ್ಪಟ್ಟವನಾಗಿ ಆ ಮೂರ್ತಿಗಳನ್ನಿಲ್ಲಿ ಪ್ರತಿಷ್ಠಿಸು. ಎಲೈ ಪಿತಾಮಹನೇ! ನಮ್ಮ ರೂಪಗಳು ಹೇಗಿರುವುವೋ ಹಾಗೆಯೇ ಆ ಪ್ರತಿಮೆಗಳೂ ಸಹ ಸುಪ್ರತಿಷ್ಠಿತಗಳಾಗಿ ಇಲ್ಲಿ ವಿರಾಜಿಸುತ್ತವೆ."

೬೩. ಈ ಪ್ರಕಾರವಾಗಿ ನುಡಿದ ಶ್ರೀದೇವಿಯ ನುಡಿಗಳನ್ನಾಲಿಸಿ ತರುವಾಯ

ಕ್ಷೇತ್ರಸ್ಯ ಮಹಿಮಾನಂ ತಂ ಸಂಸ್ಮೃತ್ಯ ಚ ಮುಹುರ್ಮುಹುಃ ।
ವಿಸ್ಮಯೇನ ಚ ಹರ್ಷೇಣ ರೋಮಾಂಚಾಂಚಿತವಿಗ್ರಹೌ ॥ ೬೪ ॥
ಸಾಂಪ್ರತಂ ಮುನಯಸ್ತಸ್ಮಿನ್ನಿಂದ್ರದ್ಯುಮ್ನಪ್ರಸಾದಿತಃ ।
ಶಂಖ ಚಕ್ರಧರಃ ಶ್ರೀಮಾನ್ನಿಲಜೀಮೂತಸನ್ನಿಭಃ ॥ ೬೫ ॥
ನೀಲಾಚಲಗುಹಾಂತಸ್ಥೋ ಬಿಭ್ರದ್ದಾರುಮಯಂ ವಪುಃ ।
ಆಸ್ತೇ ಲೋಕೋಪಕಾರಾಯ ಬಲೇನ ಚ ಸುಭದ್ರಯಾ ॥ ೬೬ ॥
ಸುದರ್ಶನೇನ ಚಕ್ರೇಣ ದಾರುಣಾ ನಿರ್ಮಿತೇನ ಚ ।
ಸಹಿತಃ ಪ್ರಣತಾರ್ತೀನಾಂ ನಾಶನಃ ಕರುಣಾರ್ಣವಃ ॥ ೬೭ ॥
ಯಂ ದೃಷ್ಟ್ವಾ ಪಾಪಬಂಧೇನ ಸುದೃಢೇನ ವಿಮುಚ್ಯತೇ ।
ಸುಕರ್ಮೌಘಫಲೀಪಾಕೋ ಯುಗಪತ್ಸಮುಪಸ್ಥಿತಃ ॥ ೬೮ ॥
ಪಶ್ಯತಾಂ ಭೋ ಮುನಿಶ್ರೇಷ್ಠಾಸ್ತಾಪತ್ರಯಸುಧಾನಿಧಿಂ ।
ಬಹವೋ ಹ್ಯವತಾರಾ ಹಿ ವಿಷ್ಣೋರ್ದಿವ್ಯಾಶ್ಚಮಾನುಷಾಃ ॥ ೬೯ ॥

---

ಚತುರ್ಮುಖನಾದ ಆ ಬ್ರಹ್ಮದೇವನೂ, ಯಮಧರ್ಮರಾಜನೂ ಪರಮಾನಂದ ಭರಿತರಾಗಿ ತಂತಮ್ಮ ಲೋಕಗಳನ್ನು ಕುರಿತು ತೆರಳಿದರು.

೬೪. ಅವರೀರ್ವರೂ ಆ ಪುರುಷೋತ್ತಮಕ್ಷೇತ್ರದ ಮಹಿಮೆಯನ್ನು ಅಡಿಗಡಿಗೂ ನೆನೆದು ಆಶ್ಚರ್ಯಹರ್ಷಗಳಿಂದ ರೋಮಾಂಚಗೊಳ್ಳುತ್ತಿದ್ದರು.

೬೫–೬೭. ಎಲೈ ವಿಪ್ರರೇ! ಈಗಲಾದರೋ ಆ ಕ್ಷೇತ್ರದಲ್ಲಿ ಇಂದ್ರದ್ಯುಮ್ನ ರಾಜನಿಂದ ಪ್ರಸನ್ನಗೊಳಿಸಲಾದ ಆ ಪ್ರಭುವು ಶಂಖಚಕ್ರಧರನೂ, ವಿರಾಜಮಾನ ವಾದ ನೀಲಮೇಘಶ್ಯಾಮಳವರ್ಣನೂ ಆಗಿ ದಾರುಮಯವಾದ ದೇಹವನ್ನು ತಾಳಿ ಅಲ್ಲಿಯೇ ಕಂಗೊಳಿಸುತ್ತಿರುವ ನೀಲಾಚಲದ ಗುಹೆಯಲ್ಲಿ ಸುಪ್ರತಿಷ್ಠಿತ ನಾಗಿ ಲೋಕೋಪಕಾರಕ್ಕಾಗಿಯೇ ದಾರುನಿರ್ಮಿತಗಳಾದ ಬಲರಾಮ, ಸುಭದ್ರಾದೇವಿ, ಸುದರ್ಶನಚಕ್ರಮೂರ್ತಿಗಳಿಂದ ಸಹಿತನಾಗಿ ನೆಲಸಿರುವನು. ಆ ಸ್ವಾಮಿಯು ಅಲ್ಲಿ ಪ್ರಣತಾರ್ತಿಹರನಾಗಿಯೂ, ಕರುಣಾಸಮುದ್ರನಾಗಿಯೂ ಕಂಗೊಳಿಸುತ್ತಿರುವನು.

೬೮–೭೦. ಆ ಜಗನ್ನಾಥಸ್ವಾಮಿಯನ್ನು ಸಂದರ್ಶಿಸುವ ಮಾನವನು ಎಂತಹ ಬಲವಾದ ಪಾಪದಸಂಕೋಲೆಗಳಿಂದಾದರೂ ಬಿಡುಗಡೆ ಹೊಂದುತ್ತಾನೆ. ಎಲೈ ಮುನಿಶ್ರೇಷ್ಠರೇ! ತಾಪತ್ರಯಗಳನ್ನು ದೂರಗೊಳಿಸುವ ಕ್ಷೀರಸಮುದ್ರ ಪ್ರಾಯನಾದ ಆ ಭಗವಂತನ ಸಂದರ್ಶನಮಾತ್ರದಿಂದಲೇ ಸಮಸ್ತಪುಣ್ಯಕರ್ಮ ಗಳ ಫಲಗಳೆಲ್ಲವೂ ಏಕಕಾಲದಲ್ಲಿಯೆ ಭಕ್ತನಿಗೆ ದೊರಕುತ್ತವೆ. ವಿಷ್ಣುವಿಗೆ ದಿವ್ಯಗಳೂ, ಮಾನುಷಗಳೂ ಆದ ಅವತಾರಗಳು ಅನೇಕವಾಗಿರುವವಷ್ಟೆ! ಆ ಅವತಾರಗಳಲ್ಲಿ ಭಗವಂತನ ಅತ್ಯದ್ಭುತಕಾರ್ಯಗಳೂ, ಮಾಹಾತ್ಮ್ಯಗಳೂ

ಅತ್ಯದ್ಭುತಾನಿ ಕರ್ಮಾಣಿ ಮಾಹಾತ್ಮ್ಯಂ ಚಾಪಿ ವರ್ಣಿತಂ ।
ಪಾರಿಚಿತ್ಯಾನ್ಮನುಷ್ಯಾಂಸ್ತು ನಮಸ್ಯಂತೇ ಸುರಾ ಅಪಿ ॥ ೭೦ ॥
ದೇವಾಸುರಮನುಷ್ಯಾಣಾಂ ಗಂಧರ್ವೋರಗರಕ್ಷಸಾಂ ।
ತಿರಶ್ಚಾಮಪಿ ಭೋ ವಿಪ್ರಾಸ್ತಸ್ಮಿನ್ದಾರುಮಯೇ ಹರೌ ॥ ೭೧ ॥
ಸರ್ವಾತ್ಮಭೂತೇ ವಸತಿ ಚಿತ್ತಂ ಸರ್ವಸುಖಾವಹೇ ।
ಉಪಜೀವಂತ್ಯಸ್ಯ ಸುಖಂ ಯಸ್ಯಾನನ್ಯಸ್ವರೂಪಿಣಃ ॥ ೭೨ ॥
ಬ್ರಹ್ಮಣಃ ಶ್ರುತಿವಾಗಾಹೇತ್ಯೇತದತ್ರಾನುಭೂಯತೇ ।
ದ್ಯತಿ ಸಂಸಾರದುಃಖಾನಿ ದದಾತಿ ಸುಖಮವ್ಯಯಂ ॥ ೭೩ ॥
ತಸ್ಮಾದ್ದಾರುಮಯಂ ಬ್ರಹ್ಮ ವೇದಾಂತೇಷು ಪ್ರಗೀಯತೇ ।
ನಹಿ ಕಾಷ್ಟಮಯೀ ಮೋಕ್ಷಂ ದದಾತಿ ಪ್ರತಿಮಾ ಕ್ವಚಿತ್ ॥ ೭೪ ॥
ಕೃತೇನಾಕೃತತಾ ವಿಪ್ರಾಃ ಕದಾಚಿನ್ನೋಪಲಭ್ಯತೇ ।
ಅಕೃತೋ ಹ್ಯಪವರ್ಗಸ್ತು ಕೃತಾದ್ವಾ ದಾರುಣಃಕಥಂ ॥ ೭೫ ॥
ಅಧಿಷ್ಠಾನಂ ವಿನಾ ಬ್ರಾಹ್ಮ್ಯಮೈಶ್ವರ್ಯಂ ನೋಪಲಭ್ಯತೇ ।
ರಹಸ್ಯಮೇತತ್ಪರಮಂ ವಿಷ್ಣೋಃ ಸ್ಥಾನಮನುತ್ತಮಂ ॥ ೭೬ ॥

---

ವರ್ಣಿತವಾಗಿವೆ. ಇವುಗಳನ್ನೆಲ್ಲ ಪರಿಚಯಮಾಡಿಕೊಂಡಿದ್ದಮಾತ್ರಕ್ಕೇ ದೇವತೆಗಳು ಮಾನವರನ್ನು ಗೌರವಿಸಿ ನಮಸ್ಕರಿಸುತ್ತಾರೆ.

೭೧–೭೩. ಎಲೈ ವಿಪ್ರರೇ! ದೇವಾಸುರ ಮನುಷ್ಯರು, ಗಂಧರ್ವೋರಗ ರಾಕ್ಷಸರು, ಕಡೆಗೆ ತಿರ್ಯಕ್‌ಜಂತುಗಳು ಇವೇ ಮುಂತಾದವುಗಳ ಚಿತ್ತವೆಲ್ಲವೂ ಸಮಸ್ತ ಜಗತ್ತಿಗೂ ಸುಖಪ್ರದವಾದುದೂ, ಸರ್ವಾತ್ಮಸ್ವರೂಪವಾದುದೂ ಆದ ಶ್ರೀಹರಿಯ ದಾರುಮಯಮೂರ್ತಿಯಲ್ಲಿ ನೆಲೆಗೊಂಡಿರುತ್ತದೆ. ಅಲ್ಲದೆ ಇವುಗಳೆಲ್ಲವೂ ಅನನ್ಯಸ್ವರೂಪಿಯಾದ ಆ ಪರಮಾತ್ಮನ ಸುಖವನ್ನು ಅನುಸರಿಸಿಯೆ ಜೀವಿಸುತ್ತಿರುತ್ತವೆ. ಚತುರ್ಮುಖಬ್ರಹ್ಮನ ವೇದವಾಣಿಯು ಈ ರೀತಿ ಅಪ್ಪಣೆ ಕೊಡಿಸಿತು. ಪರಮಾನಂದವೆಂಬುದು ಈ ಕ್ಷೇತ್ರದಲ್ಲಿ ಮಾನವರಿಂದ ಅನುಭವಿಸಲಾಗುವುದು. ಶ್ರೀಹರಿಯ ಈ ದಾರುಮಯಮೂರ್ತಿಯು ಸಂಸಾರ ದುಃಖಗಳನ್ನು ಛೇದಿಸಿ ಮಾನವರಿಗೆ ಶಾಶ್ವತ ಸುಖವನ್ನುಂಟುಮಾಡಿಕೊಡುತ್ತದೆ.

೭೪–೭೫. ಈ ಕಾರಣದಿಂದಲೇ ದಾರುಮಯ ಬ್ರಹ್ಮವು ಉಪನಿಷತ್ತುಗಳಲ್ಲಿ ಬಹಳವಾಗಿ ಹೊಗಳಲಾಗಿದೆ. ಕಾಷ್ಠಮಯವಾದ ಮೂರ್ತಿಯು ಎಂದಿಗೂ ಮೋಕ್ಷವನ್ನು ಕೊಡಲಾರದು. ಕೃತಕವಾದ ಪ್ರತಿಮೆಯಿಂದ ಅಕೃತಕವಾದ ಮೋಕ್ಷವೆಂದಿಗೂ ದೊರಕುವುದಿಲ್ಲವು. ಅಪವರ್ಗ (ಮೋಕ್ಷ) ವು ಅಕೃತಕವಾದುದು. ಮಾಡಿಟ್ಟಿರುವ ಮರದ ಪ್ರತಿಮೆಯಿಂದ ಅದು ದೊರೆಯುವ ಬಗೆಯೆಂತು?

೭೬–೭೭. ಎಂದರೆ ಅದೇ ಇಲ್ಲಿನ ಮಾಹಾತ್ಮ್ಯವು. ಪರಬ್ರಹ್ಮನ

**ಅಲೌಕಿಕೀ ಸಾ ಪ್ರತಿಮಾ ಲೌಕಿಕೀತಿ ಪ್ರಕಾಶಿತಾ ।**
**ಕುತ್ರ ಶ್ರುತಾ ವಾ ದೃಷ್ಟಾ ವಾ ಪ್ರತಿಮಾ ವ್ಯಾಹರೇದಿತಿ ॥ ೭೭ ॥**
**ಇಂದ್ರದ್ಯುಮ್ನಾಯ ಸ ವರಂ ತದಾ ದಾರುವಪುರ್ದದೌ ।**
**ದೀನಾನಾಥೈಕಶರಣಂ ತರಣಂ ಭವವಾರಿಧೇಃ ॥ ೭೮ ॥**
**ಚರಾಚರಸದಾವಂದ್ಯಚರಣಂ ತಂ ಪರಾಯಣಂ ।**
**ನಾರಾಯಣಂ ಜಗದ್ಯೋನಿಂ ಸೃಷ್ಟಿಸಂಹೃತಿಕಾರಣಂ ॥ ೭೯ ॥**
**ಮೋಕ್ಷಣಂ ಸರ್ವಪಾಪಾನಾಂ ದಾರಣಂ ಸಕಲಾಪದಾಂ ।**
**ವಿಭೂತೀನಾಂ ವಿಸರಣಂ ವರಣಂ ಸರ್ವಯೋಗಿನಾಂ ॥ ೮೦ ॥**
**ಭರಣಂ ಸರ್ವಜಂತೂನಾಂ ಧರಣಂ ಜಗತಾಮಪಿ ।**
**ಭಾಷಣಂ ಸರ್ವಭಾಷಾಣಾಂ ದೂಷಣಂ ಸರ್ವದುಷ್ಕೃತಾಂ ॥ ೮೧ ॥**
**ಶೋಷಣಂ ಸರ್ವಪಂಕಾನಾಂ ನಿಲಾದ್ರಿಶರಣಂ ಹರಿಂ ।**
**ಶರಣಂ ಪ್ರಯಾತ ಮುನಯೋ ಹ್ಯನನ್ಯಶರಣಂ ವಿಭುಂ ॥ ೮೨ ॥**

---

ಅಧಿಷ್ಠಾನವಿಲ್ಲದೆ ಮೋಕ್ಷೈಶ್ವರ್ಯವೆಂದಿಗೂ ಲಭಿಸುವುದಿಲ್ಲವು. ಇದೇ ಇಲ್ಲಿನ ಪರಮರಹಸ್ಯವು. ಇದು ಶ್ರೀ ಮಹಾವಿಷ್ಣುವಿನ ಉತ್ತಮಕ್ಷೇತ್ರ. ಇಲ್ಲಿ ನೆಲೆಗೊಂಡಿರುವ ದಾರುಪ್ರತಿಮೆಯು ಅಲೌಕಿಕವಾದುದು. ಆದರೂ (ನೋಡುವವರಿಗೆ) ಲೌಕಿಕವಾಗಿ (ಕೃತಕವಾಗಿ) ಕಾಣುತ್ತ ಪ್ರಕಾಶಿಸುತ್ತಿದೆ. ಎಲೈ ವಿಪ್ರರೇ! ಹಾಗಿಲ್ಲದಿದ್ದರೆ ಎಲ್ಲಿಯಾದರೂ ಪ್ರತಿಮೆಯು ಮಾತನಾಡಿದುದನ್ನು ಕೇಳಿರುವುದಾಗಲಿ, ಕಂಡಿರುವುದಾಗಲಿ ಉಂಟೆ?

೭೮–೮೨ ಬ್ರಹ್ಮನು ಶ್ರೀಮನ್ಮಹಾವಿಷ್ಣುವಿನ ದಾರುಮಯಮೂರ್ತಿಯನ್ನು ಆ ಕ್ಷೇತ್ರದಲ್ಲಿ ಪ್ರತಿಷ್ಠಿಸಿದಾಗ ಆ ಸ್ವಾಮಿಯು ಇಂದ್ರದ್ಯುಮ್ನಮಹಾರಾಜನಿಗೆ ವರಪ್ರದಾನ ಮಾಡಿರುವನು. ಆದುದರಿಂದಲೈ ಮುನಿಗಳಿರಾ! ನೀವೆಲ್ಲರೂ, ದೀನರೆಲ್ಲರಿಗೂ ಪ್ರಭುವಾಗಿ, ಏಕಶರಣನೂ, ಭವಸಾಗರದಿಂದ ಕಡೆಹಾಯಿಸುವವನೂ, ಚರಾಚರಜಗತ್ತಿನಿಂದ ಸರ್ವಕಾಲಗಳಲ್ಲಿಯೂ ನಮಸ್ಕೃತವಾದ ಚರಣಗಳುಳ್ಳವನೂ, ಪರಾಯಣನೂ, ನಾರಾಯಣನೂ, ಜಗತ್ಕಾರಣನೂ, ಸೃಷ್ಟಿಸ್ಥಿತಿಲಯಕಾರಣನೂ, ಸಮಸ್ತಪಾಪಗಳನ್ನೂ ಕಳೆಯುವವನೂ, ಸಮಸ್ತ ಸಂಕಟಗಳನ್ನೂ ಸೀಳುವವನೂ, ಐಶ್ವರ್ಯಪ್ರದನೂ, ಸಮಸ್ತ ಯೋಗಿಗಳಿಗೂ ಶರಣ್ಯನೂ, ಸಮಸ್ತ ಜಂತುಗಳನ್ನೂ ರಕ್ಷಿಸುವವನೂ, ಜಗದ್ಧರನೂ, ಸಕಲಭಾಷೆಗಳಿಗೂ ಭಾಷಣಸ್ವರೂಪನೂ, ಸರ್ವಪಾಪಗಳಿಗೂ ದೂಷಣನೂ, ಎಲ್ಲ ಕೊಳೆಗಳನ್ನೂ ಬತ್ತಿಸುವವನೂ, ನೀಲಾದ್ರಿಶರಣನೂ, ಅನನ್ಯಶರಣನೂ ಆದ ವಿಭುವನ್ನು ಶರಣುಹೋಗಿರಿ.

ನಿಶ್ಚೇಷ್ಟೋ ದಾರುವರ್ಷ್ಮಾಪಿ ದಿವ್ಯಲೀಲಾವಿಲಾಸಕೃತ್ ।
ಕ್ಷಮತೇ ಸ್ವಲ್ಪಭಕ್ತ್ಯಾಪಿ ಸೋಽಪರಾಧಶತಂ ನೃಣಾಂ ॥ ೮೩ ॥
ಅತ್ರ ವಃ ಕಥಯಿಷ್ಯಾಮಿ ಚರಿತಂ ಪಾಪನಾಶನಂ ।
ಲೀಲಯಾ ದಾರುದೇಹಸ್ಯ ಮುನಯಃ ಪರಮಾತ್ಮನಃ ॥ ೮೪ ॥
ಕುರುಕ್ಷೇತ್ರೇ ಸಮುದ್ಭೂತೌ ಬ್ರಾಹ್ಮಣಕ್ಷತ್ರಿಯಾವುಭೌ ।
ಸಖಾಯೌ ಜಗ್ಮತುಃ ಪ್ರೀತ್ಯಾ ಏಕಾಹಾರವಿಹಾರಿಣೌ ॥ ೮೫ ॥
ವೃತ್ತಚ್ಯುತೌ ನಿಷಿದ್ಧಾನಾಮಾಹರ್ತಾರೌ ವಿಮೋಹಿತೌ ।
ಅಸ್ವಾಧ್ಯಾಯವಷಟ್ಕಾರೌ ಸ್ವಧಾಸ್ವಾಹಾವಿವರ್ಜಿತೌ ॥ ೮೬ ॥
ಅಪಾತ್ರಭೂತೌ ಧರ್ಮಸ್ಯ ಮಹಾಪಾತಕದೂಷಿತೌ ।
ಮಧುಭಕ್ಷೌ ಪಣ್ಯಯೋಷಿತ್ಸಹವಾಸೌ ಮುದಾನ್ವಿತೌ ॥ ೮೭ ॥
ಪಾರಲೌಕಿಕಚಿಂತಾತು ತಯೋಃ ಸ್ವಪ್ನೇಽಪಿ ನಾಗತಾ ।
ಏವಂ ಪ್ರವರ್ತಮಾನೌ ತಾವಾಯುಷೋಽರ್ಧಂಚ ನಿನ್ಯತುಃ ॥ ೮೮ ॥
ಏಕದಾ ಭ್ರಮಮಾಣೌ ತೌ ಯಜ್ಞವಾಟಮುಗಚ್ಛತಾಂ ।
ಶೃಣ್ವಂತೌ ದೂರತಃ ಸ್ತೋತ್ರಂ ಶಾಸ್ತ್ರಶಬ್ದಮನೋಹರಂ ॥ ೮೯ ॥

---

೮೩. ಎಲೈ ಮುನಿಗಳಿರಾ! ಆ ಪ್ರಭುವು ದಾರುಮಯನೂ, ನಿಶ್ಚೇಷ್ಟನೂ ಆಗಿದ್ದರೂ ದಿವ್ಯಲೀಲಾವಿಲಾಸಗಳನ್ನೂ ಮೆರೆಯುವವನು. ಆತನು ಸ್ವಲ್ಪ ಭಕ್ತಿಯಿಂದಲೇ ಭಕ್ತನ ಶತಾಪರಾಧಗಳನ್ನೂ ಕ್ಷಮಿಸುತ್ತಾನೆ.

೮೪–೮೫. ಈ ವಿಷಯದಲ್ಲಿ ಪಾಪನಾಶಕವಾದೊಂದು ಪುಣ್ಯಚರಿತ್ರೆಯನ್ನು ನಿಮಗೆ ತಿಳಿಸುವೆನು; ಕೇಳಿರಿ. ಅಯ್ಯಾ ಮುನಿಗಳಿರಾ! ದಾರುದೇಹಧರನಾದ ಆ ಪರಮಾತ್ಮನ ಲೀಲೆಯಿಂದಲೇ ಕುರುಕ್ಷೇತ್ರದಲ್ಲಿ ಒಬ್ಬ ಬ್ರಾಹ್ಮಣನೂ, ಕ್ಷತ್ರಿಯನೂ ಹುಟ್ಟಿದರು. ಇವರಿಬ್ಬರೂ ಪರಸ್ಪರ ಮಿತ್ರರಾಗಿ ಪ್ರೀತಿಯಿಂದ ಏಕಾಹಾರವಿಹಾರಗಳನ್ನು ನಡೆಸುವವರಾದರು.

೮೬–೮೮. ಇಬ್ಬರೂ ಒಳ್ಳೆಯ ನಡತೆಯಿಂದ ಜಾರಿಬಿದ್ದವರು; ನಿಷಿದ್ಧ ಕರ್ಮಗಳನ್ನೆಸಗುವ ಉನ್ಮತ್ತರು; ಸ್ವಾಧ್ಯಾಯ, ವಷಟ್ಕಾರ, ಸ್ವಧಾಸ್ವಾಹಾಕಾರಗಳಿಂದ ಬಿಡಲ್ಪಟ್ಟವರು; ಧರ್ಮಕ್ಕೆ ಅಪಾತ್ರರಾದವರು; ಮಹಾಪಾತಕಗಳಿಂದ ದೂಷಿತರು; ಹೆಂಡಕುಡುಕರು; ಸೂಳೆಯರ ಸಹವಾಸದಿಂದಲೇ ಸಂತೋಷಗೊಳ್ಳುತ್ತಿದ್ದವರು. ಇವರಿಗೆ ಪಾರಲೌಕಿಕ ಚಿಂತೆಯೆಂಬುದು ಸ್ವಪ್ನದಲ್ಲಿಯೂ ಬಂದಿರಲಿಲ್ಲವು. ಈ ರೀತಿಯಾದ ನಡೆವಳಿಯನ್ನೇ ನಡೆಸುತ್ತಿದ್ದ ಇವರಿಬ್ಬರೂ ಅಂತೆಯೇ ಅರ್ಧಾಯುಷ್ಯವನ್ನು ಕಳೆದರು.

೮೯. ಹೀಗಿರಲು ಒಂದಾನೊಂದು ಕಾಲದಲ್ಲಿ ಇವರೀರ್ವರೂ ಅಲ್ಲಲ್ಲಿ ಅಲೆಯುತ್ತ ಒಂದಾನೊಂದು ಯಜ್ಞಶಾಲೆಗೈತಂದರು. ಅಲ್ಲಿ ದೂರದಲ್ಲಿಯೇ

ದೃಷ್ಟ್ವಾ ತಾಸ್ತಾಃ ಕ್ರಿಯಾಃ ಸರ್ವಾಃ ಶ್ರುತಿಸಂಚೋದಿತಾ ದ್ವಿಜಾಃ ।
ತೌ ತದಾ ಚಕ್ರತುಃ ಶ್ರದ್ಧಾಂ ಧರ್ಮೇ ವರ್ತ್ಮನ್ಯಧಾರ್ಮಿಕೌ ॥ ೯೦ ॥
ಸಂಸ್ಮರಂತೌ ಸ್ವಜಾತಿಂ ತೌ ಪುಂಡರೀಕಾಂಬರೀಷಕೌ ।
ನಿಂದಂತೌ ದುಶ್ಚರಿತ್ರಂ ಸ್ವಂ ಪರಸ್ಪರಮುಭಾಷಿತಾಂ ॥ ೯೧ ॥
ಕಥಮಾವಾಂ ಕರಿಷ್ಯಾವೋ ದುಷ್ಕೃತಾರ್ಣವಮುಲ್ಬಣಂ ।
ಇಹೈವ ಜನ್ಮನ್ಯಜರಂ ಬುದ್ಧಿಪೂರ್ವಮುಪಾರ್ಜಿತಂ ॥ ೯೨ ॥
ನತಚ್ಛಾಸ್ತ್ರಂ ಹಿ ಜಾನಾತಿ ಯದಾವಾಭ್ಯಾಂ ಚ ದುಷ್ಕೃತಂ ।
ಸಂಚಿತಂ ತಸ್ಯ ಘೋರಸ್ಯ ಪ್ರಾಯಶ್ಚಿತ್ತಂ ಸುದುರ್ಲಭಂ ॥ ೯೩ ॥
ತಥಾಪಿ ಬ್ರಾಹ್ಮಣಾನೇತಾನ್ಬ್ರಹ್ಮಿಷ್ಠಾನ್ಸ್ವೈ ಸದೋಗತಾನ್ ।
ಪ್ರಣಿಪಾತಪ್ರಪನ್ನಾನ್ಸ್ವೈ ಪೃಚ್ಛಾವೋಽತ್ರ ಚ ನಿಷ್ಕೃತಿಂ ॥ ೯೪ ॥
ಇತಿ ನಿಶ್ಚಿತ್ಯ ತೌ ವಿಪ್ರಾನಭ್ಯವಾದ್ಯಾಭ್ಯಪೃಚ್ಛತಾಂ ।
ಯಥಾವತ್ಕಲ್ಮಷಂ ಸ್ವಂ ಸ್ವಂ ವಿಜ್ಞಾಪ್ಯ ಚ ಮುಹುರ್ಮುಹುಃ ॥ ೯೫ ॥

---

ನಿಂತು ಅವರು ಮನೋಹರವಾದ ದೇವತಾಸ್ತೋತ್ರವನ್ನೂ, ವೇದಶಾಸ್ತ್ರಧ್ವನಿಯನ್ನೂ ಕೇಳಿದರು.

೯೦. ಅಲ್ಲಿ ನಡೆಯುತ್ತಿದ್ದ ಆಯಾ ವೇದೋಕ್ತಕರ್ಮಗಳನ್ನೂ ಕಂಡು ಒಡನೆಯೇ ಅವರೀರ್ವರೂ ಧಾರ್ಮಿಕರಾಗಿ ಧರ್ಮದಲ್ಲಿ ಶ್ರದ್ಧೆಯನ್ನು ತಾಳಿದರು.

೯೧. ಅವರೀರ್ವರಲ್ಲಿ ಒಬ್ಬನು ಪುಂಡರೀಕ; ಇನ್ನೊಬ್ಬನು ಅಂಬರೀಷ. ಇಬ್ಬರೂ ಆಗ ತಂತಮ್ಮ ಜಾತಿಗಳನ್ನು ನೆನೆಸಿಕೊಂಡು ತಮ್ಮ ದುರ್ನಡತೆಯನ್ನೂ ಕಂಡು ನಿಂದಿಸಿಕೊಳ್ಳುತ್ತ ಒಬ್ಬರಿಗೊಬ್ಬರು ಈ ರೀತಿ ಮಾತನಾಡಿಕೊಂಡರು.

೯೨–೯೩. "ಅಕ್ಕಟ! ನಾವು ಅತಿಕಠಿನವಾಗಿರುವ ಈ ದುಷ್ಕೃತ ಸಮುದ್ರವನ್ನು ದಾಟುವುದೆಂತು? ನಾವು ಈ ಜನ್ಮದಲ್ಲಿಯೇ ಬುದ್ಧಿಪೂರ್ವಕವಾಗಿ ಪಾಪಗಳನ್ನು ಸಂಪಾದಿಸಿದೆವು. ನಾವು ಮಾಡಿರುವ ಪಾಪಗಳನ್ನು ಶಾಸ್ತ್ರವೇ ತಿಳಿದಿರುವುದಿಲ್ಲ. ಈ ರೀತಿ ನಾವು ಗಳಿಸಿರುವ ಪಾಪಕ್ಕೆ ಪ್ರಾಯಶ್ಚಿತ್ತವೇ ದುರ್ಲಭವಾಗಿರುವುದು. ಆದರೂ ಸನ್ಮಾರ್ಗಗಾಮಿಗಳೂ, ಬ್ರಹ್ಮಜ್ಞಾನಿಗಳೂ ಆದ ಈ ಬ್ರಾಹ್ಮಣರನ್ನು ನಮಸ್ಕರಿಸಿ ಶರಣುಹೊಂದಿ ಈ ಪಾಪಗಳಿಗೆ ಪ್ರಾಯಶ್ಚಿತ್ತವೇನೆಂದು ಕೇಳೋಣ!"

೯೪–೯೫. ಎಲೈ ಮುನಿಗಳಿರಾ! ಈ ಪ್ರಕಾರವಾಗಿ ಆ ಪುಂಡರೀಕ, ಅಂಬರೀಷ ರೆಂಬೀರ್ವರೂ ನಿಶ್ಚಯಿಸಿಕೊಂಡು ಅಲ್ಲಿದ್ದ ಬ್ರಾಹ್ಮಣರ ಬಳಿಗೈದಿ ಅವರನ್ನು ನಮಸ್ಕರಿಸಿ ತಮ್ಮ ತಮ್ಮ ಪಾಪಗಳೆಲ್ಲವನ್ನೂ ಇದ್ದುದನ್ನಿದ್ದಂತೆಯೇ ಪುನಃ ಪುನಃ ಅವರಿಗೆ ತಿಳಿಸಿ ಅವುಗಳಿಗೆ ಪ್ರಾಯಶ್ಚಿತ್ತವೇನೆಂದು ಪ್ರಶ್ನಿಸಿದರು.

ತೇ ತಯೋರ್ವಚನಂ ಶ್ರುತ್ವಾ ಮೀಲಿತಾಕ್ಷಾ ದ್ವಿಜೋತ್ತಮಾಃ ।
ನಾಬ್ರುವನ್ಕಿಂಚಿದನ್ಯೋನ್ಯಂ ವೀಕ್ಷತೋ ವಿಸ್ಮಿತಾನನಾಃ ॥ ೯೬ ॥
ಅಹೋ ಸುಘೋರಕರ್ಮಾಣಿ ಸಂಚಿತಾನಿ ದುರಾತ್ಮನೋಃ ।
ಯೇಷು ಶಾಸ್ತ್ರಂ ಪದಂ ದಾತುಂ ಪ್ರಾಯಶ್ಚಿತ್ತಾಯ ನ ಹ್ಯಲಂ ॥ ೯೭ ॥
ಶಕ್ನುಮೋ ನವಯಂ ತಸ್ಮಾದನಯೋರ್ನಿಷ್ಕೃತಾವಿತಿ ।
ತೇಷಾಂ ಮಧ್ಯೇ ಸದೋಮುಖ್ಯಃ ಕಶ್ಚಿದ್ವೈಷ್ಣವಪುಂಗವಃ ॥ ೯೮ ॥
ಭಗವದ್ಭಕ್ತಿಮಾಹಾತ್ಮ್ಯಕ್ಷಪಿತಾಶೇಷಕಲ್ಮಷಃ ।
ತಾನುವಾಚ ವಿಹಸ್ಯೇದಂ ವಾಕ್ಯಂ ವಾಕ್ಯವಿದಾಂ ವರಃ ॥ ೯೯ ॥

ವೈಷ್ಣವ ಉವಾಚ:—

ಭೋ ದ್ವಿಜ ಕ್ಷತ್ರದಾಯಾದ ಪಾಪರಾಶೇಃ ಸುದಾರುಣಾತ್ ।
ಮುಕ್ತಿಂ ಚೇದ್ವಾಂಛತಸ್ತೂರ್ಣಂ ಗಚ್ಛತಂ ಪುರುಷೋತ್ತಮಂ ॥೧೦೦॥
ಕ್ಷೇತ್ರೋತ್ತಮಂ ದಾರುಮಯೋ ಯತ್ರಾಸ್ತೇ ಪುರುಷೋತ್ತಮಃ ।
ಇಂದ್ರದ್ಯುಮ್ನಸ್ಯ ರಾಜರ್ಷೇರ್ಭಕ್ತ್ಯಾನುಗ್ರಹಕೃದ್ವಿಭುಃ ॥ ೧೦೧ ॥
ತಮಾರಾಧ್ಯ ಜಗನ್ನಾಥಂ ಶಂಖಚಕ್ರಗದಾಧರಂ ।
ಪಾಪಕ್ಷಯಂ ವಾ ಮುಕ್ತಿಂ ವಾ ಸ್ವೇಚ್ಛಯಾ ಪ್ರಾಪ್ಸ್ಯಥ ಧ್ರುವಂ ॥

---

೯೬–೯೯. ಆ ದ್ವಿಜೋತ್ತಮರಾದರೋ ಅವರ ಮಾತುಗಳನ್ನು ಕೇಳಿದ ಬಳಿಕ ಕಣ್ಣುಗಳನ್ನು ಮುಗಿದೇ ಬಹಳ ಕಾಲ ಯೋಚಿಸಿ ಏನೂ ಮಾತನಾಡದೆ ಆಶ್ಚರ್ಯಭರಿತರಾಗಿ ಒಬ್ಬರನ್ನೊಬ್ಬರು ನೋಡತೊಡಗಿದರು. "ಅಯ್ಯೋ! ಈ ದುರಾತ್ಮರಿಬ್ಬರೂ ಶಾಸ್ತ್ರದಲ್ಲಿ ಪ್ರಾಯಶ್ಚಿತ್ತವೇ ಕಾಣದ ಅತ್ಯಂತ ಘೋರ ಕರ್ಮಗಳನ್ನೆಲ್ಲ ಮಾಡಿರುವರು. ಆದುದರಿಂದ ನಾವು ಇವರ ನಿಷ್ಕೃತಿಯ ವಿಷಯ ದಲ್ಲಿ ಹೀಗೆಂದೇ ಹೇಳಲು ಶಕ್ಯರಲ್ಲವು" ಎಂದರು. ಆ ಬ್ರಾಹ್ಮಣರೆಲ್ಲರೂ ಈ ರೀತಿ ನುಡಿಯಲು ಆ ಸದಸ್ಯರಲ್ಲಿ ಮುಖ್ಯ ಸದಸ್ಯನೂ, ವೈಷ್ಣವಶ್ರೇಷ್ಠನೂ, ಭಗವದ್ಭಕ್ತಿಯಿಂದುಂಟಾದ ಮಾಹಾತ್ಮ್ಯದಿಂದ ತೊಳೆದ ಸಮಸ್ತ ಕಲ್ಮಷಗಳುಳ್ಳ ವನೂ, ಮಾತುಬಲ್ಲವರಲ್ಲಿ ಅಗ್ಗಳಿಯನೂ ಆದ ಓರ್ವ ಭಕ್ತಶ್ರೇಷ್ಠನು ಅವರನ್ನು ಕುರಿತಿಂತೆಂದನು.

೧೦೦. ವೈಷ್ಣವನು ಹೇಳುತ್ತಾನೆ:—"ಅಯ್ಯಾ ಬ್ರಾಹ್ಮಣನೇ, ಎಲೈ ಕ್ಷತ್ರಿಯಬಂಧುವೆ! ನೀವೀರ್ವರೂ ಭಯಂಕರವಾದ ನಿಮ್ಮ ಪಾಪಗಳಿಂದ ಬಿಡು ಗಡೆಯನ್ನು ಬಯಸುವಿರಾದರೆ ಕೂಡಲೆ ಪುರುಷೋತ್ತಮಕ್ಷೇತ್ರಕ್ಕೆ ಹೋಗಿರಿ.

೧೦೧–೧೦೨. ಆ ಕ್ಷೇತ್ರೋತ್ತಮದಲ್ಲಿ ಪುರುಷೋತ್ತಮನಾದ ಶ್ರೀಮನ್ಮ ಹಾವಿಷ್ಣುವು, ಹಿಂದೆ ರಾಜರ್ಷಿಯಾದ ಇಂದ್ರದ್ಯುಮ್ನ ಮಹಾರಾಜನ ಭಕ್ತಿಗೆ ಮೆಚ್ಚಿ ಅನುಗ್ರಹಿಸಿ ದಾರುಮಯಮೂರ್ತಿಯಾಗಿ ನೆಲಸಿ ವಿರಾಜಿಸುತ್ತಿರುವನು.

ಘೋರದುಷ್ಕೃತತೂಲೌಘದಾವಾಗ್ನಿಸದೃಶಸ್ತು ಸಃ ।
ತಪಸ್ಯೈತತ್ಕ್ಷಯಂ ನೇತುಂ ನ ಶಕ್ಯಂ ಜನ್ಮಕೋಟಿಭಿಃ ॥ ೧೦೩ ॥
ಯುಗಪತ್ಸಂಕ್ಷಯಂ ಯಾತಿ ಯಂ ದೃಷ್ಟ್ವಾ ಸರ್ವಕಿಲ್ಬಿಷಂ ।
ತಸ್ಮಾದ್ವಿಲಂಬಂ ಕುರುತಂ ಪ್ರಯಾತಂ ತತ್ರ ಸತ್ವರಂ ॥ ೧೦೪ ॥
ಸುಪುಣ್ಯೇ ಚೋತ್ಕಲೇ ದೇಶೇ ದಕ್ಷಿಣಾರ್ಣವತೀರಗೇ ।
ನೀಲಾದ್ರಿಶಿಖರಾವಾಸಂ ವ್ರಜತಂ ಶರಣಂ ವಿಭುಂ ॥ ೧೦೫ ॥
ಸೋಽಭೀಷ್ಟಸಿದ್ಧಿಂ ವಾಂ ದೇವಃ ಪ್ರದಾಸ್ಯತಿ ಕೃಪಾನಿಧಿಃ ।
ಇತ್ಯಾದಿಷ್ಟಾ ತತೋ ವಿಪ್ರಕ್ಷತ್ರಿಯೌ ಹರ್ಷಸಂಯುತೌ ॥ ೧೦೬ ॥
ತೇನೈವ ವರ್ತ್ಮನಾ ವಿಪ್ರಾಃ ಪ್ರಯಾತೌ ಪುರುಷೋತ್ತಮಂ ॥ ೧೦೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಪುರುಷೋತ್ತಮಕ್ಷೇತ್ರ ಸ್ಥಿತ ವಿವಿಧ ತೀರ್ಥಕಥಾಕಥನವರ್ಣನಂ" ನಾಮ ಚತುರ್ಥೋಽಧ್ಯಾಯಃ

---

ಶಂಖಚಕ್ರಗದಾಧರನಾದ ಆ ಜಗನ್ನಾಥನನ್ನು ಆರಾಧಿಸಿದರೆ ನೀವೀರ್ವರೂ ನಿಮ್ಮ ಅಪೇಕ್ಷೆಯಂತೆ ಪಾಪಕ್ಷಯವನ್ನೋ, ಮುಕ್ತಿಯನ್ನೋ ಖಂಡಿತವಾಗಿಯೂ ಪಡೆಯುತ್ತೀರಿ.

೧೦೩–೧೦೪. ಆ ಜಗನ್ನಾಥಸ್ವಾಮಿಯು ಭಯಂಕರವಾದ ಪಾಪಗಳೆಂಬ ಹತ್ತಿಯರಾಶಿಗೆ ದಳ್ಳುರಿಯಂತಿರುವನು. ಕೋಟಿ ಜನ್ಮಗಳನ್ನೆತ್ತಿದರೂ ನೀವು ಮಾಡಿರುವ ಈ ಪಾಪಗಳನ್ನು ನೀಗಿಕೊಳ್ಳುವುದು ಸಾಧ್ಯವಾಗಲಾರದಷ್ಟೆ. ಇಂತಹ ನಿಮ್ಮ ಪಾಪಗಳೆಲ್ಲವೂ ಆ ಪ್ರಭುವಿನ ಸಂದರ್ಶನಮಾತ್ರದಿಂದ ಒಂದೇ ತಡವೆಯೇ ಕ್ಷಯಿಸಿಹೋಗುತ್ತವೆ. ಆದುದರಿಂದ ನೀವಿನ್ನು ತಡಮಾಡಬೇಡಿರಿ. ಜಾಗ್ರತೆಯಾಗಿ ಅಲ್ಲಿಗೆ ಹೋಗಿರಿ.

೧೦೫–೧೦೭. ಮಹಾಪುಣ್ಯಕರವಾದ ಉತ್ಕಲದೇಶದಲ್ಲಿ, ದಕ್ಷಿಣ ಸಮುದ್ರ ತೀರದ ನೀಲಾದ್ರಿಶಿಖರದಲ್ಲಿ ವಾಸವಾಗಿರುವ ಆ ಜಗನ್ನಾಥವಿಭುವನ್ನು ಕುರಿತು ಶರಣುಹೋಗಿರಿ. ಕೃಪಾನಿಧಿಯಾದ ಆ ದೇವನು ನಿಮಗೆ ಅಭೀಷ್ಟಸಿದ್ಧಿಯನ್ನು ಉಂಟುಮಾಡಿಕೊಡುವನು." ಎಂಬೀ ಪ್ರಕಾರವಾಗಿ ಆ ವೈಷ್ಣವನು ಅಪ್ಪಣೆ ಕೊಡಿಸಲು ಆ ಬ್ರಾಹ್ಮಣ ಕ್ಷತ್ರಿಯರಿಬ್ಬರೂ ಸಂತುಷ್ಟರಾಗಿ ಅದೇ ಮಾರ್ಗವಾಗಿಯೇ ಪುರುಷೋತ್ತಮಕ್ಷೇತ್ರಕ್ಕೆ ಪ್ರಯಾಣ ಹೊರಟರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿ ಸಂವಾದದಲ್ಲಿ "ಪುರುಷೋತ್ತಮಕ್ಷೇತ್ರ ಸ್ಥಿತ ವಿವಿಧ ತೀರ್ಥಕಥಾಕಥನವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ಪುಂಡರೀಕಾಂಬರೀಷಕಥಾಕಥನವರ್ಣನಂ

ಜೈಮಿನಿರುವಾಚ :—

ನಿರ್ವಿಣ್ಣಚೇತಸೌ ತೌತು ತ್ಯಕ್ತ್ವಾ ವೇಶ್ಯಾದಿಸಂಗತಿಂ ।
ಧ್ಯಾಯಂತೌ ಮನಸಾ ವಿಷ್ಣುಂ ಶುದ್ಧಾಹಾರವ್ರತಾವುಭೌ ॥ ೧ ॥
ಕಾಲೇನ ಕಿಯತಾ ಪ್ರಾಪ್ತೌ ನೀಲಾದ್ರಿನಿಲಯಂ ಹರೇಃ ।
ತೀರ್ಥರಾಜಜಲೇ ಸ್ನಾತ್ವಾ ಯಥಾವದ್ವಿಧಿಚೋದಿತಂ ॥ ೨ ॥
ಪ್ರಾಸಾದದ್ವಾರಿ ತಿಷ್ಠಂತೌ ಸಾಷ್ಟಾಂಗಂ ಪ್ರಣಿಪತ್ಯಚ ।
ಭಗವಂತಂ ನಿರೀಕ್ಷೇತೇ ನಾಪಶ್ಯತಾಂ ತದಾ ದ್ವಿಜಾಃ ॥ ೩ ॥
ವಿವರ್ಣವದನೌ ದೇವಮದೃಷ್ಟ್ವಾ ಚಿಂತಯಾಕುಲೌ ।
ಆರಭೇತೇ ಹ್ಯನಶನಂ ಭಗವದ್ದರ್ಶನಾವಧಿ ॥ ೪ ॥
ಕೀರ್ತಯಂತೇ ಭಗವತೋ ನಾಮ ಕಲ್ಮಷನಾಶನಂ ।
ತೃತೀಯಸ್ಯಾಂ ತ್ರಿಯಾಮಾಯಾಂ ಜ್ಯೋತಿರೇಕಮಪಶ್ಯತಾಂ ॥ ೫ ॥

---

### ಕನ್ನಡದ ಅನುವಾದ

#### ಪುಂಡರೀಕಾಂಬರೀಷಕಥಾಕಥನವರ್ಣನ

೧–೩. ಜೈಮಿನಿಯು ಹೇಳುತ್ತಾನೆ:— ಎಲೈ ವಿಪ್ರರೇ! ತರುವಾಯ ಪುಂಡರೀಕ, ಅಂಬರೀಷರೆಂಬ ಆ ಬ್ರಾಹ್ಮಣ ಕ್ಷತ್ರಿಯರೀರ್ವರೂ ವಿರಕ್ತಿಯನ್ನು ತಾಳಿದ ಮನಸುಳ್ಳವರಾಗಿ ವೇಶ್ಯಾಸಹವಾಸವೇ ಮೊದಲಾದ ದುರ್ನಡತೆಗಳನ್ನು ದೂರಮಾಡಿ, ಶುದ್ಧವಾದ ಆಹಾರವನ್ನೇ ತೆಗೆದುಕೊಳ್ಳುತ್ತ ವ್ರತನಿಷ್ಠರಾಗಿ ಮನಸಾ ಮಹಾವಿಷ್ಣುವನ್ನೇ ಧ್ಯಾನಿಸುತ್ತ ಸ್ವಲ್ಪಕಾಲದಲ್ಲಿಯೇ ಪುರುಷೋತ್ತಮ ಕ್ಷೇತ್ರವೆಂದು ಪ್ರಸಿದ್ಧವಾದ ಶ್ರೀಹರಿಯ ಆ ನೀಲಾದ್ರಿನಿಲಯವನ್ನು ಸೇರಿದರು. ಬಳಿಕ ಅಲ್ಲಿಯ ತೀರ್ಥರಾಜದಲ್ಲಿ ಶಾಸ್ತ್ರೋಕ್ತವಿಧಿಯಿಂದ ಸ್ನಾನವನ್ನು ಮಾಡಿದವರಾಗಿ ದೇವಾಲಯದ ಮಹಾದ್ವಾರದ ಬಳಿಸಾರಿ ಸಾಷ್ಟಾಂಗ ಪ್ರಣಾಮವನ್ನೆಸಗಿ ಆ ದೇವದೇವನನ್ನು ಸಂದರ್ಶಿಸಬಯಸಿದರು. ಆದರೆ ಸ್ವಾಮಿಯು ಅವರಿಗೆ ಕಾಣಿಸಲಿಲ್ಲವು.

೪–೫. ಆ ಜಗನ್ನಾಥನನ್ನು ಕಾಣದುದರಿಂದ ಅವರೀರ್ವರೂ ವಿವರ್ಣವದನರಾಗಿ ಚಿಂತೆಯಿಂದ ತಳಮಳಗೊಂಡು ಭಗವದ್ದರ್ಶನವಾಗುವವರೆಗೂ ನಿರಶನ ವ್ರತವನ್ನು ಕೈಕೊಂಡರು. ಸಮಸ್ತ ಕಲ್ಮಷಗಳನ್ನೂ ನಾಶಗೊಳಿಸುವ ಭಗವನ್ನಾಮಾಮೃತವನ್ನೇ ಸೇವಿಸುತ್ತಲಿದ್ದ ಅವರೀರ್ವರೂ ಮೂರನೆಯ ದಿನದ ರಾತ್ರಿಯಲ್ಲಿ ಒಂದಾನೊಂದು ಜ್ಯೋತಿಯನ್ನು ಕಂಡರು.

ತ್ರೀಣ್ಯಹಾನಿ ಪುನಸ್ತೌ ಚ ತದೋಪವಾಸತಾಂ ಸ್ಥಿತೌ ।
ಮಧ್ಯೇ ಸಪ್ತಮರಾತ್ರೇಸ್ತು ಭಗವಂತಮಪಶ್ಯತಾಂ ॥ ೬ ॥
ತ್ರಿದಶಾನಾಂ ಸ್ತುತಿಃ ಶ್ರುತ್ವಾ ದಿವ್ಯಜ್ಞಾನೌ ಬಭೂವತುಃ ।
ಅಪಾಸ್ತಪಾಪನಿರ್ಮೋಕೌ ಸಾಕ್ಷಾದ್ದೇವಮಪಶ್ಯತಾಂ ॥ ೭ ॥
ಶಂಖಚಕ್ರಗದಾಪಾಣಿಂ ದಿವ್ಯಾಲಂಕಾರಭೂಷಿತಂ ।
ರತ್ನಪಾದುಕಯೋಃ ಪೃಷ್ಠೇ ವಿನ್ಯಸ್ತಚರಣಾಂಬುಜಂ ॥ ೮ ॥
ವ್ಯಾಕೋಶಪುಂಡರೀಕಾಕ್ಷಂ ಪ್ರಸನ್ನವದನಂ ವಿಭುಂ ।
ವಾಮಪಾರ್ಶ್ವೇ ಸ್ಥಿತಾಂ ಲಕ್ಷ್ಮೀಂ ವಾಮೇನಾಲಿಂಗ್ಯಬಾಹುನಾ ॥ ೯ ॥
ನಾಗವಲ್ಲೀದಲಂ ಬದ್ಧಮಾದದಾನಂ ಶ್ರಿಯಾಹೃತಂ ।
ರತ್ನವೇತ್ರಕರಾಃ ಕಾಶ್ಚಿತ್ಕಾಶ್ಚಿಚ್ಚಾಮರಪಾಣಯಃ ॥ ೧೦ ॥
ಗಂಧತೈಲಪ್ರದೀಪಾಸ್ತು ರತ್ನವರ್ತಿಪ್ರದೀಪಿಕಾಃ ।
ಕಾಶ್ಚಿದ್ದಧಾನಾಃ ಸ್ವಕರೈರ್ಯೌವನಾಢ್ಯಾಃ ಸುಭೂಷಿತಾಃ ॥ ೧೧ ॥

---

೬-೭. ಮತ್ತೆ ಮೂರು ದಿನಗಳ ಉಪವಾಸ ವ್ರತವನ್ನು ಮಾಡಿ ಅವರು ಸ್ಥಿರಚಿತ್ತರಾಗಿರಲು ಏಳನೆಯ ದಿನದ ಮಧ್ಯರಾತ್ರಿಯಲ್ಲಿ ಆ ಭಗವಂತನನ್ನು ಸಂದರ್ಶಿಸಿದರು. ಅಂದಿನ ಆ ಸಮಯದಲ್ಲಿಯೇ ಅವರು ದೇವತೆಗಳೆಸಗುತ್ತಿದ್ದ ಭಗವತ್ಸ್ತೋತ್ರವನ್ನಾಲಿಸಿ ದಿವ್ಯಜ್ಞಾನವನ್ನು ಪಡೆದು, ಕಳಚಿಬಿದ್ದ ಪಾಪದ ಪೊರೆಯುಳ್ಳವರಾಗಿ ಒಡನೆಯೇ ಆ ಜಗನ್ನಾಥಸ್ವಾಮಿಯನ್ನು ಸಾಕ್ಷಾತ್ತಾಗಿ ಸಂದರ್ಶಿಸಿದರು.

೮-೧೧. ಶಂಖಚಕ್ರಗದಾಪಾಣಿಯಾಗಿ, ದಿವ್ಯಾಲಂಕಾರ ಭೂಷಿತನಾಗಿ, ರತ್ನದ ಪಾದುಕೆಗಳನ್ನು ಮೆಟ್ಟಿದ ಪಾದಕಮಲಗಳುಳ್ಳವನಾಗಿ, ಅರಳಿದ ತುಂಬತಾವರೆಗೆ ಸಾಟಿಯಾದ ಕಂಗಳಿಂದೊಪ್ಪಿ ಆ ಪುರುಷೋತ್ತಮ ವಿಭುವು ಪ್ರಸನ್ನವಾದ ಮುಖಮುದ್ರೆಯಿಂದ ವಿರಾಜಿಸುತ್ತಿದ್ದನು. ವಾಮಪಾರ್ಶ್ವದಲ್ಲಿದ್ದ ಶ್ರೀಮಹಾಲಕ್ಷ್ಮಿಯನ್ನು ಒಂದು ತೋಳಿನಿಂದಾಲಿಂಗಿಸಿದವನಾಗಿ ಆ ದೇವನು ಮತ್ತೊಂದು ಕೈಯಿಂದ ಆ ದೇವಿಯು ನೀಡುತ್ತಿದ್ದ ತಾಂಬೂಲವನ್ನು ಕೈಕೊಳ್ಳುತ್ತಿದ್ದನು. ಇಂತಹ ವೈಭವವನ್ನು ಮೆರೆಯುತ್ತಿದ್ದ ಆ ಪ್ರಭುವನ್ನು ಆ ಪುಣ್ಯಶಾಲಿಗಳೀರ್ವರೂ ಕಣ್ತುಂಬ ನೋಡಿದರು. ಆಗಲಾಪ್ರಭು ಸನ್ನಿಧಿಯಲ್ಲಿ ರತ್ನದ ಬೆತ್ತಗಳನ್ನು ಹಿಡಿದಿರುವವರೂ, ಚಾಮರಧಾರಿಣಿಯರೂ ಆದ ಕೆಲವರು ಪರಿಚಾರಿಣಿಯರು ಆತನನ್ನೋಲೈಸುತ್ತಿದ್ದರು. ಗಂಧದೆಣ್ಣೆಯ ದೀವಟಿಗೆಗಳನ್ನೂ, ರತ್ನವರ್ತಿಗಳ ದೀವಟಿಗೆಗಳನ್ನೂ ಹಿಡಿದಿರುವ ಯುವತಿಯರೂ, ಸರ್ವಾಭರಣಭೂಷಿತೆಯರೂ ಆದ ಕೆಲವರು ದಿವ್ಯಸಖಿಯರೂ ಅಂತೆಯೇ ಆ ಸ್ವಾಮಿಯನ್ನು ಸೇವಿಸುತ್ತಿದ್ದರು.

ಪಶ್ಚಾದ್ರತ್ನಮಯಂ ಛತ್ರಂ ಬಿಭ್ರತೀ ಕಾಚಿದುಜ್ಜ್ವಲಾ ।
ಧೂಪಪಾತ್ರಂ ಮುಖಾಭ್ಯಾಶೇ ಕೃಷ್ಣಾಗರುಸುಧೂಪಿತಂ ॥ ೧೨ ॥
ಕಾಚಿದ್ದಧಾನಾ ಪ್ರಮ್ಲೋಚಾಂ ಹಸಂತೀಂ ವಿಗ್ರಹಶ್ರಿಯಾ ।
ಲೀಲಾಲಕದೃಶಾ ದೇವಾನನುಗೃಹ್ಣಂತಮಗ್ರತಃ ॥ ೧೩ ॥
ಬದ್ಧಾಂಜಲಿಪುಟಾನ್ನಮ್ರಕಂಧರಾನ್ಸ್ತುವತಃ ಪೃಥಕ್ ।
ಸಿದ್ಧಾನ್ಮುನಿಗಣಾನ್ದಿವ್ಯಾನ್ ಸನಕಾದೀನ್ಸ್ಮಿತೇನ ಚ ॥ ೧೪ ॥
ನಾರದಾದೀಂಶ್ಚ ಗಂಧರ್ವಾನ್ದಿವ್ಯಗಾನಮನೋಹರಾನ್ ।
ದತ್ತಾವಧಾನಂ ಶ್ರವಣೇ ಲೀಲಯೈವಾನುಕಂಪಿನಂ ॥ ೧೫ ॥
ಪ್ರಹ್ಲಾದಾದೀನ್ವೈಷ್ಣವಾಗ್ರ್ಯಾನ್ಸ್ವರೂಪಂ ಧ್ಯಾಯತೋಽಗ್ರತಃ ।
ಚಿತ್ತಾಕರ್ಷಣಸಂಲೀನಾಂ ವಿದಧಾನಂ ಸ್ವವಿಗ್ರಹೇ ॥ ೧೬ ॥
ವಕ್ಷಃಸ್ಥಲಪ್ರವಿಲಸತ್ಕೌಸ್ತುಭಪ್ರತಿಬಿಂಬಿತೈಃ ।
ದೇವಾದಿಭಿರ್ವಿಶ್ವರೂಪಮೂರ್ತೇಃ ಸ್ವಸ್ಯಾಃ ಪ್ರಕಾಶಿಕಂ ॥ ೧೭ ॥
ಉಪರ್ಯುಪರಿ ದಿವ್ಯಾಯಾಃ ಪುಷ್ಪವೃಷ್ಟೇರಧಃ ಸ್ಥಿತಂ ।
ಶ್ರೀಸನ್ನಿಧಾನವಿಗತಶ್ರಿಯಮಪ್ಸರಸಾಂಗಣಂ ॥ ೧೮ ॥

---

೧೨–೨೦. ಆ ಪ್ರಭುವಿನ ಹಿಂಗಡೆ ಒಬ್ಬಾನೊಬ್ಬಳ್ ರತ್ನಮಯವಾದ ಛತ್ರವನ್ನು ಹಿಡಿದು ಬೆಳಗುತ್ತಿದ್ದಳು. ಮತ್ತೋರ್ವ ದೇವಕನ್ಯೆಯು ಕೃಷ್ಣಾಗರು ಧೂಪದಿಂದ ಸುವಾಸಿತವಾದ ಧೂಪಪಾತ್ರೆಯನ್ನು ಆ ಸ್ವಾಮಿಯ ಮುಖದೆಡೆ ಹಿಡಿದು ಬೆಳಗುತ್ತಿದ್ದಳು. ಅವಳು ತನ್ನೊಂದು ದೇಹಸೌಂದರ್ಯದಿಂದ ಶ್ರೀ ಸಹಚರಿಯಾದ ಪ್ರಮ್ಲೋಚೆಯನ್ನು ಮೀರಿಸಿ ನಸುನಗೆಯನ್ನು ಬೀರಿ ಮೆರೆಯುತ್ತಿದ್ದಳು. ಆಗಲಾ ಪ್ರಭುವಾದರೋ ಲೀಲಾವಿಲಾಸ ಪೂರಿತವಾದ ದೃಷ್ಟಿಕ್ಷೇಪದಿಂದ ತನ್ನ ಮುಂಗಡೆ ಕೈಗಳನ್ನು ಮುಗಿದು ಬೇರೆಬೇರೆಯಾಗಿಯೇ ಸ್ತುತಿಸುತ್ತ ತಲೆಬಾಗಿನಿಂತಿದ್ದ ಸಿದ್ಧಗಣಮುನಿಗಣಗಳನ್ನೂ, ದೇವಮುನಿಗಳಾದ ಸನಕಸನಂದನಾದಿಗಳನ್ನೂ, ನಾರದಾದಿ ಬ್ರಹ್ಮರ್ಷಿಗಳನ್ನೂ, ದಿವ್ಯಗಾನವನ್ನು ಮಾಡುತ್ತಿದ್ದ ಗಂಧರ್ವರನ್ನೂ ತನ್ನೊಂದು ವಿಲಾಸದಿಂದಲೇ ಅನುಗ್ರಹಿಸುತ್ತ ಅವರ ಸ್ತುತಿಗಾಯನಗಳನ್ನು ಕಿವಿಗೊಟ್ಟು ಕೇಳುತ್ತಿದ್ದನು; ತನ್ನ ರೂಪವನ್ನೇ ಧ್ಯಾನಿಸುತ್ತಲಿದ್ದ ಪ್ರಹ್ಲಾದನೇ ಮೊದಲಾದ ವೈಷ್ಣವಾಗ್ರಣಿಗಳನ್ನು ತನ್ನಲ್ಲಿಯೇ ನೆಟ್ಟಮನಸ್ಸುಳ್ಳವರನ್ನಾಗಿ ಮಾಡುತ್ತಿದ್ದನು; ವಕ್ಷಸ್ಥಳದಲ್ಲಿ ಅತ್ಯಂತವಾಗಿ ಪ್ರಕಾಶಿಸುತ್ತಿರುವ ಕೌಸ್ತುಭಮಣಿಯಲ್ಲಿ ಪ್ರತಿಬಿಂಬಿತರಾದ ದೇವಾದಿದೇವತೆ ಗಳನ್ನೊಳಗೊಂಡು ವಿಶ್ವರೂಪವನ್ನು ಪ್ರಕಟಗೊಳಿಸುತ್ತಿದ್ದನು; ಆ ಪ್ರಭು ವಿನಮೇಲೆ ಅಡಿಗಡಿಗೂ ಪುಷ್ಪವೃಷ್ಟಿಯಾಗುತ್ತಿದ್ದಿತು. ಆ ಪುಷ್ಪವೃಷ್ಟಿಯ ನಡುವೆ ಆತನು ಬಹುವಾಗಿ ಶೋಭಿಸುತ್ತಿದ್ದನು. ಆ ಸ್ವಾಮಿಯ ಸನ್ನಿಧಿ

ಷತ್ಯಂತಂ ವಿವಿಧಂ ನಿತ್ಯಮಂಗಹಾರಮನೋಹರಂ ।
ದಿವ್ಯಲೀಲಾವಿಲಾಸಂ ತಂ ದೃಷ್ಟ್ವಾ ತೌ ದ್ವಿಜಬಾಹುಜೌ ॥ ೧೯ ॥
ಬಭೂವತುಃ ಕ್ಷಣಾತ್ಸರ್ವವಿದ್ಯಾನಾಂ ಪಾರಗೌ ದ್ವಿಜಾಃ ।
ತ್ರಿಃ ಪರಿಕ್ರಮ್ಯ ದೇವೇಶಂ ಕೃತಾಂಜಲಿಪುಟಾವುಭೌ ।
ಸಾಷ್ಟಾಂಗಪಾತಪ್ರಣತೌ ತುಷ್ಟುವಾತೇ ಮುದಾನ್ವಿತೌ ॥ ೨೦ ॥

ಪುಂಡರೀಕ ಉವಾಚ :—

ನಮಸ್ತೇ ಜಗದಾಧಾರ ಸರ್ಗಸ್ಥಿತ್ಯಂತಕಾರಣ ।
ನಾರಾಯಣ ನಮಸ್ತೇಽಸ್ತು ಪರಮಾತ್ಮನ್ಪರಾಯಣ ॥ ೨೧ ॥
ಪರಮಾರ್ಥಸ್ತ್ವಮೇವೈಕೋ ಭವಾಪ್ಯಯವಿವರ್ಜಿತಃ ।
ನಿತ್ಯಾನಂದಸ್ವರೂಪಂ ತ್ವಾಂ ವಿದಂತಿ ಧ್ಯಾನಚಕ್ಷುಷಃ ॥ ೨೨ ॥
ಚಿನ್ಮಾತ್ರಂ ಜಗತಾಮೀಶಮಧಿಷ್ಠಾನಂ ಪರಾತ್ಪರಂ ।
ಕಥಂ ನು ಮೂಢಹೃದಯಾಸ್ತ್ವಾಂ ಜಾನಂತಿ ಸುನಿರ್ಮಲಂ ॥ ೨೩ ॥

---

ಯಲ್ಲಿದ್ದ ಅಪ್ಸರಸಮೂಹವೆಲ್ಲವೂ ಶ್ರೀದೇವಿಯ ಸನ್ನಿಧಿಯ ದೆಸೆಯಿಂದ ಕಾಂತಿ ಕುಗ್ಗಿದ್ದಿತು. ಶಾಶ್ವತನೂ, ಅಂಗಹಾರಾದಿಗಳಿಂದ ಮನೋಹರನೂ, ದಿವ್ಯಲೀಲಾವಿಲಾಸನೂ ಆದ ಆ ಪುರುಷೋತ್ತಮನು ಈ ರೀತಿಯಾಗಿರುವ ಅಪ್ಸರೋಗಣವನ್ನು ನೋಡುತ್ತಿದ್ದನು. ಇಂತಹ ಆ ದೇವದೇವನನ್ನು ಆ ಬ್ರಾಹ್ಮಣ ಕ್ಷತ್ರಿಯರಿಬ್ಬರೂ ಸಂದರ್ಶಿಸಿ ಒಂದು ಕ್ಷಣಕಾಲದಲ್ಲಿಯೇ ಸಕಲ ವಿದ್ಯಾಪಾರಂಗತರಾದರು. ಎಲೈ ವಿಪ್ರರೇ! ಅವರೀರ್ವರೂ ಕೈಮುಗಿದು ಕೊಂಡು ಆ ಸ್ವಾಮಿಗೆ ಮೂರಾವೃತ್ತಿ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಸಂತೋಷಗೊಂಡವರಾಗಿ ಆ ಪ್ರಭುವನ್ನು ಈ ರೀತಿ ಸ್ತುತಿಸಿದರು.

೨೧. ಪುಂಡರೀಕನು ಹೇಳುತ್ತಾನೆ:—"ಜಗತ್ತಿಗೆ ಆಧಾರಭೂತನೂ, ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಕಾರಣನೂ ಆದ ಎಲೈ ಸ್ವಾಮಿಯೇ! ನಿನಗೆ ನಮಸ್ಕಾರವು! ಪರಮಾತ್ಮ! ಸಮಸ್ತಕ್ಕೂ ಪರಾಯಣನಾದ ಓ ನಾರಾಯಣ! ನಿನಗೆ ನಮಸ್ಕಾರವು!

೨೨. ಸುಖದುಃಖರಹಿತನಾದ ನೀನೊಬ್ಬನೇ ಜಗತ್ತಿನಲ್ಲಿ ಪ್ರತಿಯೊಬ್ಬ ಭಕ್ತನೂ ಸಾಧಿಸಬಯಸುವ ಪರಮಾರ್ಥಸ್ವರೂಪವಾದ ಮೋಕ್ಷಸ್ಥಾನವು. ಧ್ಯಾನಚಕ್ಷುಗಳಾದ ಮಹರ್ಷಿಗಳೆಲ್ಲರೂ ನಿತ್ಯಾನಂದಸ್ವರೂಪನಾದ ನಿನ್ನನ್ನು ತಿಳಿದಿರುವರು.

೨೩. ಕೇವಲ ಜ್ಞಾನಸ್ವರೂಪನೂ, ಜಗದೀಶ್ವರನೂ, ಜಗದಧಿಷ್ಠಾನ ಭೂತನೂ, ಪರಾತ್ಪರನೂ, ಅತ್ಯಂತನಿರ್ಮಲನೂ ಆದ ನಿನ್ನನ್ನು ತಿಳಿಗೇಡಿಗಳಾದ ಮಾನವರು ತಿಳಿಯುವುದೆಂತು?

ಕಾಮಾರ್ಥಲಿಪ್ಸಾಸಂಭ್ರಾಂತಚೇತಸೋಽತ್ಯಂತದುಃಖಿನಃ ।
ಗತಾಗತಪಥೇಶ್ರಾಂತಾಃ ಸುಖಭಾಜಃ ಕದಾಚನ ॥ ೨೪ ॥
ಅನುಕಂಪಯ ಮಾಂ ನಾಥ ಸುದೀನಂ ಶರಣಾಗತಂ ।
ಮೂಢಂ ದುಷ್ಕೃತಕರ್ಮಾಣಂ ಪತಿತಂ ಭವಸಾಗರೇ ॥ ೨೫ ॥
ಕೋಽನ್ಯಸ್ತ್ವತ್ಸದೃಶೋ ಬಂಧುರ್ಬ್ರಹ್ಮಾಂಡೇ ನಾಥ ವರ್ತತೇ ।
ಸ್ವಕರ್ತವ್ಯಾನಪೇಕ್ಷೋ ಯೋ ದೀನಾನಾಥದಯಾಲುಕಃ ॥ ೨೬ ॥
ಉಚ್ಚಾವಚಭ್ರಮಾದ್ದುಃಖಂ ಜಲಯಂತ್ರಘಟೀಮಿವ ।
ಅಜಸ್ರಮಧಿಕರ್ತಾರಂ ಪರಿತ್ರಾಹಿ ಕೃಪಾಂಬುಧೇ ॥ ೨೭ ॥
ಯೋಗಕ್ಷೇಮಾಭಿಸಂಧಾನಾ ಯೇ ಮೂಢಾಸ್ತ್ವಾಮುಪಾಸತೇ ।
ಲೀಲಾವಿಮುಕ್ತಿದಂ ತೇ ವೈ ತ್ವನ್ಮಾಯಾಪರಿಮೋಹಿತಾಃ ॥ ೨೮ ॥
ನಾರಾಯಣೇತಿ ತ್ವನ್ನಾಮ ಕೀರ್ತಿತಂ ತು ಯದೃಚ್ಛಯಾ ।
ತ್ವತ್ತೋಽಧಿಕಂ ಜಗನ್ನಾಥ ಚತುರ್ವರ್ಗೈಕಸಾಧನಂ ॥ ೨೯ ॥

---

೨೪. ತೃತೀಯ ಪುರುಷಾರ್ಥವಾದ ಕಾಮದಲ್ಲಿಯೇ ಆಸಕ್ತರಾಗಿ ಭ್ರಾಂತಿಗೊಂಡ ಮನಸ್ಸುಳ್ಳವರಾಗಿ, ಅತ್ಯಂತ ದುಃಖಿತರಾಗಿ ಎಲ್ಲರೂ ಹೋಗಿಬರುವ ಜನನಮರಣಮಾರ್ಗದಲ್ಲಿ ನಡೆನಡೆದು ಆಯಾಸಗೊಂಡಿರುವವರು ಎಂದಿಗಾದರೂ ಸುಖಕ್ಕೆ ಪಾತ್ರರಾಗುವುದುಂಟೆ?

೨೫. ಓ ಸ್ವಾಮಿಯೇ! ಬಹಳ ದೀನನಾಗಿ ನೀನೇ ಗತಿಯೆಂದು ನಿನ್ನನ್ನೇ ಶರಣುಹೊಕ್ಕಿರುವವನೂ, ಮೂಢನೂ, ಪಾಪಕರ್ಮಗಳನ್ನೇ ಮಾಡಿ ಭವಸಾಗರದಲ್ಲಿ ಬಿದ್ದಿರುವವನೂ ಆದ ನನ್ನಲ್ಲಿ ಕೃಪೆದೋರು.

೨೬. ಎಲೈ ಜಗನ್ನಾಥನೇ! ನಿನಗೆ ಸಮಾನವಾದ ಬಂಧುವು ಈ ಬ್ರಹ್ಮಾಂಡದಲ್ಲಿ ಮತ್ತಾವನು ತಾನೆ ಇರುವನು? ನೀನು ಸ್ವಕರ್ತವ್ಯದಲ್ಲಿ ಅಪೇಕ್ಷೆಯಿಲ್ಲದವನಾಗಿ ದೀನರನ್ನೂ, ಅನಾಥರನ್ನೂ ಅನುಗ್ರಹಿಸುವ ದಯಾಳುವಾಗಿರುವೆ!

೨೭. ಎಲೈ ಕೃಪಾಸಾಗರನೇ! ಎಲ್ಲೆಮಿೀರಿದ ಚಿತ್ತಭ್ರಮೆಯಿಂದ, ಜಲಯಂತ್ರದ ಗಡಿಗೆಯಂತೆ ಸಂತತವೂ ದುಃಖವನ್ನುಂಟುಮಾಡಿಕೊಳ್ಳುತ್ತಿರುವ ನನ್ನನ್ನು ಕಾಪಾಡು.

೨೮. ಯಾವ ಮೂಢರು ಲೀಲೆಯಿಂದಲೇ ಮೋಕ್ಷವನ್ನು ದಯೆಗೈಯುವ ನಿನ್ನನ್ನು ತಂತಮ್ಮ ಯೋಗಕ್ಷೇಮಗಳಿಗಾಗಿಯೆ ಉಪಾಸಿಸುತ್ತಾರೆಯೋ ಅವರು ನಿನ್ನ ಮಾಯೆಯಿಂದ ಮೋಹಗೊಂಡವರೇ ಸರಿ.

೨೯. ಎಲೈ ಸ್ವಾಮಿಯೇ! ಆಕಸ್ಮಿಕವಾಗಿ ಒಮ್ಮೆ ಮಾತ್ರ ನುಡಿದ ನಾರಾಯಣ ಎಂಬ ನಿನ್ನ ನಾಮವು ಧರ್ಮಾರ್ಥಕಾಮಮೋಕ್ಷಗಳನ್ನು ಸಾಧಿಸುವುದರಲ್ಲಿ ನಿನಗಿಂತಲೂ ಅಧಿಕವಾದುದು.

ತ್ವಂ ತು ತೈಸ್ತೈಃ ಪೃಥಗ್ಯೈಜ್ಞೈಸ್ತಾಸ್ತಾಃ ಸಿದ್ಧೀಃ ಪ್ರಯಚ್ಛಸಿ ।
ತ್ವಮೇಕಃ ಶರಣಂ ನಾಥ ಪತಿತಾನಾಂ ಭವಾರ್ಣವೇ ॥ ೩೦ ॥
ಜ್ಞಾನನೌಕಾ ಸಮಾರೂಢಃ ಕರುಣಾಕ್ಷೇಪಣೀಕರಃ ।
ಪರಂ ಪಾರಂ ಪ್ರಭೋ ನೇತುಂ ಸಂಸಾರಾಬ್ಧೇರ್ವಿಚೇತನಂ ॥ ೩೧ ॥
ತ್ವಮೇಕ ಈಶಿಷೇ ಭಕ್ತ್ಯಾಽನನ್ಯಯಾ ಪರಿಚಿಂತಿತಃ ।
ಯೇಽನ್ಯೇ ಮುಕ್ತಿಪ್ರದಾ ದೇವಾಃ ಶಾಸ್ತ್ರೇಷು ಪರಿನಿಷ್ಠಿತಾಃ ॥ ೩೨ ॥
ದುಃಖಾಬ್ಧಿಕುಂಭಯೋನಿಂ ತೇ ತ್ವದ್ಭಕ್ತಿಂ ಪ್ರಾಪಯಂತಿ ವೈ ॥ ೩೩ ॥
ತನ್ಮೇ ಪ್ರಸೀದ ಭಗವನ್ಪದಪಂಕಜೇ ತೇ
ಭಕ್ತಿಂ ದೃಢಾಂ ವಿತರ ನಾಥ ಭವಾಬ್ಧಿಮುಚ್ಚೈಃ ।
ಘೋರಂ ಸುದುಸ್ತರಮಮುಂ ಹಿ ಯಯಾ ತರೇಯ-
ಮಷ್ಟಾಂಗಯೋಗಜನಿತಶ್ರಮವರ್ಜಿತೋಽಪಿ ॥ ೩೪ ॥
ಧರ್ಮಾರ್ಥಕಾಮ ನಿಚಯೈಃ ಕುಮತಿಪ್ರಗೃಹ್ಯೈಃ
ಕ್ಷುದ್ರೈರಮೀಭಿರಹಿತಾಲ್ಪಸುಖೈರ್ನ ಕಾರ್ಯಂ ।
ಅಜ್ಞಾಪಯಾಂಘ್ರಿನಲಿನದ್ವಯಚಿಂತನೇಽದ್ಯ
ಸಾಂದ್ರಾನುವರ್ಧಿತಸುಖಾರ್ಣವಮಜ್ಜನಂ ಮೇ ॥ ೩೫ ॥

---

೩೦. ಎಲೈ ಜಗನ್ನಾಥನೇ! ನೀನಾದರೋ ಬೇರೆ ಬೇರೆಯಾಗಿರುವ ಆ ಆ ಯಜ್ಞಗಳಿಗೆ ತಕ್ಕಂತೆ ಸಿದ್ಧಿಗಳನ್ನು ಅನುಗ್ರಹಿಸುವೆ. ಎಲೈ ಸ್ವಾಮಿಯೇ! ಈ ಭವಾರ್ಣವದಲ್ಲಿ ಬಿದ್ದಿರುವವರೆಲ್ಲರಿಗೂ ನೀನೊಬ್ಬನೇ ಶರಣ್ಯನು!

೩೧–೩೩. ಅನನ್ಯವಾದ ಭಕ್ತಿಯಿಂದ ಧ್ಯಾನಿಸಲ್ಪಟ್ಟು ಜ್ಞಾನವೆಂಬ ಹಡಗನ್ನೇರಿ, ಕರುಣೆಯೆಂಬ ಹುಟ್ಟನ್ನು ಕೈಯಲ್ಲಿ ಹಿಡಿದು ಮಾನವರನ್ನು ಸಂಸಾರಸಾಗರದ ಪಾರವನ್ನು ಮುಟ್ಟಿಸುವ ಪ್ರಭುವು ನೀನೇ! ಮುಕ್ತಿಪ್ರದರೆಂದು ಶಾಸ್ತ್ರಗಳಲ್ಲಿ ನಿರೂಪಿತರಾಗಿರುವ ಇತರ ದೇವತೆಗಳೆಲ್ಲರೂ ದುಃಖ ಸಮುದ್ರಕ್ಕೆ ಅಗಸ್ತ್ಯಪ್ರಾಯನಾದ ನಿನ್ನಲ್ಲಿ ಭಕ್ತಿಯಿರುವಂತೆ ಮಾಡುವರು.

೩೪. ಆದುದರಿಂದಲೈ ಭಗವಂತನೇ! ಅಷ್ಟಾಂಗಯೋಗದಿಂದುಂಟಾದ ಯಾವ ಶ್ರಮವೂ ಇಲ್ಲದಿರುವ ನಾನು ಯಾವುದರಿಂದ ಘೋರವೂ, ದಾಟಲಶಕ್ಯವೂ ಆದ ಈ ಭವ ಮಹಾಸಾಗರವನ್ನು ದಾಟುವೆನೋ ಅಂತಹ ನಿನ್ನ ಪಾದಕಮಲಗಳಲ್ಲಿ ದೃಢವಾದ ಭಕ್ತಿಯನ್ನು ಕರುಣಿಸು; ಪ್ರಸನ್ನನಾಗು!

೩೫. ಕೇವಲ ಕುಮತಿಗಳಿಂದ ಮಾತ್ರ ಗ್ರಾಹ್ಯಗಳೆನಿಸುವ ಧರ್ಮಾರ್ಥ ಕಾಮಗಳ ಗುಂಪುಗಳಿಂದ ನನಗಾವಕಾರ್ಯವೂ ಇರುವುದಿಲ್ಲವು. ಆದುದರಿಂದ ಎಲೈ ಪ್ರಭುವೇ! ನಿನ್ನ ಪಾದಕಮಲಗಳ ಚಿಂತನೆಯಲ್ಲಿ ಯಾವಾಗಲೂ ತೊಡಗಿ ಏಕಪ್ರಕಾರವಾಗಿ ವೃದ್ಧಿಗೊಳ್ಳುವ ಸುಖಸಮುದ್ರದಲ್ಲಿ ನಾನು ಮಜ್ಜನಗೈಯುವಂತೆ ಅನುಗ್ರಹಮಾಡು!"

ಸ್ತುತ್ವೇತ್ಥಂ ಜಗದೀಶಸ್ಯ ಪಾದಪದ್ಮಾಂತಿಕೇ ದ್ವಿಜಃ ।
ಪಪಾತ ತ್ರಾಹಿ ಕೃಷ್ಣೇತಿ ವದನ್ಬಾಷ್ಪಾರ್ದ್ರಯಾ ಗಿರಾ ।
ತಸ್ಥೌ ಸ ಪುನರುತ್ಥಾಯ ಕೃತಾಂಜಲಿಪುಟಃಸ್ತುವನ್ ॥ ೩೬ ॥

ಅಂಬರೀಷ ಉವಾಚ:—

ಪ್ರಸೀದ ದೇವ ಸರ್ವಾತ್ಮನ್ನಸಂಖ್ಯೇಯಶಿರೋಭುಜ ।
ಅಸಂಖ್ಯಘ್ರಾಣನಯನ ಪಾಣಿಪಾದ ನಮೋಽಸ್ತು ತೇ ॥ ೩೭ ॥
ಷಟ್‌ತ್ರಿಂಶತ್ತತ್ತ್ವಾತೀತೋಽಸಿ ನಿಷ್ಪ್ರಪಂಚಪ್ರಪಂಚಕಃ ।
ಚತುರ್ವಿಧಜಗದ್ಧಾಮ ವಿಶ್ವಮೂರ್ತೇ ನಮೋಽಸ್ತುತೇ ॥ ೩೮ ॥
ಏಕಪಾದಸ್ತ್ರಿಪಾದಶ್ಚ ತೀರ್ಥಪಾದೋಂತರಿಕ್ಷಪಾತ್ ।
ಯಸ್ಯಪಾದೋದ್ಭವಾ ಗಂಗಾ ಪುನಾತಿ ಭುವನತ್ರಯಂ ॥ ೩೯ ॥
ಬ್ರಹ್ಮಹತ್ಯಾದಿಪಾಪಾನಾಂ ಶೋಧಕಂ ಯಸ್ಯ ನಾಮ ವೈ ।
ಕೀರ್ತಿತಂ ಸರ್ವಶುಭದಂ ನಮಸ್ತಸ್ಮೈ ಶುಭಾತ್ಮನೇ ॥ ೪೦ ॥
ದೇವ ತ್ವನ್ನಾಮಕೀರ್ತ್ಯಾಪಿ ಜಾಯಂತೇ ಸರ್ವಸಿದ್ಧಯಃ ।
ಕೌತುಕಾತ್ತ್ವಾಂ ಹಿ ಮೃಗ್ಯಂತಿ ವಿದ್ವಾಂಸೋ ಬುದ್ಧಿಶಾಲಿನಃ ॥ ೪೧ ॥

---

೩೬. ಎಲೈ ವಿಪ್ರರೇ! ವಿಪ್ರನಾದ ಆ ಅಂಬರೀಷನು ಈ ಪ್ರಕಾರವಾಗಿ ಸ್ತುತಿಸಿ ಆ ಜಗದೀಶ್ವರನ ಪಾದಕಮಲಗಳ ಬಳಿ ಕಂಬನಿಗರೆದು ಗದ್ಗದವಾದ ಧ್ವನಿಯಿಂದ "ಓ ಕೃಷ್ಣ! ರಕ್ಷಿಸು" ಎಂದು ಹೇಳುತ್ತ ನೆಲದಲ್ಲಿಬಿದ್ದು ಆ ಬಳಿಕ ಮೇಲಕ್ಕೆದ್ದು ಅಂಜಲಿಬದ್ಧನಾಗಿ ಸ್ತುತಿಸುತ್ತ ನಿಂತನು.

೩೭. ಅಂಬರೀಷನು ಹೇಳುತ್ತಾನೆ:— "ಎಲೈ ಸರ್ವಾತ್ಮಕನೇ! ಅಸಂಖ್ಯಾತವಾದ ಶಿರಸ್ಸುಗಳೂ, ಭುಜಗಳೂ, ಅಸಂಖ್ಯಾತವಾದ ನಾಸಿಕೆಗಳೂ, ನೇತ್ರಗಳೂ, ಕೈಗಳೂ, ಪಾದಗಳೂ ಉಳ್ಳ ನಿನಗೆ ನಮೋ ನಮಃ.

೩೮. ಎಲೈ ಸ್ವಾಮಿಯೇ! ನೀನು ಮೂವತ್ತಾರು ತತ್ತ್ವಗಳಿಗೂ ಅತೀತನಾಗಿರುವೆ. ನಿಷ್ಪ್ರಪಂಚ ಪ್ರಪಂಚಕನಾಗಿರುವೆ! ಅಂಡಜ ಸ್ವೇದಜೋದ್ಭಿಜ್ಜ ರಾಯುಜಗಳೆಂಬ ಚತುರ್ವಿಧ ಜಗತ್ಸೃಷ್ಟಿಗೆ ನೆಲೆಮನೆಯಾಗಿರುವೆ! ಇಂತಹ ವಿಶ್ವಮೂರ್ತಿಯಾದ ನಿನಗೆ ನಮಸ್ಕಾರವು.

೩೯–೪೦. ಏಕಪಾದನೂ, ತ್ರಿಪಾದನೂ, ತೀರ್ಥಪಾದನೂ, ಅಂತರಿಕ್ಷಪಾದನೂ ನೀನೇ ಆಗಿರುವೆ. ನಿನ್ನ ಪಾದಸಂಭವೆಯಾದ ಗಂಗೆಯು ಭುವನತ್ರಯವನ್ನೂ ಪಾವನಗೊಳಿಸುತ್ತಿರುವಳು. ಯಾವ ನಿನ್ನ ನಾಮವು ಬ್ರಹ್ಮಹತ್ಯಾದಿ ಪಾಪಗಳನ್ನು ಶೋಧಿಸುವುದಾಗಿರುವುದೋ, ಯಾವುದನ್ನುಕೀರ್ತಿಸಿದುದಾದರೆ ಸಮಸ್ತ ಸನ್ಮಂಗಳಗಳನ್ನೂ ನೀಡುವುದೋ ಅಂತಹ ಶುಭಾತ್ಮನಾದ ನಿನಗೆ ನಮಸ್ಕಾರವು.

೪೧. ದೇವ! ನಿನ್ನ ನಾಮಸಂಕೀರ್ತನದಿಂದ ಸಕಲ ಸಿದ್ಧಿಗಳೂ ಉಂಟಾ

ನಾಥ ತ್ವತ್ಪಾದಸಲಿಲಂ ಸಂಶ್ರಯಾತ್ತಾಪಹಾರಕಂ ।
ತಾಪತ್ರಯಾಭಿಭೂತಸ್ಯ ಭಕ್ತಿಂ ಮೇಽತ್ರ ದೃಢಾಂ ಕುರು ॥ ೪೨ ॥
ಅನನ್ಯಸ್ವಾಮಿನೋ ಮೇಽದ್ಯ ನಾಸ್ತ್ಯನ್ಯತ್ಪ್ರಾರ್ಥನೀಯಕಂ ।
ಪ್ರಣಿಪತ್ಯ ಜಗನ್ನಾಥ ತ್ವಾಂ ಪ್ರಯಾಚೇ ಸಹಸ್ರಧಾ ॥ ೪೩ ॥
ಸಮಸ್ತ ಪುರುಷಾರ್ಥಸ್ಯ ಬೀಜಂ ತ್ವತ್ಪಾದಪಂಕಜೇ ।
ಯಾವತ್ಪ್ರಾಣಾನ್ಧಾರಯಾಮಿ ತಾವದ್ಭಕ್ತಿರ್ದೃಢಾಸ್ತು ಮೇ ॥ ೪೪ ॥
ಸೃಷ್ಟಿಂ ವಿನಿರ್ಮಮೇ ಚೇಮಾಂ ಯಯಾಭಕ್ತ್ಯಾ ಪಿತಾಮಹಃ ।
ಸಂಹರಂತ್ಯಖಿಲಂ ರುದ್ರೋ ಲಕ್ಷ್ಮೀಶ್ಚೈಶ್ವರ್ಯದಾಯಿನೀ ॥ ೪೫ ॥
ದೀನಾನುಕಂಪಿಂಸ್ತ್ವಾಂ ಭಕ್ತಿಂ ಪ್ರಾರ್ಥಯೇಽನನ್ಯಮಾನಸಃ ।
ಅನಾದ್ಯವಿದ್ಯಾಪಂಕೇಽಸ್ಮಿನ್ಸುದೃಢೇ ದುಸ್ತರೇ ಭೃಶಂ ॥ ೪೬ ॥

---

ಗುತ್ತವೆ. ಆದರೆ ಜ್ಞಾನಿಗಳಾದ ಪಂಡಿತರು ಅಂತಹ ನಿನ್ನ ನಾಮಸ್ಮರಣೆ ಯನ್ನು ಮಾಡದೆ ಮೂಢರಾಗಿ ಕೌತುಕದಿಂದ ನಿನ್ನನ್ನು (ಎಲ್ಲೆಲ್ಲಿಯೋ) ಹುಡುಕುತ್ತಾರೆ.

೪೨–೪೪. ಎಲೈ ಜಗನ್ನಾಥನೇ! ನಿನ್ನ ಪಾದಸಲಿಲವನ್ನು ಆಶ್ರಯಿಸಿದರೆ ತಾಪವನ್ನು ಕಳೆಯುತ್ತದೆ. ಇಂತಹ ದಿವ್ಯಸಲಿಲಪೂರ್ಣವಾದ ನಿನ್ನ ಆ ಭವ್ಯಪಾದ ಗಳಲ್ಲಿ, ತಾಪತ್ರಯಗಳಿಂದ ತಿರಸ್ಕೃತನಾಗಿರುವ ನನಗೆ ಭಕ್ತಿಯು ಸ್ಥಿರವಾಗಿರು ವಂತೆ ಅನುಗ್ರಹಿಸು. ಅನನ್ಯಸ್ವಾಮಿಯಾದ ನಿನ್ನನ್ನು ಪಡೆದಿರುವ ನಾನು ನಿನ್ನಲ್ಲಿ ಬೇರಾವ ಬಗೆಯ ಪ್ರಾರ್ಥನೆಯನ್ನೂ ಮಾಡತಕ್ಕುದಿರುವುದಿಲ್ಲವು. ಓ ಜಗನ್ನಾಥ! ಆದರೆ ಇದೋ ನಾನೀಗ ನಿನಗೆ ಪ್ರಣಾಮವಂ ಮಾಡಿ ಸಹಸ್ರಧಾ ಯಾಚಿಸು ತ್ತೇನೆ: ನಾನೆದುವರೆಗೆ ಪ್ರಾಣಗಳನ್ನು ಧರಿಸಿರುತ್ತೇನೆಯೋ ಅದುವರೆಗೂ ನನಗೆ ಸಕಲ ಪುರುಷಾರ್ಥಗಳಿಗೂ ಬೀಜರೂಪವಾಗಿರುವ ನಿನ್ನ ಪಾದಕಮಲದಲ್ಲಿ, ದೃಢವಾದ ಭಕ್ತಿಯು ನೆಲಗೊಂಡಿರಲಿ.

೪೫. ಓ ಪರಮಾತ್ಮಾ! ಯಾವ ನಿನ್ನ ಪಾದಕಮಲಗಳಲ್ಲಿನ ದೃಢಭಕ್ತಿ ಯಿಂದ ಪಿತಾಮಹನಾದ ಚತುರ್ಮುಖಬ್ರಹ್ಮನು ಈ ಜಗತ್ತನ್ನು ನಿರ್ಮಾಣ ಮಾಡಿದನೋ, ರುದ್ರನು ಸಮಸ್ತವನ್ನೂ ಲಯಗೊಳಿಸುವನೋ, ನಿನ್ನ ಅನ ಪಾಯಿನಿಯಾದ ಲಕ್ಷ್ಮೀದೇವಿಯು ಸಮಸ್ತರಿಗೂ ಐಶ್ವರ್ಯವನ್ನು ದಯೆಪಾಲಿ ಸುವವಳಾಗಿರುವಳೋ, ಅಂತಹವುಗಳಲ್ಲಿ ನನಗೆ ಸ್ಥಿರವಾದ ಭಕ್ತಿಯಿರಲಿ.

೪೬–೪೭. ಎಲೈ ದೀನಶರಣ್ಯನೇ! ಇದೋ ನಾನು ಅನನ್ಯಮನಸ್ಕನಾಗಿ ನಿನ್ನಲ್ಲಿ ಭಕ್ತಿಯನ್ನೇ ಪ್ರಾರ್ಥಿಸುತ್ತಿರುವೆನು. ಎಲೈ ಜಗನ್ನಾಥನೇ! ಬಹಳ ಬಲವಾದುದೂ, ದುಸ್ತರವಾದುದೂ ಆಗಿ, ಅನಾದಿಯಾದ ಅಜ್ಞಾನವೆಂಬ ಆಳವಾದ ಕೆಸರಿನಲ್ಲಿ ಬಹಳವಾಗಿ ಮುಳುಗಿ ಆಸರೆಯೋ ಇಲ್ಲದೆ ನಾಶವಾಗುತ್ತಿರುವ

ನಿಮಗ್ನಸ್ಯ ಜಗನ್ನಾಥ ನಿರಾಲಂಬಂ ಪ್ರಣಶ್ಯತಃ ।
ಮಹಾಮಹಿಮ್ನಸ್ತ್ವದ್ಭಕ್ತೇರ್ನಾನ್ಯದಸ್ತಿ ಪರಾಯಣಂ ॥ ೪೭ ॥
ಶ್ರುತಿಸ್ಮೃತ್ಯಾದಿ ಸಂಭಿನ್ನಮಾರ್ಗಾಃ ಸಂಮೋಹಹೇತವಃ ।
ತ್ವದ್ಭಕ್ತಿಮುಪಹಾಯೈತೇ ನ ಪ್ರವರ್ತಿತುಮೀಶ್ವರಾಃ ॥ ೪೮ ॥
ಅನನ್ಯಶರಣಂ ಸ್ವಾಮಿನ್ನನುಕಂಪಯ ಮಾಂ ವಿಭೋ ।
ಇತಿಸ್ತುವಜ್ಜಗನ್ನಾಥಪಾದಪದ್ಮಾಂತಿಕೇ ಮುದಾ ॥ ೪೯ ॥
ಪಪಾತ ದಂಡವದ್ಭೂಮೌ ಪ್ರಸೀದೇತಿ ವದನ್ಮುಹುಃ ।
ತತಸ್ತೇ ದೇವತಾಃ ಸರ್ವೇ ಸ್ತುತ್ವಾ ಸಂಪೂಜ್ಯ ಕೇಶವಂ ॥ ೫೦ ॥
ತಲ್ಲೀಲಾಪಾಂಗಸಂತುಷ್ಟಾಃ ಪ್ರಯಾತಾಃ ತ್ರಿದಿವಂ ಪುನಃ ।
ತತ ಉನ್ಮೀಲಿತದೃಶೌ ಪುಂಡರೀಕಾಂಬರೀಷಕೌ ॥ ೫೧ ॥
ಮಾಯಯಾ ಮೋಹಿತೌ ವಿಷ್ಣೋಃ ಸ್ವಪ್ನದೃಷ್ಟಮಬುಧ್ಯತಾಂ ।
ಯಾಂ ದೃಷ್ಟ್ವಾ ದಿವ್ಯಲೀಲಾಂ ಹಿ ಸಾಕ್ಷಾತ್ಸಲಲಚಕ್ಷುಷಾ ॥ ೫೨ ॥
ಪುನರ್ಮಾನುಷಭಾವೌ ತೌ ದಿವ್ಯಸಿಂಹಾಸನಸ್ಥಿತಂ ।
ನೀಲಜೀಮೂತಸಂಕಾಶಂ ಫುಲ್ಲಪದ್ಮಾಯತೇಕ್ಷಣಂ ॥ ೫೩ ॥

---

ನನಗೆ ಮಹಾಮಹಿಮೆಯುಳ್ಳ ನಿನ್ನ ಭಕ್ತಿಯೊಂದನ್ನುಳಿದು ಬೇರೊಂದು ಗತಿಯೇ ಇರುವುದಿಲ್ಲವು !

೪೮-೫೧. ಎಲೈ ಸ್ವಾಮಿಯೇ ! ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿ ನಿರೂಪಿತವಾದ ಮೋಕ್ಷಮಾರ್ಗಗಳು ಭಿನ್ನಭಿನ್ನವಾಗಿರುವುವು. ಅವುಗಳಾವುವೂ ನಿನ್ನ ಭಕ್ತಿಯಿಲ್ಲದಿದ್ದರೆ ಎಂದಿಗೂ ಮೋಕ್ಷವನ್ನು ದೊರಕಿಸಿಕೊಡಲು ಸಮರ್ಥಗಳಾಗಲಾರವು. ಭೋ ಸ್ವಾಮಿನ್ ! ಮತ್ತಾರೂ ರಕ್ಷಕರಿಲ್ಲದ ಅನಾಥನಾದ ನನ್ನಲ್ಲಿ ದಯೆತೋರು, ವಿಭೋ !!"—ಎಲೈ ವಿಪ್ರರೇ ! ಅಂಬರೀಷನು ಈ ಪ್ರಕಾರವಾಗಿ ಸ್ತುತಿಸುತ್ತ ಜಗನ್ನಾಥಸ್ವಾಮಿಯ ಪಾದಪದ್ಮಗಳ ಬಳಿ "ಪ್ರಭುವೇ ! ಪ್ರಸನ್ನನಾಗು" ಎಂದು ಬಾರಿ ಬಾರಿಗೂ ನುಡಿಯುತ್ತ ದಂಡದಂತೆ ನೆಲದಲ್ಲಿ ಬಿದ್ದನು. ತರುವಾಯ ಅಲ್ಲಿದ್ದ ದೇವತೆಗಳೆಲ್ಲರೂ ಆ ಕೇಶವನನ್ನು ಸ್ತುತಿಸಿ, ಪೂಜಿಸಿ, ಆ ಸ್ವಾಮಿಯ ವಿಲಾಸಯುಕ್ತವಾದ ಅಪಾಂಗವೀಕ್ಷಣದಿಂದ ಸಂತುಷ್ಟರಾಗಿ ಮತ್ತೆ ಸ್ವರ್ಗಲೋಕಕ್ಕೆ ಹಿಂತಿರುಗಿದರು. ಆಗ ಪುಂಡರೀಕಾಂಬರೀಷರೀರ್ವರೂ ಮುಗಿದ ಕಣ್ಣುಗಳನ್ನು ಬಿಟ್ಟು ನೋಡಿದರು.

೫೨. ಆ ಭಗವಂತನ ಯಾವ ದಿವ್ಯಲೀಲೆಯನ್ನು ಅವರೀರ್ವರೂ ಸಾಕ್ಷಾತ್ತಾಗಿಯೇ ಚರ್ಮಚಕ್ಷುಸ್ಸಿನಿಂದ ಕಂಡಿದ್ದರೋ ಅದನ್ನೇ ವಿಷ್ಣುಮಾಯೆಯಿಂದ ಮೋಹಿತರಾಗಿ ಸ್ವಪ್ನದಲ್ಲಿ ಕಂಡುದನ್ನಾಗಿ ತಿಳಿದರು.

೫೩-೫೮. ಅವರೀರ್ವರೂ ಮತ್ತೆ ಮಾನುಷಭಾವವನ್ನು ಹೊಂದಿ, ದಿವ್ಯ ಸಿಂಹಾಸನವನ್ನು ಮಂಡಿಸಿ, ನೀಲಮೇಘದಂತೆ ಶ್ಯಾಮಲವರ್ಣನಾಗಿ,

**ಶೋಣಾಧರಂ ಚಾರುನಾಸಂ ದಿವ್ಯಕುಂಡಲಭೂಷಿತಂ ।**
**ಶಂಖಚಕ್ರಗದಾಪದ್ಮಧಾರಿಣಂ ವನಮಾಲಿನಂ ॥ ೫೪ ॥**
**ಪೀನೋರಸಾಂ ಚಾರುಹಾರಮನರ್ಘ್ಯಮುಕುಟೋಜ್ಜ್ವಲಂ ।**
**ಶ್ರೀವತ್ಸಕೌಸ್ತುಭೋರಸ್ಕಂ ದಿವ್ಯಾಂಗದ ವಿಭೂಷಿತಂ ॥ ೫೫ ॥**
**ಪ್ರಲಂಬಬಾಹುಂ ದೀನಾರ್ತಪರಿತ್ರಾಣಸಮುದ್ಯತಂ ।**
**ಸುವರ್ಣಸೂತ್ರಸಂನದ್ಧಮಧ್ಯಗ್ರಂಥಿಮಣೀಯುತಂ ॥ ೫೬ ॥**
**ದಿವ್ಯಪೀತಾಂಬರಧರಂ ದಿವ್ಯಸ್ರಗ್ಗಂಧವಿಭೂಷಿತಂ ।**
**ಸ್ವರ್ಣಪದ್ಮಾಸನಾಸೀನಂ ಸರ್ವಾಂಗಾಲಿಂಗಿತಶ್ರಿಯಂ ॥ ೫೭ ॥**
**ಪ್ರಪನ್ನಸಂತಾಪಹರಂ ಸುಧಾಸಾಗರಮುಲ್ಬಣಂ ।**
**ಅಶೇಷವಾಂಛಾಫಲದಂ ಕಲ್ಪವೃಕ್ಷಂ ಸುಪುಷ್ಪಿತಂ ॥ ೫೮ ॥**
**ದಕ್ಷಪಾರ್ಶ್ವಸ್ಥಿತಂ ತಸ್ಯ ದದೃಶಾತೇ ಹಲಾಯುಧಂ ।**
**ಬಿಭರ್ತಿಯೇನ ಬ್ರಂಹ್ಮಾಂಡಂ ಬಲೇನ ಮಹತಾವಿಭುಃ ॥ ೫೯ ॥**
**ತಂ ಬಲಂ ನಾಗರಾಜಾನಂ ಫಣಾಸಪ್ತಕಮಂಡಿತಂ ।**
**ಕೈಲಾಸಶಿಖರೋತ್ತುಂಗಂ ಧವಳಂ ಕುಂಡಲೋಜ್ಜ್ವಲಂ ॥ ೬೦ ॥**

---

ಅರಳಿದ ಕೆಂದಾವರೆಯಂತೆ ವಿಶಾಲವಾದ ಕಂಗಳಿಂದೊಪ್ಪಿ, ಕೆಂದುಟಿಗಳೂ, ಸೊಗಸಾದ ಮೂಗೂ ಉಳ್ಳವನಾಗಿ, ದಿವ್ಯವಾದ ಕರ್ಣಕುಂಡಲಗಳಿಂದ ಭೂಷಿತನಾಗಿ, ಶಂಖಚಕ್ರಗದಾಪದ್ಮಗಳನ್ನು ನಾಲ್ಕು ಕೈಗಳಲ್ಲಿ ಧರಿಸಿ ವನಮಾಲಾಲಂಕೃತನಾಗಿ, ಉಬ್ಬಿದ ಉರಸ್ಥಳವುಳ್ಳವನೂ, ಮನೋಹರವಾದ ಹಾರವುಳ್ಳವನೂ, ಅಮೂಲ್ಯವಾದಕಿರೀಟದಿಂದ ಬೆಳಗುತ್ತಿರುವವನೂ, ಶ್ರೀವತ್ಸಕೌಸ್ತುಭಸಮನ್ವಿತವಾದ ವಕ್ಷಸ್ಥಳದಿಂದೊಪ್ಪಿ, ದಿವ್ಯಾಂಗದವಿಭೂಷಿತನಾಗಿ, ನಿಡಿದಾದ ತೋಳುಗಳುಳ್ಳವನಾಗಿ, ದೀನರ ಸಂಕಟಗಳನ್ನು ಪರಿಹರಿಸಲು ಅವತರಿಸಿರುವವನೂ, ಚಿನ್ನದ ಜನಿವಾರದ ನಡುವೆ ವಿರಾಜಿಸುತ್ತಿರುವ ಮಧ್ಯ ಗ್ರಂಥಮಣಿಯಿಂದ ಕೂಡಿರುವವನೂ, ದಿವ್ಯ ಪೀತಾಂಬರಧರನೂ, ದಿವ್ಯಪುಷ್ಪಮಾಲೆಗಳಿಂದಲೂ, ಸುಗಂಧದಿಂದಲೂ ಭೂಷಿತನಾಗಿರುವವನೂ, ಸ್ವರ್ಣ ಪದ್ಮಾಸನದಲ್ಲಿ ಕುಳಿತು ಸರ್ವಾಂಗಗಳಲ್ಲಿಯೂ ಶ್ರೀದೇವಿಯಿಂದ ಆಲಿಂಗಿತನಾಗಿರುವವನೂ, ಪ್ರಪನ್ನರ ಸಂತಾಪವನ್ನು ನೀಗುವವನೂ, ಅಪಾರ ಸುಧಾ ಸಮುದ್ರಪ್ರಾಯನೂ, ಸಮಸ್ತಾಭೀಷ್ಟಗಳನ್ನು ಸಲ್ಲಿಸಿಕೊಡುವ ಹೂವೊಳೆತ ಕಲ್ಪವೃಕ್ಷಸ್ವರೂಪನೂ ಆದ ಆ ಜಗನ್ನಾಥನ ಮೂರ್ತಿಯನ್ನು ಕಂಡರು.

೫೯. ಆ ಸ್ವಾಮಿಯ ಬಲಗಡೆಯಲ್ಲಿ ನಿಜಬಲದಿಂದಲೇ ಬ್ರಹ್ಮಾಂಡವನ್ನು ಭರಿಸಿರುವ ಹಲಾಯುಧಪಾಣಿಯಾದ ಬಲರಾಮ ವಿಭುವನ್ನು ಕಂಡರು.

೬೦–೬೨. ನಾಗರಾಜನಾದ ಆ ಬಲದೇವನು ಏಳು ಹೆಡೆಗಳಿಂದೊಪ್ಪಿ, ಕೈಲಾಸಗಿರಿಯ ಶಿಖರದಂತೆ ಉನ್ನತನಾಗಿ, ಬೆಳ್ಳಗೆ ಬೆಳಗುತ್ತ, ಕರ್ಣಕುಂಡಲ

ವಿಚಿತ್ರವನಮಾಲಾಢ್ಯಂ ದಿವ್ಯನೀಲನಿಚೋಲಿನಂ ।
ಸತತಂ ವಾರುಣೀಕ್ಷೀಬಘೂರ್ಣೋನ್ನಯನಪಂಕಜಂ ॥ ೬೧ ॥
ನಿಮ್ನಪೃಷ್ಠೋನ್ನತೋರಸ್ಕಂ ಕುಂಡಲೀಕೃತವಿಗ್ರಹಂ ।
ಶಂಖ ಚಕ್ರ ಗದಾಪದ್ಮಸಮುಜ್ಜ್ವಲಚತುರ್ಭುಜಂ ।
ನಾನಾಲಂಕಾರರುಚಿರಂ ನತಕಲ್ಮಷನಾಶನಂ ॥ ೬೨ ॥
ತಯೋರ್ಮಧ್ಯೇ ಸ್ಥಿತಾಂ ಭದ್ರಾಂ ಸುಭದ್ರಾಂ ಕುಂಕುಮಾರುಣಾಂ ॥
ಸರ್ವಲಾವಣ್ಯವಸತಿಂ ಸರ್ವದೇವನಮಸ್ಕೃತಾಂ ।
ಲಕ್ಷ್ಮೀಲಕ್ಷ್ಮೀಶಹೃದಯಪಂಕಜಸ್ಥಾಂ ಪೃಥಕ್‌ಸ್ಥಿತಾಂ ॥ ೬೪ ॥
ವರಾಬ್ಜಧಾರಿಣೀಂ ದೇವೀಂ ದಿವ್ಯನೇಪಥ್ಯಭೂಷಣಾಂ ।
ಪ್ರಪನ್ನಕಲ್ಪಲತಿಕಾಂ ಸರ್ವಕಲ್ಮಷನಾಶಿನೀಂ ।
ಸಂಸಾರಾರ್ಣವಮಗ್ನಾನಾಂ ತಾರಿಣೀಂ ದೇವತಾರಿಣೀಂ ॥ ೬೫ ॥
ವಾಮಪಾರ್ಶ್ವಸ್ಥಿತಂ ವಿಷ್ಣೋರದ್ರಾಕ್ಷ್ಯಾಂ ಚಕ್ರಮುತ್ತಮಂ ॥ ೬೬ ॥

---

ಗಳಿಂದ ಉಜ್ಜ್ವಲನಾಗಿ, ವಿಚಿತ್ರವಾದ ವನಮಾಲೆಯಿಂದೊಪ್ಪಿ, ದಿವ್ಯನೀಲಾಂಬರಧಾರಿಯಾಗಿ, ಸತತವೂ, ಸುರೆಸವಿದು ತೆಳ್ಳಗಾಗಿ ಆಲುತ್ತಿರುವ ನಯನಕಮಲಗಳುಳ್ಳವನಾಗಿ, ತಗ್ಗಾದ ಪೃಷ್ಠಭಾಗವೂ, ಉನ್ನತವಾದ ಉರಸ್ಥಳವೂ ಉಳ್ಳವನಾಗಿ, ಕುಂಡಾಲಾಕಾರವಾದ ಶರೀರದಿಂದೊಪ್ಪಿ, ಶಂಖ, ಚಕ್ರ, ಗದಾ ಪದ್ಮಗಳಿಂದ ಬೆಳಗುತ್ತಿರುವ ಚತುರ್ಭುಜಗಳುಳ್ಳವನಾಗಿ, ನಾನಾಲಂಕಾರಗಳಿಂದ ಮನೋಹರನಾಗಿ, ನಮಸ್ಕರಿಸಿದ ಭಕ್ತರ ಸಕಲಪಾಪಗಳನ್ನೂ ಕಳೆಯುವವನಾಗಿ ವಿರಾಜಿಸುತ್ತಿದ್ದನು.

೬೩–೬೫. ಇವರೀರ್ವರ ನಡುವೆ ಮಂಗಳಕರೆಯೂ, ಕುಂಕುಮದಂತೆ ಅರುಣವರ್ಣೆಯೂ, ಸಮಸ್ತಲಾವಣ್ಯಕ್ಕೆ ನೆಲೆಯೂ, ಸಕಲದೇವನಮಸ್ಕೃತೆಯೂ, ಲಕ್ಷ್ಮೀಶ ಹೃದಯಪಂಕಜ ನಿವಾಸಿನಿಯಾಗಿದ್ದರೂ, ಬೇರೆಯಾಗಿ ಕಂಗೊಳಿಸುತ್ತಿರುವ ಲಕ್ಷ್ಮೀಸ್ವರೂಪಿಣಿಯೂ, ಕಮಲವನ್ನು ಕೈಯಲ್ಲಿ ಹಿಡಿದಿರುವವಳೂ, ದಿವ್ಯಾಲಂಕೃತೆಯೂ, ಶರಣಾಗತರಿಗೆ ಕಲ್ಪಲತೆಯಂತಿರುವವಳೂ, ಸರ್ವಕಲ್ಮಷನಾಶಿನಿಯೂ, ಸಂಸಾರ ಸಮುದ್ರದಲ್ಲಿ ಮುಳುಗಿರುವ ಮಾನವರನ್ನು ಕಡಹಾಯಿಸುವವಳೂ, ದೇವತೆಗಳನ್ನೂ ಉದ್ಧರಿಸುವವಳೂ ಆದ ಸುಭದ್ರಾದೇವಿಯನ್ನು ಕಂಡರು.

೬೬–೭೮. ಶ್ರೀಜಗನ್ನಾಥಪ್ರಭುವಿನ ವಾಮಪಾರ್ಶ್ವದಲ್ಲಿ ಆತನ ಉತ್ತಮವಾದ ಚಕ್ರಾಯುಧವು ನೆಲಸಿದ್ದುದನ್ನೂ ಆ ಭಕ್ತರೀರ್ವರೂ ಕಂಡರು. ಎಲೈ ವಿಪ್ರರೇ! ಮರದ ತುಂಡುಗಳಿಂದ ನಿರ್ಮಿತವಾಗಿ ಚಿನ್ನದ ಹೊದಿಕೆಗಳಿಂದ ಬೆಳಗುತ್ತ ನಾಲ್ಕು ಬಗೆಯಾಗಿ ನೆಲಸಿದ್ದ ಆ ವಿಷ್ಣುವನ್ನು ಕಂಡು ಆ ಬ್ರಾಹ್ಮಣ

ದಾರ್ವಗ್ರನಿರ್ಮಿತಂ ವಿಪ್ರಾಃ ಸ್ವರ್ಣಭಕ್ತಿಸಮುಜ್ಜ್ವಲಂ ।
ಚತುರ್ಧಾವಸ್ಥಿತಂ ವಿಷ್ಣುಂ ದೃಷ್ಟ್ವಾ ತೌ ದ್ವಿಜಬಾಹುಜೌ ॥ ೬೭ ॥
ಅರುಣೋದಯವೇಲಾಯಾಂ ಶ್ರಮಂ ಸಾರ್ಥಮಮನ್ಯತಾಂ ।
ಸಂಸ್ಮೃತ್ಯ ತಾಂ ಸ್ವಪ್ನಲೀಲಾಂ ವಿಸ್ಮಯಂ ಜಗ್ಮತುಸ್ತದಾ ॥ ೬೮ ॥
ನ ದಾರು ಪ್ರತಿಮಾ ಚೇಯಂ ಸಾಕ್ಷಾದ್ಬ್ರಹ್ಮ ಪ್ರಕಾಶತೇ ।
ಸದೋಗತಾನಾಂ ವಿಪ್ರಾಣಾಂ ವಾಕ್ಯಂ ಶ್ರದ್ದಧತುಶ್ಚತೌ ॥ ೬೯ ॥
ಕ್ವಾವಾಂ ಮಹಾಪಾತಕಿನೌ ಯಾತನಾಕ್ರಮಭಾಗಿನೌ ।
ಕ್ವೇದಂ ಸುರಸಮಾಕ್ರಾಂತಸ್ಥಿತಂ ವಿಷ್ಣೋಃ ಪ್ರದರ್ಶನಂ ॥ ೭೦ ॥
ಮೂರ್ಖಯೋರಾವಯೋಃ ರಷ್ಟಾದಶವಿದ್ಯಾಪ್ರವೀಣತಾ ।
ಯಸ್ಮಾತ್ತಸ್ಮಾನ್ನ ಚ ಭ್ರಾಂತಿಜ್ಞಾನಂ ತತ್ಸಮವಾದಿನಃ ॥ ೭೧ ॥
ಯದಾಚಂದಾರರವಂ ಬ್ರಹ್ಮ ತೀರ್ಥರಾಜತಟೇಸ್ಥಿತಂ ।
ವಟಮೂಲೇ ಪ್ರಕಾಶಂತಂ ದೃಷ್ಟ್ವಾ ಜಂತುರ್ವಿಮುಚ್ಯತೇ ॥ ೭೨ ॥
ತದೇವಾಯಂ ಜಗನ್ನಾಥಶ್ಚತುರ್ಧಾ ಸಂವ್ಯವಸ್ಥಿತಃ ।
ಕ್ಷಿತೌ ಯದಾವತರತಿ ಚತೂರೂಪಃ ಪ್ರಕಾಶತೇ ॥ ೭೩ ॥

---

ಕ್ಷತ್ರಿಯರೀರ್ವರೂ, ಅರುಣೋದಯ ಸಮಯದಲ್ಲಿ ತಾವು ಕನಸಿನಲ್ಲಿ ಕಂಡ ಆ ದೇವದೇವನ ದಿವ್ಯಲೀಲಾವೈಭವವನ್ನು ಸ್ಮರಿಸಿಕೊಂಡು ಆಶ್ಚರ್ಯಗೊಂಡರು.

೬೯. "ಇದು ದಾರುಪ್ರತಿಮೆಯಲ್ಲ; ಸಾಕ್ಷಾತ್ ಬ್ರಹ್ಮವೇ ಈ ರೀತಿ ಪ್ರಕಾಶಿಸುತ್ತಿದೆ" ಎಂದು ನುಡಿದ ಸಾಧುಗಳ ಮತ್ತು ಆ ಬ್ರಾಹ್ಮಣರ ವಾಕ್ಯವನ್ನವರು ಆ ಸಮಯದಲ್ಲಿ ನಂಬಿದರು.

೭೦. "ಆಹಾ! ಮಹಾಪಾತಕಿಗಳೂ ಯಾತನೆಗಳೆಲ್ಲಕ್ಕೂ ಕ್ರಮವಾಗಿ ಭಾಗಿಗಳೂ ಆದ ನಾವೆಲ್ಲಿ! ದೇವತಾಸಮೂಹದಿಂದ ಸುತ್ತುವರೆದ ಈ ಮಹಾವಿಷ್ಣುವಿನ ಸಂದರ್ಶನವೆಲ್ಲಿ!!

೭೧. ನಮ್ಮ ಮುಖದಲ್ಲಿಯೇ ಹದಿನೆಂಟು ವಿದ್ಯೆಗಳಲ್ಲಿಯ ಈ ಪ್ರವೀಣತೆಯು ಯಾವ ಕಾರಣದಿಂದ ನೆಲಸಿದುದಾಯಿತೋ ಆ ಕಾರಣದಿಂದಲೇ ಈಗ ನಮಗೆ ಈ ದಾರುಮೂರ್ತಿಯಲ್ಲಿ ಹುಟ್ಟಿರುವ ಪರಬ್ರಹ್ಮಜ್ಞಾನವೂ ಭ್ರಾಂತಿಜ್ಞಾನವಲ್ಲವು.

೭೨-೭೩. ತೀರ್ಥರಾಜದ ತೀರದಲ್ಲಿರುವ ವಟವೃಕ್ಷ ಮೂಲದಲ್ಲಿ ದಾರವಬ್ರಹ್ಮವು ನೆಲಸಿರುವುದು. ಅದನ್ನು ಸಂದರ್ಶಿಸಿದುದಾದರೆ ಜಂತುವು ಮೋಕ್ಷವನ್ನು ಪಡೆಯುತ್ತದೆ—ಎಂದು ಆ ಸತ್ಯವಾದಿಗಳು ನುಡಿದರು, ಈ ಜಗನ್ನಾಥನು ಆ ದಾರವ ಬ್ರಹ್ಮವೇ! ನಾಲ್ಕು ಬಗೆಯಾಗಿ ನೆಲಸಿರುವನು. ಮಹಾವಿಷ್ಣುವು ಪೃಥ್ವಿಯಲ್ಲಿ ಅವತಾರ ಮಾಡಿದಾಗ ನಾಲ್ಕು ರೂಪಗಳಿಂದಲೇ ಪ್ರಕಾಶಿಸುತ್ತಾನೆ.

ತದಾಸ್ಯ ಸನ್ನಿಧಾವಾವಾಂ ಸ್ಥಾಸ್ಯಾವಃ ಪ್ರಾಣಧಾರಿಣೌ ।
ಯಾವನ್ನಾನ್ಯತ್ರ ಗಚ್ಛಾವಃ ಕ್ಷುದ್ರಕಾಮಪರಾಙ್ಮುಖೌ ॥ ೭೪ ॥
ಇತಿ ನಿಶ್ಚಿತ್ಯ ಮುನಯೋ ವಿಷ್ಣೌ ಭಕ್ತಿಪರಾಯಣೌ ।
ನಾರಾಯಣಾಖ್ಯಂ ಸತತಂ ಜಪಂತೌ ಮುಕ್ತಿಮಾಗತೌ ॥ ೭೫ ॥

ಜೈಮಿನಿರುವಾಚ :—

ಪ್ರಸಂಗಾತ್ಕಥಿತಂ ಹ್ಯೇತದ್ರಹಸ್ಯಂ ಪಾಪನಾಶನಂ ।
ಶೃಣ್ವಂತಿ ಯೇ ತು ಚರಿತಂ ಪುಂಡರೀಕಾಂಬರೀಷಯೋಃ ॥ ೭೬ ॥
ಸತತಂ ಕೀರ್ತಯಂತಶ್ಚ ಮುದಾ ಪರಮಯಾ ಯುತಾಃ ।
ವ್ರಜಂತಿ ವಿಷ್ಣೋರ್ನಿಲಯಂ ತೇಽಪಿ ನಿರ್ಧೂತಕಲ್ಮಷಾಃ ॥ ೭೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಪುಂಡರೀಕಾಂಬರೀಷಕಥಾಕಥನವರ್ಣನಂ" ನಾಮ ಪಂಚಮೋಽಧ್ಯಾಯಃ

---

೭೪. ಆದುದರಿಂದ ನಾವೀರ್ವರೂ ಈ ಪ್ರಭುವಿನ ಸನ್ನಿಧಿಯಲ್ಲಿಯೇ ಪ್ರಾಣಗಳನ್ನುಳುಹಿಕೊಂಡು ವಾಸಮಾಡುತ್ತಿರೋಣ. ಅಲ್ಪವಾದ ಆಸೆಗಳಿಗೊಳಗಾಗಿ ನಾವಿನ್ನು ಮುಂದೆ ಬೇರೆಲ್ಲಿಗೂ ಹೋಗುವುದು ಬೇಡ."

೭೫. ಎಲೈ ವಿಪ್ರರೇ! ಪುಂಡರೀಕಾಂಬರೀಷರೆಂಬಾ ಬ್ರಾಹ್ಮಣ ಕ್ಷತ್ರಿಯರೀರ್ವರೂ ಈ ಪ್ರಕಾರವಾಗಿ ನಿಶ್ಚಯಿಸಿಕೊಂಡು ಭಕ್ತಿಪರಾಯಣರಾಗಿ ನಾರಾಯಣ ಮಹಾಮಂತ್ರವನ್ನು ಸತತವೂ ಜಪಿಸುತ್ತ ಕಡೆಗೆ ಮುಕ್ತಿಯನ್ನು ಪಡೆದರು.

೭೬–೭೭. ಜೈಮಿನಿಯು ಹೇಳುತ್ತಾನೆ:—ಎಲೈ ಬ್ರಾಹ್ಮಣರಿರಾ! ನಾನು ಪ್ರಸಂಗವಶದಿಂದ ಪಾಪನಾಶಕವಾದ ಈ ರಹಸ್ಯವೃತ್ತಾಂತವನ್ನು ನಿಮಗೆ ತಿಳಿಸಿದೆನು. ಪುಂಡರೀಕಾಂಬರೀಷರ ಈ ಚರಿತ್ರೆಯನ್ನು ಯಾರು ಕೇಳುವರೋ, ಯಾರು ಸತತವೂ ಪರಮಸಂತೋಷದಿಂದ ಇದನ್ನು ಇತರರಿಗ ಹೇಳುವರೋ ಅವರೆಲ್ಲರೂ ಪರಮಾನಂದಭರಿತರಾಗಿ ಶ್ರೀ ಮಹಾವಿಷ್ಣುವಿನ ನಿಲಯವಾದ ವೈಕುಂಠವನ್ನು ಸೇರಿ ಸುಖಿಸುತ್ತಾರೆ. ಅವರ ಪಾಪಗಳೆಲ್ಲವೂ ಕಳೆದು ಹೋಗುವುದೆಂದು ಹೇಳಬೇಕಾದುದೇನು?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಪುಂಡರೀಕಾಂಬರೀಷಕಥಾಕಥನವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಓಢ್ರದೇಶವರ್ಣನಂ

ಮುನಯ ಊಚುಃ :—

ಕಸ್ಮಿನ್ದೇಶೇ ದ್ವಿಜಶ್ರೇಷ್ಠ ತತ್ಕ್ಷೇತ್ರಂ ಪುರುಷೋತ್ತಮಂ ।
ಯತ್ರ ನಾರಾಯಣಃ ಸಾಕ್ಷಾದ್ದಾರುರೂಪೀ ಪ್ರಕಾಶತೇ ॥ ೧ ॥

ಜೈಮಿನಿರುವಾಚ :—

ಉತ್ಕಲೋ ನಾಮ ದೇಶೋಽಸ್ತಿ ಖ್ಯಾತಃ ಪರಮಪಾವನಃ ।
ಯತ್ರ ತೀರ್ಥಾನ್ಯನೇಕಾನಿ ಪುಣ್ಯಾನ್ಯಾಯತನಾನಿ ಚ ॥ ೨ ॥
ದಕ್ಷಿಣಸ್ಯೋದಧೇಸ್ತೀರೇ ಸ ತು ದೇಶಃ ಪ್ರತಿಷ್ಠಿತಃ ।
ಯತ್ರ ಸ್ಥಿತಾ ವೈ ಪುರುಷಾಃ ಸದಾಚಾರನಿದರ್ಶನಾಃ ॥ ೩ ॥
ವೃತ್ತಾಧ್ಯಯನಸಂಪನ್ನಾ ಯಜ್ವಾನೋ ಯತ್ರಭೂಸುರಾಃ ।
ಸೃಷ್ಟ್ಯಾದೌ ಕ್ರತವೋ ವೇದಾ ವೇದಶಾಸ್ತ್ರಪ್ರವರ್ತಕಾಃ ॥ ೪ ॥
ಅಷ್ಟಾದಶಾನಾಂ ವಿದ್ಯಾನಾಂ ನಿಧಾನಂ ಸಂಪ್ರಕೀರ್ತಿತಂ ।
ಗೃಹೇ ಗೃಹೇ ನಿವಸತಿ ಲಕ್ಷ್ಮೀರ್ನಾರಾಯಣಾಜ್ಞಯಾ ॥ ೫ ॥

---

## ಕನ್ನಡದ ಅನುವಾದ

### ಓಢ್ರದೇಶವರ್ಣನ

೧. ಮುನಿಗಳು ಕೇಳುತ್ತಾರೆ:—"ಎಲೈ ಜೈಮಿನಿಮುನಿಯೇ! ಶ್ರೀಮನ್ನಾರಾಯಣಮೂರ್ತಿಯು ಸಾಕ್ಷಾತ್ ದಾರುರೂಪಧರನಾಗಿ ನೆಲಸಿರುವ ಆ ಪುರುಷೋತ್ತಮ ಕ್ಷೇತ್ರವು ಯಾವ ದೇಶದಲ್ಲಿರುವುದು? ಅದನ್ನು ದಯೆವಿಟ್ಟು ತಿಳುಹುವವನಾಗು"

೨. ಜೈಮಿನಿ ಮುನಿಯು ಹೇಳುತ್ತಾನೆ:—"ಎಲೈ ಮುನಿಗಳಿರಾ! ಬಹಳವಾಗಿ ಪ್ರಖ್ಯಾತಿಯನ್ನೈದಿದುದೂ, ಪರಮಪಾವನವಾದುದೂ ಆದ ಉತ್ಕಲವೆಂಬ ದೇಶವೊಂದಿರುವುದು. ಆ ದೇಶದಲ್ಲಿ ಅನೇಕ ತೀರ್ಥಗಳೂ, ಪುಣ್ಯಕರವಾದ ಅನೇಕ ದೇವಾಲಯಗಳೂ ಇರುವುವು.

೩. ಆ ಉತ್ಕಲದೇಶವು ದಕ್ಷಿಣಾರ್ಣವತೀರದಲ್ಲಿ ನೆಲೆಗೊಂಡಿರುವುದು. ಅಲ್ಲಿರುವ ಪುರುಷರೆಲ್ಲರೂ ಸದಾಚಾರಕ್ಕೆ ನಿದರ್ಶನಪ್ರಾಯರಾಗಿರುವರು.

೪–೫. ಗುರುಮುಖದಿಂದಲೇ ಯಥಾನುಕ್ರಮವಾಗಿ ವೇದಾಧ್ಯಯನವನ್ನು ಮಾಡಿ ಯಾಗಗಳನ್ನು ಗೈಯುತ್ತಿರುವ ಭೂಸುರರು ಅಲ್ಲಿ ವಾಸವಾಗಿರುವರು. ಅವರು ಈ ಬ್ರಹ್ಮಾಂಡ ಸೃಷ್ಟಿಯಾದಂದು ಕ್ರತುಗಳನ್ನೂ, ವೇದಗಳನ್ನೂ, ಚತುಶ್ಶಾಸ್ತ್ರಗಳನ್ನೂ ಪ್ರವರ್ತನಗೊಳಿಸಿದವರು. ಆ ದೇಶವು ಅಷ್ಟಾದಶ ವಿದ್ಯೆಗಳಿಗೂ ನಿಧಿಸ್ವರೂಪವಾದುದೆಂದು ಕೀರ್ತಿತವಾಗಿದೆ. ಅಲ್ಲಿನ ಪ್ರತಿ ಮನೆ

ಲಜ್ಜಾಶೀಲಾ ವಿನೀತಾಶ್ಚ ಆಧಿವ್ಯಾಧಿವಿವರ್ಜಿತಾಃ ।
ಪಿತೃಮಾತೃರತಾಃ ಸತ್ಯವಾದಿನೋ ವೈಷ್ಣವಾ ಜನಾಃ ॥ ೬ ॥
ನ ತತ್ರಾಽವೈಷ್ಣವಃ ಕಶ್ಚಿನ್ನಾಸ್ತಿಕೋ ವಾಪಿ ವರ್ತತೇ ।
ಸರ್ವೇ ಪರಹಿತಾಸ್ತತ್ರ ನಲುಬ್ಧಾ ನ ಶಠಾಃ ಖಲಾಃ ॥ ೭ ॥
ದೀರ್ಘಾಯುಷಸ್ತತ್ರ ಜನಾಃ ಸ್ತ್ರಿಯಶ್ಚ ಪತಿದೇವತಾಃ ।
ಸುಶೀಲಾ ಧರ್ಮಶೀಲಾಶ್ಚ ತ್ರಪಾಚಾರಿತ್ರಭೂಷಿತಾಃ ॥ ೮ ॥
ರೂಪಯೌವನಗರ್ವಾಢ್ಯಾಃ ಸರ್ವಾಲಂಕಾರಭೂಷಿತಾಃ ।
ಕುಲಶೀಲವಯೋವೃತ್ತಾನುರೂಪಾಚಾರಚಂಚವಃ ॥ ೯ ॥
ಸ್ವಕರ್ಮನಿರತಾಸ್ತತ್ರ ಪ್ರಜಾರಕ್ಷಣದೀಕ್ಷಿತಾಃ ।
ಕ್ಷತ್ರಿಯಾ ದಾನಶೌಂಡಾಶ್ಚ ಶಸ್ತ್ರಶಾಸ್ತ್ರವಿಶಾರದಾಃ ॥ ೧೦ ॥
ಯಜಂತೇ ಕ್ರತುಭಿಃ ಸರ್ವೇ ಸತತಂ ಭೂರಿದಕ್ಷಿಣೈಃ ।
ದೀಪ್ಯಂತೇ ಚಿತ್ತಯೋ ಯೇಷಾಂ ಯೂಪಾಃ ಕಾಂಚನಭೂಷಿತಾಃ ॥

---

ಯಲ್ಲಿಯೂ ಸಂಪದಭಿಮಾನಿದೇವತೆಯಾದ ಮಹಾಲಕ್ಷ್ಮಿಯು ಶ್ರೀಮನ್ನಾರಾಯಣನ ಆಣತಿಯಂತೆ ಯಾವಾಗಲೂ ವಾಸವಾಗಿರುವಳು.

೬. ಅಲ್ಲಿ ವಾಸಮಾಡುತ್ತಿರುವ ಜನಗಳೆಲ್ಲರೂ ಲಜ್ಜಾಶೀಲರೂ, ವಿನೀತರೂ ಆದವರು; ಅವರಿಗೆ ಆಧಿವ್ಯಾಧಿಗಳಾವುವೂ ಇರುವುದಿಲ್ಲವು; ತಂದೆ ತಾಯಿಯರಲ್ಲಿ ಭಯಭಕ್ತಿಗಳಿಂದ ನಡೆದುಕೊಳ್ಳುವವರು; ಗುರುಹಿರಿಯರ ಶುಶ್ರೂಷೆಯಲ್ಲಿಯೇ ಆಸಕ್ತರಾದವರು; ಸತ್ಯವಾದಿಗಳು; ವೈಷ್ಣವರು.

೭. ವೈಷ್ಣವರಲ್ಲದವರಾಗಲಿ, ನಾಸ್ತಿಕರಾಗಲಿ ಒಬ್ಬರೂ ಆ ದೇಶದಲ್ಲಿ ಇರುವುದಿಲ್ಲ. ಎಲ್ಲರೂ ಪರಹಿತದಲ್ಲಿಯೇ ಆಸಕ್ತಿಯುಳ್ಳವರು. ಅವರಲ್ಲಿ ಯಾರೂ ಲುಬ್ಧರೂ, ಶಠರೂ, ದುಷ್ಟರೂ ಆಗಿರುವುದಿಲ್ಲವು.

೮. ಅಲ್ಲಿನ ಜನಗಳೆಲ್ಲರೂ ದೀರ್ಘಾಯುಷ್ಯವಂತರು. ಸ್ತ್ರೀಯರಾದರೋ ಪತಿಯೇ ಪರದೈವವೆಂದು ನಂಬಿ ನಡೆಯುವರು. ಸುಶೀಲೆಯರು; ಧರ್ಮಶೀಲೆಯರು; ಲಜ್ಜಾವತಿಯರು; ಒಳ್ಳೆಯ ನಡತೆಯಿಂದೊಪ್ಪುತ್ತಿರುವವರು.

೯. ರೂಪಯೌವನಗಳಿಂದ ಗರ್ವಿತರಾಗಿ, ಸರ್ವಾಲಂಕಾರ ಭೂಷಿತೆಯರಾಗಿ, ಕುಲ-ಶೀಲ-ವಯಸ್ಸು-ನಡತೆ, ಅದಕ್ಕನುರೂಪವಾದ ಆಚಾರಗಳಿಂದೊಪ್ಪಿದವರು.

೧೦. ಕ್ಷತ್ರಿಯರಾದರೋ ಶಸ್ತ್ರಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ವಿಶಾರದರಾಗಿ ಸ್ವಕರ್ಮಗಳಲ್ಲಿ ನಿರತರಾಗಿ, ಪ್ರಜೆಗಳನ್ನು ರಕ್ಷಿಸುವುದರಲ್ಲಿಯೇ ದೀಕ್ಷಿತರಾಗಿರುವರು.

೧೧. ಅವರೆಲ್ಲರೂ ಸತತವೂ ಭೂರಿದಕ್ಷಿಣೆಗಳುಳ್ಳ ಕ್ರತುಗಳನ್ನು ಮಾಡಿ

ಯೇಷಾಂ ಗೃಹೇಷ್ವತಿಥಯಃ ಕಾಮಾದಧಿಕಪೂಜಿತಾಃ ।
ವೈಶ್ಯಾಶ್ಚ ಕೃಷಿವಾಣಿಜ್ಯಗೋರಕ್ಷಾವೃತ್ತಿಸಂಸ್ಥಿತಾಃ ॥ ೧೨ ॥
ದೇವಾನ್ಗುರೂನ್ದ್ವಿಜಾಂಶ್ಚಾಪಿ ಪ್ರೀಣಯಂತಿ ಧನೈರಪಿ ।
ಏಕಸ್ಯ ದ್ವಾರಿ ಯಾತೋಽರ್ಥೀ ನಗಚ್ಛೇದನ್ಯವೇಶ್ಮನಿ ॥ ೧೩ ॥
ಗೀತಕಾವ್ಯಕಲಾಶಿಲ್ಪಕುಶಲಾಃ ಪ್ರಿಯವಾದಿನಃ ।
ಶೂದ್ರಾಶ್ಚ ಧಾರ್ಮಿಕಾಸ್ತತ್ರ ಸ್ನಾನದಾನಕ್ರಿಯಾರತಾಃ ॥ ೧೪ ॥
ಕರ್ಮಣಾ ಮನಸಾ ವಾಚಾ ಧನೈಶ್ಚ ದ್ವಿಜಸೇವಕಾಃ ।
ಯೋಽನ್ಯೇ ಸಂಕರಜಾತಾಸ್ತೇ ಸ್ವೇ ಸ್ವೇ ಧರ್ಮೇ ಪ್ರತಿಷ್ಠಿತಾಃ ॥ ೧೫ ॥
ನ ವಿಪರ್ಯಂತಿ ಋತವೋ ನಾಕಾಲೇ ವರ್ಷತೇ ಘನಃ ।
ನ ಸಸ್ಯಹಾನಿರ್ನಮರುಕ್ಷ್ಮಾನ್ನಾ ಪೀಡಯತಿ ಪ್ರಜಾಃ ॥ ೧೬ ॥
ದುರ್ಭಿಕ್ಷಮರಕೇನಾತ್ರ ರಾಷ್ಟ್ರಭಂಗಃ ಪ್ರಜಾಯತೇ ।
ನಾಲಭ್ಯಂ ತತ್ರವಸ್ತ್ವಸ್ತಿ ಯತ್ಕಿಂಚಿತ್ಪೃಥಿವೀಗತಂ ॥ ೧೭ ॥

---

ಯಜ್ಞ ವೇದಿಗಳನ್ನು ಬೆಳಗಿಸುತ್ತಿರುವರು. ಅವರು ನೆಟ್ಟ ಯೂಪಸ್ತಂಭಗಳು ಕಾಂಚನ ಭೂಷಿತಗಳಾಗಿ ಇಂದಿಗೂ ಅಚ್ಚಳಿಯದೆ ಬೆಳಗುತ್ತಿರುವುವು.

೧೨-೧೩. ಎಲೈ ಮುನಿಗಳಿರಾ! ಆ ಕ್ಷತ್ರಿಯೋತ್ತಮರ ಅರಮನೆಗಳಲ್ಲಿ ಬಂದು ಹೋಗುವ ಅತಿಥಿಗಳು ಅವರ ಬಯಕೆಗಳಿಗಿಂತಲೂ ಅಧಿಕವಾಗಿಯೇ ಪೂಜಿಸಲ್ಪಡುತ್ತಿರುವರು. ಆ ದೇಶದ ವೈಶ್ಯರಾದರೋ ಕೃಷಿ, ವಾಣಿಜ್ಯ, ಗೋ ರಕ್ಷಣೆಗಳಲ್ಲಿ ತೊಡಗಿ ಧರ್ಮಶೀಲರಾಗಿರುವರು; ದೇವತೆಗಳನ್ನೂ, ಗುರುಗಳನ್ನೂ, ಬ್ರಾಹ್ಮಣರನ್ನೂ ಧನಗಳಿಂದಲೂ ಇತರ ದಾನಾದಿಗಳಿಂದಲೂ ಸಂತೋಷಗೊಳಿಸುವರು. ಅವರಲ್ಲಿ ಒಬ್ಬನ ಮನೆಯ ಬಾಗಿಲಿಗೆ ಹೋದ ಯಾಚಕನು ಮತ್ತೊಂದು ಮನೆಗೆ ಹೋಗುವುದೇ ಇಲ್ಲವು. ಅವನು ತೃಪ್ತನಾಗಿಯೇ ಹಿಂದಿರುಗುವನು.

೧೪-೧೫. ಶೂದ್ರರಾದರೋ ಗೀತಕಾವ್ಯಕಲಾಶಿಲ್ಪಗಳಲ್ಲಿ ಕುಶಲರಾಗಿ, ಯಾವಾಗಲೂ ಪ್ರಿಯವನ್ನೇ ನುಡಿಯುವವರಾಗಿ, ಧಾರ್ಮಿಕರಾಗಿ, ಸ್ನಾನ ದಾನಾದಿಗಳಲ್ಲಿ ನಿರತರಾಗಿರುವರು. ಅವರು ಕಾರ್ಯದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ, ತಂತಮ್ಮ ಐಶ್ವರ್ಯಗಳಿಂದಲೂ ದ್ವಿಜರ ಸೇವೆಯನ್ನು ಮಾಡುತ್ತಿರುವರು. ಇನ್ನುಳಿದ ಇತರ ಸಂಕರ ಜಾತಿಯ ಜನಗಳು ತಂತಮ್ಮ ಧರ್ಮಗಳಲ್ಲಿ ಮಾತ್ರವೇ ತೊಡಗಿರುತ್ತಾರೆ.

೧೬-೧೭. ಎಲೈ ಮುನಿಶ್ರೇಷ್ಠರೆ! ಇಂತಹ ಪುಣ್ಯದೇಶವಾದ ಆ ಉತ್ಕಲ ದೇಶದಲ್ಲಿ ವಸಂತಾದಿ ಷಡೃತುಗಳಾವುವೂ ವಿಪರ್ಯಾಸವನ್ನು ಹೊಂದುವುದಿಲ್ಲವು. ಅಕಾಲದಲ್ಲಿ ಮಳೆಗಳಾಗುವುದಿಲ್ಲ. ಬೆಳೆಗಳು ಹಾಳಾಗಿ, ವಿಪರೀತವಾಗಿ

ಏವಂ ಸರ್ವಗುಣೈರ್ಯುಕ್ತೋ ನಾನಾದ್ರುಮಲತಾಕುಲಃ ।
ಅರ್ಜುನಾಶೋಕಪುನ್ನಾಗತಾಲಹಿಂತಾಲಶಾಲಕೈಃ ॥ ೧೮ ॥
ಪ್ರಾಚೀನಾಮಲಕೈರ್ಲೋಧ್ರೈರ್ಬಕುಲೈರ್ನಾಗಕೇಸರೈಃ ।
ನಾರಿಕೇಲೈಃ ಪ್ರಿಯಾಲೈಶ್ಚ ಸರಲೈರ್ದೇವದಾರುಭಿಃ ॥ ೧೯ ॥
ಧವೈಶ್ಚ ಖದಿರೈರ್ಬಿಲ್ವೈಃ ಪನಸೈಶ್ಚ ಕಪಿತ್ಥಕೈಃ ।
ಚಂಪಕೈಃ ಕರ್ಣಿಕಾರೈಶ್ಚ ಕೋವಿದಾರೈಃ ಸಪಾಟಲೈಃ ॥ ೨೦ ॥
ಕದಂಬನಿಂಬನಿಚುಲರಸಾಲಾಮಲಕೈಸ್ತಥಾ ।
ನಾಗರಂಗೈಶ್ಚ ಜಂಬೀರೈರ್ನೀಪಕೈರ್ಮಾತುಲುಂಗಕೈಃ ॥ ೨೧ ॥
ಮಂದಾರೈಃ ಪಾರಿಜಾತೈಶ್ಚ ನ್ಯಗ್ರೋಧಾಗರುಚಂದನೈಃ ।
ಖರ್ಜೂರಾಮ್ರಾತಕೈಃ ಸಿದ್ಧೈರ್ಮುಚುಕುಂದೈಃ ಸ ಕಿಂಶುಕೈಃ ॥ ೨೨ ॥
ತಿಂದುಕೈಃ ಸಪ್ತಪರ್ಣೈಶ್ಚ ಅಶ್ವತ್ಥೈಶ್ಚ ವಿಭೀತಕೈಃ ।
ಅನ್ಯೈಶ್ಚ ವಿವಿಧೈರ್ವೃಕ್ಷೈಃ ಪ್ರಕೀರ್ಣಃ ಸುಮನೋಹರೈಃ ॥ ೨೩ ॥
ಮಾಲತೀಕುಂದಬಾಣೈಶ್ಚ ಕರವೀರೈಃ ಸಿತೇತರೈಃ ।
ಕೇತಕೀವನಷಂಡೈಶ್ಚ ಅತಿಮುಕ್ತೈಃ ಸಕುಬ್ಜಕೈಃ ॥ ೨೪ ॥
ಏಲಾಲವಂಗಕಂಕೋಲದಾಡಿಮೈರ್ಬೀಜಪೂರಕೈಃ ।
ಶ್ರೇಣೀಕೃತೈಃ ಪೂಗವನೈರುದ್ಯಾನೈಃ ಶತಶೋ ವೃತಃ ॥ ೨೫ ॥

---

ಗಾಳಿಯು ಹೊಡೆತವಾಗಲಿ, ದುರ್ಭಿಕ್ಷವಾಗಲಿ ಜನಗಳನ್ನು ತೊಂದರೆಗೊಳಿಸುವು ದಿಲ್ಲ. ಅಲ್ಲಿ ದುರ್ಭಿಕ್ಷ ದುರ್ಮರಣಗಳು ಸಂಭವಿಸಿ ದೇಶಕ್ಕೊಂದು ಕ್ಷೋಭೆಯಾಗುವುದೇ ಇಲ್ಲವು. ಆ ದೇಶದಲ್ಲಿ ಭೂಮಂಡಲದಲ್ಲಿರುವ ಯಾವ ವಸ್ತುವೇ ಆದರೂ ದೊರಕು ವುದಿಲ್ಲವೆಂಬುವುದಿಲ್ಲವು.

೧೮–೨೫. ಹೀಗೆ ಸಮಸ್ತ ಸದ್ಗುಣಗಳಿಂದಲೂ ತುಂಬಿ ತುಳುಕುತ್ತಿರುವ ಆ ದೇಶದಲ್ಲಿ ಅರ್ಜುನ, ಅಶೋಕ, ಪುನ್ನಾಗ, ತಾಲ, ಹಿಂತಾಲ, ಶಾಲಕ, ಆಮಲಕ, ಲೋಧ್ರ, ಬಕುಲ, ನಾಗಕೇಸರ, ನಾರಿಕೇಲ, ಪ್ರಿಯಾಲ, ಸರಲ, ದೇವದಾರು, ಧವ, ಖದಿರ, ಬಿಲ್ವ, ಪನಸ, ಕಪಿತ್ಥ, ಚಂಪಕ, ಕರ್ಣಿಕಾರ, ಕೋವಿದಾರ, ಪಾಟಲ, ಕದಂಬ, ನಿಂಬ, ನಿಚುಲ, ರಸಾಲ, ನಾಗರಂಗ, ಜಂಬೀರ, ನೀಪ, ಮಾತುಲಂಗ, ಮಂದಾರ, ಪಾರಿಜಾತ, ನ್ಯಗ್ರೋಧ, ಅಗುರುಚಂದನ, ಖರ್ಜೂರ, ಆಮ್ರಾತಕ, ಸಿದ್ಧ, ಮುಚುಕುಂದ, ಕಿಂಶುಕ, ತಿಂದುಕ, ಸಪ್ತಪರ್ಣ, ಅಶ್ವತ್ಥ, ವಿಭೀತಕವೇ ಮೊದಲಾದ ಬಗೆಬಗೆಯ ಪುಷ್ಪ ಫಲ ವೃಕ್ಷಗಳೆತ್ತೆತ್ತಲೂ ದಟ್ಟವಾಗಿ ಬೆಳದು ಬಳಸಿರುವುವು. ಮಾಲತಿ, ಕುಂದ, ಬಾಣ, ಕರವೀರ, ಕಮಲ, ಕನ್ನೈದಿಲೆ, ಕೇತಕಿ, ಅತಿಮುಕ್ತ, ಕುಬ್ಜಕ, ಏಲಾ ಲವಂಗ, ಕಂಕೋಲ, ದಾಡಿಮ, ಬೀಜಪೂರವೇ ಮೊದಲಾದ ಲತಾ

**ನಾನಾದ್ರುಮಲತಾಕೀರ್ಣೈಃ ಪರ್ವತೈಃ ಸಿಂಧುಭಿರ್ವೃತಃ ।**
**ಸ ಏಷದೇಶಪ್ರವರ ಉತ್ಕಲಾಖ್ಯೋ ದ್ವಿಜೋತ್ತಮಾಃ ॥ ೨೬ ॥**
**ಋಷಿಕುಲ್ಯಾಂ ಸಮಾಸಾದ್ಯ ದಕ್ಷಿಣೋದಧಿಗಾಮಿನೀಂ ।**
**ಸ್ವರ್ಣರೇಖಾ ಮಹಾನದ್ಯೋರ್ಮಧ್ಯೇದೇಶಃ ಪ್ರತಿಷ್ಠಿತಃ ॥ ೨೭ ॥**
**ಸಂತ್ಯತ್ರಪುಣ್ಯಾಯತನೇ ಕ್ಷೇತ್ರಾಣಿ ಸುಬಹೂನ್ಯಪಿ ।**
**ಪೂರ್ವಂ ಮಸ್ತೀರ್ಥಯಾತ್ರಾಯಾಂ ವರ್ಣಿತಾನಿ ಮಯಾದ್ವಿಜಾಃ ।**
**ಭೂಸ್ವರ್ಗಃ ಕಥಿತೋಹ್ಯೇಷಕಥಿತಃ ಪುರುಷೋತ್ತಮಃ ॥ ೨೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಓಢ್ರದೇಶವರ್ಣನಂ" ನಾಮ ಷಷ್ಠೋಽಧ್ಯಾಯಃ**

---

ನಿಚಯದಿಂದಲೂ, ಭೂರಮಣಿಯ ಶ್ರೋಣೀತರಲವೆಂಬಂತೆ ಶೋಭಿಸುತ್ತಿರುವ ಅಡಕೆಯ ತೋಟಗಳಿಂದಲೂ, ಇತರ ನೂರಾರು ಉದ್ಯಾನಗಳಿಂದಲೂ ಆ ದೇಶವು ಸುತ್ತುವರೆದಿರುವುದು.

೨೬. ಅಯ್ಯಾ ದ್ವಿಜೋತ್ತಮರೇ! ಈ ರೀತಿ ಅನೇಕ ದ್ರುಮಲತೆಗಳಿಂದ ತುಂಬಿ ಪರ್ವತಗಳಿಂದಲೂ, ನದಿಗಳಿಂದಲೂ ಸುತ್ತುವರೆದಿರುವ ಈ ದೇಶ ಪ್ರವರವೇ ಉತ್ಕಲವೆಂದು ಹೆಸರಾದುದು.

೨೭. ಈ ದೇಶದಲ್ಲಿ, ದಕ್ಷಿಣಸಾಗರವನ್ನು ಕುರಿತು ಹೋಗುತ್ತಿರುವ ಋಷಿಕಲ್ಯಾನದಿಯೊಡನೆ ಸಂಗಮವಾಗಿ ಹರಿಯುತ್ತಿರುವ ಸ್ವರ್ಣರೇಖಾ ಮಹಾನದಿಯು ಮಧ್ಯರಾಷ್ಟ್ರದಲ್ಲಿ ಪ್ರತಿಷ್ಠಿತವಾಗಿರುವುದು.

೨೮. ಎಲೈ ದ್ವಿಜರೇ! ಪುಣ್ಯಾಯತನವಾದ ಈ ಉತ್ಕಲ ದೇಶದಲ್ಲಿ ಹಿಂದೆ ತೀರ್ಥಯಾತ್ರಾಪ್ರಸಂಗದಲ್ಲಿ ನಾನು ವರ್ಣಿಸಿರುವ ಅನೇಕ ತೀರ್ಥಕ್ಷೇತ್ರಗಳಿರುವುವು. ಈ ದೇಶದಲ್ಲಿರುವ ಪುರುಷೋತ್ತಮ ಕ್ಷೇತ್ರವಾದರೋ ಭೂಸ್ವರ್ಗವೆಂದೇ ಹೇಳಲಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯೆಯ ಜೈಮಿನಿಋಷಿ ಸಂವಾದದಲ್ಲಿ "ಓಢ್ರದೇಶವರ್ಣನ" ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಇಂದ್ರದ್ಯುಮ್ನವೃತ್ತಾಂತಃ — ವಿದ್ಯಾಪತಿ ಶಬರಸ-ಭಾಷಣಂ

ಮುನಯ ಊಚುಃ:—

ಕಸ್ಮಿನ್ಯುಗೇ ಸ ತು ನೃಪ ಇಂದ್ರದ್ಯುಮ್ನೋಽಭವನ್ಮುನೇ ।
ಕಸ್ಮಿನ್ದೇಶೇಽಸ್ಯ ನಗರಂ ಕಥಂವಾ ಪುರುಷೋತ್ತಮಂ ॥ ೧ ॥
ಗತ್ವಾ ಚ ವಿಷ್ಣೋಃ ಪ್ರತಿಮಾಂ ಕಾರಯಾಮಾಸ ವಾ ಕಥಂ ।
ಏತತ್ಸರ್ವಂ ವಿಸ್ತರತಃ ಕಥಯಸ್ವ ಮಹಾಮುನೇ ॥ ೨ ॥
ಯಾಥಾತಥ್ಯೇನ ಸರ್ವಜ್ಞ ಪರಂ ಕೌತೂಹಲಂ ಹಿ ನಃ ॥ ೩ ॥

ಜೈಮಿನಿರುವಾಚ :—

ಸಾಧು ಸಾಧು ದ್ವಿಜಶ್ರೇಷ್ಠಾಃ ಯತ್ಪೃಚ್ಛಧ್ವಂ ಪುರಾತನಂ ।
ಸರ್ವಪಾಪಹರಂ ಪುಣ್ಯಂ ಭುಕ್ತಿಮುಕ್ತಿಪ್ರದಂ ಶುಭಂ ॥ ೪ ॥
ಚರಿತಂ ತಸ್ಯ ವಕ್ಷ್ಯಾಮಿ ತಥಾವೃತ್ತಂ ಕೃತೇ ಯುಗೇ ।
ಶೃಣುಧ್ವಂ ಮುನಯಃ ಸರ್ವೇ ಸಾವಧಾನಾ ಜಿತೇಂದ್ರಿಯಾಃ ॥ ೫ ॥

---

## ಕನ್ನಡದ ಅನುವಾದ

### ಇಂದ್ರದ್ಯುಮ್ನ ವೃತ್ತಾಂತ — ವಿದ್ಯಾಪತಿ ಶಬರ ಸಂಭಾಷಣ

೧–೩. ಮುನಿಗಳು ಕೇಳುತ್ತಾರೆ:—"ಎಲೈ ಜೈಮಿನಿಯೇ! ನೀನು ಮೊದಲು ನಿರೂಪಿಸಿದ ಇಂದ್ರದ್ಯುಮ್ನನೃಪಾಲನು ಯಾವ ಯುಗದಲ್ಲಿದ್ದನು? ಅವನಿದ್ದ ದೇಶವೂ ನಗರವೂ ಯಾವುದು? ಪುರುಷೋತ್ತಮ ಕ್ಷೇತ್ರವು ನಿರ್ಮಾಣವಾದುದೆಂತು? ಇಂದ್ರದ್ಯುಮ್ನ ಮಹಾರಾಜನು ಅಲ್ಲಿಗೆ ಹೋಗಿ ವಿಷ್ಣುಪ್ರತಿಮೆಯನ್ನು ಮಾಡಿಸಿ ಪ್ರತಿಷ್ಠಿಸಿದುದು ಹೇಗೆ? ಎಲೈ ಮಹಾಮುನಿಯೆ! ನೀನು ಈ ವಿಷಯಗಳೆಲ್ಲವನ್ನೂ ನಮಗೆ ವಿಸ್ತಾರವಾಗಿ ತಿಳಿಸುವವನಾಗು. ಎಲೈ ಸರ್ವಜ್ಞನೇ! ನೀನು ಈ ವೃತ್ತಾಂತವನ್ನು ಯಥಾರ್ಥವಾಗಿಯೇ ನಮಗೆ ಅಪ್ಪಣೆಕೊಡಿಸಬೇಕು; ಕೇಳಲು ನಮಗೆ ಬಹಳ ಕುತೂಹಲವಿರುವುದು."

೪–೫. ಜೈಮಿನಿಯು ಹೇಳುತ್ತಾನೆ:—"ಎಲೈ ದ್ವಿಜಶ್ರೇಷ್ಠರೇ! ಸಾಧು! ಸಾಧು!! ಸರ್ವಪಾಪಹರವೂ, ಪುಣ್ಯಪ್ರದವೂ, ಭುಕ್ತಿಮುಕ್ತಿಗಳನ್ನು ದೊರಕಿಸುವುದೂ, ಮಂಗಳಕರವೂ, ಪುರಾತನವೂ ಆದ ವಿಷಯವನ್ನೇ ಕೇಳಿದಿರಿ. ಈಗ ನಾನು ಕೃತಯುಗದಲ್ಲಿ ನಡೆದ ಇಂದ್ರದ್ಯುಮ್ನರಾಜನ ಚರಿತ್ರೆಯನ್ನು ನಡೆದುದು ನಡೆದಂತೆಯೇ ನಿಮಗೆ ತಿಳಿಸುತ್ತೇನೆ. ಜಿತೇಂದ್ರಿಯರಾದ ನೀವೆಲ್ಲರೂ ಅದನ್ನು ಸಾವಧಾನಮನಸ್ಕರಾಗಿ ಕೇಳಿರಿ.

ಆಸೀತ್ಕೃತಯುಗೇ ವಿಪ್ರಾ ಇಂದ್ರದ್ಯುಮ್ನೋ ಮಹಾನೃಪಃ ।
ಸೂರ್ಯವಂಶೇ ಸ ಧರ್ಮಾತ್ಮಾ ಸ್ರಷ್ಟುಃ ಪಂಚಮಪೂರುಷಃ ॥ ೬ ॥
ಸತ್ಯವಾದೀ ಸದಾಚಾರೋಽವದಾತಃ ಸಾತ್ತ್ವಿಕಾಗ್ರಣೀಃ ।
ನ್ಯಾಯಾತ್ಸದಾ ಪಾಲಯತಿ ಪ್ರಜಾಃ ಸ್ವಾ ಇವ ಸ ಪ್ರಜಾಃ ॥ ೭ ॥
ಅಧ್ಯಾತ್ಮವಿಜ್ಞಾನಶೌಂಡಃ ಶೂರಃ ಸಂಗ್ರಾಮವರ್ಧನಃ ।
ಸದೋದ್ಯತಃ ಸದಾ ವಿಪ್ರಪೂಜಕಃ ಪಿತೃಭಕ್ತಿಮಾನ್ ॥ ೮ ॥
ಅಷ್ಟಾದಶಸು ವಿದ್ಯಾಸು ಬೃಹಸ್ಪತಿರಿವಾಪರಃ ।
ಐಶ್ವರ್ಯೇಣ ಸುರಾಧೀಶಃ ಕುಬೇರಃ ಕೋಶಸಂಚಯೇ ॥ ೯ ॥
ರೂಪವಾನ್ಸುಭಗಃ ಶೀಲೀ ದಾತಾ ಭೋಕ್ತಾ ಪ್ರಿಯಂವದಃ ।
ಯಷ್ಟಾ ಸಮಸ್ತಯಜ್ಞಾನಾಂ ಬ್ರಹ್ಮಣ್ಯಃ ಸತ್ಯಸಂಗರಃ ॥ ೧೦ ॥
ವಲ್ಲಭೋ ನರನಾರೀಣಾಂ ಪೌರ್ಣಮಾಸ್ಯಾಂ ಯಥಾ ಶಶೀ ।
ಆದಿತ್ಯ ಇವ ದುಷ್ಪ್ರೇಕ್ಷ್ಯಃ ಶತ್ರುಪಕ್ಷಕ್ಷಯಂಕರಃ ॥ ೧೧ ॥
ವೈಷ್ಣವಃ ಸತ್ಯಸಂಪನ್ನೋ ಜಿತಕ್ರೋಧೋ ಜಿತೇಂದ್ರಿಯಃ ।
ರಾಜಸೂಯಂ ಕ್ರತುವರಂ ವಾಜಿಮೇಧಸಹಸ್ರಕಂ ॥ ೧೨ ॥

---

೬-೭. ಎಲೈ ವಿಪ್ರರೇ! ಆ ಇಂದ್ರದ್ಯುಮ್ನಮಹಾರಾಜನು ಕೃತಯುಗದಲ್ಲಿದ್ದನು. ಆ ಧರ್ಮಾತ್ಮನು ಸೂರ್ಯವಂಶದಲ್ಲಿ ಬ್ರಹ್ಮನಿಂದ ಐದನೆಯ ಮಹಾಪುರುಷನು; ಸತ್ಯವಾದಿಯೂ, ಸದಾಚಾರಸಂಪನ್ನನೂ, ದಾನಶೀಲನೂ, ಸಾತ್ವಿಕಾಗ್ರಣಿಯೂ ಆಗಿ ಪ್ರಜೆಗಳೆಲ್ಲರನ್ನೂ ತನ್ನ ಸ್ವಂತ ಮಕ್ಕಳನ್ನೆಂತೋ ಅಂತು ಬಹು ಧರ್ಮದಿಂದ ಪಾಲಿಸುತ್ತಿದ್ದನು.

೮-೧೪. ಅಧ್ಯಾತ್ಮವಿಜ್ಞಾನದಲ್ಲಿ ನಿಷ್ಣಾತನು; ಶೂರನು; ಯುದ್ಧದಲ್ಲಿ ಅತುಲ ಪರಾಕ್ರಮವನ್ನು ತೋರಿ ವಿಜೃಂಭಿಸುವವನು; ಯಾವಾಗಲೂ ಜಾಗರೂಕನಾಗಿರುವವನು; ಯಾವಾಗಲೂ ಬ್ರಾಹ್ಮಣರನ್ನು ಸತ್ಕರಿಸುವವನು; ಪಿತೃಭಕ್ತಿಸಂಪನ್ನನು; ಹದಿನೆಂಟು ವಿದ್ಯೆಗಳನ್ನೂ ಬಲ್ಲವನಾಗಿ ಎರಡನೆಯ ಬೃಹಸ್ಪತಿಯೋ ಎಂಬಂತಿರುವವನು; ಐಶ್ವರ್ಯದಲ್ಲಿ ಮಹೇಂದ್ರನು; ಕೋಶಸಂಚಯದಲ್ಲಿ ಕುಬೇರನು; ರೂಪವಂತನು; ಭಾಗ್ಯಶಾಲಿಯು; ಶೀಲವಂತನು; ದಾತೃವು; ಭೋಕ್ತೃವು; ಪ್ರಿಯವಾದಿಯು; ಸಮಸ್ತ ಯಜ್ಞಗಳನ್ನೂ ಮಾಡಿದವನು; ಬ್ರಹ್ಮಣ್ಯನು; ಸತ್ಯಪರಿಪಾಲನೆಗಾಗಿಯೇ ಪ್ರತಿಜ್ಞೆಯನ್ನು ಕೈಕೊಂಡವನು; ನರನಾರಿಯರೆಲ್ಲರಿಗೂ ವಲ್ಲಭನಾಗಿ ಹುಣ್ಣಿಮೆಯ ಚಂದ್ರನಂತೆ ಬೆಳಗುತ್ತಿರುವವನು; ಶತ್ರುಪಕ್ಷದವರೆಲ್ಲರನ್ನೂ ನಾಶಗೊಳಿಸುವವನಾಗಿ ಅಹಿತರಿಗೆ ನೋಡಲೂ ಅಸದಳನಾದವನು; ವೈಷ್ಣವನಾಗಿ ಸತ್ಯಸಂಪನ್ನನಾಗಿ, ಜಿತಕ್ರೋಧನೂ, ಜಿತೇಂದ್ರಿಯನೂ ಆಗಿ ರಾಜಸೂಯವೆಂಬ ಉತ್ತಮ ಯಾಗವನ್ನೂ,

ಇಯಾಜ ಪರಮಃ ಶ್ರೀಮಾನ್ಮುಮುಕ್ಷುರ್ಧರ್ಮತತ್ಪರಃ ।
ಏವಂ ಸರ್ವಗುಣೋಪೇತಃ ಸ ಪೃಥ್ವೀಂ ಪಾಲಯನ್ನೃಪಃ ॥ ೧೩ ॥
ಅವಂತೀಂ ನಾಮ ನಗರೀಂ ಮಾಲವೇ ಭುವಿ ವಿಶ್ರುತಾಂ ।
ಉವಾಸ ಸರ್ವರತ್ನಾಢ್ಯಾಂ ದ್ವಿತೀಯಾಮಮರಾವತೀಂ ॥ ೧೪ ॥
ತತ್ರ ಸ್ಥಿತೋ ನರಪತಿರ್ವಿಷ್ಣೋರ್ಭಕ್ತಿಮನುತ್ತಮಾಂ ।
ಚಕಾರ ಮನಸಾ ವಾಚಾ ಕರ್ಮಣಾ ಪರಮಾದ್ಭುತಾಂ ॥ ೧೫ ॥
ಏವಂ ಪ್ರವರ್ತಮಾನೋಽಸೌ ಕದಾಚಿಚ್ಛ್ರೀಪತೇರ್ವಿಭೋಃ ।
ಪೂಜಾಸಮಯಮಾಸಾದ್ಯ ದೇವಾರ್ಚನಗೃಹಾಂತರೇ ॥ ೧೬ ॥
ವಿದ್ವದ್ಭಿಃ ಕವಿಭಿಶ್ಚೈವ ತೀರ್ಥಯಾತ್ರಾಪ್ರಸಿದ್ಧಿಭಿಃ ।
ದೈವಜ್ಞೈಃ ಶ್ರೋತ್ರಿಯೈಃ ಸಾರ್ಧಂ ಪುರೋಹಿತಮವಸ್ಥಿತಂ ॥ ೧೭ ॥
ಆದೃತೋ ವ್ಯಾಜಹಾರೇದಂ ಜ್ಞಾಯತಾಂ ಕ್ಷೇತ್ರಮುತ್ತಮಂ ।
ಯತ್ರ ಸಾಕ್ಷಾಜ್ಜಗನ್ನಾಥಂ ಪಶ್ಯಾಮೋಽನೇನ ಚಕ್ಷುಷಾ ॥ ೧೮ ॥
ಏವಮುಕ್ತೋ ನೃಪಾಗ್ರ್ಯೇಣ ವೈಷ್ಣವೇನ ಪುರೋಹಿತಃ ।
ತೀರ್ಥಯಾತ್ರಾವ್ರಜಂ ಪಶ್ಯನ್ನುವಾಚ ಪ್ರಶ್ರಿತಂ ವಚಃ ॥ ೧೯ ॥

---

ಸಹಸ್ರಸಂಖ್ಯೆಯ ಅಶ್ವಮೇಧಗಳನ್ನೂ ಪರಮೈಶ್ವರ್ಯವಂತನಾದ ಆ ಭೂಪನು ಮೋಕ್ಷಾಪೇಕ್ಷೆಯಿಂದಲೇ ಮಾಡಿದನು. ಹೀಗೆ ಸಕಲ ಸದ್ಗುಣಗಳಿಂದಲೂ ಕೂಡಿದವನಾದ ಆ ನರಪತಿಯು ಭೂಮಂಡಲವನ್ನು ಪಾಲಿಸುತ್ತ ಸುಪ್ರಸಿದ್ಧವಾದ ಮಾಲವದೇಶದಲ್ಲಿ ಸಮಸ್ತ ರತ್ನಗಳಿಂದಲೂ ತುಂಬಿತುಳುಕುತ್ತ ಎರಡನೆಯ ಅಮರಾವತಿಯಂತಿರುವ ಅವಂತೀನಗರದಲ್ಲಿ ವಾಸಮಾಡುತ್ತಿದ್ದನು.

೧೫–೧೮. ಆ ನರಪತಿಯು ಆ ನಗರದಲ್ಲಿ ವಾಸಮಾಡುತ್ತ ಶ್ರೀಮನ್ಮಹಾವಿಷ್ಣುವಿನಲ್ಲಿ ಕಾಯಾ ವಾಚಾ ಮನಸಾ ಅನುತ್ತಮವೂ ಪರಮಾದ್ಭುತವೂ ಆದ ಭಕ್ತಿಯನ್ನು ಮಾಡಿದನು. ಆ ದೊರೆಯು ಒಂದಾನೊಂದು ದಿನ ಶ್ರೀಪತಿಯ ಪೂಜಾಸಮಯದಲ್ಲಿ ದೇವಾರ್ಚನ ಗೃಹವನ್ನು ನೇರಿ, ಅಲ್ಲಿ ವಿದ್ವಾಂಸರಿಂದಲೂ, ಕವಿಗಳಿಂದಲೂ, ತೀರ್ಥಯಾತ್ರಾದಿಗಳನ್ನು ಮಾಡಿ ಪ್ರಸಿದ್ಧರಾದವರಿಂದಲೂ, ಜ್ಯೋತಿಷ್ಕರಿಂದಲೂ, ಶ್ರೋತ್ರಿಯರಿಂದಲೂ ಕೂಡಿರುವ ಪುರೋಹಿತನನ್ನು ಕುರಿತು ಆದರಪೂರ್ವಕವಾಗಿ, "ಎಲೈ ಪುರೋಹಿತನೇ! ನಾವು ಈ ಬಾಹ್ಯ ಚಕ್ಷುಸ್ಸಿನಿಂದಲೇ ಸಾಕ್ಷಾತ್ ಜಗನ್ನಾಥನನ್ನು ಸಂದರ್ಶಿಸುವಂತಹ ಉತ್ತಮ ಕ್ಷೇತ್ರವಾವುದೆಂಬುದನ್ನು ತಿಳಿಯುವವನಾಗು" ಎಂದು ನುಡಿದನು.

೧೯–೨೧. ಪರಮ ವೈಷ್ಣವನಾದ ಆ ರಾಜಶ್ರೇಷ್ಠನಿಂತೆನಲು, ಪುರೋಹಿತನು ದೇವಾರ್ಚನ ಗೃಹದಲ್ಲಿ ನೆರೆದಿದ್ದ ಯಾತ್ರಿಕರ ಗುಂಪನ್ನು ಕಂಡು ವಿನಯಪೂರ್ವಕವಾಗಿ ಈ ಮಾತನ್ನಾಡಿದನು: "ಅಯ್ಯಾ ಬ್ರಾಹ್ಮಣರಿರಾ!

ಭೋ ಭೋಸ್ತೀರ್ಥಾಟನವ್ಯಗ್ರಾಃ ಧಾರ್ಮಿಕಾಸ್ತೀರ್ಥಕೋವಿದಾಃ ।
ಯದಾದಿಶತಿ ದೇವೋಽಯಂ ಯುಷ್ಮಾಭಿಸ್ತಚ್ಛೃತಂ ಕಿಲ ॥ ೨೦ ॥
ವಿಜ್ಞಾಯ ತಸ್ಯಾಭಿಪ್ರಾಯಂ ಕಶ್ಚಿತ್ಸುಬಹುತೀರ್ಥಗಃ ।
ಉವಾಚ ವಾಗ್ಮೀ ರಾಜಾನಂ ಬದ್ಧಾಂಜಲಿಪುಟಂ ಮುದಾ ॥ ೨೧ ॥
ರಾಜನ್ನನೇಕತೀರ್ಥಾನಿ ವ್ಯಚಾರಿಷಮಹಂ ಪ್ರಭೋ ।
ಆಶೈಶವಾತ್ ಕ್ಷಿತಿತಲೇ ಶ್ರುತಾನ್ಯನ್ಯೈಸ್ತು ಯಾನಿ ವೈ ॥ ೨೨ ॥
ಔಢ್ರದೇಶ ಇತಿ ಖ್ಯಾತೋ ವರ್ಷೇ ಭಾರತಸಂಜ್ಞಕೇ ।
ದಕ್ಷಿಣಸ್ಯೋದಧೇಸ್ತೀರೇ ಕ್ಷೇತ್ರಂ ಶ್ರೀಪುರುಷೋತ್ತಮಂ ॥ ೨೩ ॥
ಯತ್ರ ನೀಲಗಿರಿರ್ನಾಮ ಸಮಂತಾತ್ಕಾನನಾವೃತಃ ।
ತಸ್ಯೋತ್ಸಂಗೇ ಕಲ್ಪವೃಕ್ಷಃ ಸಮಂತಾತ್ಕ್ರೋಶಸಂಮಿತಃ ॥ ೨೪ ॥
ತಸ್ಯ ಛಾಯಾಂ ಸಮಾಕ್ರಮ್ಯ ಬ್ರಹ್ಮಹತ್ಯಾಂ ವ್ಯಪೋಹತಿ ।
ತಸ್ಯ ಪಶ್ಚಾದ್ದಿಶಿ ಖ್ಯಾತಂ ಕುಂಡಂ ರೌಹಿಣಸಂಜ್ಞಿತಂ ॥ ೨೫ ॥
ತತ್ಪೂರ್ಣಂ ಕಾರಣಾಂಭೋಭಿಃ ಸ್ಪರ್ಶನಾದೇವ ಮುಕ್ತಿದಂ ।
ತಸ್ಯಪ್ರಾಕ್ತಟಮಾಸ್ಥಾಯ ನೀಲೇಂದ್ರಮಣಿನಿರ್ಮಿತಾ ॥ ೨೬ ॥

---

"ತೀರ್ಥಯಾತ್ರೆಗಳನ್ನು ಮಾಡುವುದರಲ್ಲಿಯೇ ಮನಸ್ಸುಳ್ಳವರೂ, ಧಾರ್ಮಿಕರೂ, ಯಾತ್ರಾಸ್ಥಳಗಳ ವಿಷಯಗಳನ್ನು ಚೆನ್ನಾಗಿ ತಿಳಿದವರೂ ಆದ ನೀವೆಲ್ಲರೂ ನಮ್ಮ ಪ್ರಭುವಾದ ಈ ಇಂದ್ರದ್ಯುಮ್ನ ಮಹಾರಾಜನು ನುಡಿದುದನ್ನು ಕೇಳಿದಿರಷ್ಟೆ!" ಎಂದು ನುಡಿದ ಆ ಪುರೋಹಿತನ ಅಭಿಪ್ರಾಯವನ್ನು ತಿಳಿದು, ಅನೇಕ ತೀರ್ಥಯಾತ್ರೆಗಳನ್ನು ಮಾಡಿರುವವನೂ, ವಾಗ್ಮಿಯೂ ಆದ ಒಬ್ಬಾನೊಬ್ಬ ಬ್ರಾಹ್ಮಣನು ಬದ್ಧಾಂಜಲಿಪುಟನಾಗಿ ಆ ದೊರೆಯನ್ನು ಕುರಿತು ಬಹು ಸಂತೋಷದಿಂದಿಂತೆಂದನು.

೨೨. "ಎಲೈ ಪ್ರಭುವೇ! ನಾನು ಚಿಕ್ಕಂದಿನಿಂದಲೂ ಇತರರಿಂದ ಕೇಳಿ ತಿಳಿದು ಈ ಭೂಮಂಡಲದ ಅನೇಕ ತೀರ್ಥಕ್ಷೇತ್ರಗಳನ್ನು ಸಂಚಾರಮಾಡಿಕೊಂಡು ಬಂದಿರುತ್ತೇನೆ.

೨೩–೨೮. ಭರತಖಂಡದಲ್ಲಿ ಸುಪ್ರಸಿದ್ಧವಾದ ಓಢ್ರದೇಶವೆಂಬುದೊಂದುಂಟು. ಆ ದೇಶದಲ್ಲಿ ದಕ್ಷಿಣಸಾಗರ ತೀರದಲ್ಲಿ ಶ್ರೀ ಪುರುಷೋತ್ತಮವೆಂಬ ಕ್ಷೇತ್ರವಿರುವುದು. ಆ ಕ್ಷೇತ್ರದಲ್ಲಿ ಸುತ್ತಲೂ ಅರಣ್ಯದಿಂದ ಸುತ್ತು ಬಳಸಿರುವ ನೀಲಾಚಲವಿರುತ್ತದೆ. ಅದರ ತಪ್ಪಲಿನಲ್ಲಿ ಒಂದು ಕ್ರೋಶದಷ್ಟು ಸುತ್ತಳತೆಯುಳ್ಳ ಕಲ್ಪವೃಕ್ಷವಿರುವುದು. ಅದರ ನೆರಳನ್ನು ಸೇವಿಸಿದುದಾದರೆ ಬ್ರಹ್ಮಹತ್ಯಾದೋಷವು ನಿವಾರಣೆಯಾಗುತ್ತದೆ. ಆ ವೃಕ್ಷದ ಪಶ್ಚಿಮದಲ್ಲಿ ರೌಹಿಣವೆಂಬ ಕುಂಡವಿರುತ್ತದೆ. ಆ ರೌಹಿಣ ಕುಂಡವಾದರೋ ಕಾರಣಜಲದಿಂದ ಪೂರ್ಣವಾಗಿ ಕೇವಲ ಸ್ಪರ್ಶನದಿಂದಲೇ ಮುಕ್ತಿಪ್ರದವೆನಿಸಿರುವುದು. ಅಲ್ಲದೆ

**ತನುಃ ಶ್ರೀ ವಾಸುದೇವಸ್ಯ ಸಾಕ್ಷಾನ್ಮುಕ್ತಿಪ್ರದಾಯಿನೀ ।**
**ತತ್ರ ಕುಂಡೇ ತು ಯಃ ಸ್ನಾತ್ವಾ ದೃಷ್ಟ್ವಾ ತು ಪುರುಷೋತ್ತಮಂ ॥**
**ಅಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ಯ ವಿಮುಚ್ಯತೇ ।**
**ತತ್ರಾಸ್ತಿ ಆಶ್ರಮಶ್ರೇಷ್ಠಃ ಖ್ಯಾತಃ ಶಬರದೀಪಕಃ ॥ ೨೮ ॥**
**ಪಶ್ಚಿಮಸ್ಯಾಂ ದಿಶಿ ವಿಭೋರ್ವೇಷ್ಟಿತಃ ಶಬರಾಲಯೈಃ ।**
**ಯಸ್ಮಾದೇಕಪದೀ ಮಾರ್ಗೋ ಯೇನ ವಿಷ್ಣ್ವಾಲಯಂ ವ್ರಜೇತ್ ॥**
**ಯತ್ರ ಸಾಕ್ಷಾಜ್ಜಗನ್ನಾಥಃ ಶಂಖಚಕ್ರಗದಾಧರಃ ।**
**ಜಂತೂನಾಂ ದರ್ಶನಾನ್ಮುಕ್ತಿಂ ಯೋ ದದಾತಿ ಕೃಪಾನಿಧಿಃ ॥ ೩೦ ॥**
**ತತ್ರೋಷಿತಂ ಮಯಾ ರಾಜನ್ವರ್ಷಂ ಶ್ರೀಪುರುಷೋತ್ತಮೇ ।**
**ತುಷ್ಟ್ಯರ್ಥಂ ದೇವದೇವಸ್ಯ ವ್ರತಿನಾ ವನವಾಸಿನಾ ॥ ೩೧ ॥**
**ಪ್ರತಿರಾತ್ರಂ ಭಗವತೋ ದರ್ಶನಾಯ ದಿವೌಕಸಾಂ ।**
**ಆಗತಾನಾಂ ಮಹಾರಾಜ ದಿವ್ಯಗಂಧೋಽಹ್ಯಮಾನುಷಃ ॥ ೩೨ ॥**
**ನಾನಾಸ್ತುತಿವಚಃ ಕಲ್ಪಪುಷ್ಪವೃಷ್ಟಿಶ್ಚ ಲಭ್ಯತೇ ।**
**ಮಹಿಮೈಷಾ ನ ಕುತ್ರಾಪಿ ವಿಷ್ಣೋಃ ಸ್ಥಾನೇ ಪ್ರಕಾಶತೇ ॥ ೩೩ ॥**

---

ಅಲ್ಲಿಯೇ ಇಂದ್ರನೀಲಮಣಿನಿರ್ಮಿತವಾದ ಶ್ರೀ ವಾಸುದೇವಮೂರ್ತಿಯ ಪ್ರತಿಮೆಯೂ ಇರುವುದು. ಯಾರಾದರೆ ರೌಹಿಣಕುಂಡದಲ್ಲಿ ಮಿಂದು ಶ್ರೀ ಪುರುಷೋತ್ತಮ ಸ್ವಾಮಿಯನ್ನು ಸಂದರ್ಶಿಸುತ್ತಾರೆಯೋ ಅವರಿಗೆ ಒಂದು ಸಹಸ್ರ ಅಶ್ವಮೇಧಯಾಗಗಳ ಫಲವು ದೊರೆತು ಮುಕ್ತಿಯು ಲಭಿಸುತ್ತದೆ. ಅಲ್ಲಿಯೇ ಶಬರದೀಪಕವೆಂದು ಪ್ರಸಿದ್ಧವಾದ ಆಶ್ರಮವೂ ಇರುತ್ತದೆ.

೨೯–೩೦. ಪಶ್ಚಿಮ ದಿಕ್ಕಿನಲ್ಲಿ ಶ್ರೀ ಪುರುಷೋತ್ತಮಸ್ವಾಮಿಯ ಆಲಯವು ಶಬರರ ಮನೆಗಳಿಂದ ಸುತ್ತುವರೆದಿರುತ್ತದೆ. ಶಬರದೀಪಕಾಶ್ರಮದಿಂದ ಅಲ್ಲಿಗೆ ನೇರವಾದ ಕಾಲುದಾರಿಯಿರುವದು. ಅದು ವಿಷ್ಣುದೇವಾಲಯಕ್ಕೆ ಹೋಗುತ್ತದೆ. ಆ ವಿಷ್ಣುದೇವಾಲಯದಲ್ಲಿ ಕೃಪಾನಿಧಿಯಾದ ಜಗನ್ನಾಥಪ್ರಭುವು ಶಂಖಚಕ್ರಗಧಾಧರನಾಗಿ ಸಾಕ್ಷಾತ್ತಾಗಿ ನೆಲಸಿ ಸಮಸ್ತ ಜಂತುಗಳಿಗೂ ದರ್ಶನದಿಂದಲೇ ಮುಕ್ತಿಯನ್ನು ಅನುಗ್ರಹಿಸುತ್ತಿರುವನು.

೩೧. ಎಲೈ ದೊರೆಯೇ! ನಾನು ಆ ಪುರುಷೋತ್ತಮಕ್ಷೇತ್ರದಲ್ಲಿ ದೇವದೇವನಾದ ಶ್ರೀ ಜಗನ್ನಾಥನ ತುಷ್ಟ್ಯರ್ಥವಾಗಿ ವ್ರತವನ್ನು ಕೈಕೊಂಡು ವನವಾಸಮಾಡುತ್ತ ಒಂದು ವರ್ಷಕಾಲ ವಾಸಮಾಡಿದೆನು.

೩೨–೩೩. ಎಲೈ ಮಹಾರಾಜನೇ! ಅಲ್ಲಿ ಪ್ರತಿರಾತ್ರಿಯೂ ಸ್ವಾಮಿಯ ದರ್ಶನಕ್ಕಾಗಿ ಬರುವ ದೇವತೆಗಳ ಅಮಾನುಷವಾದ ದಿವ್ಯಗಂಧವೂ, ನಾನಾ ವಿಧವಾದ ಸ್ತುತಿವಚನಗಳೂ, ಕಲ್ಪವೃಕ್ಷದ ಪುಷ್ಪವೃಷ್ಟಿಯೂ ಭಕ್ತರಿಗೆ ಲಭಿಸುತ್ತದೆ. ಈ ಮಹಿಮೆಯು ಮತ್ತಾವ ವಿಷ್ಣುಕ್ಷೇತ್ರದಲ್ಲಿಯೂ ಕಂಡುಬರುವುದಿಲ್ಲವು.

**ಪೌರಾಣಿಕೀ ಪ್ರವೃತ್ತಿಶ್ಚ ಶ್ರುತಾ ತತ್ರ ಮಹೀಪತೇ ।**
**ವಾಯಸೋ ಮಾಧವಂ ದೃಷ್ಟ್ವಾ ತಿರ್ಯಗ್ದೇಹೋಽಪಿ ಮುಚ್ಯತೇ ॥**
**ನಾಧಿಕಾರೀ ಪುಣ್ಯಕೃತ್ಯೇ ಜ್ಞಾನಹೀನೋಽಪಿ ಪಾರ್ಥಿವ ।**
**ತೃಷಾರ್ತೋ ರೌಹಿಣೇ ಕುಂಡೇ ಜಲಂ ಪಾತುಂ ಸಮಾಗತಃ ॥ ೩೫ ॥**
**ತ್ಯಕ್ತ್ವಾ ಕಾಲವಶಾತ್ಪ್ರಾಣಾನ್ವಿಷ್ಣುಸಾರೂಪ್ಯಮಾಪ್ತವಾನ್ ।**
**ಅಹಮಾಸಂ ಪುರಾ ಮೂರ್ಖಸ್ತತ್ಪ್ರಸಾದಾತ್ತು ಸಾಂಪ್ರತಂ ॥ ೩೬ ॥**
**ಅಷ್ಟಾದಶಸು ವಿದ್ಯಾಸು ಶೇಷೋ ವಾ ಸ್ಯಾನ್ಮಮಾಪರಃ ।**
**ಮತಿಶ್ಚ ನಿರ್ಮಲಾ ಜಾತಾ ವಿಷ್ಣೋಃ ಪಶ್ಯಾಮಿ ನಾಪರಂ ॥ ೩೭ ॥**
**ತ್ವಂ ಯಸ್ಮಾದ್ವಿಷ್ಣುಭಕ್ತೋಽಸಿ ಸತತಂ ಚ ದೃಢವ್ರತಃ ।**
**ಅತಸ್ತವೋಪದೇಶಾರ್ಥಮಾಗತೋಽಹಂ ತವಾಂತಿಕಂ ॥ ೩೮ ॥**
**ನೋ ಧನಂ ನ ಚ ಭೂಮಿಂ ಚ ತ್ವತ್ತಃ ಸಂಪ್ರಾರ್ಥ್ಯತೇಽಧುನಾ ।**
**ವ್ಯಲೀಕಮೇತನ್ಮಾ ಬುದ್ಧ್ವಾ ತತ್ರಸ್ಥಂ ಶ್ರೀಧರಂ ಭಜ ॥ ೩೯ ॥**

---

೩೪–೩೭. ಎಲೈ ಮಹೀಪತಿಯೇ! ಅಲ್ಲಿಯೇ ನಾನೊಂದು ಪುರಾಣ ಕಥೆಯನ್ನೂ ಕೇಳಿದೆನು. ಆ ಕ್ಷೇತ್ರದಲ್ಲಿ ತಿರ್ಯಕ್ಕಾದ ಒಂದು ಕಾಗೆಯೂ ಸಹ ಮಾಧವನನ್ನು ಸಂದರ್ಶಿಸಿ ಮುಕ್ತಿಯನ್ನು ಪಡೆಯಿತೆಂಬುದೇ ಆ ಕಥೆ. ಎಲೈ ಪಾರ್ಥಿವನೇ! ಪುಣ್ಯಕರ್ಮಗಳಲ್ಲಿ ಅಧಿಕಾರವೇ ಇಲ್ಲದವನೂ, ಜ್ಞಾನವಿಹೀನನೂ ಆದ ಯಾವನೋ ಒಬ್ಬನು ಬಾಯಾರಿ ಅಲ್ಲಿಯ ರೌಹಿಣಕುಂಡದಲ್ಲಿ ಜಲಪಾನ ಮಾಡಲು ಬಂದನು. ಕಾಲವಶದಿಂದ ಅವನು ಅಲ್ಲಿಯೇ ಪ್ರಾಣಗಳನ್ನು ತ್ಯಜಿಸಿ ಕೂಡಲೇ ವಿಷ್ಣುಸಾರೂಪ್ಯವನ್ನು ಪಡೆದನು. ಎಲೈ ಪ್ರಭುವೇ! ಈ ಮೊದಲು ನಾನು ಕೇವಲ ಮೂರ್ಖನಾಗಿದ್ದೆನು. ಈಗಲಾದರೋ ಹದಿನೆಂಟು ವಿದ್ಯೆಗಳಲ್ಲಿಯೂ ಆದಿಶೇಷನೇ ನನಗೆ ಎರಡನೆಯವನೆಂಬಷ್ಟುಮಟ್ಟಿಗೆ ವಿದ್ಯಾವಂತನಾಗಿರುವೆನು. ನನಗೀಗ ನಿರ್ಮಲವಾದ ಬುದ್ಧಿಯುಂಟಾಗಿರುವುದು. ಇದು ಆ ವಿಷ್ಣುವಿನ ಪ್ರಸಾದದಿಂದಲೇ ದೊರೆತುದು. ನಾನು ಆ ಸ್ವಾಮಿಯನ್ನಲ್ಲದೆ ಮತ್ತಾರನ್ನೂ ನೋಡುವುದಿಲ್ಲವು.

೩೮–೩೯. ಎಲೈ ಇಂದ್ರದ್ಯುಮ್ನನೃಪಾಲನೇ! ನೀನು ವಿಷ್ಣುಭಕ್ತನಾಗಿರುವೆ; ದೃಢವಾದ ವ್ರತವನ್ನೂ ಕೈಕೊಂಡಿರುವೆ. ಆದುದರಿಂದ ನಿನಗೆ ಶ್ರೀ ಪುರುಷೋತ್ತಮ ಕ್ಷೇತ್ರಮಾಹಾತ್ಮ್ಯವನ್ನುಪದೇಶಿಸಲೋಸುಗವೇ ನಾನು ನಿನ್ನ ಬಳಿಗೆ ಬಂದುದು. ನಾನು ಪ್ರಕೃತದಲ್ಲಿ ನಿನ್ನಲ್ಲಿ ಧನವನ್ನಾಗಲಿ, ಭೂಮಿಯನ್ನಾಗಲಿ ಪ್ರಾರ್ಥಿಸುವುದಿಲ್ಲವು. ಆದರೆ ನಾನು ಹೇಳಿದುದು ಸುಳ್ಳೆಂದು ಭಾವಿಸದೆ ನೀನು ಆ ಕ್ಷೇತ್ರಕ್ಕೆ ಹೋಗಿ ಅಲ್ಲಿ ನೆಲಸಿರುವ ಶ್ರೀಧರನನ್ನು ಸೇವೆ ಮಾಡು.”

ಏವಮುಕ್ತ್ವಾತು ಜಟಿಲಃ ಸರ್ವೇಷಾಂ ಪಶ್ಯತಾಂ ತದಾ ।
ಅಂತರ್ಧಾನಂ ಜಗಾಮಾಶು ರಾಜಾ ಪರಮವಿಸ್ಮಯಂ ॥ ೪೦ ॥
ಅವಾಪ್ಯ ವ್ಯಾಕುಲಮತಿಃ ಕಥಂ ಮೇ ನಿರ್ವಹೇದಿತಿ ।
ಪುರೋಹಿತಮುವಾಚೇದಂ ತಸ್ಯೈವಾರ್ಥಸ್ಯ ಸಾಧನೇ ॥ ೪೧ ॥

ಇಂದ್ರದ್ಯುಮ್ನ ಉವಾಚ :—

ಅಮಾನುಷಮಿದಂ ವೃತ್ತಂ ಶ್ರುತ್ವೇದಾನೀಮಮಾನುಷಾತ್ ।
ಬುದ್ಧಿಸ್ತ್ವರಯತೇ ತತ್ರ ಯತ್ರಾಸ್ತೇಽಸೌ ಗದಾಧರಃ ॥ ೪೨ ॥
ಮಮ ಧರ್ಮಾರ್ಥಕಾಮಾ ಹಿ ತ್ವದಾಯತ್ತಾ ದ್ವಿಜೋತ್ತಮ ।
ಅವಿರುದ್ಧಾಸ್ತ್ವತ್ಪ್ರಸಾದಾತ್ತ್ರಿವರ್ಗಃ ಸಾಧಿತೋ ಮಯಾ ॥ ೪೩ ॥
ಇದಾನೀಂ ಚೇದ್ದ್ವಿಜಶ್ರೇಷ್ಠ ತ್ವಮತ್ರಾರ್ಥೇ ಗಮಿಷ್ಯಸಿ ।
ಚತುರ್ವರ್ಗಸ್ತು ಸಂಪೂರ್ಣಃ ಪ್ರಾಪ್ತಃಸ್ಯಾತ್ಸಾಂಪ್ರತಂ ಮಯಾ॥ ೪೪ ॥

ಪುರೋಹಿತ ಉವಾಚ :—

ಬಾಢಮೇತತ್ಕರಿಷ್ಯಾಮಿ ಯಥಾ ದ್ರಕ್ಷ್ಯಸಿ ಕೇಶವಂ ।
ಚರ್ಮಾಚ್ಛಾದಿತ ಚಕ್ಷುರ್ಭ್ಯಾಂ ಸಾಕ್ಷಾನ್ಮುಕ್ತಿಪ್ರದಂ ವಿಭುಂ ॥ ೪೫ ॥

---

೪೦–೪೧. ಎಲೈ ವಿಪ್ರರೇ ! ಜಟಿಲನಾದ ಆ ಬ್ರಾಹ್ಮಣೋತ್ತಮನು ಈ ರೀತಿ ನುಡಿದು ಎಲ್ಲರೂ ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನವಾದನು. ಆಗ ಇಂದ್ರದ್ಯುಮ್ನರಾಜನಾದರೋ ಪರಮಾಶ್ಚರ್ಯಭರಿತನಾಗಿ ಪುರುಷೋತ್ತಮ ಕ್ಷೇತ್ರದ ಯಾತ್ರೆಯು ನನಗೆ ಸಾಧ್ಯವಾಗುವುದೆಂತೆಂದು ವ್ಯಾಕುಲಗೊಂಡು ಆ ವಿಷಯವನ್ನು ಕುರಿತೇ ಪುರೋಹಿತನನ್ನು ಕುರಿತು ಇಂತೆಂದನು.

೪೨–೪೪. ಇಂದ್ರದ್ಯುಮ್ನನು ಹೇಳುತ್ತಾನೆ:—'' ಎಲೈ ಪುರೋಹಿತನೇ ! ಈ ವೃತ್ತಾಂತವು ಅಮಾನುಷವಾದುದು. ಇದನ್ನು ಅಮಾನುಷವ್ಯಕ್ತಿಯಿಂದಲೇ ಕೇಳಿದುದರಿಂದ ಆ ಗದಾಧರಸ್ವಾಮಿಯು ಅಧಿಷ್ಠಿಸಿರುವ ಕ್ಷೇತ್ರಕ್ಕೆ ಹೋಗಬೇಕೆಂದು ನನ್ನ ಮನಸ್ಸು ತ್ವರೆಗೊಳ್ಳುತ್ತಿರುವುದು. ಅಯ್ಯಾ ದ್ವಿಜೋತ್ತಮನೇ ! ನನ್ನ ಧರ್ಮಾರ್ಥಕಾಮಗಳೆಲ್ಲವೂ ನಿನ್ನನ್ನೇ ಅವಲಂಬಿಸಿವೆ. ನಿನ್ನ ಪ್ರಸಾದದಿಂದಲೇ ಯಾವ ವಿರೋಧವೂ ಸಂಭವಿಸದಂತೆ ನಾನವುಗಳನ್ನು ಸಾಧಿಸಿರುವೆನು. ಈಗಲಾದರೋ ನೀನು ಆ ಕ್ಷೇತ್ರಕ್ಕೆ ನನ್ನೊಡನೆ ಹೊರಡುವೆಯಾದರೆ ನನಗೆ ಚತುರ್ವಿಧ ಪುರುಷಾರ್ಥಗಳೂ ಸಂಪೂರ್ಣವಾಗಿ ಲಭಿಸಿದಂತಾಗುತ್ತದೆ.''

೪೫. ಪುರೋಹಿತನು ಹೇಳುತ್ತಾನೆ:—'' ಎಲೈ ಮಹಾರಾಜನೇ ! ಅವಶ್ಯವಾಗಿ ಆಗಬಹುದು. ನೀನು ಹೇಳಿದಂತೆಯೇ ಮಾಡುತ್ತೇನೆ. ನೀನು ಆ ಕ್ಷೇತ್ರದಲ್ಲಿ ಮುಕ್ತಿಪ್ರದನೂ, ವಿಭುವೂ ಆದ ಶ್ರೀ ಕೇಶವನನ್ನು ಈ ಚರ್ಮ ಚಕ್ಷುಸ್ಸಿನಿಂದಲೇ ಸಂದರ್ಶಿಸುವಂತೆ ಪ್ರಯತ್ನಮಾಡುತ್ತೇನೆ.

**ತದುಚ್ಛಿಷ್ಟಂ ದಿವ್ಯಭೋಗಮುಪಭುಂಕ್ತೇ ದಿವಾನಿಶಂ ।**
**ನಾನ್ಯೋಽಸ್ಯ ಸದೃಶೋ ಲೋಕೇ ಪೃಥಿವ್ಯಾಂ ಸಚರಾಚರೇ ॥ ೬೧ ॥**
**ಯಾದೃಶೋ ವಿಷ್ಣುಭಕ್ತೋಽಯಂ ಶಬರೋ ನೀಲಪರ್ವತೇ ।**
**ಕಿಂ ಗತ್ವಾ ಸ್ವಗೃಹೇ ಮೇಽದ್ಯ ಕುಟುಂಬೇನಾಽಸುಖಾತ್ಮನಾ ।**
**ಅನೇನ ಸಖ್ಯಂ ನಿಷ್ಪಾದ್ಯ ಸ್ಥಾಸ್ಯಾಮ್ಯತ್ರ ವನಾಂತರೇ ॥ ೬೨ ॥**
**ಚಿಂತಯಿತ್ವಾ ಚಿರಂ ವಿಪ್ರಃ ಶ್ರೀಕೃಷ್ಣಾಸಕ್ತಮಾನಸಃ ॥ ೬೩ ॥**
**ಪುನಃ ಪ್ರೋವಾಚ ಶಬರಂ ಮಯಿ ತೇ ಚೇದನುಗ್ರಹಃ ।**
**ಸಾಧೋ ಸಖ್ಯಂ ತ್ವಯಾ ಕಾರ್ಯಮಿತಿ ನಿಶ್ಚಯೋ ಮಹಾನ್ ॥ ೬೪ ॥**
**ಕಿಂ ಗತ್ವಾ ಸೇವಯಾ ರಾಜ್ಞಃ ಪರತ್ರಾಸುಖಹೇತುನಾ ।**
**ಅತ್ರ ಸ್ಥಿತ್ವಾ ತ್ವಯಾ ಸಾರ್ಧಮುಪಾಸ್ಯ ಮಧುಸೂದನಂ ॥ ೬೫ ॥**

---

ವಿಶ್ವಾವಸುವಿನ ಮಾತುಗಳನ್ನು ಕೇಳಿ, ಆ ಕ್ಷೇತ್ರದಲ್ಲಿ ನಡೆಯುತ್ತಿರುವ ದುರ್ಲಭವಾದ ದೇವಪೂಜಾದಿಗಳ ವಿಷಯವನ್ನೂ ತಿಳಿದು ಆ ವಿದ್ಯಾಪತಿಯು ರೋಮಾಂಚಿತನಾಗಿ ಆನಂದಾಶ್ರುಗಳನ್ನು ಸುರಿಸುತ್ತ ಕಣ್ಣುಮುಗಿದುಕೊಂಡೇ ತಾನು ಕೃತಾರ್ಥನಾದೆನೆಂದುಕೊಂಡನು : "ಆಹಾ! ಶಬರ ಜಾತಿಯಲ್ಲಿ ಜನಿಸಿರುವ ಈ ವಿಶ್ವಾವಸುವು ಅವ್ಯಯನಾದ ಪರಮೇಶ್ವರನನ್ನು ಪ್ರತಿನಿತ್ಯವೂ ಸಾಕ್ಷಾತ್ತಾಗಿ ಸಂದರ್ಶಿಸಿ, ಆ ಸ್ವಾಮಿಯ ಉಚ್ಛಿಷ್ಟರೂಪವಾದ ದಿವ್ಯ ಭೋಗಗಳನ್ನು ಹಗಲಿರಳೂ ಸೇವಿಸುತ್ತಿದ್ದಾನೆ. ವಿಷ್ಣುಭಕ್ತನಾಗಿ, ನೀಲಾಚಲದಲ್ಲಿ ವಾಸ ಮಾಡುತ್ತಿರುವ ಶಬರನಾದ ಈ ಪುಣ್ಯಾತ್ಮನಿಗೆಣೆಯಾದವನು ಚರಾಚರ ಜಗತ್ತಿನಲ್ಲಿಯೆ ಯಾರೂ ಇರುವುದಿಲ್ಲ. ಈ ಕ್ಷೇತ್ರದ ಮಾಹಾತ್ಮ್ಯವಿಂತಿರಲು ನಾನು ಕೇವಲ ದುಃಖರೂಪವಾದ ಮನೆಗೆ ಹಿಂತಿರುಗಿ ಆ ಸಂಸಾರದಿಂದ ಯಾವ ಬಗೆಯ ಪ್ರಯೋಜನವನ್ನು ತಾನೆ ಪಡೆದೇನು? ಈ ಶಬರನೊಡನೆಯೇ ಸ್ನೇಹವನ್ನು ಬೆಳಸಿ ಈ ಕಾಡಿನಲ್ಲಿಯೇ ವಾಸಮಾಡುತ್ತೇನೆ."

೬೩–೬೬. ಎಲೈ ವಿಪ್ರರೇ! ಶ್ರೀಕೃಷ್ಣಪರಮಾತ್ಮನಲ್ಲಿಯೇ ಆಸಕ್ತವಾದ ಚಿತ್ತವುಳ್ಳ ವಿದ್ಯಾಪತಿಯು ಹೀಗೆ ಬಹಳ ಹೊತ್ತು ಆಲೋಚಿಸುತಿದ್ದು ಆ ಬಳಿಕ ಶಬರನಾದ ವಿಶ್ವಾವಸುವನ್ನು ಕುರಿತು ಪುನಃ ಹೇಳತೊಡಗಿದನು! "ಓ ಶಬರನೇ! ನಿನಗೆ ನನ್ನಲ್ಲಿ ಸಂಪೂರ್ಣವಿಶ್ವಾಸವಿರುವುದಾದರೆ ಸಾಧುವಾದ ನಿನ್ನೊಡನೆ ಮೈತ್ರಿಯನ್ನು ಬೆಳಸಬೇಕೆಂದು ನನಗೆ ನಿಶ್ಚಯವುಂಟಾಗಿರುವುದು. ಇನ್ನು ಇಲ್ಲಿಂದ ಹಿಂತಿರುಗಿ ಹೋಗಿ ಪರಲೋಕ ಸುಖಕ್ಕೆ ಏನೂ ನೆರವಾಗದ ಆ ರಾಜಸೇವೆಯನ್ನು ಮಾಡಿಕೊಂಡಿರುವುದರಿಂದ ನನಗೆ ಯಾವ ಪ್ರಯೋಜನವಾದೀತು? ಆದುದರಿಂದ ನಾನಿಲ್ಲಿಯೇ ನಿಂತು ಗೆಳೆಯನಾದ ನಿನ್ನೊಡನೆ ಶ್ರೀ ಮಧುಸೂದನನ ಸೇವೆಯನ್ನು ಮಾಡಿಕೊಂಡು ವಾಸಮಾಡುತ್ತೇನೆ. ಪುನಃ ನನಗೀದೇಹ ಸಂಬಧವೇ ಒದಗದಂತೆ ಪ್ರಯತ್ನಿಸುತ್ತೇನೆ. ಎಲೈ ಮಿತ್ರನೇ!

ಯಥಾ ಪುನರ್ದೇಹಬಂಧೋ ಯತಿಷ್ಯೇ ನ ಭವೇನ್ಮಮ ।
ಸಾಧು ಮಿತ್ರ ತ್ವಯಾ ಸಾರ್ಧಂ ಭಾಗ್ಯಾನ್ಮೇ ಸಂಗಮೋಽಭವತ್ ।
ದುಸ್ತರಂ ಭವಸಂಸಾರಂ ತರಿಷ್ಯೇ ತ್ವತ್ಪ್ರಸಾದತಃ ॥ ೧೬ ॥
ಸಾರಮೇತತ್ಪ್ರಶಂಸಂತಿ ಸಂಸಾರೇ ಭವಸಾಗರೇ ॥ ೧೭ ॥
ಯದ್ವೈಷ್ಣವೇನ ಮಿತ್ರತ್ವಂ ದುಃಖಸಂಸಾರಪಾರದಂ ।
ಮಿತ್ರಸ್ಯ ಸಹವಾಸೇನ ಪುನಃ ಪ್ರತ್ಯಕ್ಷಮೇಷ್ಯತಿ ॥ ೧೮ ॥
ಭಗವಾನ್ಪುಂಡರೀಕಾಕ್ಷಃ ಶಂಖಚಕ್ರಗದಾಧರಃ ।
ಇಂದ್ರದ್ಯುಮ್ನೋ ನರಪತಿರ್ಮಯಿ ಪ್ರತ್ಯಾಗತೇ ಸಖೇ ॥ ೧೯ ॥
ಭಗವಂತಂ ಸಮಾರಾಧ್ಯ ಮಿಹೈವ ಸ ನಿವತ್ಸ್ಯತಿ ।
ಪ್ರಸಾದಂ ವಿಪುಲಂ ಚಾತ್ರ ಚಿಕೀರ್ಷುರ್ಭಗವತ್ಪ್ರಿಯಂ ॥ ೨೦ ॥
ಸಹಸ್ರಮುಪಚಾರಾಣಾಂ ಪೂಜನಾಯ ಜಗತ್ಪತೇಃ ।
ರಚಯಿಷ್ಯಾಮೀತಿ ಮಹತ್ಪ್ರತಿಜ್ಞಾಸೀನ್ಮಹೀಪತೇಃ ॥ ೨೧ ॥
ಪ್ರತಿಶ್ರುತಂ ತತ್ಪುರತಃ ಪ್ರೀತಸ್ತನ್ಮೇಽನುಮನ್ಯತಾಂ ॥ ೨೨ ॥

ಶಬರ ಉವಾಚ :—

ಸಖೇ ಪುರಾತನೀ ವಾರ್ತಾ ಪ್ರಸಿದ್ಧೈವಾತ್ರ ತಾದೃಶೀ ॥ ೨೩ ॥

---

ನಿನ್ನೊಡನೆ ನನಗೆ ಸಮಾಗಮವಾದುದು ಒಳ್ಳೆಯದಾಯಿತು. ನಾನು ನಿನ್ನ ಅನುಗ್ರಹದಿಂದ ದುಸ್ತರವಾದ ಈ ಭವಸಾಗರವನ್ನು ದಾಟುವೆನು.

೧೭–೨೨. ಅತ್ಯಂತ ದುಃಖಕರವಾದ ಈ ಸಂಸಾರದಿಂದ ಕಡೆಹಾಯಿಸುವ ವಿಷ್ಣುಭಕ್ತನ ಸಹವಾಸವೂ, ಗೆಳೆತನವೂ ಈ ಭವಸಾಗರದಲ್ಲಿ ಸಾರವೆಂದು ಬಲ್ಲವರು ಹೇಳುತ್ತಾರೆ. ಮಿತ್ರನಾದ ನಿನ್ನ ಸಹವಾಸದಿಂದ ಶಂಖಚಕ್ರಗದಾಧರನೂ, ಪುಂಡರೀಕಾಕ್ಷನೂ ಆದ ಶ್ರೀಮನ್ಮಹಾವಿಷ್ಣುವು ನನಗೆ ಪ್ರತ್ಯಕ್ಷನಾಗುತ್ತಾನೆ. ಎಲೈ ಮಿತ್ರನೇ! ಮತ್ತೊಂದು ವಿಷಯವನ್ನು ನಿನಗೆ ಹೇಳುತ್ತೇನೆ; ಕೇಳು. ನಾನು ಇಲ್ಲಿಂದ ಹಿಂತಿರುಗಿ ಹೋದ ಮೇಲೆ ಇಂದ್ರದ್ಯುಮ್ನ ಮಹಾರಾಜನು ಈ ಕ್ಷೇತ್ರದಲ್ಲಿ ನೆಲಸಿರುವ ಭಗವಂತನನ್ನು ಆರಾಧಿಸಿ ಸಂತೋಷಗೊಳಿಸಲು ಇಲ್ಲಿಯೇ ಬಂದು ನೆಲಸುವನು. ಆತನು ಭಗತ್ಪ್ರೀತಿಗಾಗಿ ಇಲ್ಲಿ ದೊಡ್ಡದೊಂದು ದೇವಾಲಯವನ್ನು ಕಟ್ಟಿಸಬಯಸಿರುವನು. ನಾನು ಆ ದೊರೆಗೆ ಸ್ವಾಮಿಯ ಸಹಸ್ರೋಪಚಾರ ಪೂಜೆಯನ್ನು ಮಾಡಿಸುವೆನೆಂದು ಮಹಾಪ್ರತಿಜ್ಞೆಯನ್ನು ಮಾಡಿರುತ್ತೇನೆ. ಈ ರೀತಿ ನಾನು ಆತನ ಮುಂದೆ ಮಾಡಿರುವ ಈ ಪ್ರತಿಜ್ಞೆಯನ್ನು ನೀನೂ ಸಹ ಸುಪ್ರೀತನಾಗಿ ಒಪ್ಪುವವನಾಗು.''

೨೩–೨೫. ಶಬರನು ಹೇಳುತ್ತಾನೆ:—'' ಅಯ್ಯಾ ಮಿತ್ರನೇ! ನೀನೀಗ ನುಡಿದ ಸುದ್ದಿಯು ಈ ಕ್ಷೇತ್ರದಲ್ಲಿ ಬಹು ಹಿಂದಿನಿಂದಲೂ ಪ್ರಸಿದ್ಧವಾಗಿಯೇ ಇರುತ್ತದೆ. ನೀನು ಹೇಳಿದಂತೆ ಇಂದ್ರದ್ಯುಮ್ನ ಮಹಾರಾಜನು ಇಲ್ಲಿಗೆ ಬಂದು

ತ್ವಯಾ ಯಥೈವ ಕಥಿತ ಇಂದ್ರದ್ಯುಮ್ನಸಮಾಗಮಃ ।
ಕೇವಲಂ ಮಾಧವಂ ತತ್ರ ನದ್ರಕ್ಷ್ಯತಿ ಮಹೀಪತಿಃ ॥ ೭೪ ॥
ಅಚಿರಾದೇವ ಭಗವಾನ್ಸ್ವರ್ಣವಾಲುಕಯಾವೃತಃ ।
ಪ್ರತಿಜಜ್ಞೇ ಯಮಾಯೈತದಂತರ್ಧಾನಂ ಗಮಿಷ್ಯತಿ ॥ ೭೫ ॥
ಮಹಾಭಾಗ್ಯಪರೀಪಾಕಾತ್ಪ್ರತ್ಯಕ್ಷೋಽಯಂ ತ್ವಯಾ ಕೃತಃ ।
ಇಂದ್ರದ್ಯುಮ್ನಾಗಮಾಭ್ಯಾಸೇ ಧರ್ಮಂ ಸ ವ್ಯವಧಾಸ್ಯತಿ ॥ ೭೬ ॥
ವಿಷೋಽರ್ಥಸ್ತು ತ್ವಯಾ ಮಿತ್ರ ನ ವಕ್ತವ್ಯೋ ನೃಪಾಗ್ರತಃ ।
ಆಗತ್ಯ ಸೋಽತ್ರ ನೃಪತಿರದೃಷ್ಟ್ವಾ ಪರಮೇಶ್ವರಂ ॥ ೭೭ ॥
ಪ್ರಾಯೋಪವೇಶವ್ರತವಾನ್ಸ್ವಪ್ನೇ ದೃಷ್ಟ್ವಾ ಗದಾಧರಂ ।
ತದಾದೇಶಾದ್ದಾರುಮಯಂ ಪ್ರಭೋರ್ಲಿಂಗಚತುಷ್ಟಯಂ ॥ ೭೮ ॥
ಪೂಜಯಿಷ್ಯತಿ ಭಕ್ತ್ಯಾಚ ಪ್ರತಿಷ್ಠಾಪ್ಯ ಸ್ವಯಂಭುವಾ ।
ಸ್ಥಿತಿರತ್ರ ಹರೇರ್ಯಾವದಾವಯೋರ್ವಂಶಸಂಸ್ಥಿತಿಃ ॥ ೭೯ ॥
ಅನುಗ್ರಹಾದ್ಭಗವತೋ ನಾತ್ರ ಕಾರ್ಯಾ ವಿಚಾರಣಾ ।
ತದತ್ರಾರ್ಥೇ ಸಖೇ ಖೇದಂ ಮಾವ್ರಜ ಕ್ಷಿಪ್ರಮೇವ ಹಿ ॥ ೮೦ ॥

---

ದಾದರೆ ಆತನು ಇಲ್ಲಿಯ ನೀಲಾದ್ರಿಯಲ್ಲಿ ಶ್ರೀಮಾಧವನನ್ನು ಕಾಣುವುದಿಲ್ಲ. ಭಗವಂತು ನಇನ್ನು ಸ್ವಲ್ಪಕಾಲದಲ್ಲಿಯೇ ಸ್ವರ್ಣವಾಲುಕೆ(ಚಿನ್ನದ ಮರಳಿನಿಂದ) ಯಿಂದ ಮುಚ್ಚಿಹೋಗುವನು. ಆತನು ಈ ರೀತಿ ಯಮನಿಗೆ ಪ್ರತಿಜ್ಞೆಮಾಡಿ ಹೇಳಿರುವುದರಿಂದ ಆತನು ಅಂತರ್ಧಾನವನ್ನೇ ಹೊಂದುತ್ತಾನೆ.

೭೬–೮೦. ಎಲೈ ವಿದ್ಯಾಪತಿಯೇ! ನೀನು ನಿನ್ನ ಮಹಾಭಾಗ್ಯಪರಿಪಾಕ ದಿಂದ ಶ್ರೀಮನ್ಮಹಾವಿಷ್ಣುವನ್ನು ಪ್ರತ್ಯಕ್ಷೀಕರಿಸಿಕೊಂಡೆ. ಆದರೆ ಇಂದ್ರದ್ಯುಮ್ನ ಮಹಾರಾಜನಿಲ್ಲಿಗೆ ಬರುವ ವೇಳೆಗೆ ಸ್ವಾಮಿಯು ಖಂಡಿತವಾಗಿಯೂ ಅಂತ ರ್ಧಾನವಾಗುತ್ತಾನೆ. ಅಯ್ಯಾ ಮಿತ್ರನೇ! ನೀನು ಈ ವಿಷಯವನ್ನು ಆ ಮಹಾ ರಾಜನಿಗೆ ತಿಳಿಸಬೇಡ. ನೃಪತಿಯು ಇಲ್ಲಿಗೈತಂದು ಆ ಪರಮೇಶ್ವರನನ್ನು ಕಾಣದೆ ಪ್ರಾಯೋಪವೇಶವ್ರತವನ್ನು ಕೈಕೊಂಡು ತರುವಾಯ ಸ್ವಪ್ನದಲ್ಲಿ ಶ್ರೀಗದಾಧರಸ್ವಾಮಿಯನ್ನು ಕಂಡು ಆತನ ಅಪ್ಪಣೆಯಂತೆ ಆತನ ನಾಲ್ಕು ಬಗೆಯ ಚಿಹ್ನೆಗಳ ರೂಪವಾದ ಮೂರ್ತಿಗಳನ್ನು ಮರದಲ್ಲಿ ಮಾಡಿಸಿ ಬ್ರಹ್ಮನಿಂದ ಪ್ರತಿಷ್ಠೆಮಾಡಿಸಿ ಭಕ್ತಿಯಿಂದ ಪೂಜಿಸುತ್ತಾನೆ. ಈ ಕ್ಷೇತ್ರದಲ್ಲಿ ಎದುವರೆಗೂ ಶ್ರೀಹರಿಯು ನೆಲಸಿರುತ್ತಾನೆಯೋ ಅದುವರೆಗೂ ನಮ್ಮ ವಂಶವೂ ಆ ಭಗವಂತನ ಅನುಗ್ರಹದಿಂದ ಸ್ಥಿರವಾಗಿರುತ್ತದೆ. ಇದರಲ್ಲಿ ಯಾವ ವಿಚಾರವೂ ಇರುವುದಿಲ್ಲವು. ಆದುದರಿಂದ ನೀನೀ ವಿಷಯದಲ್ಲಿ ಖೇದಗೊಳ್ಳಬೇಡ. ಜಾಗ್ರತೆಯಾಗಿಯೇ ನಿನ್ನ ಊರಿಗೆ ಹೊರಡು.

ನಿರ್ವರ್ತ್ಯತೇಽಚಿರಾದೇವ ಮಿತ್ರೇದಾನೀಂ ಸುಖಂ ಸ್ವಪ ।
ಪ್ರಾತರ್ದೃಷ್ಟ್ವಾ ಪುನರ್ದೇವಂ ನೀಲೇಂದ್ರಾಶ್ಮಮಯಂ ವಿಭುಂ ॥ ೮೧ ॥
ಸಿಂಧೌ ಸ್ನಾತ್ವಾ ತಸ್ಯ ತಟೇ ನಿವಾಸಾಯ ಮಹೀಪತೇಃ ।
ದ್ರಕ್ಷ್ಯಾವಃ ಸಾಧು ಸಂಸ್ಥಾನಂ ಯಥಾಭಿಲಷಿತಂ ಸಖೇ ॥ ೮೨ ॥
ಇತ್ಯನ್ಯಾಶ್ಚ ಕಥಾಃ ಪುಣ್ಯಾಃ ಕೃತ್ವಾ ತೌ ಚ ಪರಸ್ಪರಂ ।
ಶುಭಸ್ಥಾನೇ ಚಾಸ್ವಪಿತಾಂ ಶಯನೇ ಪಲ್ಲವಾಸ್ತೃತೇ ॥ ೮೩ ॥
ಪ್ರಭಾತಾಯಾಂತು ಶರ್ವರ್ಯಾಂ ತೀರ್ಥರಾಜೋದಕೇನ ತೌ ।
ಸ್ನಾನಂ ನಿರ್ವರ್ತ್ಯ ವಿಧಿವನ್ಮಾಧವಂ ಪ್ರಣಿಪತ್ಯಚ ॥ ೮೪ ॥
ರಾಜಾರ್ಹಸ್ಥಾನಂ ನಿರ್ಣೀಯ ನಿವಾಸಾಯಗತೌ ಪುನಃ ।
ತತ್ರ ಮಿತ್ರೇಣಾಭಿಮಂತ್ರ್ಯ ರಾಜ್ಞೋ ನಿರ್ದೇಶಕಾರಣಾತ್ ॥ ೮೫ ॥
ರಥಮಾರುಹ್ಯ ವಿಪ್ರಃ ಸತ್ವವಂತೀ ಪುರಮಾಯಯೌ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಭಗವದ್ದರ್ಶನಾನಂತರಂ ವಿದ್ಯಾಪತೇಃ ಸ್ವದೇಶಗಮನೋತ್ಸುಕ ವರ್ಣನಂ"ನಾಮ ಅಷ್ಟಮೋಽಧ್ಯಾಯಃ

---

೮೧–೮೨. ಎಲೈ ಮಿತ್ರನೇ! ನೀನು ಜಾಗ್ರತೆಯಾಗಿಯೇ ಹಿಂತಿರುಗಿ ಬರುತ್ತೀಯೆ. ಪ್ರಕೃತದಲ್ಲಿ ನೀನು ಸುಖವಾಗಿ ಮಲಗಿ ನಿದ್ರೆಹೋಗು. ನಾಳಿನ ಪ್ರಾತಃಕಾಲದಲ್ಲಿ ಸಮುದ್ರಸ್ನಾನಮಾಡಿ ಇಂದ್ರನೀಲ ಶಿಲಾಮೂರ್ತಿಯೂ, ವಿಭುವೂ ಆದ ಶ್ರೀಮನ್ನಾರಾಯಣಮೂರ್ತಿಯನ್ನು ಪುನಃ ಸಂದರ್ಶಿಸು. ಆ ಬಳಿಕ ನಾವೀರ್ವರೂ ಆ ಸಾಗರದ ತೀರದಲ್ಲಿಯೇ ಇಂದ್ರದ್ಯುಮ್ನಮಹಾರಾಜನು ವಾಸಮಾಡಲು ಯೋಗ್ಯವಾದ ಪ್ರದೇಶವನ್ನು ನಿನ್ನಿಷ್ಟದಂತೆಯೇ ನೋಡೋಣ"

೮೩–೮೬. ಎಲೈ ವಿಪ್ರರೇ! ಶಬರನಾದ ವಿಶ್ವಾವಸುವೂ, ಪುರೋಹಿತನ ತಮ್ಮನಾದ ಆ ವಿದ್ಯಾಪತಿಯೂ ತಂತಮ್ಮಲ್ಲಿಯೇ ಈ ರೀತಿ ಪುಣ್ಯಕಥೆಗಳನ್ನು ಕುರಿತು ಪ್ರಸ್ತಾವಿಸುತ್ತ ಶುಭಸ್ಥಾನದಲ್ಲಿ ಚಿಗುರುಹಾಸಿದ ಹಾಸಿಗೆಯಲ್ಲಿ ಮಲಗಿ ನಿದ್ರಿಸಿದರು. ಬೆಳಗಾಗುತ್ತಲೇ ಅವರೀರ್ವರೂ ತೀರ್ಥರಾಜದಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಮಾಡಿ ಮಾಧವನನ್ನು ನಮಸ್ಕರಿಸಿ ಇಂದ್ರದ್ಯುಮ್ನಮಹಾರಾಜನು ಬಂದು ನೆಲಸಲು ಯೋಗ್ಯವಾದ ಸ್ಥಳವನ್ನು ನಿರ್ಣಯಿಸಿಕೊಂಡರು. ತರುವಾಯ ವಿದ್ಯಾಪತಿಯಾದರೂ ಆ ವಿಷಯವನ್ನು ರಾಜನಿಗೆ ತಿಳಿಸುವುದಕ್ಕಾಗಿ ಮಿತ್ರನಾದ ವಿಶ್ವಾವಸುವಿನಿಂದ ಬೀಳ್ಕೊಂಡು ರಥವನ್ನೇರಿ ಅವಂತೀಪಟ್ಟಣಕ್ಕೆ ಬಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಭಗವದ್ದರ್ಶನಾನಂತರ ವಿದ್ಯಾಪತಿಯ ಸ್ವದೇಶಗಮನೋತ್ಸುಕ ವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವಮೋಽಧ್ಯಾಯಃ

**ಸ್ವರ್ಣಸೈಕತವರ್ಷಣಂ—ಭಗವದದರ್ಶನಂ—ವಿದ್ಯಾಪತಿಕಥಿತ ಪುರುಷೋತ್ತಮಕ್ಷೇತ್ರಸ್ಥ ರೋಹಿಣಕುಂಡಾದಿತೀರ್ಥಪ್ರಭಾವವರ್ಣನಂ**

ಜೈಮಿನಿರುವಾಚ :—

**ಪ್ರತ್ಯಾಗತೇ ತತೋ ವಿಪ್ರೇ ಸಾಯಾಹ್ನೇ ಸುರಸಂಕುಲೇ ।**
**ಮಾಧವಾರ್ಚನವೇಲಾಯಾಂ ವಾತಶ್ಚಂಡಗತಿರ್ವವೌ ॥ ೧ ॥**
**ಸುವರ್ಣವಾಲುಕಾಶ್ಚಾಸೌ ವಿಚಕಾರಚ ಸರ್ವಶಃ ।**
**ತೇನಾಕುಲದೃಶೋ ದೇವಾಃ ನ ಶೇಕುರವಲೋಕನೇ ॥ ೨ ॥**
**ಶ್ರೀಕಾಂತಸ್ಯ ತದಾ ವಿಪ್ರಾ ದಧ್ಯುಸ್ತೇ ಪುರುಷೋತ್ತಮಂ ।**
**ಯಾವದ್ಧ್ಯಾನಸ್ಥಿರದೃಶೋ ಮುಹೂರ್ತಂ ತೇ ದಿವೌಕಸಃ ॥ ೩ ॥**
**ಧ್ಯಾನಾಂತೇ ವಾಲುಕಾರಾಶಿಂ ದದೃಶುಸ್ತೇ ನ ಮಾಧವಂ ।**
**ರೌಹಿಣಂ ಚ ತಥಾ ಕುಂಡಂ ಬಭೂವುರ್ವ್ಯಾಕುಲೇಂದ್ರಿಯಾಃ ॥ ೪ ॥**
**ಚಿಂತಾಮವಾಪುರ್ಮಹತೀಂ ಹಾಹೇತಿ ರುರುದುರ್ಭೃಶಂ ।**
**ಅಪೀತನ್ನೋ ಹಿ ದುರ್ದೈವಮೇಕದಾ ಸಮುಪಸ್ಥಿತಂ ॥ ೫ ॥**

---

## ಕನ್ನಡದ ಅನುವಾದ

**ಸ್ವರ್ಣಸೈಕತವರ್ಷಣ—ಭಗವದದರ್ಶನ—ವಿದ್ಯಾಪತಿಕಥಿತ ರೋಹಿಣಕುಂಡಾದಿತೀರ್ಥಪ್ರಭಾವ ವರ್ಣನ**

೧. ಜೈಮಿನಿಯು ಹೇಳುತ್ತಾನೆ :—ಎಲೈ ವಿಪ್ರರಿರಾ! ವಿದ್ಯಾಪತಿವಿಪ್ರನು ಶ್ರೀ ಪುರುಷೋತ್ತಮ ಕ್ಷೇತ್ರದಿಂದ ಹೊರಟುಬಂದ ತರುವಾಯ ಸಾಯಂಕಾಲ ದಲ್ಲಿ ದೇವತೆಗಳೆಲ್ಲರೂ ಶ್ರೀಮನ್ಮಹಾವಿಷ್ಣುವನ್ನು ಪೂಜಿಸಲೋಸುಗ ಅಲ್ಲಿಗೆ ಬಂದರು. ಆಗಲಾ ಮಾಧವನ ಪೂಜಾಸಮಯದಲ್ಲಿ ಗಾಳಿಯು ಬಹು ಬಿರುಸಾಗಿ ಬೀಸಿತು.

೨–೪. ಎಲ್ಲೆಡೆಗಳಲ್ಲಿಯೂ ಚಿನ್ನದ ಮರಳೆದ್ದಿತು. ಅದರಿಂದ ದೇವತೆ ಗಳಾರೂ ಆ ಶ್ರೀಕಾಂತನ ಮೂರ್ತಿಯನ್ನು ಕಾಣಲು ಸಮರ್ಥರಾಗಲಿಲ್ಲವು. ಆಗ ಅವರೆಲ್ಲರೂ ಆ ಪುರುಷೋತ್ತಮನನ್ನು ಧ್ಯಾನಿಸತೊಡಗಿದರು. ಅವರೀರೀತಿ ಒಂದು ಮುಹೂರ್ತಕಾಲ ಧ್ಯಾನಮಾಡುತ್ತಿರುವಂತೆಯೇ ಅಲ್ಲಿ ಮರಳಿನ ರಾಶಿ ಯನ್ನು ಕಂಡರಾಗಲಿ ಮಾಧವನನ್ನು ಕಾಣಲೇ ಇಲ್ಲವು. ರೌಹಿಣಕುಂಡವೂ ಅಂತೆಯೇ ಮರಳಿನಿಂದ ತುಂಬಿಹೋಯಿತು. ಇದನ್ನು ಕಂಡು ಆ ದೇವತೆಗಳು ಚಿಂತೆಯಿಂದ ವ್ಯಾಕುಲವಾದ ಇಂದ್ರಿಯಗಳುಳ್ಳವರಾದರು.

೫–೬. ಅವರೆಲ್ಲರೂ ಮಹತ್ತರವಾದ ಚಿಂತೆಯನ್ನು ತಾಳಿ "ಹಾಹಾ" ಎಂದು ಬಹಳವಾಗಿ ವಿಲಪಿಸಿ ಈರೀತಿ ಪ್ರಾರ್ಥಿಸಿದರು. "ಅಕ್ಕಟಾ! ಇದೇ

ದೃಶಾಸೇಚನಕಃ ಶ್ರೀಶಃ ಕ್ಷಣಾದ್ಯನ್ನೋಽಪಲಭ್ಯತೇ ।
ಅಪರಾಧಂ ಕಿಮಸ್ಮಾಕಂ ಲಕ್ಷಿತಂ ಪುರುಷೋತ್ತಮ ॥ ೬ ॥
ಯುಗಪತ್ಸೇವಕಾನ್ಸರ್ವಾನಪಹಾಯ ನ ದೃಶ್ಯಸೇ ।
ಯೇಷಾಮರ್ಥೇ ಜಗನ್ನಾಥ ಸ್ವೀಚಕರ್ಥ ಕಲೇವರಂ ॥ ೭ ॥
ತಾನನಾಥಾನ್ಪರಿತ್ಯಜ್ಯ ಕಾನನೇ ಕಿಮುಪೇಕ್ಷಸೇ ।
ಸ್ವಶರೀರವಿಭೂತಿರ್ನೋ ವಿಹಾಯ ಕಮಲೇಕ್ಷಣ ॥ ೮ ॥
ಕಿಮಕಾಂಡಂ ರಚಯಸಿ ಕಥಾಶೇಷಾನ್ದಿವೌಕಸಃ ।
ತವಾಂಶಭೂತಾನ್ನಃ ಸರ್ವಾನ್ಯಜ್ವಾನಃ ಪ್ರಯಜಂತಿ ವೈ ॥ ೯ ॥
ತ್ವತ್ಪ್ರೀತ್ಯೈ ಯಜ್ಞಪುರುಷ ತ್ವದಾದಿಷ್ಟಫಲಪ್ರದಾನ್ ।
ತ್ವದಹಂಕಾರವಷ್ಮಾರ್ಣಸ್ತ್ವದನುಗ್ರಹಜೀವನಾಃ ॥ ೧೦ ॥
ಕಾಂದಿಶೀಕಾಃ ಕುತ್ರ ಯಾಮಃ ಸಾಂಪ್ರತಂ ತ್ವದುಪೇಕ್ಷಿತಾಃ ।
ದಿವಿ ಸ್ಥಾನೈಶ್ಚ ಕಿಂ ಕಾರ್ಯಂ ತ್ವಾಮನಾಲೋಕ್ಯ ಮಾಧವ ॥ ೧೧ ॥
ಅಕೃತಾರ್ಥಾಸ್ತ್ವಯಾ ಹೀನಾ ಭವಿಷ್ಯಾಮೋ ವನೇಚರಾಃ ।
ನಿಷ್ಕಲಂಕಸುಧಾಭಾನುಂ ಸುಷಮಾಪರಿಭಾವುಕಂ ॥ ೧೨ ॥

ನಿದು ಇದ್ದಕ್ಕಿದ್ದಂತೆಯೇ ನಮಗೇ ದುರ್ದೈವವೊದಗಿತು. ನಮ್ಮ ಕಣ್ಣುಗಳಿಗೆ ಅಮೃತಸೇಚನವನ್ನುಂಟುಮಾಡುವ ಆ ಶ್ರೀಶನು ಒಂದು ಕ್ಷಣದಲ್ಲಿಯೇ ಕಾಣದಾಗಿರುವನು! ಓ ಪುರುಷೋತ್ತಮಾ! ನಮ್ಮಲ್ಲಿ ಯಾವ ಅಪರಾಧವು ಕಂಡು ಬಂದಿತು!

೭–೧೧. ಓ ಜಗನ್ನಾಥ! ಸೇವಕರಾದ ನಮ್ಮೆಲ್ಲರನ್ನೂ ಒಟ್ಟಿಗೆ ತೊರೆದು ಅದೃಶ್ಯನಾಗಿರುವೆಯಲ್ಲ! ನೀನು ಯಾರಿಗೋಸುಗವಾಗಿ ಈ ರೂಪವನ್ನು ಸ್ವೀಕರಿಸಿದೆಯೋ ಅಂತಹ ಅನಾಥರಾದ ನಮ್ಮನ್ನು ಈ ಕಾಡಿನಲ್ಲಿ ತೊರೆದು ಉಪೇಕ್ಷೆ ಮಾಡುವೆಯೇಕೆ? ಎಲೈ ಕಮಲೇಕ್ಷಣನೇ! ನಿನ್ನ ಶರೀರದ ವಿಭೂತಿಸ್ವರೂಪರಾದ ನಮ್ಮನ್ನು ಏಕಕಾಲದಲ್ಲಿಯೇ ಈರೀತಿ ತೊರೆದು ದೇವತೆಗಳೆಲ್ಲರನ್ನೂ ಕಥಾಶೇಷರನ್ನಾಗಿ ಮಾಡುವೆಯೇಕೆ? ನಾವೆಲ್ಲರೂ ನಿನ್ನ ಅಂಶಸ್ವರೂಪರಾಗಿರುವುದರಿಂದಲೂ, ಯಜ್ಞಪುರುಷನಾದ ನಿನ್ನ ಅಪ್ಪಣೆಯಂತೆ ಫಲಗಳನ್ನು ಕೊಡುವುದರಿಂದಲೂ, ನಿನ್ನ ಪ್ರೀತ್ಯರ್ಥವಾಗಿಯೇ, ಸೋಮಯಾಜಿಗಳು ನಮ್ಮನ್ನು ಯಾಗಾದಿಗಳಿಂದ ತೃಪ್ತಿಗೊಳಿಸುವರಲ್ಲವೆ! ಎಲೈ ಸ್ವಾಮಿಯೇ! ನಿನ್ನ ಅಹಂಕಾರವನ್ನೇ ಮಳೆಗರೆಯುತ್ತ, ನಿನ್ನ ಅನುಗ್ರಹದಿಂದಲೇ ಜೀವನಮಾಡುತ್ತಿರುವ ನಾವು ಈಗ ನೀನು ಉಪೇಕ್ಷಿಸಿದ ಬಳಿಕ ಕಾಂದಿಶೀಕರಾಗಿ ಹೋಗುವುದೆಲ್ಲಿಗೆ? ಓ ಮಾಧವ! ನಿನ್ನ ಸಂದರ್ಶನಭಾಗ್ಯವಿಲ್ಲದಿರುವಾಗ ಇನ್ನು ಆ ದೇವಲೋಕದಲ್ಲಿ ನಮ್ಮ ನಮ್ಮ ಪದವಿಗಳಿಂದ ನಮಗೇನು ಫಲವುಂಟು?

೧೨–೧೪. ಎಲೈ ಸ್ವಾಮಿಯೇ! ನಿನ್ನನ್ನು ತೊರೆದು ಅಕೃತಾರ್ಥರಾಗಿರುವ

ತ್ವದಾಸ್ಯಂ ಚೇನ್ನಪಶ್ಯಾಮೋ ನ ಯಾಸ್ಯಾಮಃ ಸುರಾಲಯಂ ।
ತಪ ಆಸ್ಥಾಯ ಪರಮಮುತ್ಕೈವ ಸಂಶಿತವ್ರತಾಃ ॥ ೧೩ ॥
ವರ್ತಾಮಹೇ ವನ್ಯವೃತ್ತ್ಯಾ ಜಟಾವಲ್ಕಲಧಾರಿಣಃ ।
ಯಾವತ್ತ್ವಾಂ ಪುಂಡರೀಕಾಕ್ಷ ವಿಲೋಕಯಿಷ್ಯಾಮಹೇ ವಯಂ ॥ ೧೪ ॥
ನಿಸರ್ಗಕರುಣಾಂಭೋಧೇ ದೀನಾನ್ನಸ್ತ್ರಾತುಮರ್ಹಸಿ ।
ಅನಾಥಾನ್ದೀನಹೃದಯಾಂಸ್ತ್ವಾಮೇವ ಶರಣಂ ಗತಾನ್ ॥ ೧೫ ॥
ತ್ವದನಾಲೋಕಶೋಕೈಕಪಾರಾವಾರೇ ನಿಮಜ್ಜತಿ ।
ಶುಭದೃಷ್ಟಿತರಣ್ಯಾ ನಃ ಸಮುದ್ಧರ ಜಗತ್ಪತೇ ॥ ೧೬ ॥
ಏವಂ ಪ್ರಲಪತಾಂ ತತ್ರ ಸರ್ವೇಷಾಂ ತ್ರಿದಿವೌಕಸಾಂ ।
ಅಶರೀರಾ ತದಾ ವಾಣೀ ಪುನಃ ಪ್ರಾದುರ್ಬಭೂವ ಹ ॥ ೧೭ ॥
ಅತ್ರಾರ್ಥೇ ಭೋ ಸುರಾ ಯತ್ನಂ ಕರ್ತುಮರ್ಹಥ ನೋ ವೃಥಾ ।
ಅದ್ಯಪ್ರಭೃತಿ ದೇವಸ್ಯ ದರ್ಶನಂ ದುರ್ಲಭಂ ಭುವಿ ॥ ೧೮ ॥
ಅತ್ರ ಸ್ಥಾನೇಽಪಿ ತಂ ನತ್ವಾ ತದ್ದರ್ಶನಫಲಂ ಲಭೇತ್ ।
ಸ್ವಯಂಭುವೋಽಂತಿಕಂ ಗತ್ವಾ ಹೇತುಂ ಜ್ಞಾಸ್ಯಥ ನಿಶ್ಚಿತಂ ॥ ೧೯ ॥

---

ನಾವೆಲ್ಲರೂ ವನಚರರಾಗುತ್ತೇವೆ. ಕಳಂಕವಿಲ್ಲದ ಚಂದ್ರಮಂಡಲದಂತೆ ಬೆಳಗುತ್ತ ಸೌಂದರ್ಯದಿಂದ ಪರಿಭಾವಿಸಿ ಧನ್ಯತೆಯನ್ನು ಪಡೆಯಲೋಸುಗ ನಿನ್ನ ಶ್ರೀಮುಖವನ್ನು ನಾವೀಗ ಕಾಣದಿದ್ದರೆ ನಾವು ಸ್ವರ್ಗಕ್ಕೆ ಹಿಂತಿರುಗುವುದೇ ಇಲ್ಲವು. ಎಲೈ ಪುಂಡರೀಕಾಕ್ಷನೇ! ನಾವೆಲ್ಲರೂ ಜಟಾವಲ್ಕಲಧಾರಿಗಳಾಗಿ, ತೀಕ್ಷ್ಣವಾದ ವ್ರತಗಳನ್ನು ಕೈಕೊಂಡು ಶ್ರೇಷ್ಠವಾದ ತಪಸ್ಸಿನಲ್ಲಿ ತೊಡಗಿ ನಿನ್ನನ್ನು ಕಾಣುವವರೆಗೂ ಇಲ್ಲಿಯೇ ಇದ್ದುಬಿಡುವೆವು.

೧೫–೧೬. ಎಲೈ ಅವ್ಯಾಜಕರುಣಾಸಮುದ್ರನಾದ ಮಾಧವನೇ! ಅನಾಥರೂ, ದೀನಮನಸ್ಕರೂ, ನಿನ್ನನ್ನೇ ಶರಣುಹೊಂದಿರುವವರೂ ಆದ ನಮ್ಮನ್ನು ಕಾಪಾಡು! ಓ ಜಗತ್ಪತಿಯೇ! ನಿನ್ನನ್ನು ಕಾಣದೆ ಶೋಕಸಾಗರದಲ್ಲಿ ಮುಳುಗಿರುವ ನಮಗೆ ಮಂಗಳಕರವಾದ ಕಟಾಕ್ಷವೀಕ್ಷಣವೆಂಬ ನೌಕೆಯನ್ನು ದಯೆಗೈದು ಉದ್ಧರಿಸು.

೧೭. ಎಲೈ ವಿಪ್ರರೇ! ಸಮಸ್ತದೇವತೆಗಳೂ ಈರೀತಿ ಪ್ರಲಪಿಸುತ್ತಿರಲು ಆ ಸಮಯದಲ್ಲಿಯೇ ಒಂದು ಅಶರೀರವಾಣಿಯು ಈ ರೀತಿ ನುಡಿಯಿತು:

೧೮–೧೯. "ಎಲೈ ದೇವತೆಗಳಿರಾ! ನೀವು ಈ ಸ್ವಾಮಿಯ ದರ್ಶನವಿಷಯದಲ್ಲಿ ಇನ್ನುಮುಂದೆ ನಿಷ್ಪ್ರಯೋಜನವಾಗಿ ಯಾವ ಪ್ರಯತ್ನವನ್ನೂ ಮಾಡಬೇಡಿರಿ. ಇಂದಿನಿಂದ ಸ್ವಾಮಿಯ ದರ್ಶನವು ಭೂಲೋಕದಲ್ಲಿ ದುರ್ಲಭವಾಗುವುದು. ಆದರೆ ಈ ಸ್ಥಳದಲ್ಲಿ ಆ ಪ್ರಭುವನ್ನು ನಮಸ್ಕರಿಸಿದರೆ ಆತನ ಸಂದರ್ಶನ

ತಚ್ಛ್ರುತ್ವಾ ತ್ರಿದಶಾಃ ಸರ್ವೇ ಬ್ರಹ್ಮಣೋಽಂತಿಕಮಾಗತಾಃ ।
ಯಮಾನುಗ್ರಹವೃತ್ತಾಂತಮವತಾರಂ ಚ ದಾರುಣಂ ॥ ೨೦ ॥
ಶ್ರುತ್ವಾ ಸಂತುಷ್ಟಮನಸಃ ಸರ್ವೇ ತೇ ತ್ರಿದಿವಂ ಗತಾಃ ।
ಸ ತು ವಿದ್ಯಾಪತಿರ್ವಿಪ್ರೋ ರಥಾರೂಢೋಽಭ್ಯಚಿಂತಯತ್ ॥ ೨೧ ॥
ಮಮ ಕಾರ್ಯಂ ತು ನಿಷ್ಪನ್ನಂ ಯದ್ದೃಷ್ಟೋ ನೀಲಮಾಧವಃ ।
ಆಸಮಂತಾತ್ ಕ್ಷೇತ್ರಮಿದಂ ಪರಿಭ್ರಮ್ಯಾವಲೋಕಯೇ ॥ ೨೨ ॥

ಅದೃಷ್ಟಪೂರ್ವಂ ಪರಮಂ ಸುಪುಣ್ಯಂ
ಸಂಕೀರ್ತನಂ ಯಸ್ಯ ಮಲಾಪಹಾರೀ ।
ಕ್ಷೇತ್ರೋತ್ತಮಂ ಶ್ರೀಪುರುಷೋತ್ತಮಾಖ್ಯಂ
ಪ್ರದಕ್ಷಿಣೀಕೃತ್ಯ ವ್ರಜಾಮಿ ತೂರ್ಣಂ ॥ ೨೩ ॥
ಪೃಥ್ವೀಪ್ರದಕ್ಷಿಣಫಲಂ ಶತಧಾ ಭಜಂತೇ
ಪರ್ಯಂತಿ ಯೇ ಸಕಲಕಲ್ಮಷದಾರ್ಯರಣ್ಯಂ ।
ನೀಲಾದ್ರಿಮಂಡಿತಮಿದಂ ಪುರುಷೋತ್ತಮಾಖ್ಯಂ
ಮಿತ್ರಂ ಮಮೋಪದಿಶತಿ ಸ್ಮ ಸಮುದ್ರತೀರೇ ॥ ೨೪ ॥

ದಿಂದಾಗುವ ಫಲವು ದೊರಕುತ್ತದೆ. ಇದರ ಕಾರಣನಿಶ್ಚಯವನ್ನು ನೀವೆಲ್ಲರೂ ಬ್ರಹ್ಮದೇವನ ಬಳಿಗೈದಿ ಅರಿತುಕೊಳ್ಳಿರಿ.''

೨೦–೨೧. ಅಶರೀರವಾಣಿಯ ಈ ಮಾತನ್ನು ಕೇಳಿ ದೇವತೆಗಳೆಲ್ಲರೂ ಅಂತೆಯೆ ಬ್ರಹ್ಮನ ಸನ್ನಿಧಿಗೈದಿ ಅವನಿಂದ, ಶ್ರೀಮನ್ಮಹಾವಿಷ್ಣುವು ಯಮನಿಗೆ ಅನುಗ್ರಹಮಾಡಿದ ವಿಷಯವನ್ನೂ, ಆತನು ಮರದ ಮೈಯುಳ್ಳವನಾಗಿ ಅವತರಿಸುವ ವೃತ್ತಾಂತವನ್ನೂ ಕೇಳಿ ತಿಳಿದು ಸಂತುಷ್ಟಮಾನಸರಾಗಿ ಸ್ವರ್ಗ ಲೋಕಕ್ಕೆ ಹಿಂತಿರುಗಿದರು. ಇತ್ತ ವಿಪ್ರನಾದ ವಿದ್ಯಾಪತಿಯಾದರೋ ಅವಂತಿಗೆ ಹೊರಡುತ್ತ ರಥಾರೂಢನಾಗಿಯೇ ಈ ರೀತಿ ಯೋಚಿಸಿದನು.

೨೨–೨೩. "ಶ್ರೀಮನ್ನೀಲಮಾಧವಸ್ವಾಮಿಯನ್ನು ಕಂಡಮೇಲೆ ಇಲ್ಲಿಗೆ ನಾನು ಬಂದ ಕಾರ್ಯವು ಮುಗಿಯಿತು. ಈಗ ನಾನೀ ಕ್ಷೇತ್ರವೆಲ್ಲವನ್ನೂ ಒಮ್ಮೆ ಪ್ರದಕ್ಷಿಣೆಮಾಡಿಕೊಂಡು ಬರುತ್ತೇನೆ. ಈವರೆವಿಗೂ ನೋಡದಿರುವುದೂ, ಅತ್ಯುತ್ತಮವೂ, ಅತ್ಯಂತ ಪುಣ್ಯಪ್ರದವೂ, ಸಂಕೀರ್ತನಮಾಡುವುದರಿಂದಲೇ ಸಕಲ ಕಲ್ಮಷಪರಿಹಾರಕವೂ ಆದ ಈ ಪುರುಷೋತ್ತಮಕ್ಷೇತ್ರವನ್ನು ಪ್ರದಕ್ಷಿಣೆ ಮಾಡಿ ಜಾಗ್ರತೆಯಾಗಿ ಹಿಂತಿರುಗುತ್ತೇನೆ.

೨೪. ಸಕಲಕಲ್ಮಷಗಳನ್ನೂ ಕಳೆಯುವ ಅರಣ್ಯಪ್ರದೇಶವನ್ನೊಳಗೊಂಡು, ನೀಲಾಚಲದಿಂದಲಂಕೃತವಾಗಿ ಸಾಗರತೀರದಲ್ಲಿ ವಿರಾಜಿಸುತ್ತಿರುವ ಈ ಪುರುಷೋತ್ತಮಕ್ಷೇತ್ರವನ್ನು ಪ್ರದಕ್ಷಿಣೆ ಮಾಡಿದ ಮಾನವನು ಭೂಪ್ರದಕ್ಷಿಣೆಯ

**ವಿಚಿಂತ್ಯೇತ್ಥಂ ದ್ವಿಜಶ್ರೇಷ್ಠಃ ಪರಿಬಭ್ರಾಮ ವೈ ತದಾ ।**
**ಕ್ಷೇತ್ರಂ ಪಶ್ಯನ್ವನಂ ಚೈವ ನಾನಾದ್ರುಮಗಣಾನ್ವಿತಂ ॥ ೨೫ ॥**
**ನಾನಾಪಕ್ಷಿಗಣಾಘುಷ್ಟಂ ಕೂಜದ್ಭ್ರಮರಗುಂಫಿತಂ ।**
**ಅಪ್ರವಿಷ್ಟಾರ್ಕಕಿರಣಂ ಛಾಯಾತರುಗಣಾವೃತಂ ॥ ೨೬ ॥**
**ಸರ್ವರ್ತುಕುಸುಮೋಪೇತಂ ಲತಾಗುಲ್ಮೋಪಶೋಭಿತಂ ।**
**ನಾನಾಜಲಾಶಯಾಧಾರಕೂಜತ್ಸಾರಸಸಂಕುಲಂ ॥ ೨೭ ॥**
**ಪದ್ಮಕಲ್ಹಾರಕುಮುದನಿಕಚೋತ್ಪಲರಾಜಿತಂ ।**
**ನ ಜಲಂ ತತ್ರ ಕುಸುಮಪರಿಹೀನಂ ಲತಾದಿಕಂ ॥ ೨೮ ॥**
**ಪರೀತ್ಯ ವೇಗಾತ್ತತ್ಕ್ಷೇತ್ರಂ ಜಗಾಮಾಥ ದ್ವಿಜೋತ್ತಮಃ ।**
**ಧ್ಯಾಯನ್ನಿರಶನೋ ಪ್ರಾಜ್ಞಃ ಪ್ರಾಪ್ಯಾವಂತೀಂ ದಿನಾತ್ಯಯೇ ॥ ೨೯ ॥**
**ದೂತೈರಾವೇದಿತಂ ಪೂರ್ವಂ ದೂರಸ್ಥಸ್ಯಾಗತಂ ದ್ವಿಜಾಃ ।**
**ಶ್ರುತ್ವೇಂದ್ರದ್ಯುಮ್ನೋ ನೃಪತಿಃ ಪ್ರಹರ್ಷಂ ಪರಮಂ ಯಯೌ ॥ ೩೦ ॥**

---

ಫಲವನ್ನು ನೂರುಮಡಿಯಾಗಿ ಪಡೆಯುವನೆಂದು ನನ್ನ ಮಿತ್ರನಾದ ವಿಶ್ವಾವಸುವು ತಿಳಿಸಿದನು. ಆದುದರಿಂದ ಈಗ ನಾನು ಆ ಫಲಪ್ರಾಪ್ತಿಗಾಗಿ ಈ ಕ್ಷೇತ್ರವನ್ನು ಪ್ರದಕ್ಷಿಣೆಗೈಯುವೆನು.''

೨೫--೨೮. ಎಲೈ ವಿಪ್ರರಿರಾ! ದ್ವಿಜಶ್ರೇಷ್ಠನಾದ ಆ ವಿದ್ಯಾಪತಿಯು ಈ ಪ್ರಕಾರವಾಗಿ ಯೋಚಿಸಿದ ಬಳಿಕ, ಬಗೆಬಗೆಯ ವೃಕ್ಷಗಳಿಂದ ಕೂಡಿ, ಬಗೆಬಗೆಯ ಪಕ್ಷಿನಿನಾದಗಳಿಂದೊಪ್ಪಿ, ಝೇಂಕಾರಮಾಡುತ್ತಿರುವ ಭ್ರಮರವೃಂದಗಳಿಂದ ಕಿಕ್ಕಿರಿದಿರುವುದೂ, ಸೂರ್ಯಕಿರಣಗಳೇ ಒಳಹೊಗದಿರುವುದೂ, ನೆಳಲುಮರಗಳಿಂದ ತುಂಬಿತುಳುಕುತ್ತಿರುವುದೂ, ಎಲ್ಲ ಋತುಗಳಲ್ಲಿಯೂ ಪೂತು ಫಲಬಿಡುವ ವೃಕ್ಷಗಳಿಂದ ಕೂಡಿದುದೂ, ಬಳ್ಳಿಗಳಿಂದಲೂ, ಪೊದರುಗಳಿಂದಲೂ ಶೋಭಿಸುತ್ತಿರುವುದೂ, ಅನೇಕ ಜಲಾಶಯಗಳೇ ಆಧಾರವಾಗಿ ಕೂಗುತ್ತಿರುವ ಸಾರಸಪಕ್ಷಿಸಂಘಗಳಿಂದ ಕೂಡಿರುವುದೂ ಆದ ಆ ಪುರುಷೋತ್ತಮಕ್ಷೇತ್ರಾರಣ್ಯವೆಲ್ಲವನ್ನೂ ಪ್ರದಕ್ಷಿಣೆಮಾಡಿದನು. ಆ ಕ್ಷೇತ್ರದಲ್ಲಿ ಕುಸುಮರಹಿತವಾದ ಲತಾವೃಕ್ಷಾದಿಗಳಾವುವೂ ಇರಲಿಲ್ಲವು.

೨೯. ಪ್ರಾಜ್ಞನಾದ ಆ ದ್ವಿಜೋತ್ತಮನು ಈ ಪ್ರಕಾರವಾಗಿ ಆ ಕ್ಷೇತ್ರವೆಲ್ಲವನ್ನೂ ಜಾಗ್ರತೆಯಾಗಿ ಸುತ್ತಿ ಆ ತರುವಾಯ ಭಗವದ್ಧ್ಯಾನವನ್ನು ಮಾಡುತ್ತ ಉಪವಾಸದಿಂದಿದ್ದೇ ಸಂಧ್ಯಾಕಾಲಕ್ಕೆ ಸರಿಯಾಗಿ ಅವಂತಿಯನ್ನು ಸೇರಿದನು.

೩೦. ಎಲೈ ಬ್ರಾಹ್ಮಣರೇ! ಈ ರೀತಿ ಪಟ್ಟಣಕ್ಕೆ ಬಿಜಮಾಡಿದ ಆ ಬ್ರಾಹ್ಮಣನನ್ನು ರಾಜದೂತರು ದೂರದಿಂದಲೇ ನೋಡಿ ಆ ವೃತ್ತಾಂತವನ್ನು ಇಂದ್ರದ್ಯುಮ್ನಮಹಾರಾಜನಿಗೆ ಅರಿಕೆಮಾಡಲು ಆತನು ಪರಮಸಂತುಷ್ಟನಾದನು.

ತದಾಗಮನಮಾಕಾಂಕ್ಷನ್ಪೂಜಯಿತ್ವಾ ಜನಾರ್ದನಂ ।
ವಿದ್ವದ್ಭಿರ್ಬ್ರಾಹ್ಮಣೈಃ ಸಾರ್ಧಂ ತಸ್ಥೌ ಸಂಹೃಷ್ಟಮಾನಸಃ ॥ ೩೧ ॥
ಏತಸ್ಮಿನ್ನಂತರೇ ವಿಪ್ರಾಃ ಸ ತು ವಿದ್ಯಾಪತಿರ್ದ್ವಿಜಃ ।
ಪ್ರಾವೇಶಿಕೈರ್ವೇತ್ರಹಸ್ತೈರ್ದೌವಾರಿಕಪುರಸ್ಸರೈಃ ॥ ೩೨ ॥
ನಿರ್ದಿಷ್ಟಮಾರ್ಗಃ ಪೌರೈಶ್ಚಾಸುಮತಃ ಕೌತುಕಾನ್ವಿತೈಃ ।
ನಿರ್ಮಾಲ್ಯಮಾಲಾಂ ನೀಲಾಖ್ಯಮಾಧವಸ್ಯ ಸುಶೋಭನಾಂ ॥ ೩೩ ॥
ನಿಧಾಯ ಪಾಣೌ ರಾಜಾಗ್ರೇ ಪ್ರವಿವೇಶ ತ್ವರಾನ್ವಿತಃ ।
ತಂ ದೃಷ್ಟ್ವಾ ನೃಪತಿಃ ಸೋಽಥ ಸಮುತ್ಥಾಯ ವರಾಸನಾತ್ ।
ಪ್ರಸೀದ ಜಗದೀಶೇತಿ ವದನ್ನಂತಿಕಮಭ್ಯಗಾತ್ ॥ ೩೪ ॥
ಅದ್ಯ ಮೇ ಜೀವಿತಂ ಜಾತಂ ಸಫಲಂ ಜನ್ಮಕರ್ಮಣೀ ।
ನಿರ್ಮಾಲ್ಯಮಾಲಾವಪುಷಂ ಯತ್ಪಶ್ಯಾಮಿಹ ಮಾಧವಂ ॥ ೩೫ ॥

ಮಾಲಾಂ ಮುಕುಂದಶಿರಸೋಽನುಪಮಪ್ರಮೋದ
ಲಾಭಾಧರೀಕೃತಸುರದ್ರುಮಕಾಂತಗಂಧಾಂ ।
ಅಂಧೀಕೃತಾಲಿನಿಚಯಾಂ ಪವನಪ್ರಸಾರಿ
ಗಂಧಪ್ರಣಾಶಿತಜಗತ್ಕಲುಷಾಂ ನಮಾಮಿ ॥ ೩೬ ॥

---

೩೧. ದೊರೆಯು ಆ ಬ್ರಾಹ್ಮಣನ ಆಗಮನವನ್ನು ನಿರೀಕ್ಷಿಸಿದವನಾಗಿ ಜನಾರ್ದನನನ್ನು ಪೂಜಿಸಿ, ವಿದ್ವಾಂಸರಿಂದಲೂ, ಬ್ರಾಹ್ಮಣರಿಂದಲೂ ಕೂಡಿ ಸಂಹೃಷ್ಟಮಾನಸನಾಗಿದ್ದನು.

೩೨–೩೪ ಇದೇ ಸಮಯದಲ್ಲಿಯೇ ವಿದ್ಯಾಪತಿಯು ವೇತ್ರಹಸ್ತರಾದ ಪ್ರಾವೇಶಿಕರೂ, ದೌವಾರಿಕರೂ ಮಾರ್ಗತೋರಲಾಗಿ, ಪಟ್ಟಣಿಗರೆಲ್ಲರೂ ಆಶ್ಚರ್ಯಭರಿತರಾಗಿ ತನ್ನನ್ನು ಗೌರವಿಸುತ್ತಿರಲು ಪುರುಷೋತ್ತಮಕ್ಷೇತ್ರಪತಿಯಾದ ಶ್ರೀಮನ್ನೀಲಮಾಧವಸ್ವಾಮಿಯ ಪ್ರಸಾದಮಾಲಿಕೆಯನ್ನು ಕೈಯಲ್ಲಿ ತಾಳಿದವನಾಗಿ ತ್ವರೆಯೊಡಗೂಡಿ ಇಂದ್ರದ್ಯುಮ್ನನೃಪತಿಯು ಬಳಿಸಾರಿದನು. ಆ ನೃಪಾಲನಾದರೋ ಆತನನ್ನು ಕಂಡೊಡನೆಯೇ ಉತ್ತಮಾಸನದಿಂದ ಮೇಲೆದ್ದು "ಜಗನ್ನಾಥ! ಪ್ರಸನ್ನನಾಗು" ಎಂದು ಹೇಳುತ್ತ ಆತನ ಬಳಿಗೈದಿದನು.

೩೫–೩೬. ಆಗಲಾತನು ವಿದ್ಯಾಪತಿ ವಿಪ್ರನ ಕೈಯಲ್ಲಿ ಶೋಭಿಸುತ್ತಿದ್ದ ನೀಲಮಾಧವನ ಪ್ರಸಾದಮಾಲಿಕೆಯನ್ನು ಕಂಡು ಅದನ್ನೀರೀತಿ ಸ್ತುತಿಸಿದನು:— "ಪ್ರಸಾದಮಾಲೆಯ ರೂಪದಿಂದ ಶೋಭಿಸುತ್ತಿರುವ ಮಾಧವನನ್ನೀಗ ಕಂಡೆನಾದುದರಿಂದ ಇದೀಗ ನನ್ನ ಜನ್ಮವು ಸಫಲವಾಯಿತು. ನಾನು ಮಾಡಿದ ಸತ್ಕರ್ಮಗಳೆಲ್ಲವೂ ಸಫಲವಾದುವು. ಅನುಪಮವಾದ ಪ್ರಮೋದಲಾಭವನ್ನು

ಯತ್ಪಾದಪಂಕಜಗಲದ್ರಜಸೋಽನುಷಂಗಾತ್
ಬ್ರಹ್ಮಾದಯಃ ಪರಮಸಂಪದಮಾಪುರಸ್ಯ ।
ವಿಷ್ಣೋಃ ಕಲೇವರಸಮುಜ್ಜ್ವಲಿತಾಂಗರಾಗ
ಸಂಸಕ್ತಪುಷ್ಪನಿಲಯಾಂ ಪ್ರಣತೋಽಸ್ಮಿ ಮಾಲಾಂ ॥
ಪದ್ಮಾಂ ಹೃತ್ಪದ್ಮವಸತಿಂ ಸಪತ್ನೀಂ ಯಾ ಹಸತ್ಯಸೌ ।
ವಿಕಸ್ವರೈಃ ಸುಕುಸುಮೈರ್ವಿಷ್ಣ್ವಂಕಸ್ಥಿತಿಗರ್ವಿತಾಂ ॥ ೩೮ ॥
ಕುತ್ರ ಸ್ಥಿತೇಯಮಾಹರ್ಷೀರ್ಮಹಿಮಾನಂ ಸ್ರಗುಜ್ಜ್ವಲಾಂ ।
ಯಾ ಶ್ರೀನಿಧೇಃ ಶರೀರೇಽಭೂತ್ಸರ್ವಾಂಗವ್ಯಾಪಿನೀ ಚಿರಂ ॥ ೩೯ ॥
ಜಯ ನೀಲಾದ್ರಿಶಿಖರಭೂಷಣಾಘಪ್ರದೂಷಣ ।
ಪ್ರಣತಾರ್ತಿಹರ ಶ್ರೀಮಂಸ್ತ್ರಾಹಿ ಮಾಂ ಶರಣಾಗತಂ ॥ ೪೦ ॥

---

ಉಂಟುಮಾಡುವುದಾಗಿ, ಸುರಲೋಕದ ಪಾರಿಜಾತಪುಷ್ಪವೃಕ್ಷಗಳ ಗಂಧವನ್ನು ಮೀರಿ ಪರಿಮಳಿಸುತ್ತಿರುವುದಾಗಿ, ಭ್ರಮರಸಮೂಹಗಳನ್ನೆಲ್ಲ ತನ್ನೊಂದು ಕಾಂತಿಯಿಂದಲೂ, ಪರಿಮಳದಿಂದಲೂ, ಮಧುವಿನಿಂದಲೂ, ಕುರುಡಾಗಿಸು ವುದಾಗಿ, ಗಾಳಿಯಿಂದ ಹರಡಿಬರುವ ಗಂಧದಿಂದ ಜಗತ್ತಿನ ಕಲ್ಮಷಗಳನ್ನೇ ಹೋಗಲಾಡಿಸುವುದಾಗಿ ಕಂಗೊಳಿಸುತ್ತಿರುವ ಶ್ರೀಮನ್ನೀಲಮಾಧವಮೂರ್ತಿಯ ಈ ಪ್ರಸಾದಮಾಲಿಕೆಯನ್ನು ನಮಸ್ಕರಿಸುವೆನು !

೩೭ ಯಾವ ಸ್ವಾಮಿಯ ಪಾದಕಮಲಗಳ ಧೂಳಿಯ ಸಂಪರ್ಕದಿಂದ ಬ್ರಹ್ಮಾದಿ ದೇವತೆಗಳೆಲ್ಲರೂ ಪರಮೈಶ್ವರ್ಯವನ್ನು ಪಡೆದರೋ ಅಂತಹ ಮಹಾ ವಿಷ್ಣುವಿನ ಶರೀರದಲ್ಲಿ ಬೆಳಗುವ ಶ್ರೀಗಂಧಸಂಮಿಶ್ರವಾದ ಹೂಗಳ ನೆಲೆಯಾಗಿ ರುವ ಪ್ರಸಾದಮಾಲಿಕೆಯನ್ನು ನಮಸ್ಕರಿಸುವೆನು

೩೮. ಆಹ! ಈ ಪ್ರಸಾದಮಾಲೆಯು, ವಿಷ್ಣುವಿನ ತೊಡೆಯನ್ನು ಮಂಡಿಸಿ ರುವುದರಿಂದ ಗರ್ವಿಸಿರುವ ಆ ಸ್ವಾಮಿಯ ಹೃತ್ಪದ್ಮವಾಸಿನಿಯಾದ ಶ್ರೀದೇವಿ ಯನ್ನು ತನ್ನ ಸವತಿಯಾಗಿ ಎಣಿಸಿ ಮನೋಹರವಾದ ಕುಸುಮಗಳ ಕಾಂತಿ ಯಿಂದ ಅಟ್ಟಹಾಸದ ನಗೆಯನ್ನು ನಕ್ಕು ಮೆರೆಯುತ್ತಿರುವುದು.

೩೯. ಓ ಬ್ರಾಹ್ಮಣನೇ ! ಬಹುಕಾಲ ಶ್ರೀನಿಧಿಯಾದ ಆ ಮಹಾವಿಷ್ಣುವಿನ ಶರೀರದಲ್ಲಿ ವಿರಾಜಿಸಿದ್ದ ಮಹಿಮಾಸ್ಪದವಾದ ಈ ಉಜ್ಜ್ವಲಮಾಲಿಕೆಯನ್ನೆಲ್ಲಿಂದ ಸಂಪಾದಿಸಿದೆ ?

೪೦. ನೀಲಾದ್ರಿಶಿಖರಕ್ಕೇ ಭೂಷಣನೂ, ಅಘದೂಷಣನೂ, ಪ್ರಣತಾರ್ತಿ ಹರನೂ, ಶ್ರೀನಿವಾಸನೂ ಆದ ಓ ಸ್ವಾಮಿಯೇ ! ಜಯ ಜಯ ! ಶರಣಾಗತ ನಾಗಿರುವ ನನ್ನನ್ನು ಪರಿಪಾಲಿಸು.

ಇತಿ ಬ್ರುವಾಣಃ ಕ್ಷಿತಿಪೋ ಬಾಷ್ಪಗದ್ಗದಯಾ ಗಿರಾ ।
ಜಗಾಮ ಶಿರಸಾ ಭೂಮಿಂ ಸ್ಫುರದ್ರೋಮಾಂಚಕಂಚುಕಃ ॥ ೪೧ ॥
ಸೋಽಪಿ ವಿದ್ಯಾಪತಿರ್ವಿಪ್ರಃ ಕ್ಷಪಿತಾಶೇಷಕಲ್ಮಷಃ ।
ದಿವ್ಯದೇಹೋ ನೃಪಸ್ಯಾಗ್ರೇ ಧ್ಯಾಯಂಸ್ತನ್ಮಾಧವಂ ಸ್ಥಿತಃ ॥ ೪೨ ॥
ತೇಜಸಾ ಸರ್ವಲೋಕಾನಾಂ ಪಾಪಾನಿ ಕ್ಷಾಲಯನ್ಸುಧೀಃ ।
ಅನುಗೃಹ್ಣಾತು ದೇವಸ್ತ್ವಾಂ ನೀಲಾದ್ರಿಶಿಖರಾಲಯಃ ॥ ೪೩ ॥
ಶ್ರೀಪತೇರಿಯಮಾಜ್ಞಾ ತೇ ಮಾಲಾರೂಪಾ ಪ್ರಕಾಶಿತಾ ।
ದ್ರಷ್ಟುಂ ಕ್ಷೇತ್ರೋತ್ತಮಗತಂ ಸ್ವಂ ಸಾಕ್ಷಾನ್ಮುಕ್ತಿದಾಯಕಂ ॥ ೪೪ ॥
ಇತ್ಯುಚ್ಚರನ್ನರಪತೇರಾಮುಮೋಚ ಗಲೇ ಸ್ರಜಂ ।
ಸೋಽಪ್ಯುತ್ಥಾಯ ಕ್ಷಿತಿಪತಿರ್ಮಾಲಾಂ ಹೃದಯಲಂಬಿನೀಂ ॥ ೪೫ ॥
ದೃಷ್ಟ್ವಾ ಮೇನೇ ಶ್ರಿಯಃ ಕಾಂತಂ ಸಾಕ್ಷಾದ್ಧೃದಯಗಾಮಿನಂ ।
ನಿಧಾಯ ಪಾಣೀ ಶಿರಸಿ ದರಮೀಲಿತಲೋಚನಃ ॥ ೪೬ ॥
ಆನಂದಾಶ್ರುಜಲಕ್ಲಿನ್ನವದನಸ್ತುಷ್ಟುವೇ ಹರಿಂ ॥ ೪೭ ॥

---

೪೧. ಎಲೈ ವಿಪ್ರರೇ! ಆ ದೊರೆಯು ಈ ರೀತಿ ಸ್ತುತಿಸುತ್ತ ಆನಂದ ಬಾಷ್ಪಗಳನ್ನು ಸುರಿಸುತ್ತ ಗದ್ಗದಧ್ವನಿಯೊಡಗೂಡಿ "ನಮೋ ನಮೋ" ಎಂದು ನುಡಿದು ರೋಮಾಂಚಿತಶರೀರನಾಗಿ ಸಾಷ್ಟಾಂಗಪ್ರಣಾಮ ಮಾಡಿದನು.

೪೨–೪೪. ಸಮಸ್ತ ಕಲ್ಮಷಗಳನ್ನೂ ಕಳೆದು, ದಿವ್ಯದೇಹಧರನಾಗಿದ್ದ ಆ ವಿದ್ಯಾಪತಿಯಾದರೋ ಆ ಸಮಯದಲ್ಲಿ ಶ್ರೀಮಾಧವನನ್ನೇ ಧ್ಯಾನಿಸುತ್ತ ಅರಸನ ಮುಂಗಡೆ ನಿಂತಿದ್ದನು. ಆಗಲಾ ಪಂಡಿತನು ತನ್ನ ತೇಜಸ್ಸಿನಿಂದ ಸರ್ವ ಲೋಕಗಳ ಪಾಪಗಳನ್ನು ತೊಳೆಯುತ್ತ, "ಮಹಾರಾಜ! ನೀಲಾದ್ರಿಶಿಖರ ನಿವಾಸಿಯಾದ ಶ್ರೀಮಾಧವನು ನಿನ್ನನ್ನು ಅನುಗ್ರಹಿಸಲಿ! ಸಾಕ್ಷಾತ್ ಮುಕ್ತಿದಾಯಕವಾದ ತನ್ನ ಕ್ಷೇತ್ರವನ್ನು ಸಂದರ್ಶಿಸಲು ಹೋಗಿದ್ದ ನನಗೆ ಸ್ವಾಮಿಯು ಈ ಪ್ರಸಾದಮಾಲಿಕೆಯನ್ನು ಆಜ್ಞಾರೂಪವಾಗಿ ದಯಗೈದಿರುವನು. ಇದನ್ನೀಗ ನಿನಗೆ ಸಂದರ್ಶನಮಾಡಿಸಿರುವೆನು!

೪೫–೪೭. ಎಲೈ ವಿಪ್ರರೇ! ವಿದ್ಯಾಪತಿಯು ಈ ರೀತಿ ನುಡಿದು ಆ ಪ್ರಸಾದ ಮಾಲಿಕೆಯನ್ನು ಮಹಾರಾಜನ ಕೊರಳಿಗೆ ಹಾಕಿದನು. ಆ ಕ್ಷಿತಿಪತಿಯು ತನ್ನ ಹೃದಯವನ್ನು ಆಶ್ರಯಿಸಿರುವ ಆ ಮಾಲಿಕೆಯನ್ನು ಕಂಡು ಸಾಕ್ಷಾತ್ ಶ್ರೀ ಲಕ್ಷ್ಮೀಪತಿಯೇ ತನ್ನ ಹೃದಯವನ್ನು ಪ್ರವೇಶಿಸಿದನೆಂದು ಭಾವಿಸಿದನು. ಆಗಲಾತನು ತನ್ನೆರಡೂ ಕೈಗಳನ್ನು ತಲೆಯಮೇಲೆತ್ತಿ ಹಿಡಿದು ಅರೆಮುಗಿದ ಕಣ್ಣುಗಳುಳ್ಳವನಾಗಿ ಆನಂದಬಾಷ್ಪಗಳನ್ನು ಸುರಿಸುತ್ತ ಅದರಿಂದ ಮುಖವು ತೋಯುತಿರಲು ಶ್ರೀಹರಿಯನ್ನೀರೀತಿ ಸ್ತುತಿಸಿದನು —

ಇಂದ್ರದ್ಯುಮ್ನ ಉವಾಚ :—
ಜಯಾಖಿಲಜಗತ್ಸೃಷ್ಟಿಸ್ಥಿತಿಸಂಹಾರಶಿಲ್ಪಕೃತ್ ।
ಲೀಲಾವಿಷ್ಟವಪುರ್ಲೋಮಸಂಖ್ಯಬ್ರಹ್ಮಾಂಡದೇಹಭೃತ್ ॥ ೪೮ ॥
ಅಂತರ್ಯಾಮಿನ್ನಶೇಷಾಣಾಂ ಪ್ರಣತಾರ್ತಿಹರ ಪ್ರಭೋ ।
ಬ್ರಹ್ಮೇಂದ್ರರುದ್ರಮುಕುಟಕಿರ್ಮೀರಿತ ಪದಾಂಬುಜ ॥ ೪೯ ॥
ದೀನಾನಾಥವಿಪನ್ನೈಕಸತತತ್ರಾಣತತ್ಪರ ।
ನಿರ್ವ್ಯಾಜಕರುಣಾವಾರಿಪಾರಾವಾರ ಪರಾತ್ಪರ ॥ ೫೦ ॥
ತ್ವದೇಕಶರಣಂ ದೀನಮನಾದಿಭ್ರಮನಿರ್ಭರಂ ।
ಪರಿತ್ರಾಹಿ ಜಗನ್ನಾಥ ಭಕ್ತಾವಿರತವತ್ಸಲ ॥ ೫೧ ॥
ಇತಿ ಸ್ತುತ್ವಾ ನರಪತಿಃ ಸ್ವಾಸನೇ ಸಮುಪಾವಿಶತ್ ।
ಗೃಹಮೇಧಿಬ್ರಹ್ಮಚಾರಿಯತಿವೈಖಾನಸೈರ್ವೃತಃ ॥ ೫೨ ॥
ಅಷ್ಟಾದಶಸು ವಿದ್ಯಾಸು ಕುಶಲೈರ್ಯಜ್ವಿಭಿರ್ದ್ವಿಜೈಃ ।
ಮೌನ್ಯೈಃ ಸ್ಥವಿರಭೃತ್ಯೈಶ್ಚ ಸಾರ್ಧಂ ಮಂತ್ರಿಪುರಸ್ಸರೈಃ ॥ ೫೩ ॥

---

೪೮. ಇಂದ್ರದ್ಯುಮ್ನನು ಹೇಳುತ್ತಾನೆ — "ಸಮಸ್ತ ಜಗತ್ತಿನ ಸೃಷ್ಟಿ ಸ್ಥಿತಿಲಯಗಳನ್ನು ನಡೆಸುವ ಚಿತ್ರಕಾರನೂ, ವಿಲಾಸಕ್ಕಾಗಿಯೇ ವಿಶ್ವಶರೀರವನ್ನು ತಾಳಿ ಒಂದೊಂದು ರೋಮಕ್ಕೂ ಒಂದೊಂದು ಬ್ರಹ್ಮಾಂಡವನ್ನು ಧರಿಸಿರುವವನೂ ಆದ ಓ ಸ್ವಾಮಿಯೇ! ಭಕ್ತರ ಅಭೀಷ್ಟಸಿದ್ಧಿಗಾಗಿ ಜಯಶೀಲನಾಗು!

೪೯–೫೧. ಸಕಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ, ಶರಣಾಗತರ ಕಷ್ಟಗಳನ್ನು ಪರಿಹರಿಸುವವನೂ ಆದ ಓ ಪ್ರಭುವೇ! ಬ್ರಹ್ಮೇಂದ್ರರುದ್ರಾದಿ ದೇವತೆಗಳ ಕಿರೀಟಮಣಿಗಳಿಂದ ವಿವಿಧವರ್ಣಗಳಾಗಿಸಿದ ಪಾದಕಮಲಗಳುಳ್ಳವನಾಗಿ, ದೀನರೂ, ಅನಾಥರೂ, ಕಷ್ಟಕ್ಕೀಡಾದವರೇ ಮೊದಲಾದವರನ್ನು ಕಾಪಾಡುವುದರಲ್ಲಿಯೇ ಯಾವಾಗಲೂ ಆಸಕ್ತನೂ, ನಿರ್ವ್ಯಾಜಕರುಣಾಸಮುದ್ರನೂ, ಪರಾತ್ಪರನೂ, ಜಗನ್ನಾಥನೂ, ಭಕ್ತರಲ್ಲಿ ಅವಿಶ್ರಾಂತವಾತ್ಸಲ್ಯವುಳ್ಳವನೂ ಆದ ಓ ಪ್ರಭುವೇ! ನಿನ್ನನ್ನೇ ಶರಣುಹೊಂದಿರುವವನೂ, ದೀನನೂ, ಅನಾದಿಯಾದ ಭ್ರಾಂತಿಯಲ್ಲಿ ಮುಳುಗಿರುವವನೂ ಆದ ನನ್ನನ್ನು ಕಾಪಾಡು.

೫೨–೫೯. ಈ ಪ್ರಕಾರವಾಗಿ ಆ ದೊರೆಯು ಸ್ತುತಿಸಿ ತರುವಾಯ ಆಸನದಲ್ಲಿ ಕುಳಿತನು. ಆಗಲಾತನ ಸಭೆಯಲ್ಲಿ ಗೃಹಸ್ಥರೂ, ಬ್ರಹ್ಮಚಾರಿಗಳೂ, ಯತಿಗಳೂ, ವೈಖಾನಸರೂ ಹದಿನೆಂಟು ವಿದ್ಯೆಗಳಲ್ಲಿಯೂ ಕುಶಲರಾದ ಬ್ರಾಹ್ಮಣರೂ ನೆರೆದಿದ್ದರು. ಇಂದ್ರದ್ಯುಮ್ನನು ಇವರೆಲ್ಲರಿಂದಲೂ ಅಲ್ಲದೆ ಮೌನಿಗಳಿಂದಲೂ, ಸೇವಕರಿಂದಲೂ ಮಂತ್ರಿಗಳಿಂದಲೂ ಕೂಡಿದವನಾಗಿ ವಿದ್ಯಾಪತಿಯನ್ನು ಸತ್ಕರಿಸಿ ಬಹುಮಾನಪುರಸ್ಸರವಾಗಿ ಅವನನ್ನು ತನ್ನ ಮುಂಗಡೆಯೇ ಪೀಠದಲ್ಲಿ ಕುಳ್ಳಿರಿಸಿ

ವಿದ್ಯಾಪತಿಂ ಪೂಜಯಿತ್ವಾ ಬಹುಮಾನಪುರಸ್ಸರಂ ।
ಉಪವೇಶ್ಯಾಗ್ರತಃ ಪೀಠೇ ಪೃಷ್ಟ್ವಾ ಕುಶಲಮಾದಿತಃ ॥ ೫೪ ॥
ಪುರುಷೋತ್ತಮಕ್ಷೇತ್ರಸ್ಯ ವಿಷ್ಣೋರ್ನೀಲಾಶ್ಮವರ್ಷ್ಮಣಃ ।
ಮಹಿಮಾನಂ ಸ್ವರೂಪಂ ಚ ಪಪ್ರಚ್ಛಾವಹಿತೋ ಮುದಾ ॥ ೫೫ ॥
ಬ್ರಾಹ್ಮಣಃ ಕ್ಷತ್ರಿಯೇಣಾಸೌ ಪೃಷ್ಟೋಽನುಭವಮಾತ್ಮನಃ ।
ಭಿಲ್ಲದ್ವೀಪಪ್ರವೇಶಾದಿ ಮಜ್ಜನಾಂತಂ ಸರಿತ್ಪತೇಃ ॥ ೫೬ ॥
ಕ್ಷೇತ್ರೋತ್ತಮಸ್ಯ ವೃತ್ತಾಂತಂ ಕಥಯಾಮಾಸ ವಿಸ್ತರಾತ್ ।
ನೀಲಾದ್ರಿರೋಹಣಂ ನೀಲಮಾಧವಸ್ಯ ಚ ದರ್ಶನಂ ॥ ೫೭ ॥
ಸ್ನಾನಂ ಚ ರೌಹಿಣೇ ಕುಂಡೇ ಮಹಿಮಾನಂ ವಟಸ್ಯ ಚ ।
ನೃಸಿಂಹಾದ್ಯಷ್ಟಶಂಭೂಂಶ್ಚ ಶಕ್ತೀನಾಮಷ್ಟಸಂಸ್ಥಿತಿಂ ॥ ೫೮ ॥
ರಥೇನಾಕ್ರಮಣಾದ್ದೃಷ್ಟೌ ಕ್ಷೇತ್ರಸ್ಯಾಯಾಮವಿಸ್ತರೌ ।
ತತ್ಸರ್ವಂ ವರ್ಣಯಾಮಾಸ ಯಥಾವದನುಪೂರ್ವಶಃ ॥ ೫೯ ॥
ತಚ್ಛ್ರುತ್ವಾ ಚಿತ್ರಮತುಲಂ ತೈರ್ಥಿಕಾವೇದಿತಂ ಪುರಾ ।
ಸಂಪ್ರೀತೋ ಹೃಷ್ಟಮನಾಃ ಪುನಸ್ತಂ ಕ್ಷಿತಿಪೋಽಬ್ರವೀತ್ ॥ ೬೦ ॥

---

ಯೋಗಕ್ಷೇಮವನ್ನು ಕೇಳಿದಬಳಿಕ, ಶ್ರೀಪುರುಷೋತ್ತಮಕ್ಷೇತ್ರದಲ್ಲಿ ನೆಲಸಿರುವ ನೀಲಮಣಿವಿಗ್ರಹನಾದ ಶ್ರೀಮಹಾವಿಷ್ಣುವಿನ ಮಹಿಮೆಯನ್ನೂ, ಸ್ವರೂಪವನ್ನೂ ಬಹಳ ಶ್ರದ್ಧೆಯಿಂದಲೂ, ಸಂತೋಷದಿಂದಲೂ ತಿಳಿಸಬೇಕೆಂದು ಕೇಳಿದನು. ಆ ವಿದ್ಯಾಪತಿ ಬ್ರಾಹ್ಮಣನಾದರೋ, ಕ್ಷತ್ರಿಯನಾದ ಇಂದ್ರದ್ಯುಮ್ನನು ತನ್ನ ಅನುಭವವೇನೆಂದು ಕೇಳಿಕೊಳ್ಳಲು, ತಾನು ಶಬರದ್ವೀಪವನ್ನು ಪ್ರವೇಶಿಸಿದ್ದು ಮೊದಲುಗೊಂಡು ಸಮುದ್ರಸ್ನಾನಮಾಡಿದವರೆಗೆ ಆ ಕ್ಷೇತ್ರದ ವೃತ್ತಾಂತವೆಲ್ಲವನ್ನೂ ವಿಸ್ತಾರವಾಗಿ ತಿಳಿಸಿದನು. ತಾನು ನೀಲಾಚಲವನ್ನು ಹತ್ತಿದುದು, ನೀಲಮಾಧವನನ್ನು ಸಂದರ್ಶಿಸಿದುದು, ರೌಹಿಣಕುಂಡದಲ್ಲಿ ಸ್ನಾನಮಾಡಿದುದು, ವಟವೃಕ್ಷದ ಮಹಿಮೆ, ನೃಸಿಂಹಮೂರ್ತಿ, ಅಷ್ಟಶಂಭುಮೂರ್ತಿಗಳು, ಅಷ್ಟಶಕ್ತಿಗಳೇ ಮೊದಲಾದ ದೇವತಾಮೂರ್ತಿಗಳ ವಿಷಯವನ್ನೂ, ರಥದಲ್ಲಿ ಕುಳಿತು ಸುತ್ತಿದುದರಿಂದ ತಿಳಿದುಬಂದ ಆ ಕ್ಷೇತ್ರದ ಉದ್ದಗಲಗಳನ್ನೂ, ಕ್ರಮವಾಗಿ ವರ್ಣಿಸಿ ಹೇಳಿದನು

೬೦. ಪೂರ್ವದಲ್ಲಿ ತೀರ್ಥಯಾತ್ರಿಕರಿಂದ ತಾನು ಕೇಳಿದ್ದ ಆಶ್ಚರ್ಯಕರವೂ, ಅನುಪಮವೂ ಆದ ಶ್ರೀಪುರುಷೋತ್ತಮಕ್ಷೇತ್ರಮಾಹಾತ್ಮ್ಯವನ್ನು ವಿದ್ಯಾಪತಿಯಿಂದಲೂ ಕೇಳಿದ ತರುವಾಯ ಆ ಇಂದ್ರದ್ಯುಮ್ನಮಹಾರಾಜನು ಸಂತೋಷಗೊಂಡ ಮನಸ್ಸುಳ್ಳವನಾಗಿ ತೃಪ್ತಿಪಟ್ಟುಕೊಂಡು ಅವನನ್ನು ಕುರಿತು ಪುನಃ ಈ ರೀತಿ ಕೇಳಿದನು :—

ಇಂದ್ರದ್ಯುಮ್ನ ಉವಾಚ :—

ಶ್ರುತಪೂರ್ವಂತು ಭಗವಂಸ್ತ್ವತ್ತೋಽಶ್ರೌಷಂ ಸುದುರ್ಲಭಂ ।
ಕ್ಷೇತ್ರೋತ್ತಮಂ ದ್ವಿಜಶ್ರೇಷ್ಠ ಸಾಂಪ್ರತಂ ವರ್ಣಯಸ್ವ ಮೇ ।
ನೀಲೇಂದ್ರಮಣಿಮೂರ್ತೇಸ್ತು ವಿಷ್ಣೋ ರೂಪಂ ಯಥಾತಥಂ ॥ ೬೧ ॥

ವಿದ್ಯಾಪತಿರುವಾಚ:—

ಹಂತ ತೇ ಕಥಯಿಷ್ಯಾಮಿ ದಿವ್ಯಾಂ ಮೂರ್ತಿಂ ಜಗತ್ಪತೇಃ ॥ ೬೨ ॥
ಯಾಂ ಚರ್ಮಚಕ್ಷುಷಾ ದೃಷ್ಟ್ವಾ ಜಾಯತೇ ಮುಕ್ತಿಭಾಜನಂ ।
ನೀಲೇಂದ್ರಮಣಿಪಾಷಾಣಮಯೀ ಮೂರ್ತಿಃ ಪುರಾತನೀ ॥ ೬೩ ॥
ಯಾನ್ನಹಂ ಬ್ರಹ್ಮರುದ್ರೇಂದ್ರಪುರೋಗೈರರ್ಚಿತಾ ಸುರೈಃ ।
ಆರೋಪಿತೇಯಂ ದಿವ್ಯಾ ಸ್ರಕ್ಪೂಜಾಯಾಂ ಹಿ ಸುಪರ್ವಭಿಃ ॥ ೬೪ ॥
ಸೇಯಂ ನ ಮ್ಲಾಯತಿ ನೃಪ ನ ಚ ಗಂಧೇನ ರಿಚ್ಯತೇ ।
ದಿನೇ ಬಹುತಿಥೇ ಯಾತೇಽಪೀದೃಶೀ ಸ್ರಗ್ಧರೋದ್ಭವಾ ॥ ೬೫ ॥
ದಿವ್ಯೋಪಹಾರ ನಿರ್ಮಾಲ್ಯ ಭಕ್ಷಣಾತ್ ಕ್ಷೀಣಕಲ್ಮಷಂ ।
ಮಾಂ ನ ಪಶ್ಯಸಿ ಕಿಂ ರಾಜನ್ನತಿಮಾನುಷವರ್ಚಸಂ ॥ ॥ ೬೬ ॥

---

೬೧. ಇಂದ್ರದ್ಯುಮ್ನನು ಕೇಳುತ್ತಾನೆ:—"ಭೋ ಭಗವನ್! ಬಹಳ ದುರ್ಲಭವಾದ ಈ ಕ್ಷೇತ್ರವೃತ್ತಾಂತವನ್ನು ನಾನು ಹಿಂದೆಯೇ ಕೇಳಿದ್ದೆನು. ಅದನ್ನೇ ಈಗ ನಿನ್ನಿಂದಲೂ ಕೇಳಿದೆನು. ಎಲೈ ದ್ವಿಜಶ್ರೇಷ್ಠನೇ! ಪ್ರಕೃತದಲ್ಲಿ ನೀನು ಆ ಕ್ಷೇತ್ರವನ್ನು ವರ್ಣಿಸುವವನಾಗು. ನೀಲೇಂದ್ರಮಣಿಮೂರ್ತಿಯಾದ ಶ್ರೀಮಹಾವಿಷ್ಣುವಿನ ರೂಪವೆಂತಿರುವುದೆಂಬುದನ್ನು ಇದ್ದುದನ್ನಿದ್ದಂತೆ ತಿಳಿಸುವವನಾಗು."

೬೨-೬೫. ವಿದ್ಯಾಪತಿಯು ಹೇಳುತ್ತಾನೆ:—"ಆಹಾ! ಸಂತೋಷವಾಗಿ ವರ್ಣಿಸಿಹೇಳುವೆನು. ಜಗತ್ಪತಿಯಾದ ಯಾವನ ದಿವ್ಯಮೂರ್ತಿಯಾವುದುಂಟೋ ಅದನ್ನು ಮಾನವನು ಈ ಚರ್ಮಚಕ್ಷುಸ್ಸಿನಿಂದ ದರ್ಶನಮಾಡಿದರೆ ಸಾಕು. ಕೂಡಲೇ ಅವನು ಮುಕ್ತಿಭಾಜನನಾಗುತ್ತಾನೆ. ನೀಲೇಂದ್ರಮಣಿಶಿಲೆಯ ಪುರಾತನ ವಿಷ್ಣುಮೂರ್ತಿಗೆ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಪ್ರತಿನಿತ್ಯವೂ ಪೂಜೆಯನ್ನು ಸಲ್ಲಿಸುವರು. ಇಂತಹ ದೇವತೆಗಳು ಆ ಮೂರ್ತಿಗೆ ಅವರು ಹಾಕಿದ್ದ ದಿವ್ಯಮಾಲಿಕೆಯು ಇದೇ! ಇದು ಬಾಡುವುದೂ ಇಲ್ಲವು. ಎಷ್ಟು ದಿನಗಳು ಕಳೆದಿದ್ದರೂ ಇದರ ವಾಸನೆಯೂ ಸಹ ಹೋಗಿರುವುದಿಲ್ಲವು.

೬೬-೬೭. ಎಲೈ ದೊರೆಯೇ! ಆ ಪ್ರಭುವಿನ ಸನ್ನಿಧಿಯಲ್ಲಿ ದೇವತೆಗಳು ಸಮರ್ಪಿಸಿದ ದಿವ್ಯೋಪಹಾರದ ನಿರ್ಮಾಲ್ಯವನ್ನು ಭಕ್ಷಿಸಿ ಕ್ಷೀಣಕಲ್ಮಷನಾಗಿ ಅತಿಮಾನುಷವಾಗಿ ತೇಜಸ್ಸಂಪನ್ನನಾಗಿರುವ ನನ್ನನ್ನು ನೀನು ನೋಡುತ್ತಿಲ್ಲವೆ?

ಸಕೃದಪ್ಯಶನಾದ್ಯಸ್ಯ ಕ್ಷುತ್ಪಿಪಾಸಾಬಲಕ್ಷಯಾಃ ।
ನ ಬಾಧಂತೇ ನೃಪಶ್ರೇಷ್ಠ ದೃಷ್ಟೇನಾದೃಷ್ಟಕಲ್ಪನಂ ॥ ೬೭ ॥
ಭುಕ್ತಿರ್ಮುಕ್ತಿಶ್ಚ ವೈ ರಾಜನ್ದ್ವೇ ತತ್ರ ಯುಗಪತ್ಸ್ಥಿತೇ ।
ನ ಜರಾರೋಗಶೋಕಾದಿದುಃಖಂ ತತ್ರ ಹಿ ವಿದ್ಯತೇ ॥ ೬೮ ॥
ಯತ್ರ ಸಾಕ್ಷಾಜ್ಜಗನ್ನಾಥಃ ಪ್ರಸನ್ನವದನೋ ವಿಭುಃ ।
ಫುಲ್ಲೇಂದೀವರಪತ್ರಾಕ್ಷಃ ಪ್ರಪನ್ನಾಮೃತಮುಕ್ತಿದಃ ॥ ೬೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಸ್ವರ್ಣಸ್ಯೈಕತವರ್ಷಣಂ—ಭಗವದದರ್ಶನಂ—ವಿದ್ಯಾಪತಿಕಥಿತ ಪುರುಷೋತ್ತಮಕ್ಷೇತ್ರಸ್ಥ ರೋಹಿಣಕುಂಡಾದಿತೀರ್ಥಪ್ರಭಾವವರ್ಣನಂ"ನಾಮ ನವಮೋಽಧ್ಯಾಯಃ

---

ಎಲೈ ನೃಪಶ್ರೇಷ್ಠನೇ! ಆ ಸ್ವಾಮಿಯನ್ನೊಮ್ಮೆ ಕಂಡು ಆತನ ನಿರ್ಮಾಲ್ಯ ವನ್ನೊಂದುಸಲ ಸೇವಿಸಿದರೆ ಸಾಕು; ಹಸಿವು, ಬಾಯಾರಿಕೆ, ದುರ್ಬಲತೆಗಳು ಪೀಡಿಸುವುದಿಲ್ಲ. ಇದು ಕಂಡುದೇ ಆಗಿರುವುದು. ಇದರಿಂದ ಕಾಣದಿರುವ ಎಲ್ಲ ಸಂಗತಿಗಳನ್ನೂ ನೀನೇ ಊಹಿಸಿಕೊಳ್ಳಬಹುದು.

೬೮–೬೯. ಅರಳಿದ ಕನ್ನೈದಿಲೆಯ ದಳದಂತೆ ಮನೋಹರವಾದ ಕಂಗಳು ಳ್ಳವನೂ, ಪ್ರಪನ್ನರಾದ ಭಕ್ತರಿಗೆ ಮುಕ್ತಿಪ್ರದಾಯಕನೂ, ಪ್ರಸನ್ನವದನನೂ, ಸರ್ವಲೋಕಪ್ರಭುವೂ ಆದ ಸಾಕ್ಷಾತ್ ಜಗನ್ನಾಥನು ನೆಲಸಿರುವ ಆ ಕ್ಷೇತ್ರದಲ್ಲಿ ಭುಕ್ತಿಮುಕ್ತಿಗಳೆರಡೂ ಏಕಕಾಲದಲ್ಲಿಯೇ ದೊರಕುತ್ತವೆಯಲ್ಲದೆ ಅಲ್ಲಿ ಮುಪ್ಪು, ರೋಗ, ಶೋಕಗಳ ದುಃಖಗಳು ಇರುವುದೇ ಇಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಸ್ವರ್ಣಸ್ಯೈಕತವರ್ಷಣ—ಭಗವದದರ್ಶನ—ವಿದ್ಯಾಪತಿಕಥಿತ ರೋಹಿಣಕುಂಡಾದಿತೀರ್ಥಪ್ರಭಾವವರ್ಣನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ವಿದ್ಯಾಪತಿಕಥಿತ ಜಗನ್ನಾಥಕ್ಷೇತ್ರಸಂಸ್ಥಾನಾದಿವರ್ಣನಂ

ಇಂದ್ರದ್ಯುಮ್ನ ಉವಾಚ :—

ಜನ್ಮಪ್ರಭೃತಿ ತತ್ರ ತ್ವಂ ನ ಪ್ರಯಾತೋ ದ್ವಿಜೋತ್ತಮ ।
ಕಥಂ ವಿದ್ಯಾದ್ಭವಾನ್ದಿವ್ಯವೃತ್ತಾಂತಂ ಪುರುಷೋತ್ತಮೇ ॥ ೧ ॥

ವಿದ್ಯಾಪತಿರುವಾಚ :—

ತತ್ರ ಸ್ಥಿತೋಽಹಂ ಸಾಯಾಹ್ನೇ ಭಗವಂತಮುಪಾಗಮಂ ।
ತಸ್ಮಿನ್ಕಾಲೇ ದಿವ್ಯಗಂಧೋ ವವೌ ಚ ಶಿಶಿರೋ ಮರುತ್ ॥ ೨ ॥
ಉದ್ಯತಃ ಸಂಕುಲಃ ಶಬ್ದಃ ಶ್ರೂಯತೇ ಸ್ಮ ವಿಯತ್ಪಥೇ ।
ಕ್ರಮಾದ್ಯಾಹಿ ಪ್ರಯಾಹೀತಿ ಸ ತು ವರ್ಣಮಯಃ ಸ್ವನಃ ॥ ೩ ॥
ದಿವಿಷ್ಠಾನಾಂ ಪತತ್ಪುಷ್ಪವೃಷ್ಟ್ಯಾಚ್ಛಾದಿತಪರ್ವತಃ ।
ಸಮಾಗಮೋಽಭೂತ್ಸಾನ್ನಿಧ್ಯೇ ವೈಕುಂಠಸ್ಯ ಮಹೀಪತೇ ॥ ೪ ॥
ವೀಣಾವೇಣುಮೃದಂಗಾನಾಂ ಚರ್ಚರೀಣಾಂ ಚ ನಿಃಸ್ವನಃ ।
ಅಭೂತಪೂರ್ವಸ್ತತ್ರಾಸೀದ್ದಿವ್ಯಗಾನವಿಮಿಶ್ರಿತಃ ॥ ೫ ॥

---

### ಕನ್ನಡದ ಅನುವಾದ

#### ವಿದ್ಯಾಪತಿಕಥಿತ ಜಗನ್ನಾಥಕ್ಷೇತ್ರಸಂಸ್ಥಾನಾದಿವರ್ಣನ

೧. ಇಂದ್ರದ್ಯುಮ್ನನು ಹೇಳುತ್ತಾನೆ :—"ಅಯ್ಯಾ ವಿಪ್ರನೇ! ನೀನು ಹುಟ್ಟಿದಂದಿನಿಂದ ಆ ಪುರುಷೋತ್ತಮಕ್ಷೇತ್ರಕ್ಕೆ ಹೋದವನೇ ಅಲ್ಲವು. ಇಂತಿರುವ ನೀನು ಅಲ್ಲಿಯ ದಿವ್ಯಸಂಗತಿಗಳನ್ನು ತಿಳಿದುದೆಂತು ?"

೨. ವಿದ್ಯಾಪತಿಯು ಹೇಳುತ್ತಾನೆ.—" ಎಲೈ ಮಹಾರಾಜನೇ ! ನಾನು ಆ ಕ್ಷೇತ್ರದಲ್ಲಿ ನಿಂತು ಸಾಯಂಸಮಯದಲ್ಲಿ ಭಗವಂತನನ್ನು ಕಾಣಲು ಹೋದೆನು. ಆ ಕಾಲದಲ್ಲಿ ದಿವ್ಯಗಂಧಸಹಿತವಾದ ತಂಗಾಳಿಯು ಬೀಸುತ್ತಿದ್ದಿತು.

೩. ಅದೇ ಸಮಯದಲ್ಲಿಯೇ ಗಗನಮಾರ್ಗದಲ್ಲಿ "ಬಾ-ಹೋಗು" ಎಂಬ ಸಂಕುಲಶಬ್ದಗಳ ವರ್ಣಮಯವಾದ ಧ್ವನಿಯು ಕ್ರಮವಾಗಿ ಕೇಳಿಬರುತ್ತಿದ್ದಿತು.

೪. ಎಲೈ ಮಹೀಪತಿಯೆ ! ಆ ತರುವಾಯ ಆ ಇಂದ್ರನೀಲಪರ್ವತವೆಲ್ಲವೂ ಆಕಾಶದಲ್ಲಿ ನಿಂತಿದ್ದ ದೇವತೆಗಳ ಹೂಮಳೆಯಿಂದ ಮುಚ್ಚಿದುದಾಯಿತು. ಆ ಬಳಿಕ ಶ್ರೀವೈಕುಂಠನ ಸಾನ್ನಿಧ್ಯಸಮಾಗಮವು ನನಗೆ ದೊರೆಯಿತು.

೫. ಅಲ್ಲಿಯಾವರೋ ವೀಣೆ, ಕೊಳಲು, ಮೃದಂಗ, ಚರ್ಚರಿಯೇ ಮೊದಲಾದ ದಿವ್ಯವಾದ್ಯಗಳ ಧ್ವನಿಗಳು ದಿವ್ಯಗಾನಸಂಮಿಶ್ರವಾಗಿ ಅಭೂತಪೂರ್ವವಾಗಿ ಕೇಳಿಬರುತ್ತಿದ್ದುವು.

ಸಹಸ್ರಮುಪಚಾರಾಣಾಂ ಪ್ರೀತಯೇ ಪರಮೇಶಿತುಃ ।
ದೇವೈಃ ಸಮರ್ಪಿತಂ ತತ್ರ ಮನುಷ್ಯಾದೃಷ್ಟಪೂರ್ವಕಂ ॥ ೬ ॥
ಸಂಪೂಜ್ಯ ವಿಧಿವದ್ದೇವಂ ಕರಮಾತ್ರೋಪಲಕ್ಷಿತಾಃ ।
ಜಯಪೂರ್ವೈಶ್ಚ ತಂ ಸ್ತೋತ್ರೈಃ ಸಂತೋಷ್ಯ ಮಧುಸೂದನಂ ॥ ೭ ॥
ಯಥಾಗತಂ ತೇ ತ್ರಿದಶಾಃ ಪ್ರಯಯುಸ್ತ್ರಿದಶಾಲಯಂ ।
ತೇಷು ಯಾತೇಷು ಶಬರಃ ಸಖಾ ವಿಶ್ವಾವಸುರ್ಮಮ ॥ ೮ ॥
ದಿವ್ಯೋಪಹಾರಭೋಜ್ಯಾನಿ ಮಾಲ್ಯಂ ಚೇದಂ ದದೌ ಮಮ ।
ಅನರ್ಘ್ಯಮೇತದಮ್ಲಾನಂ ಶ್ರೀರಾಜ್ಯಸುಖದಾಯಕಂ ॥ ೯ ॥
ಅಲಕ್ಷ್ಮೀಪಾಪರಕ್ಷೋಘ್ನಂ ಯೋಗ್ಯಂ ತೇನಾಹೃತಂ ಮಯಾ ।
ಶೃಣುಷ್ವ ತಸ್ಯ ಸಂಸ್ಥಾನಂ ವಿಷ್ಣೋರ್ಯತ್ಕ್ಷೇತ್ರಮುತ್ತಮಂ ॥ ೧೦ ॥
ಅಪೂರ್ವಶಿಲ್ಪನೈಪುಣ್ಯಂ ರೂಪಂ ಚಾಸ್ಯ ಮನೋಹರಂ ।
ನ ಭೂಮಿಜನ್ಮನಾ ಪುಂಸಾ ಶಕ್ಯತೇ ಗದಿತುಂ ಹಿ ತತ್ ॥ ೧೧ ॥

---

೬. ಎಲೈ ಇಂದ್ರದ್ಯುಮ್ನಮಹಾರಾಜನೇ! ಪರಮೇಶ್ವರನಿಗೆ ಪ್ರೀತಿಯಾಗಲೆಂದು ಆ ದೇವತೆಗಳು ಮಾನವರಿಂದ ಅದೃಷ್ಟಪೂರ್ವಗಳಾದ ಸಹಸ್ರೋಪಚಾರಗಳನ್ನು ಅಲ್ಲಿ ಸಮರ್ಪಿಸಿದ್ದರು.

೭–೧೦. ಆ ದೇವತೆಗಳು ತಮ್ಮ ಕೈಗಳುಮಾತ್ರ ಕಾಣುವಂತೆ ಗೋಚರವಾಗಿ ಶಾಸ್ತ್ರೋಕ್ತವಾಗಿ ಸ್ವಾಮಿಗೆ ಪೂಜೆಯನ್ನು ಸಲ್ಲಿಸಿ, ಜಯಶಬ್ದಪೂರ್ವಕವಾದ ಸ್ತೋತ್ರಗಳಿಂದ ಸ್ತುತಿಸಿ ಆ ಮಧುಸೂಧನನನ್ನು ಸಂತೋಷಗೊಳಿಸಿ ತಾವು ಬಂದಂತೆಯೇ ಸ್ವರ್ಗಲೋಕಕ್ಕೆ ಹಿಂತಿರುಗಿದರು. ಅವರತ್ತ ಹೊರಟು ಹೋಗುತ್ತಲೇ ಇತ್ತ ನನ್ನ ಗೆಳೆಯನಾದ ವಿಶ್ವಾವಸುವೆಂಬ ಶಬರನು ದಿವ್ಯೋಪಹಾರಕ್ಕೆ ಯೋಗ್ಯಗಳಾದ ಭಕ್ಷ್ಯಗಳನ್ನೂ, ಈ ಪ್ರಸಾದಮಾಲಿಕೆಯನ್ನೂ ನನಗೆ ಕೊಟ್ಟನು. ಈ ಪ್ರಸಾದಮಾಲಿಕೆಯಾದರೋ ಬಾಡದಿರುವಂತಹುದು. ಅನರ್ಘ್ಯವಾದುದು. ಸಂಪತ್ತನ್ನೇ ಅಲ್ಲದೆ ರಾಜ್ಯಸುಖವನ್ನೂ ಕೊಡುವಂತಹುದು. ದಾರಿದ್ರ್ಯವನ್ನೂ ಪಾಪಗಳನ್ನೂ ತೊಲಗಿಸಿ, ರಾಕ್ಷಸರನ್ನು ಧ್ವಂಸಗೊಳಿಸುವಂತಹುದು ಎಲೈ ಮಹಾರಾಜನೇ! ಶ್ರೀಮಹಾವಿಷ್ಣುವಿನ ಆ ಉತ್ತಮಕ್ಷೇತ್ರದ ನೆಲೆಕಟ್ಟನ್ನೀಗ ಹೇಳುವೆನು; ಕೇಳುವವನಾಗು.

೧೧. ಆ ಕ್ಷೇತ್ರವು ಅಪೂರ್ವವಾದ ಶಿಲ್ಪನೈಪುಣ್ಯವನ್ನೊಳಕೊಂಡುದಾಗಿರುವುದು. ಅದರ ರೂಪರೇಖೆಯಾದರೊ ಬಹು ಮನೋಹರವಾಗಿರುವುದು. ಅದರ ವಿಚಾರವನ್ನು ಹೇಳಲು ಈ ಭೂಮಂಡಲದಲ್ಲಿ ಜನ್ಮವೆತ್ತಿದ ಯಾವ ಮಾನವನಿಂದಲೂ ಸಾಧ್ಯವಾಗುವುದಿಲ್ಲವು.

ತದ್ಭಾಗ್ಯಪೌರುಷಾಭ್ಯಾಂ ತಲ್ಲಕ್ಷಿತಂ ಕಥಯಾಮಿ ತೇ ।
ಸಮಂತಾದ್ಗಹನಾಕೀರ್ಣಂ ಕ್ಷೇತ್ರಂ ನಿಲಾದ್ರಿನಾಭಿಕಂ ॥ ೧೨ ॥
ಆಯಾಮವಿಸ್ತೃತಿಭ್ಯಾಂ ಚ ವಿಖ್ಯಾತಂ ಕ್ರೋಶಪಂಚಕಂ ।
ತೀರ್ಥರಾಜಸ್ಯ ವೇಲಾಯಾಂ ಸ್ವರ್ಣವಾಲುಕಯಾವೃತಂ ॥ ೧೩ ॥
ಅದ್ರೇಃ ಶೃಂಗೇ ಮಹಾನುಚ್ಚಃ ಕಲ್ಪಸ್ಥಾಯೀ ವಟೋ ಮಹಾನ್ ।
ಕ್ರೋಶಾಯುತಃ ಪುಷ್ಪಫಲವರ್ಜಿತಃ ಪಲ್ಲವೋಜ್ಜ್ವಲಃ ॥ ೧೪ ॥
ಸೂರ್ಯಾಪಕ್ರಮಣೇ ತಸ್ಯ ಛಾಯಾಂ ನಾಪಕ್ರಮೇತ ವೈ ।
ತಸ್ಯ ಪಶ್ಚಾತ್ಪ್ರದೇಶೇ ಹಿ ಕುಂಡಂ ರೌಹಿಣಸಂಜ್ಞಕಂ ॥ ೧೫ ॥
ಜಲೋದ್ಗಮಾನ್ನೀಲದೃಷದಾರೋಹಣವಿಭೂಷಿತಂ ।
ಬಹಿಃ ಸ್ಫಟಿಕವೇದೀಭಿಶ್ಚತುರ್ದಿಕ್ಷು ಪರೀವೃತಂ ॥ ೧೬ ॥
ಅಘಸಂಘಾತಹಾರೀಭಿರದ್ಭಿಃ ಪೂರ್ಣಂ ಮನೋಹರಂ ।
ತತ್ಪೂರ್ವವೇದಿಕಾಮಧ್ಯೇ ನ್ಯಗ್ರೋಧಚ್ಛಾಯಶೀತಲೇ ॥ ೧೭ ॥
ಇಂದ್ರನೀಲಮಯೋ ದೇವ ಆಸ್ತೇ ಚಕ್ರಗದಾಧರಃ ।
ಏಕಾಶೀತ್ಯಂಗುಲಮಿತಃ ಸ್ವರ್ಣಪದ್ಮೋಪರಿ ಸ್ಥಿತಃ ॥ ೧೮ ॥

---

೧೨–೧೩. ಎಲೈ ದೊರೆಯೇ ! ನಿನ್ನ ಭಾಗ್ಯದಿಂದಲೂ, ಪೌರುಷದಿಂದಲೂ ನಾನು ಆ ಪುಣ್ಯಕ್ಷೇತ್ರವನ್ನು ನೋಡಿದೆನಾಗಿ ಅದರ ವಿಚಾರವನ್ನು ಇದ್ದುದನ್ನು ಇದ್ದಂತೆಯೇ ನಿನಗೆ ತಿಳಿಯಹೇಳುವೆನು ; ಕೇಳು. ಸುತ್ತಲೂ ಕಾಡಿನಿಂದ ಬಳಸಿ ನೀಲಾದ್ರಿಯನ್ನು ಮಧ್ಯದಲ್ಲೊಳಕೊಂಡಿರುವ ಆ ಪುರುಷೋತ್ತಮಕ್ಷೇತ್ರವು ಉದ್ದಗಲಗಳೆರಡೂ ಸೇರಿ ಐದು ಕ್ರೋಶಗಳ ವಿಸ್ತಾರವುಳ್ಳುದೆಂದು ಪ್ರಸಿದ್ಧವಾಗಿರುವುದು ಆ ಕ್ಷೇತ್ರವೆಲ್ಲವೂ ತೀರ್ಥರಾಜದ ತೀರದಲ್ಲಿ ಚಿನ್ನದ ಮರಳಿನಿಂದ ಆವರಿಸಲ್ಪಟ್ಟಿರುತ್ತದೆ.

೧೪. ಅಲ್ಲಿಯ ನೀಲಾಚಲದ ಶಿಖರದಲ್ಲಿ ಒಂದು ಕ್ರೋಶದಗಲವೂ, ಪುಷ್ಪಫಲವರ್ಜಿತವೂ, ಯಾವಾಗಲೂ ಚಿಗುರುಗಳಿಂದ ಸುಶೋಭಿತವೂ ಆದ ಬಹು ದೊಡ್ಡದಾದ ವಟವೃಕ್ಷವು ಒಂದು ಕಲ್ಪಕಾಲದಿಂದಲೂ ಇರುವುದು.

೧೫–೧೬. ಸೂರ್ಯಸಂಚಾರವಲ್ಲಿಯೂ ಅದರ ನೆರಳು ಹೋಗುವುದಿಲ್ಲವು ಅದರ ಹಿಂಭಾಗದಲ್ಲಿ ರೋಹಿಣವೆಂಬ ಕುಂಡವಿರುತ್ತದೆ. ತಳದಿಂದಲೂ ನೀಲಶಿಲೆಗಳ ಮೆಟ್ಟಲುಗಳುಳ್ಳುದಾಗಿರುವ ಆ ಕುಂಡವು ಹೊರಗೆ ನಾಲ್ಕೂ ದಿಕ್ಕುಗಳಲ್ಲಿಯೂ ಸ್ಫಟಿಕಶಿಲೆಯ ವೇದಿಗಳಿಂದಲಂಕೃತವಾಗಿರುವುದು.

೧೭–೧೮. ಪಾಪಸಮೂಹಗಳನ್ನು ಪರಿಹರಿಸುವ ನೀರಿನಿಂದ ತುಂಬಿ ಮನೋಹರವಾಗಿರುವ ಆ ರೋಹಿಣಕುಂಡದ ಪೂರ್ವದಿಕ್ಕಿನ ವೇದಿಕೆಯ ಮಧ್ಯದಲ್ಲಿರುವ ನ್ಯಗ್ರೋಧವೃಕ್ಷದ ನೆರಳಿನಿಂದ ತಣ್ಣಗಿರುವ ಪ್ರದೇಶದಲ್ಲಿ

ಅಷ್ಟಮೀಚಂದ್ರಶಕಲಶೋಭಾವಿಜಯಿಭಾಲಭೂಃ ।
ಸ್ಮೇರೇಂದೀವರಯುಗ್ಮಶ್ರೀಧಿಕ್ಕಾರೋದ್ಯತಲೋಚನಃ ॥ ೧೯ ॥
ಆನನಾಮೃತಭಾನೂದ್ಯತ್ಸಂತಾಪತ್ರಯಮೋಚನಃ ।
ನಾಸಾಪುಟದ್ವಯೋದ್ಭಾಸಿತಿಲಪುಷ್ಪಪ್ರಶೋಭನಃ ॥ ೨೦ ॥
ವಪುಷೋಽಶ್ಮಮಯತ್ವೇಽಪಿ ಸುಸ್ಮಿತಸ್ನಪಿತಾಧರಃ ।
ಹಾಸಸಂಫುಲ್ಲಗಂಡಾಭ್ಯಾಂ ರುಚಿರಂ ಚಿಬುಕಂ ಹನುಃ ॥ ೨೧ ॥
ಅನನ್ಯಪೂರ್ವಘಟಿತಂ ಸೃಕ್ಕಿಣೀಯುಗಮಂಜಸಾ ।
ಹಾಸನಿಮ್ನಾಧರೌ ಗಂಡೌ ಚಿಬುಕಂ ಸೃಕ್ಕಿಣೀ ಶುಭೇ ॥ ೨೨ ॥
ವಹನ್ನಿದರ್ಶನಂ ದೇವೋ ವಿಶ್ವಕರ್ಮಾದಿಶಿಲ್ಪಿನಾಂ ।
ಮಕರಾಸ್ಯಕರ್ಣಭೂಷಾಶೋಭಿಶ್ರುತಿಯುಗೇನ ಸಃ ॥ ೨೩ ॥
ಗುರುಭಾರ್ಗವಯೋರ್ಮಧ್ಯೇ ಪೂರ್ಣಚಂದ್ರೋಪಹಾಸಕಃ ।
ಗ್ರೈವೇಯಶೋಭಾಜನಕಕಂಠದೇಶೇನ ಪಶ್ಯತಾಂ ॥ ೨೪ ॥

---

ಇಂದ್ರನೀಲಮಣಿಮಯನಾಗಿ ಶಂಖ ಚಕ್ರ ಗದಾಧರನಾಗಿ, ಎಂಬತ್ತೊಂದು ಅಂಗುಲಗಳ ಎತ್ತರವುಳ್ಳವನಾಗಿ ಚಿನ್ನದ ಕಮಲದ ಮೇಲೆ ನಿಂತಿರುವ ಶ್ರೀಮನ್ನೀಲಮಾಧವಸ್ವಾಮಿಯು ಕಂಗೊಳಿಸುತ್ತಿರುವನು.

೧೯–೨೧. ಅಷ್ಟಮಿಯ ಚಂದ್ರನ ಶಕಲದ ಶೋಭೆಯನ್ನು ತಳೆದು ಕಂಗೊಳಿಸುತ್ತಿರುವ ಹಣೆಯುಳ್ಳವನಾಗಿ, ಅರಳಿ ನಗುತ್ತಿರುವ ಕನ್ನೈದಿಲೆಗಳ ಕಾಂತಿಯನ್ನು ಧಿಕ್ಕರಿಸುತ್ತಿರುವ ವಿಶಾಲನೇತ್ರಗಳುಳ್ಳವನಾಗಿ, ತನ್ನ ಮುಖವೆಂಬ ಅಮೃತಭಾನುವಿನ (ಚಂದ್ರನ) ದೆಸೆಯಿಂದಲೇ ಭಕ್ತರ ತಾಪತ್ರಯವನ್ನು ಕಳೆಯುವವನಾಗಿ, ತಿಲಕುಸುಮದಿಂತೊಪ್ಪಿ ಮೆರೆಯುತ್ತಿರುವ ಮೂಗಿನ ಹೊಳ್ಳೆಗಳುಳ್ಳವನಾಗಿ, ಶರೀರವು ಶಿಲಾಮಯವಾದರೂ, ಒಳ್ಳೆಯ ಮುಗುನಗೆಯಿಂದಲೇ ತೊಯ್ದ ತುಟಿಗಳುಳ್ಳವನಾಗಿ, ನಗೆಯಿಂದರಳಿದ ಕೆನ್ನೆಗಳೂ, ಸುಂದರವಾದ ಗಲ್ಲವೂ, ದವಡೆಗಳೂ ಉಳ್ಳವನಾಗಿ ಆ ನೀಲಮಾಧವಮೂರ್ತಿಯು ವಿರಾಜಿಸುತ್ತಿರುವನು.

೨೨–೨೪. ಆಗತಾನೆ ಮುಚ್ಚಿದಂತಿರುವ ಸುಂದರವಾದ ತುಟಿಯ ಕೊನೆಗಳುಳ್ಳವನಾಗಿ, ಮುಗುನಗೆಯಿಂದ ಗುಳಿಯಾಗಿರುವ ತುಟಿಗಳುಳ್ಳವನಾಗಿ; ಮುದ್ದಾದ ಗಂಡಸ್ಥಳಗಳೂ, ಗಲ್ಲ, ಮಂಗಳಕರವಾದ ಮೊಗತುದಿಗಳೂ ಉಳ್ಳವನಾಗಿ ವಿಶ್ವಕರ್ಮನೇ ಮೊದಲಾದ ಶಿಲ್ಪಿಗಳಿಗೆ ನಿದರ್ಶನಮೂರ್ತಿಯಾಗಿ ಬೆಳಗುತ್ತಿರುವನು. ಆಮೆಯ ಮುಖದ ಕಿವಿಯೋಲೆಗಳಿಂದೊಪ್ಪುವ ಕಿವಿಗಳೊಡಗೂಡಿದ ಆತನ ಮುಖವು ಗುರು ಶುಕ್ರರ ನಡುವಣ ಪೂರ್ಣಚಂದ್ರನನ್ನು ಅಣಕಿಸುವಂತಿರುವುದು ಮುತ್ತಿನ ಹಾರದಿಂದ ಶೋಭಿಸುತ್ತಿರುವ ಆತನ ಕಂಠಪ್ರದೇಶವು ನೋಡುವವರಿಗೆ ಬಲಮುರಿಶಂಖವೇ ಮುತ್ತುಗಳನ್ನೊಸರುತ್ತಿರುವುದೋ ಎಂಬ

**ದಕ್ಷಿಣಾವರ್ತಶಂಖಸ್ಯ ಮುಕ್ತಾಜನಸ್ಯಾಭಿಶಂಕಕೃತ್ ।**
**ಪೀನಾಯತಸ್ಕಂಧಯುಗಜಾನುದೀರ್ಘಚತುರ್ಭುಜಃ ॥ ೨೫ ॥**
**ಸ್ವಚ್ಛನಿರ್ಮಲಹಾರೋಪಶೋಭಿತೋರಃಸ್ಥಲೋ ವಿಭುಃ ।**
**ಧತ್ತೇ ಚತುರ್ದಶಜಗದ್ದಿವ್ಯಕೌಸ್ತುಭಬಿಂಬಿತಂ ॥ ೨೬ ॥**
**ನಿಮ್ನನಾಭಿಹೃದಾವಿಷ್ಟತನುರೋಮಾಲಿಮಂಜುಲಃ ।**
**ಹಾರಂ ತ್ರಿವಲಿಮಧ್ಯೇನ ಸ್ಥಾಣುತ್ವಪರಿಣಾಮಕಃ ॥ ೨೭ ॥**
**ಸುರತ್ನಮೇಖಲಾದಾಮ್ನಾ ಕಿಂಕಿಣೀಮೌಕ್ತಿಕಸ್ರಜಾ ।**
**ಜಗಲ್ಲಾವಣ್ಯಪುಟಕೇ ಸ್ಫಿಚೌ ದೇವಸ್ಯ ಶೋಭತಃ ॥ ೨೮ ॥**
**ಜಘನಾಲಂಬಿಮುಕ್ತಾಸ್ರಕ್ಪೀತಚೇಲೋಪಶೋಭಿತಂ ।**
**ಜಂಘಾಸ್ತಂಭಯುಗಂ ಮೋಕ್ಷಮಾಂಗಲ್ಯತೋರಣಾಶ್ರಯಂ ॥ ೨೯ ॥**
**ವೃತ್ತಾನುಪೂರ್ವಜಾನುಭ್ಯಾಂ ಮಾಲಯಾ ಪ್ರಪದೀನಯಾ ।**
**ರತ್ನಾಢ್ಯವಲಯಾಭ್ಯಾಂ ಚ ಶೋಭತೇ ಚರಣೌ ವಿಭೋಃ ॥ ೩೦ ॥**

---

ಶಂಕೆಯನ್ನುಂಟುಮಾಡುವುದು. ದಪ್ಪವೂ, ದೀರ್ಘವೂ ಆದ ಹೆಗಲುಗಳಿಂದಲೂ, ಮೊಣಕಾಲವರೆಗೆ ಲಂಬಿಸಿರುವ ದೀರ್ಘವಾದ ನಾಲ್ಕು ತೋಳುಗಳಿಂದಲೂ ಆ ಸ್ವಾಮಿಯು ಬೆಳಗುತ್ತಿರುವನು.

೨೬. ಆ ವಿಭುವು ಅತಿ ನಿರ್ಮಲವಾದ ಮುಕ್ತಾಹಾರದ ಅಪಾರ ಶೋಭೆಯುಳ್ಳ ಉರಸ್ಥಳವುಳ್ಳವನಾಗಿರುವನು. ಆ ವಕ್ಷಸ್ಥಳದ ಮಧ್ಯದಲ್ಲಿ ಹದಿನಾಲ್ಕು ಲೋಕಗಳೂ ಪ್ರತಿಬಿಂಬಿಸಿರುವ ಕೌಸ್ತುಭಮಣಿಯನ್ನು ತಳೆದಿರುವನು

೨೭. ಆಳವಾದ ಹೊಕ್ಕಳ ಕುಳಿಯ ಎಳಸಾದ ರೋಮಾಳಿಗಳಿಂದ ಆತನು ಸುಂದರನಾಗಿರುವನು. ತ್ರಿವಳಿಗಳ ಮಧ್ಯದಲ್ಲಿಯೂ ಹಾರವನ್ನು ತಳೆದಿರುವ ಆ ಮಾಧವನು ಶಿಲಾಮಯಮೂರ್ತಿಯಾಗಿ ಮಾರ್ಪಟ್ಟಿರುವನು.

೨೮. ಒಳ್ಳೆಯ ಚಿನ್ನದೊಡ್ಯಾಣದಿಂದಲೂ, ಕಿರುಗೆಜ್ಜೆಗಳ ಮುತ್ತು ಮುತ್ತಿನ ಮಾಲೆಗಳಿಂದಲೂ. ಒಪ್ಪಿರುವ ಆ ದೇವನ ಪೃಷ್ಠಭಾಗಗಳು ಲಾವಣ್ಯದ ಪುಟಕಗಳಂತೆ ಶೋಭಿಸುತ್ತಿರುವುವು.

೨೯. ಜಘನಪ್ರದೇಶಗಳವರೆಗೂ ಲಂಬಿಸಿರುವ ಮುತ್ತಿನಹಾರವುಳ್ಳದಾಗಿ, ಪೀತಾಂಬರಭೂಷಿತವಾಗಿರುವ ಆ ಪ್ರಭುವಿನ ಜಂಘಾಸ್ತಂಭಗಳೆರಡೂ ಬಹು ರಮಣೀಯವಾಗಿ ವಿರಾಜಿಸುತ್ತಿರುವುವು. ಇಷ್ಟೆಯಲ್ಲದೆ ಆ ಜಂಘೆಗಳು ಮೋಕ್ಷವೆಂಬ ಮಾಂಗಲ್ಯತೋರಣಕ್ಕೆ ಆಶ್ರಯವೂ ಆಗಿರುವುದು;

೩೦. ದುಂಡಗಿರುವ ಪೂರ್ವಜಾನುಗಳ ಮೇಲೆ ಜೋಲುತ್ತಿರುವ ಮಾಲೆಯಿಂದಲಂಕೃತಗಳಾಗಿ ರತ್ನಖಚಿತವಾದ ಕಾಲ್ಕಡಗಗಳಿಂದ ಆ ವಿಭುವಿನ ಪಾದಗಳು ಶೋಭಿಸುತ್ತಿರುವುವು.

ಹಾರಕಂಕಣಕೇಯೂರಮುಕುಟಾದ್ಯೈರಲಂಕೃತಂ ।
ಜ್ಞಾನಾಹಂಕಾರಕೈಶ್ವರ್ಯಶಬ್ದಬ್ರಹ್ಮಣಿ ಕೇಶವಃ ॥ ೩೧ ॥
ಗದಾಚಕ್ರಪದ್ಮಶಂಖಪರಿಣಾಮಾನಿ ಧಾರಯನ್ ।
ಸರ್ವಾಶಾದ್ಯೋತಕೋ ದೇವೋ ನೀಲಾದ್ರೇರುಪರಿ ಸ್ಥಿತಃ ॥ ೩೨ ॥
ಭಕ್ತ್ಯಾ ಪ್ರಣಮ್ಯ ದೃಷ್ಟ್ವಾಯಂ ದೇಹಬಂಧಾತ್ಪ್ರಮುಚ್ಯತೇ ।
ವಾಮಪಾರ್ಶ್ವಗತಾ ಲಕ್ಷ್ಮೀರಾಶ್ಲಿಷ್ಟಾ ಪದ್ಮಪಾಣಿನಾ ॥ ೩೩ ॥
ವಲ್ಲಕೀವಾದನಪರಾ ಭಗವನ್ಮುಖಲೋಚನಾ ।
ಸರ್ವಲಾವಣ್ಯವಸತಿಃ ಸರ್ವಾಲಂಕಾರಭೂಷಿತಾ ॥ ೩೪ ॥
ತಾವಪಶ್ಯಂ ಹಿ ಜಗತಃ ಪಿತರಾವಚಲಸ್ಥಿತೌ ।
ತೂಷ್ಣೀಂಭೂತೌ ಸ್ಮೇರದೃಶಾಽನುಗೃಹ್ಣಂತೌ ಚ ಪಶ್ಯತಃ ॥ ೩೫ ॥
ಸಜೀವೌ ತಾವಬುಧಂ ಭೋ ದೀನಾನುಗ್ರಹಕಾರಣಾತ್ ।
ಛತ್ರೀಭೂತಫಣಾವೃಂದಃ ಶೇಷಃ ಪಶ್ಚಾದವಸ್ಥಿತಃ ॥ ೩೬ ॥
ಅಗ್ರೇ ವ್ಯವಸ್ಥಿತಂ ದೃಷ್ಟಂ ವಪುರ್ಬಿಭ್ರತ್ಸುದರ್ಶನಂ ।
ಕೃತಾಂಜಲಿಪುಟಂ ತಸ್ಯ ಪಶ್ಚಾದ್ಗರುಡಮಾಸ್ಥಿತಂ ॥ ೩೭ ॥

---

೩೧–೩೨. ಹಾರ, ಕಂಕಣ, ಕೇಯೂರ, ಮುಕುಟಾದಿಗಳಿಂದಲಂಕೃತನಾಗಿ, ಜ್ಞಾನ, ಅಹಂಕಾರ, ಐಶ್ವರ್ಯ, ಶಬ್ದಬ್ರಹ್ಮ ಎಂಬಿವೇ ಗದಾ, ಚಕ್ರ, ಪದ್ಮ, ಶಂಖಗಳಾಗಿ ಮಾರ್ಪಟ್ಟಿರಲು ಅವುಗಳನ್ನೇ ಧರಿಸಿ ಆ ಕೇಶವನು ಸಮಸ್ತ ದಿಕ್ಕುಗಳನ್ನೂ ಬೆಳಗುತ್ತ ಆ ನೀಲಾದ್ರಿಯ ಮೇಲೆ ನೆಲಸಿರುತ್ತಾನೆ.

೩೩-೩೪. ಆ ಸ್ವಾಮಿಯನ್ನು ಸಂದರ್ಶಿಸಿ ನಮಸ್ಕರಿಸಿದರೆ ಈ ದೇಹದ ತೊಡಕು ಮಾನವನಿಗೆ ಬಿಡುಗಡೆಯಾಗುತ್ತದೆ. ಆ ಪ್ರಭುವಿನ ಎಡಭಾಗದಲ್ಲಿ ಯಾದರೋ ಶ್ರೀ ಲಕ್ಷ್ಮೀದೇವಿಯು ಆತನ ಕಮಲದ ಕೈಯಿಂದಾಲಿಂಗಿತಳಾಗಿ, ವೀಣೆಯನ್ನು ನುಡಿಸುವುದರಲ್ಲಾಸಕ್ತಳಾಗಿದ್ದರೂ, ಭಗವಂತನ ಮುಖದಲ್ಲಿಯೇ ನಟ್ಟದೃಷ್ಟಿಯುಳ್ಳವಳಾಗಿ, ಸರ್ವಲಾವಣ್ಯಕ್ಕೂ ನೆಲೆವೀಡೆನಿಸಿ, ಸರ್ವಾಲಂಕಾರ ಭೂಷಿತೆಯಾಗಿ ವಿರಾಜಿಸುತ್ತಿರುವಳು.

೩೫. ಎಲೈ ಮಹಾರಾಜನೇ! ಏನೊಂದೂ ಮಾತನಾಡದಿದ್ದರೂ, ಕೇವಲ ನಸುನಗೆಯಿಂದಲೇ ತಮ್ಮನ್ನು ನೋಡಬಂದ ಭಕ್ತರನ್ನನುಗ್ರಹಿಸುತ್ತಿರುವ ಆ ಲೋಕಮಾತಾಪಿತೃಗಳನ್ನು ನಾನು ಕಂಡೆನು.

೩೬. ಅಯ್ಯಾ! ನಾನವರನ್ನು ದೀನರನ್ನು ಪರಿಪಾಲಿಸುತ್ತಿರುವ ಕಾರಣದಿಂದ ಜೀವಸಹಿತರೇ ಆಗಿರುವರೆಂದು ತಿಳಿದೆನು. ಆ ದೇವನ ಹಿಂಗಡೆ ಕೊಡೆಯಾಗಿಸಿದ ಹೆಡೆಗುಂಪುಳ್ಳವನಾದ ಆದಿಶೇಷನು ಮುಂಡಿಸಿರುವನು.

೩೭. ಮುಂಗಡೆ ಸುದರ್ಶನಚಕ್ರವು ಮೂರ್ತಿವೆತ್ತು ನಿಂತಿರುವುದು. ಅವನ ಹಿಂಗಡೆಯಾದರೋ ಗರುಡನು ಅಂಜಲಿಬದ್ಧನಾಗಿ ನಿಂತಿರುವನು.

ಏವಮುದ್ಭುತರೂಪಂ ತಂ ದೃಷ್ಟ್ವಾ ಸಾಕ್ಷಾಚ್ಛ್ರಿಯಃ ಪತಿಂ ।
ಚೇತೋರಜ್ಜುಭಿರಾಕೃಷ್ಟಮಿವ ತತ್ರೈವ ಧಾವತಿ ॥ ೩೮ ॥
ಅನೇಕಜನ್ಮಸಾಹಸ್ರೈಃ ಸುಕರ್ಮಾಣ್ಯಾರ್ಜಿತಾನಿ ಚೇತ್ ।
ಯುಗಪತ್ಪರಿಪಕ್ವಾನಿ ಯಸ್ಯಾಸೌ ತಂ ಹಿ ಪಶ್ಯತಿ ॥ ೩೯ ॥
ತೀರ್ಥಸ್ನಾನತಪೋದಾನದೇವಯಜ್ಞವ್ರತೈರಪಿ ।
ನಾಲಮಾಲೋಕಿತುಂ ಮರ್ತ್ಯಸ್ತಾದೃಶಂ ಪುರುಷೋತ್ತಮಂ ॥ ೪೦ ॥

ಯೇ ನೀಲಮೂರ್ತಿಂ ನೀಲಾಂಬರಾಭಂ
ಧ್ಯಾಯಂತಿ ವಿಷ್ಣುಂ ಪುರುಷೋತ್ತಮಸ್ಥಂ ।
ತೇ ಕ್ಷೀಣಬಂಧಾಃ ಪ್ರವಿಶಂತಿ ವಿಷ್ಣೋಃ
ಪುರಂ ಹಿ ಯತ್ಪ್ರಾಪ್ಯ ನ ಶೋಚತೀಹ ॥ ೪೧ ॥
ವಿದ್ಯಾಭಿರಷ್ಟಾದಶಭಿಃ ಪ್ರಣೀತಂ
ನಾನಾವಿಧಂ ಕರ್ಮಫಲಂ ನೃಣಾಂ ಯತ್ ।
ಏಕತ್ರ ತತ್ಸರ್ವಮಮುಷ್ಯ ವಿಷ್ಣೋಃ
ಸಂದರ್ಶನಾದ್ಯೇತಿ ಶತಾಂಶಮಾನಂ ॥ ೪೨ ॥

---

೩೮. ಇಂತಹ ಅದ್ಭುತರೂಪನಾದ ಸಾಕ್ಷಾತ್ ಶ್ರೀಪತಿಯನ್ನು ಕಂಡು ಈ ನನ್ನ ಮನಸ್ಸು ಹಗ್ಗಗಳಿಂದ ಸೆಳೆದಂತೆ ಅಲ್ಲಿಗೆ ಓಡುತ್ತಿರುವುದು.

೩೯. ಅನೇಕ ಜನ್ಮಗಳನ್ನೆತ್ತಿ ಪುಣ್ಯವನ್ನಾರ್ಜಿಸಿದ್ದು, ಆ ಪುಣ್ಯವೆಲ್ಲ ಒಂದೇ ಬಾರಿಗೆ ಪರಿಪಕ್ವವಾಗಿ ಬಂದಿದ್ದರೆ ಮಾತ್ರ ಮಾನವನು ಆ ಸ್ವಾಮಿಯನ್ನು ಸಂದರ್ಶಿಸುವನು.

೪೦. ಮರ್ತ್ಯನಾದವನು ತೀರ್ಥಸ್ನಾನ, ತಪಸ್ಸು, ದಾನ, ದೇವಯಜ್ಞ, ವ್ರತ ಮುಂತಾದುವುಗಳಿಂದ ಅಂತಹ ಪುರುಷೋತ್ತಮನನ್ನು ಕಾಣಲು ಸಾಧ್ಯವೇ ಅಲ್ಲವು.

೪೧. ಯಾವ ಮಾನವರಾದರೂ ಪುರುಷೋತ್ತಮಕ್ಷೇತ್ರದಲ್ಲಿ ನಿರ್ಮಲ ಪೀತಾಂಬರಧಾರಿಯಾಗಿ ಕಂಗೊಳಿಸುತ್ತಿರುವ ಶ್ರೀ ಮಹಾವಿಷ್ಣುವಿನ ನೀಲ ಮೂರ್ತಿಯನ್ನು ನೋಡುವರೋ ಅವರು ಕ್ಷೀಣಬಂಧನರಾಗಿ ಆ ಮಹಾವಿಷ್ಣುವಿನ ಪಟ್ಟಣವಾದ ವೈಕುಂಠವನ್ನು ಸೇರುವರಲ್ಲದೆ ಈ ಭವಸಾಗರದಲ್ಲಿ ಬಿದ್ದು ದುಃಖಕ್ಕೀಡಾಗುವುದಿಲ್ಲವು.

೪೨. ಅಷ್ಟಾದಶವಿದ್ಯೆಗಳಿಂದಲೂ ಲಭಿಸಿರುವ ವಿಧವಿಧವಾದ, ಮಾನವರ ಕರ್ಮಫಲಗಳಾವುವುಂಟೋ ಅವೆಲ್ಲವೂ ಶ್ರೀಮಹಾವಿಷ್ಣುವಿನ ಸಂದರ್ಶನ ದಲ್ಲಿಯೇ ದೊರಕುವ ಫಲದಲ್ಲಿ ನೂರರಲ್ಲಿ ಒಂದಂಶವೂ ಆಗುವುದಿಲ್ಲವು.

ಕಿಮತ್ರ ವಾಚ್ಯಂ ತ್ವಧಿಕಂ ಕ್ಷಿತೀಂದ್ರ
ಪುಂಸೋ ಮತಿರ್ಯಾವದುಪೈತಿ ಕಾಮಾನ್ ।
ಲಭೇತ ನೀಲಾದ್ರಿಪತಿಂ ಪ್ರಣಮ್ಯ
ತತೋಽಧಿಕಂ ಕ್ಷೇತ್ರಭುವೋ ಮಹಿಮ್ನಾ ॥ ೪೩ ॥
ಸ ಏವ ದಾತಾ ಕ್ರತುಭಿಃ ಸ ಯಷ್ಟಾ
ಸತ್ಯಪ್ರವಕ್ತಾ ಸ ತು ಧರ್ಮಶೀಲಃ ।
ಸರ್ವೈರ್ಗುಣೈಃ ಸರ್ವಭವೈರ್ವರಿಷ್ಠೋ
ನೀಲಾದ್ರಿನಾಥಃ ಖಲು ಯೇನ ದೃಷ್ಟಃ ॥ ೪೪ ॥
ತತ್ರ ಯೇ ಸೇವಕಾಃ ಸಂತಿ ಮಾಧವಸ್ಯ ಜಗತ್ಪತೇಃ ।
ತೇಭ್ಯಃ ಸಕಾಶಾನ್ಮಾಹಾತ್ಮ್ಯಮಿದಂ ಜ್ಞಾತಂ ಮಯಾ ನೃಪ ॥ ೪೫ ॥
ತಸ್ಮಿನ್ಪರಂ ಪರಾಯಾತಮಾದಿಸೃಷ್ಟೇಃ ಪುರಾತನಂ ।
ಪ್ರಸಿದ್ಧಮಿದಮಾಖ್ಯಾನಂ ಶ್ರುತ್ವಾ ತತ್ರಾಗತೋ ಹ್ಯಹಂ ॥ ೪೬ ॥
ತ್ವದಾಜ್ಞಯಾ ತತ್ರ ಗತ್ವಾ ದೃಷ್ಟ್ವಾ ಶ್ರೀಪುರುಷೋತ್ತಮಂ ।
ನಿವೇದಿತಂ ತೇ ರಾಜೇಂದ್ರ ಯಥೇಚ್ಛಸಿ ತಥಾ ಕುರು ॥ ೪೭ ॥

---

೪೩. ಎಲೈ ಕ್ಷಿತೀಂದ್ರನೇ! ಈ ವಿಷಯದಲ್ಲಿ ಹೆಚ್ಚಾಗಿ ಹೇಳಿಯೇನು ಪ್ರಯೋಜನ! ಮಾನವನು ಮನಸ್ಸಿನಿಂದ ಇಷ್ಟಾರ್ಥಗಳನ್ನು ಪಡೆಯಬಯಸಿ, ನೀಲಾದ್ರಿಪತಿಯಾದ ಶ್ರೀಮನ್ಮಹಾವಿಷ್ಣುವನ್ನು ನಮಸ್ಕರಿಸಿ ಎಷ್ಟರಮಟ್ಟಿಗೆ ಪಡೆಯುತ್ತಾನೆಯೋ ಅದಕ್ಕಿಂತಲೂ ಹೆಚ್ಚಾಗಿ ಆ ಕ್ಷೇತ್ರದ ಭೂಮಾಹಾತ್ಮ್ಯೆ ದಿಂದ ಪಡೆಯುವನು.

೪೪. ನೀಲಾದ್ರಿನಾಥನನ್ನು ಯಾವನಾದರೆ ದರ್ಶನ, ಪೂಜನ ನಮಸ್ಕಾರಾ ದಿಗಳಿಂದ ಸಂತೋಷಗೊಳಿಸುವನೋ ಅವನೇ ದಾತೃವೂ, ಯಜ್ಞಕರ್ತೃವೂ, ಸತ್ಯಶೀಲನೂ, ಧರ್ಮಶೀಲನೂ, ಸರ್ವಗುಣಗಳಿಂದಲೂ, ಸಮಸ್ತೈಶ್ವರ್ಯ ಗಳಿಂದಲೂ ಶ್ರೇಷ್ಠನಾದವನು.

೪೫. ಎಲೈ ದೊರೆಯೇ! ಆ ಜಗನ್ನಾಥಕ್ಷೇತ್ರದಲ್ಲಿ ಜಗತ್ಪತಿಯಾದ ಶ್ರೀ ಮಾಧವಸ್ವಾಮಿಯ ಸೇವಕರಿಂದ ನಾನು ಈ ಮಾಹಾತ್ಮ್ಯವನ್ನೆಲ್ಲ ಕೇಳಿ ತಿಳಿದೆನು.

೪೬. ಆ ಕ್ಷೇತ್ರದಲ್ಲಿ ಶ್ರೀ ನೀಲಮಾಧವನ ಈ ಆಖ್ಯಾನವು ಆದಿಸೃಷ್ಟಿ ಗಿಂತಲೂ ಬಹು ಪುರಾತನವೂ ಪ್ರಸಿದ್ಧವೂ ಆಗಿ ಪರಂಪರೆಯಿಂದಲೇ ನಡೆದು ಬಂದಿರುತ್ತದೆ. ಅದನ್ನು ಕೇಳಿ ನಾನು ಇಲ್ಲಿಗೆ ಬಂದೆನು.

೪೭. ರಾಜೇಂದ್ರ! ನಾನು ನಿನ್ನ ಅಪ್ಪಣೆಯಂತೆ ಆ ಪುರುಷೋತ್ತಮ ಕ್ಷೇತ್ರಕ್ಕೆ ಹೋಗಿ ಶ್ರೀಪುರುಷೋತ್ತಮಸ್ವಾಮಿಯನ್ನು ಕಂಡು ಅಲ್ಲಿನ ಎಲ್ಲ

ಇಂದ್ರದ್ಯುಮ್ನ ಉವಾಚ :—
ಆಪ್ತವಾಕ್ಯಾದ್ಭಗವತಃ ಶ್ರುತ್ವಾ ರೂಪಮಘಾಪಹಂ ।
ಕೃತಕೃತ್ಯೋಽಸ್ಮಿ ಭಗವನ್ನಿರ್ಮಾಲ್ಯಸಂಗಮಾತ್ ॥ ೪೮ ॥
ಬಹುಜನ್ಮಸ್ವಾರ್ಜಿತಾನಿ ಕ್ಷೀಣಾನಿ ದುರಿತಾನಿ ಮೇ ।
ಅಧಿಕಾರೀ ತ್ವಹಂ ಜಾತೋ ದರ್ಶನೇ ಶ್ರೀಪತೇರಿಹ ॥ ೪೯ ॥
ಸರ್ವಾತ್ಮನಾಹಂ ಯಾಸ್ಯಾಮಿ ರಾಜ್ಯೇನ ಸುಸಮೃದ್ಧಿನಾ ।
ತತ್ರ ವಾಸಂ ಕರಿಷ್ಯಾಮಿ ಪುರದುರ್ಗಾಣಿ ಚೈವ ಹಿ ॥ ೫೦ ॥
ಕ್ರತುನಾ ಹಯಮೇಧೇನ ಯಕ್ಷ್ಯೇ ಪ್ರೀತ್ಯೈ ಮುರದ್ವಿಷಃ ।
ಶತೋಪಚಾರೈಃ ಶ್ರೀನಾಥಂ ಪೂಜಯಿಷ್ಯೇ ದಿನೇ ದಿನೇ ॥ ೫೧ ॥
ವ್ರತೋಪವಾಸನಿಯಮೈಃ ಪ್ರೀಣಯಿಷ್ಯೇ ಜಗದ್ಗುರುಂ ।
ವಾಕ್ಯಾಮೃತೇನ ಸಂತಪ್ತಂ ಯಥಾ ಮಾಮಭಿಷೇಕ್ಷ್ಯತಿ ॥ ೫೨ ॥
ದೀನಾನುಕಂಪೀ ಭಗವಾನ್ಸಾಕ್ಷಾನ್ನಾರಾಯಣೋ ವಿಭುಃ ।
ಏವಂ ಸ ಶ್ರದ್ಧಯಾ ಭಕ್ತ್ಯಾ ಸಂಸ್ತುತೇ ಯಾವದೀಶ್ವರಂ ।
ನಾರದಸ್ತತ್ರ ಸಂಪ್ರಾಪ್ತೋ ಭುವನಾಲೋಕಕೌತುಕೀ ॥ ೫೩ ॥

ವಿದ್ಯಮಾನಗಳನ್ನೂ ನಿನಗೆ ತಿಳಿಸಿರುವೆನು. ಈಗ ನಿನ್ನ ಕೋರಿಕೆಯಂತೆ ನೀನು ನಡೆಯಬಹುದು.''

೪೮-೪೯. ಇಂದ್ರದ್ಯುಮ್ನನು ಹೇಳುತ್ತಾನೆ.—'' ಭೋ ಭಗವನ್ ! ಆಪ್ತನಾದ ನೀನು ನನಗೆ ಒಕ್ಕಣಿಸಿದ ಪಾಪಪರಿಹಾರಕವಾದ ಭಗವಂತನ ಸ್ವರೂಪ ಸಂಸ್ಥಾನವನ್ನು ಕಿವಿಯಿಂದಾಲಿಸಿ ಪ್ರಕೃತದಲ್ಲಿ ಕೃತಕೃತ್ಯನಾದೆನು. ನೀನಿತ್ತ ಸ್ವಾಮಿಯ ನಿರ್ಮಾಲ್ಯಸೇವನೆಯಿಂದ ಬಹುಜನ್ಮಗಳಿಂದಲೂ ನಾನು ಆರ್ಜಿಸಿದ್ದ ದುರಿತಗಳೆಲ್ಲವೂ ಕ್ಷಯಿಸಿಹೋದುವು. ಈಗ ನಾನು ಆ ಶ್ರೀಪತಿಯ ಸಂದರ್ಶನಕ್ಕೆ ಅಧಿಕಾರಿಯಾದೆನು.

೫೦. ಎಲೈ ವಿಪ್ರನೇ! ನಾನು ಖಂಡಿತವಾಗಿಯೂ ಸುಸಮೃದ್ಧವಾದ ಈ ರಾಜ್ಯೈಶ್ವರ್ಯದೊಡನೆ ಅಲ್ಲಿಗೆ ಹೋಗುತ್ತೇನೆ. ಆ ಪ್ರದೇಶದಲ್ಲಿಯೇ ಪುರದುರ್ಗಗಳನ್ನೂ ನಿರ್ಮಿಸಿ ವಾಸಮಾಡುತ್ತೇನೆ.

೫೧. ಮುರವೈರಿಯಾದ ಆ ಮಹಾವಿಷ್ಣುವಿನ ಪ್ರೀತ್ಯರ್ಥವಾಗಿ ಅಲ್ಲಿಯೇ ನಾನೊಂದು ಅಶ್ವಮೇಧಯಾಗವನ್ನೆಸಗುವೆನು. ಇಷ್ಟೆಯಲ್ಲದೆ ಪ್ರತಿದಿನವೂ ಆ ಶ್ರೀನಾಥನನ್ನು ಶತಾರ್ಚನೋಪಚಾರಗಳಿಂದ ಸೇವಿಸುತ್ತೇನೆ.

೫೨-೫೩. ದೀನಾನುಕಂಪಿಯೂ, ಷಡ್ಗುಣೈಶ್ವರ್ಯಸಂಪನ್ನನೂ, ಸರ್ವವ್ಯಾಪಕನೂ, ಜಗದ್ಗುರುವೂ ಆದ ಆ ನಾರಾಯಣಮೂರ್ತಿಯು ಸಂತಪ್ತನಾದ ನನ್ನನ್ನು ವಾಕ್ಯಾಮೃತದಿಂದ ಅಭಿಷೇಚಿಸುವಂತೆ ವ್ರತೋಪವಾಸ ನಿಯಮ

ತಮಾಯಾಂತಮೃಷಿಂ ದೃಷ್ಟ್ವಾ ವೈಷ್ಣವಾಗ್ರ್ಯಂ ವಿಧೇಃ ಸುತಂ ।
ಆಶಶಂಸ ಸ್ವಕಾರ್ಯಸ್ಯ ಸಿದ್ಧಿಂ ನರಪತಿಸ್ತದಾ ॥ ೫೪ ॥
ಉತ್ಥಾಯ ಸಹಸಾ ವಿಪ್ರಾಃ ಪಾದ್ಯಾರ್ಘ್ಯಾಚಮನೀಯಕೈಃ ।
ವರಾಸನಸ್ಥಂ ಪ್ರಣತಃ ಪ್ರೋವಾಚೇದಂ ಕೃತಾಂಜಲಿಃ ॥ ೫೫ ॥

ಇಂದ್ರದ್ಯುಮ್ನ ಉವಾಚ:—

ಅದ್ಯ ಮೇ ಸಫಲಾ ಯಜ್ಞಾ ದಾನಮಧ್ಯಯನಂ ತಪಃ ॥ ೫೬ ॥
ಯನ್ಮೇ ಗೃಹಂ ಸಮಾಗಚ್ಛದ್ದ್ವಿತೀಯಾ ಬ್ರಹ್ಮಣಸ್ತನುಃ ।
ಕೃತಾರ್ಥೋ ಯದ್ಯಪಿ ಮುನೇ ಆಗಮಾನುಗ್ರಹಾತ್ತವ ॥ ೫೭ ॥
ತಥಾಪಿ ತ್ವತ್ಪ್ರಸಾದಾಯ ಕಿಮಾಜ್ಞಾಂ ಕರವಾಣಿ ತೇ ।
ಕಿಂ ಪ್ರಯೋಜನಮುದ್ದಿಶ್ಯ ಭವನಂ ಮೇ ಪವಿತ್ರಿತಂ ॥ ೫೮ ॥

ಜೈಮಿನಿರುವಾಚ:—

ತಚ್ಛ್ರುತ್ವಾ ನೃಪತೇರ್ವಾಕ್ಯಂ ಭಕ್ತಿಪ್ರಶ್ರಯಕೋಮಲಂ ।
ಉವಾಚ ಬ್ರಹ್ಮಣಃ ಪುತ್ರಃ ಸ್ಮಿತಪೂರ್ವಂ ಮಹೀಪತಿಂ ॥ ೫೯ ॥

---

ಗಳಿಂದ ಸಂತೋಷಗೊಳಿಸುತ್ತೇನೆ.'' ಎಲೈ ವಿಪ್ರರೇ! ಈ ಪ್ರಕಾರವಾಗಿ ಆ ಇಂದ್ರದ್ಯುಮ್ನರಾಜನು ಶ್ರದ್ಧಾಭಕ್ತಿಗಳಿಂದ ನುಡಿದು ಜಗದೀಶ್ವರನನ್ನು ಸ್ತುತಿಸುತ್ತಿರುವಂತೆಯೇ ಲೋಕಗಳನ್ನು ನೋಡುವುದರಲ್ಲಿ ಕುತೂಹಲನಾದ ನಾರದ ಮಹರ್ಷಿಯು ಅಲ್ಲಿಗೈತಂದನು.

೫೪–೫೫. ಆಗ ಇಂದ್ರದ್ಯುಮ್ನನಾದರೋ ವೈಷ್ಣವಾಗ್ರಣಿಯೂ, ಬ್ರಹ್ಮಮಾನಸಪುತ್ರನೂ ಆದ ಆ ಮಹರ್ಷಿಯು ಬರುತ್ತಿರುವುದನ್ನು ಕಂಡು ತನ್ನ ಕಾರ್ಯವು ಸಿದ್ಧಿಸಿತೆಂದೇ ಊಹಿಸಿದನು. ಒಡನೆಯೇ ಆತನು ಸಿಂಹಾಸನದಿಂದ ಮೇಲಕ್ಕೆದ್ದು ಅರ್ಘ್ಯಪಾದ್ಯಾಚಮನಗಳಿಂದ ಆತನನ್ನರ್ಚಿಸಿ ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ ಪ್ರಣಾಮಮಾಡಿ ಅಂಜಲಿಬದ್ಧನಾಗಿ ಈ ರೀತಿ ಹೇಳಿದನು.

೫೬–೫೮. ಇಂದ್ರದ್ಯುಮ್ನನು ಹೇಳುತ್ತಾನೆ.—''ಎಲೈ ನಾರದಮುನೀಂದ್ರನೇ! ಬ್ರಹ್ಮನ ದ್ವಿತೀಯ ಶರೀರವೇ ಆದ ನೀನಿಂದು ಇಲ್ಲಿಗೆ ದಯಗೈದುದರಿಂದ ಇಂದು ನಾವೆಸಗಿದ ಯಜ್ಞಗಳೂ, ದಾನಗಳೂ, ಅಧ್ಯಯನ ಮತ್ತು ತಪಸ್ಸುಗಳೂ ಸಫಲವಾದುವು. ಎಲೈ ಮುನಿಯೇ! ನಿನ್ನ ಆಗಮನದಿಂದ ನಾನು ಕೃತಾರ್ಥನೇ ಆಗಿರುವೆನಾದರೂ ನಿನ್ನ ಅನುಗ್ರಹವನ್ನು ಪಡೆಯಲೋಸುಗ ನಿನ್ನ ಯಾವ ಅಪ್ಪಣೆಯನ್ನು ನೆರವೇರಿಸಲಿ? ಎಲೈ ಮುನೀಂದ್ರನೇ! ನೀನು ಯಾವ ಪ್ರಯೋಜನವನ್ನುದ್ದೇಶಿಸಿ ಈ ನನ್ನ ಭವನವನ್ನು ನಿನ್ನ ಆಗಮನದಿಂದ ಪವಿತ್ರಗೊಳಿಸಿದೆ.''

೫೯. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ! ಇಂದ್ರದ್ಯುಮ್ನ

ನಾರದ ಉವಾಚ :—

ಇಂದ್ರದ್ಯುಮ್ನ ನೃಪಶ್ರೇಷ್ಠ ವಿಮಲೈಸ್ತ್ವದ್ಗುಣೋತ್ಕರೈಃ ।
ಪ್ರೀಣಿತಾ ದೇವತಾಃ ಸಿದ್ಧಾಃ ಮುನಯೋ ಬ್ರಹ್ಮಣಾ ಸಹ ॥ ೬೦ ॥
ಸ್ವಪ್ರತಿಷ್ಠಾ ಪೃಥಗ್ಯೋಗ್ಯಾ ಗುಣಾ ಏಕೈಕಶಸ್ತವ ।
ಬ್ರಹ್ಮಣಃ ಸದನೇ ಸ್ಥಿತ್ಯೈ ಪರ್ಯಾಪ್ತಾಸ್ತು ಸಮಾಹಿತಾಃ ॥ ೬೧ ॥
ಅವತೀರ್ಣೋ ನರಂ ದ್ರಷ್ಟುಂ ತಿಷ್ಠಂತಂ ಬದರಾಶ್ರಮೇ ।
ತದ್ಧ್ಯಾನಾವಸರೇ ಜ್ಞಾತೋ ವ್ಯವಸಾಯಸ್ತ್ವಯೇದೃಶಃ ॥ ೬೨ ॥
ಸಾಧು ವ್ಯವಸಿತಂ ರಾಜನ್ನಾಭೂತ್ತೇ ಬುದ್ಧಿರೀದೃಶೀ ।
ಸಹಸ್ರಜನ್ಮಸ್ವಭ್ಯಾಸಾದ್ಭಕ್ತಿರ್ಭವತಿ ಭೂಪತೇ ॥ ೬೩ ॥
ನೀಲಾಚಲಗುಹಾವಾಸೇ ಮಾಧವೇ ಜಗತಾಂ ಧವೇ ।
ಪಿತಾಮಹೋ ಮಹಾಪ್ರಾಜ್ಞೋ ಯಮಾರಾಧ್ಯ ಜಗತ್ಪತಿಂ ॥ ೬೪ ॥

---

ರಾಜನು ಭಕ್ತಿಯಿಂದಲೂ, ವಿನಯದಿಂದಲೂ ಕೋಮಲವಾದ ಈ ಮಾತುಗಳನ್ನಾಡಲು ಅದನ್ನು ಕೇಳಿ ಬ್ರಹ್ಮಪುತ್ರನಾದ ಆ ನಾರದನು ನಸುನಗುತ್ತ ಅವನನ್ನು ಕುರಿತು ಹೇಳಿದನು :—

೬೦. ನಾರದನು ಹೇಳುತ್ತಾನೆ:—"ಎಲೈ ನೃಪಶ್ರೇಷ್ಠನಾದ ಇಂದ್ರದ್ಯುಮ್ನನೇ! ನಿರ್ದುಷ್ಟಗಳಾದ ನಿನ್ನ ಈ ಉತ್ತಮಗುಣಗಳಿಂದ ದೇವತೆಗಳೂ, ಸಿದ್ಧರೂ, ಮುನಿಗಳೂ ಬ್ರಹ್ಮನೊಡಗೂಡಿಯೇ ತೃಪ್ತಿಗೊಂಡಿರುವರು.

೬೧. ಎಲೈ ದೊರೆಯೇ! ನಿನ್ನಲ್ಲಿರುವ ಸದ್ಗುಣಗಳಲ್ಲಿ ಒಂದೊಂದೂ ಬೇರೆಬೇರೆಯಾಗಿ ಸ್ವಪ್ರತಿಷ್ಠೆಯಿಂದ ನಿನ್ನನ್ನು ಬ್ರಹ್ಮಲೋಕದಲ್ಲಿ ನೆಲೆಗೊಳಿಸಲು ಸಾಕಾಗಿರುವುದೆಂದು ಹೇಳಬೇಕಾಗಿದೆ.

೬೨. ಅರಸಾ! ನಾನು ಬದರಿಕಾಶ್ರಮದಲ್ಲಿ ನೆಲೆಗೊಂಡಿರುವ ನರನನ್ನು ನೋಡಲೋಸುಗ ಭೂಲೋಕಕ್ಕಿಳಿದುಬಂದೆನು. ಆ ನರನ ಧ್ಯಾನದಲ್ಲಿ ತೊಡಗಿದ್ದ ಸಮಯದಲ್ಲಿ ನೀನು ಪುರುಷೋತ್ತಮಕ್ಷೇತ್ರಕ್ಕೆ ಹೊರಡಬಯಸಿ ಪ್ರಯತ್ನಿಸಿರುವುದು ನನಗೆ ತಿಳಿಯಿತು.

೬೩. ಭೋ ರಾಜನ್! ನಿನಗಿಂತಹ ಬುದ್ಧಿಯುಂಟಾಗಿ ನೀನೀರೀತಿ ಪ್ರಯತ್ನಿಸಿರುವುದು ಬಹಳ ಒಳ್ಳೆಯದಾಯಿತು. ಸಾವಿರ ಜನ್ಮಗಳಲ್ಲಿ ಮಾಡಿದ ಅಭ್ಯಾಸಬಲದಿಂದ ನೀಲಾಚಲಗುಹಾವಾಸಿಯೂ ಜಗತ್ಸ್ವಾಮಿಯೂ ಆದ ಮಾಧವನಲ್ಲಿ ಭಕ್ತಿಯುಂಟಾಗುವುದು.

೬೪–೬೫. ಅಯ್ಯಾ ಭೂಪತಿಯೇ! ಮಹಾಪ್ರಾಜ್ಞನಾದ ಪಿತಾಮಹನು ಆ ಮಾಧವನನ್ನು ಆರಾಧಿಸಿಯೇ ಈ ಸೃಷ್ಟಿಯನ್ನು ನಿರ್ಮಿಸಿ ಪೈತಾಮಹ

ಏನಿರ್ಮಾಣೋ ಸೃಷ್ಟಿಮಿಮಾಂ ಲೇಭೇ ಪೈತಾಮಹಂ ಪದಂ ।
ತದನ್ವಯಪ್ರಸೂತೋಽಸಿ ಯುಕ್ತಾ ತೇ ಭಕ್ತಿರೀದೃಶೀ ॥ ೧೫ ॥
ಚತುರ್ವರ್ಗಫಲಾ ಭಕ್ತಿರ್ವಿಷ್ಣೌ ನಾಲ್ಪತಪಃಫಲಂ ।
ಅನಾದ್ಯವಿದ್ಯಾಸುದೃಢಪಂಚಕ್ಲೇಶವಿವರ್ಧಿನೀ ॥ ೧೬ ॥
ಏಕೈವೇಯಂ ವಿಷ್ಣುಭಕ್ತಿಸ್ತದುಚ್ಛೇದಾಯ ಜಾಯತೇ ।
ಭವಾರಣ್ಯೇ ಪ್ರತಿಪದಂ ದುಃಖಸಂಕಟಸಂಕುಲೇ ।
ನರಾಣಾಂ ಭ್ರಮತಾಂ ವಿಷ್ಣುಭಕ್ತಿರೇಕಾ ಸುಖಪ್ರದಾ ॥ ೧೭ ॥
ನಿರಾಲಂಬೇ ದ್ವಂದ್ವವಾತಪ್ರೋದ್ಯತೇಽಸ್ಮಿನ್ಸುದುಸ್ತರೇ ।
ನಿಮಗ್ನಾನಾಂ ಭವಾಂಭೋಧೌ ವಿಷ್ಣುಭಕ್ತಿಸ್ತರಿಃ ಸ್ಮೃತಾ ॥ ೧೮ ॥
ಆಶ್ರಿತ್ಯೈಕಾಂ ಭಗವತೀಂ ವಿಷ್ಣುಭಕ್ತಿಂ ತು ಮಾತರಂ ।
ಸಂತಃ ಸಂತುಷ್ಟಮನಸೋ ನ ತು ಶೋಚಂತಿ ಜಾತುಚಿತ್ ॥ ೧೯ ॥
ವಿಷ್ಣುಭಕ್ತಿಸುಧಾಪಾನಸಂಹೃಷ್ಟಾನಾಂ ಮಹಾತ್ಮನಾಂ ।
ಬ್ರಾಹ್ಮ್ಯಂ ಪದಂ ಸ್ವಲ್ಪಲಾಭೋ ಭಾಜನಾನಾಂ ವಿಮುಕ್ತಯೇ ॥ ೨೦ ॥

---

(ಬ್ರಹ್ಮ)ಪದವನ್ನು ಪಡೆದಿರುವನು. ನೀನು ಆತನ ವಂಶದಲ್ಲಿ ಜನಿಸಿದವನು. ನಿನಗೆ ಇಂತಹ ಭಕ್ತಿಯು ಹುಟ್ಟಿರುವುದು ಯುಕ್ತವೇ ಆಗಿದೆ.

೧೬–೧೭. ಶ್ರೀಮನ್ಮಹಾವಿಷ್ಣುವಿನಲ್ಲಿ ಭಕ್ತಿಯೆಂದರೆ ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಕೊಡುವಂತಹುದು. ಇದು ಅಲ್ಪ ತಪಸ್ಸಿಗೆ ಫಲವಾಗಿ ದೊರಕುವುದಲ್ಲವು. ಅಪರಿಮಿತವಾದ ತಪಸ್ಸೇಬೇಕು. ಅಯ್ಯಾ ದೊರೆಯೇ! ಅನಾದಿಯಾದ ಅವಿದ್ಯೆಯು ಬಲವಾದ ಐದು ಬಗೆಯ ದುಃಖಗಳನ್ನು ವೃದ್ಧಿಗೊಳಿಸುವಂತಹುದು. ವಿಷ್ಣುಭಕ್ತಿಯೊಂದೇ ಅದನ್ನು ಕತ್ತರಿಸಿ ಕೆಡವಲು ಸಮರ್ಥವಾಗುವುದು. ಅಡಿಗಡಿಗೂ ದುಃಖಸಂಕಟಗಳೇ ತುಂಬಿ ಇಕ್ಕಟ್ಟಾಗಿರುವ ಈ ಭವಾರಣ್ಯದಲ್ಲಿ ಅಲೆಯುತ್ತಿರುವ ಮಾನವರಿಗೆ ವಿಷ್ಣುಭಕ್ತಿಯೊಂದೇ ಸುಖಪ್ರದವಾದುದು.

೧೮. ಆಸರೆಯೇ ಇಲ್ಲದೆ, ದ್ವಂದ್ವಗಳೆಂಬ ಗಾಳಿಗಳಿಂದ ವೃದ್ಧಿಗೊಳಿಸಲ್ಪಟ್ಟು ದಾಟಲಸದಳವಾಗಿರುವ ಈ ಭವಾಂಭೋದಿಯಲ್ಲಿ ಮುಳುಗಿರುವವರಿಗೆ ವಿಷ್ಣುಭಕ್ತಿಯು ಒಂದು ಓಡೆಯೆಂದು ಸ್ಮರಿಸಲಾಗಿರುವುದು.

೧೯. ಅಯ್ಯಾ ದೊರೆಯೆ! ಲೋಕದಲ್ಲಿ ಸತ್ಪುರುಷರಾದವರು ಭಗವತಿಯಾದ ವಿಷ್ಣುಭಕ್ತಿಯೆಂಬ ತಾಯಿಯೊಬ್ಬಳನ್ನೇ ಆಶ್ರಯಿಸಿಕೊಂಡು ಸಂತುಷ್ಟಮಾನಸರಾಗಿ ಎಂದೆಂದಿಗೂ ದುಃಖಕ್ಕೀಡಾಗಿ ಶೋಕಿಸುವುದೇ ಇಲ್ಲವು.

೨೦. ವಿಷ್ಣುಭಕ್ತಿಯೆಂಬ ಅಮೃತವನ್ನು ಪಾನಮಾಡಿರುವ ಮಹಾತ್ಮರಿಗೆ ಮುಕ್ತಿಯೇ ದೊರಕುವುದಾದುದರಿಂದ ಬ್ರಹ್ಮಪದವಿಯೆಂಬುದು ಸ್ವಲ್ಪಲಾಭವೇ ಸರಿ.

ತ್ರಿವಿಧೋ ಯೋಽಂಹಸಾಂ ರಾಶಿಃ ಸುಮಹಜ್ಜನ್ಮನಾಂ ನೃಪ ।
ವಿಷ್ಣುಭಕ್ತಿಮಹಾದಾವವಹ್ನೌ ಸ ಶಲಭಾಯತೇ ॥ ೭೧ ॥
ಪ್ರಯಾಗಗಂಗಾಪ್ರಮುಖತೀರ್ಥಾನಿ ಚ ತಪಾಂಸಿ ಚ ॥ ೭೨ ॥
ಅಶ್ವಮೇಧಃ ಕ್ರತುವರೋ ದಾನಾನಿ ಸುಮಹಾಂತಿ ಚ ।
ವ್ರತೋಪವಾಸನಿಯಮಾಃ ಸಹಸ್ರಾಣ್ಯಾರ್ಜಿತಾ ಅಪಿ ॥ ೭೩ ॥
ಸಮೂಹ ಏಷ ಏವಾತ್ರ ಗುಣಿತಃ ಕೋಟಿಕೋಟಿಭಿಃ ।
ವಿಷ್ಣುಭಕ್ತೇಃ ಸಹಸ್ರಾಂಶಸಮೋಽಸೌ ನ ಹಿ ಕೀರ್ತಿತಃ ॥ ೭೪ ॥

ಜೈಮಿನಿರುವಾಚ :—

ವಿಷ್ಣುಭಕ್ತೇಸ್ತು ಮಾಹಾತ್ಮ್ಯಂ ಶ್ರುತ್ವಾ ಬ್ರಹ್ಮರ್ಷಿಣೋದಿತಂ ।
ವಿಷ್ಣುಭಕ್ತೇಃ ಸ್ವರೂಪಂ ಹಿ ಜ್ಞಾತುಕಾಮಃ ಕ್ಷಿತೀಶ್ವರಃ ॥ ೭೫ ॥
ನಾರದಂ ಪುನರಾಹೇದಂ ವಾಕ್ಯಂ ಸತ್ಕಾರಯುಕ್ತಿಮಾನ್ ॥ ೭೬ ॥

ಇಂದ್ರದ್ಯುಮ್ನ ಉವಾಚ :—

ಮಹಿಮಾ ವಿಷ್ಣುಭಕ್ತೇಸ್ತು ಸಾಧು ಪ್ರೋಕ್ತೋ ಮಹಾಮುನೇ ।
ತಸ್ಯಾಃ ಸ್ವರೂಪಜಿಜ್ಞಾಸಾ ಚಿರಾನ್ಮೇ ಹೃದಿ ವರ್ತತೇ ॥ ೭೭ ॥

---

೭೧. ಎಲೈ ದೊರೆಯೇ! ಜನ್ಮವೆತ್ತಿದ ಮಾನವರಿಗೆ ಮೂರು ಬಗೆಯಾದ ಪಾಪರಾಶಿಗಳಿರುತ್ತವೆ. ಅವೇ ಕಾಯಿಕ, ವಾಚಿಕ, ಮಾನಸಿಕವೆಂಬುವು. ಅವೆಲ್ಲವೂ ವಿಷ್ಣುಭಕ್ತಿಯೆಂಬ ಮಹಾದಾವಾನಲದಲ್ಲಿ ಪತಂಗದಂತೆ ಭಸ್ಮವಾಗಿ ಹೋಗುತ್ತವೆ.

೭೨-೭೪. ಪ್ರಯಾಗ, ಗಂಗಾ ಮೊದಲಾದ ತೀರ್ಥಗಳು, ತಪಸ್ಸು, ಕ್ರತುಶ್ರೇಷ್ಠವಾದ ಅಶ್ವಮೇಧ, ಮಹತ್ತರವಾದ ದಾನಗಳು, ವ್ರತೋಪವಾಸ ನಿಯಮಗಳು ಎಂಬಿವೇ ಮೊದಲಾದವುಗಳನ್ನು ಸಾವಿರಾರುಗಳಾಗಿ ಸಂಪಾದಿಸಿದರೂ ಸಹ, ಇವೆಲ್ಲವುಗಳ ಗುಂಪನ್ನು ಕೋಟ್ಯಂತರಗಳಿಂದ ಗುಣಿಸಿದರೂ ವಿಷ್ಣುಭಕ್ತಿಯ ಸಹಸ್ರಾಂಶಕ್ಕೆ ಸರಿತೂಗುವುದಿಲ್ಲವೆಂದು ಹೇಳಿದೆ.

೭೫-೭೬. ಜೈಮಿನಿಯು ಹೇಳುತ್ತಾನೆ.—"ಎಲೈ ಮುನಿಗಳಿರಾ! ಆ ಇಂದ್ರದ್ಯುಮ್ನಮಹಾರಾಜನು ಬ್ರಹ್ಮರ್ಷಿಯಾದ ನಾರದಮುನೀಂದ್ರನು ಹೇಳಿದ ವಿಷ್ಣುಭಕ್ತಿಮಾಹಾತ್ಮ್ಯವನ್ನಾಲಿಸಿದ ಬಳಿಕ ಆ ವಿಷ್ಣುಭಕ್ತಿಯ ಸ್ವರೂಪವನ್ನು ತಿಳಿದುಕೊಳ್ಳಬಯಸಿ ಆತನನ್ನು ಸತ್ಕರಿಸಿ ಯುಕ್ತಿಯುಕ್ತವಾಗಿ ಪುನಃ ಈ ರೀತಿ ಕೇಳಿದನು."

೭೭. ಇಂದ್ರದ್ಯುಮ್ನನು ಕೇಳುತ್ತಾನೆ:—"ಎಲೈ ಮಹಾಮುನಿಯೇ! ವಿಷ್ಣುಭಕ್ತಿಯ ಮಹಿಮೆಯನ್ನು ನೀನು ಬಹಳ ಚೆನ್ನಾಗಿ ಅಪ್ಪಣೆಕೊಡಿಸಿದೆ.

**ಲಕ್ಷಣಂ ವರ್ಣಯೇದಾನೀಂ ಭಕ್ತೇರ್ವೈಷ್ಣವಪುಂಗವ ।**
**ತ್ವದನ್ಯೋ ನ ಹಿ ವಕ್ತಾ ಸ್ಯಾದ್ವಿಜ್ಞಾತೋ ಮೇ ಮಹೀತಲೇ ॥ ೭೮ ॥**

ನಾರದ ಉವಾಚ :—

**ಸಾಧು ರಾಜಂಸ್ತ್ವಯಾ ಪೃಷ್ಟಂ ಭಕ್ತಿಲಕ್ಷಣಮುತ್ತಮಂ ।**
**ಕಥಯಿಷ್ಯೇ ಯಥಾರ್ಥಂ ತ್ವಾಂ ಭಕ್ತಿಭಾಜನಮುತ್ತಮಂ ॥ ೭೯ ॥**
**ಅಪಾತ್ರೇ ನ ಹಿ ವಾಚ್ಯೇಯಂ ನರೇಽಥೇ ಮಲಿನಾಂತರೇ ।**
**ಶೃಣುಷ್ವಾವಾಹಿತೋ ರಾಜನ್ ಪ್ರೋಚ್ಯಮಾನಾಂ ಮಯಾನಘ ॥ ೮೦ ॥**
**ಸಾಮಾನ್ಯತೋ ವಿಶೇಷಾಚ್ಚ ವಿಷ್ಣೋರ್ಭಕ್ತಿಂ ಸನಾತನೀಂ ।**
**ಅತ್ಯಂತಸುಖಸಂಪ್ರಾಪ್ತೌ ವಿಚ್ಛೇದೇ ದುಃಖಸಂತತೇಃ ॥ ೮೧ ॥**
**ಹೇತೋರೇಕೋಽಯಮೇವೇತಿ ಸಂಶ್ರಯಾದ್ಭಕ್ತಿರುಚ್ಯತೇ ।**
**ತ್ರಿಧಾ ಸಾ ಗುಣಭೇದೇನ ತುರೀಯಾ ನಿರ್ಗುಣಾ ಮತಾ ॥ ೮೨ ॥**

---

ಆದರೆ ಆ ವಿಷ್ಣುಭಕ್ತಿಯ ಸ್ವರೂಪ ವಿಚಾರದಲ್ಲಿ ನನಗೆ ಬಹಳಕಾಲದಿಂದಲೂ ಜಿಜ್ಞಾಸೆಯಿರುವುದು.

೭೮. ಎಲೈ ವೈಷ್ಣವಪುಂಗವನೇ! ಆದುದರಿಂದ ಪ್ರಕೃತದಲ್ಲಿ ನೀನು ಆ ಭಕ್ತಿಯ ಲಕ್ಷಣವನ್ನು ವರ್ಣಿಸುವವನಾಗು. ಈ ವಿಷಯವನ್ನು ನಿನ್ನಂತೆ ವರ್ಣಿಸಬಲ್ಲವನು ಈ ಭೂಲೋಕದಲ್ಲಿ ಯಾರೂ ನನಗೆ ತಿಳಿದಿಲ್ಲವು.''

೭೯–೮೦. ನಾರದನು ಹೇಳುತ್ತಾನೆ:—'' ಎಲೈ ದೊರೆಯೇ! ಸಾಧು ಸಾಧು! ಉತ್ತಮವಾದ ಭಕ್ತಿಯ ಲಕ್ಷಣವನ್ನೀಗ ನಾನು ಯಥಾರ್ಥವಾಗಿ ಹೇಳುವೆನು. ಈ ವಿಷಯವನ್ನು ಭಕ್ತಿಗೆ ಸತ್ಪಾತ್ರನಾದ ನಿನಗಲ್ಲದೆ ಮತ್ತಾರಿಗೆ ಹೇಳಬೇಕು? ಮಹಾರಾಜ! ಈ ಭಕ್ತಿಲಕ್ಷಣವನ್ನು ಒಳಗೆ ಮಾಲಿನ್ಯವುಳ್ಳವನಾದುದರಿಂದ ಜ್ಞಾನವಿಲ್ಲದ ಕುರುಡನೇ ಆಗಿರುವ ಅಪಾತ್ರನಾದ ಮಾನವನಿಗೆ ಹೇಳಬಾರದು. ಆದುದರಿಂದೆಲೈ ಅನಘನೇ! ಈಗ ನಾನು ಹೇಳುವುದನ್ನು ಏಕಾಗ್ರಮಾನಸನಾಗಿ ಕೇಳುವವನಾಗು.

೮೧–೮೨. ನಾನು ಸನಾತನವಾದ ಈ ವಿಷ್ಣುಭಕ್ತಿಯನ್ನೂ ಸಾಮಾನ್ಯ ಲಕ್ಷಣದಿಂದಲೂ, ವಿಶೇಷ ಲಕ್ಷಣದಿಂದಲೂ ಒಕ್ಕಣಿಸುವೆನು. ಅಪರಿಮಿತವಾದ ಸುಖಸಂಪ್ರಾಪ್ತಿಗೂ, ದುಃಖಸಂತಾನದ ಬಿಡುಗಡೆಗೂ ಇದೇ ಏಕಕಾರಣವಾಗಿರುವುದರಿಂದಲೂ, ದುಃಖನಿವಾರಣೆಯನ್ನೂ, ಸುಖಪ್ರಾಪ್ತಿಯನ್ನೂ ಬಯಸುವವರು ಇದನ್ನೇ ಆಶ್ರಯಿಸುವುದರಿಂದ ಇದನ್ನೇ ಭಕ್ತಿಯೆಂದು ಹೇಳಲಾಗಿದೆ. ಈ ಭಕ್ತಿಯು ಗುಣಭೇದದಿಂದ ಮೂರು ಬಗೆಯಾಗಿದೆ. ನಾಲ್ಕನೆಯದು ನಿರ್ಗುಣವಾದುದೆಂದು ತಿಳಿಯಲಾಗಿದೆ.

**ಕಾಮಕ್ರೋಧಾಭಿಭೂತಾನಾಂ ದೃಷ್ಟ್ವಾ ಯಾನ್ಯಂ ನ ಪಶ್ಯತಾಂ ।**
**ಲಬ್ಧಯೇ ಚಾಭಿಚಾರಾಯ ಭಕ್ತಿಃ ಸ್ಯಾನ್ನೃಪ ತಾಮಸೀ ॥ ೮೩ ॥**
**ಯಶಸೇ ಚಾತಿರಿಕ್ತಾಯ ಪರಸ್ಯ ಸ್ಪರ್ಧಯಾಪಿ ವಾ ।**
**ಪ್ರಸಂಗಾತ್ಪರಲೋಕಾಯ ಭಕ್ತಿಃ ಸಾ ರಾಜಸೀ ಸ್ಮೃತಾ ॥ ೮೪ ॥**
**ಆಮುಷ್ಮಿಕಂ ಸ್ಥಿರತರಂ ದೃಷ್ಟ್ವಾ ಭಾವಾನ್ವಿನಶ್ವರಾನ್ ।**
**ಪಶ್ಯತಾಶ್ರಮವರ್ಣೋಕ್ತಾನ್ಧರ್ಮಾನ್ನೈವ ಜಿಹಾಸತಾ ।**
**ಆತ್ಮಜ್ಞಾನಾಯ ಯಾ ಭಕ್ತಿಃ ಕ್ರಿಯತೇ ಸಾ ತು ಸಾತ್ತ್ವಿಕೀ ॥ ೮೫ ॥**
**ಜಗಚ್ಚೇದಂ ಜಗನ್ನಾಥೋ ನಾನ್ಯಂ ಚಾಪಿ ಚ ಕಾರಣಂ ।**
**ಅಹಂ ಚ ನ ತತೋ ಭಿನ್ನೋ ಮತ್ತೋಽಸೌ ನ ಪೃಥಕ್ ಸ್ಥಿತಃ ॥ ೮೬ ॥**
**ಹೀನಂ ಬಹಿರುಪಾಧೀನಂ ಪ್ರೇಮೋತ್ಕರ್ಷೇಣ ಭಾವನಂ ।**
**ದುರ್ಲಭಾ ಭಕ್ತಿರೇಷಾ ಹಿ ಮುಕ್ತಯೇಽದ್ವೈತಸಂಜ್ಞಿತಾ ॥ ೮೭ ॥**
**ಸಾತ್ತ್ವಿಕ್ಯಾ ಬ್ರಹ್ಮಣಃ ಸ್ಥಾನಂ ರಾಜಸ್ಯಾ ಶಕ್ರಲೋಕತಾಂ ॥ ೮೮ ॥**

---

೮೩. ಎಲೈ ದೊರೆಯೆ! ಕಾಮ ಕ್ರೋಧಗಳಿಂದ ತಿರಸ್ಕೃತರಾಗಿರುವವರು ಆಭಿಚಾರಿಕಕ್ರಿಯೆಗಳಿಗೆ ಯಾವೊಂದನ್ನಲ್ಲದೆ ಬೇರೊಂದನ್ನು ನೋಡುವುದಿಲ್ಲವೋ ಅದು ತಾಮಸಭಕ್ತಿಯೆನಿಸುವುದು.

೮೪. ಕೈಗೆಟಕದ ಕೀರ್ತಿಯ ಸಂಪಾದನೆಗಾಗಿಯೂ, ಇನ್ನೊಬ್ಬರಮೇಲಣ ಹುರುಡಿಗಾಗಿಯೂ, ಪ್ರಸಂಗವಶದಿಂದ ಪರಲೋಕ ಪ್ರಾಪ್ತಿಗೋಸುಗವೂ ಮಾಡುವ ಭಕ್ತಿಯು ರಾಜಸವೆನಿಸುವುದು.

೮೫. ಆಮುಷ್ಮಿಕವೇ ಸ್ಥಿರತರವೆಂದು ತಿಳಿದು ನಂಬಿ, ಐಹಿಕ ಭಾವಗಳೆಲ್ಲವನ್ನೂ ನಶ್ವರಗಳನ್ನಾಗಿ ಕಂಡು, ಆಯಾಯ ವರ್ಣಾಶ್ರಮಧರ್ಮಗಳನ್ನು ಎಂದಿಗೂ ತೊರೆಯದೆ ನಡೆಸುತ್ತ, ಆತ್ಮಜ್ಞಾನಲಾಭಕ್ಕಾಗಿಯೇ ಮಾಡುವ ಭಕ್ತಿಯು ಸಾತ್ವಿಕವೆನಿಸುವುದು.

೮೬–೮೭. "ಈ ಜಗತ್ತೂ, ಜಗನ್ನಾಥನೂ ಬೇರೆಯಲ್ಲ. ಇದಕ್ಕೆ ಬೇರೊಂದು ಕಾರಣವೂ ಇರುವುದಿಲ್ಲ. ನಾನೂ ಸಹ ಆ ಜಗನ್ನಾಥನಿಂದ ಭಿನ್ನನೂ ಅಲ್ಲ. ಆತನೂ ನನ್ನಿಂದ ಬೇರೆಯಾಗಿರುವುದಿಲ್ಲ. ಹೊರಗಣ ಉಪಾಧಿಗಳನ್ನೆಲ್ಲ ಅತ್ಯಂತ ಪ್ರೀತಿಯಿಂದ ಕಾಣುವುದು ಹೀನವಾದುದು." ಎಂಬದು ಅದ್ವೈತವೆಂಬ ಗುರುತುಳ್ಳ ಭಕ್ತಿಯು; ಇದು ಪರಮದುರ್ಲಭವಾದುದು. ಇದೇ ನಿರ್ಗುಣ (ನಿರಾಕಾರ) ಭಕ್ತಿಯೆನಿಸುವುದು.

೮೮–೯೦. ಎಲೈ ಇಂದ್ರದ್ಯುಮ್ನನೇ! ಮಾನವರು ಸಾತ್ವಿಕ ಭಕ್ತಿಯಿಂದ ಬ್ರಹ್ಮಲೋಕವನ್ನೂ, ರಾಜಸದಿಂದ ಇಂದ್ರಲೋಕವನ್ನೂ ಸೇರುತ್ತಾರೆ. ತಾಮಸ ಭಕ್ತಿಯಿಂದ ಈಲೋಕದಲ್ಲಿ ಭೋಗಗಳನ್ನನುಭವಿಸಿ ಪಿತೃಲೋಕವನ್ನುಸೇರುವರು.

ಪ್ರಯಾಂತಿ ಭುಕ್ತ್ವಾ ಭೋಗಾನ್ ಹಿ ತಾಮಸ್ಯಾ ಪಿತೃಲೋಕತಾಂ ।
ಪುನರಾಗತ್ಯ ಭೂರ್ಲೋಕಂ ಭಕ್ತಿಂ ತಾಂ ವೈಪರೀತ್ಯತಃ ॥ ೮೯ ॥
ತಾಮಸೋ ರಾಜಸೀಂ ಕುರ್ಯಾದ್ರಾಜಸಃ ಸಾತ್ತ್ವಿಕೀಂ ತಥಾ ।
ಸಾತ್ತ್ವಿಕೋ ಮುಕ್ತಿಮಾಪ್ನೋತಿ ಕೃತ್ವಾ ಚಾದ್ವೈತಭಾವನಂ ॥ ೯೦ ॥
ಏಕಾಮಪಿ ಸಮಾಶ್ರಿತ್ಯ ಕ್ರಮಾನ್ಮುಕ್ತಿಪಥಂ ವ್ರಜೇತ್ ।
ವಿಷ್ಣುಭಕ್ತಿವಿಹೀನಸ್ಯ ಶ್ರೌತಸ್ಮಾರ್ತಾಶ್ಚ ಯಾಃ ಕ್ರಿಯಾಃ ॥ ೯೧ ॥
ಪ್ರಾಯಶ್ಚಿತ್ತಾದಿಕಂ ತೀರ್ಥಯಾತ್ರಾ ಕೃಛ್ರಾದಿಕಂ ತಪಃ ।
ಕುಲೇ ಪ್ರಸೂತಿಃ ಶಿಲ್ಪಾನಿ ಸರ್ವಂ ಲೌಕಿಕಭೂಷಣಂ ॥ ೯೨ ॥
ಕಾಯಕ್ಲೇಶಃ ಫಲಂ ತೇಷಾಂ ಸ್ವೈರಿಣೀವ್ಯಭಿಚಾರವತ್ ।
ಕುಲಾಚಾರವಿಹೀನೋಽಪಿ ದೃಢಭಕ್ತಿರ್ಜಿತೇಂದ್ರಿಯಃ ॥ ೯೩ ॥
ಪ್ರಶ್ರಯಃ ಸರ್ವಲೋಕಾನಾಂ ನತ್ವಷ್ಟಾದಶವಿದ್ಯಕಃ ।
ಭಕ್ತಿಹೀನೋ ನೃಪಶ್ರೇಷ್ಠ ಸಜ್ಜಾತಿರ್ಧಾರ್ಮಿಕಸ್ತಥಾ ॥ ೯೪ ॥
ನಾಲ್ಪಭಾಗ್ಯಸ್ಯ ಪುಂಸೋ ಹಿ ವಿಷ್ಣೌ ಭಕ್ತಿಃ ಪ್ರಜಾಯತೇ ।
ಯಾಂ ತು ಸಂಪಾದ್ಯ ಯತ್ನೇನ ಕೃತಕೃತ್ಯೋ ನ ಸೀದತಿ ॥ ೯೫ ॥

---

ಇವರೆಲ್ಲರೂ ಮತ್ತೆ ಭೂಲೋಕಕ್ಕೆ ಬಂದು ವೈಪರೀತ್ಯದಿಂದ ಭಕ್ತಿಯನ್ನು ಮಾಡುತ್ತಾರೆ. ತಾಮಸಭಕ್ತಿಯನ್ನು ಮಾಡಿದವನು ರಾಜಸವನ್ನೂ, ರಾಜಸನು ಸಾತ್ತ್ವಿಕಭಕ್ತಿಯನ್ನೂ ಮಾಡುತ್ತಾನೆ. ಸಾತ್ತ್ವಿಕ ಭಕ್ತನು ಅದ್ವೈತಭಾವನೆಯನ್ನೆಸಗಿ ಮುಕ್ತಿಯನ್ನು ಪಡೆಯುತ್ತಾನೆ.

೯೧-೯೪. ಆದುದರಿಂದ ಭಕ್ತಿಯೊಂದನ್ನೆ, ಮೇಲೆ ಹೇಳಿದ ಚತುರ್ವಿಧ ಭಕ್ತಿಗಳಲ್ಲಿ ಯಾವುದನ್ನಾದರೂ ಸರಿಯೆ ಆಶ್ರಯಿಸಿ ಕ್ರಮವಾಗಿ ಮುಕ್ತಿಯ ಹಾದಿಯನ್ನು ಹಿಡಿಯಬಹುದು. ವಿಷ್ಣುಭಕ್ತಿವಿಹೀನನಾದವನಿಗೆ ಶ್ರೌತ ಸ್ಮಾರ್ತಕರ್ಮಗಳಾಗಲಿ, ಪ್ರಾಯಶ್ಚಿತ್ತಾದಿಗಳಾಗಲಿ, ತೀರ್ಥಯಾತ್ರಾದಿಗಳಾಗಲಿ, ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸಾಗಲಿ ಸತ್ಕುಲದಲ್ಲಿ ಹುಟ್ಟುವುದಾಗಲಿ, ಇತರ ಕಲೆಗಳಾಗಲಿ ಎಲ್ಲವೂ ಈ ಲೋಕದಲ್ಲಿಮಾತ್ರ ಅಲಂಕಾರವಾಗಿರುವಂತಹುವು. ಇವನ್ನೆಲ್ಲ ಮಾಡಿದುದಕ್ಕೆ ಮಾನವನಿಗೆ ದೊರಕುವ ಫಲ ಸ್ವೈರಿಣಿಯಲ್ಲಿ ವ್ಯಭಿಚರಿಸಿದಂತೆ ಕಾಯಕ್ಲೇಶವೊಂದೇ. ಕುಲಾಚಾರವಿಹೀನನಾದರೂ, ದೃಢವಾದ ಭಕ್ತಿಯೂ, ಜಿತೇಂದ್ರಿಯತೆಯೂ ಇರುವವನು ಸಮಸ್ತರಿಗೂ ಶ್ರೇಷ್ಠನಾದವನು. ಅವನೇ ಅಷ್ಟಾದಶವಿದ್ಯೆಗಳಲ್ಲಿಯೂ ಪಂಡಿತನು. ಅಯ್ಯಾ ದೊರೆಯೆ! ಭಕ್ತಿಹೀನನಾದವನು ಒಳ್ಳೆಯ ಕುಲದಲ್ಲಿ ಹುಟ್ಟಿದ್ದರೂ, ಧಾರ್ಮಿಕನಾಗಿದ್ದರೂ ಪ್ರಯೋಜನವಿಲ್ಲವು.

೯೫. ಮನುಷ್ಯನಿಗೆ ವಿಷ್ಣುಭಕ್ತಿಯೆಂಬುದು ಅಲ್ಪಭಾಗ್ಯಕ್ಕಾಗಿ ಹುಟ್ಟುವು

**ಯಯಾ ವೇತ್ತಿ ಜಗನ್ನಾಥಂ ಸಾ ವಿದ್ಯಾ ಪರಿಕೀರ್ತಿತಾ ।**
**ಯೇನ ಪ್ರೀಣಾತಿ ಭಗವಾಂಸ್ತತ್ಕರ್ಮಾಶುಭನಾಶನಂ ॥ ೯೬ ॥**
**ವಿಷ್ಣುಭಕ್ತಶ್ಚ ಸಂಪ್ರೋಕ್ತಸ್ತಾಭ್ಯಾಂ ಯುಕ್ತೋ ದೃಢವ್ರತಃ ।**
**ಯತ್ಪಾದಪಾಂಸುನಾ ವಿಶ್ವಂ ಪೂಯತೇ ಸಚರಾಚರಂ ॥ ೯೭ ॥**
**ಸೃಷ್ಟಿಸ್ಥಿತಿವಿನಾಶಾನಾಂ ಸ್ವೇಚ್ಛಯಾ ಪ್ರಭವತ್ಯಸೌ ।**
**ಕಿಂ ಪುನಃ ಕ್ಷುದ್ರಕಾಮಾನಾಂ ಭೂಮಿಸ್ವರ್ಗಾದಿಸಂಪದಾಂ ॥ ೯೮ ॥**
**ವಾಸುದೇವಸ್ಯ ಭಕ್ತಸ್ಯ ನ ಭೇದೋ ವಿದ್ಯತೇಽನಯೋಃ ।**
**ವಾಸುದೇವಸ್ಯ ಯೇ ಭಕ್ತಾಸ್ತೇಷಾಂ ವಕ್ಷ್ಯಾಮಿ ಲಕ್ಷಣಂ ॥ ೯೯ ॥**
**ಪ್ರಶಾಂತಚಿತ್ತಾಃ ಸರ್ವೇಷಾಂ ಸೌಮ್ಯಾಃ ಕಾಮಜಿತೇಂದ್ರಿಯಾಃ ।**
**ಕರ್ಮಣಾ ಮನಸಾ ವಾಚಾ ಪರದ್ರೋಹಮನಿಚ್ಛವಃ ॥ ೧೦೦ ॥**
**ದಯಾರ್ದ್ರಮನಸೋ ನಿತ್ಯಂ ಸ್ತೇಯಹಿಂಸಾಪರಾಙ್ಮುಖಾಃ ।**
**ಗುಣೇಷು ಪರಕಾರ್ಯೇಷು ಪಕ್ಷಪಾತಮುದಾನ್ವಿತಾಃ ॥ ೧೦೧ ॥**

---

ದಿಲ್ಲವು. ಅದು ಮಹಾಲಾಭಕ್ಕಾಗಿಯೇ ಹುಟ್ಟುವುದು. ಅದೊಂದನ್ನು ಪ್ರಯತ್ನ ಪೂರ್ವಕವಾಗಿಯೇ ಸಂಪಾದಿಸಿದ ಮಾನವನು ಎಂದಿಗೂ ಕೃತಕೃತ್ಯನೇ ಆಗುವ ನಲ್ಲದೆ ನಾಶವಾಗುವುದಿಲ್ಲವು.

೯೬. ಯಾವುದರಿಂದ ಮಾನವನು ಜಗನ್ನಾಥನನ್ನು ತಿಳಿಯುತ್ತಾನೆಯೋ ಅದೇ ವಿದ್ಯೆಯು. ಯಾವುದರಿಂದ ಭಗವಂತನು ತೃಪ್ತಿಗೊಳ್ಳುವನೋ ಅದೇ ಕರ್ಮವೇ ಅಶುಭಗಳನ್ನು ನಾಶಗೊಳಿಸುವಂತಹುದು.

೯೭. ಈ ಮೇಲೆ ಹೇಳಿದ ವಿದ್ಯೆಯಿಂದಲೂ, ಕರ್ಮದಿಂದಲೂ ಕೂಡಿ ದೃಢವ್ರತನಾಗಿರುವವನೇ ವಿಷ್ಣುಭಕ್ತನೆಂದು ಹೇಳಲಾಗುವುದು. ಅವನ ಪಾದ ಧೂಳಿಯಿಂದ ಚರಾಚರಾತ್ಮಕವಾದ ಈ ಜಗತ್ತೇ ಪಾವನವಾಗುತ್ತದೆ.

೯೮. ಇಂತಹ ವಿಷ್ಣುಭಕ್ತನು ಸೃಷ್ಟಿಸ್ಥಿತಿಲಯಗಳನ್ನು ಸ್ವತಂತ್ರವಾಗಿಯೇ ಮಾಡಲು ಸಮರ್ಥನಾಗಿರುತ್ತಾನೆ. ಹೀಗೆಂದ ಬಳಿಕ ಕೇವಲ ಕ್ಷುದ್ರವಾದ ಭೂಮಿಸ್ವರ್ಗಾದಿಗಳ ಸಂಪಾದನೆಗಳೆಂಬ ಬಯಕೆಗಳನ್ನು ಸಂಪಾದಿಸಬಲ್ಲನೆಂದು ಹೇಳಲೇನು ?

೯೯. ವಾಸುದೇವ, ವಾಸುದೇವನಭಕ್ತ ಇವರಿಬ್ಬರಿಗೂ ಯಾವ ಭೇದವೂ ಇರುವುದಿಲ್ಲವು. ಅಯ್ಯಾ ಮಹಾರಾಜನೇ ! ಈಗ ನಾನು ವಾಸುದೇವನ ಭಕ್ತರಾಗಿ ರುವವರ ಲಕ್ಷಣವನ್ನು ಹೇಳುತ್ತೇನೆ; ಕೇಳು.

೧೦೦–೧೦೩. ಪ್ರಶಾಂತಮನಸ್ಕರಾಗಿ ಎಲ್ಲರಿಗೂ ಸೌಮ್ಯರಾಗಿರುತ್ತ ಕಾಮಾದಿಗಳನ್ನು ಗೆದ್ದು ಜಿತೇಂದ್ರಿಯರಾಗಿ, ಕರ್ಮದಿಂದಲೂ, ಮನಸ್ಸಿ ನಿಂದಲೂ, ಮಾತಿನಿಂದಲೂ ಇತರರಿಗೆ ದ್ರೋಹವನ್ನು ಬಯಸದೆ, ದಯಾರ್ದ್ರ

ಸದಾಚಾರವದಾತಾಶ್ಚ ಪರೋತ್ಸವನಿಜೋತ್ಸವಾಃ ।
ಪಶ್ಯಂತಃ ಸರ್ವಭೂತಸ್ಥಂ ವಾಸುದೇವಮಮತ್ಸರಾಃ ॥ ೧೦೨ ॥
ದೀನಾನುಕಂಪಿನೋ ನಿತ್ಯಂ ಭೃಶಂ ಪರಹಿತೈಷಿಣಃ ।
ರಾಜೋಪಚಾರಪೂಜಾಯಾಂ ಲಾಲನಾಃ ಸ್ವಕುಮಾರವತ್ ॥ ೧೦೩ ॥
ಕೃಷ್ಣಸರ್ಪಾದಿವ ಭಯಂ ಬಾಹ್ಯೇ ಪರಿಚರಂತಿ ತೇ ।
ವಿಷಯೇಷ್ವವಿವೇಕಾನಾಂ ಯಾ ಪ್ರೀತಿರುಪಜಾಯತೇ ॥ ೧೦೪ ॥
ವಿತನ್ವತೇ ತು ತಾಂ ಪ್ರೀತಿಂ ಶತಕೋಟಿಗುಣಾಂ ಹರೌ ।
ನಿತ್ಯಕರ್ತವ್ಯತಾಬುದ್ಧ್ಯಾ ಯಜಂತಃ ಶಂಕರಾದಿಕಂ ॥ ೧೦೫ ॥
ವಿಷ್ಣುಸ್ವರೂಪಾನ್ಧ್ಯಾಯಂತಿ ಭಕ್ತ್ಯಾ ಪಿತೃಗಣೇಷ್ವಪಿ ।
ವಿಷ್ಣೋರನ್ಯಂ ನ ಪಶ್ಯಂತಿ ವಿಷ್ಣುಂ ನಾನ್ಯತ್ಪೃಥಗ್ಗತಂ ॥ ೧೦೬ ॥
ಸಾರ್ಥಕ್ಯಂ ನ ಚ ಪಾರ್ಥಕ್ಯಂ ಸಮಷ್ಟಿವ್ಯಷ್ಟಿರೂಪಿಣಃ ।
ಜಗನ್ನಾಥ ತವಾಸ್ಮೀತಿ ದಾಸಸ್ತ್ವಂ ಚಾಽಸ್ತಿ ನೋ ಪೃಥಕ್ ॥ ೧೦೭ ॥

---

ಚಿತ್ತರೂ, ಯಾವಾಗಲೂ ಕಳ್ಳತನ, ಭೂತಹಿಂಸೆಗಳಿಗೆ ಪರಾಙ್ಮುಖರಾಗಿರುವವರೂ, ಇತರರ ಸದ್ಗುಣಗಳಲ್ಲಿಯೂ, ಸತ್ಕಾರ್ಯಗಳಲ್ಲಿಯೂ ಪಕ್ಷಪಾತವೂ, ಸಂತೋಷವೂ ಉಳ್ಳವರೂ, ಸದಾಚಾರವಂತರೂ, ದಾತೃಗಳೂ, ಇತರರ ಸಂತೋಷವೇ ತಮ್ಮ ಸಂತೋಷವೆಂದು ತಿಳಿದಿರುವವರೂ, ಸಮಸ್ತಭೂತಗಳಲ್ಲಿಯೂ ನೆಲಸಿರುವ ವಾಸುದೇವನನ್ನೇ ಸತತವೂ ನೋಡುತ್ತ ಮಾತ್ಸರ್ಯವಿಲ್ಲದವರೂ, ದೀನರಲ್ಲಿ ಯಾವಾಗಲೂ ದಯೆಯುಳ್ಳವರೂ, ಬಹಳ ಮಟ್ಟಿಗೆ ಪರಹಿತೈಷಿಗಳೂ, ರಾಜೋಪಚಾರ ಪೂಜೆಗಳಲ್ಲಿ ತಮ್ಮ ಮಕ್ಕಳಲ್ಲೆಂತೋ ಅಂತೇ ವರ್ತಿಸುವವರೂ ಆದವರೇ ವಿಷ್ಣುಭಕ್ತರು.

೧೦೪–೧೦೯. ಎಲೈ ಇಂದ್ರದ್ಯುಮ್ನನೇ! ಈ ವಿಷ್ಣುಭಕ್ತರು ಬಾಹ್ಯ ಪ್ರಪಂಚದಲ್ಲಿಯೂ ಬಾಹ್ಯವಿಷಯಾದಿಗಳಲ್ಲಿಯೂ ಕೃಷ್ಣಸರ್ಪದಿಂದೆಂತೋ ಅಂತು ಭಯಗೊಳ್ಳುತ್ತಾರೆ. ಅವಿವೇಕಿಗಳಿಗೆ ವಿಷಯೋಪಭೋಗಗಳಲ್ಲಿ ಯಾವ ಪ್ರೀತಿಯುಂಟಾಗುವುದೋ ಅದಕ್ಕಿಂತಲೂ ನೂರುಮಡಿಯಾದ ಪ್ರೀತಿಯನ್ನು ಪುರುಷೋತ್ತಮನಾದ ಶ್ರೀ ಹರಿಯಲ್ಲಿ ಮಾಡುತ್ತಾರೆ. ನಿತ್ಯಕರ್ತವ್ಯವೆಂಬ ಬುದ್ಧಿಯಿಂದ ಶಂಕರಾದಿ ಇತರ ದೇವತೆಗಳನ್ನು ಪೂಜಿಸುತ್ತ, ಅವರೆಲ್ಲರನ್ನೂ ವಿಷ್ಣುಸ್ವರೂಪರನ್ನಾಗಿಯೇ ಪರಿಭಾವಿಸಿ, ಪಿತೃಗಣಗಳಲ್ಲಿಯೂ ವಿಷ್ಣುವನ್ನೇ ಭಕ್ತಿಯಿಂದ ಕಾಣುತ್ತ, ವಿಷ್ಣುವೊಬ್ಬನಲ್ಲದೆ ಈ ಜಗತ್ತಿನಲ್ಲಿ ಮತ್ತಾರನ್ನೂ ನೋಡದೆ, ಆ ವಿಷ್ಣುವು ತಮ್ಮಿಂದ ಬೇರೆಯಾಗಿ ಎಲ್ಲಿಯೋ ಇರುವನೆಂದು ಭಾವಿಸದೆ ತಮ್ಮಲ್ಲಿಯೇ ನಿರೀಕ್ಷಿಸುತ್ತ, ಆ ಭಗವಂತನ ವ್ಯಷ್ಟಿ ಸಮಷ್ಟಿರೂಪ

ಅಂತರ್ಯಾಮಿಾ ಯದಾ ದೇವಃ ಸರ್ವೇಷಾಂ ಹೃದಿ ಸಂಸ್ಥಿತಃ ।
ಸೇವ್ಯೋ ವಾ ಸೇವಕೋ ವಾಪಿ ತ್ವತ್ತೋ ನಾನ್ಯೋಽಸ್ತಿ ಕಂಚನ ॥
ಇತಿ ಭಾವನಯಾ ಕೃತಾವಧಾನಾಃ
ಪ್ರಣಮಂತಃ ಸತತಂ ಚ ಕೀರ್ತಯಂತಃ ।
ಹರಿಮಬ್ಜಜವಂದ್ಯಪಾದಪದ್ಮಂ
ಪ್ರಭಜಂತಸ್ತೃಣವಜ್ಜಗಜ್ಜನೇಷು ॥ ೧೦೯ ॥
ಉಪಕೃತಿಕುಶಲಾ ಜಗತ್ಸ್ವಜಸ್ರಂ
ಪರಕುಶಲಾನಿ ನಿಜಾನಿ ಮನ್ಯಮಾನಾಃ ।
ಅಪಿ ಪರಪರಿಭಾವನೇ ದಯಾರ್ದ್ರಾಃ
ಶಿವಮನಸಃ ಖಲು ವೈಷ್ಣವಾಃ ಪ್ರಸಿದ್ಧಾಃ ॥ ೧೧೦ ॥
ದೃಷದಿ ಪರಧನೇ ಚ ಲೋಷ್ಟಖಂಡೇ
ಪರವನಿತಾಸು ಚ ಕೂಟಶಾಲ್ಮಲೀಷು ।
ಸಖರಿಪುಸಹಜೇಷು ಬಂಧುವರ್ಗೇ
ಸಮಮತಯಃ ಖಲು ವೈಷ್ಣವಾಃ ಪ್ರಸಿದ್ಧಾಃ ॥ ೧೧೧ ॥

---

ಗಳೆರಡಕ್ಕೂ ಯಾವ ಭೇದವೂ ಇಲ್ಲವೆಂದು ನಂಬಿ, "ಓ ಜಗನ್ನಾಥ! ನಾನು ನಿನ್ನವನು; ದಾಸನು; ನೀನೂ ನಾನು ಬೇರೆಯಲ್ಲವು. ಓ ಸ್ವಾಮಿಯೇ! ನೀನೇ ಸಮಸ್ತರಲ್ಲಿಯೂ ನೆಲಸಿರುವೆಯಾದುದರಿಂದ ಸೇವ್ಯನಾಗಲಿ ಸೇವಕನಾಗಲಿ ನಿನಗಿಂತಲೂ ಬೇರೆ ಯಾರೂ ಇರುವುದಿಲ್ಲವು" ಎಂಬೀ ಭಾವನೆಯಿಂದ ಧ್ಯಾನಾಸಕ್ತರಾಗಿ ಆ ಭಗವಂತನನ್ನೇ ನಮಸ್ಕರಿಸಿ, ಕೀರ್ತಿಸಿ, ಬ್ರಹ್ಮಾದಿಗಳಿಂದ ನಮಸ್ಕೃತನಾದ ಆ ದೇವನನ್ನೇ ಭಜಿಸಿ ಜಗತ್ತಿನ ಇತರ ಜನರನ್ನು ಯಾವ ಬಗೆಯಲ್ಲಿಯೂ ತೃಣವನ್ನೆಂತೋ ಅಂತು ಇನಿತಾದರೂ ಸೇವಿಸದೆ ಇರುತ್ತಾರೆ.

೧೧೦. ವಿಷ್ಣುಭಕ್ತರು ಇತರರಿಗೆ ಯಾವಾಗಲೂ ಉಪಕಾರ ಮಾಡುವುದರಲ್ಲಿಯೇ ಕುಶಲರಾಗಿ ಯಾವಾಗಲೂ ಜಗತ್ತುಗಳಲ್ಲಿ ಇತರರ ಯೋಗಕ್ಷೇಮವೇ ತಮ್ಮ ಯೋಗಕ್ಷೇಮವನ್ನಾಗಿ ಬಗೆದು, ಇತರರಿಗೆ ಅಪಮಾನವಾದಾಗಲೂ ಅವರ ವಿಷಯದಲ್ಲಿ ಅತ್ಯಂತ ದಯಾರ್ದ್ರಹೃದಯಾಗಿರುತ್ತಾರೆಯೆಂಬುದು ಪ್ರಸಿದ್ಧವೇ ಆಗಿರುತ್ತದೆ.

೧೧೧. ಅಯ್ಯಾ ರಾಜೇಂದ್ರನೇ! ವಿಷ್ಣುಭಕ್ತರಾದವರು ಬಂಡೆಯಲ್ಲಿ, ಪರಧನದಲ್ಲಿ, ಕಲ್ಲಿನ ಚೂರಿನಲ್ಲಿ, ಹೆರರ ಹೆಣ್ಣುಗಳಲ್ಲಿ, ಕೂಟಶಾಲ್ಮಲೀ ವೃಕ್ಷದಲ್ಲಿ, ಗೆಳೆಯರು ಹಗೆಯರು ಒಡಹುಟ್ಟಿದವರು ಮತ್ತು ಬಂಧುವರ್ಗದಲ್ಲಿ, ಸಮಬುದ್ಧಿಯುಳ್ಳವರಾಗಿರುತ್ತಾರೆಂಬುದು ಪ್ರಸಿದ್ಧವೇ ಆಗಿರುತ್ತದೆ.

ಗುಣಗಣಸುಮುಖಾಃ ಪರಸ್ಯ ಮರ್ಮ
ಚ್ಛದನಪರಾಃ ಪರಿಣಾಮಸೌಖ್ಯದಾ ಹಿ ।
ಭಗವತಿ ಸತತಂ ಪ್ರದತ್ತಚಿತ್ತಾಃ
ಪ್ರಿಯವಚಸಃ ಖಲು ವೈಷ್ಣವಾಃ ಪ್ರಸಿದ್ಧಾಃ ॥ ೧೧೨ ॥
ಸ್ಫುಟಮಧುರಪದಂ ಹಿ ಕಂಸಹಂತುಃ
ಕಲುಷಮುಷಂ ಶುಭನಾಮ ಚಾಮನಂತಃ ।
ಜಯಜಯ ಪರಿಘೋಷಣಾಂ ರಟಂತಃ
ಕಿಮು ವಿಭವಾಃ ಖಲು ವೈಷ್ಣವಾಃ ಪ್ರಸಿದ್ಧಾಃ ॥ ೧೧೩ ॥
ಹರಿಚರಣಸರೋಜಯುಗ್ಮಚಿತ್ತಾ
ಜಡಿಮಧಿಯಃ ಸುಖದುಃಖಸಾಮ್ಯರೂಪಾಃ ।
ಅಪಚಿತಿಚತುರಾ ಹರೌ ನಿಜಾತ್ಮ
ನ್ಯತಿವಚಸಃ ಖಲು ವೈಷ್ಣವಾಃ ಪ್ರಸಿದ್ಧಾಃ ॥ ೧೧೪ ॥
ರಥಚರಣಗದಾಬ್ಜಶಂಖಮುದ್ರಾ
ಕೃತತಿಲಕಾಂಕಿತ ಬಾಹುಮೂಲಮಧ್ಯಾಃ ।

---

೧೧೨. ಸದ್ಗುಣ ಸಮೂಹಗಳಿಂದ ಸುಮುಖರಾಗಿ, ಇತರರ ಗುಟ್ಟನ್ನು ಗುಟ್ಟನ್ನಾಗಿಯೇ ಕಾಣುವುದರಲ್ಲಿ ತತ್ಪರರಾಗಿ, ಎಲ್ಲ ಪ್ರಾಣಿಗಳಿಗೂ ಕಡೆಯಲ್ಲಿ ಸೌಖ್ಯವನ್ನುಂಟುಮಾಡುವವರಾಗಿ, ಭಗವಂತನಲ್ಲಿಯೇ ಸತತವೂ ನ್ಯಸ್ತಚಿತ್ತರಾಗಿ, ಯಾವಾಗಲೂ ಪ್ರಿಯವಾದ ನುಡಿಗಳನ್ನೇ ಆಡುವುದು ವಿಷ್ಣುಭಕ್ತರ ಸ್ವಭಾವವೆಂದು ಸುಪ್ರಸಿದ್ಧವಾಗಿರುವುದು.

೧೧೩. ಎಲೈ ಇಂದ್ರದ್ಯುಮ್ನ ಮಹೀಪಾಲನೇ! ಈ ಲೋಕದಲ್ಲಿ ವಿಷ್ಣುಭಕ್ತರಾದವರು ಕಂಸಾರಿಯಾದ ಶ್ರೀ ಹರಿಯ ಸ್ಫುಟಮಧುರವಾದ ದಿವ್ಯಪಾದಗಳನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ, ಸಕಲ ಕಲ್ಮಷಗಳನ್ನೂ ದೂರಗೊಳಿಸುವ ಮಂಗಳಕರವಾದ ಆ ಪ್ರಭುವಿನ ದಿವ್ಯನಾಮಗಳನ್ನೇ ಸಂಕೀರ್ತಿಸುತ್ತ, "ಜಯ ಜಯ ಕೃಷ್ಣಹರೇ" ಎಂದು ಯಾವಾಗಲೂ ಉದ್ಘೋಷಿಸುತ್ತ ಬಹು ಭಕ್ತಿ ವೈಭವದಿಂದ ಸುಪ್ರಸಿದ್ಧರಾಗಿರುತ್ತಾರೆ.

೧೧೪. ಇಷ್ಟೆಯಲ್ಲದೆ ಅವರು ಶ್ರೀಹರಿಯ ಚರಣಸರೋಜಗಳಲ್ಲಿಯೆ ನಟ್ಟಮನಸ್ಸುಳ್ಳವರಾಗಿ, ಇತರ ಭೋಗಾದಿ ವ್ಯಾಪಾರಗಳಲ್ಲಿ ಜಡಬುದ್ಧಿಗಳಾಗಿ, ಸುಖದುಃಖ, ಲಾಭಾಲಾಭ, ಜಯಾಜಯಾದಿಗಳಲ್ಲಿ ಸಮಚಿತ್ತರಾಗಿ, ಶ್ರೀಹರಿಯ ಪೂಜೆಯಲ್ಲಿ ಚತುರರಾಗಿ, ತಂತಮ್ಮ ಆತ್ಮಗಳೊಡನೆಯೇ ಸಲ್ಲಪಿಸುತ್ತ(ಆತ್ಮಾನುಸಂಧಾನದಲ್ಲಿಯೇ ಇರುವವರಾಗಿ) ಸುಪ್ರಸಿದ್ಧರಾಗಿರುವರು.

೧೧೫. ವಿಷ್ಣುಭಕ್ತರು ಶ್ರೀಹರಿಯ ರಥ, ಚರಣ, ಗದಾ, ಕಮಲ, ಶಂಖ

ಮುರರಿಪುಚರಣಪ್ರಣಾಮಧೂಲೀ
ಧೃತಕವಚಾಃ ಖಲು ವೈಷ್ಣವಾ ಜಯಂತಿ ॥ ೧೧೫ ॥
ಮುರಜಿದಪಘನಾಪಕೃಷ್ಟಗಂಧೋ
ತ್ತಮತುಲಸೀದಲಮಾಲ್ಯ ಚಂದನೈರ್ಯೇ ।
ವರಯಿತುಮಿವಮುಕ್ತಿಮಾಪ್ತಭೂಷಾ
ಕೃತಿರುಚಿರಾಃ ಖಲು ವೈಷ್ಣವಾ ಜಯಂತಿ ॥ ೧೧೬ ॥
ವಿಗಲಿತ ಮದಮಾನ ಶುದ್ಧಚಿತ್ತಾಃ
ಪ್ರಸಭವಿನಶ್ಯದಹಂಕೃತಿಪ್ರಶಾಂತಾಃ ।
ನರಹರಿಮಮರಾಪ್ತಬಂಧುಮಿಷ್ಟ್ವಾ
ಕ್ಷಯಿತಶುಚಃ ಖಲು ವೈಷ್ಣವಾ ಜಯಂತಿ ॥ ೧೧೭ ॥
ಭಗವತಿ ಸತತಂ ಪ್ರಭಕ್ತಿಭಾಜಾಂ
ಶುಭಚರಿತಂ ತವ ಲಕ್ಷ್ಮ ನೋಽಭ್ಯಧಾಯಿ ।
ಶ್ರುತಿಪಥಮವತೀರ್ಣಮಾಶು ಪುಂಸಾಂ
ಹರತಿ ಮಲಂ ಚಿರಸಂಚಿತಂ ಯದೇತತ್ ॥ ೧೧೮ ॥

---

ಮೊದಲಾದವುಗಳ ಮುದ್ರೆಗಳನ್ನು ಬಾಹುಮೂಲಗಳಲ್ಲಿಯೂ, ತಿಲಕವನ್ನು ಮಧ್ಯಗಳಲ್ಲಿಯೂ ಧರಿಸಿಕೊಂಡು, ಮುರಾಸುರ ವಿಧ್ವಂಸಿಯಾದ ಆ ಪರಮಾತ್ಮನ ಚರಣಪ್ರಣಾಮಗಳಿಂದುಂಟಾದ ಧೂಳಿಯಿಂದ ಶುಭ್ರಗೊಳಿಸಲಾದ ಪುಣ್ಯಭಕ್ತಿ ಕವಚವುಳ್ಳವರಾಗಿ ಪ್ರಸಿದ್ಧರಾಗಿರುವರು.

೧೧೬. ಶ್ರೀ ವಿಷ್ಣುಭಕ್ತರು ಆ ಸ್ವಾಮಿಯ ಅಂಗ ನಿರ್ಮಾಲ್ಯವಾದುದೂ, ಉತ್ತಮಗಂಧ ಸಮನ್ವಿತವೂ ಆದ ತುಲಸೀದಲಹಾರ, ಚಂದನಗಳನ್ನುಧರಿಸಿ ದವರಾಗಿ ಮುಕ್ತಿಲಲನಾಮಣಿಯನ್ನು ವರಿಸಲೋಸುಗವೇ ದಿವ್ಯಾಲಂಕಾರ ಭೂಷಿತರಾಗಿ ಸೌಂದರ್ಯದಿಂದೊಪ್ಪುತ್ತ ಜಯಶೀಲರಾಗಿರುತ್ತಾರೆ.

೧೧೭. ಇದೂ ಅಲ್ಲದೆ ಅವರು ಗರ್ವ ಅಹಂಕಾರಗಳು ಸಡಿಲವಾಗಿ ಹೋಗಿರಲು ಶುದ್ಧಚಿತ್ತರಾಗಿ, ಬಹು ಜಾಗ್ರತೆಯಾಗಿಯೇ ನಾಶವಾಗಿರುವ ಅಹಂಭಾವವುಳ್ಳವರಾಗಿ, ಪ್ರಶಾಂತರಾಗಿ, ದೇವತೆಗಳೆಲ್ಲರಿಗೂ ಆಪ್ತಬಂಧುವಾದ ಶ್ರೀ ನರಹರಿಯನ್ನೇ ಪೂಜಿಸಿ, ಕಲ್ಮಷಗಳು ಕ್ಷಯಿಸಿಹೋಗಲು ಲೋಕದಲ್ಲಿ ಕೇವಲ ಜಯಶೀಲರಾಗಿಯೇ ಬೆಳಗುತ್ತಿರುತ್ತಾರೆ.

೧೧೮. ಆಯ್ಯಾ ನೃಪಾಲಾ! ಈ ಪ್ರಕಾರವಾಗಿ ಷಡ್ಗುಣೈಶ್ವರ್ಯಭರಿತ ನಾದ ಶ್ರೀಮನ್ಮಹಾವಿಷ್ಣುವಿನಲ್ಲಿ ಭಕ್ತಿಯುಳ್ಳ ಭಾಗವತಾಗ್ರಣಿಗಳ ಗುರುತನ್ನು ನಿನಗೆ ನಾವು ಹೇಳಿರುತ್ತೇವೆ. ಇದು ಮಾನವನ ಶ್ರುತಿಪಥವನ್ನು ಸೇರಿದುದಾದರೆ (ಶ್ರದ್ಧೆಯಿಂದ ಇದನ್ನು ಕೇಳಿದುದಾದರೆ) ಬಹುಕಾಲದಿಂದಲೂ ಕೂಡಿಬಂದ ಪಾಪಮಲವನ್ನು ಪರಿಹರಿಸುತ್ತದೆ.

ನ ಹಿ ಧನಮಪಿ ಮೃಗ್ಯತೇ ಕದಾಚಿತ್
ನ ಖಲು ಶರೀರಜಖೇದಸಂಪ್ರಯೋಗಃ ।
ಮೃದುಲಘುವಚಸಾಭಿಧಾನಕೀರ್ತಿಂ
ಭಜನಮಹಂ ತವ ದಾಸ್ಯ ಏವ ಚಿಂತಾ ॥ ೧೧೯ ॥
ಶುಭಚರಿತಮಪಿ ದ್ವಿಷಂತಿ ಪುಂಸಾಂ
ಸ್ವಯಮಿಹ ದುಶ್ಚರಿತಾನುಬಂಧಚಿತ್ತಾಃ ।
ಮಹದಕುಶಲಮಪ್ಯವಾಪ್ಯ ಸುಸ್ಥಾ
ಭಗರಸರಸಿಕಾ ಅವೈಷ್ಣವಾಸ್ತೇ ॥ ೧೨೦ ॥
ಪರಮಸುಖಪದಂ ಹೃದಂಬುಜಸ್ಥಂ
ಕ್ಷಣಮಪಿ ನಾನುಸಜ್ಜಂತಿ ಮತ್ತಭಾವಾಃ ।
ವಿತಥವಚನಜಾಲಕೈರಜಸ್ರಂ
ಪಿದಧಾತಿ ನಾಮ ಹರೇರವೈಷ್ಣವಾಸ್ತೇ ॥ ೧೨೧ ॥

---

೧೧೯–೧೨೦. "ಓ ಪರಮಾತ್ಮಾ! ನಾನು ಎಂದಿಗೇ ಆಗಲಿ ಧನವನ್ನೂ ಸಹ ಹುಡುಕಿಕೊಂಡು ಹೋಗುವುದಿಲ್ಲವು. ನನಗೆ ಶರೀರದಲ್ಲಿ ಜನಿಸಿದ ರೋಗ ರುಜಿನಾದಿಗಳ ಬಾಧೆಯೂ ಇರುವುದಿಲ್ಲವು. ನನಗೆ ಮೃದುವಾಗಿಯೂ, ಲಘುವಾಗಿಯೂ ಆಡುವ ಹೊಗಳಿಕೆಯ ಮಾತುಗಳು, ಬಿರುದುಗಳು, ಅವುಗಳಿಂದ ದೊರಕುವ ಕೀರ್ತಿಯೂ ಬೇಕಿಲ್ಲವು. ನಾನು ನಿನ್ನ ನಾಮಭಜನೆಯೊಂದನ್ನೇ ಮಾಡಿ ಕೃತಾರ್ಥನಾಗುವೆನು. ನನಗೆ ಬೇಕಾದುದು ಮುಕ್ತಿಯೊಂದೇ. ನಾನು ನಿನ್ನ ದಾಸನು. ನನಗೆ ನಿನ್ನ ದಾಸ್ಯವೊಂದೇ ಬೇಕು" ಎಂದು ಭಾವಿಸಿರುವವರೇ ವಿಷ್ಣುಭಕ್ತರಾದವರು. ಇವರೇ ಲೋಕದಲ್ಲಿ ಧನ್ಯರು; ಇವರೇ ಜಯಶಾಲಿಗಳು. ಯಾರಾದರೆ ವಿಷ್ಣುಭಕ್ತರಾದವರ ಮಂಗಳಕರಗಳಾದ ಚರಿತೆಗಳನ್ನು ದ್ವೇಷಿಸುವರೋ, ತಾವೂ ಸಹ ಪಾಪಕರ್ಮಗಳನ್ನೇ ಮಾಡುವುದರಲ್ಲಿ ಆಸಕ್ತವಾದ ಚಿತ್ತವುಳ್ಳವರಾಗಿರುವರೋ, ದೊಡ್ಡ ವಿಪತ್ತನ್ನೇ ಪಡೆದರೂ, ಮಹಾಪಾಪಸಂಘಟನೆಯಾದರೂ ಏನೊಂದೂ ವ್ಯಥೆಯಿಲ್ಲದೆ ಸ್ವಸ್ಥಚಿತ್ತರೇ ಆಗಿರುತ್ತಾರೆಯೋ, ಕೇವಲ ನಾರೀಲೋಲರಾಗಿಯೇ ಕಾಲಕಳೆಯುತ್ತಾರೆಯೋ ಅವರೇ ಅವೈಷ್ಣವರು.

೧೨೧. ದುರಹಂಕಾರಿಗಳಾಗಿ ತಮ್ಮ ಹೃತ್ಪದ್ಮದಲ್ಲಿಯೇ ನೆಲಸಿರುವ ಪರಮಾತ್ಮನ ಪರಮಸುಖಪ್ರದಾಯಕವಾದ ಪಾದಪಂಕಜಸ್ಮರಣೆಯಲ್ಲಿ ತೊಡಗದೆ ಯಾವಾಗಲೂ ಸುಳ್ಳುಪಳ್ಳುಗಳನ್ನೂ, ಕಾಡುಹರಟೆಗಳನ್ನೂ ಗಳಹುತ್ತ ಶ್ರೀಹರಿನಾಮವನ್ನು ಕೇಳಿದರೂ ಕಿವಿಗಳನ್ನು ಭದ್ರವಾಗಿ ಮುಚ್ಚಿಕೊಳ್ಳುವವರು ಅವೈಷ್ಣವರು.

ಪರಯುವತಿಧನೇಷು ನಿತ್ಯಲುಬ್ಧಾಃ
ಕೃಪಣಧಿಯೋ ನಿಜಕುಕ್ಷಿಭಾರಪೂರ್ಣಾಃ ।
ನಿಯತಪರಮಹತ್ತ್ವಮನ್ಯಮಾನಾ
ನರಪಶವಃ ಖಲು ವಿಷ್ಣುಭಕ್ತಿಹೀನಾಃ ॥ ೧೨೨ ॥
ಅನವರತಮನಾರ್ಯಸಂಗರಕ್ತಾಃ
ಪರಪರಿಭಾವಕಹಿಂಸಕಾಃತಿರೌದ್ರಾಃ ।
ನರಹರಿಚರಣಸ್ಮೃತೌ ವಿರಕ್ತಾ
ನರಮಲಿನಾಃ ಖಲು ದೂರತೋ ಹಿ ವರ್ಜ್ಯಾಃ ॥ ೧೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ವಿದ್ಯಾಪತಿಕಥಿತ ಜಗನ್ನಾಥಕ್ಷೇತ್ರ ಸಂಸ್ಥಾನಾದಿವರ್ಣನಂ" ನಾಮ ದಶಮೋಽಧ್ಯಾಯಃ

---

೧೨೨. ಪರಸ್ತ್ರೀ, ಪರಧನಗಳಲ್ಲಿ ಯಾವಾಗಲೂ ಆಸೆಯುಳ್ಳವರಾಗಿ, ಲುಬ್ಧಬುದ್ಧಿಯುಳ್ಳವರಾಗಿ, ತಮ್ಮ ಹೊಟ್ಟೆಯನ್ನು ತುಂಬುವುದರಲ್ಲಿಯೇ ಆಸಕ್ತರಾಗಿ, ಇತರರ ಉನ್ನತಿಯನ್ನು ಸಹಿಸದವರಾಗಿರುವ ನರಪಶುಗಳೇ ಅವೈಷ್ಣವರು.

೧೨೩. ಯಾವಾಗಲೂ ನೀಚರ ಸಹವಾಸದಲ್ಲಿಯೇ ಇದ್ದು, ಇತರರ ಸೋಲು, ಇತರರ ಹಿಂಸೆಗಳಲ್ಲಿಯೇ ತೊಡಗಿ, ಮಹಾ ಭಯಂಕರರಾಗಿ, ನರಹರಿಯ ಚರಣಧ್ಯಾನವಿಮುಖರಾಗಿರುವ ಕೊಳಕು ಮಾನವರೇ ಅವೈಷ್ಣವರು. ಇವರನ್ನು ಬಹು ದೂರದಲ್ಲಿಯೇ ವರ್ಜ್ಯಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ವಿದ್ಯಾಪತಿಕಥಿತ ಜಗನ್ನಾಥಕ್ಷೇತ್ರ ಸಂಸ್ಥಾನಾದಿ ವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಏಕಾದಶೋಽಧ್ಯಾಯಃ

### ಇಂದ್ರದ್ಯುಮ್ನಸ್ಯ ಭಗವದ್ದರ್ಶನಾರ್ಥಗಮನವರ್ಣನಂ

ಜೈಮಿನಿರುವಾಚ :—

**ನಾರದಾದ್ಬ್ರಹ್ಮಣಃಪುತ್ರಾದ್ಭಗವದ್ಭಕ್ತಿಮುತ್ತಮಾಂ ।**
**ಶ್ರುತ್ವೇತ್ಥಂ ಪರಮಪ್ರೀತ ಇಂದ್ರದ್ಯುಮ್ನೋಽಪ್ಯುವಾಚ ತಂ ॥ ೧ ॥**

ಇಂದ್ರದ್ಯುಮ್ನ ಉವಾಚ :–

**ಸಾಧುಸಂಗಸ್ತು ವಿದ್ವದ್ಭಿರ್ಭವವ್ಯಾಧಿವಿನಾಶನಃ ।**
**ಮಮೋಪದಿಷ್ಟೋ ಭಗವನ್ಸೋಽಭೂತ್ಸಾಂಪ್ರತಮೇವ ಮೇ ॥ ೨ ॥**
**ಯೇನ ಸಾಕ್ಷಾತ್ಕೃತೋ ವಿಷ್ಣುಃ ಪರಮಾತ್ಮಾ ಪರಾತ್ಪರಃ ।**
**ಸ ತ್ವಂ ಯನ್ಮಂದಿರಾಯಾತಸ್ತ್ವದನ್ಯಃ ಸಾಧುರತ್ರ ಕಃ ॥ ೩ ॥**
**ತ್ವತ್ಸನ್ನಿಧಾನಾದ್ಭಗವಂಸ್ತಮೋ ಮೇ ನಾಶಮಭ್ಯಗಾತ್ ।**
**ಯನ್ಮೇ ತ್ವರಯತೇ ಚಿತ್ತಮರ್ಚಿತುಂ ನೀಲಮಾಧವಂ ॥ ೪ ॥**
**ವೇತ್ಸಿ ಬ್ರಹ್ಮಾಂಡವೃತ್ತಾಂತಂ ಪರ್ಯಟನ್ಸರ್ವಲೌಕಿಕಃ ।**
**ತದಾವಾಂ ರಥಮಾಸ್ಥಾಯ ಪಶ್ಯಾವೋ ನೀಲಮಾಧವಂ ।**
**ಪುರುಷೋತ್ತಮಸಂಜ್ಞಸ್ಯ ಕ್ಷೇತ್ರಸ್ಯಾಲಂಕೃತಂ ಶುಭಂ ॥ ೫ ॥**

---

## ಕನ್ನಡದ ಅನುವಾದ

### ಇಂದ್ರದ್ಯುಮ್ನನ ಭಗವದ್ದರ್ಶನಾರ್ಥಪ್ರಯಾಣದ ವರ್ಣನ

೧. ಜೈಮಿನಿಯು ಹೇಳುತ್ತಾನೆ:—ಎಲೈ ಋಷಿಗಳಿರಾ! ಬ್ರಹ್ಮಪುತ್ರನಾದ ನಾರದಮುನಿಯಿಂದ ಭಗವದ್ಭಕ್ತಿ ವಿಚಾರವನ್ನು ಈ ಪ್ರಕಾರವಾಗಿ ಕೇಳಿದ ತರುವಾಯ ಇಂದ್ರದ್ಯುಮ್ನ ಮಹಾರಾಜನು ಪರಮಪ್ರೀತನಾಗಿ ಅವನನ್ನು ಕುರಿತು ಈ ರೀತಿ ಹೇಳಿದನು.

೨-೩. ಇಂದ್ರದ್ಯುಮ್ನನು ಹೇಳುತ್ತಾನೆ:—ಭೋ ಭಗವನ್! ವಿದ್ವಾಂಸರು ಸಾಧು ಸಮಾಗಮದಿಂದ ಭವರೋಗವು ನಾಶವಾಗುತ್ತದೆಯೆಂದು ನನಗೆ ಉಪದೇಶಮಾಡಿದ್ದುದು ಇದೀಗ ಸತ್ಯವಾಯಿತು. ಪರಮಾತ್ಮನೂ, ಪರಾತ್ಪರನೂ ಆದ ಶ್ರೀಮನ್ನಾರಾಯಣನನ್ನೇ ಸಾಕ್ಷಾತ್ಕರಿಸಿಕೊಂಡಿರುವ ನೀನು ನನ್ನ ಮಂದಿರಕ್ಕೆ ಚಿತ್ತೈಸಿರುವೆ. ನಿನಗಿಂತಲೂ ಸಾಧುವದಾರು?

೪. ಭೋ ಭಗವನ್! ನಿನ್ನ ಸನ್ನಿಧಾನದಿಂದ ನನ್ನ ಅಜ್ಞಾನವೆಲ್ಲವೂ ನಾಶವಾಯಿತು. ಇದೀಗ ನನ್ನ ಮನಸ್ಸು ನನ್ನನ್ನು ಶ್ರೀಮನ್ನೀಲಮಾಧವನ ಅರ್ಚನೆಗಾಗಿ ತ್ವರೆಗೊಳಿಸುತ್ತಿರುವುದು.

೫. ಎಲೈ ಮಹರ್ಷಿಯೇ! ನೀನು ಸ್ವರ್ಗಮರ್ತ್ಯಪಾತಾಳಾದಿ ಸಮಸ್ತ

ತತ್ರ ತೀರ್ಥಾನಿ ಸಂತೀತಿ ಬಹುಭಿಃ ಕಥಿತಾನಿ ಮೇ ।
ತ್ವದ್ವಾಕ್ಯಾದ್ಯದಿ ಜಾನಾಮಿ ಭವೇಯುಃ ಸಫಲಾನಿ ಮೇ ॥ ೬ ॥
ನಾರದ ಉವಾಚ:—
ಹಂತ ತೇ ದರ್ಶಯಿಷ್ಯಾಮಿ ಕ್ಷೇತ್ರಂ ಕ್ಷೇತ್ರಸ್ಥಿತಾನಿ ಚ ।
ತೀರ್ಥಾನಿ ಶಕ್ತಿಶಂಭೂಶ್ಚ ಕ್ಷೇತ್ರಮಾಹಾತ್ಮ್ಯಮೇವ ಚ ॥ ೭ ॥
ಸಾಕ್ಷಾದ್ದ್ರಕ್ಷ್ಯಸಿ ದೇವೇಶಂ ಭಕ್ತಸ್ಯಾತ್ಮಸಮರ್ಪಕಂ ।
ತವಾನುಗ್ರಹತಃ ಶೀಘ್ರಂ ಚತುರ್ಧಾ ಸಂವ್ಯವಸ್ಥಿತಂ ।
ಯಸ್ಯ ಸಂದರ್ಶನಾನ್ಮರ್ತ್ಯೋ ಜಾಯತೇ ಭಕ್ತಿಭಾಜನಂ ॥ ೮ ॥
ಏವಂ ಕಥಾಂತೇ ತೌ ಪ್ರೀತಾವಹಃಕೃತ್ಯಂ ಸಮಾಪ್ಯ ಚ ॥ ೯ ॥
ಯಾತ್ರಾನುಕೂಲಂ ನಿರ್ಣೀಯ ಪಂಚಮ್ಯಾಂ ಬುಧವಾಸರೇ ।
ಜ್ಯೇಷ್ಠಕೃಷ್ಣೇತರೇ ಪಕ್ಷೇ ಪುಷ್ಯರ್ಕ್ಷೇ ಲಗ್ನ ಉತ್ತಮೇ ।
ಏಕತ್ರ ಶಯಿತೌ ರಾತ್ರಿಂ ನಿನ್ಯತುರ್ನೃಪನಾರದೌ ॥ ೧೦ ॥

---

ಲೋಕಗಳನ್ನೂ ಸಂಚರಿಸುವೆಯಾದುದರಿಂದ ಬ್ರಹ್ಮಾಂಡದ ವೃತ್ತಾಂತವನ್ನೇ ಬಲ್ಲವನಾಗಿರುವೆ. ಆದುದರಿಂದ ನಾವೀರ್ವರೂ ರಥವೇರಿ ಹೊರಟು ಪುರುಷೋತ್ತಮವೆಂದು ಹೆಸರಾದ ಕ್ಷೇತ್ರಕ್ಕೆ ಮಂಗಳಾಲಂಕಾರವಾಗಿರುವ ನೀಲ ಮಾಧವನನ್ನು ಸಂದರ್ಶಿಸೋಣ.

೬. ಎಲೈ ಮುನಿಯೇ! ಆ ಕ್ಷೇತ್ರದಲ್ಲಿ ಅನೇಕ ತೀರ್ಥಗಳಿರುವುವೆಂದು ಅನೇಕರು ನನಗೆ ಹೇಳಿದರು. ನಿನ್ನ ವಾಕ್ಯಗಳಿಂದಲೂ ಅವುಗಳನ್ನು ತಿಳಿಯುವೆನಾದರೆ ನಾನು ಕೇಳಿದುದೆಲ್ಲವೂ ಸಫಲವಾಗುವುದು.

೭. ನಾರದನು ಹೇಳುತ್ತಾನೆ:—ಮಹಾರಾಜ! ಬಹಳ ಸಂತೋಷ!! ನಾನು ನಿನಗೆ ಆ ಪುರುಷೋತ್ತಮ ಕ್ಷೇತ್ರವನ್ನೂ, ಆ ಕ್ಷೇತ್ರದಲ್ಲಿರುವ ತೀರ್ಥಗಳನ್ನೂ, ಶಕ್ತಿಶಂಕರರನ್ನೂ, ಕ್ಷೇತ್ರಮಾಹಾತ್ಮ್ಯವನ್ನೂ ತೋರಿಸುತ್ತೇನೆ.

೮. ನೀನು ಆ ಕ್ಷೇತ್ರದಲ್ಲಿ ಭಕ್ತರಿಗೆ ಆತ್ಮಸಮರ್ಪಣೆಯನ್ನೇ ಮಾಡುವ ದೇವದೇವೇಶ್ವರನನ್ನು ಸಾಕ್ಷಾತ್ತಾಗಿಯೇ ನೋಡುವೆ. ಯಾವಾತನ ಸಂದರ್ಶನದಿಂದ ಮಾನವನು ಭಕ್ತಿಭಾಜನನಾಗುತ್ತಾನೆಯೋ ಆ ಪರಮಾತ್ಮನು ನಿನ್ನನ್ನು ಜಾಗ್ರತೆಯಾಗಿ ಅನುಗ್ರಹಿಸಲೋಸುಗವೇ ತನ್ನನ್ನು ನಾಲ್ಕು ಮೂರ್ತಿಗಳನ್ನಾಗಿಮಾಡಿಕೊಂಡಿರುತ್ತಾನೆ.

೯–೧೧. ಹೀಗೆ ಮಾತನಾಡಿದ ಬಳಿಕ ಆ ಇಂದ್ರದ್ಯುಮ್ನನೂ, ನಾರದನೂ ಈರ್ವರೂ ಸುಪ್ರೀತರಾಗಿ ಹಗಲು ಮಾಡಬೇಕಾದ ಕೃತ್ಯಗಳೆಲ್ಲವನ್ನೂ ಮುಗಿಸಿ, ಯಾತ್ರೆಗೆ ಅನುಕೂಲವಾದ ಶುಭ ದಿನವನ್ನು ನಿರ್ಣಯಿಸಿ, ಜ್ಯೇಷ್ಠ ಶುಕ್ಲ

**ತತಃಪ್ರಭಾತೇ ವಿಮಲ ಇಂದ್ರದ್ಯುಮ್ನೋ ನೃಪೋತ್ತಮಃ ।**
**ಘೋಷಣಾಂ ಕಾರಯಾಮಾಸ ರಾಜ್ಯಸ್ಯ ಸಹ ಬಂಧುಭಿಃ ॥ ೧೧ ॥**
**ಯಥಾವಿಭವತಃ ಸೈನ್ಯೈರ್ನೀಲಾದ್ರಿಗಮನಂ ಪ್ರತಿ ।**
**ಯಾವಜ್ಜೀವಂ ತತ್ರ ವಾಸಂ ಕರಿಷ್ಯಾಮೋ ವಿನಿಶ್ಚಿತಂ ॥ ೧೨ ॥**
**ಯಾ ವೃತ್ತಿಃ ಕಲ್ಪಿತಾ ಯಸ್ಯ ಸ ತಯಾ ತತ್ರ ಜೀವತು ।**
**ರಾಜಾನಃ ಸಾವರೋಧಾಶ್ಚ ಸಾಮಾತ್ಯಾಃ ಸಪರಿಚ್ಛದಾಃ ॥ ೧೩ ॥**
**ರಥೈರ್ಗಜೈರ್ತುರಂಗೈಶ್ಚ ಕೋಶೈಃ ಸಹ ಪದಾತಿಭಿಃ ॥ ೧೪ ॥**
**ವ್ರಜಂತು ಸಜ್ಜಿತಾಸ್ತತ್ರ ಬ್ರಾಹ್ಮಣಾಃ ಸಾಗ್ನಿಹೋತ್ರಿಣಃ ।**
**ವಣಿಜಃ ಸಹ ಭಾಂಡೈಶ್ಚ ಸಪಣ್ಯಾಃ ಪಣ್ಯಜೀವಿನಃ ॥ ೧೫ ॥**
**ರಾಷ್ಟ್ರಕರ್ಮಣಿ ನಿಷ್ಣಾತಾಃ ಕುಶಲಾ ರಾಜವರ್ತ್ಮಸು ।**
**ಜ್ಯೋತಿರ್ವಿದೋ ನೃತ್ಯವಿದೋ ದಂಡನೀತೌ ಪ್ರವೀಣಕಾಃ ॥ ೧೬ ॥**
**ನೃತ್ಯಗಾಯನವಾದಿತ್ರಚತುರ್ವಿಧಸುಬುದ್ಧಯಃ ।**
**ಗಜವಾಜಿನರಾಣಾಂ ಚ ಭೈಷಜ್ಯೇ ಶಾಸ್ತ್ರ ಉತ್ತಮೇ ॥ ೧೭ ॥**

---

ಪಂಚಮಿಾ ಬುಧವಾರದ ದಿನ ಪುಷ್ಯ ನಕ್ಷತ್ರದ ಶುಭ ಲಗ್ನದಲ್ಲಿ ಒಂದೆಡೆಯಲ್ಲಿಯೇ ಮಲಗಿ ರಾತ್ರಿಯನ್ನು ಕಳೆದರು. ತರುವಾಯ ವಿಮಲವಾದ ಮಾರನೆಯ ದಿನ ಬೆಳಿಗ್ಗೆ ಇಂದ್ರದ್ಯುಮ್ನರಾಜನು ತನ್ನ ಬಂಧುಗಳೊಡಗೂಡಿದವನಾಗಿ ರಾಜ್ಯಕ್ಕೆಲ್ಲ ಈ ರೀತಿ ಘೋಷಣೆಯನ್ನು ಹೊರಡಿಸಿದನು.

೧೨–೧೫. "ನಮ್ಮ ವೈಭವಕ್ಕೆ ತಕ್ಕಂತೆ ಸೈನ್ಯಸಮೇತರಾಗಿ ನೀಲಾದ್ರಿಗೆ ಹೊರಟು ಯಾವಜ್ಜೀವವೂ ಅಲ್ಲಿಯೇ ವಾಸಮಾಡುವುದಾಗಿ ನಿಶ್ಚಯಿಸಿರುತ್ತೇವೆ. ಆದುದರಿಂದ ಯಾರಿಗೆ ಯಾವ ವೃತ್ತಿಯಿಂದ ಜೀವನವೋ ಅದೇ ವೃತ್ತಿಯನ್ನು ಅಲ್ಲಿಯೇ ಮಾಡಿಕೊಂಡು ಜೀವಿಸಲಿ. ರಾಜರೆಲ್ಲರೂ ಅಂತಃಪುರಗಳೊಡನೆಯೂ, ಮಂತ್ರಿಪುರೋಹಿತಾದಿಗಳೊಡನೆಯೂ, ರಥಗಜತುರಗಗಳೊಡನೆಯೂ, ಕೋಶಗಳೊಡನೆಯೂ, ಪದಾತಿಗಳೊಡನೆಯೂ ಸರ್ವಸಿದ್ಧರಾಗಿ ಅಲ್ಲಿಗೆ ಹೊರಡಲಿ. ಬ್ರಾಹ್ಮಣರೆಲ್ಲರೂ ಅಗ್ನಿಹೋತ್ರಗಳೊಡನೆಯೂ, ವೈಶ್ಯರು ಅಂಗಡಿಗಳೊಡನೆಯೂ, ಮಾರುವಿಕೆಯಿಂದ ಜೀವಿಸುವವರು ಮಾರಾಟದ ಸಾಮಗ್ರಿಗಳಿಂದಲೂ ಕೂಡಿದವರಾಗಿ ಹೊರಡಲಿ.

೧೬–೧೭. ರಾಜಕಾರ್ಯಗಳಲ್ಲಿ ನಿಷ್ಣಾತರೂ, ರಾಜಬೀದಿಗಳ ನಿರ್ಮಾಣದಲ್ಲಿ ಕುಶಲರೂ, ಜ್ಯೋತಿಶ್ಶಾಸ್ತ್ರವೇತ್ತರೂ, ನೃತ್ಯಜ್ಞರೂ, ದಂಡನೀತಿನಿಪುಣರೂ, ನೃತ್ಯಗಾಯನಗಳಲ್ಲಿಯೂ, ವೀಣಾವೇಣುಮೃದಂಗಕಾಂಸ್ಯಾದಿ ವಾದ್ಯಗಳಲ್ಲಿ ವಾದನಗಳಲ್ಲಿ ಪಂಡಿತರೂ, ಗಜತುರಗಮಾನವವೈದ್ಯಶಾಸ್ತ್ರಗಳಲ್ಲಿ ನುರಿತವರೂ ನನ್ನೊಡನೆ ನೀಲಾಚಲಕ್ಕೆ ಹೊರಡುವವರಾಗಲಿ.

ಕುಶಲಾ ಉಷ್ಟಕರ್ಮಾಣಃ ವಿದ್ಯಾಸ್ವಷ್ಟಾದಶಸ್ವಪಿ ।
ಉಪಾಂಗವಿದ್ಯಾಸು ತಥಾ ಕುಹಕಾರ್ಥಕುತೂಹಲಾಃ ॥ ೧೮ ॥
ವಾಟಸಾಹಸಿಕಾಶ್ಚೋರಾಸ್ತಥಾನ್ಯೇ ಪಶ್ಯತೋಹರಾಃ ।
ವಿಚಿತ್ರಕಥನಾ ಜೀವಾಶ್ಚಾಟುಕಾರಾಶ್ಚ ಮಾಗಧಾಃ ॥ ೧೯ ॥
ಶಾಸ್ತ್ರೋಪಜೀವಿನಶ್ಚೈವ ತಥಾನ್ಯೇ ಶಲ್ಯಹಾರಕಾಃ ।
ದ್ಯೂತಕಾರಾಶ್ಚ ಪುಂಶ್ಚಲ್ಯೋ ವೇಶ್ಯಾ ವೇಶ್ಯಾನುಗಾ ವಿಟಾಃ ॥ ೨೦ ॥
ಕೃಷೀವಲಾಶ್ಚ ಗೋಮೇಷಚ್ಛಾಗೋಷ್ಟ್ರಖರರಕ್ಷಕಾಃ ।
ಶಕುಂತಪಾಲಾಶ್ಚ ಕಪಿವ್ಯಾಘ್ರಶಾರ್ದೂಲರಕ್ಷಕಾಃ ॥ ೨೧ ॥
ಅಹಿತುಂಡಿಕಗೋರಕ್ಷಶಬರಾ ಮ್ಲೇಚ್ಛಜಾತಯಃ ॥ ೨೨ ॥
ಅನ್ಯೇ ಚ ಯೇ ಮಾಲವದೇಶಜಾತಾ
ಆಜ್ಞಾಂ ಮದೀಯಾಮನುಪಾಲಯಂತಿ ।
ತೇ ಯಾಂತು ಸರ್ವೇ ವಸತೌ ಹಿ ನೀಲಾ
ಚಲೇ ಯಥಾ ಸ್ವಂ ಕೃತವಾಸ್ತುಭಾಗಾಃ ॥ ೨೩ ॥
ಏವಮಾಜ್ಞಾಪ್ಯ ನೃಪತಿರ್ಯಾತ್ರಾಯಾಂ ಚ ಕೃತಕ್ಷಣಃ ।
ನಾರದೇನ ಸಮಾಗಮ್ಯ ದೈವಜ್ಞಮಿದಮಾಹ ಸಃ ॥ ೨೪ ॥

---

೧೮–೨೦. ಅಗ್ನಿಕಾರ್ಯಗಳಲ್ಲಿಯೂ, ಅಷ್ಟಾದಶವಿದ್ಯೆಗಳಲ್ಲಿಯೂ, ಉಪಾಂಗವಿದ್ಯೆಗಳಲ್ಲಿಯೂ ಕುಶಲರಾಗಿ, ಕಾರ್ಯತತ್ವವನ್ನರಿತವರೂ, ಕುಹಕಾರ್ಥಗಳನ್ನು ಮಾಡಿ ನಗೆಯನ್ನೂ, ವಿನೋದವನ್ನೂ ಮಾಡುವುದರಲ್ಲಿ ಸಮರ್ಥರಾದವರೂ, ವಾಟಸಾಹಸಿಗಳಾದ (ಮನೆ ಮುರಿಯುವ) ಕಳ್ಳರೂ, ನೋಡುತ್ತಿರುವಂತೆಯೇ ದರೋಡೆಮಾಡುವವರೂ, ಚಿತ್ರವಿಚಿತ್ರಗಳಾದ ಕಥೆಗಳನ್ನು ಹೇಳಿ ಜೀವನಮಾಡುವವರೂ, ಬಿಲ್ಲುಗಾರರೂ, ದ್ಯೂತಕಾರರೂ, ಪುಂಶ್ಚಲಿಗಳೂ, ಸೂಳೆಯರೂ, ಸೂಳೆಯರ ಹಿಂದೆ ಬರುವ ವಿಟರೂ ಎಲ್ಲರೂ ಅಲ್ಲಿಗೆ ಬರಲಿ.

೨೧–೨೨. ರೈತಾಪಿ ಜನರೂ, ದನ, ಕುರಿ, ಮೇಕೆ, ಒಂಟೆ ಮುಂತಾದುವುಗಳನ್ನು ಮೇಯಿಸಿ ಪೋಷಣೆ ಮಾಡುವವರೂ, ಹಕ್ಕಿಗಳನ್ನು ಸಾಕುವವರೂ, ಕೋತಿ, ಹುಲಿ, ಸಿಂಹವೇ ಮೊದಲಾದ ದುಷ್ಟ ಪ್ರಾಣಿಗಳನ್ನು ಸಾಕುವವರೂ, ಹಾವಾಡಿಗರೂ, ಕೋತಿ ಬಸವನನ್ನಾಡಿಸುವವರು, ಗೋರಕ್ಷಕರೂ, ಶಬರರೂ ಮೊದಲಾದ ಇತರ ಮ್ಲೇಚ್ಛಜಾತಿಯವರೂ ಹೊರಡಲಿ.

೨೩. ಇಷ್ಟೆಯಲ್ಲದೆ, ಈ ನಮ್ಮ ಮಾಳವ ದೇಶದಲ್ಲಿ ನನ್ನ ಆಜ್ಞೆಯನ್ನು ಪಾಲಿಸುವವರೆಲ್ಲರೂ ಶ್ರೀ ನೀಲಾಚಲಪ್ರಾಂತ್ಯಕ್ಕೆ ಹೊರಟು ಅಲ್ಲಿ ಮನೆಗಳನ್ನು ಕಟ್ಟಿ ವಾಸಮಾಡತೊಡಗಲಿ.

೨೪. ಎಲೈ ವಿಪ್ರರೇ! ಈ ಪ್ರಕಾರವಾಗಿ ಆ ಇಂದ್ರದ್ಯುಮ್ನರಾಜನು

ಸಾಂವತ್ಸರ ಮುಹೂರ್ತಂ ಮೇ ನಿರ್ಣೀತಂ ತೇ ಯಥಾ ಪುರಾ ।
ತಾವನ್ಮಾಂಗಲಿಕಂ ವಸ್ತುಜಾತಂ ಸಮ್ಯಗುಪಾನಯ ।
ಪುರೋಹಿತಮತೇನಾಸ್ಮಿನ್ ಕ್ಷಣೇ ಯಾವದ್ವಿಮೃಗ್ಯತೇ ॥ ೨೫ ॥
ತೇನಾದಿಷ್ಟಃ ಸ ಗಣಕಃ ಪುರೋಹಿತಸಹಾಯವಾನ್ ॥ ೨೬ ॥
ಆಜಹಾರ ಸಮಸ್ತಾನಿ ಮಾಂಗಲ್ಯಾನಿ ದ್ವಿಜೋತ್ತಮಾಃ ।
ಅತ್ರಾಂತರೇ ಸ ರಾಜರ್ಷಿರ್ದಿವ್ಯಸಿಂಹಾಸನಸ್ಥಿತಃ ॥ ೨೭ ॥
ಯಾತ್ರಾಭಿಷೇಕಮಾಂಗಲ್ಯಂ ವಿಪ್ರೈಃ ಪ್ರಾಗನುಭಾವಿತಂ ।
ಶ್ರೀಸೂಕ್ತವಹ್ನಿಸೂಕ್ತಾಭ್ಯಾಂ ಸೂಕ್ತೇನಾಬ್ದೈವತೇನ ಚ ॥ ೨೮ ॥
ಪಾವಮಾನ್ಯಾದಿ ಸೂಕ್ತೇನ ಪೃಥಙ್ಮಾಂಗಲ್ಯವರ್ಧಕೈಃ ।
ತೀರ್ಥಾದ್ಭಿರೌಷಧೀಭಿಶ್ಚ ಸರ್ವಗಂಧೈಃ ಪೃಥಕ್ಪೃಥಕ್ ॥ ೨೯ ॥
ಅಭಿಷಕ್ತಸ್ತತೋ ರಾಜಾ ಚೀನಾಂಶುಕಹೃತಾಂಭಸಾ ।
ರರಾಜ ವಪುಷಾ ದೀಪ್ತೋ ನಿರ್ಧೂಮಃ ಪಾವಕೋ ಯಥಾ ॥ ೩೦ ॥
ಆಮುಕ್ತಶುಕ್ಲವಸನಃ ಸ್ವಚಾಂತಃ ಸಪವಿತ್ರಕಃ ।
ನಾಂದೀಮುಖಾನ್ ಪಿತೃಗಣಾನ್ಪೂಜಯಿತ್ವಾ ಯಥಾವಿಧಿ ॥ ೩೧ ॥

---

ನೀಲಾಚಲ ಯಾತ್ರೆಯ ವಿಚಾರದಲ್ಲಿ ಸರ್ವಸನ್ನದ್ಧನಾಗಿ ನಾರದನೊಡಗೂಡಿ ದೈವಜ್ಞನನ್ನು ಕುರಿತು ಈ ರೀತಿ ಹೇಳಿದನು.

೨೫. "ಎಲೈ ದೈವಜ್ಞನೇ ! ನೀನು ಈ ಮೊದಲೇ ನನ್ನ ಸಂವತ್ಸರಗಳನ್ನೂ, ಮುಹೂರ್ತವನ್ನೂ ನಿರ್ಣಯಿಸಿರುವಂತೆ ಅವುಗಳಿಗೆ ತಕ್ಕಂತೆ ಮಂಗಳ ವಸ್ತುಗಳೆಲ್ಲವನ್ನೂ ಉಚಿತವಾದ ರೀತಿಯಲ್ಲಿ ನಮ್ಮ ಪುರೋಹಿತನ ಅಭಿಮತದಂತೆ ಈ ಕ್ಷಣದಲ್ಲಿಯೇ ಚೆನ್ನಾಗಿ ಹುಡುಕಿ ತೆಗೆದುಕೊಂಡು ಬರುವವನಾಗು.

೨೬-೩೦. ಇಂದ್ರದ್ಯುಮ್ನರಾಜನೀರೀತಿ ಅಪ್ಪಣೆ ಮಾಡುತ್ತಲೇ ಆ ಗಣಕನು ಪುರೋಹಿತನ ಸಹಾಯದಿಂದ ಮಾಂಗಲ್ಯವಸ್ತುಗಳೆಲ್ಲವನ್ನೂ ತೆಗೆದುಕೊಂಡು ಬಂದನು. ಅದೇ ಸಮಯದಲ್ಲಿಯೇ ಆ ರಾಜರ್ಷಿಯು ದಿವ್ಯ ಸಿಂಹಾಸನಾಸೀನನಾಗಿ, ವಿಪ್ರರು ಮೊದಲೇ ನಿರೂಪಿಸಿದ್ದಂತೆ, ಮಾಂಗಲ್ಯ ವರ್ಧಕವಾದ ಶ್ರೀಸೂಕ್ತವಹ್ನಿಸೂಕ್ತಗಳಿಂದಲೂ, ವರುಣಸೂಕ್ತಗಳಿಂದಲೂ, ಪವಮಾನಸೂಕ್ತದಿಂದಲೂ ಬೇರೆ ಬೇರೆಯಾಗಿ ತೀರ್ಥೋದಕಗಳಿಂದಲೂ ಓಷಧಿಗಳಿಂದಲೂ, ಸಮಸ್ತ ಸುಗಂಧದ್ರವ್ಯಗಳಿಂದಲೂ ಯಾತ್ರಾಭಿಷೇಕವನ್ನು ಮಾಡಿಕೊಂಡನು. ಈ ಪ್ರಕಾರ ಯಾತ್ರಾಭಿಷಿಕ್ತನಾದ ಆ ಇಂದ್ರದ್ಯುಮ್ನರಾಜನು ಚೀನಾಂಶುಕವನ್ನುಟ್ಟು ಬೆಳಗುತ್ತಿರುವ ದೇಹವುಳ್ಳವನಾಗಿ ಹೊಗೆಯಿಲ್ಲದ ಅಗ್ನಿಯ ಜ್ವಾಲೆಯಂತೆ ಕಂಗೊಳಿಸಿದನು.

೩೧-೩೩. ಮುತ್ತಿನಂತೆ ಬಹು ಬೆಳ್ಳಗೆ ಶುಭ್ರವಾಗಿರುವ ವಸ್ತ್ರವನ್ನುಟ್ಟು

**ಜಯಾ ರಾಷ್ಟ್ರಭೃತೋ ಹುತ್ವಾ ಗಣಹೋಮಾಂಶ್ಚ ಯತ್ನತಃ ।**
**ಶಂಖಧ್ವನಿಸುಗಂಧಾಢ್ಯಂ ಶ್ವೇತವರ್ಣಂ ವಿಧೂಮಕಂ ॥ ೩೨ ॥**
**ವಹ್ನಿಂ ಪ್ರದಕ್ಷಿಣಂ ಚಕ್ರೇ ದಕ್ಷಿಣಾವರ್ತಗಾರ್ಚಿಷಾ ।**
**ಸಾಕ್ಷಾತ್ಕಾರೇಣ ದದತಂ ಜಯಂ ರಾಜ್ಞೇ ಜಯಾರ್ಥಿನೇ ॥ ೩೩ ॥**
**ನವಗ್ರಹಮುಖಾಂತೇ ಚ ಗ್ರಹಕುಂಭೇನ ಸೇವಿತಃ ।**
**ಗ್ರಹಾಣಾಂ ದೌಷ್ಟ್ಯನಾಶಾಯ ಸೌಸ್ಥ್ಯಸ್ಯಾಪಿ ವಿವೃದ್ಧಯೇ ॥ ೩೪ ॥**
**ಜ್ಯೋತಿಶ್ಶಾಸ್ತ್ರೋದಿತೈರ್ಮಂತ್ರೈರ್ದೈವಜ್ಞವಿಧಿಚೋದಿತೈಃ ।**
**ತತೋ ಮಾಂಗಲ್ಯನೇಪಥ್ಯವಿಧಾನಮುಪಚಕ್ರಮೇ ॥ ೩೫ ॥**
**ಚೀನಾಂಶುಕಪ್ರಾವರಣೇ ವಿಧಾಯ ಕವಚಂ ನಿಜಂ ।**
**ಶಿರೋವೇಷ್ಟನಕಂ ಶುಭ್ರಂ ಸುರತ್ನಮುಕುಟೋಜ್ಜ್ವಲಂ ॥ ೩೬ ॥**
**ಸಾವತಂಸೇ ಶ್ರುತಿಯುಗೇ ರತ್ನಕುಂಡಲಭೂಷಿತೇ ।**
**ಗ್ರೈವೇಯಕಂ ಮಹಾರ್ಘಂ ತು ಹಾರಂ ತರಲಭೂಷಿತಂ ॥ ೩೭ ॥**

---

ಆಚಮನ ಮಾಡಿದ ಬಳಿಕ ಆ ರಾಜೇಂದ್ರನು ಪವಿತ್ರಧಾರಣೆ ಮಾಡಿದವನಾಗಿ ನಾಂದೀಮುಖರಾದ ಪಿತೃಗಣಗಳನ್ನು ಯಥಾಶಾಸ್ತ್ರವಾಗಿ ಪೂಜಿಸಿ, ರಾಷ್ಟ್ರ ಸಂರಕ್ಷಕಿಯರಾದ ಜಯಾದಿಗಳಿಗೂ ಆಹುತಿಗಳನು ಕೊಟ್ಟು ಹೋಮಮಾಡಿ, ಗಣಹೋಮಗಳನ್ನೆಸಗಿದ ಬಳಿಕ ಶಂಖಧ್ವನಿಗೈಯುತ್ತ ಸುಗಂಧಭೂಯಿಷ್ಠವಾಗಿ ಹೊಗೆಯಿಲ್ಲದೆ ಬೆಳ್ಳನೆಯ ಜ್ವಾಲೆಗಳಿಂದ ಬೆಳಗುತ್ತಿರುವ ಪ್ರದಕ್ಷಿಣಾಕಾರವಾದ ಜ್ವಾಲೆಯಿಂದ ಸಾಕ್ಷಾತ್ಕರಿಸಿ, ಜಯವನ್ನಾಶಿಸುತ್ತಿರುವ ತನಗೆ ಜಯಾಶೀ ರ್ವಾದವನ್ನೀಯುತ್ತಿರುವ ಆ ಯಜ್ಞೇಶ್ವರನಿಗೆ ಪ್ರದಕ್ಷಿಣೆಯನ್ನು ಮಾಡಿದನು.

೩೪–೩೫. ಇದಾದ ತರುವಾಯ ಆ ಮಹಾರಾಜನು ಗ್ರಹಗಳ ದೌಷ್ಟ್ಯ ನಾಶನಕ್ಕಾಗಿಯೂ, ಅವುಗಳಿಂದ ಸ್ವಾಸ್ಥ್ಯವು ವರ್ಧಿಸಲೋಸುಗವೂ ಜೋಯಿ ಸರು ನುಡಿದ ಜ್ಯೋತಿಶ್ಶಾಸ್ತ್ರೋಕ್ತವಾದ ಮಂತ್ರಗಳಿಂದ ನವಗ್ರಹ ಹೋಮವನ್ನು ಮಾಡಿದ ಬಳಿಕ ನವಗ್ರಹಕಳಶೋದಕದಿಂದ ಸೇವಿತನಾದನು. ಆ ಬಳಿಕಲಾತನು ಮಂಗಳಾಲಂಕಾರವನ್ನು ಮಾಡಿಕೊಳ್ಳಲಾರಂಭಿಸಿದನು.

೩೬–೩೮. ಚೀನಾಂಬರವನ್ನುಟ್ಟು, ಕವಚವನ್ನು ತೊಟ್ಟು, ಶುಭ್ರವಾದ ರುಮಾಲನ್ನಿಟ್ಟು, ಒಳ್ಳೆಯ ರತ್ನಗಳು ಕೆತ್ತಿದ ಕಿರೀಟವನ್ನು ಧರಿಸಿ, ಭೂಷಣ ಪ್ರಾಯವಾದ ಕಿವಿಗಳಿಗೆ ರತ್ನಕುಂಡಲಗಳನ್ನಲಂಕರಿಸಿ, ಆ ತರುವಾಯ ಕಂಠಾಭ ರಣವನ್ನೂ, ತರಲಭೂಷಿತವಾದ ಮುಕ್ತಾಹಾರಗಳನ್ನೂ ಧರಿಸಿ, ಕೇಯೂರ ಗಳನ್ನೂ, ಅಂಗದಗಳನ್ನೂ, ಸಿಂಗರಿಸಿಕೊಂಡ ಬಳಿಕ ಬೆರಳುಗಳಿಗೆ ಉಂಗುರ

ದಧಾರಾಥ ನೃಪಶ್ರೇಷ್ಠಃ ಕೇಯೂರಾಂಗದಮುದ್ರಿಕಾಃ ।
ಮಧ್ಯೇನ ತ್ರಿವಲೀಸಕ್ತಂ ಸ್ವರ್ಣಸೂತ್ರಂ ತ್ರಿವೃದ್ದಧೌ ॥ ೩೮ ॥
ಹಿರಣ್ಯಕಿಂಕಿಣೀಯುಕ್ತಂ ಮುಕ್ತಾತೋರಣಮಾಲಿಕಂ ।
ನಾನಾರತ್ನೈಃ ಸುಘಟಿತಾಂ ದಧಾರಾಥ ಸುಮೇಖಲಾಂ ॥ ೩೯ ॥
ಅನರ್ಘ್ಯೇ ಪಾದಕಟಿಕೇ ಪಾದಯೋಃ ಸಂನ್ಯವೇಶಯತ್ ।
ಸಮ್ಮುಖಾದರ್ಶಿತಾದರ್ಶೇ ದದೃಶೇ ಸ್ವಂ ವಿಭೂಷಿತಂ ॥ ೪೦ ॥
ಮಂಗಲಾರೋಪಣಾರ್ಥಾಯ ಹ್ಯುಪವಿಷ್ಟಮುಪಾವಿಶತ್ ।
ಪ್ರಾಙ್ಮುಖಃ ಶ್ರೀಧರಂ ದೇವಂ ಸಂಸ್ಮರನ್ಮಧುಸೂದನಂ ॥ ೪೧ ॥
ಮಂಗಲಾಯತನಂ ವಿಷ್ಣುಂ ಸರ್ವಮಾಂಗಲ್ಯಕಾರಣಂ ।
ಸ್ಮರಣಾದಸ್ಯ ನಶ್ಯಂತಿ ಪಾತಕಾನಿ ಬಹೂನ್ಯಪಿ ॥ ೪೨ ॥
ಸೌಮನಸ್ಯಾಮೃತೋಃ ಮಾಲಾಮಾರ್ತವೀಂ ಗಂಧವರ್ಣಿತಾಂ ।
ದಧಾರ ಪ್ರಥಮಂ ರಾಜಾ ಮಂತ್ರಿತಾಂ ಸ್ವಪುರೋಧಸಾ ॥ ೪೩ ॥
ಮೃದಂ ದೀಪಂ ಫಲಂ ದೂರ್ವಾದಧಿಗೋರೋಚನಾಂ ತತಃ ।
ಮಂತ್ರಾಭಿಮಂತ್ರಿತಾನ್ಸರ್ವಾನ್ಸಿದ್ಧಾರ್ಥೈರಭಿರಕ್ಷಿತಃ ॥ ೪೪ ॥

ಗಳನ್ನಿಟ್ಟುಕೊಂಡು, ನಡುವಿಗೆ ಮೂರು ಸುತ್ತಿನ ಸ್ವರ್ಣದ ಉಡೆನೂಲನ್ನು ಸುತ್ತಿಕೊಂಡನು.

೩೯–೪೦. ಇದಾದ ಬಳಿಕ ಚಿನ್ನದ ಕಿರುಘಂಟೆಗಳಿಂದ ಸಿಂಗರವಾಗಿ ಮುತ್ತಿನ ತೋರಣದ ಮಾಲಿಕೆಯನ್ನು ಧರಿಸಿ, ಬಗೆಬಗೆಯ ರತ್ನಗಳು ಕೆತ್ತಿದ ಒಡ್ಯಾಣವನ್ನಿಟ್ಟಬಳಿಕ, ಅಮೂಲ್ಯವಾದ ಪಾದುಕೆಗಳನ್ನು ಮೆಟ್ಟಿದನು. ಸಮ್ಮುಖದವರು ತೋರಿದ ಕನ್ನಡಿಯಲ್ಲಿ ಈ ರೀತಿ ಅಲಂಕರಿಸಿಕೊಂಡ ತನ್ನನ್ನು ನೋಡಿಕೊಂಡನು.

೪೧. ಆಮೇಲೆ ಆ ರಾಯನು ಮಂಗಳಾಶೀರ್ವಾದವನ್ನು ಕೈಕೊಳ್ಳಲೋಸುಗ ಮಧುಸೂದನನಾದ ಶ್ರೀಧರನನ್ನೇ ಮನಸಾ ಸ್ಮರಿಸುತ್ತ ಪೂರ್ವಾಭಿಮುಖನಾಗಿ ಸಿಂಹಾಸನದ ಮೇಲೆ ಕುಳಿತುಕೊಂಡನು.

೪೨. ಎಲೈ ವಿಪ್ರರೇ! ಮಂಗಳಗಳಿಗೆ ಆಯತನಸ್ವರೂಪನಾಗಿ, ಸಮಸ್ತ ಸನ್ಮಂಗಳಗಳಿಗೂ ಕಾರಣನಾಗಿರುವ ಶ್ರೀಮನ್ಮಹಾವಿಷ್ಣುವನ್ನು ಸ್ಮರಿಸಿದುದರಿಂದ ಆತನ ಅನೇಕ ಪಾತಕಗಳೆಲ್ಲವೂ ನಾಶವಾದವು.

೪೩. ಬಳಿಕ ಆ ಇಂದ್ರದ್ಯುಮ್ನರಾಜನು ತನ್ನ ಪುರೋಹಿತನು ಆ ಋತುವಿನಲ್ಲಿ ದೊರಕುವ ಪುಷ್ಪಗಳಿಂದ ಕಟ್ಟಿ ಸುವಾಸಿತವಾದ ಮಾಲಿಕೆಯನ್ನು ಮಾಂಗಲ್ಯಮಂತ್ರಗಳಿಂದ ಮಂತ್ರಿಸಿ ಕೊಡಲು ಅದನ್ನು ಮೊದಲು ಧರಿಸಿದನು.

೪೪–೪೯. ತರುವಾಯ ಮಂತ್ರಾಭಿಮಂತ್ರಿತವಾದ ಮೃತ್ತಿಕೆ, ದೀಪ,

ಆತ್ಮಾನಂ ದದೃಶೇ ರಾಜಾ ಸೌರಭೇಯೀ ಹವಿಷ್ಯಥ ।
ಮುಕುರೇ ಮಂತ್ರಿತೇ ಪಶ್ಚಾತ್ಸ್ವಂ ದೃಷ್ಟ್ವಾ ನೃಪಕೇಸರೀ ॥ ೪೫ ॥
ಬಹ್ವೃಚೈಃ ಶಾಂತಿಘೋಷೇಣ ಸಮುದೀರ್ಣಶುಭಾಯತಿಃ ।
ಯಾಜುಷ್ಕೈಃ ಪಥಿಸೂಕ್ತೇನ ವ್ರಜನ್ಮಾರ್ಗೇಽಭಿರಕ್ಷಿತಃ ॥ ೪೬ ॥
ಪೌರಾಣೈರ್ಮಂಗಲೈರ್ವಾಕ್ಯೈಃ ಕೃತವೀರ್ಯಧೃತಿರ್ನೃಪಃ ।
ಮಾಗಧೈಃ ಸ್ತುತಿಪಾಠೇನ ಪ್ರಾದುರ್ಭೂತಪರಾಕ್ರಮಃ ॥ ೪೭ ॥
ಪಾರಿಜಾತಹರಂ ಸತ್ಯಾಸಹಿತಂ ಗರುಡಧ್ವಜಂ ।
ಧ್ಯಾಯನ್ಹೃತ್ಪಂಕಜೇ ರಾಜಾ ದಕ್ಷಿಣಂ ಪಾದಮುದ್ದಧೌ ॥ ೪೮ ॥
ಪ್ರದಕ್ಷಿಣೀಕೃತ್ಯಮುನಿಂ ನಾರದಂ ಪುರತಃ ಸ್ಥಿತಂ ।
ಮಧ್ಯದ್ವಾರಮುಪಾಗಚ್ಛದ್ವೇತ್ರಪಾಣಿಭಿರಾವೃತಃ ॥ ೪೯ ॥
ಆದಿಷ್ಟಪದಮಾರ್ಗೋಽಸಾವಗ್ನಿಹೋತ್ರಪುರಃಸರಃ ।
ತತ್ರಾಪಶ್ಯತ್ಸ್ಥಿತಾನ್ವಿಪ್ರಾನಾತ್ಮನೋ ದಕ್ಷಿಣೇನ ವೈ ॥ ೫೦ ॥
ಮಾಂಗಲ್ಯಸೂಕ್ತಂ ಪಠತಃ ಶುಭ್ರಾಭಾನ್ಪಾಂಡುರಾಂಶುಕಾನ್ ।
ಲಾಜಾಃ ಸಪುಷ್ಪಾ ರಾಜಾಗ್ರೇ ಕ್ಷಿಪತಃ ಶಂಸತಃ ಶುಭಂ ॥ ೫೧ ॥

---

ಫಲ, ಗರಿಕೆ, ಮೊಸರು, ಗೋರೋಚನ ಮುಂತಾದ ಮಂಗಳ ದ್ರವ್ಯಗಳೆಲ್ಲವನ್ನೂ ಸ್ಪರ್ಶಿಸಿದನು. ಆಮೇಲೆ ಆತನು ಆಕಳ ತುಪ್ಪದಲ್ಲಿಯೂ, ಮಂತ್ರಪೂತವಾದ ಮುಕುರದಲ್ಲಿಯೂ ತನ್ನನ್ನು ನೋಡಿಕೊಂಡನು. ಇದಾದ ಬಳಿಕ ಅನೇಕ ಋಕ್ಕುಗಳುಳ್ಳದುದಾಗಿ ಯಜುರ್ವೇದಿಗಳಿಂದ ಪಠಿತವಾದ ಪಥಿಸೂಕ್ತಗಳ ಶಾಂತಿಘೋಷಗಳಿಂದ ತಾನು ನಡೆಯುವ ಮಾರ್ಗದಲ್ಲಿ ಅಭಿರಕ್ಷಿತನಾಗಿ, ಪುರಾಣೋಕ್ತವಾದ ಮಂಗಳವಾಕ್ಯಗಳಿಂದ ವೀರ್ಯಧೈರ್ಯಗಳಿಂದ ವರ್ಧಿತನಾದ ಆ ಭೂಪಾಲನು, ಮಾಗಧರು ಸ್ತುತಿಪಾಠವನ್ನು ಹೇಳುತ್ತಿರಲು, ಪರಾಕ್ರಮವುಕ್ಕಿ ಬರುತ್ತಿರಲು, ಪಾರಿಜಾತಾಪಹಾರಕನೂ, ಸತ್ಯಭಾಮಾಸಹಿತನೂ, ಗರುಡವಾಹನನೂ ಆದ ಶ್ರೀ ಹರಿಯನ್ನೇ ತನ್ನ ಹೃದಯಪಂಜರದಲ್ಲಿ ಧ್ಯಾನಮಾಡುತ್ತ ಮೊದಲು ಬಲಗಾಲನ್ನು ಮುಂದಿಟ್ಟನು. ಆ ದೊರೆಯು ತನ್ನ ಮುಂಗಡೆಯಿದ್ದ ನಾರದ ಮುನಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಕಟ್ಟಿಗೆಯವರಿಂದ ಸುತ್ತು ಬಳಸಿದವನಾಗಿ ಅರಮನೆಯ ನಡುಬಾಗಿಲಿಗೆ ಬಂದನು.

೫೦–೫೧. ಸಮ್ಮುಖದವರು ದಾರಿ ತೋರುತ್ತಿರಲು ಆ ದೊರೆಯು ಅಗ್ನಿಹೋತ್ರಪುರಸ್ಸರನಾಗಿ ಮುಂದೆ ನಡೆದುಬಂದು ತನಗೆ ಬಲಗಡೆಯಲ್ಲಿಯೇ ಶುಭ್ರವಾದ ಬೆಳಮುಡಿಯನ್ನು ಹೊದ್ದು ಮಂಗಳಸೂಕ್ತಗಳನ್ನು ಹೇಳುತ್ತ ಅರಳು, ಹೂವುಗಳನ್ನು ತನ್ನ ಮೇಲೆರಚಿ ಶುಭಾಶೀರ್ವಾದವನ್ನು ಹೇಳುತ್ತಿರುವ ವಿಪ್ರರನ್ನು ಕಂಡನು.

ವಾಮಪಾರ್ಶ್ವಸ್ಥಿತಾ ವೇಶ್ಯಾಶ್ಚಾಮರವ್ಯಗ್ರಪಾಣಯಃ ।
ಶುಭ್ರಾಲಂಕಾರವಸನಾಃ ಸ್ಮೇರಪದ್ಮಾನನಾಃ ಶುಭಾಃ ॥ ೫೨ ॥
ಬ್ರಾಹ್ಮಣಾನ್ಪೂಜಯಾಮಾಸ ಭಕ್ತಿನಮ್ರೋ ದ್ವಿಜೋತ್ತಮಾಃ ।
ವಸ್ತ್ರಾಲಂಕಾರಮಾಲ್ಯೈಶ್ಚ ಸುಗಂಧೈರನುಲೇಪನೈಃ ॥ ೫೩ ॥
ತೋಷಯಾಮಾಸ ತಾನ್ವಿಪ್ರಾನ್ಭಗವದ್ಭಕ್ತಿಭಾವಿತಾನ್ ।
ವೇಶ್ಯಾಭ್ಯೋ ಮಾಗಧೇಭ್ಯಶ್ಚ ದೀನಾನಾಥೇಭ್ಯ ಏವ ಚ ।
ರಾಜಾನುಮತ್ಯಾ ಸಚಿವೋ ಯಥಾರ್ಹಂ ಪ್ರದದೌ ಧನಂ ॥ ೫೪ ॥
ಶ್ವೇತಾನ್ಪಾರಾವತಾನ್ಹಂಸಾಂಶ್ಚ್ವೇತಾಶ್ವಂ ಶ್ವೇತಕುಂಜರಂ ॥ ೫೫ ॥
ಸಚೂತಪಲ್ಲವಂ ಶ್ವೇತಮಾಲಾಫಲವಿಭೂಷಿತಂ
ಕದಲೀಕಾಂಡಸನ್ನದ್ಧತೋರಣಾಧಃಸ್ಥಿತಂ ನೃಪಃ ।
ಪೂರ್ಣಕುಂಭಂ ಸ ಪಶ್ಯನ್ವೈ ಮಂಗಲಾನಿ ಬಹೂನ್ಯಪಿ
ಸಿತಾತಪತ್ರೇಣ ಶಿರಃಪ್ರದೇಶೇ ವಾರಿತಾತಪಃ ॥ ೫೬ ॥
ಯುಗಪತ್ಪೂರ್ಯಮಾಣೈಸ್ತು ಕಂಬುಭಿಃ ಶತಸಂಖ್ಯಕೈಃ ।
ಸಂಮಿಶ್ರಿತಾನಿ ಶುಶ್ರಾವ ವಾದಿತ್ರಾಣಿ ಬಹೂನಿ ಸಃ ॥ ೫೭ ॥

---

೫೨. ಎಡಗಡೆಯಲ್ಲಿ ಶುಭ್ರಾಲಂಕಾರಭೂಷಿತೆಯರೂ, ಶುಭ್ರವಸ್ತ್ರಧಾರಿಣಿಯರೂ, ನಸುನಗೆಗೂಡಿ ಬೆಳಗುತ್ತಿರುವ ಮುಖಕಮಲಗಳುಳ್ಳವರೂ, ಚಾಮರಗಳನ್ನು ಹಿಡಿದಿರುವವರೂ ಆದ ವೇಶ್ಯೆಯರು ನಿಂತಿದ್ದರು.

೫೩–೫೪. ದೊರೆಯು ಆಗ ಭಕ್ತಿನಮ್ರನಾಗಿ ಆ ಬ್ರಾಹ್ಮಣೋತ್ತಮರನ್ನು ವಸ್ತ್ರಾಲಂಕಾರಮಾಲ್ಯಗಳಿಂದಲೂ, ಸುಗಂಧಾದ್ಯನುಲೇಪನಗಳಿಂದಲೂ ಪೂಜಿಸಿದನು. ಆತನಾ ಭಗವದ್ಭಕ್ತಿಭರಿತರಾದ ಬ್ರಾಹ್ಮಣರನ್ನು ಹೀಗೆ ಪಾರಿತೋಷಿಕಗಳಿಂದ ಸಂತೋಷಗೊಳಿಸಿದ ಬಳಿಕ ಮಂತ್ರಿಯು ವೇಶ್ಯೆಯರಿಗೂ, ವಂದಿಮಾಗಧರಿಗೂ, ದೀನರಿಗೂ ಅನಾಥರಿಗೂ ಅರಸನ ಅಪ್ಪಣೆಯಂತೆ ಅವರವರ ಯೋಗ್ಯತೆಗಳಿಗೆ ತಕ್ಕಂತೆ ಧನವನ್ನೂ ದಾನಮಾಡಿದನು.

೫೫–೫೭. ಆಗಲಾ ದೊರೆಯು ಬಿಳಿಯ ಪಾರಿವಾಳಗಳನ್ನೂ, ಹಂಸಗಳನ್ನೂ, ಬೆಳುಕುದುರೆಯನ್ನೂ, ಬಿಳಿಯಾನೆಯನ್ನೂ, ಮಾವಿನ ಚಿಗುರಿನೊಡಗೂಡಿ ಬಿಳಿಹೂಗಳಿಂದಲೂ, ಹಣ್ಣುಗಳಿಂದಲೂ ಅಲಂಕೃತವಾಗಿ, ಬಾಳೆಯ ಕಂಬಗಳಿಗೆ ಕಟ್ಟಿದ ತಳಿರುತೋರಣದ ಕೆಳಗೆ ಸ್ಥಾಪಿಸಿದ್ದ ಪೂರ್ಣಕುಂಭವನ್ನೂ, ಇತರ ಅನೇಕ ಮಂಗಳದ್ರವ್ಯಗಳನ್ನೂ ನೋಡುತ್ತ ಶಿರಃಪ್ರದೇಶದಲ್ಲಿ ರಂಜಿಸುತ್ತಿದ್ದ ಶ್ವೇತಚ್ಛತ್ರಿಯಿಂದ ನಿವಾರಿಸಲಾದ ಬಿಸಿಲುಳ್ಳವನಾಗಿ, ನೂರಾರು ಶಂಖಗಳು ಒಮ್ಮೆಲೇ ಮೊಳಗುತ್ತಿರಲು ಆ ನಡುವೆ ಅನೇಕ ವಾದಿತ್ರಗಳು ಸಂಮಿಶ್ರವಾಗುವಂತೆ ಧ್ವನಿಗೊಳಿಸಲ್ಪಡುತ್ತಿರಲು ಅವುಗಳನ್ನೂ, ಅಂತೆಯೇ ಮಂಗಲಗೀತ

**ತಥಾ ಮಂಗಲಗೀತಾನಿ ಜಯಶಬ್ದಾಂಶ್ಚ ಭೂಪತಿಃ ।**
**ತತೋ ವಿವೇಶ ಪ್ರಾಸಾದಂ ನೃಸಿಂಹಮವಲೋಕಿತುಂ ॥ ೫೮ ॥**
**ಯಂ ಸ್ಮೃತ್ವಾ ಜಯತೇ ಮರ್ತ್ಯಃ ಸರ್ವಕಲ್ಯಾಣಭಾಜನಂ ।**
**ದೃಷ್ಟ್ವಾ ಸ ದೂರಾನ್ನೃಹರಿಂ ದಿವ್ಯಸಿಂಹಾಸನಸ್ಥಿತಂ ॥ ೫೯ ॥**
**ಪ್ರಣಮ್ಯ ಸಾಷ್ಟಾಂಗಮಯಂ ಸಂತೋಷ್ಯೋಪನಿಷದ್ಗಿರಾ ।**
**ದಕ್ಷಪಾರ್ಶ್ವಸ್ಥಿತಾಂ ದುರ್ಗಾಂ ಸರ್ವದುರ್ಗತಿಮೋಚಿನೀಂ ॥ ೬೦ ॥**
**ವವಂದೇ ಚರಣಾಭ್ಯಾಶೇ ಪಶ್ಯಂತೀಂ ಕೃಪಯಾ ನೃಪಃ ।**
**ತತಃ ಪುರೋಧಾ ದೇವಾಂಗಾದವರೋಪ್ಯ ಶುಭಾಂ ಸ್ರಜಂ ।**
**ಆಸಂಜಯಾಮಾಸ ಗಲೇ ಸುಗಂಧೇನಾನ್ವಲೇಪಯತ್ ॥ ೬೧ ॥**
**ನೀರಾಜಯಾಮಾಸ ರಾಜ್ಞಃ ಶಿರಶ್ಚಾವೇಷ್ಟಯನ್ಮುದಾ ॥ ೬೨ ॥**
**ಪುನಃ ಪ್ರದಕ್ಷಿಣೀಕೃತ್ಯ ತೌ ದೇವೌ ನೃಪಸತ್ತಮಃ ।**
**ಶಿಬಿಕಾಯಾಂ ಸಮಾರೋಪ್ಯ ಪ್ರತಸ್ಥೇ ಚ ಪುರಸ್ಕೃತಃ ॥ ೬೩ ॥**
**ಪ್ರಾದುರ್ಭೂಯ ಬಹಿರ್ದ್ವಾರೇ ರಥಂ ದೃಷ್ಟ್ವಾ ಸುಸಜ್ಜಿತಂ ।**
**ತುರಂಗಮೈರ್ವಾತಜವೈರ್ದಶಭಿಃ ಪರಿಯೋಜಿತಂ ॥ ೬೪ ॥**

---

ಗಳನ್ನೂ, ಜಯಜಯಧ್ವನಿಗಳನ್ನೂ ಕೇಳುತ್ತ ಶ್ರೀನೃಸಿಂಹಮೂರ್ತಿಯನ್ನು ಸಂದರ್ಶಿಸಲೋಸುಗ ದೇವಾಲಯವನ್ನು ಪ್ರವೇಶಿಸಿದನು.

೫೯–೬೧. ಯಾವಾತನನ್ನು ಸ್ಮರಿಸಿದೊಡನೆಯೆ ಮಾನವನು ಸಮಸ್ತ ಕಲ್ಯಾಣಗಳಿಗೂ ಭಾಜನನಾಗುತ್ತಾನೆಯೋ, ಅಂತಹ ದಿವ್ಯಸಿಂಹಾಸನಾರೂಢ ನಾದ ನರಹರಿಯನ್ನೂ ದೂರದಿಂದಲೇ ಕಂಡು ಸಾಷ್ಟಾಂಗನಮಸ್ಕಾರವನ್ನು ಮಾಡಿ, ಉಪನಿಷದ್ವಾಕ್ಯಗಳಿಂದಾ ದೇವನನ್ನು ಸ್ತುತಿಸಿ, ಆ ಸ್ವಾಮಿಯ ದಕ್ಷಿಣ ಭಾಗದಲ್ಲಿ ಮಂಡಿಸಿದ್ದ ಸಕಲ ದುರ್ಗತಿಮೋಚಿನಿಯಾದ ಶ್ರೀದುರ್ಗಾದೇವಿಯನ್ನು ನೋಡಿ ಕೃಪೆಯಿಂದ ಅನುಗ್ರಹಿಸುತ್ತಿರುವ ಆಕೆಯ ಪಾದಗಳ ಸಮೀಪದಲ್ಲಿ ನಮಸ್ಕರಿಸಿದನು. ಆಗ ಪುರೋಹಿತನು ಸ್ವಾಮಿಯ ಕೊರಳಲ್ಲಿದ್ದ ಶುಭ ಪುಷ್ಪ ಮಾಲಿಕೆಯನ್ನು ತೆಗೆದು ಆ ದೊರೆಯ ಕೊರಳಿಗೆ ಹಾಕಿದನು.

೬೨–೬೩. ಆ ಪುರೋಹಿತನಿಂತು ಅರಸನ ಕೊರಳಿಗೆ ಪ್ರಸಾದಮಾಲಿಕೆ ಯನ್ನು ಹಾಕಿ ಪ್ರಸಾದಗಂಧದಿಂದ ಆತನಿಗೆ ಅವಲೇಪನಮಾಡಿ ಸಂತೋಷ ಭರಿತನಾಗಿ ಆತನ ಶಿರಸ್ಸಿಗೆ ನೀರಾಜನವನ್ನು ಬೆಳಗಿದನು. ನೃಪಸತ್ತಮನಾದ ಇಂದ್ರದ್ಯುಮ್ನನಾದರೋ ದುರ್ಗಾನೃಸಿಂಹರಿಗೆ ಪುನಃ ಪ್ರದಕ್ಷಿಣೆಮಾಡಿ ಆ ಈರ್ವರನ್ನೂ ಪಲ್ಲಕ್ಕಿಯಲ್ಲಿ ಬಿಜಮಾಡಿಸಿಕೊಂಡು ಹೊರಟನು.

೬೪–೬೮. ಆತನಿಂತು ಹೊರಗೆ ಬರುವ ವೇಳೆಗಾಗಲೇ ಹೊರಬಾಗಿಲಿನಲ್ಲಿ ವಾಯುವೇಗಗಳಾದ ಉತ್ತಮಾಶ್ವಗಳು ಹೂಡಿ ಸುಸಜ್ಜಿತವಾಗಿದ್ದ ರಥವನ್ನು

ಪ್ರದಕ್ಷಿಣೀಕೃತ್ಯ ನೃಪೋ ನಾರದೇನ ಸಮಾವಿಶತ್ ।
ಢಕ್ಕಾಮೃದಂಗನಿಃಸಾಣಭೇರೀಪಣವಗೋಮುಖಾಃ ॥ ೬೫ ॥
ಮಧುರೀಚರ್ಚರೀಶಂಖಾ ಅವಾದ್ಯಂತ ಸಹಸ್ರಶಃ ।
ಸ್ಯಂದನಾಃ ಕೋಟಿಶಸ್ತತ್ರ ನೃಪಾಣಾಮನುಜೀವಿನಾಂ ॥ ೬೬ ॥
ಚಕಾಶಿರೇ ಶ್ರೇಣೀಕೃತಾ ಇಂದ್ರದ್ಯುಮ್ನರಥಾಭಿತಃ ।
ನಾನಾಪ್ರಹರಣೋಪೇತಾಃ ಪತಾಕಾಭಿರಲಂಕೃತಾಃ ॥ ೬೭ ॥
ಧ್ವಜೋಚ್ಛ್ರಿತಾಃ ಸ್ವರ್ಣರೌಪ್ಯೈಃ ಕಿಂಕಿಣೀಜಾಲದರ್ಪಣೈಃ ।
ಯಂತ್ರೈರ್ನಾನಾವಿಧೈರ್ಯುಕ್ತಾ ಗಂಭೀರಸ್ನಿಗ್ಧನಿಃಸ್ವನಾಃ ॥ ೬೮ ॥
ಪದಾತೀನಾಂ ಕುಂಜರಾಣಾಂ ಹಯಾನಾಂ ವಾತರಂಹಸಾಂ ।
ಪತ್ತಿಸಂಸ್ಫೋಟನೈರ್ಹಸ್ತಿಬೃಂಹಿತೈರ್ಹಯಹೇಷಿತೈಃ ॥ ೬೯ ॥
ಬಹುಳೈರಥನಿರ್ಘೋಷೈರ್ಮಿಶ್ರಿತಾ ವಾದ್ಯನಿಃಸ್ವನಾಃ ।
ಯುಗಾಂತಾರ್ಣವನಿಃಸ್ವಾನತುಲ್ಯಾಃ ಶುಶ್ರುವಿರೇ ಜನೈಃ ॥ ೭೦ ॥
ತಸ್ಮಿನ್ ಕ್ಷಣೇ ಪೌರಜನಾಃ ಸ್ವಸ್ವಸಂಭಾರಸಜ್ಜಿತಾಃ ।
ಅಶ್ವೈಃ ಕೈರಾಸಭೈರುಷ್ಟ್ರೈರ್ವಾಹಕೈಃ ಪ್ರತಿತಸ್ಥಿರೇ ॥ ೭೧ ॥

---

ಕಂಡು ಅದಕ್ಕೆ ಪ್ರದಕ್ಷಿಣೆಯನ್ನು ಮಾಡಿ ದೇವಮುನಿಯಾದ ನಾರದನೊಡನೆ ಅದನ್ನೇರಿ ಕುಳಿತನು. ಆಗ ಢಕ್ಕೆ, ಮೃದಂಗ, ನಿಸ್ಸಾಣ, ಭೇರೀ, ಪಣವ, ಗೋಮುಖ, ಮಧುರೀ, ಚರ್ಚರೀ, ಶಂಖ ಮೊದಲಾದ ಸಾವಿರಾರು ವಾದ್ಯಗಳು ಭೋರ್ಗರೆದುವು. ಅರಸನನ್ನು ಹಿಂಬಾಲಿಸಿ ಹೊರಡಲನುವಾಗಿದ್ದ ಕೋಟ್ಯಂತರ ರಥಗಳು ಅಲ್ಲಿ ಸಾಲುಗಟ್ಟಿ ನಿಂತು ಬೆಳಗುತ್ತಿದ್ದುವು. ಅವುಗಳೆಲ್ಲವೂ ಇಂದ್ರದ್ಯುಮ್ನರಾಜನ ರಥವನ್ನು ಬಳಸಿ ನಿಂತಿದ್ದುವು. ಅನೇಕ ಆಯುಧಗಳಿಂದ ತುಂಬಿ, ಪತಾಕೆಗಳಿಂದಲಂಕೃತವಾಗಿ, ಧ್ವಜಗಳಿಂದ ಉನ್ನತವಾಗಿ, ಚಿನ್ನಬೆಳ್ಳಿಗಳ ಕಿರುಗೆಜ್ಜೆಗಳಿಂದಲೂ, ಕನ್ನಡಿಗಳಿಂದಲೂ, ವಿವಿಧ ಯಂತ್ರಗಳಿಂದಲೂ ಕೂಡಿ ಕಾಲಾಳುಗಳು, ಆನೆಗಳು, ವಾಯುವೇಗಶೀಲಗಳಾದ ಕುದುರೆಗಳು ಇವುಗಳ ಗಂಭೀರವೂ ಮಧುರವೂ ಆದ ಧ್ವನಿಯೊಡನಿದ್ದ ಆ ರಥಗಳು ಬಹು ರಮಣೀಯವಾಗಿದ್ದುವು.

೬೯–೭೦. ಪದಾತಿಗಳ ಆಸ್ಫೋಟನಧ್ವನಿಯೂ, ಆನೆಗಳ ಘೀಂಕಾರವೂ, ಕುದುರೆಗಳ ಹೇಷಾರವವೂ, ಅತ್ಯಧಿಕವಾದ ರಥನಿರ್ಘೋಷವೂ ಅದರೊಡಗೂಡಿದ ವಾದ್ಯನಿಸ್ವನವೂ ವೃದ್ಧಿಗೊಂಡು ಯುಗಾಂತದಲ್ಲಿ ಮೊರೆಯುವ ಸಮುದ್ರಧ್ವನಿಗೆಣೆಯಾಗಿ ಮೊರೆಯುತ್ತಿದ್ದುದನ್ನು ಅಲ್ಲಿದ್ದ ಜನರೆಲ್ಲರೂ ಕೇಳಿದರು.

೭೧. ಆ ಸಮಯದಲ್ಲಿಯೇ ಪಟ್ಟಣಿಗರು ತಂತಮ್ಮ ಸಂಭಾರಗಳೆಲ್ಲವನ್ನೂ

**ಆಂದೋಲಿಕಾಶ್ಚ ಪಲ್ಯಂಕಾಃ ಕೋಟಿಶಶ್ಚ ತುರಂಗಕಾಃ ।**
**ಶ್ರೇಣೀಭೂತಾಶ್ಚ ದೃಶ್ಯಂತೇ ರಾಷ್ಟ್ರಪ್ರಸ್ಥಾನಸಂಕುಲೇ ॥ ೭೨ ॥**
**ರಾಜಾವರೋಧಾಃ ಶತಶೋ ವೃತಾ ವರ್ಷವರ್ರೈಸ್ತತಃ ।**
**ನಾನಾಯಾನಸಮಾರೂಢಾಃ ಪಾಲಿತಾಶ್ಚಾಧಿಕಾರಿಭಿಃ ।**
**ಮಹಾಸೈನ್ಯೈಶ್ಚ ಸಂರುದ್ಧಾ ರಾಜಾಗಾರಾದ್ವಿನಿರ್ಯಯುಃ ॥ ೭೩ ॥**
**ಯಜ್ವಾನಾಶ್ಚಾಗ್ನಿಹೋತ್ರಾಣಿ ಶಮ್ಯಾರೂಢಾನಿವೃಂದಶಃ ॥ ೭೪ ॥**
**ಶಕಟೇಷು ಸಮಾರೋಪ್ಯ ಸಪತ್ನೀಕಾಃ ಪ್ರತಸ್ಥಿರೇ ।**
**ತಥಾ ಪುಸ್ತಕಭಾರಾಂಶ್ಚ ದೇವತಾರ್ಚಾಕರಂಡಕಾನ್ ॥ ೭೫ ॥**
**ಇಧ್ಮಾಬರ್ಹಿಕುಶಾನ್ಪತ್ರೀಃ ಸಂಭಾರಾನ್ಹೋಮಸಂಭೃತಾನ್ ।**
**ವಾಹಯಾಮಾಸುರನ್ಯೈಶ್ಚ ಶಕಟಾವಾಹಕದ್ವಿಜೈಃ ॥ ೭೬ ॥**
**ಸಾಮಂತಾಮಾತ್ಯಭೃತ್ಯಾಶ್ಚ ಪುರೋಧಾ ಋತ್ವಿಜಾಶ್ಚ ಯೇ ।**
**ರಾಜ್ಞಃ ಪ್ರಕೃತದಾಸಾಶ್ಚ ಉಪಚಾರನಿಯೋಗಿನಃ ॥ ೭೭ ॥**

---

ಕುದುರೆ, ಕತ್ತೆ, ಒಂಟೆ, ಬಂಡಿಗಳ ಮೇಲೆ ಹೇರಿಕೊಂಡು ಅರಸನನ್ನನುಸರಿಸಿ ಹೊರಟರು.

೭೨. ಹೀಗೆ ರಾಜ್ಯಕ್ಕೆ ರಾಜ್ಯವೇ ಪ್ರಯಾಣಬೆಳಸಿದ ಆ ಸಮಯದಲ್ಲಿ, ಡೋಲಿಗಳು, ಪಲ್ಲಕ್ಕಿಗಳು, ಕೋಟ್ಯಂತರ ಕುದುರೆಗಳು ಸಾಲುಗಟ್ಟಿ ಹೊರಟು ಸೊಗಸೊಗೆಯುತ್ತಿದ್ದುವು.

೭೩. ಅರಸನ ಅಂತಃಪುರದವರಾದರೋ ನಪುಂಸಕರನೇಕರಿಂದ ಸುತ್ತು ಬಳಸಿದವರಾಗಿ, ಬಗೆಬಗೆಯ ವಾಹನಗಳನ್ನೇರಿ ಅಧಿಕಾರಿಗಳಿಂದ ಸುರಕ್ಷಿತರಾಗಿ ಮಹಾಸೈನ್ಯದಿಂದ ಕೂಡಿದವರಾಗಿ ಅರಮನೆಯಿಂದ ಹೊರಟರು.

೭೪–೭೫. ಸೋಮಯಾಜಿಗಳು ತಮ್ಮ ಅಗ್ನಿಹೋತ್ರಗಳನ್ನು ಶಮೀಕಾಷ್ಠಗಳಲ್ಲಿ ಆರೋಪಣೆಮಾಡಿಕೊಂಡು ಗುಂಪುಗುಂಪಾಗಿ ಹೊರಟರು. ಅವರು ತಮ್ಮ ಕುಟುಂಬದವರನ್ನು ಬಂಡಿಗಳಲ್ಲಿ ಕುಳ್ಳಿರಿಸಿ, ಪುಸ್ತಕಗಳ ಹೊರೆಗಳನ್ನೂ ದೇವತಾರ್ಚನೆಯ ಪೆಟ್ಟಿಗೆಗಳನ್ನೂ ಅವುಗಳಲ್ಲಿಟ್ಟುಕೊಂಡು ಹೊರಟರು.

೭೬. ಆ ಬ್ರಾಹ್ಮಣೋತ್ತಮರು ಬ್ರಾಹ್ಮಣರೇ ಹೊಡೆಯುವ ಗಾಡಿಗಳಲ್ಲಿ ಯಾಗಯಜನಾದಿಗಳಿಗೆ ಉಪಯುಕ್ತವಾದ ಸಮಿತ್ತು, ದರ್ಭೆ, ಇತರ ಹೋಮ ಸಂಭಾರಗಳು ಮೊದಲಾದುವುಗಳೆಲ್ಲವನ್ನೂ ಸಾಗಿಸಿಕೊಂಡು ಪಯಣಿಸಿದರು.

೭೭–೮೦. ಸಾಮಂತರೂ, ಅಮಾತ್ಯರೂ, ಇವರ ಆಳುಗಳೂ, ಪುರೋಹಿತರು, ಋತ್ವಿಜರು, ರಾಜನ ಪರಿವಾರದಾಳುಗಳು, ಉಪಚಾರದವರು, ಇವರೆಲ್ಲರೂ ಸಮಸ್ತ ಉಪಚಾರಸಂಭಾರಗಳನ್ನು ಹವಣಿಸಿಕೊಂಡು ಮುಂದಾಗಿ ಹೊರಟರು. ಕೋಶಾಗಾರದ ಅಧಿಕಾರಿಗಳಾದರೋ ಹಣವೆಲ್ಲವನ್ನೂ ತೆಗೆದು

ಸರ್ವೋಪಚಾರಸಂಭಾರಾನಾಸತೋಽನ್ಯೇ ಪ್ರಯಾಯಿನಃ ।
ಕೋಷಾಗಾರನಿಯುಕ್ತಾಶ್ಚ ಕೋಷಜಾತಮಶೇಷತಃ ॥ ೭೮ ॥
ಸಮಾದಾಯ ಯಯುಸ್ತೂರ್ಣಂ ರಾಜ್ಞೋಽವಸರಸೇವಕಾಃ ।
ಮಾಲಾಕಾರಾದಯಃ ಸರ್ವೇ ಪಣ್ಯಜೀವಾದಯಸ್ತಥಾ ॥ ೭೯ ॥
ಸ್ವಂ ಸ್ವಂ ಪುಣ್ಯಂ ಸಮಾದಾಯ ಯಯೂ ರಾಜನಿಯೋಗಿನಃ ।
ಶ್ರೇಷ್ಠಶ್ರೇಣ್ಯಾದಯಃ ಸರ್ವೇ ಪುರಖರ್ವಟವಾಸಿಭಿಃ ॥ ೮೦ ॥
ಸಮಂ ವಿನಿರ್ಯಯುಃ ಸ್ವಸ್ವವ್ಯವಹಾರವಿಲಾಸಕಾಃ ।
ಇಂದ್ರದ್ಯುಮ್ನಸ್ಯ ನೃಪತೇರ್ಯಾತ್ರಾಸಮಯವಾದಿತಾನ್ ॥ ೮೧ ॥
ಭೇರೀಮೃದಂಗಪಟಹಾನ್ಶಙ್ಖವಾನಂ ದಿಗಂತರಂ ।
ಶ್ರುತ್ವಾ ಜನಪದಾವಾಸಿಜನಾಃ ಸರ್ವೇ ಸಸಂಭ್ರಮಾಃ ।
ರಾಜಾಜ್ಞಾಂ ಮೂರ್ಧ್ನಿ ಸಂಮಾನ್ಯ ನಿರ್ಗತಾ ನೀಲಪರ್ವತಂ ॥ ೮೨ ॥
ಯಸ್ಯ ಯಸ್ಯ ಋಜುಃ ಪಂಥಾಃ ಸ ಚ ತೇನೈವ ಜಗ್ಮಿವಾನ್ ॥ ೮೩ ॥
ನ ರಾಜಮಾರ್ಗಂ ಪ್ರಜವಾದ್ವ್ಯಮೃಗ್ಯಂತ ನೃಪಾಜ್ಞಯಾ ।
ನೀಲಾದ್ರಿಪ್ರಾಪ್ತಿಮಾರ್ಗೇಣ ದುರ್ಗಮೇಣಾಪಿ ತೇ ಯಯುಃ ॥ ೮೪ ॥

---

ಕೊಂಡು ಜಾಗ್ರತೆಯಾಗಿ ಹೊರಟರು. ಅಂತೆಯೇ ರಾಜನ ಅವಸರ ಸೇವಕರೂ ಹೊರಟರು. ಇವರಾದ ತರುವಾಯ ಹೂವಾಡಿಗರೂ, ಇತರ ಎಲ್ಲಾ ವ್ಯಾಪಾರಿಗಳೂ ತಂತಮ್ಮ ಅಂಗಡಿಗಳೊಡನೆ ಪ್ರಯಾಣಮಾಡಿದರು. ಅಂತೆಯೇ ಇತರ ರಾಜಾಧಿಕಾರಿಗಳು, ಪಟ್ಟಣದ ಶೆಟ್ಟರೇ ಮೊದಲಾದವರೂ, ಪಟ್ಟಣ ಹಳ್ಳಿಗಳಲ್ಲಿ ವಾಸಮಾಡುವವರೂ ತಂತಮ್ಮ ವ್ಯವಹಾರಗಳಲ್ಲಿ ಕುಶಲರಾದವರೂ ಎಲ್ಲರೂ ಹೊರಟರು.

೮೧–೮೨. ಅಯ್ಯಾ ವಿಪ್ರರೇ! ಇಂದ್ರದ್ಯುಮ್ನಮಹಾರಾಜನು ನೀಲಾದ್ರಿಗೆ ಪ್ರಯಾಣಮಾಡಿದ ಕಾಲದಲ್ಲಿ ಬಾಜಿಸಿದ ಭೇರೀ, ಮೃದಂಗ, ಪಟಹಧ್ವನಿಗಳು ದಿಗ್ದಿಗಂತರಗಳನ್ನಡರಲು ಮಾಳವರಾಜ್ಯದ ಗಡಿನಾಡಿನ ಜನರೆಲ್ಲರೂ ಸಹ ಆ ವಾದ್ಯಧ್ವನಿಗಳನ್ನು ಕೇಳಿದವರಾಗಿ ಬಹುಸಂಭ್ರಮಯುಕ್ತರಾಗಿ ರಾಜಾಜ್ಞೆಯನ್ನು ಶಿರಸಾವಹಿಸಿದವರಾಗಿ ಬಹುಮಾನ ಪೂರ್ವಕವಾದ ಬುದ್ಧಿಯಿಂದ ಎಲ್ಲರೂ ನೀಲಾಚಲಕ್ಕೆ ಹೊರಟರು.

೮೩–೮೪. ಅವರೆಲ್ಲರೂ ತಮ ತಮಗೆ ಯಾವ ಯಾವ ಮಾರ್ಗವು ಸರಿಯೆಂದು ತೋರಿದುದೋ ಆಯಾ ಮಾರ್ಗದಲ್ಲಿಯೇ ಹೊರಟರಲ್ಲದೆ, ಅರಸನ ಅಪ್ಪಣೆಯಿದ್ದುದರಿಂದ ಯಾರೂ ಜಾಗ್ರತೆಯಾಗಿ ಹೋಗಬೇಕೆಂದು ರಾಜಮಾರ್ಗವನ್ನು ಹಿಡಿಯಲಿಲ್ಲ. ಅವರು ಎಷ್ಟೇ ಕಷ್ಟವಾದರೂ ತಮ್ಮ ತಮ್ಮ ಹಾದಿಗಳನ್ನೇ ಹಿಡಿದು ನೀಲಾಚಲಕ್ಕೆ ಹೊರಟರು.

ಇಂದ್ರದ್ಯುಮ್ನೋಽಪಿ ರಾಜೇಂದ್ರಃ ಸಮಸ್ತಪುರವಾಸಿಭಿಃ ।
ಚತುರಂಗಾನೀಕಿನೀಭಿಃ ಸಹಷ್ಟಾಭಿಶ್ಚ ವೇಷ್ಟಿತಃ ॥ ೮೫ ॥
ಶ್ರೇಣೀಭೂತಕ್ಷಿತಿಪತಿಸ್ಯಂದನಾನಾಂ ಚ ಮಧ್ಯಗೇ ।
ರಥೇ ರರಾಜ ರಾಜರ್ಷಿಃ ಶಕ್ರತುಲ್ಯಪರಿಚ್ಛದಃ ॥ ೮೬ ॥
ಪುರಸ್ತ್ರೀಮಂಗಲಾಚಾರುಗೀತಲಾಜಪ್ರಸೂನಕೈಃ ।
ಮಂಗಲಾಚಾರಶೋಭಾಭಿಃ ಪ್ರಸನ್ನಶುಭಚೇತನಃ ॥ ೮೭ ॥
ವಾತರಂಹೈರ್ಹಯೈರ್ಯುಕ್ತರಥೇನ ಪ್ರಯಯೌ ಮುದಾ ।
ಅನುಕೂಲಾನಿಲ ಪ್ರೋದ್ಯದ್ಘನ ಚ್ಛಾಯಸುಶೀತಲೇ ॥ ೮೮ ॥
ನೀರಜಸ್ಕೇ ಮಹೀಪೃಷ್ಠೇ ಸಮೀಕೃತಚತುಷ್ಪಥೇ ।
ದೇಶಾಧ್ವನೀನೈಃ ಪುರುಷೈಃ ಕಾನನಾಂತರವೇದಿಭಿಃ ॥ ೮೯ ॥
ಆದಿಷ್ಟವರ್ತ್ಮಾ ನೃಪತಿರ್ಮಾರ್ಗಸ್ಯೋಭಯಪಾರ್ಶ್ವಗಾನ್ ।
ದೇಶಾನರಣ್ಯಾನಿ ಮುಹುಃ ಪಶ್ಯನ್ನಾನಂದಲೋಚನಃ ॥ ೯೦ ॥
ಸೀಮಾಮುತ್ಕಲದೇಶಸ್ಯ ವಿಭಜಂತೀಂ ವನಾಂತರೇ ।
ಮಾರ್ಗಸ್ಥಾಂ ಚರ್ಚಿಕಾಂ ಪ್ರಾಪ ಚರ್ಚಿತಾಂ ಮುಂಡಮಾಲಯಾ ॥೯೧॥

---

೮೫–೮೬. ರಾಜೇಂದ್ರನಾದ ಇಂದ್ರದ್ಯುಮ್ನನಾದರೋ ಸಂತುಷ್ಟರಾದ ಸಮಸ್ತಪಟ್ಟಣವಾಸಿಗಳಿಂದಲೂ, ಚತುರಂಗಬಲದಿಂದಲೂ ಪರಿವೃತನಾಗಿ, ಸಾಲುಗಟ್ಟಿ ಹೊರಟ ಸಾಮಂತರಾಜರ ರಥಗಳ ನಡುವೆ ತನ್ನ ರಥದಲ್ಲಿ ಮಂಡಿಸಿ ದೇವೇಂದ್ರ ಪರಿವಾರಕ್ಕೆಣೆಯಾದ ಪರಿವಾರವುಳ್ಳವನಾಗಿ ವಿರಾಜಿಸಿದನು.

೮೭. ಪುರಾಂಗನೆಯರ ಮಂಗಲಾಚಾರಗೀತಗಳಿಂದಲೂ, ಅರಳಕ್ಷತೆಗಳಿಂದಲೂ, ಹೂಗಳಿಂದಲೂ, ಮಂಗಲಾಚಾರಶೋಭೆಯಿಂದಲೂ ಸುಪ್ರಸನ್ನವಾದ ಶುಭಚಿತ್ತವುಳ್ಳವನಾದನು.

೮೮–೯೧. ಆ ದೊರೆಯು ವಾಯುವೇಗವುಳ್ಳ ಕುದುರೆಗಳು ಹೂಡಿದ ರಥದಲ್ಲಿ ಆನಂದವಾಗಿ ಪ್ರಯಾಣ ಹೊರಟು ಅನುಕೂಲವಾದ ಗಾಳಿಯು ಬೀಸಿ ಗಿಡಗಳ ನೆಳಲು ತಣ್ಣಗಿರಲು ಅದರಡಿಯಲ್ಲಿಯೇ ಧೂಳಿಲ್ಲದ, ಸಮವಾಗಿ ಮಾಡಿದ್ದ ಚೌಕಬೀದಿಯ ನೆಲದಲ್ಲಿ ಹೋಗುತ್ತ ದೇಶಗಳನ್ನೂ, ದಾರಿಗಳನ್ನೂ ಬಲ್ಲವರಾಗಿ, ಕಾಡುಮೇಡುಗಳನ್ನು ಚೆನ್ನಾಗಿ ತಿಳಿದಿರುವವರು ದಾರಿತೋರುತ್ತಿರಲು ಉಭಯ ಪಾರ್ಶ್ವಗಳಲ್ಲಿಯೂ ಅಲ್ಲಲ್ಲಿ ಸಿಕ್ಕಿದ ದೇಶಗಳನ್ನೂ, ಅರಣ್ಯಗಳನ್ನೂ, ಅಡಿಗಡಿಗೂ ನೋಡುತ್ತ ಆನಂದದಿಂದರಳಿದ ಕಂಗಳುಳ್ಳವನಾಗಿ ವನಾಂತರದಲ್ಲಿ ಉತ್ಕಲದೇಶದ ಗಡಿಯನ್ನು ವಿಭಜನೆಮಾಡುವೆಡೆಯ ಮಾರ್ಗದಲ್ಲಿ ಮುಂಡಮಾಲಾಲಂಕೃತೆಯಾದ ಚರ್ಚಿಕಾದೇವಿಯನ್ನು ಕಂಡನು.

**ಅವತೀರ್ಯ ರಥಾದ್ರಾಜಾ ವಿನತೋ ನಾರದಾಜ್ಞಯಾ ।**
**ಸಾಷ್ಟಾಂಗಪಾತಂ ತಾಂ ನತ್ವಾ ತುಷ್ಟಾವಾನಂದಚೇತನಃ ॥ ೯೨ ॥**

ಇಂದ್ರದ್ಯುಮ್ನ ಉವಾಚ:—

**ನಮಸ್ತೇ ತ್ರಿದಶೇಶಾನಿ ಸರ್ವಾಪದ್ವಿನಿವಾರಿಣಿ ।**
**ಬ್ರಹ್ಮವಿಷ್ಣುಶಿವಾದ್ಯಾಭಿಃ ಕಲ್ಪನಾಭಿರುದೀರಿತೇ ॥ ೯೩ ॥**
**ಕಾರಣಂ ಜಗತಾಮಾದ್ಯೇ ಪ್ರಸೀದ ಪರಮೇಶ್ವರಿ ।**
**ತ್ವಯಾ ವಿನಾ ಜಗನ್ನೈತತ್ ಕ್ಷಣಮುತ್ಸಹತೇ ಶಿವೇ ॥ ೯೪ ॥**
**ಸಿದ್ಧಯಃ ಸರ್ವಕಾರ್ಯಾಣಾಂ ಮಂಗಲಾನಿ ಚ ಶಾಶ್ವತೇ ।**
**ತ್ವತ್ಪಾದಾರಾಧನಫಲಂ ಮರ್ತ್ಯಲೋಕೇ ಹಿ ನಾನ್ಯಥಾ ॥ ೯೫ ॥**
**ಚರಾಚರಪತೇರ್ವಿಷ್ಣೋಃ ಶಕ್ತಿಸ್ತ್ವಂ ಪರಮೇಶ್ವರಿ ।**
**ಯಯಾ ಸೃಜತ್ಯವತಿ ಚ ಜಗತ್ಸಂಹರತೇ ವಿಭುಃ ॥ ೯೬ ॥**
**ಚರಾಚರಗುರುಂ ದೇವಂ ನೀಲಾಚಲನಿವಾಸಿನಂ ।**
**ಅನುಗೃಹ್ಣೀಷ್ವ ಮಾಂ ದೇವಿ ಯಥಾ ಪಶ್ಯೇ ಸ್ವ ಚಕ್ಷುಷಾ ॥ ೯೭ ॥**

---

೯೨. ಆಗಲಾ ಅರಸನು ನಾರದಮುನಿಯ ಅಪ್ಪಣೆಯಂತೆ ರಥದಿಂದ ಕೆಳಕ್ಕಿಳಿದು ಆ ದೇವಿಗೆ ಸಾಷ್ಟಾಂಗ ಪ್ರಣಾಮವನ್ನೆಸಗಿ ಸಂತುಷ್ಟಾಂತರಂಗನಾಗಿ ಆಕೆಯನ್ನಿಂತು ಸ್ತುತಿಸಿದನು.

೯೩–೯೪. ಇಂದ್ರದ್ಯುಮ್ನನು ಹೇಳುತ್ತಾನೆ:—"ಓ ದೇವಿ! ಸಮಸ್ತ ಕಷ್ಟಗಳನ್ನೂ ನಿವಾರಣೆ ಮಾಡುವವಳೂ, ಬ್ರಹ್ಮ ವಿಷ್ಣು ಮಹೇಶ್ವರರೆಂಬುದಾಗಿ ತಂತಮ್ಮ ಕಲ್ಪನೆಗಳಿಂದ ಬಗೆಬಗೆಯಾಗಿ ಸ್ತುತಿಸಲ್ಪಡುವವಳೂ, ತ್ರಿದಶೇಶ್ವರಿಯೂ ಆದ ನಿನಗೆ ನಮಸ್ಕಾರವು. ಜಗತ್ತಿಗೆ ಆದಿಕಾರಣಿಯೂ, ಪರಮೇಶ್ವರಿಯೂ ಆದ ಓ ತಾಯೆ! ಪ್ರಸನ್ನಳಾಗು! ಓ ಶಿವೇ! ನಿನ್ನನ್ನುಳಿದು ಈ ಜಗತ್ತು ಒಂದು ಕ್ಷಣವಾದರೂ ಇರಲು ಉತ್ಸಾಹಗೊಳ್ಳುವುದಿಲ್ಲವು.

೯೫. ಎಲೌ ಶಾಶ್ವತೆಯೇ! ಸಮಸ್ತ ಕಾರ್ಯಗಳ ಸಿದ್ಧಿಗಳೂ, ಮಂಗಲಗಳೂ, ಈ ಮರ್ತ್ಯಲೋಕದಲ್ಲಿ ನಿನ್ನ ಪಾದಾರಾಧನೆಯ ಫಲವಾಗಿ ದೊರಕುವುವೇ ಹೊರತು ಮತ್ತೆ ಬೇರೆಯಲ್ಲವು.

೯೬. ಓ ಪರಮೇಶ್ವರಿಯೇ! ಚರಾಚರ ಜಗತ್ಪತಿಯಾದ ಮಹಾವಿಷ್ಣುವಿನ ಶಕ್ತಿಯೇ ನೀನು! ನಿನ್ನ ಸಹಾಯದಿಂದಲೇ ಆ ಪ್ರಭುವು ಈ ಜಗತ್ತನ್ನು ನಿರ್ಮಾಣ ಮಾಡಿ, ಕಾಪಾಡಿ, ಸಂಹಾರ ಮಾಡುವನು.

೯೭. ಆದುದರಿಂದೆಲೌ ದೇವಿಯೇ! ಈಗ ನಾನು ಚರಾಚರಗುರುವಾದ ನೀಲಾಚಲನಿವಾಸಿಯಾದ ಶ್ರೀ ಮಾಧವನನ್ನು ಈ ಬಾಹ್ಯಚಕ್ಷುವಿನಿಂದ ನೋಡುವಂತೆ ಅನುಗ್ರಹಿಸುವವಳಾಗು.

ಜೈಮಿನಿರುವಾಚ :—

ನಾರಾದಸ್ಯೋಪದೇಶೇನ ಸ್ತುತ್ವಾ ದೇವೀಂ ನರಾಧಿಪಃ ।
ಆರುರೋಹ ರಥಂ ತೂರ್ಣಂ ವಿವಸ್ವಾನುದಯಂ ಯಥಾ ॥ ೯೮ ॥
ತತಃ ಪ್ರತಸ್ಥೇ ತರಸಾ ಸ ರಾಜಾ ಶ್ರಾಂತವಾಹನಃ ।
ಚಿತ್ರೋಪಲಮಹಾನದ್ಯಾಸ್ತೀರೇ ವಿರಲಕಾನನೇ ॥ ೯೯ ॥
ಧಾತುಕಂದರವಿಖ್ಯಾತೇ ನ್ಯವೇಶಯದನೀಕಿನೀಂ ।
ಅಪರಾಹ್ಣಕ್ರಿಯಾಂ ಕರ್ತುಂ ಯಾವದಾಹ್ನಿಕಮಾದೃತಃ ॥ ೧೦೦ ॥
ಜಲಾವತರಣೇ ನದ್ಯಾಂ ವಿವೇಶ ಸ್ವಪುರೋಧಸಾ ।
ಪೂರ್ವಂ ಸಂಶೋಧಿತೇ ಪ್ರಾಜ್ಞೈರ್ವಿಷಕಂಟಕವರ್ಜಿತೇ ॥ ೧೦೧ ॥
ಸ್ನಾತ್ವಾ ಸಂತರ್ಪ್ಯ ದೇವಾಂಶ್ಚ ಪಿತೄನಥ ವಿಶಾಂಪತಿಃ ।
ಸಂಪೂಜ್ಯ ವಿಧಿವದ್ವಿಷ್ಣುಂ ನೃಪತೀನ್ಪ್ರಕೃತೀಸ್ತತಃ ॥ ೧೦೨ ॥
ಸಂಮಾನಯಾಮಾಸ ನೃಪಃ ಸಂನಿವೇಶಾಸನಾದಿಭಿಃ ।
ನಾರದೇನ ಸಹ ಶ್ರೀಮಾನ್ಪ್ರವಿಶ್ಯಾಂತಃಪುರಂ ತತಃ ॥ ೧೦೩ ॥
ಸುಧಾರಸಾನಿ ಭೋಜ್ಯಾನಿ ಬುಭುಜೇ ಪ್ರೀತಮಾನಸಃ ।
ಪಶ್ಚಿಮಾದ್ರಿಂ ತತೋ ಯಾತೇ ವಿವಸ್ವತಿ ವಿಶಾಂಪತಿಃ ॥ ೧೦೪ ॥

---

೯೮. ಜೈಮಿನಿಯು ಹೇಳುತ್ತಾನೆ:—ಎಲೈ ಋಷಿಗಳಿರಾ! ದೇವಮುನಿಯಾದ ನಾರದನ ಉಪದೇಶದಂತೆ ಆ ಇಂದ್ರದ್ಯುಮ್ನನೃಪಾಲನು ಈ ರೀತಿ ಆ ದೇವಿಯನ್ನು ಸ್ತುತಿಸಿ ಆ ತರುವಾಯ ಜಾಗ್ರತೆಯಾಗಿ ಸೂರ್ಯನು ಉದಯ ಪರ್ವತವನ್ನೇರುವಂತೆ ರಥವೇರಿ ಮುಂದಕ್ಕೆ ಹೊರಟನು.

೯೯–೧೦೧. ತರುವಾಯ ಆ ದೊರೆಯು ತನ್ನ ಕುದುರೆಗಳು ಆಯಾಸಗೊಂಡಬಳಿಕಲೂ ಜಾಗ್ರತೆಯಾಗಿ ತೆರಳಿ, ಗೈರಿಕಾದಿ ಧಾತುಗಳಿಂದ ತುಂಬಿ, ಅನೇಕ ಗುಹೆಗಳಿಂದ ಕೂಡಿರುವ ಚಿತ್ರೋತ್ಪಲಾ ನದಿಯ ವಿಸ್ತಾರವಾದ ಅರಣ್ಯಪ್ರದೇಶದಲ್ಲಿ ತನ್ನ ಸೇನೆಗಳನ್ನೆಲ್ಲ ತಂಗಿಸಿ ಮಧ್ಯಾಹ್ನದಲ್ಲಿ ಮಾಡಬೇಕಾದ ಆಹ್ನಿಕವನ್ನು ಮಾಡಬಯಸಿ ಮೊದಲೇ ವಿಷದ ಮುಳ್ಳುಗಳನ್ನೆಲ್ಲ ತೆಗೆದುಹಾಕಿ ಶೋಧನೆ ಮಾಡಿದ ಆ ನದೀಜಲದಲ್ಲಿ ಪುರೋಹಿತನೊಡನೆ ಸ್ನಾನಾರ್ಥವಾಗಿ ಇಳಿದನು.

೧೦೨–೧೦೪. ಬಳಿಕಲಾತನು ಆ ನದಿಯಲ್ಲಿ ಸ್ನಾನಮಾಡಿ ದೇವಋಷಿ ಪಿತೃಗಳಿಗೆ ತರ್ಪಣಗಳನ್ನಿತ್ತು, ಆ ತರುವಾಯ ಶ್ರೀವಿಷ್ಣುಪರಮಾತ್ಮನನ್ನು ಶಾಸ್ತ್ರೋಕ್ತವಾಗಿ ಪೂಜಿಸಿ, ಸಾಮಂತ ನರಪತಿಗಳನ್ನೂ, ಪ್ರಜೆಗಳನ್ನೂ ಆಸನಾದಿಗಳಿಂದ ಸತ್ಕರಿಸಿದ ತರುವಾಯ ನಾರದಮುನಿಯೊಡನೆ ಅಂತಃಪುರವನ್ನು ಪ್ರವೇಶಿಸಿ, ಸುಧಾರಸಭೂಯಿಷ್ಠವಾದ ಭೋಜನವನ್ನು ಪ್ರೀತಮಾನಸನಾಗಿ

ಸಾಯಂವಿಧಿಂ ಸಮಾಪ್ಯಾಶು ಶೀತಭಾನೌ ಸಮುದ್ಯತೇ ।
ಅನುಜೀವಿವಿಶಾಂನಾಥಃ ಸಭಾಮಧ್ಯ ಉಪಾವಿಶತ್ ॥ ೧೦೫ ॥
ತತ್ರ ತಸ್ಮಿನ್ನರಪತಿರ್ಬಭೌ ಸಾಮ್ರಾಜ್ಯಲಕ್ಷಣಃ ।
ಸಂಪೂರ್ಣಮಂಡಲಶ್ಚಂದ್ರೋ ಜ್ಯೋತಿಷಾಮಿವ ಶಾರದಃ ॥ ೧೦೬ ॥
ಕವಯಃ ಕವಯಾಂ ಚಕ್ರುಃ ಕೀರ್ತಿಂ ತಸ್ಯ ಸುಧಾಮಲಂ ।
ಜಗುರ್ಗಾಥಾಂ ಸುಗ್ರಥಿತಾಂ ಗಾಯಕಾಃ ಕಲಸುಸ್ವರಾಃ ॥ ೧೦೭ ॥
ರೂಪಯೌವನಲಾವಣ್ಯಗರ್ವಿತಾ ಗಣಿಕಾಸ್ತತಃ ।
ಲಯತಾಳಾಂಗಹಾರೈಶ್ಚ ಸುಶುದ್ಧೈರ್ನನೃತುಃ ಪುರಃ ॥ ೧೦೮ ॥
ಮಾಗಧಾಸ್ತುಷ್ಟುವುಶ್ಚೈನಂ ಲೋಕೋತ್ತರಶುಭಾಕೃತಿಂ ।
ಗದ್ಯಪದ್ಯಪ್ರಬಂಧಾದ್ಯೈಶ್ಚಿತ್ರೈಃ ಪದಕದಂಬಕೈಃ ॥ ೧೦೯ ॥
ತತಃ ಸ ರಾಜಾ ಪ್ರಾನರ್ಚ ವೈಷ್ಣವಾಗ್ರ್ಯಾನ್ಸಭಾಸದಃ ।
ಸುಸಂಮತೈರ್ಗಂಧಮಾಲ್ಯತಾಂಬೂಲೈರತಿಶೋಭನೈಃ ॥ ೧೧೦ ॥

---

ಭುಜಿಸಿದನು. ಆಮೇಲೆ ಸೂರ್ಯನು ಪಶ್ಚಿಮಾದ್ರಿಯನ್ನಡರಲು ಸಾಯಂ ಸಂಧ್ಯಾದಿಗಳನ್ನಾಚರಿಸಿಕೊಂಡು ಚಂದ್ರೋದಯವಾದ ಮೇಲೆ ತನ್ನ ಅನುಜೀವಿಗಳಾದ ವೈಶ್ಯರ ಮಧ್ಯದಲ್ಲಿ ಕುಳಿತುಕೊಂಡನು.

೧೦೬. ಅಲ್ಲಿಯಾದರೋ ಆ ನರಪತಿಯು ಸಂಪೂರ್ಣ ಸಾಮ್ರಾಜ್ಯಲಕ್ಷಣವುಳ್ಳವನಾಗಿ ಶರತ್ಕಾಲದಲ್ಲಿ ಸಂಪೂರ್ಣಮಂಡಲವುಳ್ಳ ಚಂದ್ರನಂತೆ ರಾಜಿಸಿದನು.

೧೦೭. ಆ ಸಮಯದಲ್ಲಿ ಕವಿಗಳು ಆ ದೊರೆಯ ಅಮೃತನಿರ್ಮಲವಾದ ಕೀರ್ತಿಯನ್ನು ಕುರಿತು ಕವಿತ್ವ ಮಾಡಿದರು. ಮಧುರವಾದ ಸ್ವರಸಂಪತ್ತಿಯುಳ್ಳ ಗಾಯಕರು ಬಹು ಸೊಗಸಾಗಿ ಕವನಮಾಡಿದ್ದ ಗಾಥೆಗಳನ್ನು ಹಾಡಿದರು.

೧೦೮. ಇದಾದ ತರುವಾಯ ರೂಪಯೌವನಲಾವಣ್ಯಗಳಿಂದ ಕಡು ಕೊಬ್ಬಿದ ವೇಶ್ಯೆಯರು ಲಯತಾಳಾನುಬದ್ಧವಾದ ಕರಚರಣಾದ್ಯವಯವಗಳ ಸುಮಧುರಾಭಿನಯದಿಂದ ಯಾವೊಂದು ಕೊಂಕೂ ಇಲ್ಲದ ಶುದ್ಧವಾದ ನರ್ತನವನ್ನು ಮಾಡಿದರು.

೧೦೯. ವಂದಿಮಾಗಧರು ಲೋಕೋತ್ತರಸುಂದರಾಕಾರನಾದ ಆ ಅರಸನನ್ನು ಚಿತ್ರವಿಚಿತ್ರವಾದ ಪದಗುಂಫನವುಳ್ಳ ಗದ್ಯಪದ್ಯಪ್ರಬಂಧಗಳನ್ನು ಹೇಳಿ ಹಾಡಿ ಸಂತೋಷಗೊಳಿಸಿದರು.

೧೧೦. ಇದಾದ ತರುವಾಯ ಇಂದ್ರದ್ಯುಮ್ನರಾಜನು ವೈಷ್ಣವಾಗ್ರಣಿಗಳಾದ ಸಭಾಸದಸ್ಯರೆಲ್ಲರನ್ನೂ ಸೊಗಸಾದ ಗಂಧಮಾಲ್ಯತಾಂಬೂಲಾದಿಗಳಿಂದ ಸತ್ಕರಿಸಿದನು.

**ನೃಪಾಂಶ್ಚ ಶತಶಸ್ತತ್ರ ಸುಖಾಸೀನಾನ್ನೃಪಾಜ್ಞಯಾ ।**
**ಸಂಭಾವಯಾಮಾಸ ಯಥಾಯೋಗ್ಯಂ ನೃಪತಿಭಾಜನೈಃ ॥ ೧೧೧ ॥**
**ಅಥಾಪೃಚ್ಛನ್ಮುನಿವರಂ ನಾರದಂ ಭಗವತ್ಪ್ರಿಯಂ ।**
**ಸಿಂಹಾಸನಾರ್ಹೇ ಸ್ವಾಸೀನಂ ಬಹುಮಾನಪುರಸ್ಸರಂ ।**
**ಭಗವಚ್ಚರಿತಂ ಶ್ರೋತುಂ ಸರ್ವಪಾಪಾಪನೋದನಂ ॥ ೧೧೨ ॥**

ಇಂದ್ರದ್ಯುಮ್ನ ಉವಾಚ :—

**ಭಗವನ್ವೇದವೇದಾಂಗನಿಧಾನ ಭಗವತ್ಪ್ರಿಯ ।**
**ತ್ವಮೇವ ಚರಿತಂ ವಿಷ್ಣೋರ್ಜಾನಾಸಿ ಜ್ಞಾನಚಕ್ಷುಷಾ ॥ ೧೧೩ ॥**
**ಹರೇಶ್ಚಾರಿತ್ರಸುಧಯಾ ದೃಢಪಂಕಮಲೀಮಸಂ ।**
**ಕ್ಷಾಲಯಾಂತರ್ಮನೋ ಮುನೇ ಯದ್ಯನುಕ್ರೋಶಕೋ ಮಯಿ ॥ ೧೧೪ ॥**
**ಇತ್ಥಮಾಲಾಪಸಂಮಿಶ್ರೇ ಮುನಿರಾಜ್ಞೋಃ ಕಥಾಂತರೇ ।**
**ಪ್ರವಿವೇಶ ನೃಪಂ ದ್ವಾಃಸ್ಥ ಉತ್ಕಲೇಶಪ್ರಸೇವಕಃ ॥ ೧೧೫ ॥**
**ಉವಾಚ ದೇವ ದ್ವಾರಾಂತೇ ತಿಷ್ಠತ್ಯುತ್ಕಲಭೂಮಿಪಃ ।**
**ಸೋಪಾಯನೋ ದೇವಪಾದಪದ್ಮಂ ದ್ರಷ್ಟುಂ ಸಮೌಲಿಕಃ ॥ ೧೧೬ ॥**

---

೧೧೧. ಆಮೇಲೆ ರಾಜಾಧಿಕಾರಿಗಳು ರಾಜನ ಅಪ್ಪಣೆಯಂತೆ ಅಲ್ಲಿ ನೆರದಿದ್ದ ಸಾಮಂತರಾಜರನ್ನೆಲ್ಲ ಅವರವರ ಯೋಗ್ಯತೆಗೆ ತಕ್ಕಂತೆ ಸಂಭಾವಿಸಿದರು.

೧೧೨. ಆಗಲಾ ಅರಸನು ಸಿಂಹಾಸನೋಪಮವಾದ ಸುಖಾಸನದಲ್ಲಿ ಮಂಡಿಸಿದ್ದ ಭಗವತ್ಪ್ರಿಯನಾದ ನಾರದಮುನೀಂದ್ರನಿಂದ ಸಮಸ್ತಪಾಪಗಳನ್ನೂ ಪರಿಹರಿಸುವ ಭಗವಚ್ಚರಿತೆಯನ್ನು ಕೇಳಬಯಸಿ ಬಹುಮಾನಪುರಸ್ಸರವಾಗಿ ಈ ರೀತಿ ಪ್ರಶ್ನಿಸಿದನು.

೧೧೩. ಇಂದ್ರದ್ಯುಮ್ನನು ಹೇಳುತ್ತಾನೆ:—ಎಲೈ ಭಗವದ್ಭಕ್ತಿಭರಿತನೂ, ಭಗವತ್ಪ್ರಿಯನೂ ಆದ ನಾರದಮುನಿಯೇ! ನೀನು ವೇದವೇದಾಂಗಪಾರಂಗತನಾದವನು. ಶ್ರೀಮನ್ಮಹಾವಿಷ್ಣುವಿನ ಚರಿತೆಯನ್ನೆಲ್ಲ ನೀನು ಜ್ಞಾನದೃಷ್ಟಿಯಿಂದಲೇ ತಿಳಿದವನಾಗಿರುವೆ.

೧೧೪-೧೧೬. ಎಲೈ ಮುನಿಯೇ! ನಿನಗೆ ನನ್ನಲ್ಲಿ ಕೃಪೆಯಿರುವುದಾದರೆ ಶ್ರೀಹರಿಯ ಚರಿತಾಮೃತದಿಂದ ನನ್ನೊಳಗಿನ ಕಶ್ಮಲಪಂಕವನ್ನು ತೊಳೆದು ನಿರ್ಮಲಗೊಳಿಸುವವನಾಗು. ಹೀಗೆ ನಾರದಮುನಿಯೂ ಇಂದ್ರದ್ಯುಮ್ನರಾಜನೂ ಪರಸ್ಪರವಾಗಿ ಸಂಭಾಷಿಸುತ್ತಿರುವಷ್ಟರಲ್ಲಿಯೇ ಉತ್ಕಲರಾಜನ ಸೇವಕನಾದ ದ್ವಾರಪಾಲಕನು ಪ್ರವೇಶಿಸಿ "ಪ್ರಭು! ಕಿರೀಟಧಾರಿಯಾದ ಉತ್ಕಲೇಶ್ವರನು ಕಾಣಿಕೆಯನ್ನು ತೆಗೆದುಕೊಂಡು ಸ್ವಾಮಿಯ ಪಾದಮೂಲವನ್ನು ಕಾಣಲು ಬಂದು ಬಾಗಿಲಿನಲ್ಲಿ ಕಾದಿರುವನು" ಎಂದು ಅರಿಕೆ ಮಾಡಿದನು.

ವಿಜ್ಞಾಪಿತಃ ಸ ರಾಜರ್ಷಿರ್ದ್ವಾಸ್ಥೇನೈವಂ ಸಸಂಭ್ರಮಃ ।
ಉವಾಚ ತಂ ಹಿ ಭೋ ವಿಪ್ರಾಃ ಶ್ರುತ್ವಾ ತದ್ದೇಶಮಂಡನಂ ॥ ೧೧೭ ॥
ಕ್ಷೇತ್ರಂ ಶ್ರೀ ಪುರುಷೇಶಸ್ಯ ತದ್ವಾರ್ತಾಕರ್ಣನೋತ್ಸುಕಃ ।
ಪ್ರವೇಶಯಾವಿಲಂಬಂ ತಂ ಶ್ರೀಮದೋಢ್ರಮಹೀಪತಿಂ ॥ ೧೧೮ ॥
ಸ ಹಿ ನೀಲಗಿರೌ ವಿಷ್ಣುಂ ಸಮಾರಾಧ್ಯ ಸುನಿರ್ಮಲಃ ।
ಯಸ್ಯ ಸಂದರ್ಶನಾತ್ಸರ್ವೇ ಭವಿಷ್ಯಾಮೋ ಹತಾಂಹಸಃ ॥ ೧೧೯ ॥
ಶ್ರುತ್ವಾ ತದ್ವಚನಂ ಸದ್ಯೋ ದ್ವಾರಪಾಲೋ ಮಹೀಪತಿಂ ।
ಪ್ರವೇಶಯಾಮಾಸ ಸಭಾಮಿಂದ್ರದ್ಯುಮ್ನಸ್ಯ ಭೂಪತೇಃ ॥ ೧೨೦ ॥
ವಿವೇಶೋಢ್ರಪತಿಸ್ತೂರ್ಣಂ ಸಚಿವೈರ್ವೈಷ್ಣವೈಃ ಸಹ ।
ನನಾಮಾಂಘ್ರಿಯುಗಂ ವಂದ್ಯಮಿಂದ್ರದ್ಯುಮ್ನಸ್ಯ ಸಾದರಂ ॥ ೧೨೧ ॥
ತಮುತ್ಥಾಪ್ಯ ಚ ರಾಜೇಂದ್ರಃ ಪುರಸ್ಕೃತ್ಯ ಸ ವೈಷ್ಣವಂ ।
ಸ್ವಾಸನಾಂತೇ ನಿವೇಶ್ಯಾಥ ಪ್ರೋಚೇ ಸಪ್ರಶ್ರಯಂ ವಚಃ ॥ ೧೨೨ ॥
ರಾಜನ್ಸರ್ವತ್ರ ಕುಶಲೀ ಭವಾನೋಢ್ರಪತೇ ಕಿಲ ।
ಅಪಿ ದೇವೋ ವಿಜಯತೇ ನೀಲಾದ್ರಿಶಿಖರಾಲಯಃ ॥ ೧೨೩ ॥

---

೧೧೭–೧೧೯. ದ್ವಾರಪಾಲಕನಿಂತು ಅರಿಕೆ ಮಾಡಲು ಆ ರಾಜರ್ಷಿಯು ಸಂಭ್ರಮಯುಕ್ತನಾಗಿ ಆ ದೇಶಕ್ಕೆ ಅಲಂಕಾರಪ್ರಾಯನಾದ ಉತ್ಕಲೇಶ್ವರನು ಬಂದಿರುವುದನ್ನರಿತು, ಶ್ರೀಪುರುಷೋತ್ತಮ ಕ್ಷೇತ್ರದ ವೃತ್ತಾಂತವೆಲ್ಲವನ್ನೂ ತಿಳಿಯಲು ಕುತೂಹಲವುಳ್ಳವನಾಗಿ ಆ ದ್ವಾರಪಾಲಕನಿಗೆ, "ಶ್ರೀಮಂತನಾದ ಆ ಓಢ್ರಮಹೀಪತಿಯನ್ನು ತಡೆಮಾಡದೆ ಸಭೆಗೆ ಪ್ರವೇಶಗೊಳಿಸು. ಆತನು ನೀಲಾಚಲದಲ್ಲಿ ಶ್ರೀ ವಿಷ್ಣುವನ್ನರ್ಚಿಸಿ ಸುನಿರ್ಮಲನಾಗಿರುವನು. ಆತನ ದರ್ಶನದಿಂದ ನಾವೆಲ್ಲರೂ ಪಾಪದೂರರಾಗುತ್ತೇವೆ.

೧೨೦. ಎಲೈ ವಿಪ್ರರೇ! ಆ ದ್ವಾರಪಾಲಕನು ಜಾಗ್ರತೆಯಾಗಿಯೇ ಆ ಮಹೀಪತಿಯನ್ನು ಇಂದ್ರದ್ಯುಮ್ನನ ಸಭೆಗೆ ಪ್ರವೇಶಗೊಳಿಸಿದನು.

೧೨೧. ಆಗಲಾ ಓಢ್ರಪತಿಯಾದರೋ ವೈಷ್ಣವರಾದ ತನ್ನ ಮಂತ್ರಿಗಳೊಡನೆ ಆ ಸಭೆಯನ್ನು ಪ್ರವೇಶಿಸಿ ವಂದ್ಯನಾದ ಆ ಇಂದ್ರದ್ಯುಮ್ನನ ಪಾದಗಳಿಗೆ ಆದರಪೂರ್ವಕವಾಗಿ ವಂದಿಸಿದನು.

೧೨೨. ಈ ರೀತಿ ತನ್ನಡಿಗಳಿಗೆ ನಮಸ್ಕರಿಸಿದ ವೈಷ್ಣವನಾದ ಆ ಓಢ್ರ ರಾಜನನ್ನು ಮೇಲಕ್ಕೆಬ್ಬಿಸಿ ಗೌರವಿಸಿ ತನ್ನ ಸಿಂಹಾಸನದಲ್ಲಿಯೇ ಕುಳ್ಳಿರಿಸಿಕೊಂಡು ಅವನನ್ನು ಕುರಿತು ಆದರಪೂರ್ವಕವಾಗಿ ಈ ರೀತಿ ಹೇಳಿದನು.

೧೨೩–೧೨೪. "ಎಲೈ ದೊರೆಯೇ! ಓಢ್ರಪತಿಯಾದ ನೀನು ರಾಜ್ಯಕೋಶಾದಿ ಎಲ್ಲ ವಿಷಯಗಳಲ್ಲಿಯೂ ಕ್ಷೇಮವಾಗಿರುವೆಯಷ್ಟೆ? ನೀಲಾದ್ರಿ

ಕಚ್ಚಿತ್ತೇ ನಿರ್ಮಲಾ ಬುದ್ಧಿರ್ಭಗವತ್ಪಾದಪದ್ಮಯೋಃ ।
ಉಪ್ಯೈತಿ ಸಮಚಿತ್ತಸ್ಯ ಸರ್ವಭೂತೇಷು ತೇ ಹರೌ ॥ ೧೨೪ ॥
ಓಢ್ರಾಧೀಶಸ್ತದಾ ತಸ್ಯ ವಚಃ ಶ್ರುತ್ವಾ ಕೃತಾಂಜಲಿಃ ।
ಉವಾಚ ಪ್ರಶ್ರಿತಂ ವಾಕ್ಯಂ ಹರ್ಷವಿಸ್ಮಯಚಂಚುಕಃ ॥ ೧೨೫ ॥
ಸ್ವಾಮಿನ್ಸರ್ವತ್ರ ಕುಶಲಂ ತ್ವತ್ಪಾದಾನುಗ್ರಹಾನ್ಮಮ ।
ಸೂರ್ಯೇ ತಪತ್ಯಂಧಕಾರಃ ಕಥಂ ವಾ ಪ್ರಭವಿಷ್ಯತಿ ॥ ೧೨೬ ॥
ನಿಸರ್ಗಗುಣಸಂಸರ್ಗವಶೀಕೃತಮಹೀಭುಜಾ ।
ತ್ವಯಾ ಸನಾಥಾ ಪೃಥಿವೀ ಜಿಷ್ಣುನೇವಾಮರಾವತೀ ॥ ೧೨೭ ॥
ಸದಾ ಧರ್ಮಶ್ಚತುಷ್ಪಾದಸ್ತ್ವಯಿ ಶಾಸತಿ ಮೇದಿನೀಂ ।
ನಿಷೇಧಾಚರಣಂ ರಾಜನ್ಕೇವಲಂ ಶ್ರೂಯತೇ ಶ್ರುತೌ ॥ ೧೨೮ ॥
ರಾಜನೀತಿಷು ಯೇ ರಾಜ್ಞಾಂ ಗುಣಾಃ ಸಮುದಿತಾಸ್ತ್ವಯಿ ।
ತ ಏಕೈಕಂ ಕ್ಷಿತಿಭುಜಾಂ ಗತಾ ದಾರ್ಷ್ಟಾಂತಿಕಂ ವಿಭೋ ॥ ೧೨೯ ॥

---

ಶಿಖರದಲ್ಲಿ ನೆಲೆಗೊಂಡಿರುವ ಶ್ರೀ ಮಹಾವಿಷ್ಣುವು ಭಕ್ತರನ್ನನುಗ್ರಹಿಸಲೋಸುಗ ವಿಜಯವನ್ನು ಪಡೆದಿರುತ್ತಾನೆಯಷ್ಟೆ? ಭಗವತ್ಪಾದಪದ್ಮಗಳಲ್ಲಿ ನಿನ್ನ ಬುದ್ಧಿಯು ನಿರ್ಮಲವಾಗಿರುತ್ತದೆಯಲ್ಲವೆ? ಸಮಚಿತ್ತನಾದ ನೀನು ಶ್ರೀಹರಿಯಲ್ಲಿಯೆಂತೋ ಅಂತೇ ಸಮಸ್ತ ಪ್ರಾಣಿಗಳಲ್ಲಿಯೂ ಪ್ರೀತ್ಯಾದರಗಳಿಂದಿರುವೆಯಷ್ಟೆ?''

೧೨೫. ಇಂದ್ರದ್ಯುಮ್ನಮಹಾರಾಜನು ಈ ಪ್ರಕಾರ ನುಡಿದುದನ್ನು ಕೇಳಿ ಓಢ್ರಾಧೀಶನು ಆನಂದದಿಂದ ರೋಮಾಂಚಿತಗಾತ್ರನಾಗಿ ಕೈಮುಗಿದುಕೊಂಡು ಮೃದುಮಧುರವಾದ ಈ ಮಾತನ್ನಾಡಿದನು.

೧೨೬. "ಭೋ ಸ್ವಾಮಿನ್! ನಿನ್ನ ಪಾದಾನುಗ್ರಹದಿಂದ ನನಗೆ ಎಲ್ಲ ವಿಷಯಗಳಲ್ಲಿಯೂ ಕುಶಲವೇ ಇರುವುದು. ಸೂರ್ಯನು ಬೆಳಗುತ್ತಿರುವಲ್ಲಿ ಕತ್ತಲು ಕವಿಯುವುದುಂಟೆ?

೧೨೭. ಸಹಜವಾದ ಸದ್ಗುಣಗಳ ಸಂಸರ್ಗದಿಂದ ವಶದಲ್ಲಿರುವ ಸಮಸ್ತ ಸಾಮಂತರಾಜರುಳ್ಳ ಸಾರ್ವಭೌಮನಾದ ನಿನ್ನಿಂದ ಈ ಪೃಥಿವಿಯು ದೇವೇಂದ್ರನಿಂದ ಅಮರಾವತಿಯೆಂತೋ ಅಂತು ಸನಾಥವಾಗಿರುವುದು.

೧೨೮. ಎಲೈ ದೊರೆಯೇ! ನಿನ್ನ ಆಳ್ವಿಕೆಯಲ್ಲಿ ಧರ್ಮವು ಯಾವಾಗಲೂ ನಾಲ್ಕು ಪಾದಗಳುಳ್ಳುದಾಗಿಯೇ ಇರುವುದು. ಮಹಾರಾಜ! ನಿನ್ನ ಪ್ರಭುತ್ವದಲ್ಲಿ ನಿಷೇಧಾಚರಣವೆಂಬುದು ಶ್ರುತಿಯಲ್ಲಿ ಮಾತ್ರ ಕಂಡುಬರುತ್ತದೆಯಾಗಲಿ ಮತ್ತೆಲ್ಲಿಯೂ ಇರುವುದಿಲ್ಲವು.

೧೨೯. ಎಲೈ ವಿಭುವೇ! ರಾಜನೀತಿಗಳಲ್ಲಿ ರಾಜರ ಗುಣಗಳು ಹೇಗಿರಬೇಕೆಂದು ವರ್ಣಿತಗಳಾಗಿರುವುವೋ ಅವೆಲ್ಲವು ನಿನ್ನಲ್ಲಿ ಚೆನ್ನಾಗಿ ಅಳವಟ್ಟಿರು

**ಏತಾವದಪಿ ಸಾಮ್ರಾಜ್ಯಂ ದುರ್ಲಭಂ ತೇ ನೃಪೋತ್ತಮ ।**
**ಅಷ್ಟಾದಶದ್ವೀಪವತೀ ಕ್ಷಿತಿರೇಕಗೃಹೋಪಮಾ ॥ ೧೩೦ ॥**
**ಯದಿ ತ್ವಾಂ ನಾಸೃಜದ್ಬ್ರಹ್ಮಾ ವತ್ಸಲಂ ಸರ್ವಜಂತುಷು ।**
**ಕಥಂ ಶೋಕವಿಹೀನಾಃ ಸ್ಯುರ್ವರ್ಗೇಷ್ವಾತ್ಮಜಬಂಧುಷು ॥ ೧೩೧ ॥**
**ಸಾಧಾರಣಾ ನೃಪತಯೋ ವಿಷ್ಣೋರಂಶಾ ಇತಿ ಶ್ರುತಿಃ ।**
**ಭವಾನ್ಸಾಕ್ಷಾತ್ತು ಭಗವಾನ್ಕೋಽನ್ಯ ಈದೃಗ್ಗುಣಾಕರಃ ॥ ೧೩೨ ॥**
**ದಕ್ಷಿಣೋದಧಿತೀರೇಽಸ್ತಿ ನೀಲಾದ್ರಿಃ ಕಾನನಾವೃತಃ ।**
**ನ ತತ್ರ ಲೋಕಸಂಚಾರಸ್ತತ್ರಾಸ್ತೇ ಸಾಽಪಿ ದೇವತಾ ॥ ೧೩೩ ॥**
**ವಾರ್ತಯಾ ವಾಲುಕಾಕೀರ್ಣಃ ಸಾಂಪ್ರತಂ ಶ್ರೂಯತೇ ತು ಸಃ ।**
**ತದ್ವಶಾನ್ಮಮ ರಾಜ್ಯೇಽಪಿ ದುರ್ಭಿಕ್ಷಮರಕಾದಿಕಂ ॥ ೧೩೪ ॥**
**ತ್ವಯ್ಯಾಗತೇ ತು ಸರ್ವಸ್ಮಿನ್ಕುಶಲಂ ಮೇ ಭವಿಷ್ಯತಿ ।**
**ಇತ್ಯುಕ್ತವಂತಂ ನೃಪತಿರುತ್ಕಲೇಶಂ ದ್ವಿಜೋತ್ತಮಾಃ ॥ ೧೩೫ ॥**

---

ವುದಲ್ಲದೆ ಅವುಗಳಲ್ಲಿ ಒಂದೊಂದೂ ಇತರ ರಾಜರಿಗೆ ದೃಷ್ಟಾಂತಪ್ರಾಯ ವಾಗಿರುವುದು.

೧೩೦. ಓ ನೃಪೋತ್ತಮಾ! ಇಷ್ಟು ಸಾಮ್ರಾಜ್ಯವೂ ನಿನಗೆ ಅನ್ಯದುರ್ಲಭ ವಾಗಿದ್ದರೂ ಸುಲಭವಾಗಿ ದೊರೆತಿರುತ್ತದೆ. ನಿನಗೆ ಹದಿನೆಂಟು ದ್ವೀಪಗಳಿಂದ ಕೂಡಿದ ಈ ಭೂಮಂಡಲವೆಲ್ಲವೂ ಒಂದೇ ಮನೆಯಾಗಿರುತ್ತದೆ.

೧೩೧–೧೩೨. ಎಲೈ ಇಂದ್ರದ್ಯುಮ್ನನೃಪಾಲನೇ! ಸೃಷ್ಟಿಕರ್ತನಾದ ಬ್ರಹ್ಮನು ಸಮಸ್ತಪ್ರಾಣಿಗಳಲ್ಲಿಯೂ ವತ್ಸಲನಾದ ನಿನ್ನನ್ನು ಸೃಜಿಸದೆ ಹೋಗಿದ್ದರೆ, ಪ್ರಜೆಗಳು, ಮಕ್ಕಳೂ, ಬಂಧುಗಳೂ, ಮೃತರಾದವರು ದುಃಖವಿಹೀನರಾಗಿರುವು ದೆಂತು? ಸಾಧಾರಣವಾಗಿ ದೊರೆಗಳೆಲ್ಲ ವಿಷ್ಣುವಿನ ಅಂಶಸಂಭೂತರೆಂದೇ ಶ್ರುತಿಯಿರುವುದು. ಆದರೆ ನೃಪತಿಯಾದ ನೀನು ಸಾಕ್ಷಾತ್ ವಿಷ್ಣುವೇ ಆಗಿರುವೆ. ನಿನ್ನನ್ನು ಬಿಟ್ಟರೆ ಇಂತಹ ಸದ್ಗುಣಾಕರನಾವನಿರುವನು?

೧೩೩–೧೩೪. ಎಲೈ ಪ್ರಭುವೇ! ದಕ್ಷಿಣಾರ್ಣವತೀರದಲ್ಲಿರುವ ನೀಲಾ ದ್ರಿಯು ಅರಣ್ಯದಿಂದ ಸುತ್ತುವರಿದುದಾಗಿರುವುದು. ಅಲ್ಲಿ ಜನಗಳ ಸಂಚಾ ರವೇ ಇರುವುದಿಲ್ಲವು. ಅಲ್ಲಿಯೇ ಆ ಮಹಾವಿಷ್ಣುವಿರುವನು. ಈಗಲಾದರೋ ಆ ಮೂರ್ತಿಯು ಮರಳಿನಿಂದ ಮುಚ್ಚಿಹೋಗಿರುವುದಾಗಿ ಕೇಳಿಬರುತ್ತಿದೆ. ಅದರಿಂದ ನನ್ನ ರಾಜ್ಯವೂ ಸಹ ಕ್ಷಾಮಡಾಮರಾದ್ಯುಪದ್ರವಗಳಿಂದ ತುಂಬಿ ಹೋಗಿದೆ. ನೀನಲ್ಲಿಗೆ ದಯಮಾಡಿಸಿದರೆ, ನನಗೆ ಎಲ್ಲ ಬಗೆಗಳಲ್ಲಿಯೂ ಕ್ಷೇಮ ವುಂಟಾಗುತ್ತದೆ.''

೧೩೫–೧೩೬. ಇಂತು ನುಡಿದ ಆ ಓಢ್ರಪತಿಯನ್ನು ಇಂದ್ರದ್ಯುಮ್ನರಾಜನು

**ವಿಸರ್ಜಯಾಮಾಸ ತದಾ ಸಂನಿವೇಶಾಯ ಮಾನಯನ್ ।**
**ನಾರದಂ ಪ್ರೇಕ್ಷ್ಯ ನಿರ್ವಿಣ್ಣಃ ಕಿಮೇತದಿತಿ ಭೋ ಮುನೇ ।**
**ಯದರ್ಥಂ ಮೇ ಶ್ರಮಸ್ತ್ವಂ ಚ ವಿಫಲಂ ಹಿ ವಿತರ್ಕಯೇ** ॥ ೧೩೬ ॥
**ಇತ್ಯುಕ್ತವಂತಂ ತಂ ಪ್ರಾಹ ನಾರದಸ್ತು ತ್ರಿಲೋಕವಿತ್** ॥ ೧೩೭ ॥
**ನ ಕಾರ್ಯೋ ವಿಸ್ಮಯಸ್ತೇಽತ್ರ ಭಾಗ್ಯವಾನ್ವೈಷ್ಣವೋತ್ತಮಃ ।**
**ವೈಷ್ಣವಾನಾಂ ನ ವಾಂಛಾ ಹಿ ವಿಫಲಾ ಜಾಯತೇ ಕ್ವಚಿತ್** ॥ ೧೩೮ ॥
**ಅವಶ್ಯಂ ಪಶ್ಯಸೇ ರಾಜನ್ಬಿಭ್ರತಂ ಪಾರ್ಥಿವಂ ವಪುಃ ।**
**ಕಾರಣಂ ಜಗತಾಮಾದಿಂ ನಾರಾಯಣಮನಾಮಯಂ** ॥ ೧೩೯ ॥
**ತ್ವದನುಗ್ರಹಹೇತೋರ್ವೈ ಕ್ಷಿತಾವವತರಿಷ್ಯತಿ ।**
**ಜಗಚ್ಚರಾಚರಂ ಸರ್ವಂ ವಿಷ್ಣೋರ್ವಶಮುಪಾಗತಂ** ॥ ೧೪೦ ॥
**ನ ಕಸ್ಯಾಪಿ ವಶೇ ಸೋಽಪಿ ಪರಮಾತ್ಮಾ ಸನಾತನಃ ।**
**ಕೇವಲಂ ಭಕ್ತಿವಶಗೋ ಭಗವಾನ್ಭಕ್ತವತ್ಸಲಃ** ॥ ೧೪೧ ॥
**ಬ್ರಹ್ಮಾದಿಕೀಟಪರ್ಯಂತಂ ಸುಗುಪ್ತಂ ಯಸ್ಯ ಮಾಯಯಾ ।**
**ಸ ಕಥಂ ಪರತಂತ್ರಃ ಸ್ಯಾದೃತೇ ಭಕ್ತಜನಾನ್ನೃಪ** ॥ ೧೪೨ ॥

ಗೌರವಿಸಿ ಬಿಡಾರದಲ್ಲಿ ವಾಸಿಸಲು ಬೀಳ್ಕೊಟ್ಟನು. ತರುವಾಯ ಆತನು ನಾರದಮುನಿಯನ್ನು ಕಂಡು, "ಎಲೈ ಮುನಿಯೇ! ಏನಿದು!! ನಾನು ಏತಕ್ಕಾಗಿ ಶ್ರಮಪಟ್ಟು ಇಲ್ಲಿಗೆ ಬಂದೆನೋ ಅದೇ ವಿಫಲವಾಯಿತೆಂದು ತೋರುತ್ತಿದೆ" ಎಂದು ಹೇಳಿದನು

೧೩೭-೧೩೮. ಇಂತು ನುಡಿದ ಆತನನ್ನು ಕುರಿತು ತ್ರಿಕಾಲಜ್ಞಾನಿಯಾದ ನಾರದಮುನಿಯು "ಅಯ್ಯಾ ಇಂದ್ರದ್ಯುಮ್ನನೇ! ನೀನೀ ವಿಷಯದಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ನೀನು ಭಾಗ್ಯಶಾಲಿಯಾದ ವೈಷ್ಣವೋತ್ತಮನು. ವಿಷ್ಣುಭಕ್ತರ ಅಭಿಲಾಷೆಯು ಎಂದಿಗೂ ವಿಫಲವಾಗುವುದೇ ಇಲ್ಲವು.

೧೩೯. ಭೋ ರಾಜನ್! ನೀನು ಜಗತ್ತಿಗೆಲ್ಲ ಆದಿಕಾರಣನೂ, ಅನಾಮಯನೂ ಆದ ಶ್ರೀಮನ್ನಾರಾಯಣನನ್ನು ಪಾರ್ಥಿವರೂಪಧಾರಿಯಾದವನನ್ನಾಗಿ ಅವಶ್ಯವಾಗಿಯೂ ಕಂಡೇ ಕಾಣುವೆ.

೧೪೦-೧೪೧. ಆತನು ನಿನ್ನನ್ನು ಅನುಗ್ರಹಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸುತ್ತಾನೆ. ಚರಾಚರವಾದ ಈ ಜಗತ್ತೆಲ್ಲವೂ ಆ ಮಹಾವಿಷ್ಣುವಿನ ವಶದಲ್ಲಿರುವಂತಹುದು. ಸನಾತನನಾದ ಆ ಪರಮಾತ್ಮನು ಮಾತ್ರ ಯಾರ ವಶದಲ್ಲಿಯೂ ಇರುವುದಿಲ್ಲವು. ಆದರೆ ಭಕ್ತವತ್ಸಲನಾದ ಆ ಭಗವಂತನು ಕೇವಲ ಭಕ್ತರಿಗೆ ಮಾತ್ರ ವಶನು.

೧೪೨. ಬ್ರಹ್ಮನು ಮೊದಲಾಗಿ ಇರುವೆಯವರೆಗಣ ಸಮಸ್ತ ಜಗತ್ತು

ಧರ್ಮಾರ್ಥಕಾಮಮೋಕ್ಷಾಣಾಂ ಮೂಲಂ ಭಕ್ತಿರ್ಮುರದ್ವಿಷಃ ।
ಸೈವ ತದ್ಗ್ರಹಣೋಪಾಯಸ್ತಾಮೃತೇ ನಾಸ್ತಿ ಕಿಂಚನ ॥ ೧೫೩ ॥
ಏಕ ಏವ ಮಹಾವಿಷ್ಣುರ್ಬಹುಧಾ ಸ್ವಸ್ಯ ಮಾಯಯಾ ।
ತಮೃತೇ ಪರಮಾತ್ಮಾನಂ ಸುಖಹೇತುರ್ನ ವಿದ್ಯತೇ ॥ ೧೫೪ ॥
ಯೇಽಪ್ಯನ್ಯೇ ಶಿವದುರ್ಗಾದ್ಯಾಸ್ತೈಸ್ತೈಃ ಕರ್ಮಭಿರಾವೃತಾಃ ।
ಯಚ್ಛಂತಿ ಪೂಜಿತಾಃ ಕಾಮಂ ತೇಽಪಿ ವಿಷ್ಣುಪರಾಯಣಾಃ ॥ ೧೫೫ ॥
ಅಂತರ್ಯಾಮೀ ಸ ಭಗವಾನ್ದೇವಾನಾಮಪಿ ಹೃತ್ಸ್ಥಿತಃ ।
ಯಾವತ್ಫಲಂ ಪ್ರೇರಯತಿ ತಾವದೇವ ದದತ್ಯಮೀ ॥ ೧೫೬ ॥
ವೈಷ್ಣವಸ್ತ್ವಂ ಚ ರಾಜೇಂದ್ರ ಪದ್ಮಯೋನೇಶ್ಚ ಪಂಚಮಃ ।
ಅಷ್ಟಾದಶಾನಾಂ ವಿದ್ಯಾನಾಂ ಪಾರಗೋ ವೃತ್ತಸಂಸ್ಥಿತಃ ॥ ೧೫೭ ॥
ನ್ಯಾಯೇನ ರಕ್ಷಿತಾ ಪೃಥ್ವೀಂ ವಿಶೇಷಾದ್ಬ್ರಹ್ಮಣಾರ್ಚಕಃ ।
ಅವಶ್ಯಂ ದ್ರಕ್ಷ್ಯಸಿ ಕ್ಷೇತ್ರೇ ವೈಕುಂಠಂ ಚರ್ಮಚಕ್ಷುಷಾ ॥ ೧೫೮ ॥

---

ಯಾವನ ಮಾಯೆಯಿಂದ ಸಂರಕ್ಷಿತವಾಗಿರುವುದೋ ಆತನು ಭಕ್ತರಿಗೆ ಹೊರತು ಇತರರಿಗೆ ಪರತಂತ್ರನೆಂತು ?

೧೫೩. ಧರ್ಮಾರ್ಥಕಾಮಮೋಕ್ಷಗಳ ಲಾಭಕ್ಕೆ ಮುರವೈರಿಯಾದ ಆ ಶ್ರೀಹರಿಯ ಭಕ್ತಿಯೇ ಮೂಲವು. ಆ ಭಕ್ತಿಯೇ ಅವನನ್ನು ಹಿಡಿದು ಹಾಕುವುದಕ್ಕೆ ಒಳ್ಳೆಯ ಉಪಾಯವು. ಭಕ್ತಿಯನ್ನು ಬಿಟ್ಟರೆ ಆತನನ್ನು ವಶಪಡಿಸಿ ಕೊಳ್ಳಲು ಯಾವ ಉಪಾಯವೂ ಇರುವುದಿಲ್ಲವು.

೧೫೪. ಒಬ್ಬನೇ ವಿಷ್ಣುವೇ ತನ್ನ ಮಾಯೆಯಿಂದ ಅನೇಕವಾಗಿರುವನು. ಅವನನ್ನು ಬಿಟ್ಟರೆ ಸುಖಕ್ಕೆ ಕಾರಣನಾದವನು ಮತ್ತೊಬ್ಬನು ದೊರಕುವುದೇ ಇಲ್ಲವು.

೧೫೫. ಇತರರಾದ ಶಿವ ದುರ್ಗಾದಿಗಳ್ ಆಯಾ ಕರ್ಮಗಳಿಂದ ಆವೃತ ರಾಗಿ ಪೂಜಿಸಿದ ಭಕ್ತರಿಗೆ ಇಷ್ಟಾರ್ಥಗಳನ್ನು ದೊರಕಿಸುತ್ತಾರೆಯಲ್ಲದೆ ಅವರೂ ವಿಷ್ಣುಪರಾಯಣರಾದವರೇ !

೧೫೬. ಅಂತರ್ಯಾಮಿಯಾದ ಆ ಭಗವಂತನು ದೇವತೆಗಳ ಹೃದಯ ಗಳಲ್ಲಿಯೂ ನೆಲಸಿರುತ್ತಾನೆ. ಅವನು ಅಲ್ಲಿ ನಿಂತು ಎಷ್ಟು ಪ್ರೇರಿಸುವನೋ ಅಷ್ಟೇ ಫಲವನ್ನು ಆ ದೇವತೆಗಳೂ ಕೊಡುತ್ತಾರೆ.

೧೫೭. ಎಲೈ ರಾಜೇಂದ್ರನೇ ! ನೀನು ವೈಷ್ಣವನು; ಕಮಲಸಂಭವನಾದ ಬ್ರಹ್ಮನಿಂದ ಐದನೆಯವನು; ಹದಿನೆಂಟು ವಿದ್ಯೆಗಳಲ್ಲಿಯೂ ಪಾರಂಗತನು; ನಿನ್ನ ಧರ್ಮದಲ್ಲಿ ಚಲಿಸದಿರುವವನು.

೧೫೮. ನೀನು ಧರ್ಮದಿಂದ ಭೂಮಿಯನ್ನಾಳುತ್ತಿರುವೆ; ವಿಶೇಷವಾಗಿ

**ಪಿತಾಮಹೋಽಪ್ಯತ್ರ ಕಾರ್ಯೇ ಭವತೋ ಮಾಂ ನಿಯುಕ್ತವಾನ್ ।**
**ಸರ್ವಂ ತೇ ಕಥಯಿಷ್ಯಾಮಿ ಪ್ರಾಪ್ತೇ ಕ್ಷೇತ್ರೋತ್ತಮೇ ನೃಪ ॥ ೧೪೯ ॥**
**ಸಾಂಪ್ರತಂ ರಾತ್ರಿಶೇಷೋ ಹಿ ತೃತೀಯಂ ಯಾಮಮೃಚ್ಛತಿ ।**
**ಸ್ವಾನ್ಸ್ವಾನ್ನಿವೇಶಾನ್ನಿರ್ಗಂತುಂ ರಾಜ್ಞ ಆಜ್ಞಾಪಯಾಧುನಾ ॥ ೧೫೦ ॥**
**ತ್ವಮಪ್ಯಂತರ್ಗೃಹಂ ಯಾಹಿ ನಿದ್ರಾಯಾ ವಶಮಾಗತಃ ॥ ೧೫೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನಸ್ಯ ಭಗವದ್ದರ್ಶನಾರ್ಥಗಮನವರ್ಣನಂ" ನಾಮ ಏಕಾದಶೋಽಧ್ಯಾಯಃ**

---

ಬ್ರಾಹ್ಮಣಪೂಜಕನಾಗಿರುವೆ. ಇಂತಹ ನೀನು ಅವಶ್ಯವಾಗಿಯೂ ಇದೇ ಚರ್ಮ ಚಕ್ಷುಸ್ಸಿನಿಂದಲೇ ಆ ವೈಕುಂಠಪತಿಯನ್ನು ಕಾಣುವೆ.

೧೪೯. ಪಿತಾಮಹನೂ ಸಹ ನಿನ್ನ ಈ ಕಾರ್ಯಕ್ಕೆ ನೆರವಾಗಲೋಸುಗ ನನ್ನನ್ನು ನಿಯೋಗಿಸಿದನು. ಆ ನೀಲಾಚಲಕ್ಷೇತ್ರೋತ್ತಮಕ್ಕೆ ಹೋದತರುವಾಯ ಎಲ್ಲ ವಿಷಯಗಳನ್ನೂ ತಿಳಿಸುತ್ತೇನೆ.

೧೫೦. ಈ ರಾತ್ರಿಯಲ್ಲಿ ಮೂರನೆಯ ಯಾಮವು ನಡೆಯುತ್ತಿದೆ. ರಾತ್ರಿ ಶೇಷವು ಸ್ವಲ್ಪವೇ ಉಳಿದಿರುವುದು. ಅವರವರ ಬಿಡಾರಗಳಿಗೆ ತೆರಳಲು ಈ ಸಾಮಂತ ರಾಜರೆಲ್ಲರಿಗೂ ಅಪ್ಪಣೆಮಾಡು.

೧೫೧. ನೀನೂ ಅಂತಃಪುರಕ್ಕೆ ಹೋಗಿ ನಿದ್ರಿಸುವವನಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನನ ಭಗವದ್ದರ್ಶನಾರ್ಥ ಪ್ರಯಾಣದವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಪಂಚಾಶತ್ತಮೋಽಧ್ಯಾಯಃ

### ಅವಿಮುಕ್ತಕ್ಷೇತ್ರ—ವಿಶಾಮ್ರವನಸ್ಥಾಪನವರ್ಣನಂ

**ಜೈಮಿನಿರುವಾಚ :—**

**ಉಕ್ತೋ ಬ್ರಹ್ಮಸುತೇನೇತ್ಥಮಿಂದ್ರದ್ಯುಮ್ನೋ ಮಹೀಪತಿಃ ।**
**ಮುನೇಸ್ತು ವಚನಂ ಶ್ರುತ್ವಾ ಪ್ರಹೃಷ್ಟೇನಾಂತರಾತ್ಮನಾ ।**
**ವಿಚಾರ್ಯ ಪರಯಾ ಬುದ್ಧ್ಯಾ ಶ್ರಮಂ ಮೇನೇ ಫಲಾವಹಂ ॥ ೧ ॥**
**ಅಹೋ ಮೇ ಪರಮಂ ಭಾಗ್ಯಂ ಬಹುಜನ್ಮಾಂತರಾರ್ಜಿತಂ ।**
**ವ್ಯವಸಾಯೇ ಮಮೋದ್ಯುಕ್ತಃ ಸರ್ವಲೋಕಪಿತಾಮಹಃ ॥ ೨ ॥**
**ಜೀವನ್ಮುಕ್ತಂ ಸ್ವತನುಜಂ ಮತ್ಸಹಾಯಮಕಾರಯತ್ ।**
**ಸಹಾಯೋ ಯಾದೃಶಃ ಪುಂಸಾಂ ಭವೇತ್ಕಾರ್ಯಂ ಹಿ ತಾದೃಶಂ ॥ ೩ ॥**
**ಶ್ರುತಂ ಸಭಾಸು ಸರ್ವಾಸು ಇತಿ ವೃದ್ಧಾನುಶಾಸನಂ ।**
**ಸ ಇತ್ಥಂ ಚಿಂತಯನ್ರಾಜಾ ವಿಸೃಜ್ಯ ಚ ಸಭಾಸದಃ ।**
**ತತೋ ಮುನಿಂ ಕರೇ ಧೃತ್ವಾ ವಿವೇಶಾಂತಃಪುರೇ ದ್ವಿಜಾಃ ॥ ೪ ॥**

---

## ಕನ್ನಡದ ಅನುವಾದ

### ಅವಿಮುಕ್ತಕ್ಷೇತ್ರ—ವಿಶಾಮ್ರವನಸ್ಥಾಪನ ವರ್ಣನ

೧. ಜೈಮಿನಿಯು ಹೇಳುತ್ತಾನೆ:—ಅಯ್ಯಾ ಋಷಿಗಳಿರಾ! ಬ್ರಹ್ಮಸುತನಾದ ನಾರದಮುನೀಂದ್ರನೀರೀತಿಹೇಳಲು ಮಹೀಪತಿಯಾದ ಇಂದ್ರದ್ಯುಮ್ನನು ಸಂತುಷ್ಟಾಂತರಂಗನಾಗಿ ಉತ್ಕೃಷ್ಟವಾದ ತನ್ನ ಬುದ್ಧಿಯಿಂದಲೇ ಎಲ್ಲವನ್ನೂ ವಿಚಾರಮಾಡಿಕೊಂಡು ತಾನು ಸರಾಷ್ಟ್ರಪರಿವಾರನಾಗಿ ತೀರ್ಥಯಾತ್ರೆಗೆ ಬಂದುದು ಸಾರ್ಥವಾಗುವುದೆಂದರಿತನು.

೨. "ಆಹಾ! ಅನೇಕ ಜನ್ಮಗಳಿಂದ ನಾನು ಸಂಪಾದಿಸಿದ ಭಾಗ್ಯಕ್ಕೆಣೆಯುಂಟೆ! ಸಮಸ್ತಲೋಕಕ್ಕೂ ಪಿತಾಮಹನೆನಿಸಿದ ಬ್ರಹ್ಮನೇ ನನ್ನ ಈ ವ್ಯವಸಾಯದಲ್ಲಿ ಉದ್ಯುಕ್ತನಾಗಿರುವನಲ್ಲವೆ!!

೩. ಆ ಮಹಾತ್ಮನು ಜೀವನ್ಮುಕ್ತನಾದ ತನ್ನ ಮಗನನ್ನೂ ಸಹ ನನಗೆ ಸಹಾಯ ಮಾಡಲು ಕಳುಹಿಸಿರುವನು. ಮಾನವನಿಗೆ ಸಹಾಯವೆಂತೊದಗುವುದೋ ಅಂತೇ ಕಾರ್ಯವೂ ಈಡೇರುವುದು.

೪. ಈ ಮಾತನ್ನು ವೃದ್ಧರಾದವರು ಸಮಸ್ತ ಸಭೆಗಳಲ್ಲಿಯೂ ಹೇಳುವುದನ್ನು ನಾನು ಕೇಳಿರುತ್ತೇನೆ" ಎಂದು ಆ ದೊರೆಯು ಯೋಚಿಸುತ್ತ ಸಭಾ

ತಮರ್ಚಯಿತ್ವಾ ವಿಧಿವತ್ಪಲ್ಯಂಕೇ ಸಹ ತೇನ ವೈ ।
ನಿಶಾವಶೇಷಂ ನೃಪತಿರ್ನಿನಾಯ ಸಂಲಪನ್ಮಿಥಃ ॥ ೫ ॥
ತತಃ ಪ್ರಭಾತೇ ವಿಮಲೇ ನಿತ್ಯಂ ಕರ್ಮ ಸಮಾಪ್ಯ ವೈ ।
ಪೂಜಯಿತ್ವಾ ಜಗನ್ನಾಥಂ ಸಂತತಾರ ಮಹಾನದೀಂ ॥ ೬ ॥
ಔಢ್ರದೇಶಾಧಿಪೇನಾಗ್ರೇ ಗಚ್ಛತಾ ದಿಷ್ಟಪದ್ಧತಿಃ ।
ಏಕಾಮ್ರವನಕಂ ಕ್ಷೇತ್ರಮಭಿಯಾತೋ ಬಲಾನ್ವಿತಃ ॥ ೭ ॥
ಸ ಗತ್ವಾ ಕಿಂಚಿದಧ್ವಾನಂ ಪ್ರಾಪ್ಯ ಗಂಧವಹಾಭಿಧಾಂ ॥ ೮ ॥
ನದೀಂ ವೇಗವತೀಂ ಶೀತತೋಯಾಮಾಕ್ರಮ್ಯ ವೇಗವಾನ್ ।
ಪೂರ್ವಾಹ್ಣಪೂಜಾಸಮಯೇ ಕೋಟಿಲಿಂಗೇಶ್ವರಸ್ಯ ವೈ ॥ ೯ ॥
ಚರ್ಚರೀಶಂಖಕಾಹಲಮೃದಂಗಮುರಜಧ್ವನಿಂ ।
ವ್ಯಶ್ನುವಾನಂ ಮಹಾರಣ್ಯಂ ದೂರಾಚ್ಛುಶ್ರಾವ ಭೂಪತಿಃ ॥ ೧೦ ॥
ಮನ್ಯಮಾನೋ ಭಗವತೋ ನೀಲಾಚಲನಿವಾಸಿನಃ ।
ಉವಾಚ ನಾರದಂ ಪ್ರೀತೋ ಧ್ವನಿಃ ಕುತ್ರ ಮಹಾಮುನೇ ॥ ೧೧ ॥

---

ಸದರೆಲ್ಲರನ್ನೂ ಬೀಳ್ಕೊಟ್ಟತರುವಾಯ, ಆ ನಾರದ ಮುನೀಂದ್ರನನ್ನು ಕೈಹಿಡಿದು ಕರೆದುಕೊಂಡು ಅಂತಃಪುರಕ್ಕೆ ಹೋದನು.

೫. ಅಲ್ಲಿ ಆ ಮುನಿಯನ್ನು ಶಾಸ್ತ್ರೋಕ್ತವಾಗಿ ಸತ್ಕರಿಸಿ ಹಂಸತೂಲಿಕಾ ತಲ್ಪದಲ್ಲಿ ಆತನೊಡನೆಯೇ ಮಲಗಿ ಪರಸ್ಪರವಾಗಿ ಸಂಭಾಷಣೆಗೈಯುತ್ತ ರಾತ್ರಿಶೇಷವನ್ನು ಕಳೆದನು.

೬. ಆ ಮೇಲೆ ಬೆಳ್ಳನೆ ಬೆಳಗಾಗಲು ನಿತ್ಯಕರ್ಮವನ್ನು ಮುಗಿಸಿಕೊಂಡು ಜಗನ್ನಾಥಸ್ವಾಮಿಯನ್ನು ಪೂಜಿಸಿದ ಬಳಿಕ ಮಹಾನದಿಯನ್ನು ದಾಟಿದನು.

೭. ಓಢ್ರದೇಶಾಧಿಪತಿಯು ಮುಂದೆ ನಡೆದು ಮಾರ್ಗವನ್ನು ತೋರುತ್ತಿರಲು ಆ ಮಹೀಶ್ವರನು ಸೈನ್ಯಸಮೇತನಾಗಿ ಏಕಾಮ್ರವನಕ್ಕೆ ಹೋದನು.

೮–೧೦. ಸ್ವಲ್ಪದೂರ ನಡೆದುಹೋದಮೇಲೆ ಆ ಭೂಪತಿಯು ಗಂಧವಹೆಯೆಂಬ ಹೆಸರುಳ್ಳುದೂ, ತಣ್ಣನೆಯ ನೀರುಳ್ಳುದೂ ಆದ ವೇಗವತೀ ನದಿಯನ್ನು ಜಾಗ್ರತೆಯಾಗಿ ದಾಟಿ ಪೂರ್ವಾಹ್ಣ ಸಮಯಕ್ಕೆ ಸರಿಯಾಗಿ ಕೋಟಿಲಿಂಗೇಶ್ವರನ ಪೂಜಾ ಸಮಯದ ಚರ್ಚರೀ, ಶಂಖ, ಕಹಳೆ, ಮೃದಂಗ, ಮುರಜವೇ ಮೊದಲಾದ ವಾದ್ಯಧ್ವನಿಗಳನ್ನೊಳಗೊಂಡ ಮಹಾರಣ್ಯವನ್ನು ಸೇರಿ ದೂರದಿಂದಲೇ ಆ ಧ್ವನಿಯನ್ನು ಕೇಳಿದನು

೧೧. ಆಗಲಾತನು ಆ ಧ್ವನಿಯು ನೀಲಾಚಲನಿವಾಸಿಯಾದ ಮಾಧವನ ಮಂದಿರದಿಂದಲೇ ಹೊರಟು ಬರುತ್ತಿರುವುದಾಗಿ ತಿಳಿದು ಸಂತುಷ್ಟನಾಗಿ ನಾರದಮುನಿಯನ್ನು ಕೇಳಿದನು. "ಎಲೈ ಮುನಿಯೇ! ಈ ಧ್ವನಿಯೆತ್ತಣದು?

ನೀಲಾದ್ರಿಶಿಖರಾವಾಸಃ ಸ್ಸಾಪ್ತಃ ಕಿಂ ಪರಮೇಶ್ವರಃ ।
ಯದರ್ಚಾಸಮಯೇ ಹ್ಯೇಷ ಶ್ರೂಯತೇ ಸಂಕುಲಧ್ವನಿಃ ॥ ೧೨ ॥
ಉತಾಹೋಽಪ್ಯನ್ಯದೇವೋ ವಾ ನಿಕಟೇ ವರ್ತತೇ ಮುನೇ ।
ಇತಿ ಪೃಷ್ಟಸ್ತದಾ ರಾಜ್ಞಾ ಪ್ರೋವಾಚ ಮುನಿಪುಂಗವಃ ॥ ೧೩ ॥
ರಾಜನ್ಸುದುರ್ಲಭಂ ಕ್ಷೇತ್ರಂ ಗೋಪಿತಂ ಮುರವೈರಿಣಾ ।
ನ ತತ್ರಾಸ್ತೀತಿ ಭಗವಾನನ್ಯೈರಪಿ ಜ್ಞಾಯತೇ ನೃಭಿಃ ॥ ೧೪ ॥
ತ್ವಂ ಹಿ ಭಾಗ್ಯವತಾಂ ಶ್ರೇಷ್ಠಸ್ತ್ವದ್ಭಾಗ್ಯಾತ್ತೇ ಪುರೋಧಸಾ ।
ದೃಷ್ಟಃ ಕಥಂಚಿದ್ಭಗವಾನ್ಸಂಯತೇಂದ್ರಿಯವರ್ತ್ಮನಾ ॥ ೧೫ ॥
ತ್ವಂ ಹಿ ತಾವದ್ಬಲೈರ್ಯುಕ್ತಃ ಷಡಂಗೈರ್ನೃಪಸತ್ತಮ ।
ಸಾಹಸೇಽತಿಪ್ರವೃತ್ತೋಽಸಿ ಸಂಶಯೋ ಮೇ ಮಹೀಪತೇ ॥ ೧೬ ॥
ಸಂವರ್ತತೇ ನೀಲಗಿರಿರ್ಯೋಜನೇ ತು ತೃತೀಯಕೇ ।
ಇದಂ ತ್ವೇಕಾಮ್ರಕವನಂ ಕ್ಷೇತ್ರಂ ಗೌರೀಪತೇರ್ವಿಭೋಃ ।
ನಾತಿದೂರೇ ಮಹೀಪಾಲ ಭೀತಃ ಸ ಶರಣಾಗತಃ ॥ ೧೭ ॥

---

೧೨. ನಾವು ನೀಲಾಚಲಶಿಖರದಲ್ಲಿ ನೆಲಸಿರುವ ಪರಮೇಶ್ವರನ ಸಮೀಪ ವನ್ನು ಸಾರಿದೆವೆ? ಈಗ ನಾವು ಆಲಿಸುತ್ತಿರುವುದು ಆ ಭಗವಂತನ ಪೂಜಾ ಸಮಯದ ವಾದ್ಯಗಳ ಸಂಕುಲಧ್ವನಿಯೆ?

೧೩. ಅಥವಾ, ಮತ್ತಾವುದಾದರೂ ದೇವತಾ ಮೂರ್ತಿಯು ಸಮೀಪ ದಲ್ಲಿಯೇ ಇರುವುದೆ?" ಇಂದ್ರದ್ಯುಮ್ನರಾಜನಿಂತು ಪ್ರಶ್ನಿಸಲು ಮುನಿಪುಂಗವ ನಾದ ನಾರದನು ಹೇಳತೊಡಗಿದನು.

೧೪. "ಭೋ ರಾಜನ್! ಅತಿದುರ್ಲಭವಾದ ಈ ಕ್ಷೇತ್ರವು ಮುರವೈರಿ ಯಾದ ಆ ಪರಮಾತ್ಮನಿಂದ ಸಂರಕ್ಷಿತವಾಗಿರುವುದು. ಇಲ್ಲಿ ಭಗವಂತನಿರು ವುದನ್ನಾದರೂ ತಿಳಿಯಲು ಸಾಧ್ಯವಲ್ಲವು.

೧೫. ಆದರೆ ನೀನು ಭಾಗ್ಯವಂತರಲ್ಲಿ ಶ್ರೇಷ್ಠನಾದವನು. ನಿನ್ನ ಭಾಗ್ಯದ ಮಹತ್ತಿನಿಂದಲೇ, ಇಂದ್ರಿಯಗಳನ್ನು ಜಯಿಸಿ ಸನ್ಮಾರ್ಗದಲ್ಲಿಯೇ ನಡೆಯುತ್ತಿ ರುವ ನಿನ್ನ ಪುರೋಹಿತನು ಬಹು ಕಷ್ಟದಿಂದ ಹೇಗೆಹೇಗೆಯೋ ಆ ಸ್ವಾಮಿಯನ್ನು ಸಂದರ್ಶಿಸಿದನು.

೧೬. ಅಯ್ಯಾ ನೃಪಶ್ರೇಷ್ಠನೇ! ನೀನಾದರೋ ಷಡಂಗಸಹಿತನೂ, ಸೈನ್ಯ ಸಮೇತನೂ ಆಗಿ ಆ ದೇವನನ್ನು ಕಾಣುವ ಸಾಹಸವನ್ನು ಮಾಡುತ್ತಿರುವೆಯಾ ದುದರಿಂದ ನನಗೇಕೋ ಸಂಶಯವಾಗುತ್ತಿರುವುದು.

೧೭. ನೀಲಾಚಲವಾದರೋ ಇಲ್ಲಿಗೆ ಮೂರನೆಯ ಯೋಜನದಲ್ಲಿರುತ್ತದೆ. ಈಗ ನೀನು ಧ್ವನಿಯನ್ನಾಲಿಸುತ್ತಿರುವುದಾದರೋ ಸರ್ವಾಂತರ್ಯಾಮಿಯಾದ

ಇಂದ್ರದ್ಯುಮ್ನ ಉವಾಚ :—

ಕಥಂ ಸ ಭೀತೋ ಗೌರೀಶಃ ಕಿಂ ವಾ ಶರಣಮಾಗತಃ ॥ ೧೮ ॥
ದದಾಹ ತ್ರಿಪುರಂ ಘೋರಂ ಶರೇಣೈಕೇನ ಯಃ ಪುರಾ ।
ಅತ್ರ ಮೇ ವಿಸ್ಮಯೋ ಜಾತಃ ಶ್ರೋತುಮಿಚ್ಛಾಮಿ ದುರ್ಲಭಂ ॥ ೧೯ ॥
ರಕ್ಷಿತಾ ಭವಭೀತಾನಾಂ ಭವಃ ಪರಮಪಾವನಃ ।
ಕಿಮರ್ಥಂ ಭಯಭೀತೋಽಸೌ ಕಃ ಸಮರ್ಥೋಽಸ್ಯ ವೈ ಜಯೇ ॥ ೨೦ ॥

ನಾರದ ಉವಾಚ :—

ಅತ್ರ ತೇ ಕಥಯಿಷ್ಯಾಮಿ ಪುರಾವೃತ್ತಂ ಮಹೀಪತೇ ।
ಉಪಯೇಮೇ ಪುರಾ ಗೌರೀಂ ತಪಸಾ ವಶಮಾಗತಃ ॥ ೨೧ ॥
ಬ್ರಹ್ಮಚಾರೀ ಹಿಮಗಿರೌ ಭಗವಾನ್ನೀಲಲೋಹಿತಃ ।
ಉತ್ಸೃಜ್ಯ ಬ್ರಹ್ಮಚರ್ಯಂ ತು ಸೋಽನಂಗಶರಪೀಡಿತಃ ॥ ೨೨ ॥
ತಯಾ ರೇಮೇ ರುಚಿರಯಾ ಯೌವನೋನ್ಮತ್ತಯಾ ನೃಪ ।
ತತ್ಪಿತುರ್ವಿಷಯೇ ಭೋಗಾನ್ಬುಭುಜೇ ದೇವಕಾಂಕ್ಷಿತಾನ್ ॥ ೨೩ ॥

---

ಗೌರೀಪತಿಯ ಏಕಾಮ್ರವನ ಕ್ಷೇತ್ರವು. ಆ ಗಿರಿಜಾಪತಿಯು ಇಲ್ಲಿಯೇ ಬಹು ಸಮೀಪದಲ್ಲಿಯೇ ಹೆದರಿ ಶರಣಾಗತನಾಗಿ ಬಂದಿರುವನು.

೧೮–೧೯. ಇಂದ್ರದ್ಯುಮ್ನನು ಕೇಳುತ್ತಾನೆ:— "ಎಲೈ ನಾರದ ಮುನಿಯೇ! ಪೂರ್ವದಲ್ಲಿ ಯಾವಾತನು ಘೋರವಾದ ತ್ರಿಪುರವನ್ನು ಒಂದೇ ಒಂದು ಬಾಣದಿಂದ ಸುಟ್ಟನೋ ಆ ಗೌರೀಶನಾದ ಪರಮೇಶ್ವರನು ಯಾರನ್ನು ಹೇಗೆ ಶರಣು ಹೊಂದಿದನು? ಈ ವಿಷಯದಲ್ಲಿ ನನಗೆ ಆಶ್ಚರ್ಯವುಂಟಾಗಿರುವುದು. ದುರ್ಲಭವಾದ ಈ ವೃತ್ತಾಂತವನ್ನು ಕೇಳಲು ನನಗೆ ಇಚ್ಛೆಯುಂಟಾಗಿರುವುದು.

೨೦. ಭವಸಾಗರಭೀತರಾದ ಮಾನವರನ್ನು ಸಲಹುವವನಾಗಿ ಪರಮಪಾವನನೆನಿಸಿದ ಆ ಭವನು ಭಯಭೀತನಾದುದೆಂತು? ಆತನನ್ನು ಜಯಿಸುವ ಸಾಮರ್ಥ್ಯವದಾರಿಗಿರುವುದು ?"

೨೧–೨೨. ನಾರದನು ಹೇಳುತ್ತಾನೆ:—ಅಯ್ಯಾ ಮಹೀಪತಿಯೇ ! ಈ ವಿಷಯದಲ್ಲಿ ಪೂರ್ವದಲ್ಲಿ ನಡೆದ ವೃತ್ತಾಂತವೊಂದನ್ನು ಹೇಳುತ್ತೇನೆ; ಕೇಳು. ಪೂರ್ವದಲ್ಲಿ ಆ ಪರಶಿವನು ಗೌರಿದೇವಿಯ ತಪಸ್ಸಿಗೆ ವಶನಾಗಿ ಬ್ರಹ್ಮಚಾರಿಯಾಗಿ ಬಂದು ಹಿಮವತ್ಪರ್ವತದಲ್ಲಿ ತನ್ನ ಬ್ರಹ್ಮಚರ್ಯವನ್ನು ತೊರೆದು ಅನಂಗಶರ ಪೀಡಿತನಾಗಿ ಆಕೆಯನ್ನು ಮದುವೆಯಾದನು.

೨೩. ತರುವಾಯ ಆತನು ಮನೋಹರೆಯೂ, ಯೌವನೋನ್ಮತ್ತೆಯೂ ಆದ ಆ ದೇವಿಯೊಡನೆ ರಮಿಸುತ್ತ ಆಕೆಯ ತಂದೆಯಾದ ಹಿಮವಂತನ ಭವನದಲ್ಲಿ ದೇವಕಾಂಕ್ಷಿತಗಳಾದ ಭೋಗಗಳನ್ನು ಭೋಗಿಸುತ್ತಿದ್ದನು.

**ಕದಾಚಿದಥ ನಿರ್ಯಾತೀ ಸ್ವವಾಸಭವನಾತ್ಸತೀ ।**
**ಸಾಮಪೂರ್ವಂ ಕುಲಸ್ತ್ರೀಭಿರ್ಮಾತ್ರೋಕ್ತಾ ಸಸ್ಮಿತಂ ವಚಃ ॥ ೨೪ ॥**
**ಆರ್ಯೇ ಮಹತ್ತಪಸ್ತಪ್ತಂ ವರಾರ್ಥಂ ಗಹನೇ ವನೇ ।**
**ನಿಷ್ಕುಲೋ ನಿರ್ಗುಣೋ ವೃದ್ಧೋ ವರಃ ಪ್ರಾಪ್ತೋ ವರಾನನೆ ॥ ೨೫ ॥**
**ದಿವಾರಾತ್ರಂ ನ ತ್ಯಜಸಿ ಸನ್ನಿಧಿಂ ತಾದೃಶಸ್ಯ ವೈ ।**
**ಕೋ ಗುಣಃ ಕಥ್ಯತಾಂ ವತ್ಸೆ ಕಿಂ ವಾ ಪತ್ಯುಃ ಪ್ರಸಾದಜಂ ॥ ೨೬ ॥**
**ಭೂಷಣಾಚ್ಛಾದನಂ ಪ್ರಾಪ್ತಂ ಮನ್ಯೈವ ಗೃಹವಾಸಿನೀ ।**
**ಚಿರಂ ತಿಷ್ಠಸಿ ಭದ್ರೆ ತ್ವಂ ಪಿತೃಭೋಗೋಪಲಾಲಿತಾ ॥ ೨೭ ॥**
**ತ್ರೈಲೋಕೇ ಯಾಸ್ತು ಕನ್ಯಾ ವೈ ಪರಿಣೀತಾಃ ಪಿತುರ್ಗೃಹಾತ್ ।**
**ಪ್ರಯಾಂತ್ಯಲಂಕೃತಾ ಭರ್ತ್ರಾ ಭರ್ತೃವೇಶ್ಮನಿ ಶುಶ್ರುಮ ॥ ೨೮ ॥**
**ಅಹಂ ತು ಮಾನಸೀ ಕನ್ಯಾ ಪಿತ್ರೂಣಾಂ ಪಿತೃಲೋಕತಃ ।**
**ಆಗತಾ ತು ಮಹಾಭಾಗೆ ಪರಿಣೀತಾ ಹಿಮಾದ್ರಿಣಾ ॥ ೨೯ ॥**

---

೨೪. ಒಂದಾನೊಂದು ದಿನ ಗೌರಿಯು ಮನೆಯನ್ನು ಬಿಟ್ಟು ಪತಿ ಸಮೀಪಕ್ಕೆ ಹೋಗುತ್ತಿರುವಾಗ ಕುಲಸ್ತ್ರೀಯರೂ, ಆಕೆಯ ತಾಯಿಯೂ ಆಕೆಯನ್ನು ಕುರಿತು ಸಾಮೋಪಾಯಪೂರ್ವಕವಾಗಿ ನಸುನಗುತ್ತ ಈ ಮಾತನ್ನು ಹೇಳಿದರು.

೨೫. "ಆರ್ಯೇ! ವರನಿಗಾಗಿ ವನದಲ್ಲಿ ನೀನು ಮಹತ್ತರವಾದ ತಪಸ್ಸನ್ನು ಮಾಡಿದೆ. ಓ ವರಾನನೇ! ಆದರೇನು ? ನೀನು ಕುಲವಿಲ್ಲದ ಗುಣವಿಲ್ಲದ ಮುದುಕನಾದ ವರನನ್ನೇ ಪಡೆದೆ.

೨೬–೨೭. ಇಂತಹ ಆ ನಿನ್ನ ವರನ ಸನ್ನಿಧಿಯನ್ನು ಹಗಲಿರುಳೂ ನೀನು ಬಿಟ್ಟಿರಲಾರೆಯಲ್ಲ! ವತ್ಸೇ! ಅವನಲ್ಲಿ ಯಾವ ಗುಣವಿರುವುದು! ಆ ನಿನ್ನ ಪತಿಯ ಪ್ರಸಾದವಾಗಿ ಏನೇನು ಒಡವೆ ವಸ್ತ್ರಗಳನ್ನು ಪಡೆದೆ? ಎಲೌ ಮಂಗಳಾಂಗಿಯೇ ! ನೀನು ಬಹಳ ಕಾಲದಿಂದಲೂ ನನ್ನ ಮನೆಯಲ್ಲಿಯೇ ತಂದೆಯೊದಗಿಸಿದ ಭೋಗಗಳಿಂದ ಲಾಲಿತೆಯಾಗಿ ವಾಸಮಾಡುತ್ತಿರುವೆ.

೨೮. ಈ ಮೂರು ಲೋಕಗಳಲ್ಲಿ ಯಾವ ಯಾವ ಕನ್ನಿಕೆಯರಿರುವರೋ ಅವರೆಲ್ಲರೂ ಮದುವೆಯಾದ ಬಳಿಕ ತಂತಮ್ಮ ಗಂಡಂದಿರು ಕೊಟ್ಟ ವಸ್ತ್ರ ಭೂಷಣಾದಿಗಳಿಂದಲಂಕೃತರಾಗಿ ತಂದೆಯ ಮನೆಯನ್ನು ಬಿಟ್ಟು ಅವರವರ ಮನೆಗಳಿಗೆ ಹೋಗುತ್ತಾರೆಂದು ನಾವು ಕೇಳಿರುತ್ತೇವೆ.

೨೯. ಎಲೌ ಭದ್ರೇ! ನಾನಾದರೋ, ಪಿತೃದೇವತೆಗಳ ಮಾನಸೀಕನ್ಯೆಯು ; ನಿನ್ನ ತಂದೆಯಾದ ಹಿಮವಂತನು ನನ್ನನ್ನು ಪಿತೃಲೋಕದಲ್ಲಿಯೇ ಪರಿಣಯವಾಗಲು ನಾನಿಲ್ಲಿಗೈತಂದೆನು.

**ಇತ್ಥಮುಕ್ತ್ವಾ ಮಯಾ ಹಾಸ್ಯಾನ್ನ ಕ್ರೋಧಾಚ್ಚ ಲಲೋಚನೇ ।**
**ಜಾಮಾತುರಗ್ರೇ ನೋ ವಾಚ್ಯಂ ಸ ಹಿ ವಿಷ್ಣುಸಮೋ ಮತಃ ॥ ೩೦ ॥**

ನಾರದ ಉವಾಚ :—

**ಮಾತುರಿತ್ಥಂ ವಚಃ ಶ್ರುತ್ವಾ ಭರ್ತೃನಿಂದಾಪ್ರಪೀಡಿತಾ ।**
**ಕೋಪಪ್ರಸ್ಫುರದೋಷ್ಠೀ ಸಾ ವಾಚಂ ನೋಚೇ ಮನಾಗಪಿ ॥ ೩೧ ॥**
**ಪ್ರಿಯಾಂತಿಕಂ ಭರ್ತುರ್ನಿಹ್ನುವಾನಾಽಂಬಿಕಾ ವಚಃ ।**
**ಜಗಾದ ಪರುಷಂ ವಾಕ್ಯಂ ಸ್ನೇಹಗರ್ಭಂ ಮಿತಾಕ್ಷರಂ ॥ ೩೨ ॥**
**ಸ್ವಾಮಿನ್ನ ಸಾಂಪ್ರತಂ ಚೈತದ್ಯದ್ವಾಸಃ ಶ್ವಶುರಾಲಯೇ ।**
**ಕ್ಷುದ್ರೇಯಸಾಮಪಿ ಗುರೋಸ್ತ್ರೈಲೋಕ್ಯಸ್ಯ ಕಥಂ ನು ತೇ ॥ ೩೩ ॥**
**ತದಾವಯೋರ್ನಾತ್ರ ಯೋಗ್ಯಾ ವಸತಿರ್ಮೇ ಪ್ರಿಯಂ ವಿಭೋ ।**
**ನ ಸಂತಿ ಕಿಂ ತೇ ವಾಸಾಯ ಯೋಗ್ಯಾ ವೈ ಭೂಮಯಃ ಪ್ರಭೋಃ ॥**
**ಇತ್ಯುಕ್ತಃ ಶಿವಯಾ ಸೋಽಥ ಭಗವಾನ್ವೃಷಭಧ್ವಜಃ ।**
**ತಯಾ ಸಾರ್ಧಂ ವೃಷಾರೂಢೋ ಮಧ್ಯದೇಶಂ ಯಯೌ ತ್ವರನ್ ॥**

---

೩೦. ವತ್ಸೆ! ನಾನೀರೀತಿ ಹೇಳಿದುದು ಪರಿಹಾಸಕ್ಕಾಗಿಯೇ ಹೊರತು ಯಥಾರ್ಥವಲ್ಲ. ಇದರಿಂದ ನೀನು ಕೋಪಗೊಂಡು ಕಣ್ಣುಗಳನ್ನು ಕೆಂಪಡರಿಸಿ ಕೊಂಡು ಅಳಿಯನಿಗೆ ಈ ವಿಚಾರವೆಲ್ಲವನ್ನೂ ಹೇಳಬೇಡ. ಆತನು ಸಾಕ್ಷಾತ್ ವಿಷ್ಣುವಿಗೆ ಸಮಾನನಾದವನೆಂದು ನನ್ನ ಅಭಿಪ್ರಾಯವು.''

೩೧. ನಾರದನು ಹೇಳುತ್ತಾನೆ:—ಎಲೈ ಇಂದ್ರದ್ಯುಮ್ನ ಮಹೀಪಾಲ! ತನ್ನ ತಾಯಿಯು ಈ ರೀತಿ ನುಡಿದ ಮಾತುಗಳನ್ನು ಕೇಳಿ ಆ ಗೌರಿಯು ಭರ್ತೃನಿಂದಾಪರವಾದ ಆ ಮಾತುಗಳಿಗೆ ಒಳಗೇ ಮರುಗಿ ಕೋಪದಿಂದ ತುಟಿಗಳ ದುರುತ್ತಿದ್ದರೂ ಯಾವ ಮಾತನ್ನೂ ಆಡಲಿಲ್ಲವು.

೩೨. ಆಕೆಯು ತನ್ನ ಪ್ರಿಯನಾದ ಶಂಕರನ ಬಳಿಗೈದಿ ಭರ್ತೃನಿಂದಾ ರೂಪವಾಗಿ ತನ್ನ ತಾಯಿಯು ಹೇಳಿದ ಮಾತುಗಳನ್ನು ಕಠಿನವಾಗಿಯೂ ಆದರೂ ಸ್ನೇಹಪೂರ್ವಕವಾಗಿ ಮಿತವಾದ ಮಾತುಗಳಿಂದಲೂ ಆತನಿಗೆ ಈ ರೀತಿ ತಿಳಿಸಿದಳು.

೩೩–೩೪. ''ಭೋ ಸ್ವಾಮಿನ್! ಈ ಶ್ವಶುರಗೃಹನಿವಾಸವು ಎಂತಹ ಅಲ್ಪರಿಗೂ ಸಹ ಯುಕ್ತವಾದುದಲ್ಲವು. ಎಂದಮೇಲೆ ಮೂರು ಲೋಕಗಳಿಗೂ ಗುರುವಾದ ನಿನಗೇತಕ್ಕೆ? ಆದುದರಿಂದ ನಾವೀರ್ವರೂ ಇಲ್ಲಿ ವಾಸಮಾಡುವುದು ನನಗೆ ಪ್ರಿಯವಲ್ಲವು. ಎಲೈ ವಿಭುವೇ! ಪ್ರಭುವಾದ ನಿನಗೆ ವಾಸಯೋಗ್ಯವಾದ ಬೇರಾವಸ್ಥಳಗಳೂ ಇಲ್ಲವೆ?''

೩೫. ಶಿವೆಯು ಈ ರೀತಿ ಹೇಳಲು ಭಗವಂತನಾದ ಆ ವೃಷಭಧ್ವಜನು

ವಿಲಂಘ್ಯ ಸರ್ವತೀರ್ಥಾನಿ ಪ್ರಯಾಗಂ ಪಾವನಂ ಮಹತ್ ।
ಪೂರ್ವಸಾಗರಗಾಮಿನ್ಯಾ ಗಂಗಾಯಾ ಉತ್ತರೇ ತಟೇ ॥ ೩೬ ॥
ವಾರಾಣಸೀಂ ನಾಮ ಪುರೀಂ ಗೌರ್ಯಾವಾಸಾಯ ನಿರ್ಮಮೇ ।
ಪಂಚಕ್ರೋಶಮಿತಾಂ ರಮ್ಯಾಂ ವರಪ್ರಾಸಾದಶೋಭಿತಾಂ ॥ ೩೭ ॥
ಅಟ್ಟಾಲಕಶತೈರ್ಯುಕ್ತಾಮಸಂಖ್ಯೋಪವನೈರ್ಯುತಾಂ ।
ನಾನಾತೀರ್ಥಸಮಾಯುಕ್ತಾಂ ನಾನಾಜನಸಮಾಕುಲಾಂ ॥ ೩೮ ॥
ಆಜ್ಞಯಾ ಧೂರ್ಜಟೇಃ ಶುಭ್ರಾಂ ನಿರ್ಮಿತಾಂ ವಿಶ್ವಕರ್ಮಣಾ ।
ಪಾವನೈಃ ಶೀತಲೈಃ ಗಂಗಾತರಂಗೈಃ ಕ್ಷಪಿತಾಂಹಸಾಂ ॥ ೩೯ ॥
ತತ್ರ ಮಧ್ಯೇ ಪುರೇ ಸ್ವರ್ಣಪ್ರಾಕಾರಾಟ್ಟಾಲಶೋಭಿತೇ ।
ರತ್ನಸ್ತಂಭೈಃ ಸುಘಟಿತೇ ಸರ್ವಾಶಾಪರಿಪೂರಕೇ ॥ ೪೦ ॥
ತಯಾ ರೇಮೇ ಪಶುಪತಿಃ ಶ್ರಿಯೇವ ಮಧುಸೂದನಃ ।
ಸಾ ಪುರೀ ವಿಶ್ವನಾಥೇನ ಕದಾಚಿನ್ನೈವ ಮುಚ್ಯತೇ ॥ ೪೧ ॥
ಅವಿಮುಕ್ತೇತಿ ಸಾ ಖ್ಯಾತಾ ನೃಣಾಂ ಮುಕ್ತಿಪ್ರದಾಯಿನೀ ।
ಪುರಾಸೀನ್ಮನುಜಾಧೀಶ ಸೇವಿತಾ ಭವಭೀರುಭಿಃ ॥ ೪೨ ॥

---

ಒಡನೆಯೇ ಆಕೆಯೊಡನೆ ವೃಷಭವನ್ನೇರಿ ಬಹು ಜಾಗ್ರತೆಯಾಗಿ ಮಧ್ಯದೇಶಕ್ಕೆ ಬಂದನು.

೩೬–೩೯. ಸಮಸ್ತ ತೀರ್ಥಗಳನ್ನೂ ದಾಟಿ, ಮಾಹಾತ್ಮ್ಯಯುಕ್ತವಾದ ಪಾವನ ಪ್ರಯಾಗವನ್ನೂ ದಾಟಿ ಹೊರಟ ಬಳಿಕ ಪೂರ್ವಸಾಗರವನ್ನು ಕುರಿತು ಹೋಗುತ್ತಿರುವ ಗಂಗಾನದಿಯ ಉತ್ತರತೀರದಲ್ಲಿ ತನ್ನ ನಲ್ಲೆಯಾದ ಗೌರಿ ದೇವಿಯ ವಾಸಕ್ಕಾಗಿ ವಾರಾಣಸಿಯೆಂಬ ಪಟ್ಟಣವನ್ನು ನಿರ್ಮಿಸಿದನು. ಆ ಪಟ್ಟಣವಾದರೋ ಐದು ಕ್ರೋಶಗಳ ಪರಿಮಿತಿಯುಳ್ಳುದಾಗಿ ಬಹು ರಮಣೀಯವಾಗಿ ಉಪ್ಪರಿಗೆಯ ಮನೆಗಳಿಂದ ಶೋಭಿಸಿ, ನೂರಾರು ಅಟ್ಟಲೆ ಗಳಿಂದಲೂ, ಅನೇಕ ವನಗಳಿಂದಲೂ, ಬಗೆಬಗೆಯ ತೀರ್ಥಗಳಿಂದಲೂ, ಬಗೆಬಗೆಯ ಜನಗಳಿಂದಲೂ ಕೂಡಿ ಧೂರ್ಜಟಿಯ ಆಜ್ಞೆಯಂತೆ ದೇವಶಿಲ್ಪಿ ಯಾದ ವಿಶ್ವಕರ್ಮನಿಂದ ನಿರ್ಮಿತವಾಗಿ ಶೀತಲವಾದ ಗಂಗಾತರಂಗಗಳಿಂದ ತೊಳೆದ ಪಾಪಗಳುಳ್ಳುದಾಗಿಯೂ ಇದ್ದಿತು.

೪೦–೪೧. ಆ ಪಶುಪತಿಯು ಆ ವಾರಾಣಸೀ ಪಟ್ಟಣದ ಮಧ್ಯದಲ್ಲಿ ಸ್ವರ್ಣ ಪ್ರಾಕಾರಗಳಿಂದಲೂ, ಅಟ್ಟಲೆಗಳಿಂದಲೂ ಶೋಭಿಸಿ, ರತ್ನಸ್ತಂಭಗಳಿಂದಲಂ ಕೃತವಾಗಿ, ಸಮಸ್ತ ಮನೋರಥಗಳನ್ನೂ ಈಡೇರಿಸುವಂತಹ ದಿವ್ಯಭವನ ದಲ್ಲಿ ಮಧುಸೂದನನು ಲಕ್ಷ್ಮೀದೇವಿಯೊಡನೆಂತೋ ಅಂತು ರಮಿಸುತ್ತಿದ್ದನು. ಆ ವಿಶ್ವನಾಥನು ಆ ಪಟ್ಟಣವನ್ನೆಂದಿಗೂ ಬಿಡಲೇ ಇಲ್ಲವು.

೪೨. ಎಲೈ ಮನುಜಾಧೀಶನೇ! ಪೂರ್ವದಲ್ಲಿ ಆ ಪಟ್ಟಣವು ಅವಿಮುಕ್ತ

**ತತ್ಪ್ರೋಷಿತಾ ತದಾ ಗೌರೀ ತೇನ ಭರ್ತ್ರಾ ಸ್ವಲಂಕೃತಾ ।**
**ಮಾತರಂ ಪಿತರಂ ಚಾಪಿ ನ ಸಸ್ಮಾರ ಮಹೀಪತೇ ॥ ೪೩ ॥**
**ಏವಂ ಬಹುಯುಗೇಽತೀತೇ ಕೈಲಾಸಾದ್ರಿಂ ಸ ಜಗ್ಮಿವಾನ್ ।**
**ಆತ್ಮನಃ ಕೋಟಿಲಿಂಗಾನಿ ತತ್ರ ಸಂಸ್ಥಾಪ್ಯ ವೈ ಪ್ರಭುಃ ॥ ೪೪ ॥**
**ರಾಜಾನಃ ಪಾಲಯಾಮಾಸುಸ್ತಾಂ ಪುರೀಂ ಬಹುಶೋ ನೃಪ ।**
**ತತ್ರಾಸೀತ್ಕಾಶಿರಾಜಾಖ್ಯಃ ಪುರಾ ದ್ವಾಪರಕೇ ಯುಗೇ ॥ ೪೫ ॥**
**ಶಂಭುಂ ಸ ತೋಷಯಾಮಾಸ ತಪಸೋಗ್ರೇಣ ವೈ ಪ್ರಭುಂ ।**
**ಜರಾಸಂಧಪುರೋಗಾಣಾಂ ರಾಜ್ಞಾಂ ಜೇತಾರಮಚ್ಯುತಂ ॥ ೪೬ ॥**
**ಸಂಗ್ರಾಮೇ ಪ್ರಭವಿಷ್ಯಾಮಿತ್ಯಭಿಸಂಧಾಯ ಪಾರ್ಥಿವಃ ।**
**ಪ್ರಾದಾತ್ತಸ್ಮೈ ವರಂ ಸೋಽಪಿ ಪಿನಾಕೀ ಪರಿತೋಷಿತಃ ॥ ೪೭ ॥**
**ಜೇತಾಸಿ ಕಂಸಹಂತಾರಂ ಸಂಗ್ರಾಮೇ ತ್ವಮರಿಂದಮ ।**
**ತವಾರ್ಥೇ ಪ್ರಮಥೈಃ ಸಾರ್ಧಮಹಂ ಯೋತ್ಸ್ಯೇ ವೃಷೇ ಸ್ಥಿತಃ ॥ ೪೮ ॥**

---

ಕ್ಷೇತ್ರವೆಂದು ಹೆಸರಾಗಿ ಮಾನವರೆಲ್ಲರಿಗೂ ಮುಕ್ತಿಯನ್ನು ದೊರೆಯಿಸುವು ದಾಗಿದ್ದಿತು. ಭವಭೀತರಾದ ಮಾನವರು ಅದನ್ನು ಸೇವಿಸುತ್ತಿದ್ದರು.

೪೩. ಗೌರಿದೇವಿಯು ತನ್ನ ಭರ್ತನಾದ ಶಂಕರನಿಂದ ವಸ್ತ್ರಭೂಷಣಾದಿ ಗಳಿಂದಲಂಕೃತಳಾಗಿ ಆತನೊಡನೆಯೇ ವಾಸಮಾಡುತ್ತ ತಾಯಿ ತಂದೆಯರನ್ನು ಸ್ಮರಿಸಲೇ ಇಲ್ಲವು.

೪೪. ಹೀಗೆ ಅನೇಕ ಯುಗಗಳು ಕಳೆದ ತರುವಾಯ ಆ ಶಿವನು ಆ ಭವನ ದಲ್ಲಿ ಕೋಟಿಲಿಂಗಗಳನ್ನು ಸಂಸ್ಥಾಪಿಸಿ ಕೈಲಾಸಾದ್ರಿಗೆ ಹೊರಟು ಹೋದನು.

೪೫. ಎಲೈ ದೊರೆಯೆ! ತರುವಾಯ ಆ ವಾರಾಣಸೀ ಪಟ್ಟಣವನ್ನು ಬಹಳ ಮಂದಿ ರಾಜರು ಆಳಿದರು. ಪೂರ್ವದಲ್ಲಿ ದ್ವಾಪರಯುಗದಲ್ಲಿಯಾದರೆ ಆ ಪಟ್ಟಣದಲ್ಲಿಯೇ ಕಾಶಿರಾಜನೆಂಬವನೊಬ್ಬನಿದ್ದನು.

೪೬–೪೮. ಆ ದೊರೆಯು ಜರಾಸಂಧನೇ ಮೊದಲಾದ ಅರಸರನ್ನು ಜಯಿಸಿದ ಅಚ್ಯುತನನ್ನು ರಣಾಂಗಣದಲ್ಲಿ ಗೆಲ್ಲುವೆನೆಂದು ಮನಸ್ಸಿನಲ್ಲಿ ಸಂಕಲ್ಪಿಸಿ ಕೊಂಡು ಉಗ್ರವಾದ ತಪಸ್ಸನ್ನು ಮಾಡಿ ಪ್ರಭುವಾದ ಶಂಭುವನ್ನು ಸಂತೋಷ ಗೊಳಿಸಿದನು. ಆ ಪಿನಾಕಿಯೂ ಸಹ ಅವನ ತಪಸ್ಸಿಗೆ ಮೆಚ್ಚಿ "ಎಲೈ ಕಾಶಿ ರಾಜನೇ! ನೀನು ಶತ್ರುಮರ್ದನನಾಗಿರುವೆ; ನೀನು ಕಂಸಸಂಹಾರಕನಾದ ಆ ಕೃಷ್ಣನನ್ನು ಯುದ್ಧದಲ್ಲಿ ಜಯಿಸುವೆ. ನಾನೂ ಸಹ ನಿನಗೋಸುಗ ವೃಷಭಾ ರೂಢನಾಗಿ ನನ್ನ ಪ್ರಮಥಗಣಗಳಿಂದೊಡಗೂಡಿ ಕಾಳಗಮಾಡುವೆನು" ಎಂದು ವರವನ್ನು ದಯೆಗೈದನು.

ಶಂಭೋರಿತಿ ವರಂ ಲಬ್ಧ್ವಾ ಪ್ರಮತ್ತಃ ಸ ನರಾಧಿಪಃ ।
ಶಂಖಚಕ್ರಧರಂ ಹರಿಮಾಹ್ವಯಾಮಾಸ ವೀರ್ಯವಾನ್ ॥ ೪೯ ॥
ಅಂತರ್ಯಾಮೀ ಸ ಭಗವಾನ್ ಜ್ಞಾತ್ವಾ ವೃತ್ತಾಂತಮೀದೃಶಂ ।
ಚಕ್ರಂ ಪ್ರಸ್ಥಾಪಯಾಮಾಸ ಕಾಶಿರಾಜಸ್ಯ ಸೂದನೇ ॥ ೫೦ ॥
ತದುಗ್ರದರ್ಶನಂ ಚಕ್ರಂ ಸಹಸ್ರಾದಿತ್ಯವರ್ಚಸಂ ।
ಕಾಶಿರಾಜಶಿರಶ್ಛಿತ್ವಾ ತದ್ವ್ಜಲಂ ತಾಂ ಪುರೀಂ ತತಃ ॥ ೫೧ ॥
ದದಾಹ ಕುಪಿತಂ ರಾಜನ್ವಿಷ್ಣೋರಾಶಯವೀರ್ಯವಿತ್ ।
ತದ್ದೃಷ್ಟ್ವಾ ಸುಮಹತ್ಕರ್ಮ ಕ್ರುದ್ಧಃ ಪಶುಪತಿಸ್ತದಾ ॥ ೫೨ ॥
ಗಣೈರ್ವೃತೋ ವೃಷಾರೂಢಃ ಪಿನಾಕೀ ತದುಪಾದ್ರವತ್ ।
ತತಃ ಸುದರ್ಶನಂ ಚಕ್ರಂ ದೃಷ್ಟ್ವಾ ತಂ ಪ್ರಥಮಂ ಪುರಃ ॥ ೫೩ ॥
ಶಂಭುಃ ಪಾಶುಪತಾಸ್ತ್ರಂ ತಚ್ಚ ಕಾರೋತ್ಪಾತಸನ್ನಿಭಂ ।
ಪುರಾ ವಿಷ್ಣೋರ್ವರಂ ಪ್ರಾಪ್ತಂ ಶಂಭುನಾ ಭಕ್ತಿತೋಷಿತಾತ್ ॥ ೫೪ ॥

---

೪೯. ಪ್ರತಾಪಶಾಲಿಯಾದ ಕಾಶಿರಾಜನು ಶಂಭುವಿನಿಂದ ಈ ರೀತಿ ವರವನ್ನು ಪಡೆದು ಪ್ರಮತ್ತನಾಗಿ ಶಂಖಚಕ್ರಧರನಾದ ಶ್ರೀ ಹರಿಯನ್ನು ಯುದ್ಧಕ್ಕೆ ಕರೆದನು.

೫೦. ಸರ್ವಭೂತಾಂತರ್ಯಾಮಿಯಾದ ಶ್ರೀ ಕೃಷ್ಣನಾದರೋ ಈ ವೃತ್ತಾಂತವನ್ನರಿತುಕೊಂಡು ಆ ಕಾಶಿರಾಜನನ್ನು ಕೊಲ್ಲಲೋಸುಗ ತನ್ನ ಚಕ್ರಾಯುಧವನ್ನು ಕಳುಹಿಸಿದನು.

೫೧–೫೨. ಮಹಾಭಯಂಕರಾಕಾರವಾದುದೂ, ಸಹಸ್ರಸೂರ್ಯರ ತೇಜಸ್ಸನ್ನೊಳಕೊಂಡುದೂ ಆದ ಆ ಚಕ್ರವಾದರೋ ಕಾಶಿರಾಜನ ಶಿರಸ್ಸನ್ನೂ ಕತ್ತರಿಸಿ, ಶ್ರೀಮನ್ಮಹಾವಿಷ್ಣುವಿನ ಅಭಿಪ್ರಾಯವನ್ನೂ, ಪರಾಕ್ರಮವನ್ನೂ ತಿಳಿದದ್ದರಿಂದ ಕೋಪಗೊಂಡು ಆ ಪಟ್ಟಣವನ್ನೂ ದಹಿಸಿತು. ವಿಷ್ಣುಚಕ್ರ ವೆಸಗಿದ ಈ ಮಹತ್ತರವಾದ ಕರ್ಮವನ್ನು ಕಂಡು ಪಶುಪತಿಯು ಕ್ರುದ್ಧನಾದನು.

೫೩–೫೫. ಆಗಲಾ ಶಂಭುವು ಪ್ರಮಥಗಣಗಳೊಡಗೂಡಿ ವೃಷಭವನ್ನೇರಿ ಆ ಕೃಷ್ಣನನ್ನಟ್ಟಿ ಹೊರಟನು. ಆತನ ಮುಂಗಡೆಯಿದ್ದ ಸುದರ್ಶನ ಚಕ್ರವನ್ನು ಕಂಡು ಆ ಶಿವನು ಉತ್ಪಾತಕ್ಕೆಣೆಯಾದ ಪಾಶುಪತಾಸ್ತ್ರವನ್ನು ಅದರ ಮೇಲೆ ಪ್ರಯೋಗಿಸಿದನು. ಎಲೈ ಇಂದ್ರದ್ಯುಮ್ನನೇ! ಪೂರ್ವದಲ್ಲಿ ಆ ಶಿವನು ವಿಷ್ಣುವನ್ನು ತಪಸ್ಸಿನಿಂದ ಸಂತೋಷಗೊಳಿಸಿ ಆಯಸ್ತ್ರವನ್ನು ವರವಾಗಿ ಪಡೆದಿದ್ದನು. ಆಗ ಮಹಾವಿಷ್ಣುವು "ಎಲೈ ಶಂಭುವೇ! ನೀನು ಈ ಅಸ್ತ್ರವನ್ನು ಸ್ಮರಿಸುತ್ತಲೇ

ಬಲೇನಾಪ್ಯಾಯಯಿಷ್ಯಾಮಿ ತವಾಸ್ತ್ರಂ ಸಂಸ್ಕೃತಸ್ತ್ವಯಾ ।
ಮಯಿ ಚೇತ್ಪ್ರತಿಕೂಲಸ್ತ್ವಂ ಭವಿಷ್ಯತಿ ಚ ನಿಷ್ಪ್ರಭಂ ॥ ೫೬ ॥
ಘೋರೇ ಪಾಶುಪತೇ ಚಾಸ್ಮಿನ್ನಸ್ತ್ರೇ ಚ ವಿಫಲೀಕೃತೇ ।
ವಾರಾಣಸ್ಯಾಂ ಚ ದಗ್ಧಾಯಾಂ ಭಯತ್ರಸ್ತೋ ವೃಷಧ್ವಜಃ ॥ ೫೭ ॥
ತುಷ್ಟಾವ ಜಗತಾಮಾದಿಮನಾದಿಂ ಪುರುಷೋತ್ತಮಂ ॥ ೫೭ ॥

ಮಹಾದೇವ ಉವಾಚ :—

ನಾರಾಯಣ ಪರಂಧಾಮ ಪರಮಾತ್ಮನ್ಪರಾತ್ಪರ ।
ಸಚ್ಚಿದಾನಂದವಿಭವ ನಿರಂಜನ ನಮೋಽಸ್ತು ತೇ ॥ ೫೮ ॥
ಜಗತ್ಕಾರಣ ಸೃಷ್ಟ್ಯಾದಿಕರ್ಮಕೃದ್ಗುಣಭೇದತಃ ।
ಮಾಯಯಾ ನಿಜಯಾ ಗುಪ್ತ ಸ್ವಪ್ರಕಾಶ ನಮೋಽಸ್ತು ತೇ ॥ ೫೯ ॥
ನಾಂತರ್ಬಹಿರ್ಬಹಿಶ್ಚಾಂತರ್ದೂರಸ್ಥೋ ನಿಕಟಾಶ್ರಯಃ ।
ಗುರುರ್ಲಘುಃ ಸ್ಥಿರೋಽಣೀಯಾನ್ಸ್ಥವೀಯಾಂಶ್ಚ ನಮೋಽಸ್ತು ತೇ ॥ ೬೦ ॥

---

ನಿನ್ನ ಬಲವನ್ನೂ ಈ ಅಸ್ತ್ರದ ಬಲವನ್ನೂ ವೃದ್ಧಿಗೊಳಿಸುತ್ತೇನೆ. ಆದರೆ ನೀನು ನನ್ನ ವಿಷಯದಲ್ಲಿ ಪ್ರತಿಕೂಲನಾದರೆ ಈ ಪಾಶುಪತಾಸ್ತ್ರವು ನಿಸ್ತೇಜಸ್ಕವಾಗುತ್ತದೆ'' ಎಂದು ಹೇಳಿದನು.

೫೬–೫೭. ಆದರಂತೆ ಶಂಭುವು ವಿಷ್ಣುವಿಗೆ ಪ್ರತಿಕೂಲನಾದುದರಿಂದ ಘೋರವಾದ ಆ ಪಾಶುಪತಾಸ್ತ್ರವು ಪ್ರಭೆಯಿಲ್ಲದುದಾಯಿತು. ವಾರಾಣಸೀ ಪಟ್ಟಣವೂ ಮೊದಲೇ ಸುಟ್ಟು ಹೋಗಿದ್ದಿತು. ಇದರಿಂದ ಆ ವೃಷಭಧ್ವಜನು ಭಯಭೀತನಾಗಿ ಜಗತ್ತಿಗೆ ಆದಿದೇವನೂ, ಪುರಾಣಪುರುಷನೂ ಆದ ಆ ಪುರುಷೋತ್ತಮನನ್ನು ಈ ಪ್ರಕಾರವಾಗಿ ಸ್ತುತಿಸಿದನು.

೫೮. ಮಹಾದೇವನು ಹೇಳುತ್ತಾನೆ:—''ಓ ನಾರಾಯಣಾ! ಪರಂಧಾಮನೂ, ಪರಮಾತ್ಮನೂ, ಪರಾತ್ಪರನೂ, ಸಚ್ಚಿದಾನಂದ ವೈಭವವುಳ್ಳವನೂ, ನಿರಂಜನನೂ ಆದ ನಿನಗೆ ನಮಸ್ಕಾರವು!

೫೯. ಈ ಜಗತ್ತಿಗೆ ಕಾರಣನಾಗಿ ಸತ್ವರಜಸ್ತಮೋಗುಣಭೇದಗಳಿಂದ ಸೃಷ್ಟಿಯೇ ಮೊದಲಾದ ಕಾರ್ಯಗಳನ್ನು ಮಾಡುವವನೂ, ನಿಜಮಾಯೆಯಿಂದ ಗುಪ್ತನಾಗಿರುವವನೂ, ಸ್ವಪ್ರಕಾಶನೂ ಆದ ನಿನಗೆ ನಮಸ್ಕಾರವು.

೬೦. ಎಲೈ ಹರಿಯೇ! ಒಳಗಿಲ್ಲದೆ ಹೊರಗಿಲ್ಲದೆ, ಒಳಗೂ ಹೊರಗೂ ಇರುವವನಾಗಿ, ಬಹಳ ದೂರದಲ್ಲಿದ್ದರೂ, ಭಕ್ತರಿಗೆ ಬಹಳ ಸಮೀಪದಲ್ಲಿ ಆಶ್ರಯವನ್ನು ಕೊಡುವವನಾಗಿ, ಗುರುವಾಗಿಯೂ, ಲಘುವಾಗಿಯೂ, ಸ್ಥಿರನಾಗಿಯೂ, ಅಣುವಾಗಿಯೂ, ಮಹತ್ತಾಗಿಯೂ ಇರುವೆ. ನಿನಗೆ ನಮೋ ನಮಃ.

ಕೋಟಿಯುಶ್ಚತುರಾಸ್ಯಾಶ್ಚ ಪರಾರ್ಧ್ಯಂ ಮಮ ಚಾತುಲ ।
ಯದಪಾಂಗವಿಲಾಸೋತ್ಥಾಃ ತಸ್ಮೈ ಕಾಲಾತ್ಮನೇ ನಮಃ ॥ ೬೧ ॥
ಏಕೈಕರೋಮಾಕಲಿತಬ್ರಹ್ಮಾಂಡಗಣಸಂವೃತಂ ।
ಮಾನಾತೀತಂ ವಪುರ್ಯಸ್ಯ ತಸ್ಮೈ ವಿಶ್ವಾತ್ಮನೇ ನಮಃ ॥ ೬೨ ॥
ಸ್ವಕಾಲಪರಿಮಾಣೇನ ವೇಧಸಃ ಪ್ರಲಯೋದ್ಭವೌ ।
ಮನ್ವಂತರಾದಿಘಟನಾಕಲನಾಯ ನಮೋಽಸ್ತು ತೇ ॥ ೬೩ ॥
ಸೃಷ್ಟೋಽಹಂ ತಮಸಾ ನಾಥ ತ್ವತ್ಪ್ರಭಾವಾನಭಿಜ್ಞಕಃ ।
ತತ್ ಕ್ಷಮಸ್ವಾಪರಾಧಂ ಮೇ ತ್ರಾಹಿ ಮಾಂ ಶರಣಾಗತಂ ॥ ೬೪ ॥
ಸ್ತುತಿಮಿತ್ಥಂ ಪ್ರಕುರ್ವಾಣೇ ತಸ್ಮಿನ್ಸ್ತ್ರಿಪುರದಾಹಿನಿ ।
ಚಕ್ರರೂಪಂ ಪರಿತ್ಯಜ್ಯ ಆವಿರಾಸೀದಧೋಕ್ಷಜಃ ॥ ೬೫ ॥
ಪ್ರಸನ್ನವದನಃ ಶ್ರೀಮಾನ್ ಶಂಖಚಕ್ರಗದಾಧರಃ ।
ತಾರ್ಕ್ಷ್ಯಪದ್ಮಾಸನಗತೋ ವನಮಾಲಾವಿಭೂಷಣಃ ॥ ೬೬ ॥
ಹಾರಕುಂಡಲಕೇಯೂರಮುಕುಟಾದಿಭಿರುಜ್ಜ್ವಲಃ ।
ವಾಮೋತ್ಸಂಗಗತಾಂ ಲಕ್ಷ್ಮೀಂ ಸತ್ಯಾಂ ದಕ್ಷಿಣಪಾರ್ಶ್ವಗಾಂ । ೬೭ ॥

---

೬೧. ಯಾವ ನಿನ್ನ ಅಪಾಂಗವಿಲಾಸದಿಂದ ಕೋಟ್ಯಂತರ ಚತುರಾನನರೂ, ನನ್ನಂತಹ ಅಸಂಖ್ಯಾತ ಶಿವರೂ ಉತ್ಪನ್ನರಾಗುವರೋ ಅಂತಹ ಸಮಾನ ರಹಿತನೂ, ಕಾಲಸ್ವರೂಪನೂ ಆದ ನಿನಗೆ ನಮಸ್ಕಾರವು.

೬೨. ನಿನ್ನ ಒಂದೊಂದು ರೋಮದಲ್ಲಿಯೂ ಬ್ರಹ್ಮಾಂಡಸಮೂಹಗಳನ್ನೇ ಒಳಗೊಂಡಿರುವವನೂ, ಅಳತೆಗೆ ನಿಲುಕದ ಶರೀರವುಳ್ಳವನೂ, ವಿಶ್ವಾತ್ಮನೂ ಆದ ನಿನಗೆ ನಮಸ್ಕಾರವು.

೬೩. ನಿನ್ನ ಕಾಲಪರಿಮಾಣದಿಂದಲೇ ಬ್ರಹ್ಮನ ಪ್ರಳಯೋದ್ಭವಗಳನ್ನೂ, ಮನ್ವಂತರಾದಿಗಳನ್ನೂ ಘಟನೆಮಾಡುವ ನಿನಗೆ ನಮಸ್ಕಾರವು.

೬೪. ಎಲೈ ನಾಥನೇ! ನಾನು ತಮಸ್ಸಿನಿಂದಲೇ ಸೃಷ್ಟನಾಗಿರುವೆನು. ಆದುದರಿಂದ ನಿನ್ನ ಪ್ರಭಾವವನ್ನು ತಿಳಿಯದವನಾಗಿದ್ದೇನೆ. ಆದುದರಿಂದ ನನ್ನ ಅಪರಾಧವನ್ನು ಕ್ಷಮಿಸಿ, ಶರಣಾಗತನಾಗಿರುವ ನನ್ನನ್ನು ಕಾಪಾಡು.

೬೫–೬೮. ತ್ರಿಪುರಗಳನ್ನು ದಹಿಸಿದ ಆ ವೃಷಭಧ್ವಜನಿಂತು ಸ್ತೋತ್ರ ಮಾಡಲು ಆ ಅಧೋಕ್ಷಜನು ಚಕ್ರರೂಪವನ್ನು ತ್ಯಜಿಸಿ, ಪ್ರಸನ್ನವದನನೂ, ಕಾಂತಿಯಿಂದ ಕಂಗೊಳಿಸುವವನೂ, ಶಂಖಚಕ್ರಗದಾಧರನೂ, ಗರುಡನಮೇಲೆ ಪದ್ಮಾಸನಾಸೀನನೂ, ವನಮಾಲಾವಿಭೂಷಿತನೂ, ಹಾರಕುಂಡಲಕೇಯೂರ ಮುಕುಟಗಳೇ ಮೊದಲಾದ ಭೂಷಣಗಳಿಂದ ಉಜ್ವಲನೂ, ಎಡದೊಡೆಯಮೇಲೆ ಲಕ್ಷ್ಮಿಯನ್ನೂ, ಬಲಗಡೆಯಲ್ಲಿ ಸತ್ಯಭಾಮಾದೇವಿಯನ್ನೂ ಕುಳ್ಳಿರಿಸಿಕೊಂಡು,

ಬಿಭ್ರಾಣಃ ಕೃಷ್ಣಜೀಮೂತಕಾಂತದೇಹಂ ಕೃಪಾಂಬುಧಿಃ ।
ಕ್ರೋಧಾವಿಷ್ಟ ಇವೋವಾಚ ಬಿಭ್ಯತಂ ಗಿರಿಜಾಪತಿಂ ॥ ೬೮ ॥

ಶ್ರೀ ಭಗವಾನುವಾಚ :—

ಕಾಲೇನೈತಾವತಾ ಶಂಭೋ ದುರ್ಬುದ್ಧಿಃ ಕಥಮಾಗತಾ ।
ಹೇತೌ ನೃಪತಿಕೀಟಸ್ಯ ಮಯಾ ಯೋದ್ಧುಮುಪಸ್ಥಿತಃ ॥ ೬೯ ॥
ಕತಿ ವಾ ಮತ್ಪ್ರಭಾವಾಸ್ತೇ ನೋ ಜ್ಞಾತಾ ಧೂರ್ಜಟೇ ತ್ವಯಾ ।
ಸತ್ಯಂ ಪಾಶುಪತಂ ತೇಽಸ್ತ್ರಂ ದುರ್ಜಯಂ ಸಸುರಾಸುರೈಃ ॥ ೭೦ ॥
ಮತ್ಕ್ರೋಧರೂಪಂ ತಚ್ಚಕ್ರಂ ತ್ವಾಮಪಿ ಕ್ಷಮತೇ ನ ಯತ್ ।
ಮಾಮವಜ್ಞಾಯ ಜಗತಿ ಭ್ರಮತಿ ತ್ವಾಮೃತೇ ಹಿ ಕಃ ॥ ೭೧ ॥
ತಪೋಭಿಃ ಬಹುಭಿಃ ಪೂರ್ವಂ ಮಚ್ಛರೀರತಯೋರ್ಜಿತಃ ।
ಸಾಂಪ್ರತಂ ಚೇಚ್ಚಿರಂ ರಂತುಂ ಗೌರ್ಯಾ ಸಾರ್ಧಮಿಹೇಚ್ಛಸಿ ॥ ೭೨ ॥
ಪುರೀಂ ವಾರಾಣಸೀಂ ಚೇಮಾಂ ಯದೀಚ್ಛಸಿ ಚಿರಸ್ಥಿತಾಂ ।
ಮನ್ನಾಮ್ನಾ ಭುವಿ ವಿಖ್ಯಾತಂ ಕ್ಷೇತ್ರಂ ಶ್ರೀಪುರುಷೋತ್ತಮಂ ॥ ೭೩ ॥

---

ಮೋಡದ ಕೃಷ್ಣಕಾಂತಿಯನ್ನು ತಳೆದ ದೇಹವುಳ್ಳವನಾಗಿ, ಅಲ್ಲಿಯೇ ಪ್ರತ್ಯಕ್ಷನಾಗಿ ಕರುಣಾಸಮುದ್ರನಾದರೂ, ಹೆದರಿರುವ ಆ ಗಿರಿಜಾಪತಿಯನ್ನು ಕುರಿತು ಕೋಪಗೊಂಡವನಂತೆ ಈ ರೀತಿ ಹೇಳಿದನು :—

೬೯. ಶ್ರೀಭಗವಂತನು ಹೇಳುತ್ತಾನೆ:—"ಎಲೈ ಶಂಭುವೇ! ಇಷ್ಟು ಕಾಲದಮೇಲೆ ನಿನಗಿಂತಹ ದುರ್ಬುದ್ಧಿಯುಂಟಾದುದು ಹೇಗೆ? ನೃಪತಿಕೀಟನೆನಿಸಿದ ಈ ಕಾಶಿರಾಜನ ಸಲುವಾಗಿ ನೀನು ನನ್ನೊಡನೆ ಯುದ್ಧಮಾಡಲು ಬಂದೆಯಲ್ಲವೆ?

೭೦. ಎಲೈ ಧೂರ್ಜಟಿಯೇ! ನೀನು ನನ್ನ ಪ್ರಭಾವಗಳೆಷ್ಟನ್ನು ತಿಳಿದಿಲ್ಲ! ನಿನ್ನ ಪಾಶುಪತಾಸ್ತ್ರವು ಸುರಾಸುರರಿಂದಲೂ ಜಯಿಸಲಸದಳವಾದುದೆಂಬುದು ದಿಟವೇ ಸರಿ.

೭೧. ನನ್ನ ಕ್ರೋಧರೂಪವಾದ ಈ ಚಕ್ರವು ನಿನ್ನನ್ನೂ ಕ್ಷಮಿಸುವುದಿಲ್ಲವೆಂದಬಳಿಕ ನನ್ನನ್ನು ತಿರಸ್ಕರಿಸಿ ನಡೆಯುವವನು ನಿನ್ನನ್ನು ಬಿಟ್ಟರೆ ಮತ್ತಾರು ಇರುವರು?

೭೨–೭೪. ಪೂರ್ವದಲ್ಲಿ ಅನೇಕ ತಪಸ್ಸುಗಳನ್ನು ಮಾಡಿ ನನ್ನ ಶರೀರದಿಂದಲೇ ಊರ್ಜಿತನಾಗಿರುವ ನೀನು ಈಗ ಗೌರಿಯೊಡನೆ ಚಿರಕಾಲ ರಮಿಸಲು ಬಯಸುವೆಯಾದರೆ, ಈ ವಾರಾಣಸೀ ಪಟ್ಟಣವು ಚಿರಸ್ಥಾಯಿಯಾಗಿರಲಪೇಕ್ಷಿಸುವೆಯಾದರೆ, ನನ್ನ ಹೆಸರಿನಿಂದ ಶ್ರೀಪುರುಷೋತ್ತಮವೆಂದು ಭೂಮಂಡಲದಲ್ಲಿ ವಿಖ್ಯಾತವಾದ ಕ್ಷೇತ್ರವೊಂದಿರುವುದು; ಅದು ದಕ್ಷಿಣಸಮುದ್ರದ ತೀರದಲ್ಲಿ

ದಕ್ಷಿಣಸ್ಯೋದಧೇಸ್ತೀರೇ ನೀಲಾಚಲವಿಭೂಷಿತಂ ।
ದಶಯೋಜನವಿಸ್ತೀರ್ಣಂ ಯಾವದ್ವಿರಜಮಂಡಲಂ ॥ ೭೪ ॥
ಕ್ರಮಶಃ ಪಾವನಂ ಕ್ಷೇತ್ರಂ ಯಾವಚ್ಚಿತ್ರೋತ್ಪಲಾ ನದೀ ।
ತತಃ ಪ್ರಭೃತಿ ಯೋ ದೇಶೋ ಯಾವತ್ಸ್ಯಾದ್ದಕ್ಷಿಣಾರ್ಣವಃ ॥ ೭೫ ॥
ಪದಾತ್ಪದಾಚ್ಛ್ರೇಷ್ಠತಮೋ ನೀಲಾದ್ರಿರಪವರ್ಗದಃ ।
ಚತುರ್ದೇಹಸ್ಥಿತೋಽಹಂ ವೈ ಯತ್ರ ನೀಲಮಣೀಮಯಃ ॥ ೭೬ ॥
ತಸ್ಯೋತ್ತರಸ್ಯಾಂ ವಿಖ್ಯಾತಂ ವನಮೇಕಾಮ್ರಕಾಹ್ವಯಂ ।
ಪಾರ್ವತ್ಯಾ ತತ್ರ ನಿವಸ ನಿರ್ಭಯಸ್ತ್ರಿಪುರಾಂತಕ ॥ ೭೭ ॥
ಸೃಜತಾ ಸರ್ವಲೋಕಾನಾಂ ಮನ್ನಿದೇಶಾತ್ಸ್ವಯಂಭುವಾ ।
ತತ್ರಾಪಿ ಕೋಟಿಲಿಂಗಾನಾಂ ರಾಜಾ ತ್ವಮಭಿಷೇಕ್ಷ್ಯಸೇ ॥ ೭೮ ॥
ಸರ್ವತೀರ್ಥಮಯಂ ಚೇದಂ ತೀರ್ಥಂ ಯನ್ಮಣಿಕರ್ಣಿಕಂ ।
ಇಹಾಹಂಕಾರಮುತ್ಸೃಜ್ಯ ವ್ರಜ ತ್ವಂ ಸಪರಿಚ್ಛದಃ ॥ ೭೯ ॥

ನಾರದ ಉವಾಚ:—

ಇತ್ಯುಕ್ತೋ ವಾಸುದೇವೇನ ತ್ರ್ಯಂಬಕೋ ನತಕಂಧರಃ ।
ಕೃತಾಂಜಲಿಪುಟೋ ಭೂತ್ವಾ ಪ್ರೋವಾಚ ಮಧುಸೂದನಂ ॥ ೮೦ ॥

---

ನೀಲಾಚಲದಿಂದಲಂಕೃತವಾಗಿರುವುದು ; ವಿರಜಮಂಡಲದವರೆಗೂ ಹತ್ತು ಯೋಜನಗಳ ವಿಸ್ತಾರವಾಗಿರುವುದು.

೭೫. ಆ ಕ್ಷೇತ್ರವು ಚಿತ್ರೋತ್ಪಲಾ ನದಿಯಿಂದ ಮೊದಲುಗೊಂಡು ದಕ್ಷಿಣ ಸಮುದ್ರದವರೆಗೂ ಹರಡಿರುವ ಭೂಪ್ರದೇಶವಾಗಿರುತ್ತದೆ.

೭೬. ಅಲ್ಲಿರುವ ನೀಲಾಚಲದ ಒಂದೊಂದು ಅಡಿಯೂ ಶ್ರೇಷ್ಠತಮವಾಗಿ ಮೋಕ್ಷಪ್ರದವಾಗಿರುವುದು. ಆ ನೀಲಾಚಲದಲ್ಲಿಯೇ ನಾನು ನಾಲ್ಕು ದೇಹಗಳನ್ನೂ ಧರಿಸಿ ನೀಲಮಣಿಮಯನಾಗಿರುವೆನು.

೭೭–೭೮. ಅಲ್ಲಿಗೆ ಉತ್ತರದಿಕ್ಕಿನಲ್ಲಿಯೇ ಏಕಾಮ್ರವೆಂದು ಹೆಸರಾದ ವನವಿರುವುದು. ಎಲೈ ತ್ರಿಪುರಾಂತಕನೇ! ನೀನು ಆ ವನದಲ್ಲಿ ಪಾರ್ವತಿಯೊಡನೆ ನಿರ್ಭಯವಾಗಿ ವಾಸಮಾಡಿಕೊಂಡಿರು. ನನ್ನ ಆಜ್ಞೆಯಿಂದ ಸಮಸ್ತ ಲೋಕಗಳನ್ನೂ ಸೃಜಿಸುವ ಬ್ರಹ್ಮದೇವನು ಆ ವನದಲ್ಲಿ ನಿನ್ನನ್ನು ಕೋಟಿಲಿಂಗಗಳಿಗೆ ರಾಜನನ್ನಾಗಿ ಅಭಿಷೇಕಮಾಡುವನು.

೭೯. ಸರ್ವತೀರ್ಥಮಯವಾದ ಈ ಮಣಿಕರ್ಣಿಕೆಯಲ್ಲಿ ನೀನು ನಿನ್ನ ಈ ಅಹಂಕಾರವೆಲ್ಲವನ್ನೂ ತೊರೆದು ನಿನ್ನ ಪರಿವಾರದೊಡನೆ ಅಲ್ಲಿಗೆ ಹೊರಡುವವನಾಗು.''

೮೦. ನಾರದನು ಹೇಳುತ್ತಾನೆ:—''ಎಲೈ ಇಂದ್ರದ್ಯುಮ್ನನೇ! ವಾಸು

ಮಹಾದೇವ ಉವಾಚ:—

**ದೇವದೇವ ಜಗನ್ನಾಥ ಪ್ರಣತಾರ್ತಿಹರ ಪ್ರಭೋ ।**
**ತ್ವದಾಜ್ಞಾಪಾಲನಂ ಶ್ರೇಯಃಕಾರಣಂ ಮೇ ಜಗತ್ಪತೇ ॥ ೪೧ ॥**
**ಯತ್ತು ಮೂಢತಯಾ ದೇವ ಅವಲೇಪಃ ಕೃತೋ ಮಯಾ ।**
**ತವೈವಾನುಗ್ರಹಸ್ತತ್ರ ಪ್ರಭೋ ಚಾಂಚಲ್ಯಕಾರಣಂ ॥ ೪೨ ॥**
**ಯದಾದಿಶಸಿ ದೇವೇಶ ಪ್ರಯಾಣಂ ಪುರುಷೋತ್ತಮಂ ।**
**ತನ್ಮೂರ್ಧ್ನಿ ಕೃತ್ವಾ ಯಾಸ್ಯಾಮಿ ಕ್ಷೇತ್ರಂ ಮುಕ್ತಿಪ್ರದಂ ಶಿವಂ ॥ ೪೩ ॥**
**ಅಭಿಸಂಧಿಂ ಕುರುಷ್ವಾದ್ಯ ಮಮಾನುಗ್ರಹಕಾರಣಂ ।**
**ಪುರುಷೋತ್ತಮಂ ಮಮ ಕ್ಷೇತ್ರಂ ತ್ವಮೇವ ಪರಿಪಾಲಯ ॥ ೪೪ ॥**
**ಯಥಾ ಪುನರ್ನೇದೃಶಂ ತದ್ವಿನಾಶಮುಪಯಾಸ್ಯತಿ ।**
**ಇತ್ಥಮೇತತ್ಪುರಾ ಕ್ಷೇತ್ರಂ ಮಹಾದೇವೇನ ನಿರ್ಮಿತಂ ॥ ೪೫ ॥**
**ಬಲಶ್ರೀಸಹಿತಂ ದೇವಮರ್ಚಯನ್ಪುರುಷೋತ್ತಮಂ ।**
**ಅತ್ರ ಸಾಕ್ಷಾದುಮಾಕಾಂತಃ ಸ್ಥಾಪಿತಃ ಪರಮೇಷ್ಠಿನಾ ॥ ೪೬ ॥**

---

ದೇವನು ಈ ರೀತಿ ಅಪ್ಪಣೆಮಾಡಲು ಆ ಮುಕ್ಕಣ್ಣನು ತಲೆಬಾಗಿ ಕೈಗಳನ್ನು ಮುಗಿದು ಮಧುಸೂದನನ್ನು ಕುರಿತು ಈ ರೀತಿ ಹೇಳಿದನು:—

೪೧. ಮಹಾದೇವನು ಹೇಳುತ್ತಾನೆ:— "ದೇವದೇವ, ಜಗನ್ನಾಥ! ಪ್ರಭೂ!! ನೀನು ಶರಣುಹೊಕ್ಕವರನ್ನು ಕಾಪಾಡುವವನು. ಎಲೈ ಜಗತ್ಪತಿಯೇ! ನಿನ್ನ ಅಪ್ಪಣೆಯನ್ನು ಪಾಲಿಸುವುದು ನನಗೆ ಶ್ರೇಯಃಕಾರಣವು.

೪೨. ದೇವ! ನಾನು ಯಾವ ಗರ್ವವನ್ನು ಮಾಡಿದೆನೋ ಆ ಚಿತ್ತ ಚಾಂಚಲ್ಯಕ್ಕೆ ಕಾರಣವೂ ನಿನ್ನ ಅನುಗ್ರಹವೇ ಹೊರತು ಬೇರೆಯಲ್ಲವು.

೪೩. ನೀನು ಯಾವ ಪುರುಷೋತ್ತಮಕ್ಷೇತ್ರಕ್ಕೆ ಹೋಗೆಂದು ಅಪ್ಪಣೆ ಮಾಡಿದೆಯೋ ಅದನ್ನು ಶಿರಸಾ ಧಾರಣೆಮಾಡಿ ಮುಕ್ತಿಪ್ರದವೂ, ಮಂಗಳಕರವೂ ಆದ ಆ ಕ್ಷೇತ್ರಕ್ಕೆ ಈಗಲೇ ಹೊರಡುವೆನು.

೪೪. ಈಗ ನೀನು ನನ್ನನ್ನು ಅನುಗ್ರಹಿಸಲೋಸುಗ ಒಂದು ಸಮಯವನ್ನು ಮಾಡಬೇಕು. ನನ್ನ ಕ್ಷೇತ್ರವಾದ ಆ ಪುರುಷೋತ್ತಮ ಕ್ಷೇತ್ರವನ್ನು ನೀನೇ ಸಂರಕ್ಷಿಸಬೇಕು.

೪೫–೪೬. ಆ ಕ್ಷೇತ್ರವು ಈ ವಾರಾಣಸೀ ಕ್ಷೇತ್ರದಂತೆ ಮತ್ತೆ ನಾಶವಾಗದಿರಲಿ." ಎಲೈ ಇಂದ್ರದ್ಯುಮ್ನನೇ! ಈರೀತಿ ಪೂರ್ವದಲ್ಲಿ ಈ ಕ್ಷೇತ್ರವು ಮಹಾದೇವನಿಂದ ನಿರ್ಮಾಣವಾಯಿತು. ಇಲ್ಲಿಯೇ ಬ್ರಹ್ಮದೇವನು ಬಲರಾಮ ಲಕ್ಷ್ಮಿಯರೊಡಗೂಡಿ ಪುರುಷೋತ್ತಮನನ್ನರ್ಚಿಸುತ್ತ ಸಾಕ್ಷಾದುಮಾಕಾಂತನನ್ನು ಸ್ಥಾಪಿಸಿದನು.

ವಯಂ ತತ್ರ ವ್ರಜಿಷ್ಯಾಮೋ ದ್ರಕ್ಷ್ಯಾಮಃ ಪುರನಾಶನಂ ।
ಸುದ್ಯೃಢಾಂತಸ್ತಮಸ್ತ್ತೋಮಭಾಸ್ವಂತಂ ಗಿರಿಜಾಪತಿಂ ॥ ೮೭ ॥
ಯದೇತಚ್ಛಾಂಭವಂ ಕ್ಷೇತ್ರಂ ತಮಸೋ ನಾಶನಂ ಪರಂ ।
ರಜಃಪ್ರಕ್ಷಾಲನಂ ಶ್ರೇಯಃಖ್ಯಾತಂ ವಿರಜಮಂಡಲಂ ॥ ೮೮ ॥
ಸತ್ತ್ವೋದ್ರಿಕ್ತತಯಾ ಖ್ಯಾತಂ ಮುಕ್ತಿದಂ ಪುರುಷೋತ್ತಮಂ ।
ಯಾವಂತ್ಯನ್ಯಾನಿ ಕ್ಷೇತ್ರಾಣಿ ಮುಕ್ತಿದಾನಿ ಶ್ರುತಾನಿ ತೇ ॥ ೮೯ ॥
ತಾನಿ ಸರ್ವಾಣಿ ರಾಜೇಂದ್ರ ದದತೇ ಮುಕ್ತಿಮತ್ರ ವೈ ।
ಏತತ್‌ಕ್ಷೇತ್ರಂ ಮಹಾರಾಜ ದುಷ್ಕೃತಾವಿಲಚೇತಸಾಂ ॥ ೯೦ ॥
ನ ವಿಶ್ವಾಸಪಥಂ ಯಾತಿ ರಹಸ್ಯಂ ಚಕ್ರಪಾಣಿನಃ ॥ ೯೧ ॥
ನಾರದಸ್ಯ ವಚಃ ಶ್ರುತ್ವಾ ಪ್ರಹೃಷ್ಟಹೃದಯೋ ನೃಪಃ ।
ಉವಾಚ ಮುನಿಶಾರ್ದೂಲಂ ವಿಸ್ಮಯೋತ್ಫುಲ್ಲಲೋಚನಃ ।

ಜೈಮಿನಿರುವಾಚ :—

ಸಾಧು ಮೇ ಕಥಿತಂ ಬ್ರಹ್ಮನ್ ಕ್ಷೇತ್ರಂ ಪರಮಪಾವನಂ ॥ ೯೨ ॥

---

೮೭–೮೮. ನಾವು ಅಲ್ಲಿಗೆ ಹೋಗಿ, ಬಲವತ್ತರವಾದ ಕತ್ತಲವೊತ್ತದಲ್ಲಿ ಬೆಳಗುತ್ತಿರುವ ತ್ರಿಪುರನಾಶಕನೂ, ಗಿರಿಜಾಪತಿಯೂ ಆದ ಆ ಪ್ರಭುವನ್ನು ಸಂದರ್ಶಿಸೋಣ. ಶಾಂಭವಕ್ಷೇತ್ರವಾವುದುಂಟೋ ಅದು ತಮಸ್ಸನ್ನು ನಾಶಗೊಳಿಸುವಂತಹುದಾಗಿ ಶ್ರೇಷ್ಠವೆನಿಸಿರುವುದು. ವಿರಜಮಂಡಲವಾದರೋ ರಜಸ್ಸನ್ನು ತೊಳೆಯುವಂತಹ ಕ್ಷೇತ್ರವಾಗಿ ಶ್ರೇಯಸ್ಸಾಧಕವಾಗಿರುವುದು.

೮೯–೯೧. ಸತ್ತ್ವೋದ್ರಿಕ್ತವಾಗಿರುವುದರಿಂದ ಪುರುಷೋತ್ತಮಕ್ಷೇತ್ರವು ಮುಕ್ತಿಪ್ರದವೆಂದು ಪ್ರಸಿದ್ಧವಾಗಿರುವುದು. ಎಲೈ ರಾಜೇಂದ್ರನೇ! ಈ ಭೂಮಂಡಲದಲ್ಲಿ ಇತರ ಯಾವ ಯಾವ ಕ್ಷೇತ್ರಗಳಿರುವುವೋ ಅವುಗಳೆಲ್ಲವೂ ಈ ಕ್ಷೇತ್ರದಲ್ಲಿ ಮುಕ್ತಿಯನ್ನು ಕೊಡುವವುಗಳಾಗಿರುತ್ತವೆ. ಈ ಕ್ಷೇತ್ರವನ್ನು ಸಂದರ್ಶಿಸಿದುದಾದರೆ ಮುಕ್ತಿಯು ಖಂಡಿತವಾಗಿಯೂ ದೊರೆಯುತ್ತದೆ. ಎಲೈ ಮಹಾರಾಜನೇ! ಈ ಪುರುಷೋತ್ತಮ ಕ್ಷೇತ್ರವು ಪಾಪಕರ್ಮಗಳಿಂದ ಬುದ್ಧಿಯು ಕದಡಿಹೋಗಿರುವವರಿಗೆ ನಂಬುಗೆಯಾಗುವುದಿಲ್ಲವು. ಇದು ಚಕ್ರಪಾಣಿಯಾದ ಆ ಪರಮಾತ್ಮನ ರಹಸ್ಯಸ್ಥಾನವಾಗಿರುವುದು.

೯೨. ಈ ರೀತಿ ನುಡಿದ ನಾರದನ ನುಡಿಗಳನ್ನು ಕೇಳಿ ಇಂದ್ರದ್ಯುಮ್ನ ರಾಜನು ಸಂತುಷ್ಟಮಾನಸನಾಗಿ ಆಶ್ಚರ್ಯದಿಂದ ಅರಳಿದ ಕಂಗಳುಳ್ಳವನಾಗಿ ಆ ಮುನಿಶಾರ್ದೂಲನನ್ನು ಕುರಿತು ಹೇಳಿದನು. ಭೋ ಬ್ರಹ್ಮನ್! ಸಾಧು ಸಾಧು!! ಯಾವ ಕ್ಷೇತ್ರದಲ್ಲಿ ಉಮಾಪತಿಯು ನೆಲಸಿ, ಪುರುಷೋತ್ತಮನು ಪಾಲಕನಾಗಿರುವನೋ ಅಂತಹ ಪರಮಪಾವನವಾದ ಕ್ಷೇತ್ರವನ್ನು ನನಗೆ ತಿಳಿಸಿದೆ!

**ಯತ್ರೋಮಾಪತಿರಾಸ್ತೇಽಸೌ ಪಾಲಕಃ ಪುರುಷೋತ್ತಮಃ ।**
**ಅವಶ್ಯಂ ತತ್ರ ಗಚ್ಛಾಮಃ ಪಂಥಾ ಯದ್ಯಪಿ ವಕ್ರಭೂಃ ।**
**ಉದ್ದಿಷ್ಟೇಷ್ಟಪರಿಪ್ರಾಪ್ತೌ ಯದಿದಂ ಕಾರಣಂ ಮಹತ್ ॥ ೯೩ ॥**
**ಜೈಮಿನಿರುವಾಚ :—**
**ತತಸ್ತೌ ಮುನಿಭೂಪಾಲೌ ಮಧ್ಯಾಹ್ನಸಮಯೇ ದ್ವಿಜಾಃ ।**
**ಪ್ರಾಪತುಃ ಸಬಲೌ ಕ್ಷೇತ್ರಮೇಕಾಮ್ರವನಸಂಜ್ಞಕಂ ॥ ೯೪ ॥**
**ಬಿಂದುತೀರ್ಥೇ ನೃಪಃ ಸ್ನಾತ್ವಾ ತೀರಸ್ಥಂ ಪುರುಷೋತ್ತಮಂ ।**
**ಸಂಪೂಜ್ಯ ವಿಧಿವದ್ಯಾತಃ ಕೋಟೀಶ್ವರಮಹಾಲಯಂ ॥ ೯೫ ॥**
**ತದ್ದ್ವಾರೇ ಸಮ್ಯಗಾಚಾಂತಸ್ತತ್ರೈತ್ಯ ಸುಬಹೂನಿ ಸಃ ।**
**ಗಜಾಶ್ವಧನರತ್ನಾನಿ ವಸ್ತ್ರಾಲಂಕರಣಾನಿ ಚ ॥ ೯೬ ॥**
**ದ್ವಿಜೇಭ್ಯಃ ಪ್ರದದೌ ರಾಜಾ ಸಾತ್ತ್ವಿಕಂ ಧರ್ಮಮಾಸ್ಥಿತಃ ।**
**ಲಿಂಗಂ ತ್ರಿಭುವನೇಶಂ ತಂ ಮಹಾಸ್ನಾನೇನ ಪೂಜಯನ್ ॥ ೯೭ ॥**
**ಅತುಲಾಂ ಪ್ರೀತಿಮಾಲೇಭೇ ವಿಷ್ಣೋರದ್ವೈತದರ್ಶನಃ ।**
**ಸ್ತುತ್ವಾ ಪ್ರಣಮ್ಯ ಭಕ್ತ್ಯಾಸೌ ವೀಣಯಾ ಚೋಪಗಾಯ್ಯಚ ॥ ೯೮ ॥**

---

೯೩. ದಾರಿಯು ಬಹಳ ವಕ್ರವಾಗಿದ್ದರೂ ನಾವು ಅವಶ್ಯವಾಗಿಯೂ ಅಲ್ಲಿಗೆ ಹೋಗೋಣ. ನಾವು ಉದ್ದೇಶಿಸಿರುವ ಇಷ್ಟಪ್ರಾಪ್ತಿಗೆ ಈ ಕ್ಷೇತ್ರ ಸಂದರ್ಶನವು ಮಹತ್ತರವಾದ ಕಾರಣವಷ್ಟೆ.

೯೪. ಜೈಮಿನಿಯು ಹೇಳುತ್ತಾನೆ:—" ಎಲೈ ಋಷಿಗಳಿರಾ! ತರುವಾಯ ಆ ಇಂದ್ರದ್ಯುಮ್ನಭೂಪಾಲನೂ, ನಾರದಮುನೀಂದ್ರನೂ, ಮಧ್ಯಾಹ್ನ ಸಮಯಕ್ಕೆ ತಮ್ಮ ಸೇನೆ ಪರಿವಾರಗಳೊಡನೆ ಏಕಾಮ್ರವನವನ್ನು ಸೇರಿದರು.

೯೫. ಅಲ್ಲಿ ಆ ದೊರೆಯು ಬಿಂದುತೀರ್ಥದಲ್ಲಿ ಸ್ನಾನಮಾಡಿ ಅದರ ತೀರದಲ್ಲಿರುವ ಪುರುಷೋತ್ತಮನನ್ನು ಶಾಸ್ತ್ರೋಕ್ತವಾಗಿ ಪೂಜಿಸಿ ಆ ಮೇಲೆ ಕೋಟಿಲಿಂಗೇಶ್ವರದೇವಾಲಯಕ್ಕೆ ಹೋದನು

೯೬–೯೯. ಆ ಇಂದ್ರದ್ಯುಮ್ನನು ಆ ದೇವಾಲಯದ ಮಹಾದ್ವಾರದಲ್ಲಿ ಆಚಮನಮಾಡಿ ಸಾತ್ವಿಕವಾದ ಧರ್ಮವನ್ನಾಶ್ರಯಿಸಿ ಅಲ್ಲಿದ್ದ ಬ್ರಾಹ್ಮಣರಿಗೆ ಅನೇಕ ಆನೆ, ಕುದುರೆ, ರತ್ನಗಳು, ವಸ್ತ್ರಾಲಂಕಾರಗಳೇ ಮೊದಲಾದುವುಗಳನ್ನೂ ದಾನಮಾಡಿದನು. ಆ ತ್ರಿಭುವನೇಶ್ವರಲಿಂಗವನ್ನು ಮಹಾಭಿಷೇಕಪೂರ್ವಕವಾಗಿ ಪೂಜಿಸಿ ಅಪಾರ ಸಂತೋಷವನ್ನು ಹೊಂದಿದನು. ವಿಷ್ಣುವಿಗೂ, ಶಿವನಿಗೂ ಅಭೇದವನ್ನೆಣಿಸುವ ಸದ್ವೈಷ್ಣವನಾದ ಆ ದೊರೆಯು ಆ ಪರಮೇಶ್ವರನನ್ನು ಭಕ್ತಿಯಿಂದ ಸ್ತುತಿಸಿ ನಮಸ್ಕರಿಸಿ, ವೀಣೆಯನ್ನು ನುಡಿಸುತ್ತ ಗಾಯನಮಾಡಿ

ಕೃತಾಂಜಲಿಪುಟೋ ದೇವಪ್ರಸಾದನಕೃತೋದ್ಯಮಃ ।
ಅನನ್ಯಮನಸಾ ತಸ್ಥೌ ಚಿಂತಯನ್ವೃಷಭಧ್ವಜಂ ॥ ೯೯ ॥
ತತಃ ಪ್ರಸನ್ನೋ ಭಗವಾಂಸ್ತ್ರ್ಯಂಬಕಃ ಪರಮೇಶ್ವರಃ ।
ಸಾಕ್ಷಾನ್ನೃಪಮುವಾಚೇದಂ ಸ್ಪಷ್ಟಾಕ್ಷರಪದಂ ದ್ವಿಜಾಃ ॥ ೧೦೦ ॥

ಕೋಟಿಲಿಂಗೇಶ ಉವಾಚ :—

ಇಂದ್ರದ್ಯುಮ್ನ ಮಹಾರಾಜ ವೈಷ್ಣವಸ್ತ್ವಾದೃಶೋ ಭುವಿ ।
ದುರ್ಲಭಃ ಖಲು ತೇ ವಾಂಛಾ ಚಿರಾತ್ಸಮ್ಯಗ್ಭವಿಷ್ಯತಿ ॥ ೧೦೧ ॥
ಇತ್ಯುಕ್ತ್ವಾಂತರ್ದಧೇ ಶಂಭುಃ ಪಶ್ಯತಸ್ತು ಮಹೀಕ್ಷಿತಃ ।
ನಾರದಂ ಪುನರಾಹೇದಂ ಯದಾದಿಷ್ಟಂ ಸ್ವಯಂಭುವಾ ॥ ೧೦೨ ॥
ತತ್ಕಲ್ಪಯ ಮಹಾಭಾಗ ವಾಜಿಮೇಧಪುರಸ್ಸರಂ ।
ವಿಷ್ಣೋಃ ಕಲೇವರೇ ತಸ್ಮಿನ್ ಕ್ಷೇತ್ರೇ ಶ್ರೀಪುರುಷೋತ್ತಮೇ ॥ ೧೦೩ ॥
ಅಂತರ್ವೇದೀ ಮಹಾಪುಣ್ಯಾ ವಿಷ್ಣೋರ್ಹೃದಯಸನ್ನಿಭಾ ।
ತಸ್ಯಾ ಸಂರಕ್ಷಣಾಯಾಹಂ ಸ್ಥಾಪಿತೋ ವಿಷ್ಣುನಾಷ್ಟಧಾ ॥ ೧೦೪ ॥

---

ಕೃತಾಂಜಲಿಪುಟನಾಗಿ ಆ ದೇವನ ಪ್ರಸಾದವನ್ನು ಕೈಕೊಳ್ಳುವವನಾಗಿ ಆ ವೃಷಭಧ್ವಜನನ್ನೇ ಧ್ಯಾನಿಸುತ್ತ ಅನನ್ಯಮನಸ್ಸಿನಿಂದ ನಿಂತನು.

೧೦೦. ಎಲೈ ದ್ವಿಜರೇ! ಆಗ ತ್ರ್ಯಂಬಕನಾದ ಪರಮೇಶ್ವರನು ಪ್ರಸನ್ನನಾಗಿ ಸಾಕ್ಷಾತ್ತಾಗಿ ಆ ನೃಪತಿಯನ್ನೇ ಕುರಿತು ಸ್ಪಷ್ಟವಾದ ಮಾತುಗಳಿಂದಿಂತು ನುಡಿದನು.

೧೦೧. ಕೋಟಿಲಿಂಗೇಶನು ಹೇಳುತ್ತಾನೆ:— "ಎಲೈ ಇಂದ್ರದ್ಯುಮ್ನ ಮಹಾರಾಜನೇ! ಈ ಭೂಮಂಡಲದಲ್ಲಿ ನಿನಗೆಣೆಯಾದ ವೈಷ್ಣವನು ದುರ್ಲಭನಷ್ಟೆ! ನಿನ್ನ ಮನೋರಥವು ಬಹಳ ಬೇಗನೆಯೇ ನೆರವೇರುತ್ತದೆ."

೧೦೨-೧೦೩. ಶಂಭುವು ಇಂದ್ರದ್ಯುಮ್ನನಿಗೆ ಈ ರೀತಿಹೇಳಿ ಅಂತರ್ಧಾನವನ್ನು ಹೊಂದಿ, ನಾರದ ಮುನಿಯನ್ನು ಕುರಿತು ಮತ್ತಿಂತೆಂದನು: "ಎಲೈ ನಾರದ ಮುನಿಯೇ! ಮಹಾಭಾಗ್ಯಶಾಲಿಯಾದ ನೀನು ಪೂರ್ವದಲ್ಲಿ ನಿನ್ನ ಜನಕನಾದ ಬ್ರಹ್ಮದೇವನು ಅಪ್ಪಣೆಮಾಡಿದ ಪ್ರಕಾರವಾಗಿ ಅಶ್ವಮೇಧಪುರಸ್ಸರವಾಗಿ ಈ ಅರಸನಿಂದ ಕಾರ್ಯವನ್ನು ಆಗಗೊಳಿಸು. ಆ ಪುರುಷೋತ್ತಮ ಕ್ಷೇತ್ರದಲ್ಲಿ ಶ್ರೀ ವಿಷ್ಣುವಿನ ಮೂರ್ತಿಯನ್ನು ಪ್ರತಿಷ್ಠೆಮಾಡಿಸು.

೧೦೪. ಅಲ್ಲಿರುವ ಅಂತರ್ವೇದಿಯು ಶ್ರೀ ವಿಷ್ಣುವಿನ ಹೃದಯಕ್ಕೆಣೆಯಾದುದು. ಅದರ ಸಂರಕ್ಷಣೆಗಾಗಿಯೇ ನಾನು ಎಂಟು ಪ್ರಕಾರವಾಗಿ ಆತನಿಂದ ಇಲ್ಲಿ ಸ್ಥಾಪಿತನಾಗಿರುವೆನು.

ಶಂಖಾಕೃತೇರಗ್ರಭಾಗೇ ನೀಲಕಂಠೋಽಹಮಾಸ್ಥಿತಃ ।
ದುರ್ಗಯಾ ಸಹ ವಿಪ್ರೇಂದ್ರ ತತ್ರೇಮಂ ಭೂಪತಿಂ ನಯ ॥ ೧೦೫ ॥
ಅಂತರ್ಹಿತಃ ಖಲ್ವಿದಾನೀಂ ನೀಲರತ್ನತನುರ್ಹರಿಃ ।
ತತ್ರ ಶ್ರೀನರಸಿಂಹಸ್ಯ ಕ್ಷೇತ್ರಂ ಕುರು ಮದಾಜ್ಞಯಾ ॥ ೧೦೬ ॥
ತತ್ರ ನಃ ಸನ್ನಿಧೌ ವಾಜಿಮೇಧೇನ ಯಜತಾಮಯಂ ।
ಸಹಸ್ರೇಣ ನೃಪಶ್ರೇಷ್ಠ ತದಂತೇ ತರುಮದ್ಭುತಂ ॥ ೧೦೭ ॥
ದರ್ಶಯ್ಯೈನಂ ದ್ವಿಜಶ್ರೇಷ್ಠ ಬ್ರಹ್ಮರೂಪಮಕಲ್ಮಷಂ ।
ಚತಸ್ರಃ ಪ್ರತಿಮಾಸ್ತೇನ ವಿಶ್ವಕರ್ಮಾ ಘಟಿಷ್ಯತಿ ॥ ೧೦೮ ॥
ತಾಸಾಂ ಪ್ರತಿಷ್ಠಿತೌ ಬ್ರಹ್ಮಾ ಸ್ವಯಮೇವಾಗಮಿಷ್ಯತಿ ।
ಯಥಾಯಂ ಕ್ಷೀಣಪಾಪಃ ಸ್ಯಾನ್ವಾಜಿಮೇಧೈರ್ಯಜನ್ಹರಿಂ ॥ ೧೦೯ ॥
ತಿಷ್ಠತ್ವಬ್ದಸಹಸ್ರಂ ವೈ ತದಂತೇ ಲೋಕಯಿಷ್ಯತಿ ।
ಸಮಸ್ತಜಗದಾಧಾರಂ ಸರ್ವಕಲ್ಮಷನಾಶನಂ ॥ ೧೧೦ ॥
ದಾರವೀಂ ತನುಮಾಸ್ಥಾಯ ದರ್ಶನಾದಪವರ್ಗದಂ ।
ನ ತಸ್ಯ ಚರಿತಂ ವೇತ್ತಿ ಬ್ರಹ್ಮಾಽಹಂ ತ್ವಂ ಚ ನಾರದ ॥ ೧೧೧ ॥

---

೧೦೫. ಶಂಖಾಕಾರವಾದ ಈ ಕ್ಷೇತ್ರದ ಮುಂಭಾಗದಲ್ಲಿ ಶ್ರೀ ದುರ್ಗಾದೇವಿಯೊಡನೆ ನೀಲಕಂಠನೆಂಬ ನಾಮಧೇಯದಿಂದಿರುವೆನು. ಎಲೈ ವಿಪ್ರೇಂದ್ರನೇ! ಅಲ್ಲಿಗೆ ನೀನೀ ರಾಜೇಂದ್ರನನ್ನು ಕರೆದುಕೊಂಡುಹೋಗು.

೧೦೬. ಪ್ರಕೃತದಲ್ಲಿ ನೀಲರತ್ನದೇಹಧಾರಿಯಾದ ಹರಿಯು ಅಂತರ್ಧಾನವಾಗಿರುವುದು ಸರಿಯಷ್ಟೆ. ಅಲ್ಲಿ ನೀನು ನನ್ನ ಅಪ್ಪಣೆಯಂತೆ ನೃಸಿಂಹಕ್ಷೇತ್ರವನ್ನು ಕಲ್ಪಿಸುವವನಾಗು.

೧೦೭–೧೦೮. ಅಲ್ಲಿ ನಮ್ಮ ಸನ್ನಿಧಿಯಲ್ಲಿಯೇ ಈತನಿಂದ ಸಹಸ್ರವಾಜಪೇಯಯಾಗಗಳನ್ನು ಮಾಡಿಸುವವನಾಗು. ಆ ಮೇಲೆ ಬ್ರಹ್ಮರೂಪವಾದ ಕಲ್ಪವೃಕ್ಷವನ್ನೀತನಿಗೆ ತೋರುವವನಾಗು. ಆ ಕಲ್ಪವೃಕ್ಷದಿಂದಲೇ ವಿಶ್ವಕರ್ಮನು ಶ್ರೀಮಹಾವಿಷ್ಣುವಿನ ಚತುರ್ಮೂರ್ತಿಗಳನ್ನು ನಿರ್ಮಾಣಮಾಡುವನು.

೧೦೯–೧೧೦. ಆ ಚತುರ್ಮೂರ್ತಿಗಳ ಪ್ರತಿಷ್ಠೆಗಾಗಿ ಬ್ರಹ್ಮನೇ ಸಾಕ್ಷಾತ್ತಾಗಿ ಇಲ್ಲಿಗೆ ಬರುತ್ತಾನೆ. ಈ ಇಂದ್ರದ್ಯುಮ್ನರಾಜನು ಪಾಪದೂರನಾಗಲೋಸುಗ ಅಶ್ವಮೇಧಯಾಗಗಳನ್ನು ಮಾಡುತ್ತ ಇಲ್ಲಿಯೇ ಒಂದು ಸಾವಿರ ವರ್ಷಗಳಿರಲಿ. ಆ ತರುವಾಯ ಈತನು ಸಮಸ್ತಜಗದಾಧಾರನೂ, ಸಕಲಕಲ್ಮಷಗಳನ್ನೂ ನಾಶಗೊಳಿಸುವವನೂ ಆದ ಆ ಪರಮಾತ್ಮನನ್ನು ಸಂದರ್ಶಿಸುವನು.

೧೧೧. ಪರಮಾತ್ಮನು ದಾರುಮಯಮೂರ್ತಿಯಾಗಿರುತ್ತಾನೆ. ಆ

**ಅಜ್ಞಾನುಷ್ಠಾನತೋ ಭಕ್ತ್ಯಾ ಪ್ರಸೀದತಿ ಸ ಕೇವಲಂ ।**
**ನಾರದೋಽಪಿ ಮಹಾದೇವಂ ಪ್ರಣಿಪತ್ಯ ಜಗದ್ಗುರುಂ ।**
**ಉವಾಚ ಪ್ರಾಂಜಲಿರ್ಭೂತ್ವಾ ಯದಾದಿಷ್ಟಂ ತ್ವಯಾ ವಿಭೋ ॥ ೧೧೨ ॥**
**ಪಿತಾಮಹೋಽಪಿ ಮಾಮಿತ್ಥಂ ನಿರ್ದಿದೇಶಾಸ್ಯ ಕಲ್ಪನಂ ।**
**ಪಿತಾಮಹಶ್ಚ ತ್ವಂ ನಾಥ ನೋ ಭಿನ್ನೌ ಪರಮಾತ್ಮನಃ ॥ ೧೧೩ ॥**
**ನೃಪತೇರಸ್ಯ ಭಾಗಾದ್ಧಿರೀದೃಶೀ ಯತ್ಕೃತೇ ವಿಭೋ ।**
**ಅಗೋಚರೋಽಸೌ ಮನಸಸ್ತ್ರಯಾಣಾಮಪ್ಯನುಗ್ರಹಃ ॥ ೧೧೪ ॥**
**ಯತ್ಪ್ರಸಂಗೇನ ತರಣಂ ಭವಾಬ್ಧೇರಪಿ ದುಷ್ಕೃತಾಂ ।**
**ಅಚಿಂತ್ಯಮಹಿಮಾ ಹ್ಯೇಷ ಭಗವಾನ್ಭೂತಭಾವನಃ ॥ ೧೧೫ ॥**
**ನ ಬುದ್ಧಿಗೋಚರೇ ಭಕ್ತಿರ್ಯಾವತ್ಯಾ ಪ್ರಿಯತೇ ಹ್ಯಸೌ ।**
**ಚಿರಂ ಯತಂತಸ್ತಿಷ್ಠಂತಿ ವೇದಾನುವಚನಾದಿಭಿಃ ॥ ೧೧೬ ॥**

---

ಸ್ವಾಮಿಯ ಸಂದರ್ಶನವು ಮುಕ್ತಿಪ್ರದವಾದುದು. ಆತನ ದಿವ್ಯ ಚರಿತ್ರೆಯನ್ನು ಬ್ರಹ್ಮನಾಗಲಿ, ನಾನಾಗಲಿ, ನೀನೇ ಆಗಲಿ ತಿಳಿಯಲಾರೆವು.

೧೧೨–೧೧೩. ಆ ಪರಮಾತ್ಮನು ತನ್ನ ಅಪ್ಪಣೆಯನ್ನು ಭಕ್ತಿಯಿಂದ ನೆರವೇರಿಸುವುದರಿಂದ ಪ್ರಸನ್ನನಾಗುವನೇ ಹೊರತು ಮತ್ತೆ ಬೇರೆಯಲ್ಲವು." ಪರಮೇಶ್ವರನ ಮಾತುಗಳನ್ನು ಕೇಳಿ ನಾರದನೂ ಸಹ ಆ ಮಹಾದೇವನನ್ನು ನಮಸ್ಕರಿಸಿ ಅಂಜಲಿಬದ್ಧನಾಗಿ, "ಎಲೈ ವಿಭುವೇ! ನೀನು ಅಪ್ಪಣೆಮಾಡಿದಂತೆಯೇ ಬ್ರಹ್ಮನೂ ನನಗೆ ಅಪ್ಪಣೆಮಾಡಿರುವನು. ಎಲೈ ಸ್ವಾಮಿಯೇ! ಪಿತಾಮಹನೂ, ನೀನೂ ನನಗೆ ವಿಷ್ಣುಪರಮಾತ್ಮನಿಂದ ಭಿನ್ನರಲ್ಲ. ನೀವು ಮೂವರೂ ಒಂದೇ!

೧೧೪. ನೀವು ಮೂವರು ಅಗೋಚರರಾಗಿದ್ದುಕೊಂಡೇ ಈ ದೊರೆಗೆ ಅನುಗ್ರಹವನ್ನುಂಟುಮಾಡಿರುವಿರಾದುದರಿಂದ ಈತನ ಭಾಗ್ಯವೇ ಭಾಗ್ಯವು.

೧೧೫. ಓ ಪರಮೇಶ್ವರಾ! ಸರ್ವಭೂತಾಂತರ್ಯಾಮಿಯಾದ ಈ ಭಗವಂತನು ಊಹಿಸಲಸದಳವಾದ ಮಹಿಮೆಯುಳ್ಳವನು. ಈತನ ಮಾಹಾತ್ಮ್ಯದ ಪ್ರಸಂಗವನ್ನೆನಗುವುದರಿಂದ ಪಾಪಿಗಳೂ ಸಹ ಭವಸಾಗರವನ್ನು ದಾಟುತ್ತಾರೆ.

೧೧೬. ಯಾವುದರಿಂದ ಈ ಪರಮಾತ್ಮನು ಸಂತುಷ್ಟನಾಗುವನೋ ಆ ಭಕ್ತಿಯು ಬುದ್ಧಿಗೆ ಸಿಲುಕುವುದಲ್ಲವು. ಆದರೆ ಜ್ಞಾನಿಗಳಾದವರು ಬಹುಕಾಲ ವೇದವಚನಾದಿಗಳಿಂದ ಆ ಭಕ್ತಿಯನ್ನು ಸಂಪಾದಿಸಿ ಆ ಮೂಲಕ ಮುಕ್ತಿಯನ್ನು ಪಡೆಯಲು ಯತ್ನಿಸುತ್ತಿರುತ್ತಾರೆ. ಈ ಭಕ್ತಿಯಿಂದಲೇ ಕೇವಲ ಅಲ್ಪರೂ ಸಹ ಯಾವೊಂದು ಆಯಾಸವೂ ಇಲ್ಲದೆ ಭಕ್ತಿಪೂರ್ವಕವಾದ ಕರ್ಮಗಳಿಂದ ಮುಕ್ತಿಯನ್ನು ಪಡೆಯುತ್ತಾರೆ.

**ಗವ್ಯೋಪಜೀವ್ಯಾ ಗೋಪ್ಯಸ್ತು ವನಚಾರಗೃಹೋಷಿತಾಃ ।**
**ಅರಣ್ಯಜೀವನಾಃ ಪ್ರಾಪುರ್ಮುಕ್ತಿಂ ಕಾಮೋಪಭೋಗತಃ ॥ ೧೧೭ ॥**
**ದ್ರುಹನ್ನಿರಂತರಂ ಪ್ರಾಪ ಶಿಶುಪಾಲಃ ಸಭಾಂತರೇ ।**
**ವ್ಯಾಧೋ ಹೃದಯಮಾವಿಧ್ಯ ಗತಿಂ ಪ್ರಾಪ ಸುದುರ್ಲಭಾಂ ॥ ೧೧೮ ॥**
**ವಸ್ತ್ರಾಕರ್ಷಂ ಗೃಹಂ ನೀತ್ವಾ ಕುಬ್ಜೈನಂ ಬುಭುಜೇ ಪುರಾ ।**
**ಯಂ ಧ್ಯಾನಲಯಮಾಪನ್ನಾ ಲಭಂತೇ ನ ಸುರಸ್ತ್ರಿಯಃ ॥ ೧೧೯ ॥**
**ಚಂಡಾಲಾಯ ದದೌ ಮುಕ್ತಿಂ ದೂರಸ್ಥಾಯಾಪಿ ನೋ ಪುನಃ ।**
**ಆಸನ್ನಾಯಾತಿ ಭಕ್ತಾಯ ಶ್ರೋತ್ರಿಯಾಯ ಪುರಾ ವಿಭುಃ ॥ ೧೨೦ ॥**
**ಮಾಯಾಭಿರ್ವಂಚಯೇತ್ತ್ವಾಂ ಹಿ ಪಿತಾಮಹಮಪಿ ಪ್ರಭುಃ ।**
**ತಿಷ್ಠಂತಿ ದುಃಖಬಹುಲಾಸ್ತಪೋಭಿರ್ದೇಹಬಂಧನಾಃ ॥ ೧೨೧ ॥**
**ಗೌತಮಾದ್ಯಾ ಬ್ರಹ್ಮಚರ್ಯನಿಷ್ಠಾಃ ಕಲ್ಪಾಂತವಾಸಿನಃ ।**
**ಈದೃಕ್ತಾದೃಕ್ಪರಿಚ್ಛೇದಗೋಚರಂ ನಾಸ್ಯ ಚೇಷ್ಟಿತಂ ॥ ೧೨೨ ॥**

---

೧೧೭. ಕೇವಲ ಹಾಲು ಹೊಸರು ಬೆಣ್ಣೆಗಳಿಂದ ಜೀವನಮಾಡುತ್ತ ಗೋವಳರ ಮನೆಗಳಲ್ಲಿ ವಾಸಮಾಡಿಕೊಂಡಿರುವ ಗೋಪಿಯರೂ, ಅರಣ್ಯದಲ್ಲಿದ್ದು ಜೀವನಮಾಡುವವರೂ ಕಾಮೋಪಭೋಗದಿಂದ ಮುಕ್ತಿಯನ್ನು ಪಡೆದರು.

೧೧೮-೧೧೯. ಧರ್ಮರಾಜನೆಸಗಿದ ರಾಜಸೂಯಯಾಗದ ಅಗ್ರಪೂಜಾ ಸಭೆಯಲ್ಲಿ ಶಿಶುಪಾಲರಾಕ್ಷಸನು ಆ ಹರಿಯನ್ನು ನಿರಂತರವೂ ದ್ವೇಷಿಸುತ್ತಲೇ ಮುಕ್ತಿಯನ್ನು ಪಡೆದನು. ಒಬ್ಬಾನೊಬ್ಬ ವ್ಯಾಧನೂ ಸಹ ಆ ಕೃಷ್ಣಪರಮಾತ್ಮನ ಹೃದಯಕ್ಕೆ ಬಾಣವನ್ನು ಹೊಡೆದು ಇತರರಾರಿಗೂ ದುರ್ಲಭವಾದ ಸದ್ಗತಿಯನ್ನು ಪಡೆದನು. ಪೂರ್ವದಲ್ಲಿ ಕುಬ್ಜೆಯು ಈ ಭಗವಂತನ ವಸ್ತ್ರದಂಚನ್ನು ಹಿಡಿದು ತನ್ನ ಮನೆಗೊಯ್ದು, ಎಷ್ಟೇ ಧ್ಯಾನಮಾಡಿದರೂ ದೇವತಾಸ್ತ್ರೀಯರೂ ಪಡೆಯಲಸದಳವಾದ ಭೋಗವನ್ನು ಭುಜಿಸಿದಳು.

೧೨೦. ಈ ವಿಭುವು ಬಹುದೂರದಲ್ಲಿದ್ದ ಚಂಡಾಲನಿಗೆ ಮುಕ್ತಿಯನ್ನಿತ್ತನೇ ಹೊರತು ಸಮೀಪದಲ್ಲಿಯೇ ಇದ್ದವನೂ, ಬಹಳ ಭಕ್ತನೂ, ಶ್ರೋತ್ರಿಯನೂ ಆದ ವಿಪ್ರನಿಗೆ ಮುಕ್ತಿಯನ್ನು ದಯೆಪಾಲಿಸಲಿಲ್ಲವು.

೧೨೧-೧೨೨. ಈ ಪ್ರಭುವು ತನ್ನ ಮಾಯೆಯಿಂದ ನಿನ್ನನ್ನೂ, ಆ ಪಿತಾಮಹನನ್ನೂ ಮೋಸಗೊಳಿಸಿಯಾನು. ಅನೇಕ ತಪಸ್ಸುಗಳ ದುಃಖಗಳಿಂದ ತೊಳಲುತ್ತ, ದೇಹಬಂಧನಗಳುಳ್ಳವರಾಗಿ ಬ್ರಹ್ಮಚರ್ಯೆಯಲ್ಲಿಯೇ ಇದ್ದುಕೊಂಡು ಕಲ್ಪಾಂತದವರೆಗೆ ಜೀವಿಸಿರುವ ಗೌತಮಾದಿ ಮಹರ್ಷಿಗಳೂ ಈ ಪರಮಾತ್ಮನ ಚೇಷ್ಟಿತವನ್ನು ಅರಿತುಕೊಳ್ಳಲು ಶಕ್ತರಾಗದಿರುವರು. ಈತನ ವ್ಯಾಪಾರವು ಇಂತಹುದು ಅಂತಹುದು ಎಂದು ನಿರ್ದೇಶಮಾಡಿ ತಿಳಿಯಲಾಗದು.

ವ್ಯವಸಾಯೇನ ಬಹುನಾ ಕಾಲೇನ ಮಹತಾ ತಥಾ ।
ನಿರ್ಣೇತುಂ ಶಕ್ಯತೇ ನಾಸ್ಯ ಚರಿತಂ ವಾ ಸುಮೇಧಸಃ ॥ ೧೨೩ ॥
ಉಪಾಯಾ ಬಹವಃ ಸಂತಿ ಯೇ ಶಾಸ್ತ್ರಪರಿನಿಷ್ಠಿತಾಃ ।
ವಿದುಷಾಂ ಮೋಚನಾಯೇಹ ಬಹುಶಸ್ತ್ವೈರ್ಯಜಂತಿ ವೈ ॥ ೧೨೪ ॥
ಸರ್ವೇಷಾಮುತ್ತಮೋಪಾಯೋ ವಸತಿಃ ಪುರುಷೋತ್ತಮೇ ।
ಯೋಽವಶ್ಯಂ ಸ್ವಾಮಿಸಾಯುಜ್ಯಂ ಪ್ರಾಪಯೇತ್ಸುಸಖಾ ಯಥಾ ॥೧೨೫॥
ತದೇನಂ ಮಾಯಿನಂ ಪ್ರಾಪ್ತುಮುಪಾಯೋ ನಾಂತರೀಯಕಃ ।
ಸ್ವಯಂ ನಿಧಾಯ ಹರಿಣಾ ಯತ್ರ ವಾಸಃ ಸುರಕ್ಷಿತಃ ॥ ೧೨೬ ॥
ಇಂದ್ರದ್ಯುಮ್ನಪ್ರಸಂಗೇನ ಜಾಯತೇ ಸರ್ವಲೌಕಿಕಃ ।
ತದಾಜ್ಞಾಪಯ ದೇವೇಶ ಗೃಹೀತ್ವೈನಂ ಬಲಾನ್ವಿತಂ ॥ ೧೨೭ ॥
ಉಪತ್ಯಕಾಯಾಂ ಸಂಸ್ಥಾಪ್ಯ ದೀಕ್ಷಯಿತ್ವಾ ಮಹಾಕ್ರತೌ ।
ಆಗಮಿಷ್ಯಾಮಿ ಪಾದಾಬ್ಜಸಮೀಪಂ ತೇ ವೃಷಧ್ವಜ ॥ ೧೨೮ ॥

ಜೈಮಿನಿರುವಾಚ :—

ತಥೇತ್ಯುಕ್ತ್ವಾ ಮಹಾದೇವಃ ಕ್ಷಣಾದಂತರ್ದಧೇ ಮುನೇಃ ।
ಸೋಽಪಿ ರಾಜ್ಞೋ ರಥೇ ತಿಷ್ಠನ್ಪ್ರಯಯೌ ಕ್ಷೇತ್ರಮುತ್ತಮಂ ॥೧೨೯॥

---

೧೨೩. ಬಹಳವಾದ ವ್ಯವಸಾಯದಿಂದಲೂ, ಅಂತೆಯೇ ಅನಿರ್ದಿಷ್ಟವಾದ ಕಾಲದಿಂದಲೂ ಮಹಾಮೇಧಾವಿಯಾದವನಿಗೂ ಈತನ ಚರಿತವನ್ನು ನಿರ್ಣಯ ಮಾಡಲು ಶಕ್ಯವಲ್ಲವು.

೧೨೪–೧೨೫. ಎಲೈ ಪರಶಿವನೇ ! ಶಾಸ್ತ್ರಪರಿನಿಷ್ಠಿತಗಳಾದ ವಿದ್ವಾಂಸರಿಗೆ ಮುಕ್ತಿಯನ್ನು ದೊರಕಿಸುವ ಭಗವತ್ಸಾಪ್ರಾಪಕಗಳಾದ ಉಪಾಯಗಳು ಅನೇಕವಾಗಿರುವುವು. ಆ ವಿದ್ವಾಂಸರು ಆ ಉಪಾಯಗಳಿಂದ ಪರಮಾತ್ಮನನ್ನು ಬಹಳವಾಗಿ ಪೂಜಿಸುತ್ತಾರೆ. ಸಮಸ್ತ ಉಪಾಯಗಳಲ್ಲಿಯೂ ಪುರುಷೋತ್ತಮ ಕ್ಷೇತ್ರದಲ್ಲಿ ವಾಸಮಾಡುವುದೇ ಉತ್ತಮೋಪಾಯವು. ಈ ರೀತಿಯಾದ ಕ್ಷೇತ್ರವಾಸವು ಒಳ್ಳೆಯ ಗೆಳೆಯನಂತೆ ಸ್ವಾಮಿಸಾಯುಜ್ಯವನ್ನು ದೊರಕಿಸುತ್ತದೆ.

೧೨೬–೧೨೮. ಆದುದರಿಂದ ಈ ಮಾಯಿಯನ್ನು ಹೊಂದಲಿರುವ ಉಪಾಯವೇನೂ ಗುಟ್ಟಿನದಲ್ಲ. ಈ ಪುರುಷೋತ್ತಮಕ್ಷೇತ್ರದಲ್ಲಿ ಈತನೊಡನೆಯೇ ವಾಸಮಾಡುವುದು ಸುರಕ್ಷಿತವಾದುದು. ಅದೂ ಸಹ ಈ ಇಂದ್ರದ್ಯುಮ್ನ ಪ್ರಸಂಗದಿಂದ ಎಲ್ಲರಿಗೂ ಲಭ್ಯವಾಗುತ್ತದೆ. ಆದುದರಿಂದೆಲೈ ದೇವೇಶ್ವರಾ ! ನನಗೀಗ ಅಪ್ಪಣೆಕೊಡು. ಸೈನ್ಯಸಮೇತನಾದ ಈ ದೊರೆಯನ್ನು ಸಮೀಪದಲ್ಲಿಯೇ ನೆಲೆಗೊಳಿಸಿ ಅಶ್ವಮೇಧಯಾಗಕ್ಕೆ ದೀಕ್ಷೆಯನ್ನು ಕೈಕೊಳ್ಳುವಂತೆ ಮಾಡಿ ವೃಷಭಧ್ವಜನಾದ ನಿನ್ನಡಿಗಳ ಬಳಿಗೈದುವೆನು.''

೧೨೯–೧೩೦. ಜೈಮಿನಿಯು ಹೇಳುತ್ತಾನೆ:—ಎಲೈ ಋಷಿಗಳಿರಾ ! ನಾರದ

ದ್ವಿತೀಯೇಽಸ್ಮಿ ಕಪೋತೇಶಸ್ಥಲೀಮಾಸೇದಿವಾನ್ನೃಪಃ ।
ದೈರ್ಘ್ಯಾಯಾಮಸಮಾಯುಕ್ತಾಂ ಜಲಾಶಯದ್ರುಮಾಕುಲಾಂ ॥೧೩೦॥
ಬಿಲ್ವೇಶಃ ಪೂರ್ವಸೀಮಾಯಾಃ ಸಮುದ್ರತಟಮಾಸ್ಥಿತಃ ।
ಸೇನಾನಿವಾಸಯೋಗ್ಯಾಂ ತಾಂ ಮಂತ್ರಿಣಾ ಸಂನಿವೇದಿತಾಂ ॥ ೧೩೧ ॥
ಯಥಾಯೋಗ್ಯಂ ಯಥಾಸ್ಥಾನಂ ಸ್ಥಾಪಯಿತ್ವಾ ನೃಪೋತ್ತಮಃ ।
ಬಿಲ್ವೇಶ್ವರಕಪೋತೇಶೌ ನಮಸ್ಕೃತ್ಯ ಪ್ರಪೂಜ್ಯ ಚ ॥ ೧೩೨ ॥
ರಥಮಾಸ್ಥಾಯ ಮತಿಮಾನ್ಸಹಿತೋ ಬ್ರಹ್ಮಸೂನುನಾ ।
ಮನಸಾ ವಚಸಾ ವಿಷ್ಣುಂ ನೀಲಾಚಲನಿವಾಸಿನಂ ।
ಚಿಂತಯನ್ಕೀರ್ತಯನ್ವಿಪ್ರಾ ಜಗಾಮ ಸಂನಿಧಿಂ ಹರೇಃ ॥ ೧೩೩ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ "ಅವಿಮುಕ್ತಕ್ಷೇತ್ರ—ಏಕಾಮ್ರವನಸ್ಥಾಪನ ವರ್ಣನಂ"ನಾಮ ದ್ವಾದಶೋಽಧ್ಯಾಯಃ**

---

ನಿಂತು ನುಡಿಯಲು ಆ ಮಹಾದೇವನು ಅಂತೆಯೇ ಆಗಲೆಂದು ಹೇಳಿ ಒಂದು ಕ್ಷಣಕಾಲದಲ್ಲಿಯೇ ಅಂತರ್ಧಾನವಾದನು. ಆ ಬಳಿಕಲಾ ದೇವಮುನಿಯೂ ಸಹ ಇಂದ್ರದ್ಯುಮ್ನನ ರಥದಲ್ಲಿ ಕುಳಿತು ಉತ್ತಮಕ್ಷೇತ್ರವಾದ ಪುರುಷೋತ್ತಮಕ್ಕೆ ಪ್ರಯಾಣ ಬೆಳಸಿದನು. ಮಾರನೆಯ ದಿನ ಆ ದೊರೆಯು ಬಹಳ ವಿಸ್ತಾರವಾಗಿಯೂ, ಜಲಾಶಯಗಳಿಂದಲೂ, ವಿವಿಧ ವೃಕ್ಷಗಳಿಂದಲೂ, ಕೂಡಿದುದಾಗಿಯೂ ಇರುವ ಕಪೋತೇಶಸ್ಥಳವನ್ನು ಸೇರಿದನು.

೧೩೧. "ಸಾಗರದ ಪೂರ್ವತೀರದಲ್ಲಿ ಬಿಲ್ವೇಶ್ವರನು ನೆಲಸಿರುವನು. ಅಲ್ಲಿಯೇ ಸೇನಾನಿವೇಶ ಮಾಡಲು ಯೋಗ್ಯವಾಗಿದೆ" ಎಂದು ಮಂತ್ರಿಯು ಅರಿಕೆಮಾಡಿದನು.

೧೩೨. ದೊರೆಯು ಬಿಲ್ವೇಶ್ವರಕಪೋತೇಶ್ವರರನ್ನು ಪೂಜಿಸಿದ ತರುವಾಯ ಯಥಾಯೋಗ್ಯವಾಗಿ ಆ ಸ್ಥಳಕ್ಕೆ ತಕ್ಕಂತೆ ಸೇನೆಯನ್ನಲ್ಲಿ ನೆಲೆಗೊಳಿಸಿದನು.

೧೩೩. ತರುವಾಯ ಆ ಬುದ್ಧಿಶಾಲಿಯು ಬ್ರಹ್ಮಸೂನುವಾದ ನಾರದನೊಡನೆ ರಥಾರೂಢನಾಗಿ, ನಿಲಾಚಲನಿವಾಸಿಯಾದ ಮಹಾವಿಷ್ಣುವನ್ನು ಮನಸಾ ವಚಸಾ ಧ್ಯಾನಿಸುತ್ತಲೂ, ಕೀರ್ತಿಸುತ್ತಲೂ ಆ ಹರಿಯ ಸನ್ನಿಧಿಯನ್ನು ಕುರಿತು ಹೊರಟನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಅವಿಮುಕ್ತಕ್ಷೇತ್ರ—ಏಕಾಮ್ರವನ ಸ್ಥಾಪನ ವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಕಪೋತೇಶ್ವರ ಬಿಲ್ವೇಶ್ವರ ಮಾಹಾತ್ಮ್ಯವರ್ಣನಂ

ಮುನಯ ಊಚುಃ:—

**ಕಪೋತೇಶಸ್ಥಲೀ ಚಾಪಿ ಕಥಂ ಖ್ಯಾತಾ ಮಹಾಮುನೇ ।**
**ಕೋ ವಾ ಕಪೋತಃ ಕಶ್ಚೇಶ ಏತನ್ನೋ ವಕ್ತುಮರ್ಹಸಿ ॥ ೧ ॥**

ಜೈಮಿನಿರುವಾಚ:—

**ಪುರಾ ಕುಶಸ್ಥಲೀ ಸಾ ವೈ ಅಸೇವ್ಯಾ ಸರ್ವಜಂತುಭಿಃ ।**
**ತೀಕ್ಷ್ಣಧಾರೈಃ ಕುಶಾಗ್ರೈಸ್ತು ಪರಿತಃ ಕಂಟಕೈಶ್ಚಿತಾ ॥ ೨ ॥**
**ನಿಸ್ತರುರ್ನಿರ್ಜಲಾಧಾರಾ ಪಿಶಾಚವಸತಿರ್ಯಥಾ ॥ ೩ ॥**
**ಯದಾ ಪೂರ್ವಂ ಭಗವತೋ ನಾನ್ಯೋ ದೇವೋಽಪಿ ಪೂಜ್ಯತೇ ।**
**ಪೂಜ್ಯಃ ಸ್ಯಾಮಹಮಪ್ಯೇವಂ ಸ್ಪರ್ಧಾಸೀದ್ಧೂರ್ಜಟೇಸ್ತದಾ ।**
**ಚಿಂತಯನ್ನಿತಿ ತಸ್ಯೈವ ವಿಷ್ಣೋರ್ಭಕ್ತೌ ಮನೋಽದಧತ್ ॥ ೪ ॥**

## ಕನ್ನಡದ ಅನುವಾದ

### ಕಪೋತೇಶ್ವರ ಬಿಲ್ವೇಶ್ವರ ಮಾಹಾತ್ಮ್ಯವರ್ಣನ

೧. ಮುನಿಗಳು ಕೇಳುತ್ತಾರೆ:— ಎಲೈ ಜೈಮಿನಿಯೇ! ಕಪೋತೇಶಸ್ಥಲವೆಂಬ ಈ ಕ್ಷೇತ್ರವಾದರೂ ಪ್ರಸಿದ್ಧಿಗೆ ಬಂದುದೆಂತು? ಕಪೋತನೆಂಬವನಾರು? ಈಶನಾರು? ಈ ವಿಷಯವನ್ನು ನಮಗೆ ತಿಳಿಸುವುದಾಗಬೇಕು.

೨. ಜೈಮಿನಿಯು ಹೇಳುತ್ತಾನೆ:— ಎಲೈ ವಿಪ್ರರೇ! ಕೇಳಿರಿ. ಪೂರ್ವದಲ್ಲಿ ಕುಶಸ್ಥಳವೆಂಬುದು ಬಹಳ ಮೊನಚಾದ ದರ್ಭೆಯ ಪೊದರುಗಳಿಂದಲೂ, ಮುಳ್ಳು ಪೊದೆಗಳಿಂದಲೂ ನಿಬಿಡವಾಗಿ ಎಲ್ಲ ಜಂತುಗಳಿಂದಲೂ ವರ್ಜ್ಯವಾಗಿದ್ದಿತು.

೩. ಆ ಪ್ರದೇಶವು ಪಿಶಾಚವಸತಿಯಂತೆ ತರುಗಳೂ, ಜಲವೂ ಇಲ್ಲದುದಾಗಿದ್ದಿತು.

೪. ಆಗ ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣನಿಗಿಂತಲೂ ಪೂರ್ವದಲ್ಲಿ ಬೇರಾವ ದೇವತೆಯೂ ಜನಗಳಿಂದ ಪೂಜಿಸಲ್ಪಡುತ್ತಿರಲಿಲ್ಲವು. ಅದೇ ಸಮಯದಲ್ಲಿಯೇ "ನಾನೂ ಇದೇ ರೀತಿ ಪೂಜ್ಯನಾಗಬೇಕೆಂ"ಬ ಹುರುಡು ಧೂರ್ಜಟಿಗೆ ಬಂದಿತು. ಆತನು ಈ ರೀತಿ ಚಿಂತಿಸುತ್ತಿರುವಂತೆಯೆ ಆತನ ಮನಸ್ಸು ವಿಷ್ಣುವಿನ ವಿಷಯದಲ್ಲಿ ಭಕ್ತಿಯನ್ನು ತಾಳಿತು.

**ಸರ್ವನಿರ್ವಿಷಯೇ ದೇಶೇ ಸ್ಥಿತ್ವಾಽಹಂ ನಿಷ್ಪರಿಗ್ರಹಃ ।**
**ಸುಮಹತ್ತಪ ಆಸ್ಥಾಯ ತೋಷಯಿಷ್ಯಾಮಿ ತಂ ಹರಿಂ ॥ ೫ ॥**
**ಕಿಂ ವದೇಯಂ ರಮೇಶಾಯ ಕಾ ಸ್ತುತಿಃ ಶಾರದಾಪತೇಃ ।**
**ಸರ್ವಬ್ರಹ್ಮಾಂಡನಾಥಸ್ಯ ಕಿಂ ವಾನ್ಯತ್ತುಷ್ಟಿಕಾರಕಂ ॥ ೬ ॥**
**ತಸ್ಮಾನ್ನ ಬಾಹ್ಯಂ ವಸ್ತ್ವನ್ಯದುಪಯೋಗಾಯ ತಸ್ಯ ವೈ ।**
**ಅಂತರ್ಯಾಗಂ ಸಮಾಸ್ಥಾಯ ನಿರ್ವ್ಯಲೀಕೇನ ಚೇತಸಾ ॥ ೭ ॥**
**ಭಕ್ತೇಭ್ಯ ಆತ್ಮಪ್ರದದಂ ಚರಾಚರಗುರುಂ ಹರಿಂ ।**
**ಆರಾಧಯಿಷ್ಯೇ ಸರ್ವೇಷಾಂ ಪೂಜ್ಯಃ ಸ್ಯಾಂ ತತ್ಪ್ರಸಾದತಃ ॥ ೮ ॥**
**ತತ ಇತ್ಯಭಿಸಂಧಾಯ ಯಯೌ ಪುಣ್ಯಾಂ ಕುಶಸ್ಥಲೀಂ ।**
**ಸಮೀಪೇ ನೀಲಗೋತ್ರಸ್ಯ ಸರ್ವದ್ವಂದ್ವವಿವರ್ಜಿತಃ ॥ ೯ ॥**
**ತತಸ್ತೇಪೇ ತಪಸ್ತೀವ್ರಂ ವಾಯುಭಕ್ಷೋ ಮಹೇಶ್ವರಃ ।**
**ಕಪೋತ ಇವ ಸೂಕ್ಷ್ಮೋಽಭೂದಷ್ಟಮೂರ್ತಿರಪಿ ಪ್ರಭುಃ ॥ ೧೦ ॥**

---

೫. ತರುವಾಯ ಆ ಮಹಾದೇವನು, "ಎಲ್ಲೆಡೆಯಲ್ಲಿಯೂ ನಿರ್ಜನವಾಗಿರುವ ಪ್ರದೇಶದಲ್ಲಿ ನಿಂತು ಯಾವ ಪರಿಗ್ರಹವನ್ನೂ ಮಾಡದೆ ಮಹತ್ತರವಾದ ತಪಸ್ಸನ್ನು ಮಾಡಿ ಆ ಶ್ರೀಹರಿಯನ್ನು ಸಂತೋಷಗೊಳಿಸುತ್ತೇನೆ.

೬. ಆ ಲಕ್ಷ್ಮೀಪತಿಗೆ ನಾನೇನೆಂದುಹೇಳಲಿ! ಶಾರದಾಪತಿಯಾದ ಆತನಿಗೆ ಯಾವ ಸ್ತುತಿಯನ್ನು ಮಾಡುವುದು? ಸಮಸ್ತ ಬ್ರಹ್ಮಾಂಡಕ್ಕೂ ಒಡೆಯನಾದ ಆ ಪರಮಾತ್ಮನನ್ನು ಸಂತೋಷಗೊಳಿಸಲು ಬೇರಾವ ಮಾರ್ಗವಿರುವುದು?

೭-೮. ಆ ಭಗವಂತನ ಆರಾಧನೆಗೆ ಯಾವ ಬಾಹ್ಯವಸ್ತುವೂ ಉಪಯೋಗಯೋಗ್ಯವಾದುದಲ್ಲವು. ಆದುದರಿಂದ ಮಾತೃಕಾನ್ಯಾಸಾದಿ ಪೂರ್ವಕವಾದ ಅಂತರ್ಯಾಗವನ್ನೆಸಗಿ, ಭಕ್ತಜನರಿಗೆ ಆತ್ಮದಾನವನ್ನು ಮಾಡುವವನೂ, ಚರಾಚರಗುರುವೂ ಆದ ಶ್ರೀಹರಿಯನ್ನು ಆರಾಧಿಸಿ ಆತನ ಪ್ರಸಾದದಿಂದ ಸಕಲ ಲೋಕಗಳಿಗೂ ಪೂಜ್ಯನಾಗುತ್ತೇನೆ" ಎಂದು ಯೋಚಿಸಿದನು.

೯. ಆ ಮಹೇಶ್ವರನು ಈ ಪ್ರಕಾರವಾಗಿ ಯೋಚಿಸಿದ ತರುವಾಯ ಸುಖದುಃಖಾದಿ ಸಮಸ್ತ ದ್ವಂದ್ವಗಳನ್ನೂ ವಿಸರ್ಜಿಸಿ ನೀಲಾಚಲದ ಸಮೀಪದಲ್ಲಿರುವ ಪುಣ್ಯಕರವಾದ ಕುಶಸ್ಥಳಕ್ಕೆ ಬಂದನು.

೧೦. ಅಲ್ಲಿ ಆತನು ವಾಯುಭಕ್ಷಣಮಾಡಿಕೊಂಡು ತೀವ್ರವಾದ ತಪಸ್ಸನ್ನೆಸಗಿದನು. ಆಗಲಾ ಮಹೇಶ್ವರ ಪ್ರಭುವು ಅಷ್ಟಮೂರ್ತಿಯಾದರೂ ಪಾರಿವಾಳದಂತೆ ಬಹಳ ಸೂಕ್ಷ್ಮಗಾತ್ರನಾದನು.

ತತಃ ಪ್ರಸನ್ನೋ ಭಗವಾನ್ನೈಶ್ವರ್ಯಂ ಪ್ರದದೌ ತದಾ ।
ಯೇನಾತ್ಮತುಲ್ಯಃ ಸಂಜಾತಃ ಪೂಜಾಸಂಮಾನನಾದಿಷು ॥ ೧೧ ॥
ತಪಃಪ್ರಭಾವಾತ್ತಸ್ಯಾಸೀತ್ಸ್ಥಲೀ ವೃಂದಾವನೋಪಮಾ ।
ಸರಸ್ತಡಾಗಸರಸೀನದೀಭಿಃ ಶೋಭಿತಾಂತರಾ ॥ ೧೨ ॥
ನಾನಾದ್ರುಮೈರ್ಲತಾಭಿಶ್ಚ ಸರ್ವರ್ತುಫಲಪುಷ್ಪಕೈಃ ।
ಮಧುಮತ್ತದ್ವಿರೇಫಾಣಾಂ ಝುಂಕಾರೈರ್ಮಧುರಾಶಯಾ ॥ ೧೩ ॥
ನಾನಾಪಕ್ಷಿಗಣಾಕೀರ್ಣಾ ಸರ್ವಜಂತುಸುಖಾಶ್ರಯಾ ।
ಕಪೋತಸದೃಶೋ ಜಾತೋ ಯತಃ ಸ ತಪಸಾ ಶಿವಃ ॥ ೧೪ ॥
ಮುರಾರೇರಾಜ್ಞಯಾ ಸೋಽತ್ರ ಕಪೋತೇಶ್ವರತಾಂ ಗತಃ ।
ತದಾಜ್ಞಯಾಽತ್ರ ವಸತಿ ಮೃಡಾನ್ಯಾ ತ್ರ್ಯಂಬಕಃ ಸದಾ ॥ ೧೫ ॥
ಯೇಽರ್ಚಯಂತಿ ಕಪೋತೇಶಂ ಸ್ತುವಂತಿ ಪ್ರಣಮಂತಿ ವಾ ।
ನಿರ್ಧೂತಕಲ್ಮಷಾಸ್ತೇ ವೈ ಪ್ರಯಾಂತಿ ಪುರುಷೋತ್ತಮಂ ॥ ೧೬ ॥
ಅತಃ ಪರಂ ಪ್ರವಕ್ಷ್ಯಾಮಿ ಬಿಲ್ವೇಶಮಹಿಮಾಂ ದ್ವಿಜಾಃ ।
ಪಾತಾಲವಾಸಿನಃ ಪೂರ್ವಂ ದೈತ್ಯಾ ಭಿತ್ವಾ ಮಹೀತಲಂ ॥ ೧೭ ॥

---

೧೧. ತರುವಾಯ ಶ್ರೀ ಹರಿಯು ಪ್ರಸನ್ನನಾಗಿ ಆತನಿಗೆ ಪೂಜಾ ಸನ್ಮಾನಗಳಲ್ಲಿ ತನ್ನಂತೆಯೇ ಆಗುವಂತಹ ಐಶ್ವರ್ಯವನ್ನು ದಯೆಗೈದನು.

೧೨. ಆ ಪರಶಿವನ ತಪಃಪ್ರಭಾವದಿಂದ ಆ ಸ್ಥಲವು ಸರೋವರಗಳಿಂದಲೂ, ಕೆರೆಕಟ್ಟೆಗಳಿಂದಲೂ, ನದಿಗಳಿಂದಲೂ ನಿರಂತರವೂ ಶೋಭಿಸಿ ವೃಂದಾವನವಂತೆ ಶೋಭಿಸಿತು.

೧೩–೧೪. ಎಲ್ಲ ಋತುಗಳಲ್ಲಿಯೂ ಹೂ ಹಣ್ಣು ಬಿಡುವ ಬಗೆ ಬಗೆಯ ತರುಲತೆಗಳಿಂದಲೂ, ಜೇನನ್ನು ಹೀರಿ ಮದಿಸಿ ಝುಂಕಾರಗೈವ ದುಂಬಿಗಳ ನಾದದಿಂದ ತುಂಬಿದ ದಿಗಂತಗಳಿಂದಲೂ ಕೂಡಿ ಬಗೆಬಗೆಯ ಪಕ್ಷಿಗಣಗಳಿಂದ ತುಂಬಿ, ಸಮಸ್ತಜಂತುಗಳಿಗೂ ಸುಖವಸತಿಯಾಗಿ ಆ ಕುಶಸ್ಥಳವು ಶೋಭಿಸಿತು.

೧೫. ಶಿವನು ಆ ಸ್ಥಳದಲ್ಲಿ ತಪಸ್ಸನ್ನುಮಾಡಿ ಕಪೋತದಂತಾದುದರಿಂದ ಆತನು ಮುರಾರಿಯ ಆಜ್ಞೆಯಂತೆ ಕಪೋತೇಶ್ವರನಾದನು. ಆ ತ್ರ್ಯಂಬಕನು ಈ ರೀತಿ ಶ್ರೀ ಹರಿಯ ಆಜ್ಞೆಯಂತೆ ಕುಶಸ್ಥಳದಲ್ಲಿ ಮೃಡಾಣಿಯೊಡನೆ ವಾಸ ಮಾಡುತ್ತಿರುವನು.

೧೬. ಎಲೈ ವಿಪ್ರರೇ! ಯಾರಾದರೆ ಕಪೋತೇಶ್ವರನನ್ನು ಪೂಜಿಸಿ, ಸ್ತುತಿಸಿ, ನಮಸ್ಕರಿಸುವರೋ ಅವರು ನಿರ್ಧೂತಪಾಪರಾಗಿ ಶ್ರೀಪುರುಷೋತ್ತಮನನ್ನು ಹೊಂದುತ್ತಾರೆ.

೧೭–೧೮. ಎಲೈ ದ್ವಿಜರೇ! ಇನ್ನುಮುಂದೆ ಬಿಲ್ವೇಶ್ವರನ ಮಾಹಾತ್ಮ್ಯವನ್ನು

**ಉಪದ್ರವಂತಿ ಭೂಲೋಕಂ ಭಕ್ಷಯಂತಿ ಜನಾಂಸ್ತಥಾ ।**
**ಭಾರಾವತರಣಾರ್ಥಾಯ ದೇವಕೀಗರ್ಭಸಂಭವಃ ॥ ೧೮ ॥**
**ಪಾಲಯಾಮಾಸ ಪೃಥಿವೀಂ ಯದಾ ಸ ಭಗವಾನ್ಪ್ರಭುಃ ।**
**ಯಾದವೈಃ ಪಾಂಡವೈಃ ಸಾರ್ಧಂ ತದಾ ತತ್ಸ್ಥಾನಮಾಗತಃ ॥ ೧೯ ॥**
**ತೀರ್ಥರಾಜಸ್ಯ ಸಲಿಲೇ ಸ್ನಾತ್ವಾ ತಂ ನೀಲಮಾಧವಂ ।**
**ದೂರಾತ್ಪ್ರಣಮ್ಯ ಮನಸಾ ದೈತ್ಯದ್ವಾರಮುಪಾಗತಃ ॥ ೨೦ ॥**
**ದೃಷ್ಟ್ವಾ ತದ್ವಿವರಂ ಘೋರಮಪ್ರವೇಶ್ಯಂ ತು ಮಾನವೈಃ ।**
**ಭ್ರಾಂತ್ಯಾ ಸಂಮೋಹಯಂಲ್ಲೋಕಾನ್ಪ್ರಥಯನ್ ಶಿವಪೂಜ್ಯತಾಂ ॥ ೨೧ ॥**
**ಬೈಲ್ವಂ ಫಲಂ ಸಮಾದಾಯ ತತ್ರಾವಾಹ್ಯ ತ್ರಿಲೋಚನಂ ।**
**ಪೂಜಯಿತ್ವಾ ಪುರಾರಾತಿಂ ತುಷ್ಟಾವಾಸುರಸೂದನಃ ॥ ೨೨ ॥**

**ಶ್ರೀ ಭಗವಾನುವಾಚ :—**

**ನಮಸ್ತೇ ತ್ರಿಗುಣಾತೀತ ಗುಣತ್ರಯವಿಭಾಗಕೃತ್ ।**
**ತ್ರಯೀಮಯ ತ್ರಯಾತೀತ ತ್ರಿಲೋಕಜ್ಞಾನಿನೇ ನಮಃ ॥ ೨೩ ॥**

---

ಹೇಳುವೆನು; ಕೇಳಿರಿ. ಪೂರ್ವದಲ್ಲಿ ದೈತ್ಯರೆಲ್ಲರೂ ಸೇರಿಕೊಂಡು ಪಾತಾಳದ ಬಾಗಿಲನ್ನೊಡೆದು ಭೂಮಿಗೆ ಬಂದು ಜನಗಳನ್ನು ತಿಂದು ಉಪದ್ರವಗೊಳಿಸುತ್ತಿದ್ದರು. ಈ ಭೂಭಾರವನ್ನು ಇಳುಹಲೋಸುಗ ಶ್ರೀಮನ್ನಾರಾಯಣನು ದೇವಕೀದೇವಿಯ ಗರ್ಭದಲ್ಲಿ ಶ್ರೀ ಕೃಷ್ಣನಾಗಿ ಅವತರಿಸಿದನು.

೧೯–೨೦. ಯಾವಾಗ ಆ ಪ್ರಭುವು ಯಾದವರಿಂದಲೂ, ಪಾಂಡವರಿಂದಲೂ ಒಡಗೂಡಿ ಪೃಥಿವೀಪಾಲನೆಯನ್ನು ಮಾಡುತ್ತಿದ್ದನೋ ಆಗ ಆ ಸ್ಥಳಕ್ಕೆ ಬಂದು ತೀರ್ಥರಾಜದ ಜಲದಲ್ಲಿ ಸ್ನಾನಮಾಡಿ ನೀಲಮಾಧವನನ್ನು ದೂರದಿಂದಲೇ ಮನಸಾ ನಮಸ್ಕರಿಸಿ ದೈತ್ಯರು ಭೂಮಿಗೆ ಬರುತ್ತಿದ್ದ ದ್ವಾರದ ಬಳಿ ಸಾರಿದನು.

೨೧–೨೨. ಮಾನವರಾರೂ ಪ್ರವೇಶಿಸಲಸದಳವಾದ ಆ ಘೋರ ವಿವರವನ್ನು ಕಂಡು ಆ ಕೃಷ್ಣಪರಮಾತ್ಮನು ಭ್ರಾಂತಿಯಿಂದ ಲೋಕವನ್ನೇ ಸಂಮೋಹಗೊಳಿಸುವವನಾಗಿ ಶಿವನ ಪೂಜ್ಯತೆಯನ್ನು ಲೋಕಕ್ಕೆ ಪ್ರಚುರಗೊಳಿಸುವವನಾಗಿ ಬಿಲ್ವಫಲವೊಂದನ್ನು ತೆಗೆದುಕೊಂಡು ಅದರಲ್ಲಿಯೇ ಆ ತ್ರಿಲೋಚನನನ್ನು ಆವಾಹನೆಮಾಡಿ ಪೂಜಿಸಿದ ಬಳಿಕ ಆ ಅಸುರಸೂದನನು ಆ ತ್ರಿಪುರಾರಿಯನ್ನೀರೀತಿ ಸ್ತುತಿಸಿದನು.

೨೩. ಶ್ರೀ ಭಗವಂತನು ಹೇಳುತ್ತಾನೆ:— "ಸತ್ವರಜಸ್ತಮೋಗುಣಾತೀತನೂ, ಆ ತ್ರಿಗುಣಗಳನ್ನು ವಿಭಾಗಮಾಡಿದವನೂ, ವೇದಮಯನೂ, ವೇದಾತೀತನೂ, ಭೂತಭವಿಷ್ಯದ್ವರ್ತಮಾನಕಾಲದ ಆಗುಹೋಗುಗಳನ್ನರಿತವನೂ ಆದ ಓ ಪರಮೇಶ್ವರಾ! ನಿನಗೆ ನಮಸ್ಕಾರವು.

**ಶಶಿಸೂರ್ಯಾಗ್ನಿನೇತ್ರಾಯ ಬ್ರಹ್ಮಣ್ಯಾಯ ವರಾತ್ಮನೇ ।**
**ಅಷ್ಟೈಶ್ವರ್ಯನಿಧಾನಾಯ ತುಭ್ಯಮಷ್ಟಾತ್ಮನೇ ನಮಃ ॥ ೨೪ ॥**
**ಯಸ್ಯ ರೂಪಂ ತಮಃಪಾತೀ ತನೋನಾಶನಮವ್ಯಯಂ ।**
**ಅಜ್ಞಾನಾನಾಂ ತಮಶ್ಛಿನ್ನಂ ತಸ್ಮೈ ವಿತಮಸೇ ನಮಃ ॥ ೨೫ ॥**
**ಏವಂ ಸ್ವಮಾತ್ಮನಾತ್ಮಾನಂ ಸ್ತುತ್ವಾ ಸ ಭಗವಾನ್ಪ್ರಭುಃ ।**
**ತಸ್ಯ ಪ್ರಸಾದಾದ್ವಿವರಂ ಸುಪ್ರವೇಶಮಪಶ್ಯತ ॥ ೨೬ ॥**
**ತೇನ ಮಾರ್ಗೇಣ ಪಾತಾಲಂ ಸಸೈನ್ಯೋಽಭ್ಯಗಮತ್ಪ್ರಭುಃ ।**
**ಹತ್ವಾ ತತ್ರ ಬಲೋದಗ್ರಾನ್ದೈತ್ಯಾನ್ಭಾರಾವತಾರಣಃ ॥ ೨೭ ॥**
**ಪುನರಾಗಮ್ಯ ತತ್ರೈವ ಸ್ಥಿತ್ವಾ ಸ ವೃಷಭಧ್ವಜಂ ।**
**ಸಂಪೂಜ್ಯ ಭಗವಾನ್ದ್ವಾರರೋಧಾಯ ಸ್ಥಾಪಯಂಛಿವಂ ॥ ೨೮ ॥**
**ಇದಮಾಹ ಮಹಾಬುದ್ಧಿರ್ಭಕ್ತಿವಶ್ಯೋ ಗದಾಧರಃ ।**
**ಧೂರ್ಜಟೆ ತಿಷ್ಠ ಪ್ರಾಸಾದೇ ರುಂಧಾನೋಽಸುರನಿರ್ಗಮಂ ॥ ೨೯ ॥**

---

೨೪. ಚಂದ್ರಸೂರ್ಯಾಗ್ನಿಗಳೇ ತ್ರಿನೇತ್ರಗಳಾಗುಳ್ಳವನೂ, ಬ್ರಹ್ಮಣ್ಯನೂ, ಶ್ರೇಷ್ಠವಾದ ಆತ್ಮಸ್ವರೂಪನೂ, ಪರಮಾತ್ಮನೂ, ಅಷ್ಟೈಶ್ವರ್ಯಗಳಿಗೂ ಕಾರಣನೂ, ಅಷ್ಟಮೂರ್ತಿಯೂ ಆದ ನಿನಗೆ ನಮಸ್ಕಾರವು.

೨೫. ಯಾರ ರೂಪವು ತಮಸ್ಸಿನ ಆಚೆಗಿರುವುದೋ, ಅಂತಹ ತಮಸ್ಸನ್ನು ಕಳೆಯುವ ಅವ್ಯಯವಾದ ರೂಪವುಳ್ಳವನೂ, ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವವನೂ, ವಿತಮಸನೂ ಆದ ನಿನಗೆ ನಮಸ್ಕಾರವು.''

೨೬. ಎಲೈ ಋಷಿಗಳಿರಾ! ಈ ರೀತಿ ಆ ಪ್ರಭುವಾದ ಆ ಭಗವಂತನು ತನ್ನ ಆತ್ಮಸ್ವರೂಪನಾದ ಆ ಶಿವನನ್ನು ಮನಸಾ ಸ್ತುತಿಸಿ ಆತನ ಪ್ರಸಾದದಿಂದ ಆ ಪಾತಾಳದ ವಿವರವು ಪ್ರವೇಶಿಸಲು ಸುಗಮವಾದುದನ್ನು ಕಂಡನು.

೨೭. ತರುವಾಯ ಆ ಪ್ರಭುವು ಸೈನ್ಯಸಮೇತನಾಗಿ ಆ ದ್ವಾರದಿಂದಲೇ ಪಾತಾಳಲೋಕಕ್ಕೆ ಹೋಗಿ ಮಹಾಬಲಾಢ್ಯರಾದ ದೈತ್ಯರೆಲ್ಲರನ್ನೂ ಕೊಂದು ಭೂಭಾರವನ್ನಿಳುಹಿದನು.

೨೮. ಆ ಶ್ರೀಕೃಷ್ಣನು ಈ ರೀತಿ ದೈತ್ಯಸಂಹಾರವನ್ನು ಮಾಡಿದ ತರುವಾಯ ಅದೇ ದ್ವಾರದ ಮೂಲಕ ಹಿಂತಿರುಗಿ ಬಂದು ಅಲ್ಲಿಯೇ ನಿಂದ ವೃಷಭಧ್ವಜನಾದ ಆ ಶಿವನನ್ನು ಪೂಜಿಸಿ ಆ ಬಾಗಿಲನ್ನು ತಡೆಯಲೋಸುಗ ಆತನನ್ನಲ್ಲಿಯೇ ಸ್ಥಾಪಿಸಿದನು.

೨೯. ಅಲ್ಲದೆ ಭಕ್ತಿಗೆ ವಶ್ಯನೂ, ಮಹಾಬುದ್ಧಿಯೂ ಆದ ಆ ಗದಾಧರನು "ಎಲೈ ಧೂರ್ಜಟಿಯೇ! ನೀನೀ ಪ್ರಾಸಾದದಲ್ಲಿಯೇ ಇದ್ದುಕೊಂಡು ಅಸುರರು ಭೂಮಿಗೆ ಬಾರದಂತೆ ತಡೆಯುವವನಾಗು.

ತ್ವದನ್ಯಃ ಕಃ ಕ್ಷಮಃ ಶಂಭೋ ಕಬ್ರೂರಬಲನಾಶನೇ ।
ಸ್ಥಾಪಯಿತ್ವಾ ಮಹಾದೇವಂ ತತೋ ದ್ವಾರವತೀಂ ಯಯೌ ॥ ೩೦ ॥
ತತಃ ಪ್ರಭೃತಿ ಬಿಲ್ವೇಶಃ ಪೃಥಿವ್ಯಾಂ ಖ್ಯಾತಿಮಾಗತಃ ।
ಪೂರ್ವವಿಧಿಃ ಸ ಬಿಲ್ವೇಶಃ ಕ್ಷೇತ್ರರಾಜಸ್ಯ ಭೋ ದ್ವಿಜಾಃ ॥ ೩೧ ॥
ತಂ ದೃಷ್ಟ್ವಾ ಪಾಪಹಂತಾರಂ ಮೃಡಾನೀಪತಿಮವ್ಯಯಂ ।
ಸರ್ವಾನ್ಕಾಮಾನವಾಪ್ನೋತಿ ವಿಪತ್ತಿಂ ದುಸ್ತರಾಂ ಜಯೇತ್ ॥ ೩೨ ॥
ಕಪೋತಬಿಲ್ವೇಶ್ವರಯೋರ್ಮಾಹಾತ್ಮ್ಯಂ ಕಥಿತಂ ತು ವಃ ।
ಅತಃ ಪರಂ ಭೋ ಮುನಯಃ ಕಿಮನ್ಯಚ್ಛ್ರೋತುಮಿಚ್ಛಥ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ
ಜೈಮಿನಿಋಷಿಸಂವಾದೇ "ಕಪೋತೇಶ್ವರ ಬಿಲ್ವೇಶ್ವರಮಾಹಾತ್ಮ್ಯವರ್ಣನಂ"ನಾಮ
ತ್ರಯೋದಶೋಽಧ್ಯಾಯಃ

---

೩೦. ಎಲೈ ಶಂಭುವೇ! ಅಸುರರನ್ನು ನಾಶಗೊಳಿಸುವ ಕಾರ್ಯದಲ್ಲಿ ನೀನಲ್ಲದೆ ಮತ್ತಾರುತಾನೆ ಸಮರ್ಥರಾದಾರು?" ಎಂದಾತನಿಗೆ ಹೇಳಿ ಆತನನ್ನಲ್ಲಿಯೇ ಸ್ಥಾಪಿಸಿ ದ್ವಾರಕೆಗೆ ಹಿಂತಿರುಗಿ ಬಂದನು.

೩೧. ಅಂದಿನಿಂದ ಈ ಭೂಮಂಡಲದಲ್ಲಿ ಬಿಲ್ವೇಶ್ವರನು ಪ್ರಖ್ಯಾತಿಗೆ ಬಂದನು. ಎಲೈ ದ್ವಿಜರೇ! ಈ ಬಿಲ್ವೇಶ್ವರನೇ ಕ್ಷೇತ್ರರಾಜವಾದ ಶ್ರೀಪುರುಷೋತ್ತಮ ಕ್ಷೇತ್ರಕ್ಕೆ ಪ್ರಥಮ ಸೃಷ್ಟಿಕರ್ತನು.

೩೨. ಮಾನವನು ಪಾಪಹಂತೃವೂ, ಮೃಡಾನೀಪತಿಯೂ, ಅವ್ಯಯನೂ ಆದ ಆ ಬಿಲ್ವೇಶ್ವರನನ್ನು ಸಂದರ್ಶನಮಾಡಿದುದಾದರೆ ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನಲ್ಲದೆ, ದಾಟಲಸದಳವಾದ ವಿಪತ್ತನ್ನೂ ಜಯಿಸುತ್ತಾನೆ.

೩೩. ಎಲೈ ಮುನಿಗಳಿರಾ! ಇಂತು ನಿಮಗೆ ಕಪೋತೇಶ್ವರ ಮತ್ತು ಬಿಲ್ವೇಶ್ವರರ ಮಾಹಾತ್ಮ್ಯವನ್ನು ಹೇಳಿರುತ್ತೇನೆ. ಇನ್ನುಮುಂದೆ ಮತ್ತೇನನ್ನು ಕೇಳಬಯಸುವಿರಿ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ
ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಕಪೋತೇಶ್ವರ ಬಿಲ್ವೇಶ್ವರರಮಾಹಾತ್ಮ್ಯ
ವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ದಶೋಽಧ್ಯಾಯಃ

### ನೀಲಕಂಠಕ್ಷೇತ್ರಗಮನಂ— ಅಶ್ವಮೇಧಯಜ್ಞಪ್ರತಿಜ್ಞಾದಿವರ್ಣನಂ

ಮುನಯ ಊಚುಃ :—

ರಥಮಾರುಹ್ಯ ತೌ ಯಾತೌ ಯದಾ ನಾರದಪಾರ್ಥಿವೌ ।
ಕ್ವ ಯಾತೌ ಚಕ್ರತುಃ ಕಿಂ ವಾ ತನ್ನೋ ವದ ಮಹಾಮುನೇ ॥ ೧ ॥

ಜೈಮಿನಿರುವಾಚ :—

ಸಾರ್ದ್ಧಂ ಚ ವಿದ್ಯಾಪತಿನಾ ಪುರೋಹಿತಕನೀಯಸಾ ।
ಕ್ಷೇತ್ರಾಂತೇ ನೀಲಕಂಠಸ್ಯ ಸಮೀಪಮುಪಜಗ್ಮತುಃ ॥ ೨ ॥
ದುರ್ನಿಮಿತ್ತಮಭೂನ್ಮಾರ್ಗೇ ವ್ರಜತೋಽಸ್ಯ ಮಹೀಕ್ಷಿತಃ ।
ವಾಮಾಕ್ಷಿಭುಜಯೋಃ ಸ್ಪಂದಃ ಸ್ಫುರಣಂ ಚ ಮುಹುರ್ಮುಹುಃ ॥ ೩ ॥
ತದ್ದೃಷ್ಟ್ವಾ ನೃಪಶಾರ್ದೂಲೋ ವಿಷಾದಮುಪಸೇದಿವಾನ್ ।
ಪಪ್ರಚ್ಛ ಕಾರಣಂ ಚಾಸ್ಯ ಸರ್ವಜ್ಞಾನನಿಧಿಂ ಮುನಿಂ ॥ ೪ ॥
ಅವ್ಯಾಹತಂ ಮೇ ಸಾಮ್ರಾಜ್ಯಂ ಪ್ರಾಪ್ತಂ ಕ್ಷೇತ್ರೋತ್ತಮಂ ತ್ವಿದಂ ।
ದರ್ಶನಾರ್ಥಂ ಮಾಧವಸ್ಯ ಯಾತ್ರೇಯಂ ತು ಶುಭಾವಹಾ ॥ ೫ ॥

---

## ಕನ್ನಡದ ಅನುವಾದ

### ನೀಲಕಂಠಕ್ಷೇತ್ರಗಮನ— ಅಶ್ವಮೇಧಯಜ್ಞಪ್ರತಿಜ್ಞಾದಿವರ್ಣನ

೧. ಮುನಿಗಳು ಕೇಳುತ್ತಾರೆ:— ಎಲೈ ಮಹಾಮುನಿಯೇ! ಆ ನಾರದ ಮುನಿಯೂ, ಇಂದ್ರದ್ಯುಮ್ನಮಹಾರಾಜನೂ ರಥಾರೂಢರಾಗಿ ಹೊರಟರೆಂದು ಹೇಳಿದೆಯಲ್ಲವೆ! ಅವರು ಹೋದುದೆಲ್ಲಿಗೆ? ಅಲ್ಲಿ ಅವರು ಮಾಡಿದುದೇನು? ಈ ವಿಷಯವನ್ನು ನಮಗೆ ತಿಳಿಸುವವನಾಗು.

೨. ಜೈಮಿನಿಯು ಹೇಳುತ್ತಾನೆ:— ಅಯ್ಯಾ ವಿಪ್ರರೇ! ಆ ನಾರದನೂ ಇಂದ್ರದ್ಯುಮ್ನನೂ ಕಿರಿಯ ಪುರೋಹಿತನಾದ ವಿದ್ಯಾಪತಿಯೊಡನೆ ರಥಾರೂಢರಾಗಿ ಹೊರಟು ಆ ಕ್ಷೇತ್ರದ ತುದಿಯಲ್ಲಿರುವ ನೀಲಕಂಠೇಶ್ವರನ ಸನ್ನಿಧಿಯನ್ನು ಬಳಿಸಾರಿದರು.

೩. ದಾರಿಯಲ್ಲಿ ಹೋಗುತ್ತಿರುವಂತೆಯೇ ಆ ದೊರೆಗೆ ಅಪಶಕುನಗಳು ಆದುವು. ಎಡಗಣ್ಣು ಎಡಭುಜಗಳು ಅಡಿಗಡಿಗೂ ಅದುರಿದುವು.

೪. ಅದನ್ನು ಕಂಡು ಆತನು ವಿಷಾದವನ್ನು ಹೊಂದಿ ಸಕಲ ಜ್ಞಾನಕ್ಕೂ ನಿಧಿಯಾದ ನಾರದಮುನಿಯನ್ನು ಹಾಗಾಗಲು ಕಾರಣವೇನೆಂದು ಪ್ರಶ್ನಿಸಿದನು.

೫. "ಎಲೈ ಮುನಿಯೇ! ಅವ್ಯಾಹತವಾದ ನನ್ನ ಸಾಮ್ರಾಜ್ಯವನ್ನು

ಅಕಾರ್ಯಂ ಮೇ ಭವೇದದ್ಯ ಕಿಂ ಮುನೇ ಬ್ರೂಹಿ ತತ್ತ್ವತಃ ।
ಸ್ಪಂದತೇ ವಾಮನೇತ್ರಂ ತು ಸ್ಫುರತೇ ಚ ಭುಜೋಽಸಕೃತ್ ॥ ೬ ॥
ತಚ್ಛ್ರುತ್ವಾ ನಾರದಃ ಪ್ರಾಹ ಭಾವಿಕಾರ್ಯಂ ಚ ಸೂಚಯನ್ ।
ಶ್ರಾವಯನ್ಕುಶಲಂ ವಾಕ್ಯಂ ಯದುಕ್ತಂ ಪದ್ಮಯೋನಿನಾ ॥ ೭ ॥

ನಾರದ ಉವಾಚ :—

ಮಾಭೂದ್ವಿಷಾದಸ್ತೇ ಭೂಪ ಸವಿಘ್ನಂ ಪ್ರಾಯಶಃ ಶುಭಂ ।
ವಿಘ್ನಾಂತೇ ಚ ಶುಭಂ ಪುಂಸಾಂ ಪುನರ್ಭಾಗ್ಯವತಾಂ ನೃಪ ॥ ೮ ॥
ಸತ್ಯಂ ತ್ವಂ ಸಾರ್ವಭೌಮೋಽಸಿ ಕ್ಷೇತ್ರಂ ವಿಷ್ಣೋರ್ವಪುಸ್ತ್ವಿದಂ ।
ಯಾತ್ರಾ ತೇಽತ್ರ ಯದರ್ಥೇಯಂ ಸೋಽಂತರ್ಧಾನಮುಪಾಗಮತ್ ॥
ಏಷ ವಿದ್ಯಾಪತಿರ್ವಿಪ್ರೋ ದಿನೇ ಯಸ್ಮಿನ್ದದರ್ಶ ತಂ ।
ಸಾಯಂಕಾಲೇ ತತೋಽನ್ಯೇದ್ಯುಃ ಸ್ವರ್ಣವಾಲುಕಯಾವೃತಃ ।
ಯಯೌ ಪಾತಾಲನಿಲಯಂ ಮರ್ತ್ಯಲೋಕೇ ಸುದುರ್ಲಭಃ ॥ ೧೦ ॥

---

ಬಿಟ್ಟು ಈ ಪುರುಷೋತ್ತಮಕ್ಷೇತ್ರಕ್ಕೆ ಬಂದುದಾಯಿತು. ಶ್ರೀನೀಲಮಾಧವನ ಸಂದರ್ಶನಕ್ಕಾಗಿ ನಾವೆಸಗಿರುವ ಈ ಯಾತ್ರೆಯು ಶುಭಾವಹವಾದುದು.

೬. ನನಗೆ ಆಗಬಾರದುದೇನಾಗುವುದೆಂಬುದನ್ನು ನಿಜವಾಗಿಯೂ ಹೇಳು. ನನ್ನ ಎಡಗಣ್ಣೂ, ಎಡಭುಜವೂ ಅಡಿಗಡಿಗೂ ಅದುರುತ್ತಿರುವುವು.''

೭. ಈ ಮಾತನ್ನು ಕೇಳಿ ನಾರದನು ಮುಂದಾಗುವ ಕಾರ್ಯವನ್ನು ಸೂಚಿಸುವವನಾಗಿ, ಬ್ರಹ್ಮನು ಹಿಂದೊರೆದ ಶುಭವಾಕ್ಯವನ್ನು ಆತನಿಗೆ ತಿಳಿಸುವವನಾಗಿ ಹೀಗೆಂದನು :—

೮. ನಾರದನು ಹೇಳುತ್ತಾನೆ:—''ಎಲೈ ಭೂಪನೇ! ನೀನು ವಿಷಾದವನ್ನು ಹೊಂದಬೇಡ. ಪ್ರಾಯಶಃ ಶುಭವು ವಿಘ್ನಗಳೊಡನೆಯೇ ಕೂಡಿರುತ್ತದೆ. ಭಾಗ್ಯವಂತರಾದವರಿಗೆ ವಿಘ್ನಗಳು ಬಂದುಹೋದಬಳಿಕ ಫಲವು ದೊರಕುತ್ತದೆ.

೯. ನೀನು ದಿಟವಾಗಿಯೂ ಸಾರ್ವಭೌಮನಾಗಿರುವೆ. ಅಂತೆಯೇ ಈ ಕ್ಷೇತ್ರವೂ ಶ್ರೀಮಹಾವಿಷ್ಣುವಿನ ಶರೀರವಾಗಿರುವುದು. ಆದರೆ ನೀನು ಯಾರ ಸಂದರ್ಶನಾರ್ಥವಾಗಿ ಇಲ್ಲಿಗೆ ಯಾತ್ರೆಬಂದೆಯೋ ಆ ನೀಲಮಾಧವಸ್ವಾಮಿಯು ಅಂತರ್ಧಾನಹೊಂದಿರುವನು.

೧೦. ಎಲೈ ದೊರೆಯೇ! ನಿನ್ನ ಪುರೋಹಿತನಾದ ಈ ವಿದ್ಯಾಪತಿಯು ಯಾವ ದಿನ ಆ ಸ್ವಾಮಿಯನ್ನು ಕಂಡನೋ ಆ ದಿನದ ಸಾಯಂಕಾಲವೇ ಚಿನ್ನದ ಮರಳಿನಿಂದಾತನು ಮುಚ್ಚಿಹೋಗಿ ತನ್ನ ಪಾತಾಳನಿಲಯವನ್ನು ಸೇರಿದವನಾಗಿ ಈ ಮರ್ತ್ಯಲೋಕದಲ್ಲಿ ಸುದುರ್ಲಭನಾಗಿರುವನು.''

ಜೈಮಿನಿರುವಾಚ :—

ತಚ್ಛ್ರುತ್ವಾ ಘೋರವಚನಂ ವಜ್ರಪಾತಸಮಂ ನೃಪಃ ।
ಪಪಾತ ಧರಣೀಪೃಷ್ಠೇ ನಿಃಸಂಜ್ಞಃ ಸ ದ್ವಿಜೋತ್ತಮಾಃ ॥ ೧೧ ॥
ತಂ ತಥಾ ಪತಿತಂ ದೃಷ್ಟ್ವಾ ಪುರೋಹಿತಪುರೋಗಮಾಃ ।
ಸ್ನಿಗ್ಧಾಃ ಸಖಾಯಃ ಸರ್ವೇ ತೇ ಹಾಹಾಕಾರಮುಪಾದ್ರವನ್ ॥ ೧೨ ॥
ಕರ್ಪೂರಶೀತಲಂ ವಾರಿ ಮುಖೇ ಸಿಕ್ತ್ವಾ ಪುನಃಪುನಃ ।
ಚಂದನಾಗರುಕರ್ಪೂರೈಃ ಸರ್ವಾಂಗಂ ಲಿಲಿಪುಶ್ಚ ತೇ ॥ ೧೩ ॥
ಚಾಮರೈಸ್ತಾಲವೃಂತೈಶ್ಚ ವೀಜಯಾಮಾಸುರಾಶು ತಂ ।
ನಾರದೋಽಪಿ ಚ ಸಂಭ್ರಾಂತೋ ಧಾರಯನ್ಯೋಗಧಾರಣಾಂ ॥ ೧೪ ॥
ಪ್ರಾಣಾನರಕ್ಷನ್ನೃಪತೇರ್ಜಾನಂಸ್ತತ್ರ ಶುಭಾಯತಿಂ ।
ಸೋಽಪಿ ರಾಜಾ ಚಿರಾತ್ಸಂಜ್ಞಾಂ ಲೇಭೇ ಯತ್ನೈರನುತ್ತಮೈಃ ॥ ೧೫ ॥
ಉತ್ಥಾಯ ಪಾದಯೋರ್ವಿಪ್ರಾ ನಾರದಸ್ಯಾಪತತ್ಪುನಃ ।
ಕಿಮಕಾರ್ಷಂ ಮುನೇ ಪಾಪಂ ಕಸ್ಮಿನ್ಜನ್ಮಾಂತರೇ ದೃಢಂ ॥ ೧೬ ॥

---

೧೧. ಜೈಮಿನಿಯು ಹೇಳುತ್ತಾನೆ:—ಎಲೈ ಬ್ರಾಹ್ಮಣರಿರಾ! ವಜ್ರಪಾತೋಪಮವಾದ ನಾರದನ ಈ ಘೋರವಚನವನ್ನಾಲಿಸಿ ಆ ಇಂದ್ರದ್ಯುಮ್ನ ಮಹಾರಾಜನು ಒಡನೆಯೇ ಪ್ರಜ್ಞೆತಪ್ಪಿ ನೆಲಕ್ಕೆ ಬಿದ್ದುಹೋದನು.

೧೨. ಆತನು ಮೂರ್ಛಿತನಾಗಿ ನೆಲಕ್ಕೆ ಬಿದ್ದುದನ್ನು ಕಂಡು ಪುರೋಹಿತನೇ ಮೊದಲಾದವರೂ, ವಿಶ್ವಾಸಪಾತ್ರರಾದ ಗೆಳೆಯರೂ, ಎಲ್ಲರೂ ಹಾಹಾಕಾರ ಮಾಡುತ್ತ ಓಡಿಬಂದರು.

೧೩. ಅವರು ಒಡನೆಯೇ ಕರ್ಪೂರಶೀತಳವಾದ ಜಲವನ್ನಾತನ ಮುಖಕ್ಕೆ ಅಡಿಗಡಿಗೂ ಚಿಮುಕಿಸಿ, ಚಂದನ ಅಗರು ಕರ್ಪೂರಗಳಿಂದ ಆತನ ಶರೀರವನ್ನೆಲ್ಲ ಲೇಪನಮಾಡಿದರು.

೧೪-೧೫. ಚಾಮರಗಳಿಂದಲೂ, ಬೀಸಣಿಗೆಗಳಿಂದಲೂ ಬೀಸಿದರು. ನಾರದನೂ ಸಹ ಸಂಭ್ರಾಂತನಾಗಿ ಯೋಗಧಾರಣಮಾಡಿ ಮುಂದಕ್ಕೆ ಎಲ್ಲವೂ ಒಳ್ಳೆಯದೇ ಆಗುವುದೆಂದರಿತಿದ್ದುದರಿಂದ ಆ ರಾಜನ ಪ್ರಾಣಗಳನ್ನು ರಕ್ಷಿಸುತ್ತಿದ್ದನು. ಬಹಳಕಾಲವಾದಮೇಲೆ ಅನೇಕ ಉತ್ತಮ ಪ್ರಯತ್ನಗಳು ನಡೆದು ಆ ಅರಸನು ಸಂಜ್ಞೆಯನ್ನು ಹೊಂದಿದನು.

೧೬-೧೭. ತರುವಾಯ ಆತನು ಮೇಲಕ್ಕೆದ್ದು ಬಳಿಯಲ್ಲಿಯೇ ಇದ್ದ ನಾರದಮುನಿಯ ಪಾದಗಳಿಗೆ ಅಡಿಗಡಿಗೂ ನಮಸ್ಕರಿಸುತ್ತ, "ಎಲೈ ಮುನಿಯೇ! ಒಳ್ಳೆಯ ಫಲವೊದಗುವ ಸಮಯದಲ್ಲಿ ಈ ರೀತಿಯಾದ ದುಃಖವೊದಗಲು ನಾನು ಪೂರ್ವಜನ್ಮದಲ್ಲಿ ಮಹತ್ತರವಾದ ಯಾವ ಪಾಪವನ್ನೆಸಗಿದ್ದೆನೋ! ನಾನು

ಯಸ್ಯ ಪಾಕದಶಾಯಾಂ ವೈ ದುಃಖಮಾಸೀತ್ಸುದಾರುಣಂ ।
ಕರ್ಮಣಾ ಮನಸಾ ವಾಚಾ ನೋ ದ್ವಿಜಾನಾಂ ಗವಾಮಪಿ ।
ಅಪರಾಧಃ ಕೃತಃ ಕಶ್ಚಿತ್ಸ್ವಪ್ನೇಽಪಿ ಮುನಿಪುಂಗವ ॥ ೧೭ ॥
ನಿತ್ಯಂ ನೈಮಿತ್ತಿಕಂ ಕಾಮ್ಯಂ ಕರ್ಮ ಯತ್ಪರಿಕೀರ್ತಿತಂ ।
ರಾಜ್ಞಸ್ತನ್ಮುನಿಶಾರ್ದೂಲ ನ ತ್ಯಕ್ತಂ ವೈ ಮಯಾ ಕ್ವಚಿತ್ ॥ ೧೮ ॥
ದೇವತಾತಿಥಿಭೃತ್ಯಾನಾಂ ಪಿತೄಣಾಂ ಚ ಮಹಾಮುನೇ ।
ತಥಾಶ್ರಿತಾನಾಂ ಬಂಧೂನಾಂ ನಾಪಮಾನಃ ಕೃತೋ ಮಯಾ ॥ ೧೯ ॥
ಪಂಚಾದಶಾಪರಾಧಾ ಯೇ ವಿಷ್ಣೋರ್ವೈಷ್ಣವಪುಂಗವ ।
ತ್ಯಕ್ತಾಃ ಪ್ರಯತ್ನಾತ್ತೇ ಸರ್ವೇ ಕ್ರುದ್ಧಾ ಇವ ಮಹೋರಗಾಃ ॥ ೨೦ ॥
ಕಿಂ ಭಾಗ್ಯಚರಿತಂ ತೇನ ಪುರೋಹಿತಕನೀಯಸಾ ।
ಯಚ್ಚರ್ಮಚಕ್ಷುಷಾ ದೃಷ್ಟೋ ಭಗವಾನ್ನೀಲಮಾಧವಃ ॥ ೨೧ ॥
ಕಿಮರ್ಥಂ ರಾಜ್ಯವಿಭ್ರಂಶೋ ಜಾನತೈವ ತ್ವಯಾ ಕೃತಃ ।
ಯಾತ್ರಾಸಮಯ ಏವೈತತ್ಕಥಂ ವಾ ನ ಪ್ರಕೀರ್ತಿತಂ ॥ ೨೨ ॥

---

ಈ ಜನ್ಮದಲ್ಲಿ ಕಾಯೇನ, ವಾಚಾ, ಮನಸಾ ಬ್ರಾಹ್ಮಣರಿಗಾಗಲಿ, ಗೋವುಗಳಿಗಾಗಲಿ ಸ್ವಪ್ನದಲ್ಲಿಯೂ ಅಪರಾಧವನ್ನು ಮಾಡಿರುವುದಿಲ್ಲವು.

೧೮. ಎಲೈ ಮುನಿಶಾರ್ದೂಲನೇ! ಶಾಸ್ತ್ರಗಳಲ್ಲಿ ರಾಜನಾದವನು ಮಾಡಬೇಕಾದ ನಿತ್ಯ, ನೈಮಿತ್ತಿಕ, ಕಾಮ್ಯಕರ್ಮಗಳೆಂಬುದಾಗಿ ಯಾವ ಯಾವ ಕರ್ಮಗಳು ಹೇಳಲಾಗಿವೆಯೋ, ಅವುಗಳಾವುವನ್ನೂ ನಾನು ಯಾವಾಗಲೂ ಬಿಡಲಿಲ್ಲವು.

೧೯. ದೇವತೆಗಳು, ಅತಿಥಿಗಳು, ಭೃತ್ಯರು, ಪಿತೃಗಳು ಅಂತೆಯೇ ಆಶ್ರಿತರಾದ ಬಂಧುಗಳು ಇವರೇ ಮೊದಲಾದವರಿಗೆ ನಾನೆಂದೂ ಅಪಮಾನಮಾಡಿರುವುದಿಲ್ಲವು.

೨೦. ಎಲೈ ವೈಷ್ಣವಪುಂಗವನೇ! ಶ್ರೀಮಹಾವಿಷ್ಣುವಿನಲ್ಲಿ ಹದಿನೈದು ಅಪರಾಧಗಳೆಂದಾವುವು ಉಕ್ತವಾಗಿರುವುವೋ, ಕೆರಳಿದ ಹಾವುಗಳನ್ನೆಂತೋ ಅಂತು ಅವುಗಳನ್ನೂ ನಾನು ಪ್ರಯತ್ನಪೂರ್ವಕವಾಗಿಯೇ ತ್ಯಜಿಸಿರುತ್ತೇನೆ.

೨೧. ಆಹಾ! ನಮ್ಮ ಚಿಕ್ಕಪುರೋಹಿತನಾದ ವಿದ್ಯಾಪತಿಯು ಅದೇನು ಪುಣ್ಯವನ್ನು ಮಾಡಿದ್ದನೋ! ಆತನು ಈ ಚರ್ಮಚಕ್ಷುವಿನಿಂದಲೇ ಭಗವಾನ್ ನೀಲಮಾಧವಸ್ವಾಮಿಯನ್ನು ಕಂಡನಲ್ಲವೆ!!

೨೨. ಎಲೈ ಮಹರ್ಷಿಯೇ! ನೀನು ತಿಳಿದೂ ತಿಳಿದೂ ನಿಷ್ಪ್ರಯೋಜನವಾಗಿ ನನಗೀ ರಾಜ್ಯಭ್ರಂಶವನ್ನೇಕೆ ಮಾಡಿಸಿದೆ. ಯಾತ್ರೆಗೆ ಹೊರಡುವಾಗಲೇ ನನಗೀ ಸಮಾಚಾರವನ್ನೇಕೆ ಹೇಳಲಿಲ್ಲ.

ಕಿಮರ್ಥಂ ವಾ ಶ್ರೋತ್ರಿಯಾಣಾಂ ಸ್ಥಾನಭ್ರಂಶೋ ಮಯಾ ಕೃತಃ ।
ಕಥಮೇತೈಃ ಪರಿತ್ಯಕ್ತಾಶ್ಚಿರಾತ್ಸಂಸ್ಕೃತಭೂಮಯಃ ॥ ೨೩ ॥
ಆವಂಶಭೂತೇರ್ವೃತ್ತಿರ್ಯಾ ಪ್ರಜಾಭಿಃ ಪರಿಪಾಲಿತಾ ।
ಮದರ್ಥಂ ಸಾ ಪರಿತ್ಯಕ್ತಾ ಜೀವಿಷ್ಯಂತಿ ಕಥಂ ನು ತಾಃ ॥ ೨೪ ॥
ಪ್ರಾಣಾನ್ನಧಾರಯಿಷ್ಯಾಮಿ ನ ದ್ರಕ್ಷ್ಯಾಮಿ ಯದಾ ಹರಿಂ ।
ಏಷ ಮೇ ನಿಶ್ಚಯೋ ಬ್ರಹ್ಮನ್ಮಯಿ ನಷ್ಟೇ ಕುತಃ ಪ್ರಜಾಃ ॥ ೨೫ ॥
ಮುನೇ ಸದಾ ಸಕರುಣಸ್ತ್ವಂ ಮಾಂ ಶಾಸ್ಸಿ ಶುಭಾಶುಭಂ ।
ಸಾಂಪ್ರತಂ ಮತ್ಸುತಂ ನೀತ್ವಾ ಮಾಲವೇಷ್ವಭಿಷೇಚಯ ॥ ೨೬ ॥
ಸ ಪಾಲಯತು ನ್ಯಾಯೇನ ನ ಶೋಚಂತು ಇಮಾಃ ಪ್ರಜಾಃ ।
ರಾಜಾನೋ ಯೇ ಸಮಾಯಾತಾಸ್ತೇ ಸರ್ವೇ ಮನ್ನಿದೇಶತಃ ॥ ೨೭ ॥
ಮತ್ಸೂನೋರ್ಮಾಲವೇಶಸ್ಯ ಪ್ರಯಾಂತು ವಚನೇ ಸ್ಥಿತಾಃ ।
ಪ್ರಾಯೋಪವೇಶವಿಧಿನಾ ಚಿಂತಯನ್ನೀಲಮಾಧವಂ ॥ ೨೮ ॥
ಆಯುಃಶೇಷಂ ಕರಿಷ್ಯಾಮಿ ಸಫಲಂ ಕ್ಷೇತ್ರಮಾಸ್ಥಿತಃ ॥ ೨೯ ॥

---

೨೩. ನಾನಾದರೂ ಶ್ರೋತ್ರಿಯರಾದ ಈ ಬ್ರಾಹ್ಮಣರಿಗೆ ಸ್ಥಾನಭ್ರಂಶತೆಯನ್ನೇಕೆ ಮಾಡಿಸಿದೆನೋ! ಇವರು ಸುಸಂಸ್ಕೃತವಾದ ಆ ಆ ಪ್ರದೇಶಗಳನ್ನು ಬಹಳ ಹಿಂದೆಯೇ ತೊರೆದು ಹೇಗೆ ಬಂದರೋ ಏನೋ!!

೨೪. ಆನುವಂಶಿಕವಾಗಿ ನನ್ನ ಈ ಪ್ರಜೆಗಳು ಯಾವ ಯಾವ ವೃತ್ತಿಗಳನ್ನು ಪಾಲಿಸಿಕೊಂಡು ಬಂದಿದ್ದರೋ ಅವುಗಳನ್ನಿಲ್ಲಿ ನನಗಾಗಿ ತೊರೆದರು. ಇನ್ನು ಅವರು ಜೀವಿಸುವುದೆಂತು?

೨೫-೨೬. ಭೋ ಬ್ರಹ್ಮನ್! ಈಗ ನಾನು ಶ್ರೀಹರಿಯನ್ನು ಕಾಣದಿದ್ದರೆ ಪ್ರಾಣಗಳನ್ನಿಟ್ಟುಕೊಂಡಿರುವುದಿಲ್ಲ; ಇದು ನನ್ನ ನಿಶ್ಚಯವು. ನಾನು ಮಡಿದರೆ ಇನ್ನು ಈ ಪ್ರಜೆಗಳೆಲ್ಲಿರುತ್ತಾರೆ? ಎಲೈ ಮುನಿಯೇ! ನೀನು ಯಾವಾಗಲೂ ದಯೆಯುಳ್ಳವನಾಗಿ ನನಗೆ ಶುಭಾಶುಭವಿಷಯಗಳಲ್ಲಿ ಉಪದೇಶಮಾಡಿ ಶಾಸನೆ ಮಾಡುತ್ತಿರುತ್ತೀಯೆ. ಆದುದರಿಂದ ಪ್ರಕೃತದಲ್ಲಿ ನೀನು ಈ ನನ್ನ ಮಗನನ್ನು ಕರೆದುಕೊಂಡುಹೋಗಿ ಮಾಳವದೇಶದಲ್ಲಿ ಪಟ್ಟಾಭಿಷೇಕಮಾಡು.

೨೭-೨೯. ಅವನು ರಾಜ್ಯವನ್ನು ಧರ್ಮದಿಂದ ಪರಿಪಾಲಿಸಲಿ. ಈ ಪ್ರಜೆಗಳು ನನಗಾಗಿ ದುಃಖಿಸದಿರಲಿ. ಅಲ್ಲದೆ ಬೇರೆ ಬೇರೆ ದೇಶಗಳಿಂದ ನನ್ನೊಡನೆ ಬಂದಿರುವ ಈ ರಾಜರೆಲ್ಲರೂ ಮಾಳವೇಶ್ವರನಾಗುವ ಈ ನನ್ನ ಮಗನ ಅಧೀನದಲ್ಲಿರುವವರಾಗಿ ತಂತಮ್ಮ ರಾಜ್ಯಗಳಿಗೆ ತೆರಳಲಿ. ನಾನು ಪ್ರಾಯೋಪವೇಶನಿಯಮದಿಂದ ಶ್ರೀ ನೀಲಮಾಧವಮೂರ್ತಿಯನ್ನೇ ಧ್ಯಾನಿಸುತ್ತ ಈ ಕ್ಷೇತ್ರದಲ್ಲಿಯೇ ಇದ್ದುಕೊಂಡು ಉಳಿದಿರುವ ಈ ನನ್ನ ಆಯುಸ್ಸನ್ನು ಕಳೆಯುತ್ತೇನೆ.''

ಜೈಮಿನಿರುವಾಚ :—

ವಿಲಪಂತಮಿಂದ್ರದ್ಯುಮ್ನಂ ರಾಜಾನಂ ಬ್ರಹ್ಮಣಃ ಸುತಃ ।
ಉತ್ಥಾಪ್ಯ ಪ್ರಶ್ರಯಗಿರಾ ಸಾಂತ್ವಯನ್ನಿದಮಬ್ರವೀತ್ ॥ ೩೦ ॥

ನಾರದ ಉವಾಚ :—

ರಾಜನ್ಪಂಡಿತಮೂರ್ಧನ್ಯೋ ವೈಷ್ಣವೋ ಧೈರ್ಯಸಾಗರಃ ।
ಶ್ರೇಯಃ ಸವಿಘ್ನಂ ಸತತಂ ಕಥಂ ವಾ ನಾವಧಾರಯೇಃ ॥ ೩೧ ॥
ಇದಂ ತು ಪರಮಂ ಶ್ರೇಯಃ ಪುಂಸೋ ಜನ್ಮಶತಾರ್ಜಿತಂ ।
ಶರೀರಧಾರಿಣಂ ಪಶ್ಯೇಚ್ಚರ್ಮಚಕ್ಷುರ್ಗದಾಧರಂ ॥ ೩೨ ॥
ನಿರಂಕುಶಾ ಹರೇರ್ಲೀಲಾ ಕೇನ ವಾಪ್ಯವಧಾರ್ಯತೇ ।
ಜೀವನ್ಮುಕ್ತೋಽಪ್ಯಹಂ ರಾಜಂಸ್ತಲ್ಲೀಲಾಂ ನಾತಿವರ್ತಯೇ ॥ ೩೩ ॥
ಕಿಯತಾ ವಂಚಿತೋ ನಾಹಂ ದೃಢಭಕ್ತೋಽಸ್ತಿ ಕಃ ಸ್ಥಿತಃ ।
ದುರತ್ಯಯಾ ತಸ್ಯ ಮಾಯಾ ಬಹುಜನ್ಮಶತೈರಪಿ ॥ ೩೪ ॥
ಅನಂತಾ ತಸ್ಯ ಮಾಯೇಯಂ ದುರ್ಜ್ಞೇಯಾ ಪದ್ಮಯೋನಿನಾ ।
ನಾಭಿಪದ್ಮಸ್ಥಿತೇನಾಪಿ ನಿತ್ಯಂ ಚ ಸ್ತುತಿಶಾಲಿನಾ ॥ ೩೫ ॥

---

೩೦. ಜೈಮಿನಿಯು ಹೇಳುತ್ತಾನೆ:— ಎಲೈ ವಿಪ್ರರೇ! ಈ ರೀತಿ ಪ್ರಲಪಿಸುತ್ತಿರುವ ಇಂದ್ರದ್ಯುಮ್ನ ಮಹಾರಾಜನನ್ನು ಮೇಲಕ್ಕೆಬ್ಬಿಸಿ, ಬ್ರಹ್ಮಸುತನಾದ ನಾರದನು ನಯವಚನಗಳಿಂದ ಆತನನ್ನು ಸಮಾಧಾನಗೊಳಿಸುತ್ತ ಈ ರೀತಿ ಹೇಳಿದನು.

೩೧. ನಾರದನು ಹೇಳುತ್ತಾನೆ:—" ಎಲೈ ದೊರೆಯೆ! ಪಂಡಿತರೆಲ್ಲರಿಗೂ ಶಿರೋಮಣಿಯಾಗಿ, ವೈಷ್ಣವನೂ, ಧೈರ್ಯಸಾಗರನೂ ಆಗಿರುವ ನೀನು ಶ್ರೇಯಸ್ಸು ವಿಘ್ನಗಳೊಡಗೂಡಿದುದೆಂಬುದನ್ನೇಕೆ ಮನಸ್ಸಿಗೆ ತಂದುಕೊಳ್ಳಲಿಲ್ಲವು?

೩೨. ಶರೀರಧಾರಿಯಾದ ಗದಾಧರನನ್ನು ಈ ಚರ್ಮಚಕ್ಷುವಿನಿಂದ ಸಂದರ್ಶಿಸುವುದೆಂಬುದು ಮಾನವನಿಗೆ ನೂರಾರು ಜನ್ಮಗಳಲ್ಲಿ ಸಂಪಾದಿಸಿದ ಪರಮ ಶ್ರೇಯಸ್ಸಿನ ಫಲವಾಗಿರುವುದು.

೩೩–೩೪. ನಿರಂಕುಶವಾದ ಶ್ರೀಹರಿಯ ಲೀಲೆಯನ್ನು ಯಾವನುತಾನೆ ತಿಳಿಯಬಲ್ಲನು. ಎಲೈ ದೊರೆಯೇ! ಜೀವನ್ಮುಕ್ತನಾದ ನಾನೂ ಸಹ ಆತನ ಲೀಲೆಯನ್ನು ಮೀರಲಾರೆನು. ನಾನು ದೃಢಭಕ್ತನಾಗಿ ಸಮೀಪದಲ್ಲಿಯೇ ಇದ್ದರೂ ಎಷ್ಟುಸಲ ಆ ಪರಮಾತ್ಮನಿಂದ ವಂಚಿತನಾಗಿರುವುದಿಲ್ಲ! ಅನೇಕ ಜನ್ಮಗಳೆತ್ತಿದರೂ ಆ ಭಗವಂತನ ಮಾಯೆಯನ್ನು ಮೀರಲಳವಲ್ಲವು.

೩೫. ಆತನ ಮಾಯೆಯು, ನಾಭಿಪದ್ಮದಲ್ಲಿಯೇ ನೆಲಸಿ ಯಾವಾಗಲೂ ಸ್ತುತಿಗೈಯುತ್ತಿರುವ ಬ್ರಹ್ಮನಿಂದಲೂ ದುರ್ಜ್ಞೇಯವಾಗಿರುವುದು.

ಸ್ವಭಾವ ಏವಂ ಕಥಿತಸ್ತಸ್ಯ ಮಾಯಾವಿನೋ ನೃಪ ।
ವಿಶೇಷಂ ಕಥಯಾಮ್ಯೇವಂ ತ್ವಂ ತು ಭಾಗ್ಯವತಾಂ ವರಃ ॥ ೩೬ ॥
ತಿಸ್ರೋಽಪಿ ಮೂರ್ತಯಸ್ತಸ್ಯ ತ್ವದನುಗ್ರಹಬುದ್ಧಯಃ ।
ಚರಾಚರಾಣಾಂ ಸ್ರಷ್ಟಾ ಯಃ ಸಾಕ್ಷಾಲ್ಲೋಕಪಿತಾಮಹಃ ।
ಮಾಮುವಾಚ ವ್ರಜಾಶು ತ್ವಮಿಂದ್ರದ್ಯುಮ್ನಸ್ಯ ಚಾಂತಿಕಂ ॥ ೩೭ ॥
ನೀಲಾಚಲಂ ಪ್ರಯಾತ್ಯೇಷ ದಿದೃಕ್ಷುರ್ನೀಲಮಾಧವಂ ।
ಅಂತರ್ಧಾನಂಗತೋ ಹ್ಯೇಷ ಯಮೇನ ಪ್ರಾರ್ಥಿತೋ ವಿಭುಃ ॥ ೩೮ ॥
ನ ತತ್ರ ಶೋಕಃ ಕರ್ತವ್ಯಃ ಶಕ್ಯತೇ ತತ್ರ ನಾನ್ಯಥಾ ।
ವಾಚ್ಯೋ ಮದ್ವಚನಾದ್ರಾಜಾ ಪಂಚಮೀ ಮಮ ಸಂತತಿಃ ॥ ೩೯ ॥
ತತ್ಕೃತೇ ಪರಮಾತ್ಮಾನಂ ಪ್ರಸಾದ್ಯ ಪುರುಷೋತ್ತಮಂ ।
ಶ್ವೇತದ್ವೀಪಾನ್ನಯಿಷ್ಯಾಮಿ ಸಹಸ್ರಾಂತೇ ಮಹಾಕ್ರತೋಃ ॥ ೪೦ ॥
ಇಂದ್ರದ್ಯುಮ್ನಃ ಸ ಇದಾನೀಂ ಕ್ಷೇತ್ರೇ ಶ್ರೀಪುರುಷೋತ್ತಮೇ ।
ಅಶ್ವಮೇಧಸಹಸ್ರೈಸ್ತು ಯಜನ್ವಿಷ್ಣುಂ ಸ ತಿಷ್ಠತು ॥ ೪೧ ॥

---

೩೬. ಎಲೈ ನೃಪನೇ! ಮಾಯಾವಿಯಾದ ಆತನ ಸ್ವಭಾವವೇ ಹೀಗೆಂಬುದನ್ನು ತಿಳಿಸಿದೆನು. ಈಗ ವಿಶೇಷ ವಿಷಯವನ್ನು ಹೇಳುವೆನು ಕೇಳು; ನೀನು ಪರಮಭಾಗ್ಯಶಾಲಿ.

೩೭. ತ್ರಿಮೂರ್ತಿಗಳೂ ನಿನ್ನ ವಿಷಯದಲ್ಲಿ ಅನುಗ್ರಹಬುದ್ಧಿಯುಳ್ಳವರಾಗಿರುವರು. ಚರಾಚರಪ್ರಪಂಚದ ಸೃಷ್ಟಿಕರ್ತನಾದ ಸಾಕ್ಷಾತ್ ಲೋಕಪಿತಾಮಹನು ನನ್ನನ್ನು ಕುರಿತು, "ನಾರದಾ! ನೀನು ಈಗಲೇ ಜಾಗ್ರತೆಯಾಗಿ ಇಂದ್ರದ್ಯುಮ್ನನ ಬಳಿಗೆ ಹೋಗು.

೩೮. ಆತನು ನೀಲಮಾಧವನನ್ನು ನೋಡಲೋಸುಗ ಪುರುಷೋತ್ತಮಕ್ಷೇತ್ರಕ್ಕೆ ಪ್ರಯಾಣಮಾಡುತ್ತಿರುವನು. ಆ ನೀಲಮಾಧವ ವಿಭುವಾದರೋ ಯಮಧರ್ಮರಾಜನಿಂದ ಪ್ರಾರ್ಥಿತನಾಗಿ ಅಂತರ್ಧಾನವನ್ನು ಹೊಂದಿರುವನು.

೩೯. ಈ ವಿಷಯದಲ್ಲಿ ದುಃಖಿಸತಕ್ಕುದಲ್ಲ. ಅಲ್ಲದೆ ಈ ವಿಷಯದಲ್ಲಿ ಏನುಮಾಡಲೂ ಆಗುವುದಿಲ್ಲ. ಆದುದರಿಂದ ಆ ದೊರೆಗೆ ನನ್ನ ಈ ಮಾತುಗಳನ್ನು ಹೇಳತಕ್ಕದ್ದು. ಆತನು ನನ್ನ ಸಂತತಿಯಲ್ಲಿ ಐದನೆಯವನು.

೪೦. ಅವನಿಗಾಗಿ ನಾನು ಪರಮಾತ್ಮನಾದ ಶ್ರೀ ಪುರುಷೋತ್ತಮನನ್ನು ಪ್ರಸನ್ನಗೊಳಿಸಿ, ಒಂದು ಸಹಸ್ರ ಅಶ್ವಮೇಧಯಾಗಗಳಾದ ತರುವಾಯ ಶ್ವೇತದ್ವೀಪದಿಂದಾತನನ್ನು ಕರೆತರುವೆನು.

೪೧. ಪ್ರಕೃತದಲ್ಲಿ ಆ ಇಂದ್ರದ್ಯುಮ್ನನು ಶ್ರೀಪುರುಷೋತ್ತಮಕ್ಷೇತ್ರದಲ್ಲಿ ಅಶ್ವಮೇಧ ಸಹಸ್ರವನ್ನು ಮಾಡಿ ಶ್ರೀಮಹಾವಿಷ್ಣುವನ್ನು ಪೂಜಿಸುತ್ತಿರಲಿ

ತದಂಶೇ ದಾರವತನುಂ ವಿಷ್ಣುಂ ದ್ರಕ್ಷ್ಯತಿ ಚಕ್ಷುಷಾ ।
ಸೋಽವತಾರೋ ಹರೇಃ ಖ್ಯಾತಿಂ ತಸ್ಯ ದ್ವಾರಾ ಗಮಿಷ್ಯತಿ ॥ ೪೨ ॥
ತದಾ ತು ತನವೋ ವಿಷ್ಣೋಃ ಪ್ರತಿಷ್ಠಾಪ್ಯಾ ಮಯಾ ಧ್ರುವಂ ।
ಪುರಾ ಸ್ಮ ಮಣಿಮೂರ್ತಿಸ್ತು ಚತುರ್ಧಾವಸ್ಥಿತೋ ಹರಿಃ ॥ ೪೩ ॥
ದೃಷ್ಟ್ವಾ ಪುರೋಧಸಾ ತಸ್ಯ ಸಾಕ್ಷಾದಗ್ರೇ ನಿವೇದಿತಃ ।
ದಿವ್ಯದಾರುವಪುರ್ಭೂಯಶ್ಚತುರ್ಧಾವತರಿಷ್ಯತಿ ॥ ೪೪ ॥
ತಸ್ಮಾನ್ಮಾ ವ್ಯಥ ರಾಜೇಂದ್ರ ವಾಂಛಾ ತೇ ಸಫಲಾ ಧ್ರುವಂ ।
ಭವಿಷ್ಯತಿ ನ ಸಂದೇಹೋ ನಿರ್ವ್ಯಲೀಕೋ ವಸೇಹ ವೈ ॥ ೪೫ ॥

ಜೈಮಿನಿರುವಾಚ :—

ಸಾಂತ್ವಯಿತ್ವಾ ನಿನಾಯೇತ್ಥಂ ರಾಜಾನಂ ನಾರದಸ್ತದಾ ।
ವಿಶ್ವಾಸಪದವೀಂ ವಿಪ್ರಾಃ ಪುನರ್ವಾಕ್ಯಮುವಾಚ ಹ ॥ ೪೬ ॥

ನಾರದ ಉವಾಚ :—

ಶಂಖಾಕೃತೇಃ ಕ್ಷೇತ್ರವರಸ್ಯ ಚಾಗ್ರೇ
ಯೋ ನೀಲಕಂಠಃ ಖಲು ದುರ್ಗಯಾಽಸ್ತೇ ।

---

೪೨–೪೩. ಆ ಬಳಿಕ ಆತನು ದಾರುಮೂರ್ತಿಯಾದ ಆ ವಿಷ್ಣುವನ್ನು ಕಣ್ಣಾರೆ ನೋಡುವನು. ವಿಷ್ಣುವಿನ ಆ ಅವತಾರವು ಅವನಿಂದಲೇ ಪ್ರಖ್ಯಾತಿಯನ್ನು ಹೊಂದುತ್ತದೆ. ಆ ಸಮಯದಲ್ಲಿಯೇ ನಾನು ಶ್ರೀಮಹಾವಿಷ್ಣುವಿನ ಚತುರ್ಮೂರ್ತಿಗಳನ್ನು ಪ್ರತಿಷ್ಠಿಸಬೇಕು. ಪೂರ್ವದಲ್ಲಿ ಆ ಪರಮಾತ್ಮನು ನೀಲಮಣಿಮಯನಾಗಿ ನಾಲ್ಕು ಮೂರ್ತಿಗಳಾಗಿದ್ದನು.

೪೪. ಭಗವಂತನ ಆ ವೈಭವವನ್ನು ರಾಜಪುರೋಹಿತನು ಪ್ರತ್ಯಕ್ಷವಾಗಿ ಕಂಡು ಅರಸನಿಗೆ ಅರಿಕೆಮಾಡಿರುತ್ತಾನೆ. ಆ ಪರಮಾತ್ಮನೇ ಈಗ ದಾರುಮಯವಾದ ಚತುರ್ಮೂರ್ತಿಯಾಗಿ ಅವತರಿಸುವನು.''

೪೫. ಓ ಇಂದ್ರದ್ಯುಮ್ನರಾಜಾ! ಬ್ರಹ್ಮದೇವನೀರೀತಿ ನನಗೆ ಹೇಳಿರುವನಾದುದರಿಂದ ನೀನು ವ್ಯಥೆಗೊಳ್ಳಬೇಡ. ನಿನ್ನ ಅಭೀಷ್ಟವು ದಿಟವಾಗಿ ಅವಶ್ಯಕವಾಗಿ ನೆರವೇರುತ್ತದೆ. ನೀನು ಯಾವ ಸಂಶಯವನ್ನೂ ಇಟ್ಟುಕೊಳ್ಳದೆ ಈ ಕ್ಷೇತ್ರದಲ್ಲಿ ವಾಸಮಾಡು.

೪೬. ಜೈಮಿನಿಯು ಹೇಳುತ್ತಾನೆ :—ಎಲೈ ವಿಪ್ರರೇ! ನಾರದಮುನೀಂದ್ರನು ಈ ರೀತಿ ಆ ದೊರೆಯನ್ನು ಸಮಾಧಾನಗೊಳಿಸಿ ಅವನನ್ನು ಪುರುಷೋತ್ತಮಕ್ಷೇತ್ರಕ್ಕೆ ಕರೆತಂದು ಅವನಿಗೆ ನಂಬುಗೆಹುಟ್ಟಲೋಸುಗ ಅವನನ್ನು ಕುರಿತು ಪುನಃ ಈ ರೀತಿ ಹೇಳಿದನು :—

೪೭. ನಾರದನು ಹೇಳುತ್ತಾನೆ:—''ಮಹಾರಾಜ! ಶಂಖಾಕಾರವಾಗಿ

ಯಾಮೋ ವಯಂ ತತ್ರ ಸುವಾಜಿಮೇಧ
ಕ್ರತೂಪಯೋಗ್ಯಾ ಸುಸಮಾ ಸ್ಥಲೀ ಸಾ ॥ ೪೭ ॥
ತಸ್ಯಾಂ ವಿನಿರ್ಮಾಯ ಸಹಸ್ರವರ್ಷ
ಸ್ಥಿರಾಂ ಸುಶಾಲಾಂ ಹಯಮೇಧನಾಯ ।
ನೀಲಾದ್ರಿವಾಸಸ್ಯ ನೃಸಿಂಹಮೂರ್ತಿಂ
ದೃಷ್ಟ್ವಾ ಕೃತಾರ್ಥಂ ವಿರಚಯ್ಯ ಜನ್ಮ ॥ ೪೮ ॥
ತಸ್ಯೈವ ಮೂರ್ತಿಂ ಪ್ರತಿಯಾತನಾಂತೇ
ನಿತ್ಯಾರ್ಚನೀಯಾಂ ತವ ಪೂಜನೀಯಾಂ ।
ಪ್ರತ್ಯಕ್ಪ್ರತಿಷ್ಠಾಪ್ಯ ಸಮಸ್ತವಿಘ್ನ
ವಿನಾಶಹೇತೋಃ ಫಲಬೃಂಹಣಾಯ ॥ ೪೯ ॥
ಆರಪ್ಸ್ಯಾಮಃ ಕ್ರತುವರಂ ಮುನಿವರ್ಯೈರ್ಯಥೋಚಿತಂ ।
ವಿಲಂಬೋಽತ್ರ ನ ಹಿ ಶ್ರೇಯಾನಿತಿ ಪೈತಾಮಹಂ ವಚಃ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ
ಜೈಮಿನಿಋಷಿಸಂವಾದೇ "ನೀಲಕಂಠಕ್ಷೇತ್ರಗಮನ–ಅಶ್ವಮೇಧಯಜ್ಞಪ್ರತಿಜ್ಞಾದಿ
ವರ್ಣನಂ"ನಾಮ ಚತುರ್ದಶೋಽಧ್ಯಾಯಃ

---

ರುವ ಈ ಪುರುಷೋತ್ತಮಕ್ಷೇತ್ರದ ಅಗ್ರಸೀಮೆಯಲ್ಲಿ ನೀಲಕಂಠೇಶ್ವರನು ದುರ್ಗಾದೇವಿಯೊಡನೆ ವಿರಾಜಿಸುತ್ತಿರುವನು. ಆ ಪ್ರದೇಶವು ಅಶ್ವಮೇಧಕ್ರತುವನ್ನು ಮಾಡಲು ಉಪಯುಕ್ತವಾದುದಾಗಿರುವುದು. ಈಗ ನಾವು ಅಲ್ಲಿಗೆ ಹೋಗೋಣ.

೪೮–೫೦. ಆ ಸ್ಥಳದಲ್ಲಿಯೇ ಒಂದು ಸಾವಿರ ವರ್ಷಗಳು ಸ್ಥಿರವಾಗಿ ನಿಲ್ಲುವಂತಹ ಅಶ್ವಮೇಧೋಪಯುಕ್ತವಾದ ಯಜ್ಞಶಾಲೆಯನ್ನು ನಿರ್ಮಾಣಮಾಡಿ, ನೀಲಾದ್ರಿಯಲ್ಲಿ ನೆಲಸಿರುವ ನೃಸಿಂಹಮೂರ್ತಿಯನ್ನು ಸಂದರ್ಶಿಸಿ ಜನ್ಮವನ್ನು ಪಾವನಗೊಳಿಸಿಕೊಂಡು, ಪ್ರತಿನಿತ್ಯವೂ ಪೂಜನೀಯವಾದ ಆ ಮೂರ್ತಿಯನ್ನೇ ತೆಗೆದುಕೊಂಡುಬಂದು ಸಕಲವಿಘ್ನನಿವಾರಣೆಗಾಗಿಯೂ, ಫಲಪ್ರಾಪ್ತಿಗಾಗಿಯೂ ಆ ಸ್ಥಳದಲ್ಲಿ ಪ್ರತ್ಯೇಕವಾಗಿ ಪ್ರತಿಷ್ಠಿಸಿ ನೀನು ಪೂಜಿಸಬೇಕು. ಅಲ್ಲಿ ನಾವು ಮುನಿಶ್ರೇಷ್ಠರೊಡಗೂಡಿ ಯಥಾಶಾಸ್ತ್ರವಾಗಿ ಕ್ರತುಶ್ರೇಷ್ಠವಾದ ಅಶ್ವಮೇಧಯಾಗವನ್ನು ಆರಂಭಿಸೋಣ. ಈ ವಿಷಯದಲ್ಲಿ ವಿಳಂಬಮಾಡಕೂಡದೆಂದೂ ಅದು ಶ್ರೇಯಸ್ಕರವಲ್ಲವೆಂದೂ ಪಿತಾಮಹನು ಹೇಳಿರುತ್ತಾನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ
ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ನೀಲಕಂಠಕ್ಷೇತ್ರಗಮನ–ಅಶ್ವಮೇಧಯಜ್ಞ
ಪ್ರತಿಜ್ಞಾದಿವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ನೃಸಿಂಹದರ್ಶನ— ಅಶ್ವಮೇಧಯಜ್ಞಾರಂಭಾದಿವರ್ಣನಂ

ಜೈಮಿನಿರುವಾಚ :—

ತತಸ್ತೇ ಪ್ರಸ್ಥಿತಾ ವಿಪ್ರಾ ನೀಲಕಂಠಾಂತಿಕಂ ಮುದಾ ।
ಪ್ರಪೂಜ್ಯ ತಂ ಮಹಾದೇವಂ ಶ್ರೀದುರ್ಗಾಂ ಪ್ರಣಿಪತ್ಯ ಚ ॥ ೧ ॥
ವಿಮುಚ್ಯ ಸ್ಯಂದನವರಂ ಪಾದಚಾರಾಃ ಸಹಾನುಗಾಃ ।
ಆರೋಢುಂ ನೀಲಭೂಮಿಧ್ರಂ ಪ್ರಯಾತಾಃ ಸಂಯತೇಂದ್ರಿಯಾಃ ॥ ೨ ॥
ನಾನಾದ್ರುಮಲತಾಕೀರ್ಣಂ ನಾನಾಪಕ್ಷಿಗಣಾಕುಲಂ ।
ಶಿಲಾವಿಷಮಸಂರೋಧಮಭಿತಃ ಪರಿವೇಷಕಂ ॥ ೩ ॥
ಭ್ರಮದ್ಭ್ರಮರಸಂಭೂತಭ್ರಮಕೃದ್ಗಂಡಶೈಲಕಂ ।
ದಕ್ಷಿಣಾಂಭೋಧಿಕಲ್ಲೋಲಜಲಾವೃತನಿತಂಬಕಂ ॥ ೪ ॥
ಅಪ್ರತರ್ಕ್ಯಂ ಸದಾ ಮರ್ತ್ಯೈರ್ದುಷ್ಪ್ರವೇಶ್ಯಂ ಮಹೋರಗೈಃ ।
ಮತ್ತಮಾತಂಗಕಘಟಾಬೃಂಹಿತೈರ್ಭೀಷಣಾಂತರಂ ॥ ೫ ॥

---

### ಕನ್ನಡದ ಅನುವಾದ

#### ನರಸಿಂಹದರ್ಶನ— ಅಶ್ವಮೇಧಯಜ್ಞಾರಂಭಾದಿವರ್ಣನ

೧. ಜೈಮಿನಿಯು ಹೇಳುತ್ತಾನೆ:— ಎಲೈ ವಿಪ್ರರೇ! ತರುವಾಯ ಇಂದ್ರದ್ಯುಮ್ನರಾಜನೂ, ನಾರದ ಮುನಿಯೂ ಸಂತುಷ್ಟಮನಸ್ಕರಾಗಿ ಶ್ರೀ ನೀಲಕಂಠೇಶ್ವರಸ್ವಾಮಿಯ ಸನ್ನಿಧಿಗೆ ಬಂದರು. ಅಲ್ಲಿ ಆ ಮಹಾದೇವನನ್ನೂ, ಶ್ರೀ ದುರ್ಗಾದೇವಿಯನ್ನೂ ಪೂಜಿಸಿ ನಮಸ್ಕರಿಸಿದರು.

೨. ಬಳಿಕ ರಥವನ್ನಲ್ಲಿಯೇ ಬಿಟ್ಟು ಪಾದಚಾರಿಗಳಾಗಿಯೇ ಪರಿವಾರದೊಡನೆ ಜಿತೇಂದ್ರಿಯರಾಗಿ ಶ್ರೀ ನೀಲಾಚಲವನ್ನೇರಲು ಹೊರಟರು.

೩–೬. ಆ ನೀಲಾದ್ರಿಯಾದರೋ ಅನೇಕ ತರುಲತೆಗಳಿಂದ ತುಂಬಿ, ಬಗೆಬಗೆಯ ಪಕ್ಷಿಸಮೂಹಗಳಿಂದ ನಿಬಿಡವಾಗಿ, ಕಲ್ಲು ಬಂಡೆಗಳಿಂದ ಎತ್ತೆತ್ತಲೂ ಇಕ್ಕಟ್ಟಾಗಿ, ಸುಳಿದಾಡುತ್ತಿರುವ ದುಂಬಿಗಳ ಝೇಂಕಾರಧ್ವನಿಗಳಿಂದ ಭ್ರಾಂತಿಗೊಳಿಸುವುದಾಗಿ, ಬೆಣಚುಕಲ್ಲುಗಳಿಂದಡಕವಾಗಿ, ತಪ್ಪಲು ಭೂಮಿಯೆಲ್ಲ ದಕ್ಷಿಣ ಸಮುದ್ರದ ಅಲೆಗಳಿಂದ ತೊಯ್ದು, ಊಹಿಸಲಸದಳವೂ, ಮಾನವರಿಂದಲೂ ಹೋಗಲಸದಳವೂ, ಮಹಾ ವಿಷಸರ್ಪಗಳಿಂದಲೂ, ಮದಿಸಿ ಧ್ವನಿಗೈಯುತ್ತಿರುವ ಆನೆಗಳಿಂದಲೂ ತುಂಬಿ ಭಯಂಕರವಾಗಿ, ಶಸ್ತ್ರದ ಪೆಟ್ಟನ್ನೇ

ಶ್ವಾಪದೈಶ್ಚಿರಸಂವಾಸ್ಯೈಃ ಶಸ್ತ್ರಾಘಾತಮವೇದಿಭಿಃ ।
ನಿರ್ಭಯೈಃ ಪರಿತಃ ಕೀರ್ಣಂ ಮೃಗಯೂಥೈರನೇಕಶಃ ॥ ೭ ॥
ಪ್ರವೇಷ್ಟುಕಾಮಾ ನ ಪ್ರಾಪುರ್ಯದಾ ತೇ ಮಾರ್ಗಮಂತರಂ ।
ತದಾ ನಾರದಸಂಸರ್ಗಾದ್ವಿದಿತ್ವಾ ತು ಗಿರೇಃ ಶಿರಃ ॥ ೭ ॥
ಆಸೇದುರ್ಯತ್ರ ವಸತಿ ಕೃಷ್ಣಾಗುರುತರೋರಧಃ ।
ಸರ್ವಾಪದ್ಭಯಸಂಹರ್ತಾ ದಿವ್ಯಸಿಂಹವಪುರ್ವಿಭುಃ ॥ ೮ ॥
ಯಂ ದೃಷ್ಟ್ವಾ ಬ್ರಹ್ಮಹತ್ಯಾಯಾ ಲೀಯಂತೇ ಕೋಟಿಯೋ ನೃಣಾಂ ।
ವ್ಯಾತ್ತಾಸ್ಯಂ ಭೀಮದಶನಮಾಪಿಂಗಲಸಟಾಕುಲಂ ॥ ೯ ॥
ಉಗ್ರಂ ತ್ರಿನೇತ್ರಂ ದೈತ್ಯಸ್ಯ ಸ್ವೋರಾವುತ್ತಾನಶಾಯಿನಃ ।
ವಕ್ಷಸ್ಥಲಂ ದಾರಯಂತಂ ನಖರೈರ್ವಜ್ರದಾರುಣೈಃ ॥ ೧೦ ॥
ಅರುಣಾಭಂ ಲಸಜ್ಜಿಹ್ವಂ ಸಾಟ್ಟಹಾಸಮುಖಂ ವಿಭುಂ ।
ಶಂಖಚಕ್ರಲಸದ್ಬಾಹುಂ ಕಿರೀಟಮುಕುಟೋಜ್ಜ್ವಲಂ ॥ ೧೧ ॥
ನೇತ್ರೋಚ್ಚಲದ್ವಹ್ನಿಕಣಸಂತ್ರಾಸಿತದಿಗಂತರಂ ।
ಪ್ರಚಂಡಾಘಾತಭೂಮ್ಯಂತಃಪ್ರವಿಷ್ಟಪದಪಂಕಜಂ ॥ ೧೨ ॥

---

ಅರಿಯದೆ ಯಾವ ಅಂಜಿಕೆಯೂ ಇಲ್ಲದೆ ಸುತ್ತಲೂ ತಾನೇತಾನಾಗಿ ಅಲೆದಾಡು ತ್ತಿರುವ ನಾಯಿ, ನರಿ, ತೋಳಗಳಿಂದಲೂ, ಗಣತಿಮೀರಿದ ಜಿಂಕೆವಿಂಡು ಗಳಿಂದಲೂ ಕಿಕ್ಕಿರಿದಿದ್ದಿತು.

೭. ಇಂದ್ರದ್ಯುಮ್ನನೂ, ಅವನ ಪರಿವಾರದವರೂ, ಆ ಪರ್ವತಪ್ರದೇಶ ವನ್ನು ಪ್ರವೇಶಿಸಬಯಸಿದರೂ, ದಾರಿಗಾಣದೆ ಕಡೆಗೆ ನಾರದಮುನಿಯ ಮೂಲಕ ಅದನ್ನು ತಿಳಿದವರಾಗಿ ಹೇಗೆಹೇಗೆಯೋ ಆ ಪರ್ವತದ ಶಿಖರವನ್ನು ಸೇರಿದರು.

೮. ಆಗಲವರು ಅಲ್ಲಿಯೇ ವಿರಾಜಿಸುತ್ತಿದ್ದ ಶ್ರೀಕೃಷ್ಣಾಗುರುವೃಕ್ಷದ ಮೂಲದಲ್ಲಿ ನೆಲಸಿ ಕಂಗೊಳಿಸುತ್ತಿದ್ದ ಶ್ರೀನೃಸಿಂಹಮೂರ್ತಿಯ ಬಳಿಗೈದಿದರು.

೯. ಆತನ ಸಂದರ್ಶನವನ್ನು ಮಾಡಿದೊಡನೆಯೇ ಮಾನವರೆಸಗಿದ ಕೋಟಿ ಕೋಟಿಸಂಖ್ಯಾಕವಾದ ಬ್ರಹ್ಮಹತ್ಯೆಗಳೂ ಅಡಗಿಹೋಗುತ್ತವೆ.

೧೦–೧೨. ಆ ದಿವ್ಯಮೂರ್ತಿಯು ತೆರದಬಾಯಿ, ಭಯಂಕರವಾದ ಕೋರೆ ಹಲ್ಲುಗಳುಳ್ಳವನಾಗಿ, ಪಿಂಗಳವರ್ಣವಾದ ಕೇಸರಗಳುಳ್ಳವನಾಗಿ, ಉಗ್ರನೂ, ತ್ರಿನೇತ್ರನೂ, ಉರಸ್ಥಳದಲ್ಲಿ ಅಂಗತ್ತಲಾಗಿ ಮಲಗಿರುವ ಹಿರಣ್ಯಕಶಿಪುದೈತ್ಯ ನುಳ್ಳವನೂ, ಅವನ ವಕ್ಷಸ್ಥಳವನ್ನು ವಜ್ರಾಯುಧದಂತೆ ಮೊನಚಾದ ತನ ಉಗುರುಗಳಿಂದ ಬಗೆಯುತ್ತಿರುವವನೂ, ಅರುಣಕಾಂತಿಯುಳ್ಳವನೂ, ನೀಳಾಗಿ ನೀಡಿ ಬೆಳಗುತ್ತಿರುವ ನಾಲಗೆಯುಳ್ಳವನೂ, ಅಟ್ಟಹಾಸಪೂರ್ಣವಾದ ಮುಖ ವುಳ್ಳವನೂ, ಶಂಖಚಕ್ರಗಳಿಂದಲಂಕೃತವಾದ ಬಾಹುಗಳುಳ್ಳವನೂ, ಕಿರೀಟ

**ತಮಾದಿಮೂರ್ತಿಂ ತೇ ದೃಷ್ಟ್ವಾ ನಾರದಾಗ್ರೇ ತದಾ ಹರಿಂ ।**
**ನಿರ್ಭಯಾ ದದೃಶುರ್ದೂರಾತ್ಪ್ರಣೇಮುರ್ವಿಗತಜ್ವರಾಃ ॥ ೧೩ ॥**
**ಇಂದ್ರದ್ಯುಮ್ನೋಽಪಿ ತಂ ದೃಷ್ಟ್ವಾ ನಾರದೋಕ್ತೌ ವಿಶಸ್ವಸೇ ।**
**ಭಾವಿಕಾರ್ಯೇ ಪ್ರತ್ಯಯವಾನಿದಮಾಹ ಮಹಾಮುನಿಂ ॥ ೧೪ ॥**
**ಮಹರ್ಷೇ ಕೃತಕೃತ್ಯೋಽಸ್ಮಿ ತ್ವಂ ಹಿ ಜ್ಞಾನನಿಧಿಃ ಪರಂ ।**
**ದುರಾರಾಧ್ಯೋ ನೃಸಿಂಹೋಽಯಂ ದರ್ಶನೇಽಪಿ ಭಯಾವಹಃ ॥ ೧೫ ॥**
**ಭವಾದೃಶೈಃ ಸುಸೇವ್ಯೋಽಯಂ ಮಾದೃಶೈರ್ದೂರತೋಽಪಿ ಸಃ ।**
**ದರ್ಶನಾತ್ಕೃತಕೃತ್ಯೋಽಸ್ಮಿ ಸಂಲೀನಾಶೇಷಪಾತಕಃ ॥ ೧೬ ॥**
**ತ್ವತ್ಸನ್ನಿಧಾನಾದೇವಾತ್ರ ತಿಷ್ಠಾಮೋ ನಿರ್ಭಯಾ ಮುನೇ ।**
**ಅತ್ಯುಗ್ರಮೂರ್ತಿರ್ಭಗವಾನ್ಸ್ವಲ್ಪವೀರ್ಯೈರ್ನರೈಃ ಕಥಂ ॥ ೧೭ ॥**

---

ದಿಂದೊಪ್ಪಿ ಮೆರೆಯುತ್ತಿರುವವನೂ, ಕಣ್ಣುಗಳಿಂದ ಹಾರುತ್ತಿರುವ ಕಿಡಿಗಳಿಂದ ದಿಗಂತರಗಳನ್ನು ತ್ರಾಸಗೊಳಿಸುತ್ತಿರುವವನೂ, ಪ್ರಚಂಡವಾಗಿ ಅಪ್ಪಳಿಸಿದುದರಿಂದ ಭೂಮಿಯೊಳಹೊಕ್ಕ ಪಾದಕಮಲಗಳುಳ್ಳವನೂ ಆಗಿದ್ದನು.

೧೩. ನಾರದನ ಮುಂಗಡೆ ಈ ಪ್ರಕಾರವಾಗಿ ಕಂಗೊಳಿಸುತ್ತಿರುವ ಆದಿಮೂರ್ತಿಯಾದ ಆ ಶ್ರೀಹರಿಯನ್ನು ಪರಿವಾರದವರೆಲ್ಲರೂ ಯಾವ ಹೆದರಿಕೆಯೂ ಇಲ್ಲದವರೂ, ತಳಮಳವಿಲ್ಲದವರೂ ಆಗಿ ದೂರದಿಂದಲೇ ಕಂಡು ಪ್ರಣಾಮ ಮಾಡಿದರು.

೧೪. ಇಂದ್ರದ್ಯುಮ್ನನೂ ಸಹ ಆ ನೃಸಿಂಹಮೂರ್ತಿಯನ್ನು ಕಂಡು ನಾರದನ ನುಡಿಗಳಲ್ಲಿ ನಂಬುಗೆಯನ್ನಿಟ್ಟು ಮುಂದೆ ನಡೆಯಬೇಕಾದ ಶುಭಕಾರ್ಯದ ವಿಷಯದಲ್ಲಿಯೂ ನಂಬಿಗೆಯುಳ್ಳವನಾಗಿ ಅವನನ್ನು ಕುರಿತು ಈ ಮಾತನ್ನಾಡಿದನು.

೧೫. ಎಲೈ ನಾರದಮಹರ್ಷಿಯೇ! ನಾನು ಕೃತಕೃತ್ಯನಾದೆನು. ನೀನು ಮಹಾ ಜ್ಞಾನನಿಧಿಯು. ಈ ನೃಸಿಂಹಸ್ವಾಮಿಯು ದುರಾರಾಧ್ಯನಾದವನು. ನೋಡುವುದಕ್ಕೂ ಈತನು ಭಯಂಕರನಾಗಿರುವನು.

೧೬. ನಿನ್ನಂತಹರಿಗೆ ಈತನು ಸುಸೇವ್ಯನೇ ಆದರೂ ನನ್ನಂತಹರಿಗೆ ದೂರದಿಂದಲೇ ಸೇವೆಗೈಯಲು ಸಾಧ್ಯನು. ಈ ಮೂರ್ತಿಯ ಸಂದರ್ಶನದಿಂದ ನನ್ನ ಪಾಪಗಳೆಲ್ಲವೂ ಅಡಗಿದುವಾದುದರಿಂದ ನಾನು ಕೃತಕೃತ್ಯನಾದೆನು.

೧೭-೧೮. ಎಲೈ ಮುನಿಯೆ! ನೀನಿಲ್ಲಿರುವುದರಿಂದ ನಾವೆಲ್ಲರೂ ನಿರ್ಭಯರಾಗಿರುವೆವು. ಹಾಗಲ್ಲದಿದ್ದರೆ ಈ ಭಗವಂತನು ಅಲ್ಪವೀರ್ಯರಾದ ಮಾನವರಿಂದ ಎಂತು ತಾನೆ ಆರಾಧಿತನಾಗುವನು. ಈ ಸ್ವಾಮಿಯು ದಾನವನೂ ತ್ರಿಲೋಕೇಶ್ವರನೂ ಆದ ಆ ಹಿರಣ್ಯಕಶಿಪುವಿನ ವಕ್ಷಸ್ಥಳವನ್ನು ಸಿಗಿದವನಲ್ಲವೆ!

ಆರಾಧ್ಯತೇ ದೈತ್ಯರಾಜಂ ತ್ರಿಲೋಕೇಶಂ ವಿದಾರಯನ್ ।
ಯಸ್ಯ ನೀಲಮಯೀ ಮೂರ್ತಿಃ ಕೃಪಾಸಿಂಧೋಃ ಸ್ಥಿತಾ ತು ವೈ ॥ ೧೮ ॥
ಕಸ್ಮಿನ್ಸ್ಥಲೇ ಮುನಿಶ್ರೇಷ್ಠ ದರ್ಶನಾದ್ಯಾ ವಿಮುಕ್ತಿದಾ ।
ತನ್ಮೇ ದರ್ಶಯ ವಿಪ್ರೇಂದ್ರ ಯನ್ಮೇ ಮುಕ್ತಿಪ್ರದಂ ಮತಂ ॥ ೧೯ ॥
ಇತ್ಯುಕ್ತೋ ನಾರದಸ್ತಸ್ಮೈ ದರ್ಶಯಾಮಾಸ ಪಾವನಂ ।
ಸ್ಥಾನಂ ಯತ್ರ ಸ್ಥಿತೋ ದೇವಃ ಸ್ವರ್ಣಸೈಕತಸಂವೃತಃ ॥ ೨೦ ॥
ಪಶ್ಯೈತಂ ಯೋಜನಾಯಾಮಂ ಯೋಜನದ್ವಯಮುಚ್ಛ್ರಿತಂ ।
ಕಲ್ಪಾಂತಸ್ಥಾಯಿನಂ ಭೂಪ ನ್ಯಗ್ರೋಧಂ ಮುಕ್ತಿದಂ ನೃಣಾಂ ॥ ೨೧ ॥
ಛಾಯಾಯಾಃ ಕ್ರಮಣಾದ್ಯಸ್ಯ ಮುಚ್ಯತೇ ಪಾಪಕಂಚುಕಾತ್ ।
ಅಸ್ಯ ಮೂಲೇ ನರಃ ಪ್ರಾಣಾಂಸ್ತ್ಯಜನ್ಮುಕ್ತಿಮವಾಪ್ನುಯಾತ್ ॥ ೨೨ ॥
ನ್ಯಗ್ರೋಧರೂಪಂ ದೃಷ್ಟ್ವಾಪಿ ನಾರಾಯಣಮಕಲ್ಮಷಂ ।
ನಿಷ್ಪಾಪೋ ಜಾಯತೇ ಮರ್ತ್ಯಃ ಕಿಮು ತಂ ಪೂಜಯನ್ಸ್ತುವನ್ ॥

---

ಈ ವಿಷಯವದಂತಿರಲಿ: ಈ ಕೃಪಾಸಾಗರನ ನೀಲಮಯವಾದ ಮೂರ್ತಿಯು ಯಾವ ಸ್ಥಳದಲ್ಲಿರುವುದು? ಎಲೈ ಮುನಿಶ್ರೇಷ್ಠನೇ! ಯಾವದು ಸಂದರ್ಶಿಸುವುದರಿಂದಲೇ ಮಾನವನಿಗೆ ಮುಕ್ತಿಯನ್ನು ಕೊಡುವುದೋ, ಯಾವುದು ಮುಕ್ತಿಪ್ರದವೆಂದೇ ನನ್ನ ಅಭಿಪ್ರಾಯವಾಗಿರುವುದೋ ಆ ಮೂರ್ತಿಯನ್ನು ನನಗೆ ತೋರು."

೨೦. ಎಲೈ ವಿಪ್ರರೇ! ಇಂದ್ರದ್ಯುಮ್ನನಿಂತೆನಲು, ನಾರದಮುನಿಯು ಅವನಿಗೆ ಆ ನೀಲಮಾಧವಸ್ವಾಮಿಯು ಸ್ವರ್ಣಸೈಕತದಿಂದ ಮುಚ್ಚಿಹೋಗಿದ್ದ ಪಾವನವಾದ ಪ್ರದೇಶವನ್ನು ತೋರಿಸಿದನು.

೨೧. ನಾರದನು ಹೇಳುತ್ತಾನೆ:—"ಎಲೈ ದೊರೆಯೆ! ಒಂದು ಯೋಜನದ ಅಗಲವೂ, ಎರಡು ಯೋಜನಗಳ ಎತ್ತರವೂ ಉಳ್ಳುದಾಗಿ, ಪ್ರಳಯದವರೆಗೂ ನೆಲಸಿರುವುದಾಗಿ, ಮಾನವರಿಗೆ ಮುಕ್ತಿಯನ್ನು ದೊರೆಯಿಸುವುದಾಗಿರುವ ಈ ನ್ಯಗ್ರೋಧಕಲ್ಪತರುವನ್ನು ನೋಡು.

೨೨. ಈ ವೃಕ್ಷದ ನೆರಳನ್ನು ಸೇವಿಸುವುದರಿಂದಲೇ ಮಾನವನು ಪಾಪದ ಹೊದಿಕೆಯಿಂದ ಬಿಡುಗಡೆಯನ್ನು ಹೊಂದುತ್ತಾನೆ. ಇದರ ಬುಡದಲ್ಲಿ ಪ್ರಾಣಗಳನ್ನು ನೀಗಿದ ನರನು ಮುಕ್ತಿಯನ್ನು ಪಡೆಯುತ್ತಾನೆ.

೨೩. ನ್ಯಗ್ರೋಧರೂಪನಾಗಿರುವ, ನಿಷ್ಕಲ್ಮಷಮೂರ್ತಿಯಾದ ಶ್ರೀಮನ್ನಾರಾಯಣನನ್ನು ಸಂದರ್ಶಿಸುವುದರಿಂದ ಮಾನವನು ಪಾಪರಹಿತನಾಗುವನೆಂದ ಬಳಿಕ, ಆತನನ್ನು ಪೂಜಿಸಿ ಸ್ತುತಿಸುವುದರಿಂದ ಮುಕ್ತನೇ ಆಗುವನೆಂದು ಹೇಳತಕ್ಕುದೇನು!

**ಅಸ್ಯ ಮೂಲಾತ್ಪ್ರತೀಚ್ಯಾಂ ಹಿ ನೃಸಿಂಹಸ್ಯೋತ್ತರೇ ನೃಪ ।**
**ಅತಿಷ್ಠನ್ಮಾಧವೋ ಹ್ಯತ್ರ ಚತುರ್ಮೂರ್ತಿಧರೋ ವಿಭುಃ ॥ ೨೪ ॥**
**ಅನುಗ್ರಹೀತುಂ ತ್ವಾಮೇವ ಪುನರತ್ರೋದ್ಭವಿಷ್ಯತಿ ।**
**ಶ್ವೇತದ್ವೀಪೇ ಯಥಾ ವಿಷ್ಣುರ್ಭೋಗಭೂಮೌ ನಿಜಾಲಯಃ ॥ ೨೫ ॥**
**ಜಂಬೂದ್ವೀಪೇ ಕರ್ಮಭೂಮೌ ನಿಜಂ ಸ್ಥಾನಮಿದಂ ಸ್ಮೃತಂ ।**
**ಸ್ವಸ್ಯೈವಾತಿರಹಸ್ಯತ್ವಾನ್ನ ಪ್ರಕಾಶೋಽಸ್ಯ ಸಂಮತಃ ॥ ೨೬ ॥**
**ಮೋಕ್ಷಾಧಿಕಾರೀ ಜಾನಾತಿ ಸ್ಥಲಮೇತನ್ಮಹೀಪತೇ ।**
**ಅವಿಶ್ವಾಸಪದಂ ನೃಣಾಂ ದುಷ್ಕೃತಾಂ ಹಿ ವಿಶೇಷತಃ ॥ ೨೭ ॥**
**ಅತ್ರ ಯಾಽನ್ಯಾ ಪ್ರತಿಕೃತಿಃ ಪೌರೈರ್ವಿಷ್ಣೋಃ ಪ್ರತಿಷ್ಠಿತಾ ।**
**ಸಾಪಿ ಮುಕ್ತಿಪ್ರದಾ ಭೂಪ ಕಿಂ ಪುನಃ ಸಾ ಸ್ವಯಂಭುವಾ ॥ ೨೮ ॥**
**ಅಂತರ್ಧಾನತಿರೋಧಾನೇ ಸನಿಮಿತ್ತೇ ಜಗತ್ಪ್ರಭೋಃ ।**
**ಅನುಗ್ರಹಾರ್ಥಂ ಸಾಧೂನಾಂ ಜಾಯತೇ ಚ ಯುಗೇ ಯುಗೇ ॥ ೨೯ ॥**

---

೨೪–೨೬. ಈ ನ್ಯಗ್ರೋಧವೃಕ್ಷಮೂಲದಿಂದ ಪಡವಲಿಗೂ, ನೃಸಿಂಹ ಮೂರ್ತಿಯ ಉತ್ತರದಿಕ್ಕಿನಲ್ಲಿ ಆ ವಿಭುವು ಚತುರ್ಮೂರ್ತಿಧರನಾಗಿ ನೆಲಸಿದ್ದನು. ಈಗ ಆ ಸ್ವಾಮಿಯು ನಿನ್ನನ್ನನುಗ್ರಹಿಸಲೋಸುಗವೇ ಈ ಪ್ರದೇಶದಲ್ಲಿ ಪುನಃ ಉದ್ಭವಿಸುವನು. ಭೋಗಭೂಮಿಯಾದ ಶ್ವೇತದ್ವೀಪದಲ್ಲಿ ಮಹಾವಿಷ್ಣುವು ಹೇಗೆ ತನ್ನ ಮನೆಯನ್ನು ಮಾಡಿಕೊಂಡಿರುವನೋ ಹಾಗೆಯೇ ಕರ್ಮಭೂಮಿಯಾದ ಈ ಜಂಬೂದ್ವೀಪದಲ್ಲಿಯೂ ಆತನಿಗೆ ಈ ಪ್ರದೇಶವು ಸ್ವಂತಸ್ಥಾನವೆಂದು ತಿಳಿಯಲಾಗಿದೆ. ಆತನೇ ಅತಿ ರಹಸ್ಯನಾಗಿರುವುದರಿಂದ ಎಲ್ಲರಿಗೂ ಪ್ರಕಾಶವಾಗುವುದು ಆತನಿಗೆ ಸಮ್ಮತವಲ್ಲವು.

೨೭. ಎಲೈ ಮಹೀಪತಿಯೇ! ಮೋಕ್ಷಾಧಿಕಾರಿಯಾದ ಮಾನವನುಮಾತ್ರ ಈ ಸ್ಥಳವನ್ನು ತಿಳಿದುಕೊಳ್ಳುತ್ತಾನೆ. ಇತರ ಮಾನವರಿಗೂ, ಅದರಲ್ಲಿಯೂ ವಿಶೇಷವಾಗಿ ಪಾಪಿಗಳಿಗೂ ಈ ಪ್ರದೇಶವು ತಿಳಿಯಲು ಸಾಧ್ಯವಲ್ಲವು.

೨೮. ಇಲ್ಲಿ ಪೂರ್ವದಲ್ಲಿ ಪಟ್ಟಣಿಗರೆಲ್ಲರೂ ಸೇರಿ ಪ್ರತಿಷ್ಠೆಮಾಡಿರುವ ವಿಷ್ಣುವಿನ ಮೂರ್ತಿಯಾವುದುಂಟೋ ಅದೂ ಸಹ ಭಕ್ತಜನರಿಗೆ ಮುಕ್ತಿಯನ್ನು ಉಂಟುಮಾಡುವಂತಹುದು. ಎಂದಮೇಲೆ ಸಾಕ್ಷಾತ್ ಸ್ವಯಂಭುಮೂರ್ತಿಯಾದ ಪ್ರತಿಕೃತಿಯ ವಿಷಯವನ್ನು ಹೇಳಬೇಕಾದುದೇನು ?

೨೯. ಆ ಜಗತ್ಪ್ರಭುವಿನ ಅಂತರ್ಧಾನ ತಿರೋಧಾನಗಳೆರಡೂ ಸಕಾರಣವಾದುವುಗಳೇ ಆಗಿವೆ. ಯುಗಯುಗದಲ್ಲಿಯೂ ಆತನು ಸಾಧುಗಳನ್ನು ಅನುಗ್ರಹಿಸುವುದಕ್ಕಾಗಿಯೇ ಭೂಲೋಕದಲ್ಲಿ ಅವತರಿಸುತ್ತಾನೆ.

ನಾನಾವತಾರೈರ್ಭಗವಾನ್ಮತ್ಸ್ಯಕೂರ್ಮಾದಿಕೈರ್ನೃಪ ।
ನಿಮಿತ್ತನಾಶೇ ಚ ತಿರೋದಧಾತಿ ಪರಮೇಶ್ವರಃ ॥ ೩೦ ॥
ನಿರ್ನಿಮಿತ್ತಂ ಸ್ಥಿತೋ ನಿತ್ಯಮಿಹ ಕಾರುಣ್ಯಸಾಗರಃ ।
ಶ್ವೇತದ್ವೀಪಾದ್ಯಥಾ ವಿಷ್ಣುರನ್ಯತ್ರಾವತರೇತ್ಪ್ರಭುಃ ॥ ೩೧ ॥
ಅತ್ರ ಸ್ಥಿತೋಽಪಿ ಸ ದ್ವಾರಕಾಕಾಂಚೀಪುಷ್ಕರಾದಿಷು ।
ಪ್ರಕಾಶಂ ಯಾತಿ ಕೃಪಯಾ ತರುಮೂಲಪ್ರರೋಹವತ್ ॥ ೩೨ ॥
ನಾನಾತೀರ್ಥೇಷು ದೇಶೇಷು ಕ್ಷೇತ್ರೇಷ್ವಾಯತನೇಷು ಚ ।
ಅಂಶಾವತಾರಸ್ತಸ್ಯೈವ ಮಾಭೂತ್ತೇ ಸಂಶಯೋ ನೃಪ ॥ ೩೩ ॥
ಕ್ಷಣಂ ನ ತ್ಯಜತೀಶಾನಃ ಕ್ಷೇತ್ರಂ ಕ್ಷೇತ್ರಮಿವ ಸ್ವಕಂ ।
ತ್ವದುಪಜ್ಞಸ್ತು ಭೂಪಾಲ ಪ್ರಕಾಶೋಽನ್ಯೋ ಭವಿಷ್ಯತಿ ॥ ೩೪ ॥
ಇತಿ ಸಂದರ್ಶಿತಂ ಸ್ಥಾನಂ ನಾರದೇನ ಮಹಾತ್ಮನಾ ।
ಸಾಷ್ಟಾಂಗಪಾತಂ ಭೂಮೌ ತದಿಂದ್ರದ್ಯುಮ್ನೋ ನನಾಮ ಹ ॥ ೩೫ ॥

---

೩೦. ಎಲೈ ದೊರೆಯೆ! ಆತನು ಮತ್ಸ್ಯಕೂರ್ಮವರಾಹಾದಿ ನಾನಾ ಅವತಾರಗಳಿಂದ ಇಲ್ಲಿ ಅವತರಿಸುತ್ತ ಆಯಾ ಅವತಾರದ ನಿಮಿತ್ತವು ನಾಶವಾಗುತ್ತಲೇ ತಿರೋಧಾನವಾಗುವನು.

೩೧. ಕರುಣಾಸಮುದ್ರನಾದ ಆ ವಿಷ್ಣುವು ಈ ಪ್ರದೇಶದಲ್ಲಿ ಯಾವ ನಿಮಿತ್ತವಿಲ್ಲದಿದ್ದರೂ ಯಾವಾಗಲೂ ಇರುತ್ತಾನೆ. ಅಲ್ಲದೆ ಶ್ವೇತದ್ವೀಪದಿಂದೆಂತೋ ಅಂತು ಇಲ್ಲಿಂದಲೇ ಬೇರೆ ಬೇರೆ ಕಡೆಗಳಲ್ಲಿ ಅವತರಿಸುವನು.

೩೨. ಆ ಸ್ವಾಮಿಯು ಈ ಸ್ಥಳದಲ್ಲಿಯೇ ನೆಲಸಿದ್ದರೂ, ದ್ವಾರಕೆ, ಕಾಂಚೀ, ಪುಷ್ಕರ ಮುಂತಾದ ಕ್ಷೇತ್ರಗಳಲ್ಲಿ ಮಹಾವೃಕ್ಷದ ಬುಡದಲ್ಲಿನ ಸಸಿಗಳಂತೆ ಪ್ರಕಾಶಗೊಳ್ಳುತ್ತಾನೆ.

೩೩. ಅನೇಕ ತೀರ್ಥಗಳಲ್ಲಿಯೂ, ದೇಶಗಳಲ್ಲಿಯೂ, ಕ್ಷೇತ್ರಗಳಲ್ಲಿಯೂ, ದೇವಾಯತನಗಳಲ್ಲಿಯೂ ಆ ಪ್ರಭುವಿನ ಅಂಶಾವತಾರಮೂರ್ತಿಗಳೇ ನೆಲಸಿರುವುದರಿಂದ ನಿನಗೆ ಸಂಶಯವಿಲ್ಲದಿರಲಿ.

೩೪. ಆ ಪರಮೇಶ್ವರನು ಈ ಕ್ಷೇತ್ರವನ್ನು ತನ್ನ ಸ್ವಂತ ಕ್ಷೇತ್ರದಂತೆಯೇ ಒಂದು ಕ್ಷಣಕಾಲವಾದರೂ ಬಿಟ್ಟಿರುವುದಿಲ್ಲ. ಇದರಮೇಲಾಗಿ ಆತನು ನಿನ್ನ ಭಕ್ತಿಯನ್ನರಿತು ಬೇರೆಯಾಗಿಯೇ ಇಲ್ಲಿ ಉದ್ಭವಿಸುತ್ತಾನೆ.''

೩೫. ಇಂತು ನುಡಿದು ಮಹಾತ್ಮನಾದ ಆ ನಾರದಮುನಿಯು ಆ ಇಂದ್ರದ್ಯುಮ್ನರಾಜನಿಗೆ ಶ್ರೀ ನೀಲಮಾಧವಮೂರ್ತಿಯು ನೆಲಸಿದ್ದ ಸ್ಥಳವನ್ನು ತೋರಿದನು. ಇಂದ್ರದ್ಯುಮ್ನನಾದರೋ ಅಲ್ಲಿಯೇ ನೆಲದಮೇಲೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಮನಸ್ವಾನಸ್ತು ಸ್ಥಿತಂ ದೇವಂ ಪ್ರಕಾಶಮಿವ ತುಷ್ಟುವೇ ॥ ೩೬ ॥
ಇಂದ್ರದ್ಯುಮ್ನ ಉವಾಚ :—
ದೇವದೇವ ಜಗನ್ನಾಥ ಪ್ರಣತಾರ್ತಿವಿನಾಶನ ।
ತ್ರಾಹಿ ಮಾಂ ಪುಂಡರೀಕಾಕ್ಷ ಪತಿತಂ ಭವಸಾಗರೇ ॥ ೩೭ ॥
ತ್ವಮೇಕ ಏವ ದುಃಖೌಘಧ್ವಂಸಕಃ ಪರಮೇಶ್ವರ ।
ಕ್ಷುದ್ರಾಃ ಕ್ಷುದ್ರಾನ್ಹಿ ಸೇವಂತೇ ಸುಖಲೇಶಸ್ಯ ಲಿಪ್ಸಯಾ ॥ ೩೮ ॥
ಅನಾದಿತ್ರಿವಿಧೌಘಸ್ಯ ರಾಶೇಃ ಸ್ವಸ್ಯ ಮಹಾಂಹಸಃ ।
ದುರುಚ್ಛೇದ್ಯಸ್ಯ ಸತತಂ ಪೂರ್ಯಮಾಣಸ್ಯ ಜನ್ಮನಃ ।
ಕಿಂ ಪುನರ್ಭಕ್ತಿಭಾವೇನ ಸಾಕ್ಷಾನ್ಮುಕ್ತಿಪ್ರದಂ ನೃಣಾಂ ॥ ೩೯ ॥
ಕರ್ಮಾಧೀನಂ ತು ಯೇ ಮೂಢಾ ವದಂತಿ ತ್ವಾಂ ಕೃಪಾನಿಧಿಂ ।
ತೇ ನ ಜಾನಂತಿ ಭಗವನ್ಕರ್ಮೈವಂ ಪ್ರೇರಿತಂ ತ್ವಯಾ ॥ ೪೦ ॥
ಅಜಾಮಿಲೇನ ವಿಪ್ರೇಣ ತ್ಯಕ್ತ್ವಾ ವರ್ಣಾಶ್ರಮೋದಿತಂ ॥ ೪೧ ॥
ಕಿಂ ನ ಪಾಪಂ ಕೃತಂ ಸ್ವಾಮಿನ್ಸೋಽಪಿ ತ್ವನ್ನಾಮಕೀರ್ತನಾತ್ ।
ಮುಕ್ತೋಽಭೂತ್ಸ್ಮರಣಾದೇವ ಪಾಶಹಸ್ತೈರ್ವಿಮೋಚಿತಃ ॥ ೪೨ ॥

---

೩೬. ಆತನು ಸ್ವಾಮಿಯು ತನ್ನೆದುರಿಗೇ ಪ್ರತ್ಯಕ್ಷನಾಗಿ ಇರುವಂತೆ ಭಾವಿಸಿ ಈ ರೀತಿ ಸ್ತುತಿಸಿದನು.

೩೭. "ದೇವದೇವ, ಜಗನ್ನಾಥ! ನೀನು ಪ್ರಣತಾರ್ತಿನಾಶನನು. ಓ ಪುಂಡರೀಕಾಕ್ಷ! ಭವಸಾಗರದಲ್ಲಿ ಪತಿತನಾಗಿರುವ ನನ್ನನ್ನು ರಕ್ಷಿಸು.

೩೮. ಪರಮೇಶ್ವರಾ! ನೀನೊಬ್ಬನೇ ದುಃಖಸಮೂಹಗಳನ್ನು ಧ್ವಂಸ ಮಾಡುವವನು. ಆದರೆ ಕ್ಷುದ್ರರಾದ ಮಾನವರು ಆದನ್ನು ತಿಳಿಯದೆ ಕೇವಲ ಅಲ್ಪಸುಖಕ್ಕಾಗಿ ಕ್ಷುದ್ರದೇವತೆಗಳನ್ನು ಸೇವಿಸುತ್ತಾರೆ.

೩೯. ಆದಿಯೇ ಇಲ್ಲದ ಸೃಷ್ಟಿಸ್ಥಿತಿ ಪ್ರವಾಹವು ಅತಿ ದುಸ್ತರವಾದುದು. ನರನು ಅದರಿಂದ ಪಾರಾಗುವುದು ಬಹುಕಷ್ಟ. ಅದಕ್ಕೆ ಅವನೆಸಗುವ ದುರುಚ್ಛೇದ್ಯಗಳಾದ ಪಾಪಗಳೇ ಕಾರಣ. ಅದರಿಂದ ಅವನು ಜನ್ಮಗಳನ್ನೆತ್ತುತ್ತಲೇ ಇರಬೇಕಾಗುವುದು. ಇಂತಹವನು ಮುಕ್ತನಾಗಬೇಕಾದರೆ ಪರಮಾತ್ಮನಾದ ನಿನ್ನಲ್ಲಿನ ಭಕ್ತಿಭಾವಕ್ಕಿಂತ ಬೇರೊಂದು ಮಾರ್ಗವಾವುದು?

೪೦. ಭೋ ಭಗವಾನ್! ತಿಳಿವಿಲ್ಲದವರು ಕೃಪಾನಿಧಿಯಾದ ನೀನು ಕರ್ಮಾಧೀನನೆಂದು ಹೇಳುತ್ತಾರೆಯಲ್ಲವೆ! ಅವರು ಆ ಕರ್ಮವನ್ನು ನೀನೇ ಪ್ರೇರಿಸಿದವನೆಂಬುದನ್ನರಿಯರು.

೪೧–೪೨. ಬ್ರಾಹ್ಮಣನಾದ ಅಜಾಮಿಳನು ವರ್ಣಾಶ್ರಮೋದಿತವಾದ ಕರ್ಮವನ್ನು ತ್ಯಜಿಸಿ ಪಾಪವನ್ನು ಮಾಡಲಿಲ್ಲವೆ? ಓ ಸ್ವಾಮಿಯೇ! ಅವನು

ಸರ್ವೇಽಪ್ಯುಪಾಯಾ ದೇವೇಶ ಕೀರ್ತಿತಾಸ್ತವ ದರ್ಶನೇ ।
ತ್ವಯಿ ದೃಷ್ಟೇ ಹಿ ಭಿದ್ಯಂತೇ ಸಂಶಯಾ ಹೃದಿ ಸಂಸ್ಥಿತಾಃ ॥ ೪೩ ॥
ನಿಃಸಂಶಯೋ ಭವೇತ್ಸದ್ಯಃ ಪಾಪಪುಣ್ಯಕ್ಷಯೋ ಧ್ರುವಂ ।
ತ್ವಮೇವ ಶರಣಂ ದೀನಮನುಗೃಹ್ಣೀಷ್ವ ಮಾಂ ವಿಭೋ ॥ ೪೪ ॥
ನಿಶ್ಚಿತಾನಿ ತ್ವಯಾ ದೇವ ಗರ್ಭಸ್ಥಸ್ಯ ಚ ಯಾನಿ ಮೇ ।
ತೈರೇವ ಮೇ ಜನಿರ್ಜಾತು ಯಾಚೇ ತ್ವಾಂ ಕೇವಲಂ ತ್ವಿದಂ ॥ ೪೫ ॥
ತಿರಶ್ಚೋ ಮುಕ್ತಿದಾ ಮೂರ್ತಿಃ ಸ್ಥಿತಾ ತೇ ಯಾಽತ್ರ ತಾಂ ಪುನಃ ।
ಅನೇನ ಚಕ್ಷುಷಾ ಪಶ್ಯಾಮೀಶ ನಾನ್ಯತ್ಪ್ರಯೋಜನಂ ॥ ೪೬ ॥
ಕೃತಾಂಜಲಿಪುಟೋ ರಾಜಾ ಸ್ತುತ್ವೈವಂ ಮಧುಸೂದನಂ ।
ಪುನರ್ನನಾಮ ಧರಣೀಪೃಷ್ಠೇ ಸಾಶ್ರುವಿಲೋಚನಃ ॥ ೪೭ ॥
ತತೋಽಂತರಿಕ್ಷಗಾ ವಾಣೀ ಸಾಮಸುಸ್ವರಭಾಷಿಣೀ ।
ಉಚ್ಚಚಾರ ನಭೋಮಧ್ಯೇ ಇಂದ್ರದ್ಯುಮ್ನಸ್ಯ ಶೃಣ್ವತಃ ॥ ೪೮ ॥

---

ನಿನ್ನ ನಾಮಸಂಕೀರ್ತನದಿಂದ ಮುಕ್ತನಾಗಲಿಲ್ಲವೆ? ನಿನ್ನ ಸ್ಮರಣೆಯಿಂದಲೇ ಅವನು ಯಮಕಿಂಕರರಿಂದ ಬಿಡುಗಡೆಯಾಗಲಿಲ್ಲವೆ?

೪೩. ದೇವೇಶ! ಸಮಸ್ತ ಉಪಾಯಗಳೂ ನಿನ್ನ ದರ್ಶನದಲ್ಲಿಯೇ ಅಡಗಿರುತ್ತವೆ. ನಿನ್ನನ್ನು ಕಂಡುದೇ ಆದರೆ ಹೃದಯದಲ್ಲಿರುವ ಸಮಸ್ತ ಸಂಶಯಗಳೂ ಭೇದಿಸಿಹೋಗುತ್ತವೆ.

೪೪–೪೫. ದೇವಾ! ನಿನ್ನನ್ನು ಕಂಡಕ್ಷಣದಲ್ಲಿಯೇ ಪಾಪಪುಣ್ಯಗಳ ಕ್ಷಯವಾಗಿ ಮುಕ್ತಿಯೇ ದೊರಕುವುದರಲ್ಲಿ ಸಂಶಯವೇ ಇಲ್ಲವು. ಇದು ಸತ್ಯವು. ನೀನೇ ನನಗೆ ದಿಕ್ಕು! ಆದುದರಿಂದೆಲೈ ಪ್ರಭುವೇ! ದೀನನಾಗಿರುವ ನನ್ನನ್ನು ಅನುಗ್ರಹಿಸು. ದೇವ! ನಾನು ಜನನಿಯ ಗರ್ಭದಲ್ಲಿರುವಾಗಲೇ ನನಗೆ ಎಷ್ಟು ಜನ್ಮಗಳೆಂಬುದನ್ನು ನೀನು ನಿರ್ಧರಿಸಿರುತ್ತೀಯೆ. ಅದರಿಂದ ನನಗೆ ಜನ್ಮಗಳು ಬರಲಿ. ಆದರೆ ನಿನ್ನನ್ನು ಇಷ್ಟುಮಾತ್ರ ಬೇಡಿಕೊಳ್ಳುವೆನು.

೪೬. ಜಗದೀಶ! ಮುಕ್ತಿಪ್ರದವಾದ ಯಾವ ನಿನ್ನ ಮೂರ್ತಿಯು ಈ ಪ್ರದೇಶದಲ್ಲಿದ್ದು ಮಾಯವಾಯಿತೋ ಆ ಮೂರ್ತಿಯನ್ನು ನಾನು ಈ ನನ್ನ ಚರ್ಮಚಕ್ಷುವಿನಿಂದ ನೋಡುವಂತಾಗಲಿ. ಇದನ್ನುಳಿದು ಈ ಪ್ರಪಂಚದಲ್ಲಿ ನನಗಾಗಬೇಕಾದ ಪ್ರಯೋಜನವಾವುದೂ ಇರುವುದಿಲ್ಲವು.''

೪೭. ಎಲೈ ವಿಪ್ರರೇ! ಈ ಪ್ರಕಾರವಾಗಿ ಮಧುಸೂದನನನ್ನು ಸ್ತುತಿಸಿ ಆ ದೊರೆಯು ಕಂಬನಿದುಂಬಿದ ಕಂಗಳುಳ್ಳವನಾಗಿ ಮತ್ತೆ ನೆಲದಲ್ಲಿ ಸಾಷ್ಟಾಂಗ ನಮಸ್ಕಾರವನ್ನೆಸಗಿದನು.

೪೮. ತರುವಾಯ ಆಕಾಶವಾಣಿಯು ಸಾಮಸ್ವರದಿಂದ ಮನೋಹರವಾಗಿ ಆ ದೊರೆಯು ಕೇಳುವಂತೆಯೇ ಅಂತರಿಕ್ಷಮಧ್ಯದಿಂದ ಈ ರೀತಿ ನುಡಿಯಿತು.

ಮಾ ಚಿಂತಾಂ ವ್ರಜ ಭೂಪಾಲ ವ್ರಜಿಷ್ಯೇ ತ್ವದ್ದೃಶೋಃ ಪಥಂ ।
ಪೈತಾಮಹಂ ವಚಃ ಪ್ರಾಹ ನಾರದೋ ಯತ್ಕುರುಷ್ವ ತತ್ ॥ ೪೯ ॥
ತಚ್ಛ್ರುತ್ವಾ ದಿವ್ಯವಚನಂ ನಾರದಸ್ಯ ಚ ಭಾಷಿತಂ ।
ಶ್ರದ್ದಧೇ ವಾಜಿಮೇಧಾಯ ಭಗವತ್ಪ್ರೀತಿಕಾರಕಃ ॥ ೫೦ ॥
ನಾರದಂ ಚ ಪುನಃ ಪ್ರಾಹ ಹರ್ಷಗದ್ಗದಯಾ ಗಿರಾ ।
ಮುನೆ ತ್ವಯಾ ಯದಾದಿಷ್ಟಂ ಚತುರ್ಮುಖನಿದೇಶತಃ ॥ ೫೧ ॥
ಅಶರೀರಾ ತ್ವಿಯಂ ವಾಣೀ ಅನುಜಜ್ಞೇ ತದೇವ ಹಿ ।
ಪಿತಾಮಹೋ ಜಗನ್ನಾಥೋ ಭೇದೋ ವೈ ನಾಽನಯೋಃ ಕ್ವಚಿತ್ ॥ ೫೨ ॥
ಪದ್ಮಯೋನೇಃ ಸುತಸ್ತ್ವಂ ಹಿ ವಚಸ್ತೇ ಭಗವದ್ವಚಃ ।
ತತ್ಕರ್ತವ್ಯಂ ಪ್ರಯತ್ನೇನ ಯಚ್ಛ್ರೇಯ ಉಪಪಾದಿತಂ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ನರಸಿಂಹದರ್ಶನ—ಅಶ್ವಮೇಧಯಜ್ಞಾರಂಭಾದಿವರ್ಣನಂ"ನಾಮ ಪಂಚದಶೋಽಧ್ಯಾಯಃ

---

೪೯. ಓ ಭೂಪಾಲ! ಚಿಂತಿಸಬೇಡ. ನಿನಗೆ ನಾನು ದೃಗ್ಗೋಚರನಾಗುವೆನು. ನಾರದನು ನಿನಗೆ ಹೇಳಿದ ಬ್ರಹ್ಮವಚನದಂತೆಸಗುವವನಾಗು.

೫೦. ಆ ದಿವ್ಯವಚನವನ್ನೂ, ನಾರದನಾಡಿದ ಮಾತುಗಳನ್ನೂ ಕೇಳಿದ ತರುವಾಯ ಆತನು ಭಗವಂತನಿಗೆ ಪ್ರಿಯವನ್ನುಂಟುಮಾಡುವವನಾಗಿ ಅಶ್ವಮೇಧಯಾಗವನ್ನು ಮಾಡಲು ಸಂಕಲ್ಪಿಸಿದನು.

೫೧—೫೨. ಆಗಲಾತನು ನಾರದಮುನಿಯನ್ನು ಕುರಿತು ಹರ್ಷದಿಂದ ಗದ್ಗದ ಸ್ವರದೊಡಗೂಡಿ, "ಎಲೈ ಮುನಿಯೇ! ನೀನು ಚತುರ್ಮುಖಬ್ರಹ್ಮನ ಆಣತಿಯಂತೆ ನನಗೆ ಯಾವುದನ್ನು ಅಪ್ಪಣೆಕೊಡಿಸಿದೆಯೋ ಅದನ್ನೇ ಈ ಅಶರೀರ ವಾಣಿಯೂ ಸಮ್ಮತಿಸಿತಲ್ಲವೆ. ಇದರಿಂದ ಬ್ರಹ್ಮನಿಗೂ ಜಗನ್ನಾಥನಿಗೂ ಯಾವ ಭೇದವೂ ಯಾವಾಗಲೂ ಇರುವುದಿಲ್ಲವು.

೫೩. ನೀನಾದರೋ ಬ್ರಹ್ಮಪುತ್ರನು. ನಿನ್ನ ಮಾತೆಂದರೆ ಭಗವಂತನ ಮಾತೇ ಸರಿ! ಆದುದರಿಂದ ನೀನು ಹೇಳಿದಂತೆ ಯಾವುದು ಶ್ರೇಯಸ್ಸಂಪಾದಕವೋ ಅದನ್ನು ಮಾಡತಕ್ಕುದೇ!"

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ನರಸಿಂಹದರ್ಶನ—ಅಶ್ವಮೇಧಯಜ್ಞಾರಂಭಾದಿ ವರ್ಣನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ನಾರದಕೃತ ನೃಸಿಂಹಮೂರ್ತಿಸ್ಥಾಪನವರ್ಣನಂ

ಜೈಮಿನಿರುವಾಚ :—

**ನೃಪಂ ಸುಮನಸಂ ದೃಷ್ಟ್ವಾ ಶ್ರದ್ಧಧಾನಂ ಮಹಾಕ್ರತೌ ।**
**ಉವಾಚ ಪರಮಪ್ರೀತ್ಯಾ ನಾರದೋ ಲೋಕಹರ್ಷಣಃ ॥ ೧ ॥**
**ವ್ಯವಸಾಯೋ ಸುಕೃತಿನಾಂ ದೇವಾ ಯಾಂತಿ ಸಹಾಯತಾಂ ।**
**ತತ್ರೋದಾಹರಣಂ ತ್ವಂ ಹಿ ಯತ್ಸಹಾಯಶ್ಚತುರ್ಮುಖಃ ॥ ೨ ॥**
**ತದೇಹಿ ಯಾಮಸ್ತತ್ರೈವ ನೀಲಕಂಠಸ್ಯ ಸನ್ನಿಧೌ ।**
**ಸರ್ವರಾಕ್ಷಸಸಂಹಾರಂ ಸರ್ವವಿಘ್ನನಿವಾರಣಂ ॥ ೩ ॥**
**ಸ್ಥಾಪಯಾಮ್ಯಗ್ರತೋ ರಾಜನ್ನೃಸಿಂಹಂ ವಾರುಣೀಮುಖಂ ।**
**ಅಂತರ್ಹಿತೋ ಹಿ ಭಗವಾನ್ಪ್ರತ್ಯಕ್ಷೋಽಸೌ ನೃಕೇಸರೀ ॥ ೪ ॥**
**ಸನ್ನಿಧಾವಸ್ಯ ಯಾಗಸ್ತು ಫಲಾತಿಶಯವಾನ್ಭವೇತ್ ।**
**ತ್ವಮಗ್ರತೋ ಗಚ್ಛ ಶೀಘ್ರಂ ಪ್ರಾಸಾದಂ ತತ್ರ ಕಾರಯ ॥ ೫ ॥**

---

### ಕನ್ನಡದ ಅನುವಾದ

#### ನಾರದಕೃತ ನೃಸಿಂಹಮೂರ್ತಿಸ್ಥಾಪನವರ್ಣನ

೧. ಜೈಮಿನಿಯು ಹೇಳುತ್ತಾನೆ:— ಎಲೈ ವಿಪ್ರರೇ! ಇಂದ್ರದ್ಯುಮ್ನ ರಾಜನು ಸಂತುಷ್ಟಮಾನಸನಾಗಿ ಅಶ್ವಮೇಧ ಮಹಾಯಾಗವನ್ನು ಮಾಡುವುದರಲ್ಲಿ ಶ್ರದ್ಧೆತಾಳಿರುವುದನ್ನು ಕಂಡು ಲೋಕವನ್ನೇ ಆನಂದಗೊಳಿಸುವವನಾದ ನಾರದನು ಹೇಳಿದನು.

೨. "ಎಲೈ ರಾಜನೇ! ಪುಣ್ಯಶಾಲಿಗಳಾದವರ ಕೆಲಸಗಳಿಗೆ ದೇವತೆಗಳೇ ಸಹಾಯಕರಾಗುತ್ತಾರೆ. ಇದಕ್ಕೆ ನೀನೇ ಉದಾಹರಣೆಯು. ನಿನಗೆ ಸಾಕ್ಷಾತ್ ಚತುರ್ಮುಖ ಬ್ರಹ್ಮನೇ ಸಹಾಯಕನಾಗಿರುವನಲ್ಲವೆ!

೩–೪. ಆದುದರಿಂದ ಬಾ; ಆ ನೀಲಕಂಠೇಶ್ವರನ ಸನ್ನಿಧಿಗೇ ಹೋಗೋಣ. ಎಲೈ ದೊರೆಯೆ! ಅಲ್ಲಿ ನಾವು ಸಮಸ್ತ ರಾಕ್ಷಸರನ್ನು ಸಂಹರಿಸುವವನೂ, ಸಕಲವಿಘ್ನಗಳನ್ನು ನಿವಾರಣೆಮಾಡುವವನೂ ಆದ ಶ್ರೀನೃಸಿಂಹಸ್ವಾಮಿಯನ್ನು ವರುಣದಿಕ್ಕಿಗೆ ಮುಖಮಾಡಿಕೊಂಡಿರುವಂತೆ ಸ್ಥಾಪಿಸೋಣ. ಭಗವಾನ್ ನೀಲಮಾಧವಮೂರ್ತಿಯು ಅಂತರ್ಧಾನಹೊಂದಿದರೂ ನೃಸಿಂಹಸ್ವಾಮಿಯು ಪ್ರತ್ಯಕ್ಷನಾಗಿರುವನಷ್ಟೆ!

೫. ಈ ನೃಸಿಂಹಮೂರ್ತಿಯ ಸನ್ನಿಧಿಯಲ್ಲಿ ಯಾಗವನ್ನೆಸಗಿದರೆ ಅತಿಶಯ

ಸ್ಮರಣಾನ್ಮಮ ಚಾಗತ್ಯ ಸುತೋ ವೈ ವಿಶ್ವಕರ್ಮಣಃ ।
ಪ್ರತ್ಯಙ್ಮುಖಂ ತು ಪ್ರಾಸಾದಂ ಸ ತೂರ್ಣಂ ಘಟಯಿಷ್ಯತಿ ॥ ೬ ॥
ದಕ್ಷಿಣೇ ನೀಲಕಂಠಸ್ಯ ಯೋ ಮಹಾಂಶ್ಚಂದನದ್ರುಮಃ ।
ಧನುಃಶತಾಂತರೇ ರಾಜಂಶ್ಚಿರರೂಢಸ್ತು ತಿಷ್ಠತಿ ॥ ೭ ॥
ತಸ್ಯ ಪಶ್ಚಿಮದೇಶಸ್ಥಂ ಕ್ಷೇತ್ರಂ ರಾಜನ್ಭವಿಷ್ಯತಿ ।
ವಾಜಿಮೇಧಸಹಸ್ರೇಣ ತಸ್ಯಾಗ್ರೇ ಯಜತಾಂ ಭವಾನ್ ॥ ೮ ॥
ಗಚ್ಛ ತ್ವಮಹಮತ್ರೈವ ಸ್ಥಾಸ್ಯಾಮಿ ದಿನಪಂಚಕಂ ।
ಆರಾಧ್ಯೈನಂ ದಿವ್ಯಸಿಂಹಂ ಜ್ಯೋತೀರೂಪಮನಂತಕಂ ॥ ೯ ॥
ಪ್ರತ್ಯರ್ಚಾಯಾಂ ಪ್ರತಿಷ್ಠಾಪ್ಯ ಪ್ರಾಣೇಂದ್ರಿಯಮನೋಯುತಂ ।
ದೀಪಾದ್ದೀಪಂ ಯಥಾರಾಜನ್ನಯಿಷ್ಯೇ ಶೋಭನಾಕೃತಿಂ ॥ ೧೦ ॥
ನಾರದಸ್ಯೇತಿ ವಚನಂ ಪ್ರತಿಶ್ರುತ್ಯ ನೃಪೋತ್ತಮಃ ।
ಜಗಾಮ ತತ್ರ ವೇಗೇನ ಚಂದನದ್ರುಮಸನ್ನಿಧಿಂ ॥ ೧೧ ॥
ತತ್ರಾಪಶ್ಯತ್ಸುಘಟಕಂ ಶಿಲ್ಪಶಾಸ್ತ್ರವಿಶಾರದಂ ।
ನಾರದಸ್ಯಾಜ್ಞಯಾ ಪ್ರಾಪ್ತಂ ಪುತ್ರಂ ವೈ ದೇವಶಿಲ್ಪಿನಃ ॥ ೧೨ ॥

---

ವಾದ ಫಲವನ್ನು ಕೊಡುವುದಾಗುತ್ತದೆ. ನೀನು ಮುಂದಾಗಿಯೆ ಹೊರಟು ಆ ಪ್ರದೇಶದಲ್ಲಿ ದೇವಾಲಯವನ್ನು ಕಟ್ಟಿಸು.

೬–೭. ನನ್ನನ್ನು ಸ್ಮರಿಸಿದೊಡನೆಯೇ ವಿಶ್ವಕರ್ಮಸುತನಲ್ಲಿಗೈತಂದು ಪಶ್ಚಿಮಾಭಿಮುಖವಾಗಿ ದೇವಾಲಯವನ್ನು ಬಹುಜಾಗ್ರತೆಯಾಗಿಯೇ ರಚಿಸುವನು. ನೀಲಕಂಠಸ್ವಾಮಿಗೆ ದಕ್ಷಿಣದಲ್ಲಿ ನೂರಂಬಿನ ದೂರದಲ್ಲಿ ಬಹುಕಾಲದಿಂದ ಬೆಳೆದುಬಂದಿರುವ ದೊಡ್ಡ ಶ್ರೀಗಂಧದ ಮರವಿರುತ್ತದೆ.

೮. ಆ ಶ್ರೀಗಂಧವೃಕ್ಷದ ಪಶ್ಚಿಮ ದಿಕ್ಕಿನಲ್ಲಿರುವ ಪ್ರದೇಶವು ಕ್ಷೇತ್ರವಾಗಿರುತ್ತದೆ. ನೀನು ಅಲ್ಲಿಯೇ ಅಶ್ವಮೇಧಸಹಸ್ರವನ್ನು ಮಾಡು.

೯–೧೦. ಇನ್ನು ನೀನು ಹೊರಡು. ನಾನು ಇಲ್ಲಿಯೇ ಐದು ದಿನಗಳ ಕಾಲ ಇರುತ್ತೇನೆ. ಇದ್ದು ಜ್ಯೋತಿಸ್ಸ್ವರೂಪನೂ ಅನಂತನೂ ಆದ ಈ ದಿವ್ಯ ಸಿಂಹಮೂರ್ತಿಯನ್ನು ಪ್ರತಿಮೆಯಲ್ಲಿ ಪ್ರತಿಷ್ಠೆಗೊಳಿಸಿ ಪ್ರಾಣೇಂದ್ರಿಯ ಮನೋಯುತನಾದ ಮಂಗಳಮೂರ್ತಿಯಾದ ಈ ಸ್ವಾಮಿಯನ್ನು ದೀಪದಿಂದ ದೀಪವನ್ನೆಂತೊ ಅಂತು ಅಲ್ಲಿಗೆ ಕರೆತರುತ್ತೇನೆ.''

೧೧. ಎಲೈ ಮುನಿಗಳೇ! ಈ ರೀತಿ ನುಡಿದ ನಾರದಮುನಿಯ ಮಾತುಗಳನ್ನು ಕೇಳಿ ಇಂದ್ರದ್ಯುಮ್ನನು ಬಹುಜಾಗ್ರತೆಯಾಗಿ ಆ ಶ್ರೀಗಂಧವೃಕ್ಷದ ಬಳಿಗೈದಿದನು.

೧೨–೧೪. ಅಲ್ಲಿಯಾದರೋ, ಒಳ್ಳೆಯ ಘಟಕನಾಗಿ, ಶಿಲ್ಪಶಾಸ್ತ್ರವಿಶಾರದ

ಮನುಷ್ಯರೂಪಮಾಸ್ಥಾಯ ಶಸ್ತ್ರಸೂತ್ರಧರಂ ಸ್ಥಿತಂ ।
ರಾಜಾನಂ ಸ ತು ದೃಷ್ಟ್ವಾ ವೈ ಚಿಕೀರ್ಷಂತಂ ಸುರಾಲಯಂ ॥ ೧೩ ॥
ಕೃತಾಂಜಲಿಪುಟಃ ಪ್ರೋಚೇ ದೇವಾಹಂ ಶಿಲ್ಪಶಾಸ್ತ್ರವಿತ್ ।
ನರಸಿಂಹಾಲಯಂ ತೇಽದ್ಯ ಘಟಯಿಷ್ಯಾಮಿ ಶೋಭನಂ ।
ರಾಜಾಪಿ ತಮುವಾಚೇದಂ ಪ್ರಹಸನ್ಪೋ ದ್ವಿಜೋತ್ತಮಾಃ ॥ ೧೪ ॥

ಇಂದ್ರದ್ಯುಮ್ನ ಉವಾಚ :—

ನ ಶಿಲ್ಪೀ ತ್ವಂ ಹಿ ಸಾಮಾನ್ಯಃ ಶಿಲ್ಪಶಾಸ್ತ್ರಪ್ರಣೇತೃಕಃ ।
ಕಥಿತೋ ನಾರದೇನೈವ ತ್ವಷ್ಟುಃ ಪುತ್ರೋ ಮಹಾಯಶಾಃ ॥ ೧೫ ॥
ನಿರ್ಜನೇಽಸ್ಮಿನ್ಮಹಾರಣ್ಯೇ ನೇತಃ ಪೂರ್ವಂ ಜನಾಶ್ರಯಃ ।
ವಯಮದ್ಯಾಗತಾಃ ಶಿಲ್ಪಿನ್ಸಂಬಂಧಃ ಕಿಂನಿಮಿತ್ತಕಃ ॥ ೧೬ ॥
ದೇವಶಿಲ್ಪೀ ಭವಾನೇವ ವಿಷ್ಣೋರಮಿತತೇಜಸಃ ।
ಸದಾನುಧ್ಯಾಯಿನಸ್ತಸ್ಯ ನಿದೇಶವಶವರ್ತಿನಃ ॥ ೧೭ ॥

---

ನಾಗಿರುವ ದೇವಶಿಲ್ಪಿ ವಿಶ್ವಕರ್ಮನ ಮಗನು ನಾರದನ ಆಣತಿಯಂತೆ ಮಾನವ ರೂಪವನ್ನು ಧರಿಸಿ ಶಸ್ತ್ರಸೂತ್ರಗಳನ್ನು ಧರಿಸಿದವನಾಗಿ ನಿಂತಿದ್ದುದನ್ನು ಕಂಡನು. ಅವನು ದೊರೆಯನ್ನು ಕಂಡು ದೇವಾಲಯವನ್ನು ನಿರ್ಮಾಣಮಾಡು ವವನಾಗಿ ಕೈಮುಗಿದುಕೊಂಡು, "ಪ್ರಭುವೆ! ನಾನು ಶಿಲ್ಪಶಾಸ್ತ್ರವನ್ನು ಬಲ್ಲವನು. ನಿನಗೋಸ್ಕರ ನಾನೀಗ ನೃಸಿಂಹದೇವಾಲಯನ್ನು ರಚಿಸುವೆನು" ಎಂದನು. ಇಂದ್ರದ್ಯುಮ್ನರಾಜನೂ ಸಹ ನಸುನಗುತ್ತ ಅವನನ್ನು ಕುರಿತು ಇಂತೆಂದು ನುಡಿದನು.

೧೫. ಇಂದ್ರದ್ಯುಮ್ನನು ಹೇಳುತ್ತಾನೆ:—"ಅಯ್ಯಾ! ನೀನು ಸಾಮಾನ್ಯ ಶಿಲ್ಪಿಯಲ್ಲ; ಶಿಲ್ಪಿಶಾಸ್ತ್ರವನ್ನೇ ನಿರ್ಮಾಣಮಾಡಿದವನು. ನೀನು ದೇವ ಶಿಲ್ಪಿಯಾದ ವಿಶ್ವಕರ್ಮನ ಮಗನೆಂಬ ವಿಷಯವನ್ನು ನಾರದಮಹರ್ಷಿಯು ನನಗಾಗಲೇ ತಿಳಿಸಿರುವನು. ನೀನು ಮಹಾ ಕೀರ್ತಿಶಾಲಿಯು.

೧೬. ಅಯ್ಯಾ ಶಿಲ್ಪಿಯೇ! ಈ ಮೊದಲು ಜನರೇ ಇಲ್ಲದೆ ಕೇವಲ ನಿರ್ಜನವೇ ಆಗಿದ್ದ ಈ ಮಹಾರಣ್ಯಕ್ಕೆ ನಾವು ಈಗತಾನೆ ಬಂದಿರುವೆವು. ನೀನಾದರೋ ಇಲ್ಲಿರುವೆ. ನಮ್ಮಿಬ್ಬರ ಈ ಸಂಬಂಧವು ಯಾವ ನಿಮಿತ್ತಕ್ಕೊ ನಾನು ಬೇರೆ ತಿಳಿಯೆನು.

೧೭. ನೀನೇ ದೇವಶಿಲ್ಪಿಯು. ಇದನ್ನು ನಾನು ಬಲ್ಲೆನು. ನಾವಾದರೋ ಅಮಿತತೇಜಸ್ವಿಯಾದ ಶ್ರೀಮಹಾವಿಷ್ಣುವಿನ ಧ್ಯಾನದಲ್ಲಿಯೇ ಸದಾ ನಿರತನಾದ ನಾರದಮುನಿಯ ಆಜ್ಞಾನುವರ್ತಿಗಳು.

ಯೇನ ಸ್ಮೃತಸ್ತ್ವಂ ಮುನಿನಾ ಸ ಏವಾತ್ರ ಗಮಿಷ್ಯತಿ ।
ಪ್ರತ್ಯರ್ಚಾಂ ನರಸಿಂಹಸ್ಯ ಗೃಹೀತ್ವಾ ತು ದಿನಾಂತರೇ ॥ ೧೮ ॥
ತದಾಶು ಘಟಯಸ್ವಾದ್ಯ ಸಪ್ರಾಕಾರಂ ಸತೋರಣಂ ।
ಪ್ರಾಸಾದಂ ನರಸಿಂಹಸ್ಯ ಪ್ರತೀಚೀವದನಂ ಶುಭಂ ॥ ೧೯ ॥
ತಂ ಪೂಜಯಿತ್ವಾ ವಿಧಿವನ್ನಿಯೋಜ್ಯ ಘಟನೇ ನೃಪಃ ।
ಶಿಲಾಸಂಚಯಕಾನ್ಭೃತ್ಯಾನ್ಬಹುವಿತ್ತೈರಯೋಜಯತ್ ॥ ೨೦ ॥
ಚತುರ್ಥೇ ದಿವಸೇ ವಿಪ್ರಾಃ ಪ್ರಾಸಾದೋಽಭೂದನುತ್ತಮಃ ।
ಬಹುಕಾಲಪ್ರಸಾಧ್ಯೋಽಪಿ ಮಹಿಮ್ನಾ ದೇವಶಿಲ್ಪಿನಃ ॥ ೨೧ ॥
ತತಃ ಪ್ರಭಾತೇ ವಿಮಲೇ ನಿತ್ಯಕರ್ಮಾವಸಾನತಃ ।
ಪ್ರತಿಷ್ಠಾವಿಧಿಸಂಭಾರಂ ಗೃಹೀತ್ವಾ ಸಪರಿಚ್ಛದಃ ॥ ೨೨ ॥
ನಾರದಾಗಮನಂ ಪ್ರೇಕ್ಷ್ಯ ಯಾವತ್ತಿಷ್ಠತಿ ಭೂಪತಿಃ ।
ತಾವಚ್ಛುಶ್ರುವಿರೇ ಶಂಖಾ ಮೃದಂಗಾ ಮುರಜಾಸ್ತಥಾ ॥ ೨೩ ॥
ಗೀತಮಂಗಲವಾದ್ಯಾನಿ ಘಂಟಾನಾಂ ಕರಿಣಾಂ ಸ್ವನಾಃ ।
ತಥಾ ಜಯ ಜಯೇತ್ಯುಚ್ಚೈಃ ಶಬ್ದಾ ಆಕಾಶಮಂಡಲೇ ॥ ೨೪ ॥

---

೧೮. ನೀನು ಯಾವ ಆ ನಾರದಮುನಿಯಿಂದ ಸ್ಮರಿಸಲಾದೆಯೋ ಆತನೇ ಇಲ್ಲಿಗೆ ಬರುವನು. ಆತನು ಶ್ರೀನೃಸಿಂಹಮೂರ್ತಿಯ ಪ್ರತಿಬಿಂಬಮೂರ್ತಿಯನ್ನು ತೆಗೆದುಕೊಂಡು ಇನ್ನು ಕೆಲದಿನಗಳಲ್ಲಿಯೇ ಇಲ್ಲಿಗೆ ಬರುವನು.

೧೯–೨೦. ಆದುದರಿಂದ ನೀನೀಗ ಪ್ರಾಕಾರಸಹಿತವೂ, ತೋರಣಯುಕ್ತವೂ ಆಗಿ ಮಂಗಳಕರವಾದ ಶ್ರೀನೃಸಿಂಹದೇವಾಲಯವನ್ನು ಪಶ್ಚಿಮಾಭಿಮುಖವಾಗಿ ರಚಿಸು.'' ಇಂತು ನುಡಿದು ಆ ದೊರೆಯು ಆ ದೇವಶಿಲ್ಪಿಯನ್ನು ಸತ್ಕರಿಸಿ ದೇವಾಲಯನಿರ್ಮಾಣದಲ್ಲಿ ತೊಡಗಿಸಿದ ಬಳಿಕ ಶಿಲೆಗಳನ್ನು ತಂದು ಕೂಡಿಹಾಕಲು ಬಹಳ ಹಣವನ್ನು ಕೊಟ್ಟು ಆಳುಗಳನ್ನು ಗೊತ್ತುಮಾಡಿದನು.

೨೧. ಅಯ್ಯಾ ವಿಪ್ರರೇ! ಬಳಿಕ ನಾಲ್ಕನೆಯ ದಿನದಲ್ಲಿಯೇ ಬಹುಕಾಲ ವಿನಿಯೋಗಿಸಿ ರಚಿಸಬೇಕಾದ ಉತ್ತಮ ದೇವಾಲಯವು ಆ ದೇವಶಿಲ್ಪಿಯ ಮಹಿಮೆಯಿಂದ ಸಿದ್ಧವಾಯಿತು.

೨೨–೨೪. ತರುವಾಯ ಐದನೆಯದಿನದ ಪ್ರಾತಃಕಾಲದಲ್ಲಿ ಇಂದ್ರದ್ಯುಮ್ನ ರಾಜನು ನಿತ್ಯಕರ್ಮಗಳನ್ನುಮಾಡಿ ಮುಗಿಸಿದ ಬಳಿಕ ಪ್ರತಿಷ್ಠೆಗೆ ಬೇಕಾದ ಸಂಭಾರಗಳೆಲ್ಲವನ್ನೂ ಅಣಿಮಾಡಿಟ್ಟುಕೊಂಡು ಪರಿವಾರಸಹಿತನಾಗಿ ನಾರದಮುನಿಯ ಆಗಮನವನ್ನು ನಿರೀಕ್ಷಿಸುತ್ತ ನಿಂತಿರುವಷ್ಟರಲ್ಲಿಯೇ ನಭೋಮಂಡಲದಲ್ಲಿ ಶಂಖ, ಮೃದಂಗ, ಮುರಜ, ವಾದ್ಯಧ್ವನಿಯೂ, ಗೀತಮಂಗಳವಾದ್ಯಧ್ವನಿಗಳೂ ಗಂಟೆಗಳ ಮತ್ತು ಆನೆಗಳ ಧ್ವನಿಗಳು, ಜಯಜಯನಾದವು ಕೇಳಿಬಂದಿತು.

ತಾನ್ಶ್ರುತ್ವಾ ವಿಸ್ಮಯಾಪನ್ನಾ ಇಂದ್ರದ್ಯುಮ್ನಪುರೋಗಮಾಃ ।
ರಾಜಾನಃ ಶ್ರೋತ್ರಿಯಾ ವಿಪ್ರಾ ವೈಷ್ಣವಾಶ್ಚ ಸಹಸ್ರಶಃ ॥ ೨೫ ॥
ನಿರಾಧಾರಾಸ್ತ್ವಿಮೇ ಶಬ್ದಾ ಅದ್ಭುತಾನಿ ನ ಸಂಶಯಃ ।
ವಿಚಾರಯಂತಸ್ತೇ ಯಾವತ್ತಾವದ್ದಕ್ಷಿಣತೋ ಮರುತ್ ॥ ೨೬ ॥
ಗಂಧಾನ್ವಿತದ್ವಿರೇಫೌಘಶಬ್ದಿತಾಃ ಪುಷ್ಪವೃಷ್ಟಯಃ ।
ಆವಿರ್ಭೂತಾಸ್ತ್ರಿಪಥಗಾವಾರಿಣಾರ್ದ್ರೀಕೃತಾ ದ್ವಿಜಾಃ ॥ ೨೭ ॥
ತದನಂತರಮೇವಾಸೌ ನಾರದೋ ಬ್ರಹ್ಮಣಃ ಸುತಃ ।
ತಪಃಪ್ರಭಾವನಿರ್ವ್ಯೂಢವಿಮಾನವರಶಾಯಿನೀಂ ॥ ೨೮ ॥
ರತ್ನಚಾಮರಹಸ್ತಾಭಿರ್ದಿವ್ಯಸ್ತ್ರೀಭಿಃ ಸುಶೋಭಿತಾಂ ।
ಅಲಂಕೃತಾಂ ಬಹುವಿಧೈರ್ಮಣಿರತ್ನಪ್ರಸಾಧನೈಃ ॥ ೨೯ ॥
ದಿವ್ಯಮಾಲ್ಯಾಂಬರಧರಾಂ ದಿವ್ಯಗಂಧಾನುಲೇಪನಾಂ ।
ರಮ್ಯಾಂ ಪ್ರತಿಷ್ಠಿತಪ್ರಾಣಾಂ ಘಟಿತಾಂ ವಿಶ್ವಕರ್ಮಣಾ ॥ ೩೦ ॥
ತೇಜೋಮಂಡಲಸಂವೀತಾಂ ಪರಿತೋ ಹರ್ಷದಾಮಪಿ ।
ಆದಾಯ ನರಸಿಂಹಸ್ಯ ಪ್ರತ್ಯರ್ಚಾಂ ಪ್ರತ್ಯುಪಸ್ಥಿತಃ ॥ ೩೧ ॥

---

೨೫. ಈ ವಿಧವಾದ ಧ್ವನಿಗಳನ್ನು ಕೇಳಿ ಇಂದ್ರದ್ಯುಮ್ನನೇ ಮೊದಲಾದವರೂ, ಸಾಮಂತರಾಜರೂ, ಶ್ರೋತ್ರಿಯರಾದ ವಿಪ್ರರೂ ಸಾವಿರಾರು ವೈಷ್ಣವರೂ ಪರಮಾಶ್ಚರ್ಯಭರಿತರಾದರು.

೨೬–೩೧. ಎಲೈ ವಿಪ್ರರೇ! ಅವರೆಲ್ಲರೂ, "ಈ ಧ್ವನಿಗಳು ನಿರಾಧಾರವಾದುವು. ಇವು ಅದ್ಭುತವಾದುವೆಂಬುದರಲ್ಲಿ ಸಂಶಯವೇ ಇಲ್ಲವು" ಎಂದು ತಂತಮ್ಮಲ್ಲಿಯೇ ವಿಚಾರಮಾಡುತ್ತಿರುವಲ್ಲಿಯೇ ದಕ್ಷಿಣದಿಶೆಯಿಂದ ಸುಗಂಧಭರಿತವೂ, ದುಂಬಿಗಳ ಝುಂಕಾರಸಹಿತವೂ ಆದ ತಂಗಾಳಿಯೊಡಗೂಡಿದ ಪುಷ್ಪವೃಷ್ಟಿಯು ದೇವಗಂಗಾಜಲದಿಂದ ತೋಯ್ದುದಾಗಿ ನಭೋಮಂಡಲದಿಂದ ಸುರಿಯಿತು. ಅದೇ ಸಮಯದಲ್ಲಿಯೇ ಬ್ರಹ್ಮಪುತ್ರನಾದ ನಾರದಮುನಿಯು, ತಪಃಪ್ರಭಾವನಿರ್ಮಿತವಾದ ವಿಮಾನದಲ್ಲಿ ಶಯನಿಸಿ, ರತ್ನಚಾಮರಧಾರಿಣಿಯರಾದ ದಿವ್ಯಸ್ತ್ರೀಯರಿಂದ ಸುಶೋಭಿತವಾಗಿಯೂ, ಮಣಿರತ್ನಗಳ ವಿವಿಧಾಭರಣಗಳಿಂದಲಂಕೃತವಾಗಿಯೂ, ದಿವ್ಯಮಾಲ್ಯಾಂಬರಗಳನ್ನು ಧರಿಸಿರುವುದಾಗಿಯೂ, ದಿವ್ಯಗಂಧಾನುಲೇಪನವುಳ್ಳುದಾಗಿಯೂ, ಮನೋಹರವಾದುದಾಗಿ ಪ್ರಾಣಪ್ರತಿಷ್ಠಾಸಂಸ್ಕಾರವಾದುದಾಗಿ, ದೇವಶಿಲ್ಪಿಯಾದ ವಿಶ್ವಕರ್ಮನಿಂದ ರಚಿಸಲ್ಪಟ್ಟುದಾಗಿ, ಸುತ್ತಲೂ ತೇಜೋಮಂಡಲದೊಡಗೂಡಿ ಸಮಸ್ತರಿಗೂ ಸಂತೋಷವನ್ನುಂಟುಮಾಡುವುದಾಗಿಯೂ ಇರುವ ನೃಸಿಂಹಸ್ವಾಮಿಯ ಪ್ರತಿಕೃತಿಯನ್ನು ತೆಗೆದುಕೊಂಡುಬಂದನು.

**ತಾಂ ದೃಷ್ಟ್ವಾ ಹರ್ಷಿತಾಃ ಸರ್ವೇ ರಾಜಾ ರಾಜಾನುಯಾಯಿನಃ ।**
**ಅಂತರ್ಧಾನಂ ಗತೋ ದೇವೋ ನಾರದೇನೋದ್ಧೃತಃ ಕಿಮು ॥ ೩೨ ॥**
**ಮೇನಿರೇ ಹರ್ಷಿತಾತ್ಮಾನಃ ಪ್ರಶಶಂಸುಶ್ಚ ತಂ ಮುನಿಂ ।**
**ನಿರೂಪ್ಯ ಸಂನಿಧಿಸ್ಥಾಂ ತು ನರಸಿಂಹಾಕೃತಿಂ ದ್ವಿಜಾಃ ।**
**ಆದ್ಯಮೂರ್ತೇರ್ನೃಸಿಂಹಸ್ಯ ಪ್ರತಿಮಾಮಥ ಮೇನಿರೇ ॥ ೩೩ ॥**
**ಪ್ರತ್ಯುತ್ಥಾಯ ತತೋ ರಾಜಾ ಪ್ರಹೃಷ್ಟೇನಾಂತರಾತ್ಮನಾ ।**
**ಪ್ರದಕ್ಷಿಣೀಕೃತ್ಯ ಹರಿಂ ಜಗಾಮ ಶಿರಸಾ ಮಹೀಂ ॥ ೩೪ ॥**
**ಶ್ರದ್ಧಾಸಂಪತ್ತಿಯೋಗ್ಯೇನ ಸಂಭಾರೇಣ ನೃಪಾಜ್ಞಯಾ ।**
**ಪ್ರಸ್ಥಾಪಯಾಮಾಸ ಮುನಿಃ ಪ್ರಾಸಾದಂ ಶುಭಲಕ್ಷಣಂ ॥ ೩೫ ॥**
**ಪ್ರತಿಮಾಂ ದೇವದೇವಸ್ಯ ಸುಮುಹೂರ್ತೇ ದ್ವಿಜೋತ್ತಮಾಃ ।**
**ಧರಾರಮಾಭ್ಯಾಂ ಸಹಿತಾಂ ರತ್ನವೇದ್ಯಾಂ ಪ್ರತಿಷ್ಠಿತಾಂ ।**
**ಯೋಗಾರೂಢತನುಂ ರಾಜಾ ಇಂದ್ರದ್ಯುಮ್ನೋಽಥ ತುಷ್ಟುವೇ ॥ ೩೬ ॥**
**ವೈಷ್ಣವೈರ್ಬ್ರಾಹ್ಮಣೈರ್ಭೂಪೈರ್ನಾರದೇನ ಚ ಧೀಮತಾ ।**
**ಗುಹ್ಯೋಪನಿಷದ್ಯೈಃ ಸ್ಮಾರ್ತೈಃ ಸ್ತೋತ್ರೈಃ ಶಾಸ್ತ್ರೈರ್ಮರ್ಯಾದಾನ್ವಿತೈಃ ॥೩೭॥**

೩೨–೩೪. ಆ ದಿವ್ಯಮೂರ್ತಿಯನ್ನು ಕಂಡು ಇಂದ್ರದ್ಯುಮ್ನಮಹಾರಾಜನೂ, ಅವನ ಅನುಯಾಯಿಗಳೂ, ಇನ್ನೂ ಅಲ್ಲಿ ಇತರರೂ ಎಲ್ಲರೂ ಆನಂದಪರವಶರಾದರು. ''ಹಿಂದೆಯೇ ಅಂತರ್ಧಾನವನ್ನೈದಿದ ಆ ನೀಲಮಾಧವಸ್ವಾಮಿಯನ್ನೇ ಈ ನಾರದಮುನಿಯು ಉದ್ಧಾರಮಾಡಿ ತಂದನೋ ಏನೋ!'' ಎಂದು ಅವರು ತಿಳಿದರಲ್ಲದೆ, ಸಂತುಷ್ಟಾಂತರಂಗರಾಗಿ ಆತನನ್ನು ಬಹಳವಾಗಿ ಪ್ರಶಂಸೆಮಾಡಿದರು. ಸನ್ನಿಧಿಯಲ್ಲಿಳಿಸಿದ ತರುವಾಯ ಅದು ಆದ್ಯಮೂರ್ತಿಯಾದ ನೃಸಿಂಹಸ್ವಾಮಿಯ ಪ್ರತಿಮೆಯೆಂದರಿತುಕೊಂಡರು. ತರುವಾಯ ಇಂದ್ರದ್ಯುಮ್ನರಾಜನು ಪ್ರಹೃಷ್ಟಾಂತರಂಗನಾಗಿ ಆ ಶ್ರೀನರಹರಿಮೂರ್ತಿಗೆ ಪ್ರದಕ್ಷಿಣೆಮಾಡಿ ಸಾಷ್ಟಾಂಗನಮಸ್ಕಾರವನ್ನು ಮಾಡಿದನು.

೩೫. ಇದಾದಮೇಲೆ ನಾರದಮುನಿಯು ಆ ದೊರೆಯ ಆಣತಿಯಂತೆ ಆ ಮೂರ್ತಿಯನ್ನು ಶ್ರದ್ಧಾಸಂಪತ್ತಿಗನುಗುಣವಾದ ಸಂಭಾರಗಳೊಡನೆ ದೇವಾಲಯಕ್ಕೆ ಬಿಜಮಾಡಿಸಿದನು.

೩೬–೩೭. ಎಲೈ ದ್ವಿಜೋತ್ತಮರೇ! ಬಳಿಕ ನಾರದಮುನಿಯು ಒಳ್ಳೆಯ ಮುಹೂರ್ತದಲ್ಲಿ ರತ್ನವೇದಿಕೆಯಮೇಲೆ ಶ್ರೀದೇವಿ ಭೂದೇವಿಯರೊಡನೆ ಪ್ರತಿಷ್ಠೆಮಾಡಿದ ಯೋಗಾರೂಢ ಶರೀರಮೂರ್ತಿಯಾದ ಆ ನೃಸಿಂಹಸ್ವಾಮಿಯನ್ನು, ವೈಷ್ಣವರಾದ ಬ್ರಾಹ್ಮಣರೂ, ಸಾಮಂತರಾಜರೂ, ಬಹಳ ಬುದ್ಧಿಶಾಲಿಯಾದ ನಾರದಮುನಿಯೂ, ವೇದೋಪನಿಷನ್ಮಂತ್ರಗಳಿಂದಲೂ, ಸ್ಮೃತ್ಯು

ಇಂದ್ರದ್ಯುಮ್ನ ಉವಾಚ :—

ಏಕಾನೇಕಸ್ಥೂಲಸೂಕ್ಷ್ಮಾಣುಮೂರ್ತೇ
ವ್ಯೋಮಾತೀತ ವ್ಯೋಮರೂಪೈಕರೂಪ ।
ವ್ಯೋಮಾಕಾರ ವ್ಯಾಪಕ ವ್ಯೋಮಸಂಸ್ಥ
ವ್ಯೋಮಾರೂಢ ವ್ಯೋಮಕೇಶಾಬ್ಜಯೋನೇ ॥ ೩೮ ॥
ದುಃಖಾಂಭೋಧೇಸ್ತ್ರಾಹಿ ಮಾಂ ದಿವ್ಯಸಿಂಹ
ಪ್ರಾದುರ್ಭೂತಾನೇಕಕೋಟ್ಯರ್ಕಧಾಮನ್ ।
ನಿತ್ಯಾಸನ್ನೋ ದೂರಸಂಸ್ಥೋ ನ ದೂರೋ
ನಾಸನ್ನೋ ವಾ ಬೋಧ್ಯಬೋಧಾತ್ಮಭಾವ ॥ ೩೯ ॥
ಜ್ಞೇಯಜ್ಞೇಯೋ ಜ್ಞಾನಗಮ್ಯೋಽಪ್ಯಗಮ್ಯೋ
ಮಾಯಾತೀತೋ ಮಾನಮೇಯೋಽನುಮಾನಾತ್ ।
ಕೃತ್ಸ್ನಸ್ಯಾದಿಃ ಕೃತ್ಸ್ನಕರ್ತಾನುಮಂತಾ
ಪಾತಾ ಹರ್ತಾ ವಿಶ್ವಸಾಕ್ಷಿನ್ನಮಸ್ತೇ ॥ ೪೦ ॥

---

ಕ್ತಗಳಾದ ಸ್ತೋತ್ರಗಳಿಂದಲೂ, ಶಾಸ್ತ್ರೋದಿತಗಳಾದ ಸ್ತುತಿಗಳಿಂದಲೂ ಆನಂದವಾಗಿ ಸ್ತುತಿಸಿದ ಮೇಲೆ ತಾನೂ ಸಹ ಈ ರೀತಿ ಸ್ತುತಿಸಿದನು.

೩೮–೩೯. ಇಂದ್ರದ್ಯುಮ್ನನು ಹೇಳುತ್ತಾನೆ :—" ಅಸಂಖ್ಯಾತವಾದ ಸ್ಥೂಲಸೂಕ್ಷ್ಮ ಅಣುಸ್ವರೂಪಗಳುಳ್ಳವನೂ, ಗಗನಕ್ಕೆ ಮೀರಿ, ಗಗನರೂಪ ವೊಂದೇ ರೂಪವಾಗುಳ್ಳವನಾಗಿ, ಗಗನಾಕಾರನೂ ಆಗಿ, ವಿಶ್ವವ್ಯಾಪಕನೂ, ವ್ಯೋಮಸಂಸ್ಥನೂ, ವ್ಯೋಮಾರೂಢನೂ, ವ್ಯೋಮಕೇಶನಿಗೂ ಕಮಲಸಂಭವ ನಾದ ಬ್ರಹ್ಮನಿಗೂ ಉತ್ಪತ್ತಿಕಾರಣನೂ, ಆಗತಾನೆ ಉದಿಸಿದ ಅನೇಕ ಕೋಟಿ ಸೂರ್ಯರ ಕಾಂತಿಸಹಿತನೂ, ಯಾವಾಗಲೂ, ಸಮೀಪದಲ್ಲಿಯೇ ಇದ್ದರೂ, ಬಹುದೂರದಲ್ಲಿರುವವನೂ, ಅಥವಾ ದೂರದಲ್ಲಿಯಾಗಲಿ, ಹತ್ತಿರದಲ್ಲಿಯಾಗಲಿ ಇರದೆ ಅವಶ್ಯವಾಗಿಯೂ ತಿಳಿಯಲೇಬೇಕಾದ ಆತ್ಮಜ್ಞಾನಸ್ವರೂಪನೂ ಆಗಿರುವ ಓ ದಿವ್ಯನೃಸಿಂಹಮೂರ್ತಿಯೇ ! ನನ್ನನ್ನು ಈ ದುಃಖಸಾಗರದಿಂದ ಕಡೆಹಾಯಿಸಿ ಕಾಪಾಡು.

೪೦. ಜ್ಞೇಯಜ್ಞೇಯನಾಗಿ, ಜ್ಞಾನಗಮ್ಯನಾದರೂ, ಅಗಮ್ಯನಾಗಿ, ಮಾಯೆಗೆ ಮೀರಿ, ಅನುಮಾನದಿಂದ ಮಾನಮೇಯನಾಗಿ, ಸಮಸ್ತಜಗತ್ತಿಗೂ, ಜಗತ್ಕರ್ತನಾದ ಬ್ರಹ್ಮನಿಗೂ ಆದಿಯಾಗಿ, ಸರ್ವಕರ್ತೃವೂ, ಅನುಮಂತೃವೂ, ಪಾಲಕನೂ, ಸಂಹಾರಕರ್ತೃವೂ, ವಿಶ್ವಸಾಕ್ಷಿಯೂ ಆಗಿರುವ ಓ ಸ್ವಾಮಿಯೇ ! ನಿನಗೆ ನಮಸ್ಕಾರವು !!

ದುಃಖಧ್ವಂಸಸ್ಯೈಕಹೇತುಂ ನ ಹೇತುಂ
ಭೇತುಂ ಛೇತ್ತುಂ ಸಂಶಯಾನಗ್ರಜಾತಂ ।
ಜ್ಯೋತಿರೂಪ ಜ್ಞಾನರೂಪ ಪ್ರಕಾಶ
ಸ್ತೋಮ ವ್ಯೂಹಾಕಾರ ನಿರ್ಮಾಣಹೇತೋ ॥ ೪೧ ॥
ತ್ವತ್ಪಾದಾಬ್ಜೇ ಭಕ್ತಿಮಗ್ರ್ಯಾಂ ಸದಾ ಮೇ
ದೇಹಿ ಸ್ವಾಮಿನ್ಮೂಲಭೂತಾಂ ಚತುರ್ಣಾಂ ।
ಶ್ರೌತೈಃ ಸ್ಮಾರ್ತೈರ್ನಿತ್ಯಯುಕ್ತಾ ಜನಾಸ್ತೇ
ದೀನಾಸ್ತಿಷ್ಠಂತ್ಯತ್ರ ಬದ್ಧಾ ಭವಾಬ್ಧೌ ॥ ೪೨ ॥
ಅನಂತಪಾದಂ ಬಹುಹಸ್ತನೇತ್ರ
ಮನಂತಕರ್ಣಂ ಕಕುಭೌಘವಸ್ತ್ರಂ ।
ದಿವಾನಿಶಾನಾಥಸುಕುಂಡಲಾಢ್ಯಂ
ನಕ್ಷತ್ರಮಾಲಾಕೃತಚಾರುಹಾರಂ ॥ ೪೩ ॥
ತ್ವಾಮುದ್ಭುತಂ ದಿವ್ಯನೃಸಿಂಹಮೂರ್ತಿಂ
ಭಕ್ತೇಷ್ಟಪೂರ್ತಿಂ ಶರಣಂ ಪ್ರಪದ್ಯೇ ।
ಯತ್ಪಾದಪದ್ಮಂ ಹಿ ಪಿತಾಮಹಸ್ಯ
ಕಿರೀಟರತ್ನೈರ್ವಿಕಚತ್ವಮೇತಿ ॥ ೪೪ ॥

---

೪೧. ಭವದುಃಖವನ್ನು ಧ್ವಂಸಮಾಡುವುದರಲ್ಲಿ ಏಕಕಾರಣಸ್ವರೂಪನಾಗಿದ್ದರೂ, ಕಾರಣಶೂನ್ಯನಾಗಿರುವವನೂ, ಸಂಶಯಗಳನ್ನು ಭೇದಿಸುವುದಕ್ಕೂ, ಅವುಗಳನ್ನು ಕತ್ತರಿಸಿ ಕೆಡಹುವುದಕ್ಕೂ ಮುಂದಾಳಾಗಿ, ಜ್ಯೋತಿಸ್ಸ್ವರೂಪನೂ, ಜ್ಞಾನಸ್ವರೂಪನೂ, ಸ್ವಪ್ರಕಾಶನೂ, ನಿರ್ಮಾಣಕಾರ್ಯದಲ್ಲಿಯೂ, ಸ್ತೋಮವ್ಯೂಹಾಕಾರನೂ ಆಗಿ ವಿರಾಜಿಸುತ್ತಿರುವ ನಿನಗೆ ನಮಸ್ಕೃತಿಯು !

೪೨. ಭೋ ಸ್ವಾಮಿನ್, ನೃಸಿಂಹಮೂರ್ತೇ! ಧರ್ಮಾರ್ಥಕಾಮಮೋಕ್ಷಗಳಿಗೆ ಆಧಾರಸ್ವರೂಪವಾಗಿರುವ ನಿನ್ನ ಪಾದಕಮಲಗಳಲ್ಲಿ ನನಗೆ ಉತ್ತಮೋತ್ತಮವಾದ ಭಕ್ತಿಯನ್ನನುಗ್ರಹಿಸು. ಶ್ರುತಿಸ್ಮೃತಿಗಳಲ್ಲಿ ಉಕ್ತವಾದ ಕರ್ಮಗಳನ್ನು ಅನುಷ್ಠಿಸಿ ನಿನ್ನನ್ನು ಸೇವೆಗೈಯುತ್ತಿರುವ ಜನರೆಲ್ಲರೂ ದೀನರಾಗಿ ದುಃಖಗಳಿಗೆ ಕಟ್ಟುಬಿದ್ದು ಈ ಭವಸಾಗರದಲ್ಲಿ ತೊಳಲುತ್ತಿರುವರು.

೪೩-೪೪. ಅನಂತಪಾದಗಳುಳ್ಳವನಾಗಿ, ಅನೇಕ ಹಸ್ತನೇತ್ರಗಳೂ, ಅನಂತಕರ್ಣಗಳೂ ಉಳ್ಳವನಾಗಿ, ದಿಶಾಸಮೂಹಗಳೇ ವಸನವಾಗಿರುವವನಾಗಿ (ದಿಗಂಬರನಾಗಿ), ಸೂರ್ಯಚಂದ್ರರೆಂಬ ಪ್ರಕಾಶಮಾನವಾದ ಕರ್ಣಕುಂಡಲಗಳುಳ್ಳವನಾಗಿ, ನಕ್ಷತ್ರಮಾಲೆಯನ್ನೇ ಮನೋಹರ ಹಾರವನ್ನಾಗಿ ತಳೆದು ಕಂಗೊಳಿಸುತ್ತಲಿರುವ ಯಾವ ಮೂರ್ತಿಯ ದಿವ್ಯ ಪಾದಪದ್ಮವು ಪಿತಾಮಹ

ಯದೀಯ ಪಾದಾಬ್ಜಯುಗಾಂತಭೂಮೌ
ಲುಠೇಚ್ಛಿರೋ ಯಸ್ಯ ಹಿ ಪಾಂಚಭೌತಂ ।
ತದ್ದಿವ್ಯಪಾದಂ ಶಿರಸಾ ವಹಂತಿ
ಸುರೇಂದ್ರನಾರ್ಯಃ ಖಲು ತಂ ನಮಾಮಿ ॥ ೪೫ ॥
ತದ್ದಿವ್ಯಸಿಂಹಂ ಹತಪಾಪಸಂಘಂ
ಪಾದಾಶ್ರಿತಾನಾಂ ಕರುಣಾಬ್ಧಿಸಿಂಹಂ ।
ಪಾದಾಬ್ಜಸಂಘಟ್ಟವಿಘಟ್ಟಮಾನ
ಬ್ರಹ್ಮಾಂಡಭಾಂಡಂ ಪ್ರಣಮಾಮಿ ಚಂಡಂ ॥ ೪೬ ॥
ಸಟಾಚ್ಛಟಾಕಂಪನಶೀರ್ಯಮಾಣ
ಘನೌಘವಿದ್ರಾವಿತಪಾಪಸಂಘಂ ।
ಚಂಡಾಟ್ಟಹಾಸಾಂತರಿತಾಬ್ಧಿಶಬ್ದಂ
ತ್ರಿಲೋಕಗರ್ಭಂ ನೃಹರಿಂ ನಮಾಮಿ ॥ ೪೭ ॥
ನಮಸ್ತೇ ನಮಸ್ತೇ ನಮಸ್ತೇಽದ್ಯವಿಷ್ಣೋ
ಪರಿತ್ರಾಹಿ ದೀನಾನುಕಂಪಿನ್ನನಾಥಂ ।

---

ನಾದ ಚತುರಾನನನ ಕಿರೀಟರತ್ನಗಳಿಂದರಳುವುದೋ ಆ ಅದ್ಭುತವೂ, ಭಕ್ತ ವೃಂದಕ್ಕೆ ಇಷ್ಟಮೂರ್ತಿಯೂ ಆದ ದಿವ್ಯ ನೃಸಿಂಹಮೂರ್ತಿಯನ್ನು ಶರಣು ಹೊಂದುತ್ತೇನೆ.

೪೫. ಯಾವ ಮೂರ್ತಿಯ ಪಾದಕಮಲದ್ವಂದ್ವದ ಸಮೀಪಭೂಮಿಯಲ್ಲಿ ಪಾಂಚಭೌತಿಕವಾದ ಶಿರಸ್ಸನ್ನು ಹೊರಳಾಡಿಸಿದ ಮಾನವನ ದಿವ್ಯವಾದಯುಗಳ ವನ್ನು ಸುರನಾರಿಯರು ಶಿರಸಾ ಧಾರಣೆಮಾಡುವರೋ ಆ ದಿವ್ಯನೃಸಿಂಹಮೂರ್ತಿ ಯನ್ನು ನಾನು ನಮಸ್ಕರಿಸುವೆನು.

೪೬. ಪಾಪಸಮೂಹಗಳನ್ನು ಹೊಡೆದಟ್ಟಿ, ಪಾದಾಶ್ರಿತರಾದವರಿಗೆ ಕರುಣಾ ಸಾಗರಸಿಂಹನಾಗಿ, ಪಾದಕಮಲಗಳ ಸಂಘಟ್ಟನವಿಘಟ್ಟನಗಳುಳ್ಳ ಬ್ರಹ್ಮಾಂಡ ಭಾಂಡವುಳ್ಳವನಾಗಿರುವ ಚಂಡನಾದ ಶ್ರೀನೃಸಿಂಹಸ್ವಾಮಿಯನ್ನು ನಮಸ್ಕರಿ ಸುವೆನು.

೪೭. ಯಾವಾತನ ಕೇಶರರಾಶಿಯನ್ನು ಕೊಡಹುವುದರಿಂದಲೇ ಮುಗಿಲು ಗಳಂತಿರುವ ಪಾಪಸಂಘಗಳನ್ನುತೂರಿಬಿಡುವುದೋ, ಪ್ರಚಂಡವಾದ ಯಾವಾತನ ಅಟ್ಟಹಾಸಧ್ವನಿಯು ಸಾಗರಧ್ವನಿಯನ್ನಡಗಿಸಿರುವುದೋ ಅಂತಹ, ಮೂರು ಲೋಕಗಳನ್ನೂ ಗರ್ಭೀಕರಿಸಿಕೊಂಡಿರುವ ಶ್ರೀನರಹರಿಯನ್ನು ನಮಸ್ಕರಿಸುತ್ತೇನೆ.

೪೮. ಎಲೈ ವಿಷ್ಣುವೇ! ಇದೀಗ ನಿನಗೆ ಪುನಃ ಪುನಃ ನಮಸ್ಕಾರಮಾಡು ವೆನು. ಅನಾಥನಾದ ನನ್ನನ್ನು ದೀನದಯಾಪರನಾದ ನೀನು ಕಾಪಾಡಬೇಕು.

ಭವಂತಂ ಸಮಾಸಾದ್ಯ ಮೇ ದೇಹಬಂಧೋ
ಮುರಾರೇ ನ ಸಂಸಾರಕಾರಾಗೃಹೇಽಸ್ತು ॥ ೪೮ ॥
ಹಯಮೇಧಸಹಸ್ರಾಂತೇ ಯಥಾ ತ್ವಾಂ ಚರ್ಮಚಕ್ಷುಷಾ ।
ದಿವ್ಯರೂಪಂ ಪ್ರಪಶ್ಯಾಮಿ ತಥಾನುಕ್ರೋಶಯ ಪ್ರಭೋ ॥ ೪೯ ॥
ಯಥಾ ಚೇಜ್ಯಾಸಹಸ್ರಂ ಮೇ ನಿರ್ವಿಘ್ನಂ ತತ್ಸಮಾಪ್ಯತೇ ।
ಯಜ್ಞೇಶ ತ್ವತ್ಪ್ರಸಾದಾನ್ಮೇ ತಥಾ ಸಾನ್ನಿಧ್ಯಮಸ್ತು ತೇ ॥ ೫೦ ॥
ಕೋಟಯಃ ಪಾಪರಾಶೀನಾಂ ಕ್ಷಯಂ ಯಾಂತಿ ಯಥಾ ಪ್ರಭೋ ।
ಧರ್ಮಾರ್ಥಕಾಮಾ ಹಸ್ತಸ್ಥಾ ನ್ಯೇಷಾಂ ಚಿತ್ರಂ ಸ್ತುವಂತಿ ಯೇ ।
ಮೋಕ್ಷಸ್ಯ ಭಾಜನಂ ವಿಷ್ಣೋ ತೇ ನರಾ ಯೇ ತವಾಶ್ರಯಾಃ ॥ ೫೧ ॥
ಸ್ತುತ್ವೇತ್ಥಂ ದಿವ್ಯಸಿಂಹಂ ತಂ ಭೂಪತಿರ್ಹೃಷ್ಟಮಾನಸಃ ।
ದಂಡಪಾತಪ್ರಣಾಮೇನ ಜಗಾಮ ಧರಣೀಂ ಮುಹುಃ ॥ ೫೨ ॥
ಜೈಮಿನಿರುವಾಚ :—
ಕ್ಷೇತ್ರಂ ತನ್ನರಸಿಂಹಸ್ಯ ಬ್ರಹ್ಮಣಾ ನಿರ್ಮಿತಂ ಪುರಾ ।
ಇಂದ್ರದ್ಯುಮ್ನಾನುಗ್ರಹಾಯ ಸರ್ವಲೋಕಹಿತಾಯ ಚ ॥ ೫೩ ॥

---

ಓ ಮುರಾರಿಯೇ! ನಿನ್ನನ್ನು ಆಶ್ರಯಿಸಿರುವ ನನ್ನ ಈ ದೇಹಬಂಧವು ಸಂಸಾರವೆಂಬ ಕಾರಾಗೃಹದಲ್ಲಿ ವಾಸವನ್ನನುಭವಿಸದಿರಲಿ!

೪೯. ಎಲೈ ಪ್ರಭುವೇ! ನಾನು ಈಗ ಉಪಕ್ರಮಮಾಡಿರುವ ಅಶ್ವಮೇಧಸಹಸ್ರವು ಮುಗಿದ ತರುವಾಯ ಈ ಚರ್ಮಚಕ್ಷುವಿನಿಂದಲೇ ದಿವ್ಯರೂಪನಾದ ನಿನ್ನನ್ನು ಸಂದರ್ಶಿಸುವಂತೆ ಅನುಗ್ರಹಿಸು.

೫೦–೫೧. ಓ ಯಜ್ಞೇಶ್ವರನೇ! ನಾನೆಸಗುವ ಅಶ್ವಮೇಧಸಹಸ್ರವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳುವಂತೆ ನಿನ್ನ ಪ್ರಸಾದದಿಂದ ನಿನ್ನ ಈ ಸನ್ನಿಧಿಯು ನನಗೆ ದೊರಕುವುದಾಗಲಿ. ಯಾರು ನಿನ್ನನ್ನು ಸ್ತುತಿಸುವರೋ ಅವರ ಪಾಪಕೋಟಿಗಳೆಲ್ಲ ನಾಶವಾಗಿ ಅವರಿಗೆ ಧರ್ಮಾರ್ಥಕಾಮಗಳು ಹಸ್ತಗತವಾಗುವುದೆಂಬುದರಲ್ಲಿ ಆಶ್ಚರ್ಯವೇನು? ಎಲೈ ವಿಷ್ಣುವೇ! ನಿನ್ನನ್ನು ಆಶ್ರಯಿಸಿದವರು ಮೋಕ್ಷಕ್ಕೇ ಭಾಜನರಾದವರು.''

೫೨. ಇಂದ್ರದ್ಯುಮ್ನಭೂಪತಿಯು ಈ ಪ್ರಕಾರ ಆ ದಿವ್ಯನೃಸಿಂಹಸ್ವಾಮಿಯನ್ನು ಸ್ತುತಿಸಿ ಸಂತುಷ್ಟಮನಸ್ಕನಾಗಿ ಭೂಮಿಯಲ್ಲಿ ಅನೇಕಬಾರಿ ದಂಡಪ್ರಣಾಮ ಮಾಡಿದನು.

೫೩. ಜೈಮಿನಿಯು ಹೇಳುತ್ತಾನೆ:—ಅಯ್ಯಾ ವಿಪ್ರರೇ! ಬ್ರಹ್ಮನು ಆ ನೃಸಿಂಹಕ್ಷೇತ್ರವನ್ನು ಇಂದ್ರದ್ಯುಮ್ನರಾಜನ ಸಲುವಾಗಿಯೇ ಅನುಗ್ರಹಪೂರ್ವಕವಾಗಿ ಹಿಂದೆಯೇ ನಿರ್ಮಾಣಮಾಡಿದನು.

ಪಶ್ಯಂತಿ ಯೇ ನೃಸಿಂಹಂ ತಂ ಶಂಭುನಾ ಸಹ ಸಂಸ್ಥಿತಂ ।
ನ ದೇಹಬಂಧಂ ತೇ ವಿಪ್ರಾಃ ಪ್ರಾಪ್ನುವಂತಿ ನ ಸಂಶಯಃ ॥ ೫೪ ॥
ಮನಸಾ ವಾಂಛಿತಂ ಯದ್ಯತ್ಪ್ರಾಪ್ನುವಂತಿ ತತೋಽಧಿಕಂ ।
ಸ್ತೋತ್ರೇಣಾನೇನ ಯೇ ದಿವ್ಯಸಿಂಹರೂಪಂ ಸ್ತುವಂತಿ ವೈ ॥ ೫೫ ॥
ಸರ್ವಕಾಮಪ್ರದೋ ದೇವಸ್ತಸ್ಯ ಮುಕ್ತಿಂ ಪ್ರಯಚ್ಛತಿ ।
ಜ್ಯೇಷ್ಠಶುಕ್ಲದ್ವಾದಶೀ ಯಾ ಸ್ವಾತೀನಕ್ಷತ್ರಸಂಯುತಾ ।
ತಸ್ಯಾಂ ಪ್ರತಿಷ್ಠಿತಃ ಕ್ಷೇತ್ರೇ ದಿವ್ಯಸಿಂಹೋ ಮಹರ್ಷಿಣಾ ॥ ೫೬ ॥
ಸುತೇನ ಬ್ರಹ್ಮಣಃ ಸಾಕ್ಷಾತ್ತತ್ರ ಪಶ್ಯಂತಿ ತಂ ಚ ಯೇ ।
ವಾಜಿಮೇಧಸಹಸ್ರಸ್ಯ ಫಲಂ ಸಾಗ್ರಂ ಲಭಂತಿ ತೇ ॥ ೫೭ ॥
ಪಂಚಾಮೃತೈರ್ವಾ ಕ್ಷೀರೇಣ ನಾರಿಕೇಲರಸೇನ ವಾ ॥ ೫೮ ॥
ಸ್ನಾಪಯಂತಿ ನರಾ ಯೇ ವೈ ಅಥವಾ ಗಂಧವಾರಿಣಾ ।
ಪೂಜಯಿತ್ವಾ ಮಹಾಸಿಂಹಮುಪಚಾರೈಃ ಸಪಾಯಸೈಃ ॥ ೫೯ ॥

---

೫೪. ಯಾರು ನೀಲಕಂಠಸ್ವಾಮಿಯೊಡನೆಯೇ ಸುಪ್ರತಿಷ್ಠಿತನಾಗಿರುವ ಶ್ರೀನೃಸಿಂಹಮೂರ್ತಿಯನ್ನು ಸಂದರ್ಶನಮಾಡುವರೋ ಅವರು ಮುಕ್ತಿಯನ್ನು ಪಡೆಯುವರೆಂಬುದರಲ್ಲಿ ಸಂಶಯವಿಲ್ಲವು.

೫೫. ಯಾರು ಶ್ರೀದಿವ್ಯನೃಸಿಂಹಸ್ವಾಮಿಯನ್ನು ಇಂದ್ರದ್ಯುಮ್ನಮಹೀಪಾಲನೆಸಗಿದ ಈ ದಿವ್ಯಸ್ತೋತ್ರದಿಂದ ಸ್ತುತಿಸುವರೋ ಅವರು ಮನಸ್ಸಿನಲ್ಲಿ ಅಪೇಕ್ಷಿಸಿದ್ದಕ್ಕಿಂತಲೂ ಅಧಿಕವಾದ ಫಲಗಳನ್ನು ಪಡೆಯುತ್ತಾರೆ.

೫೬. ಸಮಸ್ತ ಇಷ್ಟಾರ್ಥಗಳನ್ನೂ ದಯಗೈಯುವ ಆ ಸ್ವಾಮಿಯು ಈ ರೀತಿ ಸ್ತುತಿಸಿದ ಮಾನವನಿಗೆ ಮುಕ್ತಿಯನ್ನು ದಯೆಪಾಲಿಸುವನು. ಅಯ್ಯಾ ವಿಪ್ರೋತ್ತಮರೇ! ಸ್ವಾತೀನಕ್ಷತ್ರಸಹಿತವಾದ ಜ್ಯೇಷ್ಠಶುಕ್ಲ ದ್ವಾದಶಿಯ ಶುಭ ದಿನದಲ್ಲಿ ಮಹರ್ಷಿಯಾದ ನಾರದನು ಈ ನೃಸಿಂಹಮೂರ್ತಿಯನ್ನು ಆ ಕ್ಷೇತ್ರದಲ್ಲಿ ಪ್ರತಿಷ್ಠೆಮಾಡಿದನು.

೫೭. ಈ ಪ್ರಕಾರವಾಗಿ ಬ್ರಹ್ಮಮಾನಸಪುತ್ರನಾದ ನಾರದಮುನಿಯಿಂದ ಸಾಕ್ಷಾತ್ತಾಗಿ ಪ್ರತಿಷ್ಠಿತವಾದ ಶ್ರೀನೃಸಿಂಹಮೂರ್ತಿಯನ್ನು ಯಾರು ಸಂದರ್ಶಿಸುವರೋ ಅವರು ಸಂಪೂರ್ಣವಾಗಿ ಅಶ್ವಮೇಧಸಹಸ್ರಯಾಗಗಳ ಫಲವನ್ನು ಪಡೆಯುತ್ತಾರೆ.

೫೮-೫೯. ಪಂಚಾಮೃತದಿಂದಾದರೂ, ಕೇವಲ ಕ್ಷೀರದಿಂದಾದರೂ, ಎಳೆನೀರಿನಿಂದಲೇ ಆದರೂ ಯಾವ ಮಾನವರು ಶ್ರೀದಿವ್ಯನೃಸಿಂಹಸ್ವಾಮಿಯನ್ನು ಅಭಿಷೇಕಮಾಡಿಸುವರೋ, ಅಥವಾ ಗಂಧೋದಕ ಸ್ನಾನವನ್ನಾದರೂ ಮಾಡಿಸುವರೋ, ಪಾಯಸ ನೈವೇದ್ಯಪುರಸ್ಸರವಾಗಿ ಷೋಡಶೋಪಚಾರ

ಜಪಾಕುಸುಮಮಾಲೈಶ್ಚ ಗಂಧಮಾಲ್ಯೈಃ ಸುಶೋಭನೈಃ ।
ಧೂಪೈರ್ದೀಪೈಃ ಸಕರ್ಪೂರೈಸ್ತಾಂಬೂಲೈರತಿಶೋಭನೈಃ ॥ ೬೦ ॥
ಸುಗೀರ್ಭಿಃ ಸ್ತುತಿಪಾಠೈಶ್ಚ ಜಯಶಬ್ದೈಸ್ತಥೋಚ್ಚಕೈಃ ।
ಪ್ರದಕ್ಷಿಣಪ್ರಣಾಮೈಶ್ಚ ದಾನೈರ್ಬ್ರಾಹ್ಮಣತರ್ಪಣೈಃ ।
ಸಂತೋಷ್ಯ ನರಸಿಂಹಂ ತಂ ಬ್ರಹ್ಮಲೋಕಮವಾಪ್ನುಯಾತ್ ॥ ೬೧ ॥
ವೈಶಾಖಸ್ಯ ಚತುರ್ದಶ್ಯಾಂ ಸೌರಿವಾರೇಽನಿಲರ್ಕ್ಷಕೇ ।
ಆದ್ಯಾವತಾರಃ ಸಿಂಹಸ್ಯ ಪ್ರದೋಷಸಮಯೇ ದ್ವಿಜಾಃ ॥ ೬೨ ॥
ತಸ್ಯಾಂ ಸಂಪೂಜ್ಯ ವಿಧಿವನ್ನರಸಿಂಹಂ ಸಮಾಹಿತಃ ।
ಜನ್ಮಕೋಟಿಸಹಸ್ರೈಸ್ತು ಪಾಪರಾಶಿಃ ಸುಸಂಚಿತಃ ।
ದಹ್ಯತೇ ತತ್ಕ್ಷಣಾದೇವ ತೂಲರಾಶಿರಿವಾಗ್ನಿನಾ ॥ ೬೩ ॥
ದೃಷ್ಟ್ವಾ ಸ್ಪೃಷ್ಟ್ವಾ ನಮಸ್ಕೃತ್ವಾ ಪ್ರಣಿಪತ್ಯ ಚ ಭಕ್ತಿತಃ ।
ಸ್ತುತ್ವಾ ವಿಮುಚ್ಯತೇ ಪಾಪೈರ್ನಿರ್ಮೋಕೇನ ಭುಜಂಗವತ್ ॥ ೬೪ ॥

---

ಪೂಜೆಯನ್ನು ಸಮರ್ಪಿಸುವರೋ ಅವರೂ ಸಹ ಅಶ್ವಮೇಧಸಹಸ್ರದ ಫಲಕ್ಕೆ ಸಂಪೂರ್ಣ ಭಾಜನರಾಗುವರು.

೬೦–೬೧. ಶ್ರೀದಿವ್ಯನೃಸಿಂಹದೇವನನ್ನು ದಾಸವಾಳದ ಹೂಗಳಿಂದಲೂ, ಇತರ ಸುಗಂಧಪುಷ್ಪಗಳಿಂದಲೂ, ಮನೋಹರವಾದ ಧೂಪದೀಪಗಳಿಂದಲೂ, ಕರ್ಪೂರಸಹಿತವಾದ ತಾಂಬೂಲಗಳಿಂದಲೂ, ವೇದಪಾಠಗಳಿಂದಲೂ, ಸ್ತುತಿ ಪಾಠಗಳಿಂದಲೂ, ಗಟ್ಟಿಯಾಗಿ ಉಚ್ಚರಿಸುವ ಜಯಜಯ ಧ್ವನಿಗಳಿಂದಲೂ. ಪ್ರದಕ್ಷಿಣ ಪ್ರಣಾಮಗಳಿಂದಲೂ, ದಾನಗಳನ್ನು ಮಾಡಿ ವಿಪ್ರೋತ್ತಮರನ್ನು ಸಂತೋಷಗೊಳಿಸುವುದರಿಂದಲೂ ಸಂತೋಷಗೊಳಿಸಿದ ಮಾನವನು ಬ್ರಹ್ಮ ಲೋಕವನ್ನು ಹೊಂದುತ್ತಾನೆ.

೬೨. ಎಲೈ ಬ್ರಾಹ್ಮಣರೇ! ವೈಶಾಖಮಾಸದ ಚತುರ್ದಶೀ ಶನಿವಾರದ ದಿನ ಅಗ್ನಿ (ಕೃತ್ತಿಕಾ) ನಕ್ಷತ್ರದಲ್ಲಿ ಪ್ರದೋಷಸಮಯದಲ್ಲಿ ಶ್ರೀನೃಸಿಂಹನ ಆದ್ಯಾವತಾರವಾಯಿತು.

೬೩. ಯಾವ ಮಾನವನು ಆಗಿನ ಶ್ರೀದಿವ್ಯನೃಸಿಂಹಮೂರ್ತಿಯನ್ನು ಸಮಾಹಿತಮನಸ್ಕನಾಗಿ ವಿಧಿವತ್ತಾಗಿ ಪೂಜಿಸುವನೋ, ಅವನ ಕೋಟಿಸಹಸ್ರ ಜನ್ಮಗಳಿಂದಲೂ ಕೂಡಿಬಂದಿರುವ ಪಾಪರಾಶಿಯೆಲ್ಲ ಹತ್ತಿಯರಾಶಿಯು ಬೆಂಕಿ ಯಿಂದೆಂತೋ ಅಂತು ತತ್ಕ್ಷಣದಲ್ಲಿಯೇ ಸುಟ್ಟುಹೋಗುತ್ತದೆ.

೬೪. ಮಾನವನು ಶ್ರೀನೃಸಿಂಹಸ್ವಾಮಿಯನ್ನು ದರ್ಶನಮಾಡಿ, ಸ್ಪರ್ಶಿಸಿ ನಮಸ್ಕರಿಸಿ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮಮಾಡಿ ಸ್ತುತಿಸಿದುದಾದರೆ, ಸರ್ಪವು ಪೊರೆಯನ್ನೆಂತೋ ಅಂತು ಪಾಪದ ಪೊರೆಯನ್ನು ತೊರೆಯುತ್ತಾನೆ.

ನ ತಸ್ಯ ವ್ಯಾಧಯಃ ಸಂತಿ ನ ಶೋಕಾ ನಾಧಯಸ್ತಥಾ ।
ಸರ್ವಾನ್ಕಾಮಾನವಾಪ್ನೋತಿ ಹಯಮೇಧಫಲಂ ತಥಾ ॥ ೬೫ ॥
ಸಮೀಪೇ ತಸ್ಯ ಭೋ ವಿಪ್ರಾ ಯಜನಂ ದಾನಮೇವ ಚ ।
ಅನ್ಯಾನಿ ಪುಣ್ಯಕರ್ಮಾಣಿ ಕೃತಾನಿ ಚ ಸಕೃನ್ನರೈಃ ।
ಕೋಟಿಕೋಟಿಗುಣಾನಿ ಸ್ಯುರ್ನರಸಿಂಹಪ್ರಸಾದತಃ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ನಾರದಕೃತ ನೃಸಿಂಹಮೂರ್ತಿಸ್ಥಾಪನವರ್ಣನಂ" ನಾಮ ಷೋಡಶೋಽಧ್ಯಾಯಃ

---

೬೫. ಅಂತಹ ಮಾನವನಿಗೆ ರೋಗಗಳಾಗಲಿ, ದುಃಖಗಳಾಗಲಿ, ಕಷ್ಟಗಳಾಗಲಿ ಇರುವುದಿಲ್ಲವು. ಅವನು ಸಮಸ್ತ ಇಷ್ಟಾರ್ಥಗಳನ್ನು ಪಡೆಯುವನಲ್ಲದೆ ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ.

೬೬. ಅಯ್ಯಾ ವಿಪ್ರರೇ! ಆ ಸ್ವಾಮಿಯ ಸನ್ನಿಧಿಯಲ್ಲಿ ಮಾನವರು ಒಮ್ಮೆಮಾಡಿದ ಯಜ್ಞ, ದಾನ, ಇತರ ಪುಣ್ಯಕರ್ಮಗಳು, ಇವೆಲ್ಲವೂ ಆತನ ಪ್ರಸಾದದಿಂದ ಕೋಟಿಕೋಟಿ ಗುಣಿತಗಳಾಗುತ್ತವೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ನಾರದಕೃತ ನೃಸಿಂಹಮೂರ್ತಿಸ್ಥಾಪನ ವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತದಶೋಽಧ್ಯಾಯಃ

### ಇಂದ್ರದ್ಯುಮ್ನಕೃತ ವಾಜಿಮೇಧಯಜ್ಞಮಹೋತ್ಸವಾರಂಭವೃತ್ತಾಂತವರ್ಣನಂ

ಮುನಯ ಊಚುಃ:—

**ಪ್ರತಿಷ್ಠಿತೇ ನಾರಸಿಂಹೇ ಕ್ಷೇತ್ರೇ ತಸ್ಮಿನ್ನರಾಧಿಪಃ ।**
**ಕಿಂ ಚಕಾರ ಮುನೇ ಬ್ರೂಹಿ ಪರಂ ಕೌತೂಹಲಂ ತು ತತ್ ॥ ೧ ॥**

ಜೈಮಿನಿರುವಾಚ :—

**ಇಂದ್ರಾದೀನ್ಸ್ತ್ರಿದಶಾನ್ಸರ್ವಾನ್ನ್ಯಮಂತ್ರಯತ ಪೂರ್ವತಃ ।**
**ತತಃ ಸ ಮಂತ್ರಯಾಮಾಸ ಋಷೀನ್ವಿಪ್ರಾನ್ಸಹಸ್ರಶಃ ॥ ೨ ॥**
**ಅಧ್ಯೇತೄಂಶ್ಚತುರೋವೇದಾನ್ಸಷಡಂಗಪದಕ್ರಮೈಃ ।**
**ಯಜ್ಞವಿದ್ಯಾಸು ಕುಶಲಾನ್ಮೀಮಾಂಸಪರಿನಿಷ್ಠಿತಾನ್ ॥ ೩ ॥**
**ಸಭಾಷ್ಯಕಲ್ಪಸೂತ್ರೈಸ್ತು ಪರಿನಿಷ್ಠಿತಕರ್ಮಣಃ ।**
**ಅಷ್ಟಾದಶಸು ವಿದ್ಯಾಸು ಕುಶಲಾನ್ಧರ್ಮಕೋವಿದಾನ್ ॥ ೪ ॥**

---

## ಕನ್ನಡದ ಅನುವಾದ

### ಇಂದ್ರದ್ಯುಮ್ನಕೃತ ವಾಜಿಮೇಧಯಜ್ಞಮಹೋತ್ಸವಾರಂಭವೃತ್ತಾಂತವರ್ಣನ

೧. ಮುನಿಗಳು ಕೇಳುತ್ತಾರೆ:— ಎಲೈ ಜೈಮಿನಿಯೇ! ಬ್ರಹ್ಮಮಾನಸಪುತ್ರನಾದ ನಾರದಮಹರ್ಷಿಯು ಆ ಕ್ಷೇತ್ರದಲ್ಲಿ ಶ್ರೀದಿವ್ಯನೃಸಿಂಹಮೂರ್ತಿಯನ್ನು ಪ್ರತಿಷ್ಠಿಸಿದತರುವಾಯ ಏನುಮಾಡಿದನು? ಈ ವಿಷಯವನ್ನು ಕೇಳಲು ನಮಗೆ ಬಹಳ ಕುತೂಹಲವಾಗಿರುವುದು. ದಯವಿಟ್ಟು ಅಪ್ಪಣೆಕೊಡಿಸುವವನಾಗು.''

೨. ಜೈಮಿನಿಯು ಹೇಳುತ್ತಾನೆ:— ಎಲೈ ಮುನಿಗಳಿರಾ! ತರುವಾಯ ಆ ಇಂದ್ರದ್ಯುಮ್ನರಾಜನು ಸಹಸ್ರಾಶ್ವಮೇಧಯಾಗಗಳನ್ನು ಮಾಡಬಯಸಿದವನಾಗಿ ಇಂದ್ರಾದಿ ದೇವತೆಗಳನ್ನೆಲ್ಲ ಕ್ರಮವರಿತು ಆಮಂತ್ರಣಮಾಡಿದನು. ಸಾವಿರಾರು ಋಷಿಗಳನ್ನು ಆಹ್ವಾನಿಸಿದನು.

೩–೫. ಷಡಂಗಸಹಿತವಾಗಿಯೂ, ಪದಕ್ರಮಸಹಿತವಾಗಿಯೂ ನಾಲ್ಕು ವೇದಗಳನ್ನು ಅಧ್ಯಯನಮಾಡಿ, ಯಜ್ಞಮಾಡಿಸುವುದರಲ್ಲಿ ಕುಶಲರಾಗಿ, ಮೀಮಾಂಸಾಶಾಸ್ತ್ರದಲ್ಲಿ ಪಂಡಿತರಾಗಿ, ಭಾಷ್ಯಕಲ್ಪಸೂತ್ರಗಳನ್ನು ಚೆನ್ನಾಗಿ ತಿಳಿದು, ಯಜ್ಞಾದಿಸತ್ಕರ್ಮಗಳಲ್ಲಿ ನಿಷ್ಣಾತರಾಗಿ, ಹದಿನೆಂಟು ವಿದ್ಯೆಗಳಲ್ಲಿಯೂ ಕುಶಲರೂ, ಧರ್ಮಕೋವಿದರೂ, ಸದಾಚಾರವುಳ್ಳವರೂ, ಪರಿಶುದ್ಧರೂ, ಸತ್ಕುಲಪ್ರಸೂತರೂ, ಸತ್ಯವಾದಿಗಳೂ ಆದ ವಿಪ್ರೋತ್ತಮರನ್ನು ಕರೆಯಿಸಿ

ಸದಾಚಾರಾವದಾತಾಂಶ್ಚ ಕುಲೀನಾನ್ಸತ್ಯವಾದಿನಃ ।
ವೈಷ್ಣವಾಂಶ್ಚ ವಿಶೇಷೇಣ ಮಂತ್ರಯಾಮಾಸ ಸಾದರಂ ॥ ೫ ॥
ತ್ರೈಲೋಕ್ಯೇ ಯೇ ಚ ರಾಜಾನಃ ಸಿದ್ಧಾಃ ಸಪ್ತರ್ಷಯೋ ದ್ವಿಜಾಃ ।
ಸಚ್ಛೂದ್ರಾ ವಣಿಜೋ ದ್ವೀಪಪತಯಶ್ಚ ನಿಮಂತ್ರಿತಾಃ ॥ ೬ ॥
ಕ್ರೋಶದ್ವಯಮಿತಾ ವಿಸ್ತಾರಃ ಸಭಾಸೀತ್ತಸ್ಯ ಭೂಪತೇಃ ।
ಪಾಷಾಣಘಟಿತಾ ಸೋಚ್ಚಾ ಸುಧಯಾ ಸಾನುಲೇಪಿತಾ ॥ ೭ ॥
ಕ್ವಚಿದ್ರತ್ನಮಯೀ ಭೂಮಿಃ ಕ್ವಚಿತ್ಕಾಂಚನನಿರ್ಮಿತಾ ।
ಸ್ಫಟಿಕಾ ರಾಜತೀ ನೈಷಾ ಯಥಾಯೋಗ್ಯಂ ಕೃತಸ್ಥಲೀ ॥ ೮ ॥
ಸ್ತಂಭೈ ರತ್ನಮಯೈಃ ಪ್ರೋಚ್ಚೈರ್ದುಕೂಲಪರಿವೇಷ್ಟಿತೈಃ ।
ಚಾರುಚಂದ್ರಾತಪಾಢ್ಯಾ ತು ಗಂಧಮಾಲ್ಯೈಃ ಸಚಾಮರೈಃ ॥ ೯ ॥
ಮುಕ್ತಾದಾಮಾಂತರಸ್ಥೈಶ್ಚ ಚಾರುವಾತಾಯನಾ ಶುಭಾ ।
ಕೃಷ್ಣಾಗುರುಸ್ನೇಹಸಿಕ್ತಾ ಶ್ರೀಗಂಧಸಲಿಲೋಕ್ಷಿತಾ ॥ ೧೦ ॥

---

ದನು. ಇಷ್ಟೆಯಲ್ಲದೆ ಆ ಭೂಪಾಲನು ವೈಷ್ಣವರನ್ನೂ ವಿಶೇಷವಾಗಿ ಆದರ ಪೂರ್ವಕವಾಗಿ ಆಹ್ವಾನಿಸಿದನು.

೬. ಮೂರು ಲೋಕಗಳಲ್ಲಿಯೂ ಯಾವ ಯಾವ ರಾಜರಿರುವರೋ ಅವರನ್ನೂ, ಸಿದ್ಧಪುರುಷರನ್ನೂ, ಗೌತಮಾದಿ ಸಪ್ತರ್ಷಿಗಳನ್ನೂ ಆಹ್ವಾನಿಸಿದನು. ಅಲ್ಲದೆ ಆ ಯಾಗಸಮಾರಂಭಕ್ಕೆ ಸತ್ಕುಲಪ್ರಸೂತರಾದ ಶೂದ್ರರೂ, ವರ್ತಕರೂ, ದ್ವೀಪಗಳೊಡೆಯರೂ ನಿಮಂತ್ರಿತರಾದರು.

೭. ಅಯ್ಯಾ ವಿಪ್ರರೇ! ಆ ಮಹಾರಾಜನ ಯಾಗಸಭಾಮಂಟಪವು ಎರಡು ಕ್ರೋಶಗಳ ವಿಸ್ತಾರವುಳ್ಳುದಾಗಿಯೂ, ಬಂಡೆಗಳನ್ನು ಹಾಸಿ ಎತ್ತರವಾಗಿಯೂ, ಸುಣ್ಣತೊಳಿಸಿ ಶುಭ್ರವಾದುದಾಗಿಯೂ ಇದ್ದಿತು.

೮. ಆ ಸಭಾಂಗಣದಲ್ಲಿನ ಭೂಮಿಯು ಒಂದೆಡೆಯಲ್ಲಿ ರತ್ನಮಯವಾಗಿಯೂ, ಇನ್ನೊಂದೆಡೆಯಲ್ಲಿ ಸುವರ್ಣಮಯವಾಗಿಯೂ, ಕೆಲಕೆಲವೆಡೆಗಳಲ್ಲಿ ಸ್ಫಟಿಕಮಯವೂ, ರಜತಮಯವೂ ಆಗಿ ವಿರಾಜಿಸುತ್ತಿದ್ದಿತು.

೯–೧೦. ರತ್ನಮಯಸ್ತಂಭಗಳಿಂದೊಪ್ಪಿ ಮೇಲೆ ರೇಷ್ಮೆ ಬಟ್ಟೆಗಳ ಹೊದಿಕೆಯುಳ್ಳುದಾಗಿ, ಮನೋಹರವಾದ ಚಂದ್ರಸೂರ್ಯರ ಬೆಳಕುಗಳನ್ನು ಪಸರಿಸುವುದಾಗಿ, ಗಂಧಮಾಲ್ಯಗಳಿಂದಲೂ, ಚಾಮರಗಳಿಂದಲೂ, ಮುತ್ತಿನಮಾಲೆಗಳಲಂಕಾರಗಳಿಂದಲೂ ರಂಜಿಸುವ ಗವಾಕ್ಷಿಗಳಿಂದ ಮಂಗಳಕರವಾಗಿ, ಕೃಷ್ಣಾಗುರುತೈಲದಿಂದ ತೊಯ್ದು ಶ್ರೀಗಂಧಜಲಸೇಚನದಿಂದೊಪ್ಪಿ ಆ ಸಭಾಮಂಟವು ಶೋಭಿಸುತ್ತಿದ್ದಿತು.

ಸರ್ವರ್ತುಕುಸುಮಾಕೀರ್ಣಾ ಪ್ರಾಂತೋಪವನಸಂವೃತಾ ।
ವಾಪ್ಯಃ ಸ್ಫಟಿಕಸೋಪಾನಾಃ ಪದ್ಮಕಲ್ಹಾರಮಂಡಿತಾಃ ॥ ೧೧ ॥
ಚಕ್ರವಾಕೈಃ ಪ್ಲವೈರ್ಹಂಸೈಃ ಸಾರಸೈರ್ಮಧುರಸ್ವನೈಃ ।
ವ್ಯಾಪ್ತಾಂತರಾಃ ಸ್ವಚ್ಛಶೀತಸುಗಂಧಮಧುರಾಂಭಸಃ ॥ ೧೨ ॥
ಪರಿತಃ ಶತಶಸ್ತಾಸ್ಯಾಃ ಸುಖಾವತರಣಾ ದ್ವಿಜಾಃ ।
ಉಪಚ್ಛಾಯಾವಿರಚನಾಃ ಶೋಭಮಾನಾಃ ಸಮಂತತಃ ॥ ೧೩ ॥
ಯಜ್ಞಶಾಲಾ ಮರುತ್ತಸ್ಯ ಯಥಾ ಸಿದ್ಧಾ ದ್ವಿಜೋತ್ತಮಾಃ ।
ತಥೇಂದ್ರದ್ಯುಮ್ನಭೂಪಸ್ಯ ರಚಿತಾ ವಿಶ್ವಕರ್ಮಣಾ ॥ ೧೪ ॥
ಶುಭೇಽಹ್ನಿ ಶುಭನಕ್ಷತ್ರೇ ವಾಸಯಿತ್ವಾ ಸಭಾಸದಃ ।
ರಾಜ್ಞಃ ಸಿಂಹಾಸನಾಸೀನಾನ್ವೃಷ್ಯಾಸೀನಾನೃಷೀನಪಿ ॥ ೧೫ ॥
ಸಸಿದ್ಧಾನ್ಬ್ರಹ್ಮರ್ಷಿಗಣಾನ್ಬಹುಮೂಲ್ಯಕುಥಸ್ಥಿತಾನ್ ।
ದೇವಾನ್ಕಾಂಚನಪೀಠಸ್ಥಾನ್ಯಥಾಯೋಗ್ಯಮಥ ದ್ವಿಜಾನ್ ॥ ೧೬ ॥

---

೧೧. ಅಲ್ಲದೆ ಆ ನೃಪಾಲನ ಯಾಗಸಭಾಮಂಟಪವು, ಎಲ್ಲ ಋತುಗಳಲ್ಲಿಯೂ ಹೂ ಮೊಳೆತು ರಂಜಿಸುವ ತರುಗಳನ್ನೊಳಕೊಂಡ ಉಪವನದಿಂದ ಸುತ್ತುಬಳಸಿದುದಾಗಿದ್ದಿತು. ಆ ಉಪವನದಲ್ಲಿ ಸ್ಫಟಿಕಸೋಪಾನಸಹಿತಗಳಾಗಿ ಕಮಲಕಲ್ಹಾರಪುಷ್ಪಗಳಿಂದ ಕಂಗೊಳಿಸುವ ಕೊಳಗಳೊಪ್ಪಿದ್ದುವು.

೧೨. ಇಂಪಾಗಿ ದನಿಗೈಯುವ ಚಕ್ರವಾಕಗಳಿಂದಲೂ, ಕಾರಂಡವಗಳಿಂದಲೂ, ಹಂಸಸಾರಸ ಪಕ್ಷಿಗಳಿಂದಲೂ ಕಂಗೊಳಿಸುತ್ತಿರುವ ಆ ಕೊಳಗಳಾದರೋ ಶುಭ್ರವೂ, ಶೀತಳವೂ, ಸುಗಂಧಮಧುರವೂ ಆದ ದಿವ್ಯೋದಕದಿಂದ ತುಂಬಿದ್ದುವು.

೧೩. ಎಲೈ ವಿಪ್ರರೇ! ಆ ಕೊಳಗಳ ಸುತ್ತಲೂ ಸ್ನಾನಪಾನಾದಿಗಳಿಗೆ ಸುಖವಾಗಿ ಇಳಿಯಲು ಸಾವಿರಾರು ಸೋಪಾನಘಟ್ಟಗಳು ನಿರ್ಮಿತವಾಗಿದ್ದುವು. ಅವುಗಳ ಸುತ್ತಲೂ ನೆರಳಮಂಟಪಗಳ ರಚನೆಯು ಬಹುವಾಗಿ ಕಂಗೊಳಿಸುತ್ತಿದ್ದಿತು.

೧೪. ಅಯ್ಯಾ ದ್ವಿಜೋತ್ತಮರೇ! ಈ ರೀತಿ ಪೂರ್ವದಲ್ಲಿ ಮರುತ್ತರಾಜನ ಯಾಗಶಾಲೆಯು ಹೇಗೆ ನಿರ್ಮಾಣವಾಗಿದ್ದಿತೋ ಹಾಗೆಯೇ ದೇವಶಿಲ್ಪಿಯಾದ ವಿಶ್ವಕರ್ಮನೆಮಗನು ಇಂದ್ರದ್ಯುಮ್ನರಾಜನ ಯಾಗಶಾಲೆಯನ್ನೂ ನಿರ್ಮಿಸಿದ್ದನು.

೧೫–೧೯. ಬಳಿಕಲಾ ನೃಪಾಲನು ಶುಭ ದಿನ ಶುಭನಕ್ಷತ್ರದಲ್ಲಿ ಸಭಾಸದರನ್ನು ಆ ಸಭಾಮಂಡಪಕ್ಕೆ ಪ್ರವೇಶಮಾಡಿಸಿದನು. ಆತನು ಸಿಂಹಾಸನಾಸೀನರಾದ ರಾಜರನ್ನೂ, ಸುಖಾಸನಗಳಲ್ಲಿ ಮಂಡಿಸಿರುವ ಮಹರ್ಷಿಗಳನ್ನೂ, ಅತ್ಯಮೂಲ್ಯವಾದ ರತ್ನಗಂಬಳಿಗಳಮೇಲೆ ಸುಖಾಸೀನರಾಗಿರುವ ಸಿದ್ಧಸಹಿತರಾದ

ವರಾಸನಸ್ಥಾನಸ್ಥಾಂಶ್ಚ ಯಥಾದೇಶಂ ಸುಖಸ್ಥಿತಾನ್ ।
ಮಧ್ಯೇ ನೃಪಾಣಾಂ ದೇವಾನಾಮೃಷೀಣಾಂ ಚ ಶಚೀಪತಿಂ ॥ ೧೭ ॥
ಸಾಮ್ರಾಜ್ಯಲಕ್ಷಣೇ ಸ್ವಸ್ಯ ರತ್ನಸಿಂಹಾಸನೇ ಸ್ಥಿತಂ ।
ದಿವ್ಯೈರ್ಮಾಲ್ಯೈಸ್ತಥಾ ಗಂಧೈರ್ವಾಸೋಭಿರ್ವಿಷ್ಟರಾದಿಭಿಃ ॥ ೧೮ ॥
ಪುರೋಧಸಾ ಸಮಂ ಪೂರ್ವಮರ್ಚಯಾಮಾಸ ಬುದ್ಧಿಮತ್ ।
ವಿನೀತೋ ದೀನವತ್ತಸ್ಯ ಚಕ್ರೇ ಪೂಜಾಂ ತಥಾ ನೃಪಃ ॥ ೧೯ ॥
ಆಶ್ಚರ್ಯಂ ಮನ್ಯತೇಽಸ್ಯಾಸೌ ತ್ರೈಲೋಕ್ಯೇಶೋಽಪಿ ತದ್ಯಥಾ ।
ತತಃ ಸಿದ್ಧಾನ್ದೇವಮುನೀನರ್ಚಯನ್ನಿಂದ್ರವತ್ತದಾ ॥ ೨೦ ॥
ವಿಸ್ಮಯಂ ಜನಯಾಮಾಸ ಕುಬೇರಸ್ಯಾಪ್ಯಧಿಶ್ರಿಯಃ ।
ತತೋ ದೇವಾನ್ಸಮಾನರ್ಚ ಪ್ರಭೂತಸ್ವಸ್ವಸಂಪದಃ ॥ ೨೧ ॥
ಉಪಚಾರೈರ್ಮಹೀನಾಥಃ ಸಮ್ಯಗವ್ಯಗ್ರಮಾನಸಃ ।
ರಾಜ್ಞಃ ಸಂಪೂಜಯಾಮಾಸ ರಾಜಯೋಗ್ಯೈಃ ಪರಿಚ್ಛದೈಃ ॥ ೨೨ ॥

---

ಬ್ರಹ್ಮರ್ಷಿಗಳನ್ನೂ, ಕಾಂಚನಪೀಠಗಳನ್ನಲಂಕರಿಸಿರುವ ದೇವತೆಗಳನ್ನೂ, ಅವರವರ ಯೋಗ್ಯತೆಗನುಗುಣವಾಗಿ ಆಸನಗಳಲ್ಲಿ ಕುಳಿತಿರುವ ಬ್ರಾಹ್ಮಣರನ್ನೂ, ಆಜ್ಞಾನುಸಾರವಾಗಿ ಉತ್ತಮ ಪೀಠಗಳಲ್ಲಿ ಸುಖವಾಗಿ ಕುಳಿತಿರುವ ಇತರ ವೈಶ್ಯ ಶೂದ್ರಾದಿಗಳನ್ನೂ, ದೊರೆಗಳ, ದೇವತೆಗಳ ಮತ್ತು ದೇವರ್ಷಿಗಳ ನಡುವೆ ಸಾಮ್ರಾಜ್ಯಲಕ್ಷಣಲಕ್ಷಿತವಾದ ದಿವ್ಯ ರತ್ನಸಿಂಹಾಸನವನ್ನು ಮಂಡಿಸಿರುವ ಶಚೀಪತಿಯಾದ ಮಹೇಂದ್ರನನ್ನೂ ಕಂಡವನಾಗಿ, ಮೊದಲಾಗಿ ಆ ಶಚೀಪತಿಯನ್ನು ದಿವ್ಯಪುಷ್ಪಗಳಿಂದಲೂ, ದಿವ್ಯಗಂಧ ದಿವ್ಯವಸ್ತ್ರಗಳಿಂದಲೂ, ಆಸನದಿಂದಲೂ ಪುರೋಹಿತಸಹಿತನಾಗಿ ಬಹು ವಿಜೃಂಭಣೆಯಿಂದಲೂ, ಸಂಪದ್ವಿಶಿಷ್ಟವಾಗಿಯೂ ಬಹು ನಮ್ರತೆಯಿಂದ ದೀನನಾಗಿ ಪೂಜಿಸಿದನು.

೨೦–೨೧. ಆ ಅಗ್ರಪೂಜೆಯನ್ನು ಕಂಡು ಮಹೇಂದ್ರನು ತಾನು ಮೂರು ಲೋಕಗಳ ಒಡೆಯನಾಗಿದ್ದರೂ ಆಶ್ಚರ್ಯಗೊಂಡನು. ಇಂದ್ರನನ್ನೆಂತೋ ಅಂತೆಯೇ ಆ ಇಂದ್ರದ್ಯುಮ್ನರಾಜನು ಸಿದ್ಧರನ್ನೂ, ಇತರ ದೇವತೆಗಳನ್ನೂ, ದೇವಮುನಿಗಳನ್ನೂ ಸತ್ಕರಿಸಿದನು. ಮಹದೈಶ್ವರ್ಯಸಂಪನ್ನನಾದ ಆ ನರನಾಥನು ಈ ರೀತಿಯಾದ ಸತ್ಕಾರಸಂಭ್ರಮದಿಂದ ಧನೇಶ್ವರನಾದ ಕುಬೇರನಿಗೂ ಅಚ್ಚರಿಯನ್ನುಂಟುಮಾಡಿದನು. ತರುವಾಯ ಅವರವರ ಯೋಗ್ಯತೆಗಳಿಗೆ ತಕ್ಕಂತೆ ಎಲ್ಲ ದೇವತೆಗಳನ್ನೂ ಪೂಜಿಸಿದನು.

೨೨. ಆ ಮಹೀನಾಥನು ಯಾವ ವ್ಯಗ್ರತೆಯೂ ಇಲ್ಲದ ಮನಸ್ಸುಳ್ಳವನಾಗಿ ರಾಜಯೋಗ್ಯವಾದ ಉಪಚಾರಗಳಿಂದಲೂ ಛತ್ರಚಾಮರಾದಿಗಳಿಂದಲೂ ಆ ಸಭಾಮಂಟಪದಲ್ಲಿದ್ದ ರಾಜರೆಲ್ಲರನ್ನೂ ಸತ್ಕರಿಸಿದನು.

**ಯಥಾ ತೇ ಮೇನಿರೇ ಭೂಪಾ ಭವಾಮಃ ಸಾಂಪ್ರತಂ ವಯಂ ।**
**ಸತ್ಯಂ ರಾಜ್ಯಂ ಕ್ರಮಾತ್ಪ್ರಾಪ್ತಂ ನೇದೃಶಶ್ಚ ಪರಿಚ್ಛದಃ ॥ ೨೩ ॥**
**ಅನರ್ಚ ವೈಷ್ಣವಾನ್ಭೂಯ ಉಪಹಾರೈಃ ಸ ಮಾನಯನ್ ।**
**ಶಾಂತಾ ಅಪಿ ಯಥಾಚಿತ್ರಂ ಮೇನಿರೇ ವಿಷಯಾಗಮಂ ॥ ೨೪ ॥**
**ತತೋ ವಿಪ್ರಾನ್ಬಾಹುಜಾತಾನ್ವೈಶ್ಯಾನ್ಮುನಿಪುರಸ್ಸರಂ ।**
**ಸಮ್ಯಕ್ಸಂಪೂಜಯಾಮಾಸ ಸತ್ಕೃತ್ವೇದ್ರಿಕ್ತೋ ಮಹೀಪತಿಃ ॥ ೨೫ ॥**
**ಅನ್ಯಾಂಶ್ಚ ಸಚಿವದ್ವಾರಾ ಪೂಜಯಿತ್ವಾ ಸಸಂಭ್ರಮಃ ।**
**ದೃಷ್ಟಃ ಸ ವಿನಯಾನ್ನಮ್ರಃ ಕೃತಾಂಜಲಿಪುಟಸ್ತಥಾ ॥ ೨೬ ॥**
**ಮಹೇಂದ್ರಮುಚ್ಚೈರಾಹೇದಂ ನಾರದೇನ ಪುರೋಧಸಾ ॥ ೨೭ ॥**

ಇಂದ್ರದ್ಯುಮ್ನ ಉವಾಚ :—

**ತವ ಪ್ರಸಾದಾದ್ದೇವೇಶ ಇಚ್ಛಾಮಿ ಪ್ರಸೀದ ಮೇ ।**
**ಕ್ರತುನಾ ಹಯಮೇಧೇನ ಪ್ರಯುಕ್ತ್ಯೇ ಯಜ್ಞಪೂರುಷಂ ॥ ೨೮ ॥**
**ಅನುಜಾನೀಹಿ ಮಾ ದೇವ ಕ್ರತೂನಾಮೀಶ್ವರೋ ಭವಾನ್ ।**
**ತ್ವದಾಜ್ಞಾಪಾಲಕಾಃ ಸರ್ವೇ ತ್ರೈಲೋಕ್ಯೇ ನಿವಸಂತಿ ಯೇ ॥ ೨೯ ॥**

---

೨೩. ಆಗಲಾ ದೊರೆಗಳಾದರೋ, "ಇದೀಗ ನಾವು ರಾಜರಾಗುವೆವು. ನಾವು ಪಾರಂಪರ್ಯಕ್ರಮದಿಂದ ರಾಜ್ಯವನ್ನು ಪಡೆದಿರುವುದು ದಿಟವೇ ಆದರೂ ಈ ಬಗೆಯ ಛತ್ರಚಾಮರಾದಿಗಳನ್ನು ಪಡೆಯಲಿಲ್ಲವು" ಎಂದುಕೊಂಡರು.

೨೪. ಇದಾದಮೇಲೆ ಆ ಭೂಪನು, ಶಾಂತಾತ್ಮರಾದರೂ ಇದು ಬಹಳ ಆಶ್ಚರ್ಯಕರವೆಂದುಕೊಳ್ಳುವಮಟ್ಟಿಗೆ ಅಲ್ಲಿದ್ದ ವೈಷ್ಣವರೆಲ್ಲರನ್ನೂ ಅನೇಕ ಉಪಚಾರಗಳಿಂದ ಪೂಜಿಸಿದನು.

೨೫. ಬಳಿಕ ಇತರ ವಿಪ್ರರನ್ನೂ, ಕ್ಷತ್ರಿಯರನ್ನೂ, ವೈಶ್ಯರನ್ನೂ, ಮುನಿಗಳನ್ನೂ ಸತ್ಕೃತ್ವೇದ್ರಿಕ್ತನಾದ ಆ ಮಹೀಪತಿಯು ಚೆನ್ನಾಗಿ ಸತ್ಕರಿಸಿದನು.

೨೬–೨೭. ಇತರ ಶೂದ್ರಾದಿಗಳನ್ನು ಆತನು ಮಂತ್ರಿಗಳ ಮೂಲಕ ಗೌರವಿಸಿ ಆ ಪೂಜಾಸಂಭ್ರಮದಿಂದ ಸಂತುಷ್ಟಾಂತರಂಗನಾಗಿ ವಿನಯದಿಂದ ಕೈಗಳನ್ನು ಜೋಡಿಸಿಕೊಂಡು ನಾರದಮುನಿಯಿಂದಲೂ, ತನ್ನ ಪುರೋಹಿತನಿಂದಲೂ ಸಹಿತನಾಗಿ ಮಹೇಂದ್ರನನ್ನು ಕುರಿತು ಗಟ್ಟಿಯಾಗಿ ಈ ರೀತಿ ವಿಜ್ಞಾಪಿಸಿಕೊಂಡನು.

೨೮–೨೯. ಇಂದ್ರದ್ಯುಮ್ನನು ಹೇಳುತ್ತಾನೆ:— "ಓ ದೇವೇಶ್ವರನಾದ ಮಹೇಂದ್ರನೇ! ಈಗ ನಾನು ನಿನ್ನ ಪ್ರಸಾದದಿಂದ ಅಶ್ವಮೇಧಯಾಗವನ್ನು ಮಾಡಿ ಯಜ್ಞಪುರುಷನಾದ ಶ್ರೀಮಹಾವಿಷ್ಣುವನ್ನು ತೃಪ್ತಿಗೊಳಿಸಬಯಸಿರುತ್ತೇನೆ. ನೀನು ನನಗೆ ಪ್ರಸನ್ನನಾಗಬೇಕು. ದೇವ! ನೀನು ಸಮಸ್ತಯಜ್ಞ

ಯಾವತ್ಕ್ರತುಸಹಸ್ರಸ್ಯ ಸಂಸ್ಥಾ ಚ ಭವತಿ ಪ್ರಭೋ ।
ತಾವತ್ತ್ವಂ ತ್ರಿದಶೈಸ್ಸಾರ್ಧಂ ಸದೋಮಧ್ಯಗತೋ ವಸ ॥ ೩೦ ॥
ಯುಷ್ಮನ್ನಿಚ್ಛಾಮಿ ದೇವೇಶ ನಾಹಂ ತ್ವತ್ಪದಲಿಪ್ಸಯಾ ।
ಸರ್ವೇಷಾಂ ವೇತ್ಸಿ ದೇವೇಶ ಮನೋವೃತ್ತಿಂ ಸದಾ ಪ್ರಭೋ ॥ ೩೧ ॥
ಯುಷ್ಮಾಕಂ ಪೂರ್ವದೃಷ್ಟೋಽತ್ರ ನಪುಷ್ಮಾನ್ಮಾಧವಃ ಪ್ರಭುಃ ।
ಉಪಾಸನಾಯಾಂ ಸೋಽಯಂ ಚ ವಾಲುಕಾಭಿಸ್ತಿರೋಧಧೇ ॥ ೩೨ ॥
ತಸ್ಯ ಭೂಯಃ ಪ್ರಕಾಶಾರ್ಥಂ ವಾಜಿಮೇಧಸಹಸ್ರಕಂ ।
ಕರಿಷ್ಯೇ ವಚನಾದಿಂದ್ರ ಚತುರಾಸ್ಯಸ್ಯ ಶಾಸನಾತ್ ।
ಪುನಃ ಪ್ರಕಾಶಿತೇ ತಸ್ಮಿನ್ ಶ್ರೇಯೋ ವೋಽಪಿ ಭವಿಷ್ಯತಿ ॥ ೩೩ ॥
ಇತಿ ವಿಜ್ಞಾಪಿತೇ ರಾಜ್ಞಾ ಮಹೇಂದ್ರಪ್ರಮುಖಾಃ ಸುರಾಃ ।
ಅಂತರ್ಧಾನೋತ್ತರಂ ಯಾ ಚ ಶ್ರುತಾ ಪೂರ್ವಂ ಸರಸ್ವತೀ ॥ ೩೪ ॥
ಅಶರೀರಾಂ ಸ್ಮರಂತಸ್ತಾಮಿದಂ ಪ್ರೋಚುಃ ಪ್ರಹರ್ಷಿತಾಃ ।
ಇಂದ್ರದ್ಯುಮ್ನ ಮಹಾತ್ಮಾ ತ್ವಂ ನಿತ್ಯಂ ಸತ್ಯವ್ರತೋ ಭುವಿ ॥ ೩೫ ॥

---

ಗಳಿಗೂ ಒಡೆಯನಾಗಿರುವೆ. ಮೂರುಲೋಕಗಳಲ್ಲಿಯೂ ವಾಸಮಾಡುತ್ತಿರುವ ರಾಜಮಹಾರಾಜರೂ, ಸಕಲ ಪ್ರಜೆಗಳೂ ನಿನ್ನ ಆಜ್ಞಾಪಾಲಕರಾದವರೇ! ಆದುದರಿಂದ ನೀನು ಈಗ ನಾನೆಸಗುವ ಯಾಗಕ್ಕೆ ಅಪ್ಪಣೆಕೊಡಬೇಕು.

೩೦. ಅಶ್ವಮೇಧಸಹಸ್ರವು ಸಮಾಪ್ತವಾಗುವವರೆಗೂ ಪ್ರಭುವಾದ ನೀನು ಈ ದೇವತೆಗಳೊಡಗೂಡಿಯೇ ಈ ಸಭಾಮಧ್ಯದಲ್ಲಿ ಇರುವವನಾಗು.

೩೧. ಓ ದೇವೇಶ್ವರಾ! ನಾನು ನಿನ್ನ ಪದವಿಯನ್ನು ಹೊಂದಬಯಸಿ ಈ ಸಹಸ್ರಾಶ್ವಮೇಧಯಾಗಗಳನ್ನು ಮಾಡುವುದಿಲ್ಲವು. ಪ್ರಭುವೇ! ನೀನು ಎಲ್ಲರ ಮನೋವೃತ್ತಿಯನ್ನೂ ಬಲ್ಲವನಾದುದರಿಂದ ನಾನು ನಿನಗೇನನ್ನೂ ಅರಿಕೆಮಾಡಬೇಕಾಗಿರುವುದಿಲ್ಲವು.

೩೨. ಪೂರ್ವದಲ್ಲಿ ಈ ಕ್ಷೇತ್ರದಲ್ಲಿ ನೆಲಸಿದ್ದ ಪ್ರಭುವಾದ ನೀಲಮಾಧವಸ್ವಾಮಿಯು ಉಪಾಸನೆಯ ವೇಳೆಯಲ್ಲಿ ಸ್ವರ್ಣವಾಲುಕೆಯಿಂದ ಮುಚ್ಚಿ ಅಂತರ್ಧಾನವಾದುದನ್ನು ನೀವೆಲ್ಲರೂ ಕಂಡಿರುವಿರಿ.

೩೩. ಆದುದರಿಂದೆಲೈ ಮಹೇಂದ್ರನೇ! ಮುಂದೆ ಆ ಸ್ವಾಮಿಯು ಈ ಕ್ಷೇತ್ರದಲ್ಲಿಯೇ ಪ್ರತ್ಯಕ್ಷವಾಗಿ ಬೆಳಗಲೋಸುಗ, ನಾನು ಚತುರಾನನ ಆಜ್ಞೆಯಂತೆ ಅಶ್ವಮೇಧಯಾಗವನ್ನು ಮಾಡುತ್ತೇನೆ."

೩೪–೩೫. ಎಲೈ ವಿಪ್ರರೇ! ಇಂದ್ರದ್ಯುಮ್ನರಾಜನಿಂತು ಅರಿಕೆಮಾಡಲು ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ, ಹಿಂದೆ ನೀಲಮಾಧವನು ಅಂತರ್ಧಾನವಾದಮೇಲೆ ಆಕಾಶವಾಣಿಯು ನುಡಿದಿದ್ದ ಮಾತುಗಳನ್ನು ಸ್ಮರಿಸಿ ಪರಮ

ತ್ವಚ್ಚೇಷ್ಟಿತಂ ಪುರಾಸ್ಮಾಭಿರನ್ವಭಾವಿ ಭವಿಷ್ಯಕಂ ।
ಸಹಾಯಾಸ್ತೇ ಭವಿಷ್ಯಾಮಃ ಕಾರ್ಯೇ ತ್ರೈಲೋಕ್ಯಪಾವನೇ ॥ ೩೬ ॥
ಸ್ರಷ್ಟಾ ಸ ಜಗತಾಂ ಯತ್ರ ಉದ್ಯುಕ್ತಃ ಸ್ವಯಮೇವ ಹಿ ।
ಅತ್ರೈವೋವಾಚ ಭಗವಾನಸ್ಮಾಕಮಪಿ ಭೂತಲೇ ॥ ೩೭ ॥
ಪ್ರವಿಶಂಸ್ತದನುಕ್ರೋಶವಶಾದ್ಭೂಯಃ ಪ್ರಕಾಶನಂ ।
ಕರಿಷ್ಯೇ ದಾರವಂ ದೇಹಮಿತ್ಯೇತತ್ಪರಿನಿಶ್ಚಿತಂ ॥ ೩೮ ॥
ನಾತ್ರಾಸ್ಮಾಕಂ ವ್ಯಲೀಕಂ ತು ನೇಂದ್ರಸ್ಯ ಚ ಮಹೀಪತೇ ।
ಅಸ್ಮದ್ದಿಷ್ಟಸಮುದ್ಯೋಗಸ್ತವ ನಃ ಪ್ರೀತಿಕಾರಕಃ ॥ ೩೯ ॥
ಸುಖಂ ಯಜಸ್ವ ರಾಜೇಂದ್ರ ವೈಕುಂಠಂ ಭಕ್ತವತ್ಸಲಂ ।
ಕ್ರತುನಾ ಹಯಮೇಧೇನ ಸಹಸ್ರಪರಿವರ್ತಿನಾ ॥ ೪೦ ॥
ದುರಾರಾಧ್ಯೋ ಹಿ ಭಗವಾನಸ್ಮಾಕಂ ಭಕ್ತವತ್ಸಲಃ ।
ವಯಮಪ್ಯತ್ರ ದೇವತ್ವಂ ತ್ಯಕ್ತ್ವಾ ಭಕ್ತಿಪರಾಯಣಾಃ ॥ ೪೧ ॥

---

ಸಂತುಷ್ಟರಾಗಿ ಆ ದೊರೆಯನ್ನು ಕುರಿತು ಹೇಳಿದರು. "ಎಲೈ ಇಂದ್ರದ್ಯುಮ್ನನೇ! ನೀನು ದಿಟವಾಗಿಯೂ ಈ ಭೂಲೋಕದಲ್ಲಿ ಸತ್ಯವಾದ ವ್ರತವುಳ್ಳವನಾಗಿರುವೆ.

೩೬. ಪೂರ್ವದಲ್ಲಿಯೇ ನೀನು ಮುಂದೆ ಈ ಅಶ್ವಮೇಧಸಹಸ್ರವನ್ನು ಮಾಡುವೆಯೆಂಬ ವಿಷಯವನ್ನು ನಾವು ತಿಳಿದಿದ್ದೆವು. ಆದುದರಿಂದ ಮೂರು ಲೋಕಗಳನ್ನೂ ಪಾವನಗೊಳಿಸುವ ಈ ನಿನ್ನ ಪುಣ್ಯಕಾರ್ಯದಲ್ಲಿ ನಾವೆಲ್ಲರೂ ಸಹಾಯಕರಾಗಿರುತ್ತೇವೆ.

೩೭–೩೮. ಈ ಕಾರ್ಯದಲ್ಲಿ ಜಗತ್ತಿನ ಸೃಷ್ಟಿಕರ್ತನೇ ಸಾಕ್ಷಾತ್ತಾಗಿ ಉದ್ಯುಕ್ತನಾಗಿರುವಾಗ ನಾವು ಉದ್ಯುಕ್ತರಾಗಿರುತ್ತೇವೆಂದು ಹೇಳುವುದೇನು! ಭಗವಂತನೂ ಸಹ ಈ ವಿಷಯದಲ್ಲಿ ನಮಗೆ "ಎಲೈ ದೇವತೆಗಳಿರಾ! ನಾನು ಇಂದ್ರದ್ಯುಮ್ನರಾಜನಲ್ಲಿನ ದಯೆಯಿಂದ ನನ್ನ ದಾರವದೇಹವನ್ನೂ ಭೂಮಂಡಲದಲ್ಲಿ ಪ್ರಕಾಶಗೊಳಿಸುವೆನು. ಇದು ದಿಟವು" ಎಂಬುದಾಗಿ ಅಪ್ಪಣೆಕೊಡಿಸಿರುವನು.

೩೯. ಎಲೈ ಮಹೀಪತಿಯೇ! ಈ ವಿಷಯದಲ್ಲಿ ನಮಗಾಗಲಿ ನಮ್ಮ ಪ್ರಭುವಾದ ಮಹೇಂದ್ರನಿಗಾಗಲಿ ಯಾವ ಸಂದೇಹವೂ ಇರುವುದಿಲ್ಲವು. ನಿನಗೆ ಇಷ್ಟವಾಗಿರುವ ಈ ಪ್ರಯತ್ನವು ನಮಗೆ ಪ್ರಿಯಕರವಾದುದೇ!

೪೦. ರಾಜೇಂದ್ರ! ಭಕ್ತವತ್ಸಲನಾದ ವೈಕುಂಠನನ್ನು ಸಹಸ್ರಾಶ್ವಮೇಧಯಾಗಗಳಿಂದ ಸಂತೋಷವಾಗಿ ತೃಪ್ತಿಗೊಳಿಸು.

೪೧–೪೨. ಭಕ್ತವತ್ಸಲನಾದ ಆ ಪರಮಾತ್ಮನು ದೇವತೆಗಳಾದ ನಮಗೆ

ಆರಾಧಯಾಮಃ ಕ್ಷೇತ್ರೇಽಸ್ಮಿನ್ವಿನೀತಾ ನರರೂಪಿಣಃ ।
ಪ್ರಿಯಂ ಹಿ ಮಾನುಷೇ ಲೋಕೇ ಕರ್ಮ ಸಿಧ್ಯತಿ ನೈ ಕೃತಂ ॥ ೪೨ ॥
ಜೈಮಿನಿರುವಾಚ :—
ಇತ್ಯುಕ್ತೇ ತ್ರಿದಶೈಃ ಸೇಂದ್ರೈಃ ಪರಿತುಷ್ಟಾಂತರಾತ್ಮಭಿಃ ।
ಆರಂಭಾರ್ಥಂ ಕ್ರತೋ ರಾಜಾ ಭಗವಂತಮಪೂಜಯತ್ ॥ ೪೩ ॥
ಉಪಚಾರಸಹಸ್ರೈಸ್ತು ಯಥಾವತ್ಪ್ರತಿಪಾದಿತೈಃ ।
ತತಃ ಪಿತೃಗಣಾನ್ರಾಜಾ ನಿರೂಪ್ಯ ಶ್ರದ್ಧಯಾನ್ವಿತಃ ॥ ೪೪ ॥
ಸದೋಗೃಹಗತಾನ್ವಿಪ್ರಾನ್ಯಾಜ್ಞಿಕಾನ್ಸಮಲಂಕೃತಾನ್ ।
ಕೃತ್ವೇಷ್ಟದೇವಂ ಪುರತೋ ವೈಕುಂಠಂ ಸಾಗ್ನಿಹೋತ್ರಕಂ ॥ ೪೫ ॥
ಆಕಾಂಕ್ಷನ್ಕಲ್ಪಿತಂ ಲಗ್ನಂ ಸಂವೃತ್ತೇ ಸ್ವಸ್ತಿವಾಚನೇ ।
ಉಪಸ್ಥಿತಃ ಸಪತ್ನೀಕಃ ಶುದ್ಧಮಾಂಗಲ್ಯವೇಷಧೃಕ್ ॥ ೪೬ ॥
ಸ್ವಸ್ತಿ ವಾಚ್ಯ ದ್ವಿಜಾನ್ ಶುದ್ಧಾನ್ಪುಣ್ಯಾಹಂ ವೃದ್ಧಿಕರ್ಮ ಚ ।
ತತಃ ಸಂಭೃತಸಂಭಾರೋ ವರಯಾಮಾಸ ಋತ್ವಿಜಃ ॥ ೪೭ ॥

---

ದುರಾರಾಧ್ಯನಾದವನು. ಆದುದರಿಂದ ನಾವು ದೇವತ್ವವನ್ನು ತೊರೆದು, ನರರೂಪಗಳನ್ನು ತಾಳಿ ಭಕ್ತಿಪರಾಯಣರಾಗಿ ವಿನೀತರಾಗಿ ಈ ಕ್ಷೇತ್ರದಲ್ಲಿ ಶ್ರೀಮನ್ನಾರಾಯಣನನ್ನು ಆರಾಧಿಸುತ್ತೇವೆ. ಎಲೈ ಅರಸೇ! ಈ ಮನುಷ್ಯಲೋಕದಲ್ಲಿ ಕರ್ಮಮಾಡುವುದು ಪ್ರಿಯಕರವಾದುದು. ನಾವು ಮಾಡಿದ ಕರ್ಮಕ್ಕೆ ಇಲ್ಲಿ ಸಿದ್ಧಿಯು ದೊರಕುವುದು.''

೪೩–೪೭. ಜೈಮಿನಿಯು ಹೇಳುತ್ತಾನೆ:—'' ಎಲೈ ವಿಪ್ರರೇ! ಮಹೇಂದ್ರಸಹಿತರಾದ ದೇವತೆಗಳೀಪ್ರಕಾರ ಹೇಳಿದ ಬಳಿಕ ಇಂದ್ರದ್ಯುಮ್ನರಾಜನು ಸಂತುಷ್ಟಾಂತರಂಗನಾಗಿ ಅಶ್ವಮೇಧಯಾಗವನ್ನಾರಂಭಿಸಲೋಸುಗ ಭಗವಂತನನ್ನು ಶಾಸ್ತ್ರವಿಹಿತವಾದ ಸಹಸ್ರೋಪಚಾರಗಳಿಂದ ಪೂಜಿಸಿದನು. ತರುವಾಯ ಪಿತೃಗಣಗಳನ್ನು ಪೂಜಿಸಿ ಶ್ರದ್ಧಾಸಮನ್ವಿತನಾಗಿ ಯಜ್ಞಸಭಾಂಗಣದಲ್ಲಿದ್ದ ಯಾಜ್ಞಿಕರಾದ ವಿಪ್ರರನ್ನು ವಸ್ತ್ರಭೂಷಣಾದಿಗಳಿಂದಲಂಕರಿಸಿ, ಇಷ್ಟದೈವವಾದ ಶ್ರೀ ವೈಕುಂಠಮೂರ್ತಿಯನ್ನು ಅಗ್ನಿಹೋತ್ರಪುರಸ್ಸರವಾಗಿ ಮುಂದಿರಿಸಿಕೊಂಡು, ಸ್ವಸ್ತಿವಾಚನವು ನಡೆಯುತ್ತಿರಲು ಆ ರಾಜನು ಪರಿಶುದ್ಧವಾದ ಮಂಗಳವೇಷವುಳ್ಳವನಾಗಿ ಹೆಂಡತಿಯೊಡಗೂಡಿ ಗೊತ್ತುಮಾಡಿದ್ದ ಲಗ್ನವನ್ನು ನಿರೀಕ್ಷಿಸುತ್ತಿದ್ದನು. ತರುವಾಯ ಸ್ನಾನಾಹ್ನಿಕಗಳನ್ನು ಮಾಡಿಕೊಂಡು ಶುದ್ಧರಾಗಿದ್ದ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನೂ, ಪುಣ್ಯಾಹವೃದ್ಧಿಕರ್ಮಗಳನ್ನೂ ಮಾಡಿಸಿ, ಯಜ್ಞಕ್ಕೆ ಬೇಕಾದ ಸಂಭಾರಗಳೆಲ್ಲವನ್ನೂ ಸಿದ್ಧಪಡಿಸಿಕೊಂಡು ಯಜ್ಞಮಾಡಿಸಲು ಋತ್ವಿಜರನ್ನು ವರಣಮಾಡಿದನು.

ವೃತಾಸ್ತೇ ತು ಸಪತ್ನೀಕಂ ದೀಕ್ಷಯಂತೋ ನೃಪೋತ್ತಮಂ ।
ವಿಹೃತ್ಯ ದೀಕ್ಷಣಾಯೇಷ್ವಾನ್ಯಯಜನ್ಸಭ್ಯಚೋದಿತಾಃ ॥ ೪೮ ॥
ಪ್ರಣೀಯ ತಂ ಪ್ರಜ್ವಲಂತಂ ವೇದ್ಯಾಮಾಹವನೀಯಕಂ ।
ತ್ರೈಲೋಕ್ಯಮಂಗಳಾಕಾರಂ ಕಿಂ ಸಾಕ್ಷಾದ್ವೈಷ್ಣವಂ ಮಹಃ ॥ ೪೯ ॥
ಸುಪ್ರೋಕ್ಷಿತಂ ಚಾಭಿಮಂತ್ರ್ಯ ಅನುಜ್ಞಾಪ್ಯ ದಿಗೀಶ್ವರಾನ್ ।
ಮುಮುಚುಸ್ತೇ ಹಯಂ ಮುಖ್ಯಮಂಗೇಷು ಶುಭಲಕ್ಷಣಂ ॥ ೫೦ ॥
ತತಃ ಸ ದೀಕ್ಷಿತೋ ರಾಜಾ ವಾಗ್ಯತೋ ರೌರವೀಂ ತ್ವಚಂ ।
ಅಧಿಷ್ಠಾಯ ಸದೋಮಧ್ಯೇ ಮೃತ್ಯುಂಜಯ ಇವ ಸ್ಥಿತಃ ॥ ೫೧ ॥
ನಿಮಂತ್ರಿತಾನಾಂ ಭುಕ್ತ್ಯರ್ಥಂ ಚಕ್ಷುಷಾ ಸಂದಿದೇಶ ವೈ ।
ಸುರಾಣಾಂ ರತ್ನಪಾತ್ರಾಣಿ ಮಹಾರ್ಘಾಣಿ ನೃಪಾಜ್ಞಯಾ ।
ಸಚಿವಃ ಕಾರಯಾಮಾಸ ಭೋಜನಾಯ ಸಮೃದ್ಧಿಮತ್ ॥ ೫೨ ॥
ಶುದ್ಧಸೌವರ್ಣಪಾತ್ರಾಣಿ ಮುನೀನಾಂ ಚ ಮಹೀಕ್ಷಿತಾಂ ॥ ೫೩ ॥

---

೪೮. ಆ ಋತ್ವಿಜರು ಈ ರೀತಿ ವರಣಮಾಡಲ್ಪಟ್ಟ ಬಳಿಕ ನೃಪೋತ್ತಮನಾದ ಆ ಇಂದ್ರದ್ಯುಮ್ನನನ್ನು ಅಶ್ವಮೇಧಯಾಗಕ್ಕೆ ದೀಕ್ಷಿತನನ್ನಾಗಿಸಲು ಸಭ್ಯರಿಂದ ಪ್ರೇರಿತರಾಗಿ ಪತ್ನೀಸಮೇತನಾದ ಅವನಿಗೆ ದೀಕ್ಷೆಕೊಡಲು ಇಷ್ಟರನ್ನು ನಿಯೋಜಿಸಿದರು.

೪೯-೫೦. ತರುವಾಯ ಯಜನವೇದಿಕೆಯಲ್ಲಿ ಆಹವನೀಯಕನಾದ ಯಜ್ಞೇಶ್ವರನನ್ನು ಪ್ರಣಯನಮಾಡಿ ಅವನು ತ್ರೈಲೋಕ್ಯಮಂಗಳಕರವಾದ ಸಾಕ್ಷಾದ್ವೈಷ್ಣವತೇಜಸ್ಸೋ ಎಂಬಂತೆ ಬೆಳಗುತ್ತಿರಲು, ಸರ್ವಾಂಗಗಳಲ್ಲಿಯೂ ಶುಭಲಕ್ಷಣಗಳುಳ್ಳುದಾದ ಅಶ್ವವನ್ನು ಚೆನ್ನಾಗಿ ಪ್ರೋಕ್ಷಣೆಮಾಡಿ ದಿಗೀಶ್ವರರ ಅಪ್ಪಣೆಯನ್ನು ಪಡೆದು ಹೊರಬಿಟ್ಟರು.

೫೧. ಬಳಿಕ ಯಜ್ಞದೀಕ್ಷಿತನಾದ ಇಂದ್ರದ್ಯುಮ್ನರಾಜನು ವಾಕ್‌ಸಂಯಮನವುಳ್ಳವನಾಗಿ ಕೃಷ್ಣಾಜಿನದ ಆಸನದಮೇಲೆ ಕುಳಿತು ಆ ಯಜ್ಞಸಭಾಮಧ್ಯದಲ್ಲಿ ಸಾಕ್ಷಾತ್ ಮೃತ್ಯುಂಜಯನಂತೆ ಬೆಳಗಿದನು.

೫೨. ಆಗಲಾತನು ಯಜ್ಞಕ್ಕೆ ಆಹ್ವಾನಿತರಾದ ಸಮಸ್ತರಿಗೂ ಭೋಜನ ಮಾಡಿಸಲೋಸುಗ ಕಣ್ಣುಸಂಜ್ಞೆಯಿಂದಲೇ ಮಂತ್ರಿಗಳಿಗೆ ಅಪ್ಪಣೆಮಾಡಿದನು. ಅರಸನ ಅಪ್ಪಣೆಯಂತೆ ಅವರು ದೇವತೆಗಳ ಭೋಜನಾರ್ಥವಾಗಿ ಅಮೂಲ್ಯಗಳಾದ ರತ್ನಪಾತ್ರೆಗಳನ್ನು ಬಹು ವಿಜೃಂಭಣೆಯಿಂದ ಅಣಿಮಾಡಿದರು.

೫೩. ಅಂತೆಯೇ ಮುನಿಗಳಿಗೂ, ಸಾಮಂತ ನರೇಶ್ವರರಿಗೂ ಶುದ್ಧವಾದ ಬಂಗಾರದ ಪಾತ್ರೆಗಳನ್ನು ಸಿದ್ಧಗೊಳಿಸಿದರು.

ದ್ವಿಜಾನಾಂ ಭೋಜನಾರ್ಥಾಯ ನವಾನಿ ಪ್ರತ್ಯಹಂ ದ್ವಿಜಾಃ ।
ಕ್ಷತ್ರಿಯಾಣಾಂ ವಿಶಾಂ ವಿಪ್ರಾ ರಾಜತಾನಿ ಶುಭಾನಿ ಚ ॥ ೫೪ ॥
ಕಾಂಸ್ಯನಿರ್ಮಲಪಾತ್ರಾಣಿ ಶೂದ್ರಾಣಾಂ ಭೋಜನಾಯ ವೈ ।
ಅಹನ್ಯಹನಿ ಪತ್ರಾಣಿ ಭೋಜನಾಂತೇ ದ್ವಿಜೋತ್ತಮಾಃ ॥ ೫೫ ॥
ಆಕಾರೇಷು ಪ್ರಪಾತ್ಯಂತೇ ಪ್ರೋಚ್ಛಿಷ್ಟದಲವಜ್ಜನೈಃ ।
ತತ್ರ ಯಜ್ಞೋತ್ಸವೇ ಯೇ ವೈ ಭೋಜನಾಯ ನಿಮಂತ್ರಿತಾಃ ॥ ೫೬ ॥
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಪ್ರಪೌತ್ರಾಶ್ಚೈವ ಸಂತತಿಃ ।
ನಿತ್ಯಂ ಪಂಚರಸಾನ್ನಾನಿ ಬಹುಮಾನಪುರಸ್ಸರಂ ॥ ೫೭ ॥
ಆಟ್ಟೈತೈರ್ಭೋಜಿತಾ ರಾಜ್ಞ ಇಂದ್ರದ್ಯುಮ್ನಸ್ಯ ಶಾಸನಾತ್ ।
ಕುಟುಂಬವತ್ಸ್ಥಿತಾಸ್ತತ್ರ ಸಂಸ್ಥಾ ಯಾವನ್ಮಹಾಕ್ರತೋಃ ॥ ೫೮ ॥
ಯದ್ದೇಶೀಯಾ ಜನಾಸ್ತೇಷಾಮಧಿಷ್ಠಾತಾ ಚ ತಾನ್ನೃಪಃ ।
ನೃಪಾಣಾಮನುಸಂಧಾತಾ ಇಂದ್ರದ್ಯುಮ್ನಪ್ರಯಾಚಿತಃ ॥ ೫೯ ॥
ನಾರದಃ ಸಮದರ್ಶೀ ತು ಪರೋಪಕೃತಿಲೋಲುಪಃ ।
ಇಂದ್ರಾದೀನಾಂ ಸುರೇಂದ್ರಾಣಾಂ ದೇವರ್ಷೀಣಾಂ ನೃಪೋತ್ತಮಃ॥೬೦॥

---

೫೪. ಅಯ್ಯಾ ದ್ವಿಜರೇ! ಬ್ರಾಹ್ಮಣರಿಗೂ ಅಂತೆಯೇ ಪ್ರತಿದಿನವೂ ನೂತನ ಸ್ವರ್ಣಪಾತ್ರೆಗಳನ್ನೂ ಇತರ ಕ್ಷತ್ರಿಯರಿಗೂ, ವೈಶ್ಯರಿಗೂ ಮಂಗಳಕರವೂ ಶುಭ್ರವೂ ಆದ ಬೆಳ್ಳಿಯ ಪಾತ್ರೆಗಳನ್ನೂ ಅಣಿಗೈದರು.

೫೫–೫೮. ಶೂದ್ರರ ಭೋಜನಕ್ಕಾಗಿ ನಿರ್ಮಲವಾದ ಕಂಚಿನ ತಳಿಗೆಗಳನ್ನು ಹಾಕುತ್ತಿದ್ದರು. ಪ್ರತಿದಿನವೂ ಭೋಜನವಾದ ತರುವಾಯ ಈ ಪಾತ್ರೆಗಳನ್ನೆಲ್ಲ ಎಂಜಲೆಲೆಗಳನ್ನು ಹೇಗೋಹಾಗೆ ಗುಂಡಿಗೆ ಹಾಕುತ್ತಿದ್ದರು. ಆ ಅಶ್ವಮೇಧ ಯಜ್ಞ ಸಮಾರಂಭಕ್ಕೆ ಆಹ್ವಾನಿತರಾಗಿದ್ದವರು ಮಕ್ಕಳು ಮೊಮ್ಮಕ್ಕಳು ಮುಮ್ಮಕ್ಕಳುಗಳೆಲ್ಲರೂ, ಅಲ್ಲದೆ ಅವರ ಸಂತತಿಯವರೂ ಪ್ರತಿನಿತ್ಯವೂ ಇಂದ್ರದ್ಯುಮ್ನರಾಜನ ಅಪ್ಪಣೆಯಂತೆ ಬಹುಮಾನಪೂರ್ವಕವಾಗಿ ಬಹು ಆದರದಿಂದ ಪಂಚಭಕ್ಷ್ಯಪರಮಾನ್ನಭೋಜನದಿಂದ ಊಟಮಾಡಿಸಲ್ಪಡುತ್ತಿದ್ದರು. ಆ ಮಹಾಕ್ರತುವು ನಡೆಯುವಷ್ಟು ದಿನವೂ ಆ ಜನರೆಲ್ಲ ಸಂಸಾರಿಗಳಂತೆ ನಿರಾತಂಕವಾಗಿ ಅಲ್ಲಿಯೇ ನಿಂತರು.

೫೯–೬೧. ಯಾವ ಯಾವ ದೇಶದ ಜನರೋ ಆಯಾಯ ಜನರ ಮೇಲ್ವಿಚಾರಣೆಗಾಗಿ ದೊರೆಯೇ ಮುಂದಾಳುತನವನ್ನು ವಹಿಸಿದ್ದನು. ಇತರರಿಗೆ ಉಪಕಾರಮಾಡುವುದರಲ್ಲಿಯೇ ಲೋಲುಪನಾದ ಸಮದರ್ಶಿ ನಾರದಮುನಿಯು ಇಂದ್ರದ್ಯುಮ್ನರಾಜನಿಂದ ಬೇಡಲ್ಪಟ್ಟು ಯಾಗಕ್ಕೆ ಬಂದಿದ್ದ ರಾಜರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದನು. ಕ್ರತುಸಂಪೂರ್ತಿಗಾಗಿ ಇಂದ್ರಾದಿ

ಸ್ವಯಂ ನರಪತಿಶ್ಚರ್ಯಾಂ ಚಕಾರ ಕ್ರತುಪೂರ್ತಯೇ ।
ಷಡ್ವಿಧಾನ್ಯನ್ನಪಾನಾನಿ ಸಂಸ್ಕೃತಾನಿ ದ್ವಿಧಾ ನರೈಃ ॥ ೬೧ ॥
ದೇವಾನಾಂ ಭೋಜನೇ ತತ್ರ ಮಂತ್ರತಂತ್ರವಿಶಾರದೈಃ ।
ಮರ್ತ್ಯಾನಾಂ ನಲವಿದ್ಯಾಯಾಂ ಕುಶಲೈಃ ಸಂಸ್ಕೃತಾನಿ ವೈ ॥ ೬೨ ॥
ಕ್ಷುತ್ಪಿಪಾಸಾನಭಿಜ್ಞಾ ಹಿ ಸುಧಾಹಾರಾ ದಿವೌಕಸಃ ।
ತೇಷಾಮಪಿ ಅಪೂರ್ವತ್ವಾದಾಶ್ಚರ್ಯಂ ತದ್ಧಿ ಭೋಜನಂ ॥ ೬೩ ॥
ನರಾಣಾಂ ದುರ್ಲಭಂ ಮರ್ತ್ಯ ಇಂದ್ರದ್ಯುಮ್ನಗೃಹೇಽಶನಂ ।
ಇಂದ್ರದ್ಯುಮ್ನಸ್ಯ ಚೇಂದ್ರಸ್ಯ ವಿಶೇಷೋ ಮರ್ತ್ಯವಾಸಿತಾ ॥ ೬೪ ॥
ಅತ್ಯದ್ಭುತಕರಂ ಹ್ಯೇತತ್ಪ್ರತ್ಯಹಂ ಚ ನವಂ ನವಂ ।
ಸಂಮಾನನಾದರಾವೃದ್ಧಿರ್ಭೋಜ್ಯಸ್ಯ ದ್ವಿಜಸತ್ತಮಾಃ ॥ ೬೫ ॥
ಅನ್ಯೋನ್ಯಸ್ಪರ್ಧಯೈವಾತ್ರ ಪ್ರವರ್ಧಂತೇ ಪರಸ್ಪರಂ ।
ಸುಗಂಧಸುಮನೋಮಾಲ್ಯಕಸ್ತೂರ್ಯಾದಿ ಪ್ರಲೇಪನಂ ॥ ೬೬ ॥

---

ಸುರಶ್ರೇಷ್ಠರ ಮತ್ತು ದೇವರ್ಷಿಗಳ ಊಟ ಉಪಚಾರಗಳನ್ನು ಇಂದ್ರದ್ಯುಮ್ನನೇ ನೋಡಿಕೊಳ್ಳುತ್ತಿದ್ದನು. ಆ ಯಜ್ಞಶಾಲೆಯಲ್ಲಿ ಷಡ್ವಿಧಗಳಾದ ಅನ್ನಪಾನಗಳನ್ನು ಅಡಿಗೆಯವರು ಎರಡುಬಗೆಯಾಗಿ ಸಂಸ್ಕರಿಸುತ್ತಿದ್ದರು.

೬೨. ದೇವತೆಗಳ ಭೋಜನಕ್ಕಾಗಿ ಮಂತ್ರತಂತ್ರವಿಶಾರದರಾದ ವಿಪ್ರರು ಅಡಿಗೆಯನ್ನು ಅಣಿಮಾಡುತ್ತಿದ್ದರು. ಇತರ ಮಾನವರಿಗೆಲ್ಲ ನಳಪಾಕನಿಷ್ಣಾತರಾದ ಪಾಚಕರು ಅಡಿಗೆಯನ್ನು ಮಾಡುತ್ತಿದ್ದರು.

೬೩–೬೪. ಅಯ್ಯಾ ವಿಪ್ರರೇ! ದೇವತೆಗಳು ಕೇವಲ ಅಮೃತಭೋಜನರಾದುದರಿಂದ ಹಸಿವು ಬಾಯಾರಿಕೆಗಳನ್ನರಿಯರಷ್ಟೆ! ಅಂತಹವರಿಗೂ ಆ ಯಜನಶಾಲೆಯ ಭೋಜನವು ಅಪೂರ್ವವಾದುದಾಗಿ ಆಶ್ಚರ್ಯವನ್ನುಂಟುಮಾಡುತ್ತಿದ್ದಿತು. ಮಾನವರಿಗಂತೂ ಮಾನುಷಲೋಕದಲ್ಲಿ ಇಂದ್ರದ್ಯುಮ್ನನ ಮನೆಯಲ್ಲಿ ಭೋಜನವೆಂಬುದು ಒಂದು ಅಲಭ್ಯಲಾಭವಾಗಿದ್ದಿತು. ಇಂದ್ರದ್ಯುಮ್ನನಿಗೂ, ಇಂದ್ರನಿಗೂ ಒಂದು ವಿಶೇಷವೆಂದರೆ ಇಂದ್ರದ್ಯುಮ್ನನು ಮರ್ತ್ಯಲೋಕವಾಸಿಯಾಗಿದ್ದುದು ಮಾತ್ರವೇ! ಇನ್ನುಳಿದ ಎಲ್ಲ ವಿಷಯಗಳಲ್ಲಿಯೂ ಅವರಿಬ್ಬರೂ ಒಂದೇ!!

೬೫. ಎಲೈ ದ್ವಿಜೋತ್ತಮರೇ! ಆ ಯಜ್ಞವಾಟಿಕೆಯಲ್ಲಿ ಪ್ರತಿದಿನವೂ ಹೊಸಹೊಸತಾದ ಆದರಗೌರವಗಳಭಿವೃದ್ಧಿ, ಹೊಸಹೊಸ ಭೋಜನವಿತರಣೆಗಳು ಅತ್ಯದ್ಭುತಕರವಾಗಿದ್ದುವು.

೬೬–೭೦. ಸುಗಂಧ, ಸುಪುಷ್ಪಹಾರ, ಕಸ್ತೂರಿಯೇ ಮೊದಲಾದ ಪರಿಮಳ ದ್ರವ್ಯಗಳ ಲೇಪನ, ಬಹುವಿಚಿತ್ರವೂ, ಅತಿಸೂಕ್ಷ್ಮವೂ ಆದ ದುಕೂಲ

ಚಿತ್ರಸೂಕ್ಷ್ಮದುಕೂಲಾನಿ ಸೋಪಧಾನಾಸನಾನಿ ಚ ।
ರತ್ನಪಲ್ಯಂಕಿಕಾ ಶಯ್ಯಾ ರತ್ನದಂಡಪ್ರಕೀರ್ಣಕಂ ॥ ೬೭ ॥
ಜಾತೀಲವಂಗಕರ್ಪೂರೈರ್ನಾಗವಲ್ಲೀದಲಾನಿಚ ।
ಮನೋಹರಾಣಿ ಗೀತಾನಿ ನೃತ್ಯಾನಿ ವಿವಿಧಾನಿ ಚ ॥ ೬೮ ॥
ಭರತಸ್ಯ ಮುನೇಃ ಶಿಕ್ಷಾಪಂಡಿತೈ ರಚಿತಾನಿ ಚ ।
ಸ್ವಸ್ವವಂಶಯಶೋಽಭಿಜ್ಞಾಃ ಶತಶಃ ಸೂತಮಾಗಧಾಃ ॥ ೬೯ ॥
ಏತಾನ್ಯನ್ಯಾನಿ ವಸ್ತೂನಿ ದುರ್ಲಭಾನ್ಯಪಿ ಯಾನಿ ವೈ ।
ತ್ರಿದಶಾಶ್ಚಾಪಿ ಮರ್ತ್ಯಾಶ್ಚಾನ್ವಭುಜ್ಯಂತ ಸುಸಾದರಂ ॥ ೭೦ ॥
ಏಕತೋಽನ್ಯತ್ರ ಚಿತ್ರಾಣಿ ನ ಚ ಹೀನಾನಿ ಕುತ್ರಚಿತ್ ।
ಪಾತಾಲವಾಸಿನಾಂ ಚಾಪಿ ಭೋಜನಂ ವೈ ಸುಧಾಧಿಕಂ ॥ ೭೧ ॥
ಯದ್ಭುಕ್ತ್ವಾ ನಾನುವಾಂಛಂತಿ ಪಾತಾಲಗಮನಂ ಹಿ ತೇ ।
ಪುರಾಣಿ ಯಾನಿ ಪಾತಾಲೇ ರತ್ನೈಘಾಲೋಕಿತಾನಿ ಚ ॥ ೭೨ ॥
ವಿನಾ ಸೂರ್ಯಪ್ರಕಾಶೇನ ತಾದೃಶಾನ್ಯೇವ ಭೂಪತಿಃ ।
ದದೌ ತೇಷಾಂ ನಿವಾಸಾಯ ಯೇಷು ಪಾತಾಲಬುದ್ಧಯಃ ॥ ೭೩ ॥

---

ಗಳು, ತಲೆದಿಂಬುಗಳನ್ನೊಳಗೊಂಡು ರತ್ನದಂಡಗಳಮೇಲೆ ಹರಡಿದ ಸೊಳ್ಳೆಯ ಪರದೆಗಳುಳ್ಳ ರತ್ನಮಂಚಗಳಮೇಲೆ ಹಾಸಿದ ಹಾಸಿಗೆಗಳು, ಜಾಯಿಕಾಯಿ, ಲವಂಗ, ಪಚ್ಚಕರ್ಪೂರಗಳು ಬೆರಸಿದ ಅಡಿಕೆಯ ಪುಡಿಯೊಡಗೂಡಿದ ತಾಂಬೂಲ, ಭರತಶಾಸ್ತ್ರಪಂಡಿತರಿಂದ ರಚಿತವೂ ಮನೋಹರವೂ ಆದ ವಿವಿಧ ಗೀತನೃತ್ಯಗಳು, ತಮ್ಮತಮ್ಮ ಪ್ರಭುಗಳ ವಂಶಗಳ ಕೀರ್ತಿಯನ್ನು ಚೆನ್ನಾಗಿ ತಿಳಿದಿರುವ ನೂರಾರುಮಂದಿ ಸೂತಮಾಗಧರು, ಇವೇ ಮೊದಲಾದ ಇನ್ನೂ ಅನೇಕ ದುರ್ಲಭವಾದ ಯಾವ ಯಾವ ಭೋಗವಸ್ತುಗಳಿರುವುವೋ ಅವುಗಳೆಲ್ಲವೂ ಪರಸ್ಪರ ಸ್ಪರ್ಧೆಗಾಗಿಯೋ ಎಂಬಂತೆ ಆ ಯಜ್ಞಶಾಲೆಯಲ್ಲಿ ಬೆಳೆಯುತ್ತಿದ್ದುವು. ಇವುಗಳನ್ನೆಲ್ಲ ದೇವತೆಗಳೂ ಮಾನವರೂ ಸಹ ಒಂದೇಸಮನಾಗಿ ಅತ್ಯಾದರದಿಂದ ಅನುಭವಿಸುತ್ತಿದ್ದರು.

೭೧. ಪ್ರತಿಯೊಂದೂ ಒಂದಕ್ಕಿಂತ ಮತ್ತೊಂದು ಆಶ್ಚರ್ಯಕರವಾಗಿದ್ದಿತೇ ಹೊರ್ತು ಯಾವುದೂ ಯಾವುದಕ್ಕಿಂತಲೂ ಕಡಮೆಯಾಗಿರಲಿಲ್ಲ. ಕಡೆಗೆ ಪಾತಾಳಲೋಕವಾಸಿಗಳಾದ ನಾಗರಿಗೂ ಸಹ ದೊರೆಯುತ್ತಿದ್ದ ಭೋಜನವು ಅಮೃತಕ್ಕಿಂತಲೂ ಮೇಲಾಗಿದ್ದಿತು.

೭೨–೭೩. ಅವರೆಲ್ಲರೂ ಯಜ್ಞಸಮಾರಂಭದ ದಿವ್ಯಭೋಜನವನ್ನು ಭುಜಿಸಿ ತೃಪ್ತರಾಗಿ ತಮ್ಮ ಸ್ವಂತಲೋಕವಾದ ಪಾತಾಳಕ್ಕೂ ಸಹ ಹೋಗಬಯಸಲಿಲ್ಲ. ಇಂದ್ರದ್ಯುಮ್ನರಾಜನಾದರೋ ಯಾರಾರಿಗೆ ಪಾತಳಲೋಕಕ್ಕೆ ಅನುಗುಣವಾದ

**ಸುಖಾಸೀನಾಶ್ಚ ಕ್ರೀಡಂತೋ ಭುಂಜಾನಾಃ ಶೇರತೇ ಮುದಾ ।**
**ದೇವಾನಾಮಪಿ ನಾನ್ಯತ್ರ ಭೂಮಿಸ್ಪರ್ಶನಮಸ್ತಿ ವೈ ॥ ೭೪ ॥**
**ಇಂದ್ರದ್ಯುಮ್ನಪುರೇ ತತ್ರ ಸ್ವರ್ಗಾದಪಿ ಮನೋಹರೇ ।**
**ಯದೃಚ್ಛಯಾ ಸುಖಕ್ರೀಡಾಸಕ್ತಾ ನೋ ತತ್ಯಜುರ್ಭುವಂ ॥ ೭೫ ॥**
**ಅಭಿಲಾಷೋಪಜಾತಂ ತು ಸುಖಂ ಸ್ವರ್ಗೇ ವದಂತಿ ಹಿ ।**
**ಅನಿಚ್ಛಯಾಪಿ ಭೋ ವಿಪ್ರಾಃ ಸುಖಂ ಸರ್ವತ್ರ ತತ್ರವೈ ॥ ೭೬ ॥**
**ಆಹೃತ್ಯ ಯತ್ನಾನ್ಮನ್ಯಂತೇ ಭೋಜ್ಯಂ ತೇ ಸಾದರಂ ನರಾಃ ।**
**ನ ಯಾಚಿತಃ ಕೋಽಪಿ ಜನಃ ಕುತೋ ವಾ ಸ್ಯಾತ್ಪರಾಙ್ಮುಖಃ ॥ ೭೭ ॥**
**ರಾಜಾಧಿರಾಜವೇಶ್ಮನಿ ಜನಾನಾಂ ಸ್ವಗೃಹೈಃ ಸಮಂ ।**
**ತದಾಸೀತ್ಸ್ವಗೃಹೇ ತೇಷಾಂ ಸ ಸದಾ ಸರ್ವಸಂಭವಃ ॥ ೭೮ ॥**

---

ಬುದ್ಧಿಯಿದ್ದಿತೋ ಅವರೆಲ್ಲರಿಗೂ, ಸೂರ್ಯರಶ್ಮಿಯೇ ಬೀಳದೆ ಕೇವಲ ರತ್ನ ಸಮೂಹಗಳ ಕಾಂತಿಯಿಂದಲೇ ಪ್ರಕಾಶಮಾನವಾಗಿ ಪಾತಾಳಭವನಗಳನ್ನೇ ಅನುಕರಿಸುವ ವಾಸಭವನಗಳನ್ನು ಅಣಿಮಾಡಿಕೊಟ್ಟನು.

೭೪–೭೫. ಆ ಬೀಡಾರಗಳಲ್ಲಿ ಅವರೆಲ್ಲರೂ ಸುಖಾಸೀನರಾಗಿ, ಯಥೇಚ್ಛ ವಾಗಿ ಆಹಾರವಿಹಾರಗಳನ್ನನುಭವಿಸುತ್ತ ಸಂತೋಷವಾಗಿ ಮಲಗಿ ನಿದ್ರಿಸು ತ್ತಿದ್ದರು. ಅಯ್ಯಾ ವಿಪ್ರರೇ! ದೇವತೆಗಳಿಗೆ ಬೇರಾವ ಪ್ರದೇಶಗಳಲ್ಲಿಯೂ ಭೂಸ್ಪರ್ಶನವೇ ಇರುವುದಿಲ್ಲವಷ್ಟೆ! ಆದರೆ, ಸ್ವರ್ಗಕ್ಕಿಂತಲೂ ಮನೋಹರವಾದ ಇಂದ್ರದ್ಯುಮ್ನಪುರದಲ್ಲಿ ಮಾತ್ರ ಅವರು ಆಕಸ್ಮಿಕವಾಗಿ ಸುಖಕ್ರೀಡೆಗಳಲ್ಲಿ ತೊಡಗಿ ಭೂಮಿಯನ್ನು ತೊರೆಯಲೇ ಇಲ್ಲವು.

೭೬. ಸ್ವರ್ಗದಲ್ಲಿ ಸುಖವೆಂಬುದು ಅಭಿಲಾಷೆಗನುಗುಣವಾಗಿಯೇ ಲಭಿಸು ತ್ತದೆಯೆಂದು ಎಲ್ಲರೂ ಹೇಳುತ್ತಾರೆ. ಆದರೆ ಅಲ್ಲಿ ಇಂದ್ರದ್ಯುಮ್ನನ ಯಜ್ಞ ಭೂಮಿಯಲ್ಲಿ ಇಚ್ಛೆಯಿರಲಿ, ಇಲ್ಲದಿರಲಿ ಎತ್ತೆತ್ತಲೂ ಎಲ್ಲರಿಗೂ ಸುಖವೇ ಸುಖ.

೭೭. ಆ ಯಜ್ಞಸಮಾರಂಭದಲ್ಲಿ ಜನರೆಲ್ಲ ಆದರಿಸಿ ಬಲಾತ್ಕರಿಸಿದರೆ ಮಾತ್ರ ಭೋಜನವನ್ನು ಆದರಪೂರ್ವಕವೆಂದು ಭಾವಿಸುತ್ತಿದ್ದರಾಗಲಿ ಮತ್ತೆಬೇರೆಯಲ್ಲ. ಅಲ್ಲಿ ಯಾವ ಜನವೂ ಯಾಚಿಸುತ್ತಿರಲಿಲ್ಲ. ಎಂದಮೇಲೆ ಯಾಚಿಸಿ ಹಿಂತಿರು ಗುತ್ತಿದ್ದ ಜನವಿರಲೇ ಇಲ್ಲವೆಂದು ಬೇರೆ ಹೇಳಬೇಕಾದುದೇನು?

೭೮. ಅಲ್ಲಿಯ ರಾಜಾಧಿರಾಜರ ಭವನಗಳೆಲ್ಲವೂ ಸಾಮಾನ್ಯಜನರ ಮನೆ ಗಳಂತೆಯೇ ಸಾಧಾರಣವಾಗಿಹೋಗಿದ್ದವು. ಸಾಮಾನ್ಯಜನರ ಮನೆಗಳಲ್ಲಿ ಯಾವ ಯಾವ ಪದಾರ್ಥಗಳು ಎಲ್ಲ ಕಾಲಗಳಲ್ಲಿಯೂ ಇರಲಿಲ್ಲವೋ ಅವೆಲ್ಲವೂ ಅವರಿಗೆ ಸಮೃದ್ಧಿಯಾಗಿ ದೊರಕುತ್ತಿದ್ದುವು. ಆ ಭವನಗಳಲ್ಲಿ ದೊರಕದ ವಸ್ತುವೆಂಬುದೇ ಇರಲಿಲ್ಲವು.

ತತ್ರ ಯತ್ಕಾಮನಾತೀತಂ ತದ್ವಸ್ತು ಸುಲಭಂ ಬಹು ।
ಇತ್ಥಂ ಪ್ರವರ್ತಿತೇ ಯಜ್ಞೇ ಯಜ್ಞೇಶ್ವರಪ್ರೀತಯೇ ಮುದಾ ॥ ೭೯ ॥
ಪೃಥಿವೀ ಹೃತಸರ್ವಸ್ವಾ ವಾಜಿಮೇಧಸ್ಯ ಭೂಪತೇಃ ।
ಯಾ ಪೂರ್ವಂ ಸಾಭವದ್ಭೂಯಃ ಸ್ವರ್ಣವೃಷ್ಟಿಸುಭೂಷಿತಾ ॥ ೮೦ ॥
ಇತ್ಥಂ ಪ್ರವೃತ್ತೇ ಲೋಕಾನಾಂ ತತ್ರ ತ್ರೈಲೋಕ್ಯವಾಸಿನಾಂ ।
ದಾನಸಂಮಾನಭೋಜ್ಯಾನಾಂ ವಿಧೌ ವಿಧಿವತೋಽನ್ವಹಂ ॥ ೮೧ ॥
ಅಶ್ವಮೇಧಂ ಪ್ರತಿ ಜನಾ ಜಗುರ್ಗಾಥಾಃ ಪರಸ್ಪರಂ ।
ನೇದೃಗ್ಯಾಗಸ್ಯ ಸಂಭಾರೋ ವಿಧೇಃ ಶಾಸ್ತ್ರಪ್ರಚೋದಿತಃ ॥ ೮೨ ॥
ಇಂದ್ರದ್ಯುಮ್ನಸ್ಯ ರಾಜರ್ಷೇರ್ನ ಭೂತೋ ನ ಭವಿಷ್ಯತಿ ।
ನ ಯಾಚಿತಾರೋಽದಾತಾರೋ ಮಿಥೋ ಯತ್ರ ನಿಮಂತ್ರಿತಾಃ ॥ ೮೩ ॥
ನ ಕಾಮಭಂಗೋ ಯತ್ರಾಸೀದ್ದೇವಾನಾಮಪಿ ಭೋ ದ್ವಿಜಾಃ ।
ಈದೃಕ್ಸಮೃದ್ಧಿಃ ಸ ಕ್ರತುಸ್ಸಂವೃತ್ತೋ ಭೂಪತೇಸ್ತದಾ ॥ ೮೪ ॥

---

೭೯–೮೦. ಎಲೈ ದ್ವಿಜೋತ್ತಮರೇ! ಆ ಯಜ್ಞದಲ್ಲಿ ಬಯಕೆಗೆ ಸಿಲುಕದ ಪದಾರ್ಥಗಳೆಲ್ಲವೂ ಸುಲಭವಾಗಿಯೂ, ಯಥೇಚ್ಛವಾಗಿಯೂ ದೊರಕುತ್ತಿದ್ದುವು. ಈ ಪ್ರಕಾರವಾಗಿ ಭೂಪತಿಯಾದ ಇಂದ್ರದ್ಯುಮ್ನನ ಅಶ್ವಮೇಧಯಾಗವು ಯಜ್ಞೇಶನಾದ ಶ್ರೀಮಹಾವಿಷ್ಣುವಿನ ಪ್ರೀತಿಗಾಗಿ ನಡೆಯುತ್ತಿರಲು, ಪೂರ್ವದಲ್ಲಿ ಸಮಸ್ತವೂ ಅಪಹೃತವಾಗಿ ಬರಿದಾಗಿದ್ದ ಭೂಮಿಯೆಲ್ಲವೂ ಸುವರ್ಣವೃಷ್ಟಿಯಿಂದ ಭೂಷಿತವಾಗಿ ಕಂಗೊಳಿಸಿತು.

೮೧–೮೩. ಇಂತು ಯಜ್ಞವಿಧಾನವನ್ನು ಚೆನ್ನಾಗಿ ಬಲ್ಲವನಾದ ಆ ಮಹಾರಾಜನ ಅಶ್ವಮೇಧಯಾಗವು ನಡೆದು ಸ್ವರ್ಗ ಮರ್ತ್ಯ ಪಾತಾಳಲೋಕವಾಸಿಗಳಾದ ಸಮಸ್ತರಿಗೂ ದಾನಸಂಮಾನಭೋಜನಗಳು ಪ್ರತಿದಿನವೂ ವಿಧಿಪೂರ್ವಕವಾಗಿ ನಡೆಯುತ್ತಿರಲು ಜನರೆಲ್ಲರೂ ಆ ಯಾಗವನ್ನು ಕುರಿತು ಪರಸ್ಪರವಾಗಿ ಗಾಥೆಗಳನ್ನು ಈ ರೀತಿ ಹಾಡತೊಡಗಿದರು :—"ರಾಜರ್ಷಿಯಾದ ಇಂದ್ರದ್ಯುಮ್ನ ನೆಸಗಿದ ಮೀಮಾಂಸಾಶಾಸ್ತ್ರಪ್ರಚೋದಿತವಾದ ವಿಧಾನವನ್ನೊಳಗೊಂಡ ಯಜ್ಞಸಂಭಾರಕ್ಕೆ ಸದೃಶವಾದುದು ಹಿಂದಾವಾಗಲೂ ನಡೆಯಲಿಲ್ಲವಲ್ಲದೆ ಮುಂದೂ ನಡೆಯುವುದಿಲ್ಲವು. ಈ ಯಜ್ಞಮಹೋತ್ಸವಕ್ಕೆ ಆಹ್ವಾನಿತರಾದವರಲ್ಲಿ ಯಾರೂ ಪರಸ್ಪರವಾಗಿ ಯಾಚಕರಾಗಲಿ, ದಾತೃಗಳಲ್ಲದವರಾಗಲಿ ಇಲ್ಲವೇ ಇಲ್ಲವು."

೮೪. ಅಯ್ಯಾ ದ್ವಿಜರೇ! ಆ ಯಜ್ಞದಲ್ಲಿ ದೇವತೆಗಳಿಗೂ ಕಾಮಭಂಗವೆಂಬುದಿರಲೇ ಇಲ್ಲವು. ಇಂದ್ರದ್ಯುಮ್ನಭೂಪತಿಯ ಕ್ರತುರಾಜವಾದ ಆ ಅಶ್ವಮೇಧವು ಇಂತಹ ಸಮೃದ್ಧಿಯುಳ್ಳುದಾಗಿ ನಡೆಯಿತು.

ಅಧಿಶ್ರದ್ಧಃ ಸುಸಂಪನ್ನಃ ಪೂರ್ವಸ್ಮಾದಪರೋಽಭವತ್ ।
ಸ್ಮೃತಿಕಾರಾಃ ಕಲ್ಪಕಾರಾಸ್ತಥಾ ಶಾಸ್ತ್ರಪ್ರಣೇತೃಕಾಃ ॥ ೮೫ ॥
ಯಜ್ಞಾನುಷ್ಠಾನಕುಶಲಾಃ ಸದಾಚಾರಾವತಂಸಕಾಃ ।
ಅಗ್ನ್ಯಾಧಾನಾದ್ಯವಭೃಥಪ್ರಚಾರಮನುಪೂರ್ವಶಃ ॥ ೮೬ ॥
ಕ್ರತುಃ ಸದಸ್ಯಾನುಮತೇ ನೃಪತೇಃ ಪ್ರೀತಯೇ ದ್ವಿಜಾಃ ।
ನ ಮಂತ್ರಾಃ ಸ್ವರತೋ ಹೀನಾಃ ವರ್ಣತೋ ವಾಪಿ ಕರ್ಹಿಚಿತ್ ॥ ೮೭ ॥
ಯೇ ವೈ ವಿಧಿವಿಧಾತಾರಸ್ತೇ ವೈ ಕರ್ಮಪ್ರಚಾರಕಾಃ ।
ಪ್ರಾಯಶ್ಚಿತ್ತನಿಮಿತ್ತೇನ ಪ್ರಾಯಶ್ಚಿತ್ತನಿಬಂಧನಾತ್ ॥ ೮೮ ॥
ಕರ್ಮೋಪಘಾತೋ ನೋ ತತ್ರ ಯೋಗಿನಃ ಕರ್ಮಯೋಗಿನಃ ।
ಯತ್ರ ಸಪ್ತರ್ಷಯೋ ದಿವ್ಯಾಃ ಸದಸ್ಯಾಃ ಕ್ರತುಸಾಕ್ಷಿಣಃ ॥ ೮೯ ॥
ಪ್ರಚಾರಯಂತಿ ಕರ್ಮಾಣಿ ಗುಣದೋಷವಿಭಾಗಿನಃ ।
ಯಾಜ್ಞವಲ್ಕ್ಯದಯಸ್ತೇಽತ್ರ ಮುನಯಸ್ತ್ವೃತ್ವಿಜೋ ವೃತಾಃ ॥ ೯೦ ॥
ಸದೋಗತಾಸ್ತೇ ಮುನಯಃ ಪರಸ್ಪರಕಥಾಂತರೇ ।
ವಾಕೋವಾಕ್ಯಾನಿ ಸೂಕ್ತಾನಿ ಗುಹ್ಯೋಪನಿಷದಾನಿ ಚ ॥ ೯೧ ॥

---

೮೫–೮೭. ಆತನೆಸಗಿದ ಸಹಸ್ರಾಶ್ವಮೇಧಗಳಲ್ಲಿ ಒಂದಕ್ಕಿಂತಲೂ ಮತ್ತೊಂದು ಅಧಿಕಾಧಿಕ ಶ್ರದ್ಧೆಯೊಡಗೂಡಿ, ಸುಸಂಪನ್ನವಾಗಿ ನಡೆಯಿತು. ಸ್ಮೃತಿಕಾರರು, ಕಲ್ಪಕಾರರು, ಶಾಸ್ತ್ರಪ್ರಣೇತೃಗಳು, ಯಜ್ಞವನ್ನು ಅನುಷ್ಠಿಸುವುದರಲ್ಲಿ ಕುಶಲರೂ, ಸದಾಚಾರವೇ ಕಿರೀಟಪ್ರಾಯವಾಗಿ ಉಳ್ಳವರೂ, ಅಗ್ನ್ಯಾಧಾನ ಮೊದಲಾಗಿ ಅವಭೃಥಸ್ನಾನದವರೆಗೂ ವಿಧಾನಗಳನ್ನೆಲ್ಲ ಯಥಾಕ್ರಮವಾಗಿ ನಡೆಯಿಸುವವರೂ ಆದ ಮಹನೀಯರೆಲ್ಲರೂ ಸದಸ್ಯರ ಅನುಮತಿಯನ್ನು ಪಡೆದು ಆ ನೃಪತಿಯ ಪ್ರೀತಿಗಾಗಿ ಸಕಲ ಕರ್ಮಗಳನ್ನೂ ಕ್ರಮವಾಗಿ ನಡೆಯಿಸುತ್ತಿದ್ದರು. ಆ ಯಜ್ಞದಲ್ಲಿ ಮಂತ್ರಗಳು ಎಂದಿಗೂ ಸ್ವರವರ್ಣಹೀನಗಳಾಗಿರಲಿಲ್ಲವು.

೮೮–೯೦. ಯಾರು ಯಜ್ಞವಿಧಿಯನ್ನು ವಿಧಾಯಕವಮಾಡಿದವರೋ ಅವರೇ ಅಲ್ಲಿಯ ಯಜ್ಞಕರ್ಮವನ್ನು ನಡೆಯಿಸುವವರಾಗಿದ್ದರು. ಪ್ರಾಯಶ್ಚಿತ್ತ ನಿಮಿತ್ತದಿಂದಲಾಗಲಿ, ಪ್ರಾಯಶ್ಚಿತ್ತ ನಿಬಂಧನದಿಂದಲಾಗಲಿ ಆ ಯಾಗದಲ್ಲಿ ಕರ್ಮಕ್ಕೆ ಅಡಚಣೆಯಾಗುತ್ತಿರಲಿಲ್ಲವು. ಅಲ್ಲಿದ್ದವರೆಲ್ಲರೂ ಯೋಗಿಗಳು; ಅದರಲ್ಲಿಯೂ ಕರ್ಮಯೋಗಿಗಳು. ಅಲ್ಲಿ ಯಜ್ಞಸಾಕ್ಷಿಗಳಾದ ಸದಸ್ಯರು ದೇವಲೋಕದ ಗೌತಮಾದಿ ಸಪ್ತರ್ಷಿಗಳು. ಅವರು ಗುಣದೋಷಗಳನ್ನು ವಿಭಾಗಮಾಡಿ ಯಾವ ದೋಷಗಳೂ ತಲೆದೋರದಂತೆ ಕರ್ಮಗಳನ್ನು ಆಗ ಮಾಡಿಸುತ್ತಿದ್ದರು. ವರಣಮಾಡಿದ್ದ ಋತ್ವಿಜರಾದರೋ ಯಾಜ್ಞವಲ್ಕ್ಯನೇ ಮೊದಲಾದ ಮುನಿಗಳು.

೯೧–೯೪. ಯಜ್ಞಸಭಾಮಧ್ಯಗತರಾದ ಆ ಮುನಿಗಳಾದರೋ ಪರಸ್ಪರ

ಗಾಥಾಃ ಪೌರಾಣಿಕೀರ್ವಿಪ್ರಾ ವಿಷ್ಣುಭಕ್ತಿಪುರಸ್ಸರಾಃ ।
ಚರಿತಾನಿ ಹರೇಃ ಸರ್ವಕಲ್ಮಷೌಘಹರಾಣಿ ಚ ॥ ೯೨ ॥
ತತ್ರ ಸಂವರ್ತಯಾಮಾಸುಸ್ತೇ ಸಭಾಯಾಂ ಮಹೀಕ್ಷಿತಃ ।
ತಸ್ಯ ಯಜ್ಞೇ ಹವಿಃ ಪ್ರಾಶುಃ ಪ್ರತ್ಯಕ್ಷಂ ವಹ್ನಿಮಧ್ಯಗಾಃ ॥ ೯೩ ॥
ಮುದಿತಾಸ್ತ್ರಿದಶಾ ವಿಪ್ರಾ ಮಹೇಂದ್ರಪ್ರಮುಖಾ ಮಖೇ ।
ಚಿರಪ್ರವಾಸಿನೋ ದೇವಾ ನಾಸ್ಮರಂತಾಮರಾವತಿಂ ॥ ೯೪ ॥
ಅಮೃತಂ ಹಿ ಹವಿಸ್ತೇಷಾಂ ಕಲ್ಪಿತಂ ಬ್ರಹ್ಮಣಾ ಪುರಾ ।
ತತ್ಪ್ರಾಶ್ಯ ಮುದಿತಾ ದೇವಾ ವೀರ್ಯವಂತಾಶ್ಚಿರಾಯುಷಃ ॥ ೯೫ ॥
ಯಾಗಾನುಷ್ಠಾನವಿಷಯಾದನ್ಯತ್ರ ವಿಷಯಾನ್ಬಹೂನ್ ।
ಇಂದ್ರದ್ಯುಮ್ನೇನ ರಚಿತಾನ್ಸಮುಪಾತ್ತಾನುಪಭುಂಜತೇ ॥ ೯೬ ॥
ತತ್ರ ಯೇ ನಾಗರಾಜಾನಃ ಪಾತಾಲತಲವಾಸಿನಃ ।
ತತೋಽಧಿಕಾನ್ಮರ್ತ್ಯಲೋಕೇ ವಿಷಯಾನುಪಭುಂಜತೇ ॥ ೯೭ ॥
ಪಾತಾಲಗಮನಂ ತೇ ವೈ ನೇಹಂತೇ ಮನಸಾ ಧ್ರುವಂ ।
ಇತ್ಥಂ ಪ್ರವರ್ತಿತೋ ಯಜ್ಞಸ್ತ್ರೈಲೋಕ್ಯಪ್ರೀತಿಕಾರಕಃ ॥ ೯೮ ॥

---

ಸಂಭಾಷಣದ ನಡುವೆ, ವಾಕೋವಾಕ್ಯಗಳನ್ನೂ, ವೇದಸೂಕ್ತಗಳನ್ನೂ, ರಹಸ್ಯವಾದ ಉಪನಿಷತ್ತುಗಳನ್ನೂ, ಪುರಾಣಗಾಥೆಗಳನ್ನೂ, ವಿಷ್ಣುಭಕ್ತಿಪುರಸ್ಸರರಾಗಿ, ಸಕಲಕಲ್ಮಷಸಮೂಹಗಳನ್ನೂ ಪರಿಹರಿಸುವ ಶ್ರೀಹರಿಯ ಚರಿತ್ರೆಗಳನ್ನೂ ಆ ಮಹೀಪತಿಯ ಯಜ್ಞಸಭೆಯಲ್ಲಿ ಹೇಳುತ್ತಿದ್ದರು. ಅಯ್ಯಾ ವಿಪ್ರರೇ! ಆ ಯಜ್ಞದಲ್ಲಿ ಮಹೇಂದ್ರನಾದಿಯಾದ ಸಮಸ್ತ ದೇವತೆಗಳೂ ಯಜ್ಞೇಶ್ವರನ ಮಧ್ಯದಲ್ಲಿ ಹೋಮಮಾಡಿದ ಹವಿಸ್ಸುಗಳನ್ನು ಪ್ರತ್ಯಕ್ಷವಾಗಿಯೇ ಸಂತೋಷದಿಂದ ಪ್ರಾಶನಮಾಡುತ್ತಿದ್ದರು. ಅವರು ಭೂಲೋಕಕ್ಕೈತಂದು ಬಹಳಕಾಲವಾದರೂ ಅಮರಾವತಿಯನ್ನು ಸ್ಮರಿಸುತ್ತಲೇ ಇರಲಿಲ್ಲವು.

೯೫. ಎಲೈ ವಿಪ್ರರೇ! ಬ್ರಹ್ಮದೇವನು ಪೂರ್ವದಲ್ಲಿ ದೇವತೆಗಳಿಗಾಗಿ ಅಮೃತವನ್ನು ಹವಿಸ್ಸಾಗಿ ನಿರ್ಮಿಸಿದನಷ್ಟೆ. ಅವರು ಅದನ್ನು ಸವಿದು ಸಂತುಷ್ಟರಾಗಿ ವೀರ್ಯವಂತರೂ, ಚಿರಾಯುಷ್ಯವಂತರೂ ಆದರು.

೯೬. ಅಂತಹರು ಇದೀಗ ಇಂದ್ರದ್ಯುಮ್ನರಾಜನು ಯಜ್ಞಮಂಟಪದಲ್ಲಿಯೇ ಅಲ್ಲದೆ ಬೇರೆಡೆಗಳಲ್ಲಿಯೂ ರಚಿಸಿ ನಿವೇದಿಸಿದ ಸಮಸ್ತ ಭೋಗಭೋಜನಗಳನ್ನೂ ಭುಜಿಸಿದರು.

೯೭–೯೮. ಆ ಯಜ್ಞಕ್ಕೈತಂದಿದ್ದ ಪಾತಾಳವಾಸಿಗಳಾದ ನಾಗರಾಜರೆಲ್ಲರೂ ತಮ್ಮ ಲೋಕದ ಭೋಗಗಳಿಗಿಂತಲೂ ಅಧಿಕಾಧಿಕವಾದ ಭೋಗಗಳನ್ನು ಈ ಮರ್ತ್ಯಲೋಕದಲ್ಲಿ ಉಪಭೋಗಿಸಿದರು. ಅವರು ದಿಟವಾಗಿಯೂ ಈ

ಇಂದ್ರದ್ಯುಮ್ನಸ್ಯ ನೃಪತೇಃ ಕ್ಷೇತ್ರೇಽಸ್ಮಿನ್ಪುರುಷೋತ್ತಮೇ ।
ಜಗದೀಶಪ್ರಸಾದಾಯ ಪಿತಾಮಹನಿದೇಶತಃ ॥ ೯೯ ॥
ಏಕೋನಂ ಕ್ರಮತಃ ಸಂಸ್ಥಾಮವಾಪ ಪೃಥಿವೀಪತಿಃ ।
ಸಹಸ್ರಂ ಹಯಮೇಧಸ್ಯ ಯಥಾವದ್ವಿಧಿಚೋದಿತಂ ॥ ೧೦೦ ॥
ತತಃ ಸಾಹಸ್ರಿಕೇ ಯಜ್ಞೇ ವಾಜಿಮೇಧೇ ಮಹೀಪತಿಃ ।
ದಿನೇ ದಿನೇ ದಿವ್ಯಗತಿರ್ಬಭೂವ ನೃಪತಿಸ್ತದಾ ॥ ೧೦೧ ॥
ಸುತ್ಯಾಯಾಃ ಸಪ್ತದಿವಸಾದ್ಯಾ ರಾತ್ರಿರಭವತ್ಪುರಾ ।
ತಸ್ಯಾಸ್ತುರೀಯಪ್ರಹರೇ ದಧ್ಯೌ ಸ ವಿಷ್ಣುಮವ್ಯಯಂ ॥ ೧೦೨ ॥
ಧ್ಯಾನೇ ತಸ್ಮಿನ್ದದರ್ಶಾಸೌ ಮಹಾಭಾಗ್ಯವಶಾನ್ನೃಪಃ ।
ಪ್ರತ್ಯಕ್ಷಮಿವ ಸ ಶ್ವೇತದ್ವೀಪಂ ಸ್ಫಟಿಕನಿರ್ಮಿತಂ ॥ ೧೦೩ ॥
ಸಮಂತಾತ್ಪರಿವಾರ್ಯೈನಂ ತಿಷ್ಠಂತಂ ಕ್ಷೀರಸಾಗರಂ ।
ಮಹಾಕಲ್ಪದ್ರುಮೈಃ ಪುಷ್ಪಗಂಧಾಮೋದಿದಿಗಂತರೈಃ ॥ ೧೦೪ ॥

---

ಭೋಗಭಾಗ್ಯಗಳಿಂದ ಸಂತೃಪ್ತರಾಗಿ ಪಾತಾಳಗಮನವನ್ನು ಬಯಸಲೇ ಇಲ್ಲವು. ಈ ಪ್ರಕಾರವಾಗಿ ಈ ಪುರುಷೋತ್ತಮಕ್ಷೇತ್ರದಲ್ಲಿ ಪಿತಾಮಹನ ಅಪ್ಪಣೆಯಂತೆ, ಜಗದೀಶ್ವರನಾದ ಶ್ರೀಮಹಾವಿಷ್ಣುವಿನ ಪ್ರಸಾದಕ್ಕಾಗಿ ಇಂದ್ರದ್ಯುಮ್ನರಾಜ ನೆಸಗಿದ ಸಹಸ್ರಾಶ್ವಮೇಧಯಾಗವು ಮೂರು ಲೋಕಕ್ಕೂ ಪ್ರೀತಿಕಾರಕವಾದುದಾಗಿ ಪ್ರವೃತ್ತವಾಯಿತು.

೧೦೦. ಪೃಥಿವೀಪತಿಯಾದ ಇಂದ್ರದ್ಯುಮ್ನನು ಈ ರೀತಿ ಶಾಸ್ತ್ರೋಕ್ತವಾಗಿಯೂ, ಯಥಾವತ್ತಾಗಿಯೂ ಒಂದು ಕಡಮೆಯಾಗಿ ಒಂದು ಸಾವಿರ ಅಶ್ವಮೇಧಯಾಗಗಳನ್ನು ಕ್ರಮವಾಗಿ ಮಾಡಿದನು.

೧೦೧. ತರುವಾಯ ಆ ಮಹೀಪತಿಯು ಸಹಸ್ರತಮಾಶ್ವಮೇಧಯಾಗವನ್ನು ಪ್ರಾರಂಭಮಾಡಲು ದಿನ ದಿನಕ್ಕೂ ದಿವ್ಯಗತಿಯುಳ್ಳವನಾದನು.

೧೦೨. ಸುತ್ಯವಾರಂಭವಾಗಿ ಆರುದಿನಗಳು ಕಳೆದು ಏಳನೆಯ ದಿನದ ರಾತ್ರಿಯ ಮೂರನೆಯ ಪ್ರಹರದಲ್ಲಿ ಆ ದೊರೆಯು ಅವ್ಯಯಮೂರ್ತಿಯಾದ ಶ್ರೀಮಹಾವಿಷ್ಣುವನ್ನು ಧ್ಯಾನಿಸತೊಡಗಿದನು.

೧೦೩. ಧ್ಯಾನದಲ್ಲಿ ಆ ನೃಪಾಲನು ಮಹಾಭಾಗ್ಯವಶದಿಂದ ಸ್ಫಟಿಕನಿರ್ಮಿತವಾದ ಶ್ವೇತದ್ವೀಪವನ್ನು ಕಣ್ಣಿಗೆ ತಟ್ಟಿದಂತೆ ಸಾಕ್ಷಾತ್ಕರಿಸಿದನು.

೧೦೪. ಆ ಶ್ವೇತದ್ವೀಪವಾದರೋ ಸುತ್ತಲೂ ಕ್ಷೀರಸಮುದ್ರದಿಂದ ಸುತ್ತ ಬಳಸಿದುದಾಗಿದ್ದಿತು; ಪುಷ್ಪಗಳ ಪರಿಮಳದಿಂದ ಸುವಾಸಿತಗಳಾದ ದಿಗಂತರಗಳುಳ್ಳ ಮಹಾಕಲ್ಪದ್ರುಮಗಳಿಂದೊಡಗೂಡಿ ದೇದೀಪ್ಯಮಾನವಾಗಿ ಕಂಗೊಳಿಸುತ್ತಿದ್ದಿತು.

ಫಲಪಲ್ಲವವಲ್ಲೀಷು ಬಹಿರಂತಶ್ಚ ಸರ್ವಶಃ ।
ಶಂಖಚಕ್ರಾಂಕಿತೈಃ ಶುಭ್ರೈಃ ಸರ್ವಾಲಂಕಾರಭೂಷಿತಃ ॥ ೧೦೫ ॥
ಮಹಾಮಾಂಜಿಷ್ಠವರ್ಣೈಶ್ಚ ಮೂರ್ತಿಭಿಸ್ತೈರ್ಮುರದ್ವಿಷಃ ।
ತನ್ಮಧ್ಯೇ ಘಟಿತಂ ದಿವ್ಯಮಣಿಭಿರ್ಮಂಟಪೋತ್ತಮಂ ॥ ೧೦೬ ॥
ಮಧ್ಯಸ್ಥಸೂರ್ಯವದ್ಭಾಸಿರತ್ನಸಿಂಹಾಸನೋಜ್ಜ್ವಲಂ ।
ಕ್ಷೀರಾಬ್ಧಿಶೀತಕಲ್ಲೋಲಮಂದವಾತಮನೋಹರಂ ॥ ೧೦೭ ॥
ತನ್ಮಧ್ಯೇ ದದೃಶೇ ದೇವಂ ಶಂಖಚಕ್ರಗದಾಧರಂ ।
ನೀಲಜೀಮೂತಸಂಕಾಶಂ ವನಮಾಲಾವಿಭೂಷಿತಂ ॥ ೧೦೮ ॥
ಸರ್ವಲಾವಣ್ಯಭವನಂ ಸೌಂದರ್ಯಶ್ರೀನಿಕೇತನಂ ।
ನಿರ್ಭರ್ತ್ಸಯಂತಂ ವಪುಷಾ ಪಿನದ್ಧಂ ದಿವ್ಯಭೂಷಣಂ ॥ ೧೦೯ ॥
ದಕ್ಷಪಾರ್ಶ್ವೇ ಸ್ಥಿತಂ ತತ್ರಾನಂತಂ ಧರಣೀಧರಂ ।
ಕೋಟಿಚಂದ್ರಪ್ರತೀಕಾಶಂ ಹಿಮಾದ್ರಿಸದೃಶಪ್ರಭಂ ॥ ೧೧೦ ॥
ಫಣಾಮುಕುಟವಿಸ್ತಾರಚ್ಛತ್ರೀಭೂತಂ ಮನೋಹರಂ ।
ಮಣಿಕುಂಡಲಯುಗ್ಮಾಂಕಂ ಚಾರುನೀಲನಿಚೋಲಕಂ ॥ ೧೧೧ ॥

---

೧೦೫–೧೦೬. ಅಲ್ಲಿಯ ಫಲಗಳಲ್ಲಿಯೂ, ಚಿಗುರುಗಳಲ್ಲಿಯೂ, ತೊಗಟೆಗಳಲ್ಲಿಯೂ ಶಂಖಚಕ್ರಾಂಕಿತವಾಗಿ, ಶುಭ್ರವೂ, ಸರ್ವಾಲಂಕಾರಭೂಷಿತವೂ ಆಗಿ ಅಚ್ಚಗೆಂಪಿನ ಬಣ್ಣವನ್ನೊಳಗೊಂಡ ಶ್ರೀ ಮುರರಿಪುವಿನ ಮೂರ್ತಿಗಳು ವಿರಾಜಿಸುತ್ತಿದ್ದುವು. ಅದರ ಮಧ್ಯದಲ್ಲಿ ದಿವ್ಯಮಣಿಗಳು ಕೆತ್ತಿದ ದಿವ್ಯಮಂಟಪವೊಂದನ್ನು ಕಂಡನು.

೧೦೭. ಆ ದಿವ್ಯಮಂಟಪವು ಗಗನಮಂಡಲಮಧ್ಯಗತನಾದ ದಿನಕರನಂತೆ ಬೆಳಗುತ್ತಿರುವ ರತ್ನಸಿಂಹಾಸನದಿಂದ ಜಾಜ್ವಲ್ಯಮಾನವಾಗಿ, ಕ್ಷೀರಸಾಗರದ ಶೀತಳವಾದ ಅಲೆಗಳ ಮೇಲ್ವಾಯ್ದು ಬರುತ್ತಿದ್ದ ತಂಗಾಳಿಯಿಂದ ಮನೋಹರವಾಗಿದ್ದಿತು.

೧೦೮–೧೦೯. ಆ ಸಿಂಹಾಸನದ ಮಧ್ಯದಲ್ಲಿ ಶಂಖಚಕ್ರಗದಾಧರನಾಗಿ, ನೀಲಮೇಘಶ್ಯಾಮಳಕಾಂತಿಯುತನಾಗಿ, ವನಮಾಲಾಲಂಕೃತನಾಗಿ, ಸಮಸ್ತಲಾವಣ್ಯಕ್ಕೂ ನೆಲೆಮನೆಯಾಗಿ, ಸೌಂದರ್ಯಲಕ್ಷ್ಮಿಯ ನಿಕೇತನವೆನಿಸಿ ದಿವ್ಯಭೂಷಣಭೂಷಿತನಾಗಿ ತನ್ನ ಶರೀರಕಾಂತಿಯಿಂದಲೇ ಭಯಭ್ರಾಂತಿಯನ್ನುಂಟುಮಾಡುತ್ತಿರುವ ಶ್ರೀಮನ್ನಾರಾಯಣಮೂರ್ತಿಯನ್ನು ಆ ದೊರೆಯು ಕಂಡನು.

೧೧೦–೧೧೩. ಆ ಸ್ವಾಮಿಯ ಬಲಭಾಗದಲ್ಲಿ ಕೋಟಿಚಂದ್ರಪ್ರಕಾಶನಾಗಿ, ಹಿಮಾಚಲಕ್ಕೆಣೆಯಾದ ಕಾಂತಿಯುಳ್ಳವನಾಗಿ, ಹೆಡೆಗಳೆಂಬ ಕಿರೀಟದವಿಸ್ತಾರವೇ ಛತ್ರವಾಗುಳ್ಳವನಾಗಿ ಕಂಗೊಳಿಸಿ, ಮಣಿಕುಂಡಲಯುಗಳಗಳ ಗುರುತುಳ್ಳವ

ಹಲಲಾಂಗಲಶಂಖಾಸಿಸ್ಫುರದ್ಬಾಹುಚತುಷ್ಟಯಂ ।
ಹಾರಕೇಯೂರವಲಯಮುದ್ರಿಕಾಭಿರಲಂಕೃತಂ ॥ ೧೧೨ ॥
ಮೇಖಲಾಕಟಿಸೂತ್ರಾಢ್ಯಂ ದಿವ್ಯರತ್ನಪ್ರಸಾಧನಂ ।
ದಿವ್ಯಹಾಲಾಕ್ಷೀಬಮೂರ್ತಿಂ ಚಾರುಹಾಸಂ ಸುನೇತ್ರಕಂ ॥ ೧೧೩ ॥
ದಕ್ಷಪಾರ್ಶ್ವಸ್ಥಿತಾಂ ಚಾಸ್ಯ ಲಕ್ಷ್ಮೀಂ ತಾಂ ಶುಭಲಕ್ಷಣಾಂ ।
ವರಾಭಯಾಬ್ಜಹಸ್ತಾಂ ವೈ ಕುಂಕುಮಾಭಾಂ ಸುಲೋಚನಾಂ ॥ ೧೧೪ ॥
ತ್ರೈಲೋಕ್ಯಯುವತೀವೃಂದದೃಷ್ಟಾಂತಾದ್ಭುತವಿಗ್ರಹಾಂ ।
ದದರ್ಶ ಪದ್ಮಾಸನಗಾಂ ಲಾವಣ್ಯಾಂಬುಧಿಪುತ್ರಿಕಾಂ ॥ ೧೧೫ ॥
ಪಿತಾಮಹಂ ಚ ದದೃಶೇ ಪುರತೋಽಸ್ಯ ಕೃತಾಂಜಲಿಂ ।
ವಾಮಪಾರ್ಶ್ವಸ್ಥಿತಂ ಚಕ್ರಂ ನಾನಾಮಣಿಮಯಂ ವಿಭೋಃ ॥ ೧೧೬ ॥
ಸನಕಾದ್ಯೈರ್ಮುನೀಂದ್ರೈಸ್ತಂ ಸ್ತೂಯಮಾನಂ ಜಗದ್ಗುರುಂ ।
ದೃಷ್ಟ್ವಾ ಸ್ವಪ್ನೇ ಸ ರಾಜಾ ವೈ ಪ್ರಹೃಷ್ಟೋ ದ್ವಿಜಸತ್ತಮಾಃ ॥ ೧೧೭ ॥
ಅದೃಷ್ಟಪೂರ್ವರೂಪಂ ತಂ ಜ್ಯೋತಿರ್ಮಯಮನಂತಕಂ ।
ತುಷ್ಟಾವ ತತ್ರ ಧ್ಯಾನಸ್ಥೋ ಹರ್ಷಗದ್ಗದಯಾ ಗಿರಾ ॥ ೧೧೮ ॥

---

ನಾಗಿ, ಸುಂದರವಾದ ನೀಲವರ್ಣದ ಕವಚವುಳ್ಳವನಾಗಿ ಹಲ, ಲಾಂಗಲ, ಶಂಖ, ಖಡ್ಗಗಳಿಂದ ಹೊಳೆಹೊಳೆಯುತ್ತಿರುವ ಚತುರ್ಬಾಹುಗಳಿಂದೊಪ್ಪಿ, ಹಾರಕೇಯೂರವಲಯಮುದ್ರಿಕೆಗಳಿಂದಲಂಕೃತನಾಗಿ, ಒಡ್ಯಾಣ, ಉಡೆನೂಲುಗಳಿಂದೊಡಗೂಡಿ, ದಿವ್ಯರತ್ನಾಭರಣಭೂಷಿತನಾಗಿ, ದಿವ್ಯಸುರೆಯಿಂದ ಕ್ಷೀಬವಾದ ಮೈಯುಳ್ಳವನೂ ಮನೋಹರ ಮಂದಹಾಸವುಳ್ಳವನೂ, ಸುಂದರನಯನನೂ ಆದ ಧರಣೀಧರನಾದ ಅನಂತನನ್ನು ಕಂಡನು.

೧೧೪-೧೧೫. ಅದೇ ಬಲಪಾರ್ಶ್ವದಲ್ಲಿಯೇ ಶುಭಲಕ್ಷಣಸಂಪನ್ನೆಯಾಗಿ, ವರದಾಭಯಹಸ್ತಕಮಲಗಳಿಂದೊಪ್ಪಿ, ಕುಂಕುಮವರ್ಣೆಯಾಗಿ ಸುಂದರನೇತ್ರೆಯೂ, ಮೂರುಲೋಕದ ಯುವತೀಸಮೂಹಕ್ಕೇ ದೃಷ್ಟಾಂತಪ್ರಾಯವಾದ ಅದ್ಭುತಸೌಂದರ್ಯವುಳ್ಳವಳೂ, ಲಾವಣ್ಯಾಂಬುಧಿಪುತ್ರಿಕೆಯೂ ಆದ ಶ್ರೀಮಹಾಲಕ್ಷ್ಮಿಯನ್ನು ಕಂಡನು.

೧೧೬. ಆ ನೃಪಾಲನು ಅಲ್ಲಿಯೇ ಆ ಸ್ವಾಮಿಯ ಮುಂಗಡೆ ಅಂಜಲಿಬದ್ಧನಾಗಿ ನಿಂತಿರುವ ಪಿತಾಮಹನನ್ನೂ ಕಂಡನು. ಆ ದೇವನ ವಾಮಪಾರ್ಶ್ವದಲ್ಲಿಯಾದರೋ ನಾನಾಮಣಿಮಯವಾದ ಚಕ್ರವು ಕಂಗೊಳಿಸುತ್ತಿದ್ದಿತು.

೧೧೭. ಎಲೈ ದ್ವಿಜೋತ್ತಮರೇ! ಈ ಪ್ರಕಾರವಾಗಿ ಇಂದ್ರದ್ಯುಮ್ನರಾಜನು ಸನಕಸನಂದನಾದಿ ಮುನೀಂದ್ರರಿಂದ ಸಂಸ್ತೂಯಮಾನನಾದ ಆ ಜಗದ್ಗುರುವನ್ನು ಸ್ವಪ್ನದಲ್ಲಿ ಸಂದರ್ಶಿಸಿ ಸಂತೋಷಗೊಂಡನು.

೧೧೮. ತರುವಾಯ ಹಿಂದಾವಾಗಲೂ ನೋಡಿಲ್ಲದ ದಿವ್ಯರೂಪವನ್ನೊಳ

ಇಂದ್ರದ್ಯುಮ್ನ ಉವಾಚ:—
ನಮಸ್ತೇ ಜಗದಾಧಾರ ಜಗದಾತ್ಮನ್ನಮೋಽಸ್ತು ತೇ ।
ಕೈವಲ್ಯ ತ್ರಿಗುಣಾತೀತ ಗುಣಾಂಜನ ನಮೋಽಸ್ತು ತೇ ॥ ೧೧೯ ॥
ಸುಶುದ್ಧನಿರ್ಮಲಜ್ಞಾನಸ್ವರೂಪಾಯ ನಮೋಽಸ್ತು ತೇ ।
ಶಬ್ದಬ್ರಹ್ಮಾಭಿಧಾನಾಯ ಜಗದ್ರೂಪಾಯ ತೇ ನಮಃ ॥ ೧೨೦ ॥
ಸಂಸಾರಪತಿತಶ್ರಾಂತದುಃಖಧ್ವಂಸ ನಮೋಽಸ್ತು ತೇ ।
ದುರ್ಭೇದ್ಯಹೃದಯಗ್ರಂಥಿಭೇದಕಾಯ ನಮೋಽಸ್ತು ತೇ ॥ ೧೨೧ ॥
ದ್ವಿಸಪ್ತಭುವನಾಗಾರ ಮೂಲಸ್ತಂಭಾಯ ತೇ ನಮಃ ।
ಬ್ರಹ್ಮಾಂಡಕೋಟಿಘಟನಾಶಿಲ್ಪಿನೇ ಚಕ್ರಿಣೇ ನಮಃ ॥ ೧೨೨ ॥
ಕರುಣಾಮೃತಪಾಥೋಧಿಸುಧಾಧಾಮ್ನೇ ನಮೋ ನಮಃ ।
ದೀನೋದ್ಧಾರೈಕಗುಹ್ಯಾಯ ಕೃಪಾಪಾಥೋಧಯೇ ನಮಃ ॥ ೧೨೩ ॥

---

ಗೊಂಡು ಜ್ಯೋತಿರ್ಮಯನೂ, ಅನಂತರೂಪನೂ ಆದ ಸ್ವಾಮಿಯನ್ನು ಕಂಡು ಆ ದೊರೆಯು ಧ್ಯಾನಸ್ಥಿತನಾಗಿಯೇ ಸಂತೋಷದಿಂದ ಗದ್ಗದವಾದ ಮಾತುಗಳಿಂದ ಈ ರೀತಿ ಸ್ತುತಿಸಿದನು :—

೧೧೯. ಇಂದ್ರದ್ಯುಮ್ನನು ಹೇಳುತ್ತಾನೆ:—"ಜಗತ್ತಿಗೆ ಆಧಾರನಾಗಿರುವ ಓ ನಾರಾಯಣಮೂರ್ತಿಯೇ! ನಿನಗೆ ನಮಸ್ಕಾರವು. ಎಲೈ ಜಗತ್ತಿಗೆ ಆತ್ಮವೇ ಆಗಿರುವ ಸ್ವಾಮಿಯೇ! ನಿನಗೆ ಮತ್ತಿದೋ ನಮಸ್ಕಾರವು! ಮೋಕ್ಷಪ್ರದಾಯಕನೂ, ಸತ್ತ್ವರಜಸ್ತಮೋಗುಣಗಳಿಗೆ ಅತೀತನೂ, ಗುಣಾಂಜನನೂ ಆದ ನಿನಗೆ ನಮಸ್ಕಾರವು.

೧೨೦. ಬಹಳ ಪರಿಶುದ್ಧವೂ, ನಿರ್ಮಲವೂ ಆದ ಜ್ಞಾನಸ್ವರೂಪನಾಗಿರುವ ನಿನಗೆ ನಮಸ್ಕಾರವು! ಶಬ್ದಬ್ರಹ್ಮನೆಂದು ಹೆಸರುಳ್ಳವನಾಗಿ ಜಗತ್ತಿನ ಸ್ವರೂಪವೇ ಆಗಿರುವ ಓ ಪರಮಾತ್ಮ! ನಿನಗಿದೋ ನಮಸ್ಕಾರವು!!

೧೨೧. ಸಂಸಾರಸಾಗರದಲ್ಲಿ ಬಿದ್ದು ಬಳಲಿರುವವರಿಗೆ ವಿಶ್ರಾಂತಿಯನ್ನು ದಯೆಗೈಯುವವನೂ, ಸಮಸ್ತ ದುಃಖಗಳನ್ನೂ ಧ್ವಂಸಗೊಳಿಸುವವನೂ ಆದ ನಿನಗೆ ನಮಸ್ಕಾರವು! ಭೇದಿಸಲಸದಳವಾದ ಹೃದಯಗ್ರಂಥಿಯನ್ನು ಭೇದಿಸಿ ಮೋಕ್ಷವನ್ನು ದೊರೆಯಿಸುವ ಎಲೈ ಮಹಾವಿಷ್ಣುವೇ! ನಿನಗಿದೋ ನತಿಯು!!

೧೨೨. ಈರೇಳು ಲೋಕಗಳೆಂಬ ಭವನಕ್ಕೆ ಮೂಲಸ್ತಂಭಸ್ವರೂಪನಾದ ನಿನಗೆ ನಮಸ್ಕಾರವು! ಕೋಟ್ಯಂತರ ಬ್ರಹ್ಮಾಂಡಗಳನ್ನು ನಿರ್ಮಾಣಮಾಡುವ ಶಿಲ್ಪಿಯೂ, ಚಕ್ರಧರನೂ ಆದ ನಿನಗೆ ನಮೋ ನಮಃ!

೧೨೩. ಕರುಣೆಯೆಂಬ ಅಮೃತದಿಂದ ಪೂರ್ಣವಾದ ಮಹಾಸಮುದ್ರದ

**ಪ್ರಕಾಶಕಾನಾಂ ಸೂರ್ಯಾದಿಜ್ಯೋತಿಷಾಂ ಜ್ಯೋತಿಷೇ ನಮಃ ।**
**ಪ್ರತಿಸ್ವಸ್ವನದೀಪ್ತಾಯ ಅಂತಃಪಾಪಾಗ್ನಯೇ ನಮಃ ॥ ೧೨೪ ॥**
**ಪಾವಕಾಯ ಪವಿತ್ರಾಯ ಪವಿತ್ರಾಣಾಂ ನಮೋ ನಮಃ ।**
**ಗರಿಷ್ಠಾಯ ವರಿಷ್ಠಾಯ ದ್ರಾಘಿಷ್ಠಾಯ ನಮೋ ನಮಃ ॥ ೧೨೫ ॥**
**ನೇದಿಷ್ಠಾಯ ದವಿಷ್ಠಾಯ ಕ್ಷೋದಿಷ್ಠಾಯ ನಮೋ ನಮಃ ।**
**ವರೇಣ್ಯಾಯ ಸುಪುಣ್ಯಾಯ ನಾರಾಯಣ ನಮೋಽಸ್ತು ತೇ ॥ ೧೨೬ ॥**
**ಪರಿತ್ರಾಹಿ ಜಗನ್ನಾಥ ದೀನಬಂಧೋ ನಮೋಽಸ್ತು ತೇ ।**
**ನಿಸ್ತೀರ್ಣೋಽಹಂ ಭವಾಂಭೋಧಿಂ ಪ್ರಾಪ್ಯ ತ್ವಾಂ ತರಣಿಂ ಸುಖಾಂ ॥**
**ತ್ವಯಿ ದೃಷ್ಟೇ ರಮಾನಾಥ ಕ್ಲೇಶಾ ವ್ಯಪಗತಾ ಮಮ ।**
**ಚಿದಾನಂದ ಸ್ವರೂಪಂ ತ್ವಾಂ ಪ್ರಾಪ್ತಾನಾಂ ದುಃಖಸಂಕ್ಷಯಃ ॥ ೧೨೮ ॥**

---

ನೆಲೆಮನೆಯಾಗಿರುವ ಓ ಸ್ವಾಮಿಯೆ! ನಿನಗೆ ನಮಸ್ಕಾರವು! ದೀನರನ್ನುದ್ಧಾರ ಮಾಡುವುದೊಂದೇ ರಹಸ್ಯವನ್ನೊಳಗೊಂಡಿರುವ ಕರುಣಾಸಾಗರನಾದ ನಿನಗೆ ನಮಸ್ಕಾರವು.

೧೨೪. ಜಗತ್ತನ್ನು ತಮ್ಮ ದಿವ್ಯಪ್ರಭೆಯಿಂದ ಬೆಳಗಿಸುತ್ತಿರುವ ಸೂರ್ಯ ಚಂದ್ರನೇ ಮೊದಲಾದ ಜ್ಯೋತಿರ್ಮೂರ್ತಿಗಳಿಗೆಲ್ಲರಿಗೂ ಜ್ಯೋತಿಯನ್ನುನೀಡುವ ದಿವ್ಯಜ್ಯೋತಿಸ್ಸ್ವರೂಪನಾದ ಎಲೈ ಸ್ವಾಮಿಯೇ! ನಿನಗಿದೋ ನಮಸ್ಕಾರವು!! ಪ್ರತಿಮಾನವರ ಅಂತರ್ಧ್ವನಿಯನ್ನು ಉದ್ದೀಪನಗೊಳಿಸುವವನೂ, ಓಂಕಾರ ರೂಪನೂ, ಒಳಗಣ ರಹಸ್ಯಾತಿರಹಸ್ಯತಮವಾದ ಪಾಪಗಳಿಗೆ ಅಗ್ನಿಪ್ರಾಯನೂ ಆಗಿರುವ ನಿನಗೆ ನಮೋ ನಮಃ!

೧೨೫. ಸಮಸ್ತವನ್ನೂ ಪಾವನಗೊಳಿಸುವ ಪಾವಕರೂಪನಾಗಿ, ಸ್ವಯಂ ಪವಿತ್ರಮೂರ್ತಿಯಾಗಿ, ಪವಿತ್ರಗೊಳಿಸುವ ಸಮಸ್ತಕ್ಕೂ ಪವಿತ್ರನಾಗಿರುವ ನಿನಗೆ ನಮೋ ನಮಃ! ಗರಿಷ್ಠನೂ, ವರಿಷ್ಠನೂ, ದೀರ್ಘತಮನೂ ಆದ ಎಲೈ ದೇವಾ! ನಿನಗೆ ನಮೋ ನಮಃ!

೧೨೬. ಅತ್ಯಂತ ಸಮೀಪದಲ್ಲಿರುವವನೂ, ಆದರೂ ಬಹುದೂರದಲ್ಲಿರುವವನೂ, ಸಮಸ್ತವನ್ನೂ ಸಂಹರಿಸುವವನೂ, ವರೇಣ್ಯನೂ, ಮಹಾ ಪುಣ್ಯ ಮೂರ್ತಿಯೂ, ಆದ ಓ ನಾರಾಯಣನೇ! ನಿನಗೆ ನಮಸ್ಕಾರವು.

೧೨೭. ಓ ಜಗನ್ನಾಥ, ದೀನಬಂಧು! ಕಾಪಾಡು, ಕಾಪಾಡು! ನಿನಗಿದೋ ನಮಸ್ಕಾರವು!! ಭವಸಾಗರದ ಸುಖತರಣಿಸ್ವರೂಪನಾದ ನಿನ್ನನ್ನು ಹೊಂದಿ ನಾನೀಗ ಈ ಭವಸಾಗರವನ್ನು ಸಂಪೂರ್ಣವಾಗಿ ದಾಟಿರುತ್ತೇನೆ.

೧೨೮. ಎಲೈ ಲಕ್ಷ್ಮೀಪತಿಯೇ! ಇದೀಗ ನೀನು ಸಂದರ್ಶನವನ್ನಿತ್ತಿ ಯಾಗಿ ನನ್ನ ಕ್ಲೇಶಗಳೆಲ್ಲವೂ ಕಳೆದುಹೋದುವು. ಓ ಸ್ವಾಮಿಯೇ! ಚಿದಾನಂದ

ಧ್ರುವಂ ನಾಥ ಸಮುತ್ಪನ್ನಪರಮಾನಂದಹೇತುಕಂ ।
ತ್ರಾಹಿ ತ್ರಾಹಿ ಭವಾಂಭೋಧಿಮಗ್ನಂ ಮಾಂ ದೀನಚೇತಸಂ ॥ ೧೨೯ ॥
ಮಧ್ಯಾಹ್ನಾರ್ಕೋದಿತೇ ವ್ಯೋಮ್ನಿ ಕುತಃ ಸಂತಮಸೋದಯಃ ।
ಧ್ಯಾನಸ್ಥಿತಃ ಸ್ತುವನ್ನೇವಂ ಪ್ರಣಮ್ಯ ಜಗದೀಶ್ವರಂ ॥ ೧೩೦ ॥
ಧ್ಯಾನಾವಸಾನೇ ಸ ಪುನಃ ಸ್ವಯಂ ಜಾಗ್ರದಬುಧ್ಯತ ।
ಸ್ವಪ್ನಾಂತ ಇಂದ್ರದ್ಯುಮ್ನೋಽಪಿ ಸಸ್ಮಾರಾತ್ಮಾನಮಾತ್ಮನಾ ॥ ೧೩೧ ॥
ಅತ್ಯದ್ಭುತಮಿದಂ ಸ್ವಪ್ನಂ ದೃಷ್ಟ್ವಾ ಚ ನೃಪಕುಂಜರಃ ।
ಮೇನೇ ಕೃತಾರ್ಥಮಾತ್ಮಾನಂ ಹಯಮೇಧಕ್ರತೋಸ್ತಥಾ ॥ ೧೩೨ ॥
ಸಹಸ್ರಂ ಸಫಲಂ ಚೈವ ಸ್ವಭಾಗ್ಯಂ ಸಮುಪಸ್ಥಿತಂ ।
ನ ಹಿ ದೇವರ್ಷಿವಚನಂ ವೃಥಾ ಭವತಿ ಕರ್ಹಿಚಿತ್ ॥ ೧೩೩ ॥
ಪ್ರತ್ಯಕ್ಷಂ ಮೇ ಕಥಂ ನಾಥಃ ಸ್ವಯಮತ್ರ ಭವಿಷ್ಯತಿ ।
ಇತಿ ಚಿಂತಾಕುಲೋ ರಾತ್ರಿಶೇಷಂ ನೀತ್ವಾ ವಿಶಾಂಪತಿಃ ॥ ೧೩೪ ॥

---

ಮೂರ್ತಿಯಾದ ನಿನ್ನನ್ನು ಹೊಂದಿದವರಿಗೆಲ್ಲರಿಗೂ ದುಃಖಗಳು ಕ್ಷಯಿಸಿ ಹೋಗುತ್ತವೆಯಷ್ಟೆ!

೧೨೯. ಓ ಜಗನ್ನಾಥ! ಈಗತಾನೆ ಉದಿಸಿರುವ ಪರಮಾನಂದಕಾರಣವುಳ್ಳವನಾದರೂ ಇನ್ನೂ ಈ ಭವಸಾಗರದಲ್ಲಿಯೆ ಮುಳುಗಿ ದೀನಮನಸ್ಕನಾಗಿರುವ ನನ್ನನ್ನು ರಕ್ಷಿಸು, ರಕ್ಷಿಸು!!

೧೩೦. ಪ್ರಭುವೇ! ಗಗನದಲ್ಲಿ ನಡುದಿನದಲ್ಲಿ ದಿನಮಣಿಯುದಿಸಿರುವಾಗ ಗಾಢಾಂಧಕಾರಕ್ಕೆಡೆಯೆತ್ತಣದು?'' ಎಂಬೀಪ್ರಕಾರವಾಗಿ ಆ ದೊರೆಯು ಧ್ಯಾನದಲ್ಲಿಯೇ ಪರಮಾತ್ಮನನ್ನು ಸ್ತುತಿಸುತ್ತಲಿದ್ದನು.

೧೩೧. ಧ್ಯಾನವು ಮುಗಿದಬಳಿಕ ತಾನಾಗಿಯೇ ಎಚ್ಚರಗೊಂಡು ಸ್ವಪ್ನಾಂತದಲ್ಲಿ ಆ ಇಂದ್ರದ್ಯುಮ್ನನು ತನ್ನನ್ನು ತಾನೇ ಸ್ಮರಿಸಿಕೊಂಡನು.

೧೩೨. ಆ ರಾಜಶ್ರೇಷ್ಠನು ಅತ್ಯದ್ಭುತವಾದ ಈ ದಿವ್ಯಸ್ವಪ್ನವನ್ನು ಕಂಡು ತಾನು ಕೃತಾರ್ಥನಾದುದಾಗಿ ಭಾವಿಸಿದನು. ಅಂತೆಯೇ ತಾನು ಶ್ರೀಮಹಾವಿಷ್ಣುವಿನ ಪ್ರೀತ್ಯರ್ಥವಾಗಿ ಮಾಡಿದ ಅಶ್ವಮೇಧಸಹಸ್ರವೂ ಕೃತಕೃತ್ಯವಾಯಿತೆಂದುಕೊಂಡನು.

೧೩೩. "ಆಹಾ! ಸಹಸ್ರಾಶ್ವಮೇಧವಿದೀಗ ಸಫಲವಾಗಿ ನನ್ನ ಭಾಗ್ಯವು ಈಡೇರಿರುವ ಕಾಲವು ಸನ್ನಿಹಿತವಾಯಿತು. ದೇವರ್ಷಿಯಾದ ನಾರದಮುನಿಯ ಮಾತು ಎಂದಿಗಾದರೂ ಸುಳ್ಳಾಗುವುದೇ!

೧೩೪. ಆದರೆ ಆ ಜಗನ್ನಾಥನು ನನ್ನಮುಂದೆ ಪ್ರತ್ಯಕ್ಷನಾಗುವುದೆಂತೋ!" ಎಂದೇ ಚಿಂತಿಸುತ್ತ ಆ ದೊರೆಯು ರಾತ್ರಿಶೇಷವನ್ನು ಹೇಗೆ ಹೇಗೆಯೋ ಕಳೆದನು.

**ಶಶಂಸ ನಾರದಸ್ಯಾಗ್ರೇ ಯಥಾ ಸ್ವಪ್ನೋಽನ್ವಭೂಯತ ।**
**ಸ ಚಾಪಿ ನಾರದಃ ಪ್ರಾಹ ಶೋಕಸ್ತೇ ವಿಗತೋ ನೃಪ ॥ ೧೩೫ ॥**
**ಅರುಣೋದಯಕಾಲೇ ಹಿ ಭಗವಂತಂ ದದರ್ಶ ಯತ್ ।**
**ದಶಾಹಾತ್ಫಲದಃ ಸ್ವಪ್ನಸ್ತಸ್ಮಿನ್ಕಾಲೇ ನೃಪೋತ್ತಮ ॥ ೧೩೬ ॥**
**ಕೃತ್ವಂತೇ ಭಗವಾನತ್ರ ಪ್ರತ್ಯಕ್ಷಸ್ತೇ ಭವಿಷ್ಯತಿ ।**
**ಯದಾಹ ಮದ್ಗಿರಾ ತ್ವಾಂ ಹಿ ಚರಾಚರಗುರುರ್ವಿಧಿಃ ॥ ೧೩೭ ॥**
**ಸೋಽಪಿ ತ್ವಯಾ ಜಗತ್ಸ್ರಷ್ಟಾ ಸ್ವಪ್ನೇಽಸ್ಮಿನ್ನವಲೋಕಿತಃ ।**
**ತದನುಷ್ಠೀಯತಾಂ ಯಜ್ಞಃ ಪರಾಗ್ರೇ ನ ಪ್ರಕಾಶಯ ॥ ೧೩೮ ॥**
**ಸ್ವಪ್ನೋಽಯಂ ನೃಪಶಾರ್ದೂಲ ದುರ್ಬೋಧಾಚರಿತೋ ಹರೇಃ ।**
**ಕಿಂ ತು ಭಾಗವತಸ್ಯೈವ ಸ್ವಪ್ನಸ್ತಾದೃಕ್ಪ್ರಜಾಯತೇ ॥ ೧೩೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನಕೃತ ವಾಜಿಮೇಧಯಜ್ಞಮಹೋತ್ಸವಾರಂಭವೃತ್ತಾಂತ ವರ್ಣನಂ"ನಾಮ ಸಪ್ತದಶೋಽಧ್ಯಾಯಃ**

---

೧೩೫–೧೩೬. ಬಳಿಕ ಬೆಳಗಾಗುತ್ತಲೇ ಅವನು ತಾನನುಭವಿಸಿದ ಸ್ವಪ್ನವನ್ನು ನಾರದನಿಗೆ ತಿಳಿಸಿದನು. ನಾರದಮುನಿಯೂ ಸಹ "ಅಯ್ಯಾ ದೊರೆಯೇ! ಇದೀಗ ನಿನ್ನ ಶೋಕವು ಕಳೆದುಹೋಯಿತೆಂದು ತಿಳಿ. ನೀನು ಅರುಣೋದಯ ಕಾಲದಲ್ಲಿ ಆ ಭಗವಂತನನ್ನು ಕಂಡೆಯಾದುದರಿಂದ ಈ ಸ್ವಪ್ನವು ಇಂದಿನಿಂದ ಹತ್ತುದಿನಗಳಾದಮೇಲೆ ಸಫಲವಾಗುವುದು.

೧೩೭–೧೩೮. ಚರಾಚರಪ್ರಪಂಚಕ್ಕೆ ಗುರುವಾದ ಚತುರ್ಮುಖಬ್ರಹ್ಮನು ನನ್ನ ಮಾತುಗಳ ಮೂಲಕ ಸಹಸ್ರ ಅಶ್ವಮೇಧಯಾಗಗಳಾದ ಬಳಿಕ ಶ್ರೀಮನ್ನಾರಾಯಣಮೂರ್ತಿಯು ನಿನಗೆ ಪ್ರತ್ಯಕ್ಷನಾಗುವನೆಂದು ಹೇಳಲಿಲ್ಲವೆ? ಈಗಲಾದರೋ ಆ ಜಗತ್ಸ್ರಷ್ಟೃವು ನಿನಗೆ ಸ್ವಪ್ನದಲ್ಲಿ ಸಂದರ್ಶನವನ್ನಿತ್ತಿರುವನು. ಆದುದರಿಂದ ನೀನು ಈ ಸಹಸ್ರತಮಾಶ್ವಮೇಧಯಾಗವನ್ನು ಪೂರ್ಣಗೊಳಿಸು. ಈಗ ನೀನು ಕಂಡ ಸ್ವಪ್ನದ ವಿಚಾರವನ್ನು ಇತರರಾರಲ್ಲಿಯೂ ಹೇಳಬೇಡ.

೧೩೯. ಅಯ್ಯಾ ರಾಜಶ್ರೇಷ್ಠನೇ! ನೀನು ಕಂಡ ಈ ಸ್ವಪ್ನವು ತಿಳಿಯ ಲತಿಕಷ್ಟವಾದ ಚರಿತ್ರೆಯುಳ್ಳ ಶ್ರೀಹರಿಯ ಲೀಲೆಯೇ ಆಗಿರುವುದು. ಇಂತಹ ಸ್ವಪ್ನವು ಭಾಗ್ಯವಂತರಾದವರಿಗೆ ಮಾತ್ರ ಆಗುತ್ತದೆಯಾದುದರಿಂದ ನಿನ್ನ ಭಾಗ್ಯಕ್ಕೆಣೆಯೇ ಇಲ್ಲವು. ನೀನೇ ಭಾಗ್ಯಶಾಲಿಯು."

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿ ಸಂವಾದದಲ್ಲಿ "ಇಂದ್ರದ್ಯುಮ್ನಕೃತ ವಾಜಿಮೇಧಯಜ್ಞ ಮಹೋತ್ಸವಾರಂಭವೃತ್ತಾಂತವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾದಶೋಽಧ್ಯಾಯಃ

### ಅಶ್ವಮೇಧಸುತ್ಯಾರಂಭಃ — ದಾರುಮೂರ್ತ್ಯಾವಿರ್ಭಾವವರ್ಣನಂ

ಜೈಮಿನಿರುವಾಚ :—

ತತ್ರಃ ಪ್ರವವೃತೇ ಸುತ್ಯಾ ನೃಪತೇರ್ವಾಜಿಮೇಧಿಕಾ ।
ತಸ್ಯಾಂ ತ್ರೈಲೋಕ್ಯಮಭವದೇಕಸದ್ಮನಿಭಂ ದ್ವಿಜಾಃ ॥ ೧ ॥
ಶಾಸ್ತ್ರೈಃ ಸ್ತೋತ್ರೈರ್ದಿವಸ್ಪೃಗ್ಭಿರ್ವರ್ಣಕ್ರಮಸಮುಜ್ಜ್ವಲೈಃ ।
ಯಥಾ ಪದಸ್ವರನ್ಯಾಸೈರನ್ಯೇ ಶಬ್ದಾಸ್ತಿರೋಹಿತಾಃ ॥ ೨ ॥
ದೀನೇಭ್ಯೋ ವಾರಿತಂ ತತ್ರ ದೀಯಂತೇ ವಾಂಛಿತಾನಿ ವೈ ।
ನಟನರ್ತಕಸೂತಾನಾಂ ಸಾಭೂತ್ಕಲ್ಪದ್ರುಮೋಪಮಾ ॥ ೩ ॥
ತನ್ಮಧ್ಯೇಽವಭೃಥೇ ಸ್ನಾತುಂ ಕೃತಾ ಯತ್ರೋಪಕಾರಿಕಾ ।
ದಕ್ಷಿಣೇ ತಟಭೂದೇಶೇ ಬಿಲ್ವೇಶ್ವರಸಮೀಪತಃ ॥ ೪ ॥
ನಿಯುಕ್ತಾಃ ಸೇವಕಾ ರಾಜ್ಞಾ ಸಸಂಭ್ರಮ ಮುಪಸ್ಥಿತಾಃ ।
ನ್ಯವೇದಯಂತ ನೃಪತಿಂ ಕೃತಾಂಜಲಿಪುಟಾ ದ್ವಿಜಾಃ ॥ ೫ ॥

---

## ಕನ್ನಡದ ಅನುವಾದ

### ಅಶ್ವಮೇಧಸುತ್ಯಾರಂಭ — ದಾರುಮೂರ್ತಿಯ ಆವಿರ್ಭಾವವರ್ಣನ

೧. ಜೈಮಿನಿಯು ಹೇಳುತ್ತಾನೆ:— ಎಲೈ ದ್ವಿಜರೇ! ತರುವಾಯ ಆ ಇಂದ್ರದ್ಯುಮ್ನನೃಪಾಲನೆಸಗಿದ ಅಶ್ವಮೇಧಯಾಗ ಸಂಬಂಧವಾದ ಸುತ್ಯೆಯು ಮೊದಲಾಗಲು ಸ್ವರ್ಗಮರ್ತ್ಯಪಾತಾಳಲೋಕಗಳು ಮೂರೂ ಒಂದೇ ಮನೆಯಾಯಿತೆನ್ನುವಷ್ಟುಮಟ್ಟಿಗೆ ಆ ಯಜ್ಞಶಾಲೆಯು ಅದ್ಭುತವಾಯಿತು.

೨. ಆ ಸುತ್ಯಸಮಾರಂಭದಲ್ಲಿ ನಡೆಯುತ್ತಿದ್ದ ಶಾಸ್ತ್ರವಾದಗಳಿಂದಲೂ, ಸ್ತೋತ್ರಗಳಿಂದಲೂ, ಅಂತರಿಕ್ಷವನ್ನು ಮುಟ್ಟುತ್ತಿದ್ದ ವರ್ಣಕ್ರಮಗಳಿಂದಲೂ, ಪದಸ್ವರವಿನ್ಯಾಸದಿಂದಲೂ, ಸಮುಜ್ವಲವಾದ ವೇದಘೋಷದಿಂದಲೂ ಇತರ ಲೌಕಿಕ ಶಬ್ದಗಳೆಲ್ಲವೂ ಅಡಗಿಹೋದುವು.

೩. ಆ ಯಜ್ಞಶಾಲೆಯಲ್ಲಿ ದೀನರಿಗೆ ಏನೊಂದೂ ತಡೆಯಿಲ್ಲದೆ ಅವರವರ ವಾಂಛಿತ ಪದಾರ್ಥಗಳು ವಿನಿಯೋಗವಾಗುತ್ತಿದ್ದುವು. ನಟನರ್ತಕ ಸೂತರಿಗಂತೂ ಆ ಸಮಾರಂಭವು ಕಲ್ಪವೃಕ್ಷವೇ ಆಗಿಹೋಗಿದ್ದಿತು.

೪–೫. ಈ ಮಧ್ಯದಲ್ಲಿ ಅವಭೃಥಸ್ನಾನಮಾಡಲೋಸುಗ ಸಾಗರದ ದಕ್ಷಿಣ ತೀರದಲ್ಲಿ ಬಿಲ್ವೇಶ್ವರನ ಸಮೀಪದಲ್ಲಿ (ಸ್ನಾನಭವನ) ಸೋಪಾನವನ್ನು ನಿರ್ಮಿಸಲಾಗಿದ್ದಿತು. ಅದರ ರಕ್ಷಣೆಗಾಗಿ ನಿಯುಕ್ತರಾಗಿದ್ದ ಸೇವಕರು ಅರಸನ ಬಳಿಗೆ ಸಂಭ್ರಮದಿಂದೈತಂದು ಕೃತಾಂಜಲಿಪುಟರಾಗಿ ಈ ರೀತಿ ಅರಿಕೆಮಾಡಿದರು :—

**ದೇವ ದೃಷ್ಟೋ ಮಹಾನ್ವೃಕ್ಷಸ್ತಟಭೂಮೌ ಮಹೋದಧೇಃ ।**
**ಪ್ರವಿಷ್ಟಾಗ್ರಸಮುದ್ಭ್ರಾಂತಃಕಲ್ಲೋಲಪ್ಲವಮೂಲಕಃ ॥ ೬ ॥**
**ಮಂಜಿಷ್ಠವರ್ಣಃ ಸರ್ವತ್ರ ಶಂಖಚಕ್ರಾಂಕಿತಃ ಪ್ಲವನ್ ।**
**ಸ್ನಾನವೇಶ್ಮಸಮೀಪೇಽಸೌ ದೃಷ್ಟೋಽಸ್ಮಾಭಿಃ ಪರೋಽದ್ಭುತಃ ॥ ೭ ॥**
**ನ ದೃಷ್ಟಪೂರ್ವೋ ವೃಕ್ಷೋಽಯಮುದ್ಯತ್ಸೂರ್ಯನಿಭೋಂಽಶುನಾ ।**
**ಗಂಧೇನ ವಾಸಯನ್ಸರ್ವಾಂ ತಟಭೂಮಿಂ ಸುಗಂಧಿನಾ ॥ ೮ ॥**
**ದ್ರುಮಃ ಸಾಧಾರಣೋ ನಾಯಂ ಲಕ್ಷ್ಯತೇ ದೇವಭೂರುಹಃ ।**
**ಕಶ್ಚಿದ್ದೇವಸ್ತರುವ್ಯಾಜಾದಾಗತೋ ಲಕ್ಷ್ಯತೇ ಧ್ರುವಂ ॥ ೯ ॥**
**ನಿಯುಕ್ತಾನಾಂ ವಚಃ ಶ್ರುತ್ವಾ ರಾಜಾ ನಾರದಮಬ್ರವೀತ್ ।**
**ತತ್ಕಿಂ ನಿಮಿತ್ತಂ ಯದ್ದೃಷ್ಟಂ ತರುಶ್ರೇಷ್ಠಂ ವದಂತಿ ತೇ ॥ ೧೦ ॥**
**ನಾರದಃ ಪ್ರಹಸನ್ವಾಕ್ಯಮುವಾಚ ನೃಪಸತ್ತಮಂ ।**
**ಪೂರ್ಣಾಹುತಿಃ ಸಮಾಪ್ನೋತು ಯಥಾಸ್ಯಾತ್ಸಫಲಃ ಕ್ರತುಃ ॥ ೧೧ ॥**

---

೬. "ದೇವ! ಮಹೋದಧಿಯ ತೀರಪ್ರದೇಶದಲ್ಲಿ ಅಲೆಗಳಮೇಲೆಯೇ ತೇಲಿಕೊಂಡುಬಂದ ಮಹಾವೃಕ್ಷವೊಂದನ್ನು ಕಂಡೆವು.

೭. ಅದು ಅಚ್ಚಗೆಂಪಿನ ಬಣ್ಣವುಳ್ಳುದಾಗಿ ಎಲ್ಲೆಡೆಯಲ್ಲಿಯೂ ಶಂಖ ಚಕ್ರಗಳ ಗುರುತುಗಳುಳ್ಳುದಾಗಿರುವುದು. ಸಮುದ್ರದ ಅಲೆಗಳ ಮೇಲೆಯೇ ತೇಲಿಬಂದ ಆ ವೃಕ್ಷವು ಸ್ನಾನಭವನದ ಸಮೀಪದಲ್ಲಿಯೇ ಇರುವುದು. ನಾವು ಇದನ್ನು ಪ್ರತ್ಯಕ್ಷವಾಗಿ ಕಂಡೆವು. ಇದು ಪರಮಾದ್ಭುತವಾಗಿರುವುದು.

೮. ಆ ವೃಕ್ಷವನ್ನು ನಾವು ಹಿಂದಾವಾಗಲೂ ಕಂಡುದಿಲ್ಲವು. ಆಗತಾನೇ ಉದಿಸುತ್ತಿರುವ ಸೂರ್ಯನಂತೆ ಅದು ಕಿರಣಗಳನ್ನು ಚಿಮ್ಮಿ ಪ್ರಕಾಶಮಾನ ವಾಗಿರುವುದು. ಅಲ್ಲದೆ ತನ್ನ ಸುಗಂಧದಿಂದ ತೀರಪ್ರದೇಶವನ್ನೇ ಸುಗಂಧ ಮಯವನ್ನಾಗಿಸಿರುವುದು.

೯. ಅರಸಾ! ಇದು ಸಾಧಾರಣವಾದ ಮರವಲ್ಲ; ಇದಾವದೋ ದೇವ ಲೋಕದ ವೃಕ್ಷವೇ ಎಂಬುದು ನಿಶ್ಚಯವು. ಅಥವಾ ಯಾವುದೋ ಒಂದು ದೇವತೆಯು ಈ ವೃಕ್ಷರೂಪವಾಗಿ ಕಾಣುತ್ತಿರುವುದು. ಇದು ದಿಟವು."

೧೦. ಈ ಪ್ರಕಾರವಾಗಿ ನುಡಿದ ಆ ಸೇವಕರ ನುಡಿಗಳನ್ನು ಕೇಳಿ ಆ ಇಂದ್ರದ್ಯುಮ್ನರಾಜನು ನಾರದಮುನಿಯನ್ನು ಕುರಿತು, "ಎಲೈ ಮುನಿಯೆ! ಇದೇನು ನಿಮಿತ್ತವಿರಬೇಕು? ಈ ಸೇವಕರು ತಾವು ಮರವನ್ನು ಕಂಡುದಾಗಿ ಹೇಳುತ್ತಿರುವರಲ್ಲ!" ಎಂದು ಕೇಳಿದನು.

೧೧. ನಾರದಮುನಿಯು ನಸುನಗುತ್ತ ಆ ನೃಪಶ್ರೇಷ್ಠನನ್ನು ಕುರಿತು ಹೇಳಿದನು: "ಎಲೈ ರಾಜನೇ! ಪ್ರಕೃತದಲ್ಲಿ ನೀನು ಮಾಡುತ್ತಿರುವ ಕಟ್ಟ

ಉಪಸ್ಥಿತಂ ತೇ ತದ್ಭಾಗ್ಯಂ ಸ್ವಪ್ನೇ ಯದ್ದೃಷ್ಟವಾನ್ಪುರಾ ।
ಶ್ವೇತದ್ವೀಪೇ ವಿಶ್ವಮೂರ್ತಿರ್ದೃಷ್ಟೋ ಯೋ ವಿಷ್ಣುರವ್ಯಯಃ ॥ ೧೨ ॥
ತದಂಗಸ್ಖಲಿತಂ ರೋಮ ತರುತ್ವಮುಪಪದ್ಯತೇ ।
ಅಂಶಾವತಾರಃ ಸ್ಥಾಸ್ನುರ್ಯಃ ಪೃಥಿವ್ಯಾಂ ಪರಮೇಷ್ಠಿನಃ ॥ ೧೩ ॥
ತದ್ರೂಪಾವತರಂ ಯಾತಿ ಭಗವಾನ್ಭಕ್ತವತ್ಸಲಃ ।
ದ್ರುಮೋ ಹ್ಯಪೌರುಷೋ ಯೋಽಸೌ ಭಾಜನಂ ನಾಸ್ಯದರ್ಶನೇ ॥ ೧೪ ॥
ತ್ವಾಮೃತೇ ಪುರುಷವ್ಯಾಘ್ರ ಪೃಥಿವ್ಯಾಂ ನೃಪಸತ್ತಮ ।
ತ್ವದ್ಭಾಗ್ಯವಶತಃ ಸರ್ವಲೋಕಾನಾಂ ನಯನಾತಿಥಿಃ ॥ ೧೫ ॥
ಭವಿಷ್ಯತಿ ಮಹಾರಾಜ ಸರ್ವಕಲ್ಮಷನಾಶನಃ ।
ಸಮಾಪ್ಯಾವಭೃಥಸ್ನಾನಂ ತಟಾಂತೇ ಸರಿತಾಂ ಪತೇಃ ॥ ೧೬ ॥
ಉತ್ಸವಂ ಸುಮಹತ್ಕೃತ್ವಾ ಕೃತಕೌತುಕಮಂಗಲಂ ।
ಮಹಾವೇದ್ಯಾಂ ಸ್ಥಾಪಯಾತ್ರ ಯಜ್ಞೇಶಂ ತರುರೂಪಿಣಂ ॥ ೧೭ ॥
ವಿಚಾರ್ಯೇತ್ಥಂ ಮುದಾ ಯುಕ್ತೌ ತಾವುಭೌ ನೃಪನಾರದೌ ।
ಸುಸಮೃದ್ಧೌ ತತ್ರ ಯಾತೌ ಯತ್ರಾಸೌ ಭಗವದ್ದ್ರುಮಃ ॥ ೧೮ ॥

---

ಕಡೆಯ ಅಶ್ವಮೇಧಯಾಗವು ಸಫಲವಾಗಲೆಂದು ಪೂರ್ಣಾಹುತಿಯು ಮುಗಿಯಲಿ.

೧೨–೧೭. ನೀನು ಈ ಮೊದಲು ಕನಸಿನಲ್ಲಿ ಏನನ್ನು ಕಂಡೆಯೋ ಆ ಭಾಗ್ಯವು ಕೈಗೂಡುವ ಕಾಲವು ಇದೀಗ ಒದಗಿಬಂದಿರುವುದು. ನೀನು ಆ ಕನಸಿನಲ್ಲಿ ವಿಶ್ವಮೂರ್ತಿಯಾದ ಯಾವ ಮಹಾವಿಷ್ಣುವನ್ನು ಶ್ವೇತದ್ವೀಪದಲ್ಲಿ ಕಂಡೆಯೋ ಅದೇ ಪ್ರಭುವಿನ ಮೈಯಿಂದ ಜಾರಿಬಂದ ಒಂದು ರೋಮವೇ ಈ ರೀತಿ ವೃಕ್ಷವಾಗಿರುವುದು. ಈ ವೃಕ್ಷವು ಆ ಪರಮೇಷ್ಠಿಯ ಅಂಶಾವತಾರವಾಗಿರುವುದರಿಂದ ಇದು ಆ ಸ್ವಾಮಿಯ ರೂಪಾವತಾರವನ್ನು ತಾಳುವುದು. ಆ ಭಗವಂತನು ಭಕ್ತವತ್ಸಲನು. ಎಲೈ ಇಂದ್ರದ್ಯುಮ್ನನೇ! ಅಪೌರುಷವಾದ ಈ ದಿವ್ಯವೃಕ್ಷಸ್ವರೂಪಿಯಾದ ಆ ಪರಮಾತ್ಮನ ಸಂದರ್ಶನವು ನಿನಗೆ ಮಾತ್ರವೇ ಹೊರತು ಮತ್ತಾವನಿಗೂ ಆಗುವುದಿಲ್ಲ. ಆದರೆ ನಿನ್ನ ಭಾಗ್ಯವಶದಿಂದ ಸಕಲ ಕಲ್ಮಷನಾಶನನಾದ ಆ ಸ್ವಾಮಿಯು ಸಮಸ್ತರಿಗೂ ಪ್ರತ್ಯಕ್ಷನಾಗುವನು. ಸಮುದ್ರತೀರದಲ್ಲಿ ಅವಭೃಥಸ್ನಾನವನ್ನು ಮುಗಿಸಿಕೊಂಡು ಕೌತುಕಮಂಗಲ ಮಹಾಮಹೋತ್ಸವವನ್ನು ಮಾಡಿ ಯಜ್ಞೇಶ್ವರನೂ, ವೃಕ್ಷರೂಪಿಯೂ ಆದ ಆ ಪರಮಾತ್ಮನನ್ನು ಈ ವೇದಿಕೆಯಲ್ಲಿ ಸ್ಥಾಪನೆಮಾಡುವವನಾಗು.''

೧೮. ಈ ರೀತಿ ಆ ನಾರದಮುನಿಯೂ, ಇಂದ್ರದ್ಯುಮ್ನರಾಜನೂ ವಿಚಾರ

**ತಂ ದೃಷ್ಟ್ವಾ ಹರ್ಷಿತಾಃ ಸರ್ವೇ ಬ್ರಹ್ಮ ಸಾಕ್ಷಾದುಪಸ್ಥಿತಂ ।**
**ಮೇನಿರೇ ಜನ್ಮಸಾಫಲ್ಯಂ ಜೀವನ್ಮುಕ್ತಾ ಮಹೋದಯಾಃ ॥ ೧೯ ॥**
**ಇಂದ್ರದ್ಯುಮ್ನೋಽಪಿ ನೃಪತಿರ್ಮಗ್ನಮಜ್ಞಾನ್ಮೃತಸಾಗರೇ ।**
**ಸ್ವಪ್ನೇ ದೃಷ್ಟ್ವಾ ಜಗನ್ನಾಥಂ ಯಥಾಸೌ ಭಗವತ್ಪ್ರಿಯಃ ॥ ೨೦ ॥**
**ತಥಾ ದದರ್ಶ ತಂ ವೃಕ್ಷಂ ಚತುಃಶಾಖಂ ಚತುರ್ಭುಜಂ ।**
**ಸ್ವಕಂ ಶ್ರಮಂ ಮನ್ಯಮಾನಃ ಸಫಲಂ ನೃಪಸತ್ತಮಃ ॥ ೨೧ ॥**
**ಜಹೌ ಶೋಕಂ ನೀಲಮಣಿಮಾಧವಾಂತರ್ಧಿಜಂ ದ್ವಿಜಾಃ ।**
**ಪುನಃ ಪುನಃ ಪ್ರಣಮ್ಯೈನಂ ಹರ್ಷಾಶ್ರುನಯನೋ ನೃಪಃ ॥ ೨೨ ॥**
**ದ್ವಿಜೈರಾಹಾರಯಾಮಾಸ ತರುಂ ಕಲ್ಲೋಲಲೋಲಿತಂ ।**
**ಶಂಖಕಾಹಲಮುರಜಢಕ್ಕಾಪಟಹನಿಃಸ್ವನೈಃ ॥ ೨೩ ॥**
**ಗೀತವಾದಿತ್ರನಿನದೈರ್ಜಯಶಬ್ದೈಃ ಸಹಸ್ರಶಃ ।**
**ಸುಗಂಧಿಪುಷ್ಪಾಂಜಲಿಭಿರಾಕಾಶಾತ್ಪತಿತೈರ್ಮುಹುಃ ॥ ೨೪ ॥**

---

ಮಾಡಿದ ತರುವಾಯ ಇಬ್ಬರೂ ಜೊತೆಯಲ್ಲಿಯೇ ಸುಸಮೃದ್ಧರಾಗಿ ಆ ಭಗವದ್ವೃಕ್ಷವಿದ್ದೆಡೆಗೆ ಬಂದರು.

೧೯. ಸಾಕ್ಷಾತ್ ಪರಬ್ರಹ್ಮವೇ ಪ್ರತ್ಯಕ್ಷವಾದಂತೆ ವಿರಾಜಿಸುತ್ತಿದ್ದ ಆ ವೃಕ್ಷವನ್ನು ಕಂಡು ಎಲ್ಲರೂ ಬಹಳವಾಗಿ ಸಂತೋಷಗೊಂಡರು. ಅಲ್ಲದೆ ಮಹಾಭಾಗ್ಯಶಾಲಿಗಳಾದ ಆ ಇಂದ್ರದ್ಯುಮ್ನಾದಿಗಳೆಲ್ಲ ತಮ್ಮ ಜನ್ಮವು ಸಫಲವಾಯಿತೆಂದೂ, ತಾವು ಜೀವನ್ಮುಕ್ತರಾದರೆಂದೂ ಭಾವಿಸಿದರು.

೨೦–೨೧. ಭಗವತ್ಪ್ರಿಯನಾದ ಇಂದ್ರದ್ಯುಮ್ನರಾಜನಾದರೋ ಆ ಅಮೃತಸಾಗರದಲ್ಲಿ ಮಿಂದ ತರುವಾಯ ತಾನು ಸ್ವಪ್ನದಲ್ಲಿ ಜಗನ್ನಾಥನನ್ನೆಂತು ಸಂದರ್ಶಿಸಿದ್ದನೋ ಅಂತೆಯೇ ಆ ನಾಲ್ಕು ಕೊಂಬೆಗಳೊಡಗೂಡಿ ಚತುರ್ಭುಜನಾದ ಪರಮಾತ್ಮನನ್ನೇ ಅನುಕರಿಸುತ್ತಿರುವ ಆ ದಿವ್ಯತರುವನ್ನು ಕಂಡು ತನ್ನ ಶ್ರಮವು ಸಫಲವಾಯಿತೆಂದು ಭಾವಿಸಿದನು.

೨೨. ಎಲೈ ದ್ವಿಜರೇ! ಬಳಿಕ ಆ ದೊರೆಯು ನೀಲಮಣಿಮಯಮೂರ್ತಿಯಾದ ಮಾಧವನು ಮರೆಯಾದುದರಿಂದುಂಟಾದ ವ್ಯಸನವನ್ನು ತೊರೆದು, ದಿವ್ಯವೃಕ್ಷರೂಪಿಯಾಗಿ ಪ್ರತ್ಯಕ್ಷನಾದ ಆ ಪರಮಾತ್ಮನನ್ನು ಕಂಡು ಪುನಃ ಪುನಃ ನಮಸ್ಕರಿಸಿ ಆನಂದಾಶ್ರುಪೂರಿತನೇತ್ರನಾದನು.

೨೩–೨೯. ಆಗಲಾ ಮಹಾರಾಜನು, ಶಂಖ, ಕಹಳೆ, ಮುರಜ, ಢಕ್ಕೆ, ಪಟಹವೇ ಮೊದಲಾದ ವಾದ್ಯಧ್ವನಿಗಳೂ, ಗೀತವಾದಿತ್ರಧ್ವನಿಗಳೂ, ಅಸಂಖ್ಯಾತವಾದ ಜಯ ಜಯ ಧ್ವನಿಗಳೂ ತುಂಬಿಹೋಗಿರಲು, ಅಡಿಗಡಿಗೂ ಗಗನದಿಂದ ಪರಿಮಳಪೂರಿತ ದಿವ್ಯಪುಷ್ಪಾಂಜಲಿಗಳು ಬೀಳುತ್ತಿರಲು, ಸುತ್ತಲೂ ಕೃಷ್ಣಾಗುರು

ಪರಿತೋ ಧೂಪಪಾತ್ರೈಶ್ಚ ಕೃಷ್ಣಾಗುರುಸುಧೂಪಿತೈಃ ।
ವೇಶ್ಯಾಭಿರ್ಯೌವನೋನ್ಮತ್ತಸುರೂಪಾಭಿಃ ಪ್ರಚಾಲಿತೈಃ ॥ ೨೫ ॥
ರತ್ನದಂಡಪ್ರಕೀರ್ಣೈಶ್ಚ ವೀಜ್ಯಮಾನಂ ಸಮಂತತಃ ।
ಪತಾಕಾಭಿರ್ದಿವ್ಯಪಟ್ಟದುಕೂಲಾಭಿಃ ಸುಶೋಭಿತಂ ॥ ೨೬ ॥
ರಾಜರ್ಷಿರಾಜನ್ಯವೃಂದೈಶ್ಚ ತುರಂಗೈಃ ಪತ್ತಿಭಿರ್ವೃತಂ ।
ಮಾಗಧೈರ್ವಂದ್ಯಮಾನಂ ತು ಸ್ತೂಯಮಾನಂ ಮಹರ್ಷಿಭಿಃ ॥ ೨೭ ॥
ಋತ್ವಿಗ್ಭಿರ್ಬ್ರಾಹ್ಮಣೈಶ್ಚೈವ ವಿದ್ವದ್ಭಿಃ ಶ್ರೋತ್ರಿಯೈಸ್ತಥಾ ।
ರಾಜನ್ಯೈರ್ವೈಶ್ಯಕುಲಜೈಃ ಸಚ್ಛೂದ್ರೈಃ ಪರಿಚಾರಿತಂ ॥ ೨೮ ॥
ಸ್ತೋತ್ರೈರ್ಬಹುವಿಧೈಃ ಶ್ರೌತೈಃ ಸ್ಮಾರ್ತೈಃ ಪೌರಾಣಿಕೈಸ್ತಥಾ ।
ಸ್ತೂಯಮಾನಂ ತರುಂ ವಿಷ್ಣೋರ್ಭೂರ್ಲೋಕೇ ಪರಿವೇಷ್ಟಿತಂ ॥ ೨೯ ॥
ಸ್ರಗ್ಗಂಧಾಲಂಕೃತಂ ದಿವ್ಯಂ ಮಹಾವೇದಿಂ ವಿನಿನ್ಯತುಃ ।
ವಿತಾನವರಚಿತ್ರಾಯಾಂ ವೇಷ್ಟಿತಾಯಾಂ ನಿರಂತರಂ ॥ ೩೦ ॥
ವೇದ್ಯಾಂ ತಂ ಸ್ಥಾಪಯಾಮಾಸುರಿಂದ್ರದ್ಯುಮ್ನಸ್ಯ ಶಾಸನಾತ್ ।
ವಚಸಾ ನಾರದಸ್ಯೈನಂ ಪೂಜಯಾಮಾಸ ಪಾರ್ಥಿವಃ ॥ ೩೧ ॥

---

ಧೂಪಧೂಪಿತವಾದ ಧೂಪಪಾತ್ರೆಗಳು ಬಳಸಿರಲು, ಮುಂದೆ ಯೌವನದಿಂದ ಕೊಬ್ಬಿದ ಸುಂದರವೇಶ್ಯಾಸ್ತ್ರೀಯರು ನರ್ತಿಸುತ್ತ ಬರುತ್ತಿರಲು, ಬೀಸಿಹಾಕುತ್ತಿರುವ ರತ್ನದಂಡಾಲಂಕೃತ ಚಾಮರಗಳು ಸುತ್ತಲೂ ಕಂಗೊಳಿಸುತ್ತಿರಲು, ಪಟ್ಟದುಕೂಲಗಳ ಧ್ವಜಪತಾಕೆಗಳೊಪ್ಪುತ್ತಿರಲು, ರಾಜರ್ಷಿಗಳ, ರಾಜಾಧಿರಾಜರ ಸಮೂಹಗಳೂ, ಕುದುರೆ ಕಾಲಾಳುಗಳೂ ಸುತ್ತುಬಳಸಿಬರುತ್ತಿರಲು ವಂದಿಮಾಗಧರೆಲ್ಲರೂ ವಂದಿಸುತ್ತಿರಲು, ಮಹರ್ಷಿಗಳು ಸ್ತುತಿಸುತ್ತಿರಲು, ಋತ್ವಿಜರು, ಬ್ರಾಹ್ಮಣರು, ವಿದ್ವಾಂಸರು, ಶ್ರೋತ್ರಿಯರು, ಸಾಮಂತರಾಜರು, ಸತ್ಕುಲವಂತರಾದ ವೈಶ್ಯರು, ಶೂದ್ರರು ಮೊದಲಾದವರೆಲ್ಲರೂ ಸೇವೆ ಸತ್ಕಾರಗಳನ್ನೊಪ್ಪಿಸುತ್ತಿರಲು, ಶ್ರೌತಸ್ಮಾರ್ತಪುರಾಣೋಕ್ತವಾದ ಸ್ತುತಿಗಳಿಂದ ಸ್ತುತಿಗೈಸಿಕೊಳ್ಳುತ್ತಿರುವವನೂ, ಭಕ್ತವೃಂದಪರಿವೃತನೂ, ಸಾಗರದ ತೆರೆಗಳ ಮೇಲೆ ಮೇಲೆಯೇ ತೇಲಿ ತೇಲಿ ಮೆಲ್ಲ ಮೆಲ್ಲನೈತರುತ್ತಿರುವವನೂ, ಕಲ್ಪವೃಕ್ಷಸ್ವರೂಪಿಯೂ ಆದ ವಿಷ್ಣುವಿನ ಮೂರ್ತಿಯನ್ನು ಬ್ರಾಹ್ಮಣರಿಂದ ಹೊರಿಸಿ ತರಿಸಿದನು.

೩೦–೩೧. ತರುವಾಯ ಆ ವಿಪ್ರರು, ಪುಷ್ಪಮಾಲಿಕೆಗಳಿಂದಲೂ, ದಿವ್ಯಗಂಧಾನುಲೇಪನದಿಂದಲೂ ಅಲಂಕೃತವಾದ ಆ ದಿವ್ಯತರುವನ್ನು ಹೊತ್ತು ತಂದು ಉತ್ತಮವಿತಾನುಸಹಿತವಾಗಿ ರಚಿಸಿದ್ದ ವೇದಿಕೆಯಮೇಲೆ ಇಂದ್ರದ್ಯುಮ್ನನ ಅಪ್ಪಣೆಯಂತೆ ಸ್ಥಾಪಿಸಿದರು. ಇಂದ್ರದ್ಯುಮ್ನನಾದರೋ ನಾರದ ಮುನೀಂದ್ರನ ಮಾತಿನಂತೆ ಅದನ್ನು ಭಕ್ತಿಯಿಂದ ಪೂಜಿಸಿದನು.

ಸಹಸ್ರೈರುಪಚಾರಾಣಾಂ ದಿವ್ಯರೂಪೈರ್ನೃಪೋತ್ತಮಃ ।
ಪೂಜಾವಸಾನೇ ಪಪ್ರಚ್ಛ ನಾರದಂ ಮುನಿಸತ್ತಮಂ ॥ ೩೨ ॥
ಕೀದೃಶೀ ಪ್ರತಿಮಾ ವಿಷ್ಣೋರ್ಘಟಯಿಷ್ಯತಿ ಕಃ ಪುನಃ ।
ತಚ್ಛ್ರುತ್ವಾ ತಂ ಮುನಿಃ ಪ್ರಾಹ ಅಚಿಂತ್ಯಮಹಿಮಾ ಗುರುಃ ॥ ೩೩ ॥
ಕೋ ವೇದ ತಸ್ಯ ಚೇಷ್ಟಾಂ ವೈ ಸರ್ವಲೋಕೋತ್ತರಾಂ ನೃಪ ।
ಸ್ರಷ್ಟಾ ಯೋ ಜಗತಾಂ ತಸ್ಯಾಪ್ಯೇಷಾ ಸಂಶಯಗೋಚರಾ ॥ ೩೪ ॥
ವಿಚಾರಯಂತೌ ತಾವಿತ್ಥಂ ಯಾವನ್ನಾರದಪಾರ್ಥಿವೌ ।
ಅಶರೀರಾ ತತೋ ವಾಣೀ ಶುಶ್ರುವೇ ಚಾಂತರಿಕ್ಷತಃ ॥ ೩೫ ॥
ತತ್ರ ವಿಸ್ಮಯಮಾನಾನಾಂ ಸರ್ವೇಷಾಮೇವ ಶೃಣ್ವತಾಂ ।
ಅಪೌರುಷೇಯೋ ಭಗವಾನವಿಚಾರಪಥೇ ಸ್ಥಿತಃ ॥ ೩೬ ॥
ಸುಗುಪ್ತಾಯಾಂ ಮಹಾವೇದ್ಯಾಂ ಸ್ವಯಂ ಸೋಽವತರಿಷ್ಯತಿ ।
ಪ್ರಚ್ಛಾದ್ಯತಾಂ ದಿನಾನ್ಯೇಷ ಯಾವತ್ಪಂಚದಶಾನಿ ವೈ ॥ ೩೭ ॥
ಉಪಸ್ಥಿತೋಽಯಂ ಯೋ ವೃದ್ಧಃ ಶಸ್ತ್ರಪಾಣಿಸ್ತು ವರ್ಧಕಿಃ ।
ಏನಮಂತಃ ಪ್ರವಿಶ್ಯೈವ ದ್ವಾರಂ ಬಧ್ನಂತು ಯತ್ನತಃ ॥ ೩೮ ॥

---

೩೨. ದೇವತಾಸಂಬಂಧವಾದ ಸಹಸ್ರೋಪಚಾರಗಳನ್ನೊಳಕೊಂಡ ಆ ಪೂಜೆಯು ಮುಗಿದತರುವಾಯ ದೊರೆಯು ಮುನಿಸತ್ತಮನಾದ ನಾರದನನ್ನು ಈ ರೀತಿ ಕೇಳಿದನು :—

೩೩. "ಎಲೈ ದೇವಮುನಿಯೇ! ಶ್ರೀಮಹಾವಿಷ್ಣುವಿನ ಪ್ರತಿಮೆಯು ಹೇಗಿರಬೇಕು? ಅದನ್ನು ಮಾಡುವವರಾರು?" ಇದನ್ನು ಕೇಳಿದಬಳಿಕ ನಾರದ ಮುನಿಯು, "ಅರಸಾ! ಗುರುವಾದ ಆ ಸ್ವಾಮಿಯು ಯೋಚಿಸಲಸದಳವಾದ ಮಹಿಮೆಯುಳ್ಳವನು.

೩೪. ಸರ್ವಲೋಕೋತ್ತರವಾದ ಆ ಪ್ರಭುವಿನ ಚೇಷ್ಟೆಯನ್ನಾರುಬಲ್ಲರು? ಈ ಪ್ರಪಂಚವನ್ನೇ ನಿರ್ಮಾಣಮಾಡಿರುವ ಸಾಕ್ಷಾತ್ ಚತುರ್ಮುಖನಿಗೇ ಅದು ಗೋಚರವಾಗುವುದು ಸಂಶಯವಾಗಿರುವುದು."

೩೫–೩೮. ಎಲೈ ವಿಪ್ರರೇ! ಆ ನಾರದ ಪಾರ್ಥಿವರೀರ್ವರೂ ಈ ರೀತಿ ವಿಚಾರಮಾಡುತ್ತಿರಲು, ಅಲ್ಲಿದ್ದವರೆಲ್ಲರೂ ಆಶ್ಚರ್ಯಗೊಳ್ಳುತ್ತಿರಲು ಅಂತರಿಕ್ಷದಿಂದ ಅಶರೀರವಾಣಿಯೊಂದು ಕೇಳಬಂದಿತು. "ಅಪೌರುಷೇಯನೂ, ವೇದಪ್ರತಿಪಾದ್ಯನೂ, ಸರ್ವತಂತ್ರಸ್ವತಂತ್ರನೂ ಆದ ಭಗವಂತನು ವಿಚಾರಮಾಡಲಾಗದ ಮಾರ್ಗದಲ್ಲಿರುವಂತಹವನು. ಚೆನ್ನಾಗಿ ರಕ್ಷಿಸಲ್ಪಟ್ಟ ಬಹು ರಹಸ್ಯವೂ ಆಗಿರುವ ಈ ಮಹಾವೇದಿಕೆಯಮೇಲೆ ಆತನು ತಾನಾಗಿಯೇ ಅವತರಿಸುತ್ತಾನೆ. ಈಗ ನೀವು ಹದಿನೈದು ದಿನಗಳವರೆಗೂ ಈ ದಿವ್ಯವೃಕ್ಷವನ್ನು ಮುಚ್ಚಿಡಿ.

ಬಹಿರ್ವಾದ್ಯಾನಿ ಕುರ್ವಂತು ಯಾವತ್ತು ಘಟನಾ ಭವೇತ್ ।
ಶ್ರುತೋ ಹಿ ಘಟನಾಶಬ್ದೋ ಬಾಧಿರ್ಯಾಂಧತ್ವದಾಯಕಃ ॥ ೩೯ ॥
ನರಕೇ ವಸತಿಂ ಚೈವ ಕುರ್ಯಾತ್ಸಂತಾನನಾಶನಂ ।
ನಾಂತಃಪ್ರವೇಶನಂ ಕುರ್ಯಾನ್ನ ಪಶ್ಯೇಚ್ಚ ಕದಾಚನ ॥ ೪೦ ॥
ನಿಯುಕ್ತಾದನ್ಯಃ ಪಶ್ಯೇಚ್ಚೇದ್ರಾಜ್ಞೋ ರಾಷ್ಟ್ರಸ್ಯ ಚೈವ ಹ ।
ದ್ರಷ್ಟುಶ್ಚಾಪಿ ಮಹಾಭೀತಿರಂಧತಾ ಚಕ್ಷುಷೋರ್ಯುಗೇ ॥ ೪೧ ॥
ತಸ್ಮಾನ್ನಾವೇಕ್ಷಣಂ ಕಾರ್ಯಂ ಯಾವತ್ಪ್ರತಿಮನಿರ್ವೃತಿಃ ।
ನಿರ್ವ್ಯಾಘಸ್ತು ಸ್ವಯಂ ದೇವಃ ಕೃತ್ಯಾಂತೇ ತು ವದಿಷ್ಯತಿ ॥ ೪೨ ॥
ಯದ್ಯತ್ಕಾರ್ಯಂ ಪ್ರಯತ್ನೇನ ಸರ್ವಲೋಕಸುಖಾವಹಂ ।
ತಚ್ಛೃತ್ವಾ ನಾರದಾದ್ಯಾಸ್ತೇ ಯಥೋಕ್ತಂ ವಿಷ್ಣುನಾ ಸ್ವಯಂ ॥ ೪೩ ॥
ಚಿಕೀರ್ಷಿತಂ ತಥಾ ಕರ್ತುಂ ತತ್ರಾಯಾತಶ್ಚ ವರ್ಧಕಿಃ ।
ಪ್ರೋವಾಚ ನೃಪತಿಂ ಸೋಽಥ ಸ್ವಪ್ನೇ ದೃಷ್ಟಾಸ್ತು ಯಾಸ್ತ್ವಯಾ ॥

---

ಈಗತಾನ ಇಲ್ಲಿಗೈತಂದಿರುವ ಈ ವೃದ್ಧನು ಶಸ್ತ್ರಪಾಣಿಯಾದ ಬಡಗಿಯಾಗಿರುವನು. ಇವನನ್ನು ಗರ್ಭಗುಡಿಯೊಳಕ್ಕೆ ಪ್ರವೇಶಗೊಳಿಸಿ ಬಾಗಿಲನ್ನು ಭದ್ರವಾಗಿ ಮುಚ್ಚಿರಿ.

೩೯. ಈ ಬಡಗಿಯು ಸ್ವಾಮಿಯ ಮೂರ್ತಿಯನ್ನು ಕಡೆಯುವವರೆಗೂ ಹೊರಗೆ ವಾದ್ಯಧ್ವನಿಗಳು ನಿಲ್ಲದೆ ನಡೆಯುತ್ತಿರಲಿ ಮೂರ್ತಿಯನ್ನು ಕಡೆಯುವ ಶಬ್ದವು ಕೇಳಿಬಂದುದಾದರೆ ಕಿವುಡುತನವೂ, ಕುರುಡುತನವೂ ಉಂಟಾಗುತ್ತದೆ.

೪೦. ಇದೂ ಅಲ್ಲದೆ ಆ ಶಬ್ದವನ್ನು ಕೇಳಿದವರಿಗೆ ನರಕವಾಸವೂ, ಸಂತಾನ ನಾಶನವೂ ಘಟಿಸುವುದು. ಆದುದರಿಂದ ಯಾರನ್ನೂ ಒಳಗೆ ಬಿಡಬಾರದು. ಯಾರೂ ಎಂದಿಗೇ ಆಗಲಿ ಆ ಮೂರ್ತಿನಿರ್ಮಾಣವನ್ನು ನೋಡಲೂಕೂಡದು.

೪೧. ಮೂರ್ತಿನಿರ್ಮಾಣಕ್ಕಾಗಿ ನಿಯೋಜಿತನಾದವನನ್ನುಳಿದು ಮತ್ತಾರಾದರೂ ಅದನ್ನು ಕಂಡುದಾದರೆ ರಾಜನಿಗೂ, ರಾಷ್ಟ್ರಕ್ಕೂ, ಮಹಾಭೀತಿಯೂ, ಅಂಧತ್ವವೂ ಉಂಟಾಗುತ್ತದೆ. ನೋಡಿದವನಿಗಂತೂ ಒಂದು ಯುಗಕಾಲ ಅಂಧತ್ವವು ಬರುತ್ತದೆ.

೪೨. ಆದುದರಿಂದ ಪ್ರತಿಮೆಯು ಸಿದ್ಧವಾಗುವವರೆಗೂ ಯಾರೂ ಅದನ್ನು ನೋಡಕೂಡದು. ಮೂರ್ತಿಯೆಲ್ಲವೂ ಸಿದ್ಧವಾದ ಬಳಿಕ ಆ ದೇವನೇ ದರ್ಶನಕ್ಕೆ ಸಿದ್ಧವಾಗಿರುವುದಾಗಿ ಹೇಳುವನು.

೪೩-೪೬. ಸಮಸ್ತಲೋಕಕ್ಕೂ ಸುಖವುಂಟಾಗಲೋಸಗ ಯಾವ ಯಾವ ಕಾರ್ಯಗಳನ್ನು ಅವಶ್ಯವಾಗಿ ಮಾಡತಕ್ಕುದೆಂದು ಸಾಕ್ಷಾತ್ ವಿಷ್ಣುವೇ ಈ ರೀತಿ ಹೇಳಿದುದನ್ನು ನಾರದಾದಿಗಳು ಕೇಳಿ ಅಂತೆಯೇ ಮಾಡಬಯಸಿದರು.

ತಾ ಏವಾಹಂ ಘಟಿಷ್ಯಾಮಿ ದಾರುಣಾ ದಿವ್ಯರೂಪಿಣಾ ।
ಇತ್ಯುಕ್ತ್ವಾಂತರ್ದಧೇ ವೇದ್ಯಾಂ ವೃದ್ಧವರ್ಧಕಿರೂಪಧೃಕ್ ॥ ೪೫ ॥
ವಂಚನಾರ್ಥಂ ಮನುಷ್ಯಾಣಾಂ ಸಾಕ್ಷಾನ್ನಾರಾಯಣೋ ವಿಭುಃ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಅಶ್ವಮೇಧಸುತ್ಯಾರಂಭಃ—ದಾರುಮೂರ್ತ್ಯಾವಿರ್ಭಾವವರ್ಣನಂ" ನಾಮ ಅಷ್ಟಾದಶೋಽಧ್ಯಾಯಃ

---

ಅಷ್ಟರಲ್ಲಿಯೇ ಆಕಾಶವಾಣಿಯು ಸೂಚಿಸಿದ ಬಡಗಿಯು ಅಲ್ಲಿಗೆ ಬಂದನು. ಅವನು ಇಂದ್ರದ್ಯುಮ್ನರಾಜನನ್ನು ಕಂಡು, "ಅರಸಾ, ನೀನು ಸ್ವಪ್ನದಲ್ಲಿ ಯಾವ ಮೂರ್ತಿಗಳನ್ನು ಕಂಡೆಯೋ ಅವುಗಳನ್ನೇ ನಾನು ದಿವ್ಯರೂಪವಾದ ಈ ವೃಕ್ಷದಿಂದ ಕಡೆದು ಸಿದ್ಧಗೊಳಿಸುತ್ತೇನೆ" ಎಂದು ಹೇಳಿದನು. ತರುವಾಯ ಮುದಿಬಡಗಿಯ ವೇಷದಿಂದಿದ್ದ ಆ ಪುರುಷನು ಅಲ್ಲಿಯೇ ವೇದಿಯಲ್ಲಿಯೇ ಅಂತರ್ಧಾನವಾದನು. ಆತನೇ ಸರ್ವಾಂತರ್ಯಾಮಿಯಾದ ನಾರಾಯಣನು. ಮಾನವರನ್ನು ವಂಚಿಸಲೋಸಗ ಆ ರೀತಿ ಮುದಿಬಡಗಿಯ ವೇಷದಿಂದೈತಂದಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದಜೈಮಿನಿಋಷಿಸಂವಾದದಲ್ಲಿ "ಅಶ್ವಮೇಧಸುತ್ಯಾರಂಭ—ದಾರುಮೂರ್ತಿಯ ಆವಿರ್ಭಾವವರ್ಣನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶೋಽಧ್ಯಾಯಃ

### ವೃದ್ಧವರ್ಧಕಿನಾ ಭಗವತೋ ದಾರುಮೂರ್ತಿನಿರ್ಮಿತಿವರ್ಣನಂ

ಜೈಮಿನಿರುವಾಚ :—

ತತಃ ಸ ಪೃಥಿವೀಪಾಲಸ್ತಥಾ ಕೃತ್ವಾಂತರಿಕ್ಷಗಾ ।
ಯದುವಾಚ ಗಿರಂ ದೇವ ತದ್ವತ್ಪರಿಚಚಾರ ಹ ॥ ೧ ॥
ಏವಂ ದಿನೇ ದಿನೇ ಯಾತೇ ದಿವ್ಯಗಂಧೋಽನುಭೂಯತೇ ।
ಪಾರಿಜಾತಪ್ರಸೂನಾನಾಂ ವೃಷ್ಟಿರ್ಮರ್ತ್ಯೇಷು ದುರ್ಲಭಾ ॥ ೨ ॥
ದಿವ್ಯಸಂಗೀತನಾದಶ್ಚ ಗೀತಾನಿ ರುಚಿರಾಣಿ ಚ ।
ಸ್ವರ್ಗಂಗಾಜಲವೃಷ್ಟಿಶ್ಚ ಸೂಕ್ಷ್ಮಬಿಂದುಸುಶೋಭನಾ ॥ ೩ ॥
ಐರಾವತಾದಿನಾಗಾನಾಂ ಮದಗಂಧೋ ವನದ್ವಿಷೈಃ ।
ದುಃಸಹಃ ಸರ್ವಭೂತಾನಾಂ ಸುಖಕಾರ್ಯನುಭೂಯತೇ ॥ ೪ ॥
ಯಜ್ಞಾರ್ಥಮಾಗತಾ ದೇವಾಸ್ತೇ ಸರ್ವೇ ವಿಗತಜ್ವರಾಃ ।
ಆವಿರ್ಭೂತಂ ಹರಿಂ ದೃಷ್ಟ್ವಾ ಉಪಾಸಾಂಚಕ್ರಿರೇ ದ್ವಿಜಾಃ ॥ ೫ ॥

---

### ಕನ್ನಡದ ಅನುವಾದ

ವೃದ್ಧವರ್ಧಕಿ (ಬಡಗಿ)ಯು ಭಗವಂತನ ದಾರುಮೂರ್ತಿಯನ್ನು ನಿರ್ಮಿಸಿದ್ದು

೧. ಜೈಮಿನಿಯು ಹೇಳುತ್ತಾನೆ :—"ಎಲೈ ವಿಪ್ರರೇ! ತರುವಾಯ ಇಂದ್ರದ್ಯುಮ್ನರಾಜನು ಅಶರೀರವಾಣಿಯು ಅಪ್ಪಣೆಕೊಡಿಸಿದಂತೆಯೇ ಸಮಸ್ತವನ್ನೂ ಏರ್ಪಡಿಸಿ ಪರಿಚರ್ಯೆಯನ್ನು ಮಾಡಿದನು.

೨. ಹೀಗೆ ದಿನಕಳೆದಂತೆಲ್ಲ ಮರ್ತ್ಯಲೋಕಗಳಲ್ಲಿ ದುರ್ಲಭವಾದ ಪಾರಿಜಾತ ಕುಸುಮವೃಷ್ಟಿಯ ದಿವ್ಯಗಂಧವು ಆ ಪ್ರದೇಶದಲ್ಲಿ ಎಲ್ಲರ ಅನುಭವಕ್ಕೂ ಬರುತ್ತಿದ್ದಿತು.

೩. ದೇವತಾಸಂಬಂಧವಾದ ದಿವ್ಯಸಂಗೀತನಾದವೂ, ಮನೋಹರ ಗೀತಧ್ವನಿಯೂ ಕೇಳಿಬರುತ್ತಿದ್ದಿತು. ಬಹಳ ಸಣ್ಣನೆಯ ತುಂತುರುಗಳಿಂದೊಪ್ಪುವ ಸ್ವರ್ಗಲೋಕದ ಗಂಗಾನದೀ ಜಲದ ವೃಷ್ಟಿಯಾಗುತ್ತಿದ್ದಿತು.

೪. ದೇವಲೋಕದ ಐರಾವತವೇ ಮೊದಲಾದ ಗಜಗಳ ಮದಗಂಧವು ಅಲ್ಲಿಯ ಕಾಡಾನೆಗಳಿಗೆ ಸಹಿಸಲಸಾಧ್ಯವಾಯಿತಾದರೂ, ಸಮಸ್ತ ಪ್ರಾಣಿಗಳಿಗೂ ಬಹು ಸುಖಕರವಾಗಿದ್ದಿತು.

೫. ಅಶ್ವಮೇಧಯಾಗಕ್ಕಾಗಿ ದೇವಲೋಕದಿಂದ ಮರ್ತ್ಯಲೋಕಕ್ಕೆ ಬಂದಿದ್ದ ದೇವತೆಗಳೆಲ್ಲರೂ ಭಯಭೀತಿಗಳನ್ನು ತೊರೆದು ಆ ಕ್ಷೇತ್ರದಲ್ಲಿ ಇಂತು ಆವಿರ್ಭವಿಸಿದ ಶ್ರೀಹರಿಯನ್ನು ಕಂಡು ಆತನನ್ನು ಉಪಾಸನೆಮಾಡತೊಡಗಿದರು.

ಯಥಾ ಹಿ ಮಾಧವಂ ಪೂರ್ವಂ ತಥಾ ತಂ ವಿಷ್ಣುಶಾಖಿನಂ ।
ಉಪಾಸನಾಸು ದೇವಾನಾಂ ದಿವ್ಯಚಿಹ್ನಾನಿ ಜಜ್ಞಿರೇ ॥ ೬ ॥
ನಿರ್ವವಾಹ ಸ್ವಯಂ ದೇವಃ ಕ್ರಮಾತ್ಪಂಚದಶೇ ದಿನೇ ।
ಚತುರ್ಮೂರ್ತಿಃ ಸಭಾಗ್ಯವಾನ್ಯಥಾ ಪೂರ್ವಂ ಮಯೋದಿತಃ ॥ ೭ ॥
ತಾದೃಗಾವಿರ್ಬಭೂವಾಸೌ ಯುಷ್ಮಾಕಂ ವರ್ಣಿತಃ ಪುರಾ ।
ದಿವ್ಯಸಿಂಹಾಸನಗತೋ ಬಲಭದ್ರಾಸುದರ್ಶನೈಃ ॥ ೮ ॥
ಶಂಖಚಕ್ರಗದಾಪದ್ಮಲಸದ್ಬಾಹುರ್ಜನಾರ್ದನಃ ।
ಗದಾಮುಸಲಚಕ್ರಾಬ್ಜಂ ಧಾರಯನ್ಪನ್ನಗಾಕೃತಿಃ ॥ ೯ ॥
ಛತ್ರಾಕೃತಿಫಣಾಸ್ಪಷ್ಟಮುಕುಟೋಜ್ಜ್ವಲಕುಂಡಲಃ ।
ಸುಭದ್ರಾ ಚಾರುವದನಾ ವರಾಬ್ಜಾಭಯಧಾರಿಣೀ ॥ ೧೦ ॥
ಲಕ್ಷ್ಮೀಃ ಪ್ರಾದುರ್ಬಭೂವೇಯಂ ಸರ್ವಚೈತನ್ಯರೂಪಿಣೀ ।
ಇಯಂ ಕೃಷ್ಣಾವತಾರೇ ಹಿ ರೋಹಿಣೀಗರ್ಭಸಂಭವಾ ॥ ೧೧ ॥

---

೬. ಪೂರ್ವದಲ್ಲಿ ಆ ಕ್ಷೇತ್ರದಲ್ಲಿ ನೆಲಸಿದ್ದ ನೀಲಮಾಧವಸ್ವಾಮಿಯನ್ನೆಂತೋ ಅಂತು ಆ ವಿಷ್ಣುವೃಕ್ಷವನ್ನು ದೇವತೆಗಳೆಲ್ಲರೂ ಉಪಾಸಿಸುತ್ತಿರಲು ಅದಕ್ಕೆ ಶಂಖ ಚಕ್ರಾದಿ ದಿವ್ಯಚಿಹ್ನೆಗಳುಂಟಾದುವು.

೭. ಹದಿನೈದು ದಿನಗಳು ಕ್ರಮವಾಗಿ ಕಳೆದ ತರುವಾಯ ನಾನು ಹಿಂದೆ ನಿರೂಪಿಸಿದಂತೆ ಆ ಶ್ರೀಮನ್ನಾರಾಯಣನು ತಾನಾಗಿಯೇ ಚತುರ್ಮೂರ್ತಿಯಾಗಿ ರೂಪುಗೊಂಡನು.

೮–೧೦. ಅಯ್ಯಾ ವಿಪ್ರರೇ! ಪೂರ್ವದಲ್ಲಿ ನಾನು ನಿಮಗೆ ವರ್ಣಿಸಿ ಹೇಳಿದಂತೆಯೇ ಆ ಜನಾರ್ದನನು ಶಂಖಚಕ್ರಗದಾಪದ್ಮಗಳಿಂದಲಂಕೃತವಾದ ಚತುರ್ಭುಜಗಳುಳ್ಳವನಾಗಿ ಬಲಭದ್ರಾದೇವಿಯೊಡನೆಯೂ, ಸುದರ್ಶನಚಕ್ರದೊಡನೆಯೂ ದಿವ್ಯಸಿಂಹಾಸನಾಸೀನನಾಗಿ ಆವಿರ್ಭವಿಸಿದನು. ಆ ಬಲಭದ್ರದೇವನಾದರೋ ಗದೆ, ಮುಸಲ, ಚಕ್ರ, ಕಮಲಗಳನ್ನು ಚತುರ್ಬಾಹುಗಳಲ್ಲಿ ತಾಳಿ ಸರ್ಪಾಕೃತಿಯನ್ನು ಹೊಂದಿ, ಛತ್ರಾಕಾರವಾಗಿ ಶೋಭಿಸುವ ಹೆಡೆಗಳ ಕಿರೀಟವನ್ನೊಳಗೊಂಡು, ದಿವ್ಯಕುಂಡಲಧಾರಿಯಾಗಿ ಆ ಸ್ವಾಮಿಯು ವಿರಾಜಿಸಿದನು. ಶ್ರೇಷ್ಠವಾದ ಕಮಲವನ್ನೊಂದು ಕೈಯಲ್ಲಿಯೂ, ಅಭಯಮುದ್ರಿಕೆಯನ್ನಿನ್ನೊಂದು ಕೈಯಲ್ಲಿಯೂ ಹಿಡಿದಿರುವ ಸುಂದರವದನೆಯಾದ ಸುಭದ್ರಾದೇವಿಯೂ ಅಲ್ಲಿ ಕಂಗೊಳಿಸುತ್ತಿದ್ದಳು.

೧೧. ಎಲೈ ದ್ವಿಜರೇ! ಸರ್ವಚೈತನ್ಯಸ್ವರೂಪಿಣಿಯಾದ ಲಕ್ಷ್ಮೀದೇವಿಯೇ ಈ ಸುಭದ್ರೆಯಾಗಿ ಅವತರಿಸಿದಳು. ಈಕೆಯು ಕೃಷ್ಣಾವತಾರದಲ್ಲಿ ರೋಹಿಣಿಯ ಗರ್ಭದಲ್ಲಿ ಜನಿಸಿದಳು.

ಬಲಭದ್ರಾಕೃತಿರ್ಜಾತಾ ಬಲರೂಪಸ್ಯ ಚಿಂತನಾತ್ ।
ಕ್ಷಣಂ ನ ಸಹತೇ ಸಾ ಹಿ ವಿೋಕ್ತುಂ ಲೀಲಾವತಾರಿಣಂ ॥ ೧೨ ॥
ನ ಭೇದೋಽಸ್ತೀಹ ಕೋ ವಿಪ್ರಾಃ ಕೃಷ್ಣಸ್ಯ ಚ ಬಲಸ್ಯ ಚ ।
ಏಕಗರ್ಭಪ್ರಸೂತತ್ವಾದ್ವ್ಯವಹಾರೋಽಥ ಲೌಕಿಕಃ ॥ ೧೩ ॥
ಭಗಿನೀ ಬಲದೇವಸ್ಯೇತ್ಯೇಷಾ ಪೌರಾಣಿಕೀ ಕಥಾ ।
ಪುಂರೂಪೇ ಸ್ತ್ರೀರೂಪೇಣ ಲಕ್ಷ್ಮೀಃ ಸರ್ವತ್ರ ತಿಷ್ಠತಿ ॥ ೧೪ ॥
ಪುಂನಾಮ್ನಾ ಭಗವಾನ್ವಿಷ್ಣುಃ ಸ್ತ್ರೀನಾಮ್ನಾ ಕಮಲಾಲಯಾ ।
ದೇವತಿರ್ಯಙ್ಮನುಷ್ಯಾದೌ ವಿದ್ಯತೇ ನ ತಯೋಃ ಪರಂ ॥ ೧೫ ॥
ಕೋ ಹ್ಯನ್ಯಃ ಪುಂಡರೀಕಾಕ್ಷಾದ್ಭುವನಾನಿ ಚತುರ್ದಶ ।
ಧಾರಯೇತ್ತು ಫಣಾಗ್ರೇಣ ಸೋಽನಂತೋ ಬಲಸಂಜ್ಞಿತಃ ॥ ೧೬ ॥
ತಸ್ಯ ಶಕ್ತಿಸ್ವರೂಪೇಯಂ ಭಗಿನೀ ಶ್ರೀಃ ಪ್ರಕೀರ್ತಿತಾ ।
ಸುದರ್ಶನಂ ತು ಯಚ್ಚಕ್ರಂ ಸದಾ ವಿಷ್ಣೋಃ ಕರೇ ಸ್ಥಿತಂ ॥ ೧೭ ॥

---

೧೨. ಬಲರೂಪನಾದ ಶ್ರೀಮನ್ನಾರಾಯಣನನ್ನು ಧ್ಯಾನಿಸಿದುದರಿಂದ ಈಕೆಯು ಬಲಭದ್ರಾಕೃತಿಯಾದಳು. ಈಕೆಯು ಒಂದು ಕ್ಷಣವೂ ಸಹ ಲೀಲಾ ಮಾನುಷವಿಗ್ರಹನಾದ ಆ ಪರಮಾತ್ಮನ ಅಗಲಿಕೆಯನ್ನು ಸಹಿಸುವುದಿಲ್ಲವು.

೧೩. ಎಲೈ ವಿಪ್ರರೇ! ಶ್ರೀ ಕೃಷ್ಣಪರಮಾತ್ಮನಿಗೂ, ಬಲರಾಮನಿಗೂ ಯಾವ ಭೇದವೂ ಇರುವುದಿಲ್ಲ. ಅವರಿಬ್ಬರೂ ಏಕಗರ್ಭಸಂಭೂತರಾದುದರಿಂದ ಅಣ್ಣತಮ್ಮಂದಿರೆಂದು ಲೋಕವ್ಯವಹಾರವು ಮಾತ್ರವಿರುತ್ತದೆ.

೧೪. ಭದ್ರಾದೇವಿಯು ಬಲರಾಮನ ತಂಗಿಯೆಂದು ಪುರಾಣದಲ್ಲಿನ ಕಥೆ. ಪುರುಷರೂಪದಲ್ಲಿ ಮಹಾವಿಷ್ಣುವೂ, ಸ್ತ್ರೀರೂಪದಿಂದ ಲಕ್ಷ್ಮೀದೇವಿಯೂ ಎಲ್ಲೆಡೆಗಳಲ್ಲಿಯೂ ಇರುವರು.

೧೫. ಪುರುಷನಾಮದಿಂದ ಶ್ರೀ ಮಹಾವಿಷ್ಣುವೂ, ಸ್ತ್ರೀನಾಮದಿಂದ ಶ್ರೀಮಹಾಲಕ್ಷ್ಮೀಯೂ ನೆಲಸಿರುತ್ತಾರೆ. ದೇವತೆಗಳಲ್ಲಿಯಾಗಲಿ, ತಿರ್ಯಕ್ ಜಂತುಗಳಲ್ಲಿಯಾಗಲಿ, ಮಾನವರಲ್ಲಿಯಾಗಲಿ ಅವರಿಗಿಂತಲೂ ಶ್ರೇಷ್ಠರಾದವರಿರುವುದೇ ಇಲ್ಲವು.

೧೬. ಪುಂಡರೀಕಾಕ್ಷನಾದ ಮಹಾವಿಷ್ಣುವಿಗಿಂತಲೂ ಬೇರೆಯಾದ ಯಾವನುತಾನೆ ತನ್ನ ಫಣಾಗ್ರದಿಂದ ಈರೇಳುಲೋಕಗಳನ್ನು ಧರಿಸಿಯಾನು? ಆ ಅನಂತನೇ ಬಲದೇವನೆಂದು ಹೆಸರಾಗಿರುವನು.

೧೭. ಆತನ ಶಕ್ತಿಸ್ವರೂಪಿಣಿಯೇ ಆತನ ತಂಗಿಯು. ಆಕೆಯೇ ಶ್ರೀದೇವಿಯೆಂದು ಕೀರ್ತಿತೆಯಾಗಿರುವಳು. ಸುದರ್ಶನವೆಂಬ ಚಕ್ರವಾದರೊ ಯಾವಾಗಲೂ ವಿಷ್ಣುವಿನ ಕೈಯಲ್ಲಿರತಕ್ಕುದು.

**ಶಂಖಾಗ್ರಸ್ತಂಭಮಧ್ಯಸ್ಥಂ ತದ್ರೂಪಂ ತತ್ತುರೀಯಕಂ ।**
**ಏವಂ ತು ಮೂರ್ತಯಸ್ತೇನ ಚತಸ್ರೋ ವೈ ಪ್ರಕಾಶಿತಾಃ ॥ ೧೮ ॥**
**ನಿರ್ವೃತ್ತೇ ಭಗವದ್ರೂಪೇ ಚತುರ್ಧಾ ದಿವ್ಯರೂಪಿಣೀ ।**
**ಲೋಕಾನಾಮುಪಕಾರಾಯ ಪುನರಾಹಾಂತರಿಕ್ಷಗಾ ॥ ೧೯ ॥**
**ಪಟೈರಾಚ್ಛಾದ್ಯ ಸುದೃಢಂ ನೃಪತೇ ಪ್ರತಿಮಾಸ್ತ್ವಿಮಾಃ ।**
**ಸ್ವಂ ಸ್ವಂ ವರ್ಣಂ ಪ್ರಾಪಯಾಶು ವರ್ಣೈಶ್ಚಿತ್ರಕರ್ಮಣಾ ॥ ೨೦ ॥**
**ನೀಲಾಭ್ರಶ್ಯಾಮಲಂ ವಿಷ್ಣುಂ ಶಂಖೇಂದುಧವಳಂ ಬಲಂ ।**
**ರಕ್ತಂ ಸುದರ್ಶನಂ ಚಕ್ರಂ ಸುಭದ್ರಾಂ ಕುಂಕುಮಾರುಣಾಂ ॥ ೨೧ ॥**
**ನಾನಾಲಂಕಾರರುಚಿರಾಂ ನಾನಾಭಂಗಿ ವಿಭಾಗಶಃ ।**
**ಅಮೀ ದಾರುಸ್ವರೂಪೇಣ ದೃಷ್ಟಾಃ ಪಾಪಾಯ ಹೇತವೇ ॥ ೨೨ ॥**
**ಗೋಪನೀಯಾಃ ಪ್ರಯತ್ನೇನ ಪಟನಿರ್ಯಾಸವಲ್ಕಲೈಃ ।**
**ತಸ್ಮಾತ್ಪೃಥಮನೋವೈತಾಂಸ್ತರೋರೇವಾಸ್ಯ ವಲ್ಕಲೈಃ ॥ ೨೩ ॥**

---

೧೮. ಆ ವಿಷ್ಣುವೃಕ್ಷಸ್ತಂಭದ ಮಧ್ಯದಲ್ಲಿರುವ ಸುದರ್ಶನ ಚಕ್ರರೂಪವೇ ಆ ಪರಮಾತ್ಮನ ನಾಲ್ಕನೆಯಮೂರ್ತಿಯು. ಅಂತು, ಪರಮಾತ್ಮನು ಚತುರ್ಮೂರ್ತಿಗಳನ್ನು ಪ್ರಕಾಶಗೊಳಿಸಿದನು.

೧೯. ಇಂತು ಭಗವದ್ರೂಪವು ದಿವ್ಯರೂಪದಿಂದ ನಾಲ್ಕು ಮೂರ್ತಿಗಳಾಗಿ ವಿರಾಜಿಸಿದಬಳಿಕ ಲೋಕೋಪಕಾರಕ್ಕಾಗಿ ಅಂತರಿಕ್ಷವಾಣಿಯು ಮತ್ತಿಂತೆಂದು ನುಡಿಯಿತು.

೨೦. "ಎಲೈ ನೃಪತಿಯೇ! ಈ ನಾಲ್ಕು ಮೂರ್ತಿಗಳನ್ನೂ ವಸ್ತ್ರದಿಂದ ಮುಚ್ಚಿ ಚಿತ್ರಕರ್ಮನಿಂದ ಆಯಾ ಮೂರ್ತಿಗನುಗುಣವಾದ ಬಣ್ಣಗಳನ್ನು ಹಾಕಿಸು.

೨೧. ಶ್ರೀಮಹಾವಿಷ್ಣುಮೂರ್ತಿಗೆ ನೀಲಮೇಘಶ್ಯಾಮಲವರ್ಣವನ್ನೂ, ಬಲಭದ್ರದೇವನಿಗೆ ಶಂಖದಂತೆಯೂ, ಚಂದ್ರನಂತೆಯೂ ಬಿಳುಪು ಬಣ್ಣವನ್ನೂ, ಸುದರ್ಶನ ಚಕ್ರಮೂರ್ತಿಗೆ ರಕ್ತವರ್ಣವನ್ನೂ, ಸುಭದ್ರಾದೇವಿಗೆ ಶುದ್ಧ ಕುಂಕುಮವರ್ಣವನ್ನೂ ಹಾಕಿಸು.

೨೨. ಇಷ್ಟೆಯಲ್ಲದೆ ಸುಭದ್ರಾದೇವಿಯ ಮೂರ್ತಿಯನ್ನು ನಾನಾಲಂಕಾರಗಳಿಂದ ಸೊಗಸುಗೊಳಿಸಬೇಕು. ಅರಸಾ! ಈ ಮೂರ್ತಿಗಳನ್ನು ಈಗಿರುವಂತೆ ಬರಿಯ ಮರದವುಗಳನ್ನಾಗಿ ಯಾರಾದರೂ ನೋಡಿದುದಾದರೆ ಪಾಪಕ್ಕೆ ಕಾರಣವಾಗುವುದು.

೨೩-೨೪. ಆದುದರಿಂದ ಈ ನಾಲ್ಕು ಮೂರ್ತಿಗಳನ್ನೂ, ವಸ್ತ್ರಗಳಿಂದಲೂ, ಸಣಬುಗಳಿಂದಲೂ, ವಲ್ಕಲಗಳಿಂದಲೂ ಮುಚ್ಚಿಡತಕ್ಕುದು. ಆದುದರಿಂದ

ಶಿಲ್ಪಿಭಿಃ ಕರ್ಮಕುಶಲೈರ್ದೃಢಮಾಚ್ಛಾದಯಾಗ್ರತಃ ।
ವರ್ಷೇ ವರ್ಷೇ ಚ ಸಂಸ್ಕಾರ್ಯಾಃ ಪೂರ್ವಸಂಸ್ಕಾರಮೋಚನಾತ್ ॥೨೪॥
ಋತೇ ವಲ್ಕಲಲೇಪಂ ತು ನ ತು ದಿವ್ಯಶ್ಚಿರಂತನಃ ।
ಪ್ರಮಾದಾದ್ಯ ಇಮಂ ಲೇಪಮುಪನೀಯೇತ ಕಶ್ಚನ ॥ ೨೫ ॥
ದುರ್ಭಿಕ್ಷಂ ಮರಣಂ ರಾಷ್ಟ್ರೇ ಸಂತತಿಶ್ಚಾಸ್ಯ ಹೀಯತೇ ।
ನೇಕ್ಷಿತವ್ಯಾಸ್ತ್ವಯಾ ರಾಜನ್ಕದಾಚಿದಪವಾರಣಾಃ ॥ ೨೬ ॥
ಮನುಷ್ಯೈಶ್ಚಾಪಿ ರಾಜೇಂದ್ರ ದೃಷ್ಟಾಃ ಸ್ಯುರ್ಭಯಹೇತವಃ ।
ತಸ್ಮಾತ್ಸಚಿತ್ರಾ ದ್ರಷ್ಟವ್ಯಾ ಬಹುಲೇಪವಿಲೇಪಿತಾಃ ॥ ೨೭ ॥
ಸುಚಿತ್ರಂ ಪುಂಡರೀಕಾಕ್ಷಂ ಸವಿಲಾಸಂ ಸವಿಭ್ರಮಂ ।
ದೃಷ್ಟ್ವಾ ವಿಮುಚ್ಯತೇ ಪಾಪೈಃ ಕಲ್ಪಕೋಟಿಸಮುದ್ಭವೈಃ ॥ ೨೮ ॥
ಸುಚಿತ್ರಾನ್ಕುರು ರಾಜೇಂದ್ರ ಚಿತ್ರಾನ್ಕಾಮಾನವಾಪ್ಸಸಿ ।
ಆವಿರ್ಬಭೂವ ಭಗವಾಂಸ್ತ್ವಾನುಗ್ರಹಕಾಮ್ಯಯಾ ॥ ೨೯ ॥

---

ಮೊದಲು ಈ ಮರದ ತೊಗಟೆಯಿಂದಲೇ ಕಾರ್ಯಕುಶಲರಾದ ಶಿಲ್ಪಿಗಳಿಂದ ಈ ಮೂರ್ತಿಗಳನ್ನು ಬಲವಾಗಿ ಮುಚ್ಚಿಸುವವನಾಗು. ಪ್ರತಿವರ್ಷದಲ್ಲಿಯೂ ಹಳೆಯ ತೊಗಟೆಗಳನ್ನು ತೆಗೆದುಹಾಕಿಸಿ ಹೊಸ ತೊಗಟೆಗಳನ್ನು ಇವುಗಳಿಗೆ ಸುತ್ತಿಸಬೇಕು.

೨೫–೨೬. ಈ ರೀತಿ ವಲ್ಕಲಲೇಪವಿಲ್ಲದೆಹೋದುದಾದರೆ ಆ ಮೂರ್ತಿಯು ಬಹಳಕಾಲವಿದ್ದು ಪ್ರಕಾಶಿಸುವುದಿಲ್ಲವು. ಯಾವನಾದರೆ ಈ ವಲ್ಕಲಲೇಪವನ್ನು ಪ್ರಮಾದವಶದಿಂದಲಾದರೂ ತೆಗೆದುಹಾಕುವನೋ ಅವನು ಸಂತಾನಹೀನನಾಗುವುದೇ ಅಲ್ಲದೆ, ರಾಷ್ಟ್ರದಲ್ಲಿ ದುರ್ಭಿಕ್ಷವೂ, ಮರಣಾದಿಗಳೂ ತಲೆದೋರುವುವು. ಆದುದರಿಂದೆಲೈ ದೊರೆಯೇ! ನೀನು ಈ ವಲ್ಕಲಲೇಪವಿಲ್ಲದೆ ಬೆತ್ತಲೆಯಾದ ಈ ಮೂರ್ತಿಗಳನ್ನು ಎಂದಿಗೂ ನೋಡಕೂಡದು.

೨೭. ಇತರ ಮಾನವರೂ ಸಹ ಹಾಗೆ ಕಂಡುದೇ ಆದರೆ ಭಯಕ್ಕೆ ಕಾರಣವಾಗುವುದು. ಆದುದರಿಂದ ಬಹುಲೇಪಲೇಪಿತವಾಗಿ, ಚಿತ್ರವರ್ಣವಿರಾಜಿತವಾದ ಮೂರ್ತಿಗಳನ್ನೇ ಎಲ್ಲರೂ ಸಂದರ್ಶಿಸಬೇಕು.

೨೮. ಸೊಗಸಾದ ಚಿತ್ರವರ್ಣಕ್ರಿಯೆಯಿಂದ ಅಲಂಕೃತವಾಗಿ, ವಿಲಾಸವಿಭ್ರಮಗಳಿಂದೊಪ್ಪಿ ಮೆರೆಯುವ ಶ್ರೀಮನ್ನಾರಾಯಣನ ಈ ಮೂರ್ತಿಯನ್ನು ಸಂದರ್ಶಿಸಿದುದಾದರೆ ಮಾನವನು ಕಲ್ಪಕೋಟಿಗಳಿಂದುಂಟಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

೨೯. ರಾಜೇಂದ್ರ! ಆದುದರಿಂದ ಈಗ ನೀನು ಈ ದಾರುಮಯಮೂರ್ತಿಗಳಿಗೆ ಚಿತ್ರವರ್ಣವನ್ನು ಹಾಕಿಸು. ಇದರಿಂದ ನೀನು ಸಮಸ್ತ ಇಷ್ಟಾರ್ಥ

**ತವ ಪ್ರಸಾದಾಜ್ಜಂತೂನಾಂ ಚತುರ್ವರ್ಗಂ ಪ್ರದಾಸ್ಯತಿ ।**
**ನೀಲಾದ್ರೌ ಕಲ್ಪವೃಕ್ಷಸ್ಯ ವಾಯವ್ಯಾಂ ಶತಹಸ್ತತಃ ॥ ೩೦ ॥**
**ಪ್ರದೇಶೇ ಸುಮಹತ್ಸ್ಥಾನೇ ಪ್ರಾಸಾದಂ ಸುದೃಢಾಯತಂ ।**
**ಉತ್ತರೇ ನರಸಿಂಹಸ್ಯ ಸಹಸ್ರಕರಮುಚ್ಛ್ರಿತಂ ॥ ೩೧ ॥**
**ಕಾರಯಿತ್ವಾ ಪ್ರತಿಷ್ಠಾಪ್ಯ ತತ್ರೈನಂ ವಿನಿವೇಶಯ ।**
**ಪುರಾ ಸ್ಥಿತಂ ಪರ್ವತೇಽಸ್ಮಿನ್ಯೋಽಭ್ಯರ್ಚಯತಿ ಮಾಧವಂ ॥ ೩೨ ॥**
**ನಾಮ್ನಾ ವಿಶ್ವಾವಸುರ್ನಾಮ ಶಬರೋ ವೈಷ್ಣವೋತ್ತಮಃ ।**
**ಪುರೋಧಸಃ ಸಖ್ಯಮಾಸೀತ್ತೇನ ಸಾರ್ಧಂ ಪುರಾ ಚ ತೇ ॥ ೩೩ ॥**
**ತಯೋಃ ಸಂತತಿರೇವಾಸ್ಯ ಲೇಪಸಂಸ್ಕಾರಕರ್ಮಣಿ ।**
**ನಿಯುಜ್ಯತಾಂ ಮಹಾರಾಜ ಭವಿಷ್ಯತ್ಸೂತ್ಸವೇಷು ಚ ॥ ೩೪ ॥**
**ವಿರರಾಮೈತದಾಭಾಷ್ಯ ಸಾ ತು ದಿವ್ಯಾ ಸರಸ್ವತೀ ।**
**ತಯೋಪದಿಷ್ಟಮಾಕರ್ಣ್ಯ ಪ್ರಹೃಷ್ಟೇನಾಂತರಾತ್ಮನಾ ॥ ೩೫ ॥**

---

ಗಳನ್ನೂ ಪಡೆಯುತ್ತೀಯೆ. ಅರಸಾ! ಭಗವಂತನು ನಿನ್ನನ್ನು ಅನುಗ್ರಹಿಸ ಲೋಸುಗವೇ ಈ ರೀತಿ ಆವಿರ್ಭವಿಸಿರುವನು.

೩೦–೩೩. ಇಷ್ಟೆಯಲ್ಲದೆ ನಿನ್ನಲ್ಲಿ ತನಗಿರುವ ಅನುಗ್ರಹದಿಂದಲೇ ಈ ಪ್ರಭುವು ತನ್ನನ್ನು ಸೇವಿಸಿದ ಸಮಸ್ತ ಪ್ರಾಣಿಗಳಿಗೂ ಧರ್ಮಾದಿ ಚತುರ್ವಿಧ ಪುರುಷಾರ್ಥಗಳನ್ನನುಗ್ರಹಿಸುತ್ತಾನೆ. ಪ್ರಕೃತದಲ್ಲಿ ಈ ನೀಲಾಚಲದ ವಾಯವ್ಯ ದಿಕ್ಕಿನಲ್ಲಿ ಹತ್ತು ಹಸ್ತಗಳಾಚೆಗಿರುವ ಪ್ರದೇಶವು ಮಹಿಮಾಸ್ಪದವಾದ ಸ್ಥಳ ವಾಗಿರುವುದು. ಅಲ್ಲಿ ನೀನು ನೃಸಿಂಹದೇವಾಲಯದ ಉತ್ತರಕ್ಕೆ ಒಂದು ಸಾವಿರ ಹಸ್ತಗಳಷ್ಟು ಎತ್ತರವಾಗಿಯೂ, ದೃಢವಾಗಿಯೂ ಇರುವ ದೇವಾಲಯ ವನ್ನು ಕಟ್ಟಿಸಿ ಅಲ್ಲಿ ಈ ಮೂರ್ತಿಗಳನ್ನು ಪ್ರತಿಷ್ಠೆಮಾಡಿ ನೆಲೆಗೊಳಿಸು. ಹಿಂದೆ ನೀಲಾದ್ರಿಯಲ್ಲಿ ಶ್ರೀಮಾಧವಸ್ವಾಮಿಯನ್ನು ಅರ್ಚಿಸುತ್ತಿದ್ದ ವಿಶ್ವಾವಸು ವೆಂಬುವನಿರುವನಷ್ಟೆ. ಆತನು ವೈಷ್ಣವೋತ್ತಮನಾದ ಶಬರನು. ಅಲ್ಲದೆ ಪೂರ್ವದಲ್ಲಿಯೇ ಆತನಿಗೂ ನಿನ್ನ ಪುರೋಹಿತನಿಗೂ ಕೆಳೆತನವೂ ಬೆಳೆದಿರುವುದು.

೩೪. ಎಲೈ ಮಹಾರಾಜನೇ! ಇನ್ನುಮುಂದೆ ನಡೆಯುವ ಮಹೋತ್ಸವ ಗಳಲ್ಲೆಲ್ಲ ಈ ಮೂರ್ತಿಗೆ ವಲ್ಕಲಲೇಪವನ್ನೆಸಗುವ ಕಾರ್ಯವನ್ನು ಆ ವಿಶ್ವಾ ವಸುವಿನ ಸಂತತಿಯವರಿಗೇ ವಹಿಸು.''

೩೫–೩೭. ಎಲೈ ದ್ವಿಜರೇ! ಆಕಾಶವಾಣಿಯು ಇಂತು ನುಡಿದು ಮೌನ ವನ್ನು ತಾಳಿತು. ನೃಪೋತ್ತಮನಾದ ಇಂದ್ರದ್ಯುಮ್ನನಾದರೋ ದಿವ್ಯ ಸರಸ್ವ ತಿಯ ವಾಣಿಯನ್ನಾಲಿಸಿ ಸಂತುಷ್ಟಾಂತರಂಗನಾಗಿ, ಮಹಾವೇದಿಕೆಯಮೇಲಿದ್ದ ಆ ಮೂರ್ತಿಗಳ ಹೊದಿಕೆಗಳನ್ನು ತೆಗಿಸಿದನು. ಆಗ ಅಲ್ಲಿದ್ದವರೆಲ್ಲರೂ, ರತ್ನ

ವೇಷ್ಟನಂ ಮೋಚಯಾಮಾಸ ಮಹಾವೇದ್ಯಾ ನೃಪೋತ್ತಮಃ ।
ದದೃಶುಸ್ತೇ ತದಾ ಸರ್ವೇ ರತ್ನಸಿಂಹಾಸನೇ ಸ್ಥಿತಂ ॥ ೩೬ ॥
ರಾಮಂ ಕೃಷ್ಣಂ ಸುಭದ್ರಾಂ ಚ ವಾಸುದೇವಂ ಸುದರ್ಶನಂ ।
ಯಥೋಪದಿಷ್ಟಲೇಪ್ಯಾದಿ ಸಂಸ್ಕಾರೇ ರುಚಿರಾಕೃತಿಂ ॥ ೩೭ ॥
ಕೃಪಯಾ ಸ್ಮೇರವದನಮುನ್ನತಾಯತವಕ್ಷಸಂ ।
ದೀನಾನಾಮುದ್ಧೃತೌ ನಾಥಂ ಪ್ರಲಂಬಭುಜಪಂಜರಂ ॥ ೩೮ ॥
ಪ್ರಬುದ್ಧಪುಂಡರೀಕಾಕ್ಷಂ ಹಾಸಶೋಣಾಯತಾಧರಂ ।
ಪಶ್ಯತಾಂ ದೃಷ್ಟಿಮಾತ್ರೇಣ ಹರ್ತಾರಂ ಪಾಪಸಂಚಯಂ ॥ ೩೯ ॥
ಪದ್ಮಾಸನಸ್ಥಿತಂ ಕೃಷ್ಣಂ ದಿವ್ಯಾಲಂಕಾರಭೂಷಿತಂ ।
ಸ್ವತೇಜಸಾ ಪರಿವೃತಂ ದಾರುದೇಹೇಽಪಿ ನಿರ್ಮಲಂ ॥ ೪೦ ॥
ನೀಲಜೀಮೂತಸಂಕಾಶಂ ಸರ್ವಸಂತಾಪನಾಶನಂ ।
ದದರ್ಶ ಬಲದೇವಂ ಚ ಸಾಟ್ಟಹಾಸಮುಖಾಂಬುಜಂ ॥ ೪೧ ॥
ಫಣಾಮಂಡಲವಿಸ್ತೀರ್ಣಂ ವಾರುಣೀಘೂರ್ಣಿತೇಕ್ಷಣಂ ।
ಪ್ರೋತ್ಥಿತಂ ನಾಗರಾಜಾನಂ ಪೀನೋನ್ನತಸುವಕ್ಷಸಂ ॥ ೪೨ ॥

---

ಸಿಂಹಾಸನದಮೇಲೆ ಮಂಡಿಸಿ ಗಗನವಾಣಿಯು ಉಪದೇಶಿಸಿದಂತೆ ವಲ್ಕಲ ಲೇಪ ಚಿತ್ರವರ್ಣ ಸಂಸ್ಕಾರಾದಿಗಳಿಂದೊಪ್ಪಿ ಸುಂದರಾಕಾರವಾಗಿ ಶೋಭಿಸುತ್ತಿರುವ, ಶ್ರೀಬಲರಾಮ, ಕೃಷ್ಣ, ಸುಭದ್ರಾ, ಶ್ರೀವಾಸುದೇವ, ಸುದರ್ಶನ ಮೂರ್ತಿಗಳನ್ನು ಕಂಡರು.

೩೮–೪೪. ಕೃಪೆಯೊಡಗೂಡಿ, ನಸುನಗೆಗೂಡಿದ ಮುಖದಿಂದೊಪ್ಪಿ, ಉನ್ನತವೂ ವಿಶಾಲವೂ ಆದ ವಕ್ಷಸ್ಥಳವಿರಾಜಿತನಾಗಿ, ದೀನರನ್ನು ಉದ್ಧಾರ ಮಾಡುವ ಪ್ರಭುವಾಗಿ, ನೀಳವಾದ ಭುಜಪಂಜರವುಳ್ಳವನಾಗಿ, ಪೂರ್ಣವಾಗಿ ಅರಳಿದ ಕೆಂದಾವರೆಯನ್ನನುಕರಿಸುವ ಕಂಗಳುಳ್ಳವನಾಗಿ, ಮಂದಹಾಸದಿಂದೊಪ್ಪಿರುವ ವಿಶಾಲವಾದ ಕೆಂದುಟಿಗಳಿಂದ ಕೂಡಿದವನಾಗಿ, ದೃಷ್ಟಿಮಾತ್ರದಿಂದಲೇ ತನ್ನನ್ನು ಸಂದರ್ಶಿಸುವವರ ಪಾಪರಾಶಿಯನ್ನು ಹರಿಸುವವನಾಗಿ, ಪದ್ಮಾಸನಾಸೀನನಾಗಿ, ದಿವ್ಯಾಲಂಕಾರಭೂಷಿತನಾಗಿ, ತನ್ನದೇ ಆದೊಂದು ದಿವ್ಯತೇಜಸ್ಸಿನಿಂದ ಪರಿವೃತನಾಗಿ, ದಾರುಮಯ ದೇಹದಿಂದಿದ್ದರೂ ನಿರ್ಮಲನಾಗಿ, ನೀಲಮೇಘಶ್ಯಾಮಳಕಾಂತಿಯುಳ್ಳವನಾಗಿಯೂ, ಸಮಸ್ತ ಭಕ್ತಜನರ ಸಂತಾಪವನ್ನು ನಾಶಗೊಳಿಸುವವನಾಗಿರುವ ಶ್ರೀಕೃಷ್ಣಮೂರ್ತಿಯನ್ನು ಆ ಇಂದ್ರದ್ಯುಮ್ನರಾಜನು ಕಂಡನು. ಅಂತೆಯೇ ಅಟ್ಟಹಾಸದೊಡಗೂಡಿದ ಮುಖಕಮಲವುಳ್ಳವನಾಗಿ, ಹೆಡೆಗಳ ಗುಂಪಿನ ವಿಸ್ತಾರವುಳ್ಳವನಾಗಿ, ಸುರೆಯ ಮತ್ತಿನಿಂದ ತಿರುಗುತ್ತಿರುವ ಕಣ್ಣಾಲಿಗಳುಳ್ಳವನಾಗಿ, ಮೇಲಕ್ಕೆ ಉಬ್ಬಿ, ದಪ್ಪವೂ,

ಕಿಂಚಿನ್ನತಂ ಪೃಷ್ಠದೇಶೇ ಕುಂಡಲೀಕೃತವಿಗ್ರಹಂ ।
ಅಗ್ರಸಂಫುಲ್ಲಕಕುಭಂ ಕೈಲಾಸಶಿಖರಂ ಯಥಾ ॥ ೪೩ ॥
ಹಲಚಕ್ರಾಬ್ಜಮುಸಲಧಾರಿಣಂ ವನಮಾಲಿನಂ ।
ಹಾರಕುಂಡಲಕೇಯೂರಕಿರೀಟಮುಕುಟೋಜ್ಜ್ವಲಂ ॥ ೪೪ ॥
ತಯೋರ್ಮಧ್ಯೇ ಸ್ಥಿತಾಂ ಲಕ್ಷ್ಮೀಂ ಸುಭದ್ರಾಂ ಭದ್ರರೂಪಿಣೀಂ॥ ೪೫ ॥
ಸರ್ವದೇವಾರಣಿಂ ಪಾಪಸಾಗರೋತ್ತಾರಕಾರಿಣೀಂ ।
ವಿಕಚಾಂಭೋಜವದನಾಂ ವರಾಬ್ಜಾಭಯಧಾರಿಣೀಂ ॥ ೪೬ ॥
ರೂಪಲಾವಣ್ಯವಸತಿಂ ಶೋಭಮಾನಾಂ ಪ್ರಸಾಧನೈಃ ।
ಕುಂಕುಮಾರುಣದೇಹಾಂ ತಾಂ ಸಾಕ್ಷಾಲ್ಲಕ್ಷ್ಮೀಮಿವಾಪರಾಂ ॥ ೪೭ ॥
ದದರ್ಶ ವಿಷ್ಣೋರ್ವಾಮಸ್ಥಾಂ ಚಕ್ರಶಾಖಾಗ್ರನಿರ್ಮಿತಾಂ ।
ಬಾಲಾರ್ಕಸದೃಶೀಂ ತೀಕ್ಷ್ಣಧಾರಾಂ ತೇಜೋಮಯೀಂ ದ್ವಿಜಾಃ ॥ ೪೮ ॥
ತಾಂ ದೃಷ್ಟ್ವಾನಂದಪಾಥೋಧಿನಿಮಗ್ನಃ ಪೃಥಿವೀಪತಿಃ ।
ಕರ್ತವ್ಯಮೂಢಃ ಸ್ವತನೌ ಸ್ವಯಂ ನ ಪ್ರಬಭೂವ ಹ ॥ ೪೯ ॥

---

ಎತ್ತರವೂ ಆದ ವಕ್ಷಸ್ಥಳವುಳ್ಳವನಾಗಿ, ಹಿಂಭಾಗದಲ್ಲಿ ಸ್ವಲ್ಪ ಕುಗ್ಗಿ ಕುಂಡಲಾಕಾರವಾದ ಮೈಯುಳ್ಳವನಾಗಿ, ಕೈಲಾಸ ಶಿಖರದಂತೆ ಮುಂಭಾಗದಲ್ಲಿ ಸ್ವಲ್ಪ ಹರಡಿರುವ ಹೆಗಲುಬ್ಬೆಯುಳ್ಳವನಾಗಿ ಒಪ್ಪುತ್ತಿರುವ ನಾಗರಾಜನಾಗಿ ನೇಗಿಲು, ಚಕ್ರ, ಕಮಲ, ಮುಸಲಗಳನ್ನು ಧರಿಸಿ, ವನಮಾಲಾವಿಭೂಷಿತನಾಗಿ, ಹಾರ ಕುಂಡಲಕೇಯೂರಕಿರೀಟಮುಕುಟಗಳಿಂದ ಉಜ್ವಲನಾಗಿರುವ ಬಲದೇವನನ್ನು ಕಂಡನು.

೪೫-೪೮. ಈ ರೀತಿ ಬೆಳಗುತ್ತಿರುವ ಶ್ರೀಕೃಷ್ಣ ಬಲರಾಮರ ನಡುವೆ ಮಂಗಳರೂಪಿಣಿಯಾಗಿ ಶ್ರೀಮಹಾಲಕ್ಷ್ಮೀ ಸ್ವರೂಪಿಣಿಯೂ, ಸಮಸ್ತ ದೇವತೆಗಳಿಗೂ ಅರಣಿಯಂತಿರುವವಳೂ, ತನ್ನನ್ನು ನಂಬಿದ ಭಕ್ತರನ್ನು ಪಾಪಸಾಗರದಿಂದ ಕಡೆಹಾಯಿಸುವವಳೂ, ಅರಳಿದ ತಾವರೆಯಂತಿರುವ ಮುಖವುಳ್ಳವಳೂ, ವರದಾಭಯಹಸ್ತಕಮಲಗಳುಳ್ಳವಳೂ, ರೂಪಲಾವಣ್ಯಗಳಿಗೆ ನೆಲೆಮನೆಯಾಗಿ ವಿವಿಧಾಲಂಕಾರಭೂಷಿತಳೂ, ಕುಂಕುಮದಂತೆ ಅರುಣವರ್ಣವುಳ್ಳವಳೂ, ಸಾಕ್ಷಾತ್ 'ಲಕ್ಷ್ಮೀದೇವಿಯ ಅಪರಾವತಾರದಂತಿರುವವಳೂ ಆದ ಸುಭದ್ರಾದೇವಿಯ ಮೂರ್ತಿಯನ್ನೂ ಕಂಡನು. ಮಹಾವಿಷ್ಣುವಿನ ವಾಮಭಾಗದಲ್ಲಿ ಚಕ್ರಶಾಖೆಯ ಅಗ್ರಭಾಗದಲ್ಲಿ ನಿರ್ಮಿತವಾಗಿ, ಆಗತಾನೆ ಉದಿಸುತ್ತಿರುವ ದಿನಕರನ ಕಾಂತಿಯನ್ನು ತಳೆದು ತೀಕ್ಷ್ಣವಾದ ಅಂಚುಗಳನ್ನೊಳಗೊಂಡು ತೇಜೋಮಯವಾಗಿ ಶೋಭಿಸುತ್ತಿರುವ ಚಕ್ರವನ್ನೂ ಕಂಡನು.

೪೯. ಆಗಲಾ ಪೃಥಿವೀಪತಿಯಾದ ಇಂದ್ರದ್ಯುಮ್ನನು ಆ ದಿವ್ಯಮೂರ್ತಿ

**ದರಮೀಲಿತನೇತ್ರಃ ಸನ್ಸೃಜನ್ಬಾಷ್ಪಾಂಬು ಕೇವಲಂ ।**
**ಕೃತಾಂಜಲಿಪುಟಸ್ತಸ್ಥೌ ಸ್ಥೂಣಾಕಾರೋ ನರೋತ್ತಮಃ ॥ ೫೦ ॥**
**ಉವಾಚ ತಂ ಮುನಿವರಃ ಸ್ಮಿತವಕ್ತ್ರಃ ಕ್ಷಿತೀಶ್ವರಂ ।**
**ಯದರ್ಥಂ ಶ್ರಮಮಾಪನ್ನಸ್ತತ್ತ್ವಾಂಪ್ರತಮಭೂತ್ತವ ॥ ೫೧ ॥**
**ಪ್ರತ್ಯಕ್ಷಂ ನೃಪಶಾರ್ದೂಲ ಏಕಸ್ತ್ವಂ ಭಾಗ್ಯವಾನ್ಭುವಿ ।**
**ಅಮುಂ ಪಶ್ಯ ಜಗನ್ನಾಥಂ ಪುಂಡರೀಕಾಯತೇಕ್ಷಣಂ ॥ ೫೨ ॥**
**ಭಕ್ತಾನುಗ್ರಹಪಾಥೋಧಿಂ ಸರ್ವಜ್ಞಾನನಿಧಿಂ ಹರಿಂ ।**
**ಯಂ ದ್ರಷ್ಟುಂ ಯೋಗಿನೋ ನಿತ್ಯಂ ಯತಂತಿ ಯತಮಾನಸಾಃ ॥ ೫೩ ॥**
**ಅವಧಾನೇನ ಮಹತಾ ಕ್ಷಣಂ ಪಶ್ಯಂತಿ ಮಾನವಾಃ ।**
**ಸೋऽಯಮ್ ದಾರುಮಯಂ ದೇವಂ ಸಮಾಸ್ಥಾಯ ಜನಾರ್ದನಃ ॥ ೫೪ ॥**
**ಅನುಗ್ರಹೀತುಂ ತ್ವಾಂ ಭೂಪ ಪ್ರತ್ಯಕ್ಷತ್ವಮುಪಾಗತಃ ।**
**ಭಜಸ್ವೈನಂ ಧರಣೀನಾಥಂ ಸ್ತುಹಿ ಕಾರುಣ್ಯಸಾಗರಂ ॥ ೫೫ ॥**

---

ಯನ್ನು ಕಂಡು ಆನಂದಸಾಗರದಲ್ಲಿ ಮುಳುಗಿ, ಮುಂದೇನುಮಾಡುವುದಕ್ಕೂ ತೋಚದೆ ತನ್ನನ್ನು ತಾನೇ ತಿಳಿಯದವನೂ ಆದನು.

೫೦. ಆತನು ಅರೆಮುಗಿದ ಕಂಗಳುಳ್ಳವನಾಗಿ ಬಹಳವಾಗಿ ಆನಂದ ಬಾಷ್ಪಗಳನ್ನು ಸುರಿಸುತ್ತ, ಕೈಗಳನ್ನು ಜೋಡಿಸಿಕೊಂಡು ಕಂಬದಂತೆ ಕಟ್ಟ ಕದಲದೆ ಸುಮ್ಮನೆ ನಿಂತುಬಿಟ್ಟನು.

೫೧-೫೨. ಆಗ ದೇವಮುನಿಯಾದ ನಾರದನು ನಸುನಗುತ್ತ ಆ ಕ್ಷಿತೀಶ್ವರ ನನ್ನು ಕುರಿತು, "ಅಯ್ಯಾ ಇಂದ್ರದ್ಯುಮ್ನನೇ! ನೀನು ಯಾವುದಕ್ಕಾಗಿ ಇಷ್ಟೊಂದು ಶ್ರಮವನ್ನು ವಹಿಸಿದೆಯೋ ಅದೀಗ ಕೈಗೂಡಿದೆ; ಪ್ರತ್ಯಕ್ಷವೂ ಆಗಿದೆ. ಓ ನೃಪಶ್ರೇಷ್ಠಾ! ಈ ಭೂಮಂಡಲದಲ್ಲಿ ನೀನೊಬ್ಬನೇ ಭಾಗ್ಯ ಶಾಲಿಯು. ಪುಂಡರೀಕಾಯತೇಕ್ಷಣನಾದ ಈ ಜಗನ್ನಾಥನನ್ನು ನೋಡು.

೫೩. ಈ ಶ್ರೀಹರಿಯು ಭಕ್ತರನ್ನು ಅನುಗ್ರಹಿಸುವುದರಲ್ಲಿ ಸಮುದ್ರ ಪ್ರಾಯನಾದವನು. ಈ ಪ್ರಭುವನ್ನು ಸಂದರ್ಶಿಸಲೋಸುಗ ಯೋಗಿಗಳಾದವರು ಮನಸ್ಸನ್ನು ನೆಲೆಗೊಳಿಸಿಕೊಂಡು ಸಂತತವೂ ಪ್ರಯತ್ನಿಸುತ್ತಿರುತ್ತಾರೆ.

೫೪-೫೬. ಮಾನವರಾದರೋ ಮಹತ್ತರವಾದ ಅವಧಾನದಿಂದ ಈ ಸ್ವಾಮಿ ಯನ್ನು ಒಂದು ಕ್ಷಣಕಾಲಮಾತ್ರ ಕಾಣುತ್ತಾರೆ. ಅಂತಹ ಜನಾರ್ದನನು ದಾರುಮಯ ದೇಹವುಳ್ಳವನಾಗಿ ನಿನ್ನನ್ನು ಅನುಗ್ರಹಿಸಲೋಸುಗ ಇಲ್ಲಿ ಪ್ರತ್ಯಕ್ಷ ನಾಗಿರುವನು. ಮಹಾರಾಜ! ಕರುಣಾಸಮುದ್ರನಾದ ಈ ದೇವನನ್ನು ಭಜಿಸು.

**ದದಾತಿ ಸಂಸ್ತುತಃ ಕಾಮಾನ್ಸರ್ವಾನ್ನೃಪ ಮನೋಗತಾನ್ ॥ ೫೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ವೃದ್ಧವರ್ಧಕಿನಾ ಭಗವತೋ ದಾರುಮೂರ್ತಿನಿರ್ಮಿತಿವರ್ಣನಂ" ನಾಮ ಏಕೋನವಿಂಶೋಽಧ್ಯಾಯಃ**

---

ಸ್ತುತಿಸು. ಈತನು ನಿನ್ನಿಂದ ಸಂಸ್ತುತನಾಗಿ ನಿನಗೆ ಮನೋಗತವಾದ ಸಕಲಾಭೀಷ್ಟಗಳನ್ನೂ ಕರುಣಿಸುತ್ತಾನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ವೃದ್ಧವರ್ಧಕಿ (ಬಡಗಿ)ಯು ಭಗವಂತನ ದಾರುಮೂರ್ತಿಯನ್ನು ನಿರ್ಮಿಸಿದ್ದು" ಎಂಬ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶೋಽಧ್ಯಾಯಃ

### ಇಂದ್ರದ್ಯುಮ್ನ ನಾರದಕೃತ ದಾರುಮೂರ್ತಿಸ್ತೋತ್ರಂ — ಬ್ರಾಹ್ಮಣಾದಿಪೂಜನವರ್ಣನಂ

ಜೈಮಿನಿರುವಾಚ :—

**ಇತ್ಥಂ ಪ್ರಬೋಧಿತಸ್ತೇನ ನಾರದೇನ ಕ್ಷಿತೀಶ್ವರಃ ।**
**ತುಷ್ಟಾವ ಜಗತಾಂ ನಾಥಂ ವಚೋಭಿಃ ಕರುಣಾನ್ವಿತಂ ॥ ೧ ॥**

ಇಂದ್ರದ್ಯುಮ್ನ ಉವಾಚ :—

**ತ್ವದಂಘ್ರಿಪಾಥೋಜಯುಗಂ ಮುರಾರೇ**
**ನೋಪಾಸಿತಂ ಜನ್ಮಸು ಪೂರ್ವಜೇಷು ।**
**ತತ್ಕರ್ಮಣಾಂ ದಾರುಣಪಾಕಭಾಜಂ**
**ದೀನಂ ಪರಿತ್ರಾಹಿ ಕೃಪಾಂಬುಧೇ ಮಾಂ ॥ ೨ ॥**
**ಕ್ವ ನಿರ್ಮಲಂ ತ್ವಚ್ಚರಣಾಬ್ಜಯುಗ್ಮಂ**
**ವಿರಿಂಚಿರುದ್ರೇಂದ್ರಕಿರೀಟಮಗ್ನಂ ।**
**ಕ್ವಾಹಂ ಕುದೀನಃ ಶಕೃದಸ್ರಮಾಂಸ**
**ಮೂತ್ರಾಸ್ಥಿಸಂಘೈಃ ಪಿಹಿತಸ್ತ್ವಚಾ ವೈ ॥ ೩ ॥**

---

## ಕನ್ನಡದ ಅನುವಾದ

### ಇಂದ್ರದ್ಯುಮ್ನ ನಾರದಕೃತ ದಾರುಮೂರ್ತಿಸ್ತೋತ್ರ — ಬ್ರಾಹ್ಮಣಾದಿಪೂಜನವರ್ಣನ

೧. ಜೈಮಿನಿಯು ಹೇಳುತ್ತಾನೆ:— ಎಲೈ ಮುನಿಗಳಿರಾ! ನಾರದ ಮುನೀಂದ್ರನಿಂತು ಎಚ್ಚರಿಸಲು ಆ ಕ್ಷಿತೀಶ್ವರನು ಕರುಣಾನ್ವಿತನಾದ ಜಗನ್ನಾಥ ಸ್ವಾಮಿಯನ್ನು ಈ ರೀತಿ ಭಕ್ತಿಭರಿತವಾದ ವಚನಗಳಿಂದ ಸ್ತುತಿಸಿದನು.

೨. ಇಂದ್ರದ್ಯುಮ್ನನು ಸ್ತುತಿಸುತ್ತಾನೆ:—"ಓ ಕೃಪಾಸಮುದ್ರನಾದ ಜಗನ್ನಾಥಸ್ವಾಮಿಯೇ! ಮುರಾಸುರಧ್ವಂಸಿಯಾದ ಪರಮಾತ್ಮಾ!! ನಾನು ಹಿಂದಣ ಜನ್ಮಗಳಲ್ಲಿ ನಿನ್ನ ಪಾದಕಮಲದ್ವಂದ್ವವನ್ನು ಉಪಾಸನೆಮಾಡಿರುವುದಿಲ್ಲವು. ಆ ಕರ್ಮಪರಿಪಾಕದಿಂದುಂಟಾದ ಭಯಂಕರ ಪಾಪಕ್ಕೆ ಪಾತ್ರನಾಗಿ ದೀನನಾಗಿರುವ ನನ್ನನ್ನು ರಕ್ಷಿಸು.

೩. ಬ್ರಹ್ಮರುದ್ರೇಂದ್ರಾದಿ ದೇವತೆಗಳ ಕಿರೀಟಗಳಿಂದ ಸಂಸೇವಿತವಾಗಿ, ನಿರ್ಮಲವಾಗಿರುವ ನಿನ್ನ ಚರಣಕಮಲದ್ವಂದ್ವವೆತ್ತ? ಕೇವಲ ರಕ್ತಮಾಂಸ ಪುರೀಷಾಸ್ಥಿಸಂಘವನ್ನು ಅಡಗಿಸಿಕೊಂಡಿರುವ ತೊಗಲಿನ ಗೊಂಬೆಯಾಗಿ ಅತಿ ಹೇಯನಾಗಿ ದೈನ್ಯವನ್ನು ಹೊಂದಿರುವ ನಾನೆತ್ತ?

ಅಸಾರ ಸಂಸಾರಪರಿಭ್ರಮೇಣ
ಶ್ರಮಾತುರಸ್ತ್ವಾಂ ಕಥಮೀಶ ಜಾನೇ ।
ಜಾನಂತಿ ತೇ ತ್ವಾಂ ಖಲು ದೇವದೇವ
ಯೇಷಾಂ ಭವೋ ದುಃಖಭವಪ್ರಕಾಶಃ ॥ ೪ ॥
ಪ್ರಭೋ ಮಯಾ ದುಃಖಮನೇಕಜನ್ಮ
ಪಾಪಾರ್ಜಿತಂ ಭುಕ್ತಮನೇಕಭಾವಂ ।
ಶುಭಾರ್ಜಿತೋ ಯಃ ಸುಖಲೇಶಭಾವೋ
ನಿದರ್ಶನಂ ಯನ್ಮಧುಪೃಕ್ತತಿಕ್ತೇ ॥ ೫ ॥
ಯದೇವ ಸೌಖ್ಯಾನುಭವಾಯ ದೇವ
ಕರ್ಮಾರ್ಜಿತೋ ಮೇ ವಿಷಯೋಪಭೋಗಃ ।
ಸ ಏವ ದುಃಖಂ ಪರಿಣಾಮತೋ ಮೇ
ನ ಮದ್ವಿಧೋ ದುಃಖಿಜನೋಽಸ್ತಿ ಚಾನ್ಯಃ ॥ ೬ ॥
ವಿಭೋ ಯದಿ ತ್ವಾಂ ಮನಸಾಪಿ ಪೂರ್ವ
ಮುಪಾಸ್ತಮನ್ಯದ್ವಿಷಮೇಕ್ಷಣೋಽಹಂ ।
ಕಥಂ ತದಾ ಲಪ್ಸ್ಯಮನೇಕಜನ್ಮ
ಪುನಃ ಪುನರ್ಭೋಗ್ಯಮಶೇಷದುಃಖಂ ॥ ೭ ॥

---

೪. ಜಗದೀಶ! ಯಾವೊಂದು ಸಾರವೂ ಇಲ್ಲದೆ ಬರಡಾಗಿರುವ ಸಂಸಾರ ಸಾಗರದಲ್ಲಿ ಮುಳುಗಿ ಅಲೆದಲೆದು ಆಯಾಸಗೊಂಡು ಬಳಲುತ್ತಿರುವ ನಾನು ನಿನ್ನನ್ನು ತಿಳಿಯುವುದೆಂತು? ದೇವದೇವ! ಯಾರಿಗೆ ಈ ಸಂಸಾರ ದುಃಖ ವಳಿದು ಸುಜ್ಞಾನವುಂಟಾಗಿರುವುದೋ ಅವರು ಮಾತ್ರ ನಿನ್ನನ್ನು ತಿಳಿಯುತ್ತಾರೆ.

೫. ಪ್ರಭುವೇ! ನಾನು ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಸಂಪಾದಿಸಿದ ದುಃಖವನ್ನು ಬಗೆಬಗೆಯಾಗಿ ಅನುಭವಿಸಿರುತ್ತೇನೆ! ಆದರೆ ಪುಣ್ಯಾರ್ಜನೆಯಿಂದುಂಟಾದ ಯಾವ ಸ್ವಲ್ಪ ಸುಖವೆಂಬುದುಂಟೋ (ನಿನ್ನ ಸಂದರ್ಶನವಾದುದು ಅದೊಂದು ಪುಣ್ಯಾರ್ಜನೆಯ ಫಲವೇ ಸರಿ) ಅದು ಜೇನು ತಗುಲಿದ ಕಹಿಗೆ ನಿದರ್ಶನವು.

೬. ದೇವಾ! ಸೌಖ್ಯವನ್ನು ಅನುಭವಿಸಬೇಕೆಂದು ನಾನು ಯಾವ ಯಾವ ಪ್ರಾಪಂಚಿಕ ವಿಷಯಗಳನ್ನು ಅನುಭವಿಸಿ ಕರ್ಮವನ್ನು ಕಟ್ಟಿಕೊಂಡೆನೋ ಅದೇ ನನಗೆ ಕಡೆಯಲ್ಲಿ ದುಃಖವಾಗಿ ಪರಿಣಮಿಸಿತು. ನನಗಿಂತಲೂ ದುಃಖಿಯಾದವನು ಮತ್ತಾವನು ತಾನೆ ಇರುವನು?

೭. ಎಲೈ ಸರ್ವಾಂತರ್ಯಾಮಿಯೇ! ವಕ್ರದೃಷ್ಟಿಯೂ, ಕೇವಲ ಅಜ್ಞಾನಿಯೂ ಆದ ನಾನು ಹಿಂದಣ ಜನ್ಮಗಳಲ್ಲಿ ಮನಸ್ಸಿನಲ್ಲಿಯಾದರೂ

ವಿಭುತ್ವದಾಸತ್ವಪಿತೃತ್ವಪುತ್ರ
ಪ್ರಿಯತ್ವಮಾತೃತ್ವಧನಿತ್ವಭಾವೈಃ ।
ವಧ್ಯತ್ವಹಿಂಸ್ರತ್ವಪತಿತ್ವಜಾಯಾ
ಭಾವೈಶ್ಚ ತಿರ್ಯಕ್ತ್ವಸುರಾದಿಭಾವೈಃ ॥ ೮ ॥
ನೀಚೋರ್ಧ್ವಭಾವಂ ಬಹುಶಃ ಸುಕೃತ್ವಾ
ಭವಾಂಗಣೇಽಸ್ಮಿಂಲ್ಲುಟಿತಾನುಭೂತಂ ।
ನ ವಾ ಮುರಾರೇ ತವ ಪಾದಪದ್ಮ
ದೂರೀಭವಸ್ಯೇಷ್ಟಫಲಂ ಹಿ ಚೈತತ್ ॥ ೯ ॥
ಕೋಶಂ ಬಲಂ ಚೈತದಶೇಷಪೃಥ್ವೀ
ಧನೈರ್ವೃತಂ ಯೌವನರೂಪರೂಪ್ಯೈಃ ।
ಮನೋಽನುಕೂಲಾಃ ಶತಶಃ ಸ್ತ್ರಿಯಶ್ಚ
ನಿಷ್ಕಂಟಕಂ ಮೇ ನೃಪಮಂಡಲಂ ಚ ॥ ೧೦ ॥
ಸಾಮ್ರಾಜ್ಯತಾ ಚಾಪಿ ಭರೋ ಮಹಾನ್ಮೇ
ತ್ವಜ್ಞಾನಹೀನಸ್ಯ ಪಶೋರಿವಾಯಂ ।
ಭಾರಾವತಾರಂ ಕುರು ಮೇ ಕೃಪಾಬ್ಧೇ
ಸದ್ಯೈವ ತತ್ರೋದಿತಖೇದಯೋಗಃ ॥ ೧೧ ॥

---

ವಿಭುವಾದ ನಿನ್ನನ್ನು ಉಪಾಸನೆಮಾಡಿದ್ದುದೇ ಆಗಿದ್ದರೆ, ಈ ರೀತಿ ಅಡಿಗಡಿಗೂ ಭೋಗಿಸಬೇಕಾದುದೂ, ಅಪರಿಮಿತವಾದ ದುಃಖಗಳೊಡಗೂಡಿರುವುದೂ ಆದ ಅನೇಕ ಜನ್ಮಗಳನ್ನು ಪಡೆಯುತ್ತಿದ್ದೆನೇ!

೮–೯. ಎಲೈ ಮುರಾರಿಯೇ! ಒಡೆತನ, ಆಳುತನ, ತಂದೆತನ, ಪುತ್ರತನ, ತಾಯಿಪ್ರಿಯತ್ವ, ಸಿರಿತನ, ವಧ್ಯತ್ವ, ಹಿಂಸ್ರತ್ವ, ಪತಿತ್ವ, ಪತ್ನೀತ್ವ, ತಿರ್ಯಕ್ತ್ವ, ಅಸುರತ್ವ, ಮೊದಲಾದ ಬಗೆಬಗೆ ಭಾವಗಳನ್ನು ಬಹು ಪ್ರಕಾರವಾಗಿ ಅನುಭವಿಸುತ್ತ ಈ ಭವಾಂಗಣದಲ್ಲಿ ಹೊರಳಾಡುತ್ತಿರುವೆನಲ್ಲವೆ! ಇದೆಲ್ಲವೂ ನಿನ್ನ ಪಾದಪದ್ಮಗಳ ಸೇವೆಯನ್ನು ದೂರಮಾಡಿದುದರ ರುಚಿಕರವಾದ ಫಲವೇ ಅಲ್ಲವೆ?

೧೦–೧೧. "ಎಲೈ ಪರಮಾತ್ಮನೇ! ನನ್ನ ಕೋಶವೂ, ಚತುರಂಗಬಲವೂ, ಅಖಂಡಭೂಮಂಡಲದಲ್ಲಿರುವ ಸಮಸ್ತ ಧನದಿಂದಲೂ, ತುಂಬಿದೆ. ಯೌವನಶಾಲಿನಿಯರೂ, ರೂಪವತಿಯರೂ, ಮನಸ್ಸಿಗೆ ಅನುಕೂಲೆಯರೂ ಆದ ಹೆಂಗಳು ನನಗೆ ನೂರಾರು ಮಂದಿ ಇರುತ್ತಾರೆ. ನನಗಿರುವ ಸಾಮಂತರಾಜಮಂಡಲವಾದರೋ ನಿಷ್ಕಂಟಕವಾಗಿರುವುದು. ಇಂತಹ ಸಾಮ್ರಾಜ್ಯವೇ ನನ್ನದಾಗಿರುವುದು. ಆದರೇನು? ಭಗವಂತನಾದ ನಿನ್ನ ಸಂಬಂಧವಾದ ಜ್ಞಾನವೇ ಇಲ್ಲದಿರುವ ನನಗೆ ಇದೆಲ್ಲವೂ ಪಶುವಿಗೆಂತೋ ಅಂತು ಭಾರಭೂತವಾಗಿರುವುದು.

ದೀನಾನುಕಂಪಿನ್ಸ್ಮರಣೋ ವಿಮುಕ್ತಿಃ
ಕೃತಾ ವಿಭೋ ತ್ವತ್ಸ್ಮೃತಿಮಾತ್ರಕೇಣ ।
ಭ್ರಾಂತಂ ಘಟೀಯಂತ್ರವದತ್ರ ನಾಥ
ಮಾಂ ತ್ರಾತುಮರ್ಹಸ್ಯನುಕಂಪಿಭಾವಾತ್ ॥ ೧೨ ॥
ನ ಮೇ ತ್ವದನ್ಯಃ ಖಲು ಬಂಧುರತ್ರ
ಪ್ರವಾಹವಿಭ್ರಷ್ಟತರುಸ್ವಭಾವೇ ।
ಪಾಪೀಯಸೀ ಬುದ್ಧಿರುಪೇತಭಾವಾ
ಸ್ನೇಹಾನುಬಂಧಾ ವಿಷಯೇಽಭಿಭೇದ್ಯಾ ।
ಅಹರ್ನಿಶಂ ಮೇ ತವ ಪಾದಪದ್ಮಾ
ನ್ನಾಪೈತು ಮತ್ಪ್ರಾರ್ಥಿತಮೇತದೇವ ॥ ೧೩ ॥
ತ್ವಾಂ ಸಚ್ಚಿದಾನಂದಸುಪೂರ್ಣಸಿಂಧುಂ
ಪ್ರಾಪ್ತಾಸ್ತು ಯೇ ಜನ್ಮಸಹಸ್ರಭಾಗ್ಯೈಃ ।
ಕಿಂ ತೇ ಹಿ ಪಶ್ಯಂತಿ ಲವೈಕಸೌಖ್ಯ
ಮನೇಕದುಃಖಂ ವಿಷಯೇಂದ್ರಜಾಲಂ ॥ ೧೪ ॥

---

ಓ ಕೃಪಾಸಮುದ್ರನೇ! ಯಾವಾಗಲೂ ಈ ಹೊರೆಯನ್ನು ಹೊರುವುದರಲ್ಲಿ ದುಃಖವೇ ಘಟಿಸುತ್ತಿದೆಯಾಗಿ ನನ್ನ ಮೇಲಣ ಈ ಭಾರವನ್ನಿಳುಹಿ ರಕ್ಷಿಸು!!

೧೨. ಎಲೈ ದೀನದಯಾಳುವೇ! ವಿಭುವಾದ ನಿನ್ನ ಸ್ಮರಣೆಮಾತ್ರದಿಂದಲೇ ಗಜೇಂದ್ರನಿಗೆ ಮೋಕ್ಷವನ್ನು ದಯೆಗೈದೆಯಲ್ಲವೆ! ಅಂತಹ ನೀನು ಘಟೀಯಂತ್ರದಂತೆ ವಿರಾಮವಿಲ್ಲದೆಯೇ ತಿರುಗುತ್ತಿರುವ ನನ್ನನ್ನು ಅನುಕಂಪೆಯಿಂದ ಕಾಪಾಡು, ಜಗನ್ನಾಥಾ!!

೧೩. ಎಲೈ ಸ್ವಾಮಿಯೇ! ಈ ಪ್ರಪಂಚದಲ್ಲಿ ನಿನ್ನನ್ನುಳಿದು ನನಗೆ ಮತ್ತಾವನೂ ಬಂಧುವಿಲ್ಲವು. ದೇವ! ನಿನ್ನಲ್ಲಿ ನನ್ನ ಪ್ರಾರ್ಥನೆಯಿಷ್ಟೆ! ಪ್ರವಾಹದಲ್ಲಿ ಕೊಚ್ಚಿಹೋಗುತ್ತಿರುವ ಮರದ ಸ್ವಭಾವವುಳ್ಳುದೂ, ವಿವಿಧ ಭಾವನೆಗಳುಳ್ಳುದೂ, ಸ್ನೇಹದ ಅನುಬಂಧವುಳ್ಳುದೂ, ವಿಷಯಾದಿಗಳಿಂದ ಬೇರ್ಪಡಿಸಲಸದಳವಾದುದೂ ಆದ ಪಾಪಿಷ್ಠವಾದ ಈ ನನ್ನ ಬುದ್ಧಿಯು ಹಗಲಿರಳೂ ನಿನ್ನ ಅಡಿದಾವರೆಗಳನ್ನು ಬಿಡದಿರಲಿ.

೧೪. ಪ್ರಭುವೇ! ಸಾವಿರಾರು ಜನ್ಮಗಳಲ್ಲಿ ಆರ್ಜಿಸಿದ ಭಾಗ್ಯದಿಂದ ಸಚ್ಚಿದಾನಂದಪರಿಪೂರ್ಣಸಮುದ್ರನಾದ ನಿನ್ನನ್ನು ಹೊಂದಿದವರು ಒಂದು ಲವದಷ್ಟುಮಾತ್ರ ಸುಖವನ್ನೊಳಗೊಂಡು, ಅನೇಕ ದುಃಖಗಳಿಂದ ತುಂಬಿ, ವಿಷಯವೆಂಬ ಇಂದ್ರಜಾಲಸ್ವರೂಪವಾಗಿರುವ ಈ ಸಂಸಾರವನ್ನು ಮತ್ತೊಮ್ಮೆ ನೋಡುವರೇ? ಎಂದಿಗೂ ಇಲ್ಲವು.

ಕ್ವ ಬಂಧನಂ ಕರ್ಮಭಿರಿಷ್ಟಲೇಶ
ದುಃಖಾಕರಗ್ರಂಥಿಶತೈರಭೇದ್ಯಂ ।
ಅನಂತಮಾದ್ಯಂತವಿಹೀನಮೇಕ
ಮಾನಂದದಂ ತ್ವತ್ಪದಪಂಕಜಂ ಕ್ವ ॥ ೧೫ ॥
ಮಾಯಾಂಬುಧೌ ತೇ ಮಮತಾಭ್ರಮೌ ಚ
ಕುಕರ್ಮನಕ್ರಾಯಿತಗರ್ತಮಧ್ಯೇ ।
ನಿರಾಶ್ರಯಂ ಮೇ ಪತಿತಂ ವಿಲಾಸ
ಕಟಾಕ್ಷಪಾತೇನ ನಯಾದ್ಯ ತೀರಂ ॥ ೧೬ ॥
ಸ್ವಕಾರ್ಯಸಂಸಾಧನಯಾಶ್ರಿತಾನಾಂ
ಸಂಪಾದನಾಯೇಷ್ಟವಿಧೇರಜಸ್ರಂ ।
ಭ್ರಾಮ್ಯಂತಮಾತ್ಮೀಯಹಿತಂ ವಿಸೃಜ್ಯ
ಮಾಂ ತ್ರಾಹಿ ಮೂಢಂ ಸಹಜಾನುಕಂಪಿನ್ ॥ ೧೭ ॥
ಕ್ಷುದ್ರಾಯ ಕಾರ್ಯಾಯ ಬಹುಭ್ರಮಂತ
ಮಪ್ರಾಪ್ಯ ಮೂಲಂ ಪರಮೇಶ್ವರಂ ತ್ವಾಂ ।
ಆಯಾಸಪಾತ್ರಂ ಪರಮಂ ಸುದೀನಂ
ಮಾಂ ತ್ರಾಹಿ ವಿಷ್ಣೋ ಜಗದೇಕವಂದ್ಯ ॥ ೧೮ ॥

---

೧೫. ಇಷ್ಟವೆಂಬುದು ಲೇಶಮಾತ್ರದಷ್ಟಿದ್ದು, ದುಃಖದ ಗಣಿಗಳೆಂಬ ನೂರಾರು ಗಂಟುಗಳಿಂದ ಅಭೇದ್ಯವಾದ ಕರ್ಮಗಳಿಂದ ದೊರಕುವ ಈ ಭವ ಬಂಧವೆತ್ತ? ಅನಂತವೂ, ಆದ್ಯಂತವಿಹೀನವೂ, ಏಕೈಕವೂ, ಆನಂದಪ್ರದವೂ ಆದ ನಿನ್ನ ಪಾದಪಂಕಜವೆತ್ತ?

೧೬. ನಾನು-ನನ್ನದು ಎಂಬ ಭ್ರಾಂತಿಯನ್ನೊಳಗೊಂಡು ಕುಕರ್ಮಗಳೆಂಬ ಮೊಸಳೆಗಳು ತುಂಬಿದ ನಿನ್ನ ಮಾಯಾಸಮುದ್ರದ ಮಡುವಿನಲ್ಲಿ ಬಿದ್ದು ಆಶ್ರಯವೇ ಇಲ್ಲದೆ ಪಾಡುಪಡುತ್ತಿರುವ ನನ್ನನ್ನಿದೀಗ ನಿನ್ನ ವಿಲಾಸಕಟಾಕ್ಷಪಾತದಿಂದೀಕ್ಷಿಸಿ ತಡಿಗಾಣಿಸು!

೧೭-೧೮. ಎಲೈ ವಿಷ್ಣುವೇ! ನಿರ್ವ್ಯಾಜಕರುಣಾಶಾಲಿಯಾದ ನೀನು, ಸ್ವಕಾರ್ಯವನ್ನು ಸಾಧಿಸಿಕೊಳ್ಳಲೋಸುಗ ಆಶ್ರಯಿಸಿದವರಿಗೆಲ್ಲ ಎಡೆಬಿಡದೆ ನಿರಂತರವೂ, ಅವರ ಇಷ್ಟವನ್ನು ಸಾಧಿಸಿಕೊಡುವ ವಿಧಾನದಲ್ಲಿಯೇ ತೊಡಗಿ ಆತ್ಮಹಿತವನ್ನೇ ಮರೆತು ಅಲೆಯುತ್ತಿರುವ ಗಾಂಪನಾದ ನನ್ನನ್ನು ಕಾಪಾಡಬೇಕು. ಸಕಲ ಪ್ರಪಂಚಕ್ಕೂ ಮೂಲಸ್ವರೂಪನಾದ ನಿನ್ನನ್ನು ಹೊಂದದೆಯೆ ಕೇವಲ ಕ್ಷುದ್ರವಾದ ಕಾರ್ಯಕ್ಕಾಗಿ ಬಹುವಾಗಿ ತಿರುಗಿ ಆಯಾಸಕ್ಕೆ ಪಕ್ಕಾಗಿ ಬಹಳವಾಗಿ ಕಂದಿಹೋಗಿರುವ ನನ್ನನ್ನು ಜಗದೇಕವಂದ್ಯನಾದ ಓ ವಿಷ್ಣುವೇ! ಕಾಪಾಡು!!

ವೇದಾಂತವೇದ್ಯಾವ್ಯಯ ವಿಶ್ವನಾಥ
ತ್ವಮೀಶಿಷೇ ಹಂತುಮಘೌಘರಾಶೀನ್ ।
ತಂ ತ್ವಾಂ ಪರಿತ್ಯಜ್ಯ ಸುಖೈಕಹೇತುಂ
ಕ್ಷುದ್ರಾಶಯಂ ಮಾಂ ಪರಿಪಾಹಿ ವಿಷ್ಣೋ ॥ ೧೯ ॥
ಪ್ರಸುಪ್ತ ಏಷೋಽಖಿಲಭೂತಸಂಘ
ಶ್ಚತುರ್ವಿಧೋ ಯತ್ಕೃತಮೋಹರಾತ್ರೌ ।
ತ್ವಜ್ಜ್ಞಾನ ಭಾನೂದಯಮೇತ್ಯ ಚಾಂತೇ
ಪ್ರಬೋಧ್ಯತೇ ತ್ವಾಂ ಶರಣಂ ಪ್ರಪದ್ಯೇ ॥ ೨೦ ॥
ತ್ವಮೇಕ ಏವಾಖಿಲಲೋಕಕರ್ತಾ
ಫಣಾಸಹಸ್ರೈಃ ಪರಿವೀತಮೂರ್ತಿಃ ।
ಪರ್ಯಾಯವೃತ್ತ್ಯಾ ಬಲಿನಾಂ ವರಿಷ್ಠ
ಸ್ತ್ವಾಮೀಶಿತಾರಂ ಶರಣಂ ಪ್ರಪದ್ಯೇ ॥ ೨೧ ॥
ಯಯಾ ಸೃಜಸ್ಯತ್ಸಿ ಜಗಂತಿ ನಾಥ
ವಕ್ಷಃಸರೋಜಾಸನಯಾ ಸ್ವಶಕ್ತ್ಯಾ ।
ತಾಂ ಭದ್ರರೂಪಾಂ ಜಗದಾಶ್ರಯಾಂ ತೇ
ದೇವಾರಣಿಂ ಪಾದಯುಗೇ ನತೋಽಸ್ಮಿ ॥ ೨೨ ॥

---

೧೯. ನೀನು ವೇದಾಂತವೇದ್ಯನೂ, ಅವ್ಯಯನೂ, ವಿಶ್ವನಾಥನೂ ಆದುದರಿಂದಲೇ ಓ ಪರಮಾತ್ಮ! ನೀನು ಪಾಪರಾಶಿಗಳನ್ನೆಲ್ಲ ಧ್ವಂಸಗೈಯಲು ಸಮರ್ಥನಾಗಿರುವೆ. ಅಂತಹ ಸುಖಕ್ಕೆ ಒಂದೇ ಒಂದು ಕಾರಣಸ್ವರೂಪನಾಗಿರುವವನೂ, ಸರ್ವವ್ಯಾಪಿಯೂ ಆದ ನಿನ್ನನ್ನು ತೊರೆದು ಕೇವಲ ದುಷ್ಟಾಭಿಪ್ರಾಯವುಳ್ಳವನಾಗಿರುವ ನನ್ನನ್ನು ಕಾಪಾಡು!

೨೦. ಓ ಭಗವಂತನೇ! ಯಾವ ನಿನ್ನಿಂದ ಸೃಷ್ಟವಾದ ಮೋಹವೆಂಬ ರಾತ್ರಿಯಲ್ಲಿ ಗಾಢನಿದ್ರೆಗೊಳಗಾಗಿರುವ ಅಂಡಜ, ಸ್ವೇದಜ, ಉದ್ಭಿಜ್ಜ, ಜರಾಯುಜಗಳೆಂಬ ಈ ಚತುರ್ವಿಧ ಭೂತಗ್ರಾಮವು ಪರಮಾತ್ಮನಾದ ನಿನ್ನ ವಿಷಯಕವಾದ ಜ್ಞಾನವೆಂಬ ಸೂರ್ಯನುದಿಸಿದೊಡನೆಯೇ ಎಚ್ಚರಗೊಳ್ಳುವುದೋ, ಅಂತಹ ನಿನ್ನನ್ನು ನಾನಿದೊ ಶರಣುಹೋಗುವೆನು!

೨೧. ಆದಿಶೇಷನ ಸಾವಿರ ಹೆಡೆಗಳಿಂದ ಸುತ್ತುವರೆದಿರುವ ದೇಹವುಳ್ಳ ನೀನೇ ಪರ್ಯಾಯವೃತ್ತಿಯಿಂದ (ರಾಮಕೃಷ್ಣಾದ್ಯವತಾರಗಳಿಂದ) ಚತುರ್ದಶ ಭುವನಗಳ ಕರ್ತನಾಗಿರುವೆ. ನೀನು ಬಲಿಷ್ಠರಿಗೆಲ್ಲ ವರಿಷ್ಠಬಲಿಷ್ಠನಾಗಿರುವೆ. ಇಂತಹ ಸ್ವಾಮಿಯಾದ ನಿನ್ನನ್ನು ಶರಣುಹೋಗುವೆನು.

೨೨. ಓ ಜಗನ್ನಾಥನೇ! ನಿನ್ನ ವಕ್ಷಃಕಮಲದಲ್ಲಿ ಕುಳಿತಿರುವ ಯಾವ

ಯದಂಶುಜಾಲಪ್ರತಿಸೃಷ್ಟಮೇತ
ದ್ಬ್ರಹ್ಮಾಂಡಜಾಲಂ ಕರಸಂಗಿ ನಾಥ ।
ಸುದರ್ಶನಂ ದೈತ್ಯಬಲಸ್ಯ ಹಂತೃ
ಚಕ್ರಾಭಿದಂ ತ್ವಾಂ ಪ್ರಣತಃ ಸುದರ್ಶನಂ ॥ ೨೩ ॥
ಸ್ತುತ್ವೇತ್ಥಂ ನೃಪತಿಶ್ರೇಷ್ಠಃ ಸಾಷ್ಟಾಂಗಂ ಪ್ರಣನಾಮ ಸಃ ॥ ೨೪ ॥
ಪರಿತ್ರಾಹಿ ಜಗನ್ನಾಥ ಮಗ್ನಂ ಸಂಸಾರಸಾಗರೇ ।
ಅನಾಥಬಂಧೋ ಕೃಪಯಾ ದೀನಂ ಮಾಂ ತಮಸಾಕುಲಂ ॥ ೨೫ ॥

ನಾರದ ಉವಾಚ :—

ಜಯಜಯ ನಾರಾಯಣ, ಅಪಾರಭವಸಾಗರೋತ್ತಾರಪರಾಯಣ, ಸನಕ ಸನಂದನ ಸನಾತನ ಪ್ರಭೃತಿ ಯೋಗಿವರವಿಚಿಂತ್ಯಮಾನದಿವ್ಯತತ್ತ್ವ, ಸ್ವಮಾಯಾವಿಲಸಿತಾಧ್ಯಾಸಪರಿಣಮಿತಾಶೇಷ ಭೂತತತ್ತ್ವ, ತ್ರಿತತ್ತ್ವ,

---

ನಿನ್ನ ಶಕ್ತಿಯಿಂದ ಜಗತ್ತುಗಳೆಲ್ಲವನ್ನೂ ಸೃಷ್ಟಿಸಿ ಅವುಗಳನ್ನೇ ಭಕ್ಷಣಮಾಡುವೆಯೋ, ಅಂತಹ ಮಂಗಳರೂಪಿಣಿಯಾಗಿ, ಜಗತ್ತಿಗೆ ಆಶ್ರಯಭೂತಳಾಗಿ ದೇವತೆಗಳೆಲ್ಲರಿಗೂ ಉದ್ಭವಸ್ಥಾನವಾಗಿರುವ ಆ ನಿನ್ನ ಶಕ್ತಿದೇವತೆಯ ಪಾದ ಕಮಲಗಳನ್ನು ವಂದಿಸುತ್ತೇನೆ.

೨೩. ಎಲೈ ಪ್ರಭುವೇ! ಕಣ್ಣಿಗೆ ಕಾಣುವ ಈ ಬ್ರಹ್ಮಾಂಡಜಾಲವೆಲ್ಲವೂ ಯಾವುದರ ಕಿರಣಜಾಲದ ಪ್ರತಿಸೃಷ್ಟಿಯಾಗಿ ಕಂಗೊಳಿಸುತ್ತಿರುವುದೋ ಅಂತಹ ನಿನ್ನ ಕರಸಂಗಿಯೂ, ದೈತ್ಯಬಲಮರ್ದಕವೂ, ಸುದರ್ಶನನಾಮಕವೂ ಆದ ನಿನ್ನ ರೂಪವನ್ನು ನಮಸ್ಕರಿಸುವೆನು.''

೨೪–೨೫. ಜೈಮಿನಿಯು ಹೇಳುತ್ತಾನೆ:— ಎಲೈ ಮುನಿಗಳಿರಾ! ಈ ಪ್ರಕಾರವಾಗಿ ಇಂದ್ರದ್ಯುಮ್ನನೃಪೋತ್ತಮನು ಭಗವಂತನನ್ನು ಸ್ತುತಿಸಿದ ತರುವಾಯ, ''ಜಗನ್ನಾಥ! ಅನಾಥಬಂಧುವೆ!! ಸಂಸಾರವೆಂಬ ಈ ಮಹಾ ಸಮುದ್ರದಲ್ಲಿ ಮುಳುಗಿ ಕತ್ತಲಡಸಿ ದಿಕ್ಕುಗಾಣದೆ ದೀನನಾಗಿರುವ ನನ್ನನ್ನು ಕೃಪೆಯಿಂದ ಕಾಪಾಡು!'' ಎಂದು ಸಾಷ್ಟಾಂಗಪ್ರಣಾಮವನ್ನೆಸಗಿದನು.

೨೬. ನಾರದನು ಹೇಳುತ್ತಾನೆ:—''ಎಲೈ ನಾರಾಯಣನೇ! ಭಕ್ತರ ಅಭೀಷ್ಟಸಿದ್ಧಿಗಾಗಿ ನೀನು ಸರ್ವತ್ರ ಸರ್ವಕಾಲದಲ್ಲಿಯೂ ಜಯಶೀಲನಾಗು! ದೇವಾ, ತಡಿಯೇ ಇಲ್ಲದಿರುವ ಈ ಭವಸಾಗರದಲ್ಲಿ ಬಿದ್ದು ನರಳುತ್ತಿರುವ ದೀನ ಮಾನವರನ್ನು ಉದ್ಧರಿಸುವುದರಲ್ಲಿಯೇ ನಿರಂತರವೂ ಆಸಕ್ತನಾಗಿರುವವನು ನೀನು. ಸ್ವಾಮಿ! ಸನಕಸನಂದನ ಸನಾತನರೇ ಮೊದಲಾದ ದಿವ್ಯಮಾನವ ಯೋಗಿಶ್ರೇಷ್ಠರಿಂದ ಅಹರ್ನಿಶವೂ ಚಿಂತಿಸಲ್ಪಡುತ್ತಿರುವ ದಿವ್ಯತತ್ತ್ವಸ್ವರೂಪ ನಾಗಿರುವವನು ನೀನು! ಭಗವಂತಾ! ನೀನು ನಿನ್ನ ಮಾಯಾವಿಲಾಸದ

**ತ್ರಿದಂಡಧರ, ತ್ರಿಣಾಚಿಕೇತ, ತ್ರಿಮಧು, ತ್ರಿಸುಪರ್ಣೋಪಗೀಯಮಾನ ದಿವ್ಯಜ್ಞಾನ, ಛಂದೋಮಯ, ಸ್ವಾಸನಸುಪರ್ಣಪ್ರಿಯ, ಭಕ್ತಪ್ರಿಯ, ಭಕ್ತಜನೈಕವತ್ಸಲ, ಸ್ವಮಾಯಾಜಾಲಾವ್ಯವಹಿತಸ್ವರೂಪ, ವಿಶ್ವರೂಪ, ವಿಶ್ವಪ್ರಕಾಶ, ವಿಶ್ವತೋಮುಖ, ವಿಶ್ವತೋಽಕ್ಷಿ, ವಿಶ್ವತಃಶ್ರವಣ, ವಿಶ್ವತಃ ಪಾದಶಿರೋಗ್ರೀವ, ವಿಶ್ವಹಸ್ತನಾಸಾರಸನಾತ್ವಕ್ಕೇಶಲೋಮಲಿಂಗ, ಸರ್ವಲೋಕಾತ್ಮಕ, ಸರ್ವಲೋಕಸುಖಾವಹ, ಸರ್ವಲೋಕೋಪಕಾರಕ, ಸರ್ವಲೋಕನಮಸ್ಕೃತ, ಲೀಲಾವಿಲಸಿತಕೋಟಿಪದ್ಮೋದ್ಭವರುದ್ರೇಂದ್ರ ಮರುದಶ್ವಿಸಾಧ್ಯಸಿದ್ಧಗಣ ಪ್ರಣತಾಶೇಷಸುರಾಸುರತ್ರಿಭುವನಗುರೋ, ನ ಕಸ್ಯಾಪಿ ಜ್ಞಾನಗೋಚರ ನಮಸ್ತೇ ನಮಸ್ತೇ ನಮಃ ॥ ೨೬ ॥**

---

ಅಧ್ಯಾಸದಿಂದಲೇ ಪರಿಣಮಿಸಿರುವ ಮಿತವಿಲ್ಲದುದೂ, ಅಶೇಷವೂ ಆದ ಚತುರ್ವಿಧ ಭೂತಸೃಷ್ಟಿತತ್ತ್ವಸ್ವರೂಪಿಯಾದ ಪ್ರಭುವೇ ನೀನಾಗಿರುವೆ! ಸತ್ತ್ವರಜಸ್ತಮೋ ಗುಣಗಳಿಂದೊಡಗೂಡಿ ತ್ರಿದಂಡಧರನಾಗಿ (ಸೃಷ್ಟಿಸ್ಥಿತಿಲಯಕರ್ತನಾಗಿ), ತ್ರಿಣಾಚಿಕೇತ, ತ್ರಿಸುಪರ್ಣ, ತ್ರಿಮಧುಗಳೆಂಬ ಶ್ರುತಿವಾಕ್ಯಗಳಲ್ಲಿ ಹಾಡಲ್ಪಟ್ಟಿ ರುವ ದಿವ್ಯಜ್ಞಾನಮೂರ್ತಿಯೂ, ಛಂದೋಮಯನೂ ನೀನೇ ಆಗಿರುವೆ! ಓ ಪರಮಾತ್ಮಾ! ನಿನ್ನ ಆಸನರೂಪನಾದ ಶ್ರೀಗರುಡನಲ್ಲಿ ಅತ್ಯಂತ ಪ್ರೀತಿಯುಳ್ಳವ ನಾಗಿ, ಭಕ್ತಪ್ರಿಯನಾಗಿರುವುದಲ್ಲದೆ, ಭಕ್ತಜನರಲ್ಲಿ ಮಾತ್ರವೇ ನಿರ್ವ್ಯಾಜವಾದ ವಾತ್ಸಲ್ಯವುಳ್ಳವನಾಗಿರುವವನೂ ನೀನೇ! ಎಲೈ ಸ್ವಾಮಿಯೇ! ನೀನು ನಿನ್ನ ಮಾಯೆಯ ಜಾಲದಿಂದಲೇ ಮುಚ್ಚಿ ನಿಗೂಢವಾಗಿ ಯಾರೊಬ್ಬರಿಗೂ ಗೋಚರ ವಾಗದೆ, ನಿನ್ನ ಭಕ್ತರಿಗೆ ಮಾತ್ರವೇ ಗೋಚರವಾಗುವ ದಿವ್ಯಸ್ವರೂಪವುಳ್ಳವ ನಾಗಿರುವೆ! ಎಲೈ ವಿಶ್ವರೂಪನೇ! ವಿಶ್ವವನ್ನೆ ನಿನ್ನ ದಿವ್ಯವೂ ಅವ್ಯಕ್ತವೂ ಆದ ತೇಜಸ್ಸಿನಿಂದ ಬೆಳಗಿಸುವವನೂ, ಸಮಸ್ತಲೋಕಗಳಿಗೂ, ಸಮಸ್ತಜನಕ್ಕೂ, ಭಕ್ತನಿವಹಕ್ಕೂ ಉಪಕಾರವನ್ನೆಸಗುವವನೂ, ಎತ್ತೆತ್ತಲೂ ಮುಖಗಳುಳ್ಳವ ನಾಗಿ ವಿಶ್ವತೋಮುಖನೂ, ಸರ್ವತ್ರನೇತ್ರಗಳುಳ್ಳವನಾಗಿ ವಿಶ್ವತೋಕ್ಷಿಯೂ, ಅಸಂಖ್ಯಾತವಾದ ಶ್ರೋತ್ರಗಳುಳ್ಳವನಾಗಿ ವಿಶ್ವತಃ ಶ್ರವಣನೂ, ಅಸಂಖ್ಯಾತ ವಾದ ಶಿರಸ್ಸು ಕಂಠಗಳುಳ್ಳವನೂ, ಅಸಂಖ್ಯಾತವಾದ ಕೈಗಳೂ, ಮೂಗುಗಳೂ, ನಾಲಗೆಗಳೂ, ತ್ವಕ್‌ಕೇಶಲೋಮಲಿಂಗಗಳೂ ಉಳ್ಳವನಾಗಿ, ಸರ್ವಲೋಕಗಳ ಆತ್ಮಸ್ವರೂಪನಾಗಿರುವವನೂ ನೀನೇ! ಎಲೈ ಸರ್ವಲೋಕೋಪಕಾರಕನೇ! ನೀನು ಸಮಸ್ತ ಲೋಕಗಳಿಗೂ ಸುಖವನ್ನುಂಟುಮಾಡುವವನಾಗಿ, ಸಮಸ್ತಲೋಕಗ ಳಿಂದಲೂ ನಮಸ್ಕೃತನಾಗಿ, ನಿನ್ನೊಂದು ಲೀಲಾವಿಲಾಸದಿಂದಲೇ ಉದ್ಭವಿಸಿರುವ ಕೋಟಿಸಂಖ್ಯಾಕರಾದ ಪದ್ಮೋದ್ಭವ, ರುದ್ರ, ಇಂದ್ರ ಮೊದಲಾದ ದೇವತೆಗ ಳಿಂದಲೂ, ಅಶ್ವಿನೀದೇವತೆಗಳಿಂದಲೂ, ಸಿದ್ಧಸಾಧ್ಯಗಣಗಳಿಂದಲೂ, ನಮಸ್ಕೃತ

**ಜೈಮಿನಿರುವಾಚ :—**

**ಅನ್ಯೇ ಚ ಯೇ ನೃಪತಯಃ ಶ್ರೋತ್ರಿಯಾ ವೇದಪಾರಗಾಃ ।**
**ಮುನಯೋ ದ್ವಿಜಾಃ ಕ್ಷತ್ರಿಯಾಶ್ಚ ವಿದ್ವಾಂಸೋ ವೈಶ್ಯಜಾತಯಃ ॥೨೭॥**
**ಅಸ್ತುವನ್ಪುಂಡರೀಕಾಕ್ಷಂ ಬಲಿನಂ ಭದ್ರಯಾ ಸಹ ।**
**ಸೂಕ್ತೈಃ ಸ್ತೋತ್ರೈಃ ಪುರಾಣೈಶ್ಚ ಕವಿತಾಭಿರ್ಯಥಾ ತಥಾ ॥ ೨೮ ॥**
**ಅಥೇಂದ್ರದ್ಯುಮ್ನಃ ಪ್ರೋವಾಚ ಪುರೋಧಸಮಕಲ್ಮಷಂ ।**
**ಪೂಜಾರ್ಥಂ ವಾಸುದೇವಸ್ಯ ಉಪಚಾರೋಪಸಂಸ್ಕೃತಂ ॥ ೨೯ ॥**
**ಸ್ವಯಂ ಸ ನೃಪತಿಶ್ರೇಷ್ಠಃ ಪೂಜಯಾಮಾಸ ತಾನ್ಕ್ರಮಾತ್ ।**
**ನಾರದಸ್ಯೋಪದೇಶೇನ ವಿಧಿನಾ ಮಂತ್ರತಸ್ತಥಾ ॥ ೩೦ ॥**
**ದ್ವಾದಶಾಕ್ಷರಮಂತ್ರೇಣ ಬಲಭದ್ರಮಪೂಜಯತ್ ।**
**ಯಮುಪಾಸ್ಯ ಧ್ರುವಃ ಸ್ಥಾನಂ ಪ್ರಾಪ್ತವಾನುತ್ತಮೋತ್ತಮಂ ॥ ೩೧ ॥**

---

ನಾಗಿ, ಸಮಸ್ತ ಸುರಾಸುರರಿಗೂ, ಸ್ವರ್ಗಮರ್ತ್ಯಪಾತಾಳಗಳಿಗೂ ಜ್ಞಾನಪ್ರದಾಯಕನಾದ ಗುರುಮೂರ್ತಿಯಾಗಿ, ಯಾರೊಬ್ಬರ ಲೌಕಿಕಜ್ಞಾನಕ್ಕೂ ಗೋಚರನಲ್ಲದ ಓ ಪರಮಾತ್ಮಾ! ನಮಸ್ತೇ, ನಮಸ್ತೇ ನಮಃ!!! ”

೨೭–೨೮. ಜೈಮಿನಿಯು ಹೇಳುತ್ತಾನೆ:— ಎಲೈ ವಿಪ್ರರೇ! ನಾರದ ಮೌನೀಂದ್ರನಿಂತು ಆ ಜಗನ್ನಾಥನನ್ನು ಸ್ತುತಿಸಿದ ತರುವಾಯ ಆ ಪ್ರದೇಶದಲ್ಲಿದ್ದ ಇತರ ಸಾಮಂತರಾಜರೂ, ಶ್ರೋತ್ರಿಯರೂ, ವೇದಪಾರಂಗತರೂ ಆದ ಮುನಿಪುಂಗವರೂ, ಬ್ರಾಹ್ಮಣರೂ, ಕ್ಷತ್ರಿಯರೂ, ವಿದ್ವಾಂಸರೂ, ವೈಶ್ಯರೂ, ಎಲ್ಲರೂ ವೇದಸೂಕ್ತಗಳಿಂದಲೂ, ಇತರ ಲೌಕಿಕ ಸ್ತೋತ್ರಗಳಿಂದಲೂ, ಪುರಾಣ ಶ್ಲೋಕಗಳಿಂದಲೂ, ಆಗತಾನೆ ಕವನಮಾಡಿದ ಗೀತಗಾಯನ ಶ್ಲೋಕಗಳಿಂದಲೂ ಅವರವರ ಬುದ್ಧಿಗೆ ತಕ್ಕಂತೆ ಬಲರಾಮ, ಸುಭದ್ರಾ ಸಹಿತನಾದ ಆ ಪುಂಡರೀಕಾಕ್ಷನನ್ನು ಸ್ತುತಿಸಿದರು.

೨೯–೩೦. ಬಳಿಕ ರಾಜೇಂದ್ರನಾದ ಇಂದ್ರದ್ಯುಮ್ನನು, ನಿಷ್ಕಲ್ಮಷನಾದ ತನ್ನ ಪುರೋಹಿತನನ್ನು ಕುರಿತು, ಶ್ರೀವಾಸುದೇವನ ಪೂಜಾರ್ಥವಾಗಿ ಷೋಡಶೋಪಚಾರಸಹಿತವಾದ ಸಾಮಗ್ರಿಗಳನ್ನು ತಾರೆಂದು ಹೇಳಿದನು. ಪುರೋಹಿತನು ಎಲ್ಲವನ್ನೂ ಅಣಿಗೈದಮೇಲೆ ಆ ರಾಜಶ್ರೇಷ್ಠನು ದೇವಮುನಿಯಾದ ನಾರದನ ಉಪದೇಶದಂತೆ ಶಾಸ್ತ್ರೋಕ್ತವಾಗಿಯೂ, ಮಂತ್ರಪೂರ್ವಕವಾಗಿಯೂ ಆ ದೇವತಾಮೂರ್ತಿಗಳನ್ನು ಕ್ರಮವಾಗಿ ಪೂಜಿಸತೊಡಗಿದನು.

೩೧–೩೨. ಆತನು ದ್ವಾದಶಾಕ್ಷರ ಮಂತ್ರ (ಓಂ ನಮೋ ಭಗವತೇ ವಾಸುದೇವಾಯ) ದಿಂದ ಭಲಭದ್ರದೇವನನ್ನು ಪೂಜಿಸಿದನು. ತರುವಾಯ ಆ ಭೂಪನು, ಪೂರ್ವದಲ್ಲಿ ಧ್ರುವನು ಯಾವುದನ್ನು ಉಪಾಸನೆಮಾಡಿ ಉತ್ತಮ

ತ್ರಯೀಪ್ರಸಿದ್ಧಂ ಯತ್ಸೂಕ್ತಂ ಪಾವನಂ ಪೌರುಷಂ ಮಹತ್ ।
ತೇನ ನಾರಾಯಣಂ ಭೂಪಃ ಪೂಜಯಾಮಾಸ ಶಕ್ತಿತಃ ॥ ೩೨ ॥
ದೇವ್ಯಾಃ ಸೂಕ್ತೇನ ಭದ್ರಾಂ ತಾಂ ಸೌದರ್ಶನ್ಯಾ ಸುದರ್ಶನಂ ।
ಯಥಾಸಮೃದ್ಧಿ ಭಕ್ತ್ಯಾ ತಾನ್ಸಂಪೂಜಯಿತ್ವಾ ನೃಪೋತ್ತಮಃ ॥ ೩೩ ॥
ತತ್ಪ್ರೀತ್ಯೈ ದ್ವಿಜಮುಖ್ಯೇಭ್ಯೋ ದದೌ ದಾನಾನಿ ಭಕ್ತಿತಃ ।
ತುಲಾಪುರುಷದಾನಾನಿ ಮಹಾದಾನಾನಿ ಪಾರ್ಥಿವಃ ॥ ೩೪ ॥
ಅಶ್ವಮೇಧಾಂಗಭೂತಾಶ್ಚ ಕೋಟಿಶೋ ಗಾ ದದೌ ತದಾ ।
ಅಲಂಕೃತಾಸ್ತಥಾನ್ಯಾಶ್ಚ ದದೌ ಗಾ ಬಹುದಕ್ಷಿಣಾಃ ॥ ೩೫ ॥
ತಾಸಾಂ ಖುರೋದ್ಧೃತೇರ್ಯೋಗಾದ್ಗರ್ತೋಽಭೂದ್ದ್ವಿಜಸತ್ತಮಾಃ ।
ದಾನಾಂಬುನಾ ಸಪೂರ್ಣೋ ವೈ ತೀರ್ಥಮಾಸೀನ್ಮಹಾಫಲಂ ॥ ೩೬ ॥
ತಸ್ಮಿನ್ಸ್ನಾತ್ವಾ ಪಿತೄನ್ದೇವಾನ್ಸಂತರ್ಪ್ಯ ವಿಧಿವನ್ನರಃ ।
ಅಶ್ವಮೇಧಸಹಸ್ರಸ್ಯ ಫಲಮಾಪ್ನೋತ್ಯಸಂಶಯಃ ॥ ೩೭ ॥

---

ಪದವಿಯನ್ನು ಪಡೆದನೋ ಅಂತಹ ವೇದಪ್ರಸಿದ್ಧವೂ, ಪಾವನವೂ ಆದ ಮಹಾ ಪುರುಷಸೂಕ್ತದಿಂದ ತನ್ನ ಶಕ್ತ್ಯನುಸಾರ ಶ್ರೀಮನ್ನಾರಾಯಣಮೂರ್ತಿಯನ್ನು ಅರ್ಚಿಸಿದನು.

೩೩–೩೫. ದೇವೀಸೂಕ್ತದಿಂದ ಭದ್ರಾದೇವಿಯನ್ನೂ, ಸುದರ್ಶನಮಂತ್ರ ದಿಂದ ಸುದರ್ಶನಮೂರ್ತಿಯನ್ನೂ ಯಥಾಸಮೃದ್ಧಿಯಾಗಿಯೂ ಭಕ್ತಿಯಿಂದಲೂ ಪೂಜಿಸಿ ಆ ನೃಪೋತ್ತಮನು ಶ್ರೀಮನ್ನಾರಾಯಣನ ಪ್ರೀತ್ಯರ್ಥವಾಗಿ ಅಲ್ಲಿದ್ದ ಬ್ರಾಹ್ಮಣಶ್ರೇಷ್ಠರಿಗೆ ಭಕ್ತಿಪೂರ್ವಕವಾಗಿ ಅನೇಕ ದಾನಗಳನ್ನು ಕೊಟ್ಟನು. ಆ ಪಾರ್ಥಿವನು ಅವರಿಗೆ ತುಲಾಪುರುಷದಾನಗಳನ್ನೂ, ಮಹಾದಾನಗಳನ್ನೂ ಕೊಟ್ಟನು. ಅಶ್ವಮೇಧಯಾಗಗಳನ್ನು ಮಾಡಿದುದರ ಸಲುವಾಗಿ ಆ ದೊರೆಯು ಕೋಟಿಸಂಖ್ಯಾತಗಳಾದ ಗೋವುಗಳನ್ನು ದಾನಮಾಡಿದುದಲ್ಲದೆ, ಅಲಂಕೃತ ಗಳಾದ ಇನ್ನೂ ಅನೇಕ ಗೋವುಗಳನ್ನು ಬಹಳವಾದ ದಕ್ಷಿಣೆಯೊಡನೆ ದಾನ ಮಾಡಿದನು.

೩೬. ಆ ಗೋವುಗಳ ಗೊರಸುಗಳ ತುಳಿತದಿಂದ ಅಲ್ಲಿಯೇ ಒಂದು ಕುಂಡ ವೇರ್ಪಟ್ಟಿತು. ಎಲೈ ದ್ವಿಜೋತ್ತಮರೇ! ರಾಜೋತ್ತಮನಾದ ಇಂದ್ರದ್ಯುಮ್ನ ನೆರೆದ ದಾನಧಾರೆಯ ಜಲದಿಂದ ಅದು ತುಂಬಿ ಮಹಾಪುಣ್ಯಫಲಪ್ರದಾಯಕ ವಾದ ತೀರ್ಥವಾಯಿತು.

೩೭. ಎಲೈ ವಿಪ್ರರೇ! ಈ ಸರಸ್ಸಿನಲ್ಲಿ ಸ್ನಾನಮಾಡಿ ಪಿತೃಗಳನ್ನೂ, ದೇವತೆ ಗಳನ್ನೂ ವಿಧಿವತ್ತಾಗಿ ತರ್ಪಣ ಪೂಜಾದಿಗಳಿಂದ ತೃಪ್ತಿಗೊಳಿಸಿದುದಾದರೆ ಮಾನವನು ನಿಸ್ಸಂಶಯವಾಗಿ ಅಶ್ವಮೇಧಸಹಸ್ರದ ಫಲವನ್ನು ಪಡೆಯುತ್ತಾನೆ.

ನಾಮ್ನಾ ಖ್ಯಾತಂ ಸರಸ್ತಸ್ಯ ಇಂದ್ರದ್ಯುಮ್ನಸ್ಯ ಭೂಪತೇಃ ।
ನಿರ್ವಪತ್ಯತ್ರ ಪಿಂಡಾಂಶ್ಚ ಪಿತ್ರೂನುದ್ದಿಶ್ಯ ಮಾನವಾಃ।
ಕುಲೈಕವಿಂಶಮುದ್ಧೃತ್ಯ ಬ್ರಹ್ಮಲೋಕೇ ಮಹೀಯತೇ ॥ ೩೮ ॥
ನಾತಃ ಪರತರಂ ತೀರ್ಥಂ ಹಯಮೇಧಾಂಗಸಂಭವಾತ್ ।
ಇಂದ್ರದ್ಯುಮ್ನಸ್ಯ ಸರಸಃ ಸ್ಯಾದ್ವಾ ತ್ರಿಪಥಗಾ ಸಮಾ ॥ ೩೯ ॥
ತತ್ರ ಪ್ರಾಸಾದಘಟನಾಮುಪಚಕ್ರಾಮ ಭೂಪತಿಃ ।
ಶುಭೇ ಕಾಲೇ ಸುನಕ್ಷತ್ರೇ ದೈವಜ್ಞವಿಧಿಚೋದಿತೇ ॥ ೪೦ ॥
ಸುಮುಹೂರ್ತೇ ನಾರದಾದೀನ್ಬ್ರಾಹ್ಮಣಾಗ್ರ್ಯಾನ್ಪ್ರಪೂಜ್ಯ ಚ ।
ಸ್ವಸ್ತಿವಾಚಂ ಚ ಕರ್ಮರ್ಧಿಂ ವಾಚಯಿತ್ವಾ ನೃಪೋತ್ತಮಃ ।
ಅರ್ಘ್ಯಂ ದದೌ ಜಗನ್ನಾಥಂ ಸ್ಮರನ್ಪ್ರಾಸಾದವೇಶ್ಮನಿ ॥ ೪೧ ॥
ವಸುಧಾಂ ಪ್ರಾರ್ಥಯಿತ್ವಾ ತು ಸ್ಥಾನಮಾಚಂದ್ರತಾರಕಂ ।
ಶಿಲ್ಪಿನಃ ಪೂಜಯಾಮಾಸ ವಾಸ್ತುಯಾಗಪುರಃಸರಂ ॥ ೪೨ ॥

---

೩೮. ಭೂಪತಿಯಾದ ಇಂದ್ರದ್ಯುಮ್ನನ ಹೆಸರಿನಿಂದಲೇ ಪ್ರಸಿದ್ಧವಾದ ಈ ಸರಸ್ಸಿನ ತೀರದಲ್ಲಿ ಯಾವ ಮಾನವನು ಪಿತೃಗಳನ್ನುದ್ದೇಶಿಸಿ ಪಿಂಡಶ್ರಾದ್ಧವನ್ನು ಮಾಡುವನೋ ಅವನು ಇಪ್ಪತ್ತೊಂದು ಕುಲಗಳನ್ನು ಉದ್ಧಾರಮಾಡಿ ಬ್ರಹ್ಮಲೋಕದಲ್ಲಿ ವಿರಾಜಿಸುತ್ತಾನೆ.

೩೯. ಅಶ್ವಮೇಧಯಾಗಾಂಗವಾಗಿ ಉದ್ಭವಿಸಿದ ಈ ತೀರ್ಥಕ್ಕಿಂತಲೂ ಉತ್ತಮವಾದ ತೀರ್ಥವೇ ಭೂಲೋಕದಲ್ಲಿರುವುದಿಲ್ಲವು. ಈ ಇಂದ್ರದ್ಯುಮ್ನ ಸರೋವರಕ್ಕೆ ತ್ರಿಪಥಗಾಮಿನಿಯಾದ ಗಂಗಾನದಿಯೂ ಒಂದುವೇಳೆ ಸಮವಾಗುವುದೋ ಏನೋ!

೪೦. ಎಲೈ ವಿಪ್ರರೇ! ಇದಾದ ತರುವಾಯ ಆ ಇಂದ್ರದ್ಯುಮ್ನ ಮಹಾರಾಜನು ದೈವಜ್ಞರು ಜ್ಯೋತಿಶ್ಶಾಸ್ತ್ರಾನುಸಾರವಾಗಿ ನಿರ್ಣಯಿಸಿಕೊಟ್ಟ ಸುನಕ್ಷತ್ರ ಸಹಿತವಾದ ಶುಭ ಮುಹೂರ್ತದಲ್ಲಿ ಶ್ರೀಜಗನ್ನಾಥನಿಗೆ ಪ್ರಾಸಾದವನ್ನು ಕಟ್ಟಿಸಲುಪಕ್ರಮಿಸಿದನು.

೪೧. ಶುಭಮುಹೂರ್ತದಲ್ಲಿ ನಾರದನೇ ಮೊದಲಾದ ದ್ವಿಜೋತ್ತಮರನ್ನು ಪೂಜಿಸಿ ಸ್ವಸ್ತಿವಾಚನವನ್ನೂ, ಆರಂಭಿಸಿರುವ ಕಾರ್ಯಕ್ಕೆ ಸಮೃದ್ಧಿಯನ್ನೂ ಹೇಳಿಸಿ ಜಗನ್ನಾಥಸ್ವಾಮಿಯನ್ನೇ ಸ್ಮರಿಸಿ ಆ ಪ್ರಾಸಾದ ಭವನದಲ್ಲಿ ಅರ್ಘ್ಯವನ್ನಿತ್ತನು.

೪೨. ಬಳಿಕ ಆ ಸ್ಥಾನವು ಆಚಂದ್ರತಾರಕವಾಗಿ ಶಾಶ್ವತವಾಗಿರುವಂತೆ ಭೂದೇವಿಯನ್ನು ಪ್ರಾರ್ಥಿಸಿಕೊಂಡು, ವಾಸ್ತುಯಾಗಪುರಸ್ಸರವಾಗಿ ಆ ಪ್ರಾಸಾದ ಭವನವನ್ನು ಕಟ್ಟಿದ ಶಿಲ್ಪಿಗಳನ್ನು ಸತ್ಕರಿಸಿದನು.

ಮಹೋತ್ಸವಂ ತಥಾ ಚಕ್ರೇ ಗೀತವಾದ್ಯೈಃ ಪ್ರಭೂತಕೈಃ ।
ದೀನಾನಾಥ ವಿಪನ್ನೇಭ್ಯೋ ದದೌ ವಸ್ತು ಯಥೇಪ್ಸಿತಂ ॥ ೪೩ ॥
ರಾಜ್ಞೋ ವಿಸರ್ಜಯಾಮಾಸ ಬಹುಮಾನಪುರಸ್ಸರಂ ।
ಕೃತಾರ್ಥಾನವತಾರಂ ತಂ ಹರೇರ್ದೃಷ್ಟ್ವಾ ಹತಾಂಹಸಃ ॥ ೪೪ ॥
ತತಃ ಸ ಕೋಟಿಶೋ ವಿತ್ತಂ ದದೌ ಪಾಷಾಣದಾರಕೇ ॥ ೪೫ ॥
ಆಹೃತೌ ಬಹುದೇಶೇಭ್ಯೋ ದೃಷದಾಂ ಪಾರ್ಥಿವೋತ್ತಮಃ ।
ಉವಾಚೇದಂ ಮುದಾ ಯುಕ್ತಃ ಸಭಾಯಾಂ ಪೃಥಿವೀಶ್ವರಃ ॥ ೪೬ ॥
ಅಷ್ಟಾದಶಭ್ಯೋ ದ್ವೀಪೇಭ್ಯೋ ಯನ್ಮಯಾ ಪೌರುಷಾರ್ಜಿತಂ ।
ತತ್ಸರ್ವಂ ಜಗದೀಶಸ್ಯ ಪ್ರಾಸಾದಾಯಾಪವರ್ಜಿತಂ ॥ ೪೭ ॥
ಜೈತ್ರಯಾತ್ರಾಪ್ರಸಂಗೇನ ಶ್ರಮೋ ಲಬ್ಧಸ್ತು ಯೋ ಮಯಾ ।
ಸಫಲೋಽಸ್ತು ಸ ಮೇ ವಿಷ್ಣೋಃ ಪ್ರಾಸಾದಾಯಾರ್ಥಯೋಗತಃ ॥
ಅತಃ ಪರಂ ಮೇಽಃ ಕಿಂ ಭಾಗ್ಯಂ ಚರಾಚರಗುರುಂ ಹರಿಂ ॥ ೪೯ ॥

---

೪೩. ಅಂತೆಯೇ ಆ ಸಮಯದಲ್ಲಿ ಅನೇಕ ಗೀತವಾದ್ಯಗಳಿಂದ ಮಹೋತ್ಸವವನ್ನು ಮಾಡಿಸಿ, ದೀನರಿಗೂ, ಅನಾಥರಿಗೂ, ಕುಂಟರು, ಕುರುಡರೇ ಮೊದಲಾದ ಅಂಗವಿಕಲರಿಗೂ ಅವರವರಿಗೆ ಬೇಕಾದ ವಸ್ತುಗಳನ್ನು ಕೊಟ್ಟನು.

೪೪. ತರುವಾಯ ಆ ಭೂಪಾಲನು ತನ್ನನ್ನು ಹಿಂಬಾಲಿಸಿ ಬಂದಿದ್ದ ಸಾಮಂತ ನರೇಶರೆಲ್ಲರನ್ನೂ ಬಹುಮಾನಪೂರ್ವಕವಾಗಿ ಅವರವರ ದೇಶಗಳಿಗೆ ಬೀಳ್ಕೊಟ್ಟನು. ಆ ನರೇಶರೆಲ್ಲರೂ ಶ್ರೀಹರಿಯ ಬಲಭದ್ರಾಸುದರ್ಶನಸಹಿತವಾದ ಜಗನ್ನಾಥಾವತಾರವನ್ನು ಕಂಡು ಪಾಪದೂರರಾದರು.

೪೫–೪೮. ತರುವಾಯ ಆ ಪಾರ್ಥಿವೋತ್ತಮನು, ಅನೇಕ ದೇಶಗಳಿಂದ ಕಲ್ಲುಗಳನ್ನು ಕೊಂಡುಬರಲೋಸುಗ ಕಲ್ಲುಕೆಲಸದವರಿಗೆ ಕೋಟ್ಯಂತರ ಧನವನ್ನಿತ್ತನು. ಬಳಿಕ ಆ ಪೃಥಿವೀಶ್ವರನು ಸಭೆಯಲ್ಲಿ ಕುಳಿತು ಸಂತೋಷದಿಂದ ಇಂತೆಂದನು:—"ಎಲೈ ಸಭಾಸ್ತಾರರೇ! ನಾನು ಹದಿನೆಂಟು ದ್ವೀಪಗಳಲ್ಲಿ ಯಾವ ಯಾವ ಐಶ್ವರ್ಯವನ್ನಾರ್ಜಿಸಿತಂದಿರುವೆನೋ ಅದೆಲ್ಲವನ್ನೂ, ಜಗದೀಶನಾದ ಈ ಜಗನ್ನಾಥಪ್ರಭುವಿನ ದೇವಾಲಯ ನಿರ್ಮಾಣಕ್ಕಾಗಿ ಕೊಟ್ಟಿರುತ್ತೇನೆ. ಇದರಿಂದ ನಾನು ಜೈತ್ರಯಾತ್ರೆ ಮಾಡಿ ಎಷ್ಟು ಶ್ರಮಪಟ್ಟಿರುವೆನೋ ಅಷ್ಟು ಶ್ರಮವೂ, ಇದೀಗ ನಾನು ಆ ಧನವನ್ನು ಶ್ರೀಮಹಾವಿಷ್ಣುವಿನ ಪ್ರಾಸಾದ ನಿರ್ಮಾಣಕ್ಕೆ ವಿನಿಯೋಗಿಸುವುದರಿಂದ ಸಫಲವಾಗಲಿ.

೪೯–೫೦. ಈಗ ನಾನು ನನ್ನ ಭುಜಬಲದಿಂದಲೇ ಸಂಪಾದಿಸಿದ ಸಂಪತ್ತಿನಿಂದ ಚರಾಚರಗುರುವಾದ ಶ್ರೀಹರಿಯನ್ನು ಪ್ರಸನ್ನಗೊಳಿಸುವೆನಲ್ಲವೆ! ಇದಕ್ಕಿಂತಲೂ ನನಗೆ ಬೇರೊಂದು ಭಾಗ್ಯವುಂಟೆ? ಶ್ರೀದೇವಿಯು ಯಾವಾಗಲೂ

ಪ್ರಸಾದಯಿಷ್ಯೇ ಸಂಪತ್ಯಾ ಭುಜದ್ವಂದ್ವಾರ್ಜಿತಶ್ರಿಯಾ ।
ಶ್ರೀಃ ಸದಾಪುಂಡರೀಕಾಕ್ಷೇ ಶ್ರಿಯೋಽನುಗ್ರಹಜಾ ಮಮ ॥ ೫೦ ॥
ಕಿಂ ಕರ್ತುರ್ಮಿಶಶಸ್ತಸ್ಯಾಂ ನೈ ದೇವದೇವಸ್ಯ ಚಕ್ರಿಣಃ ।
ಕಟಾಕ್ಷಪಾತೋ ಯಸ್ಯ ಸ್ಯಾತ್ತಸ್ಯ ಶ್ರೀಃ ಸರ್ವತೋಮುಖೀ ॥ ೫೧ ॥
ಅಷ್ಟಾದಶಾತ್ಮಿಕಾ ದೇವೀ ಜಿಹ್ವಾಗ್ರೇ ಚಾಸ್ಯ ನೃತ್ಯತಿ ।
ಯಮಾರಾಧ್ಯ ಜಗನ್ನಾಥಂ ಬ್ರಹ್ಮತ್ವಂ ಪ್ರಾಪ್ತವಾನ್ವಿಧಿಃ ॥ ೫೨ ॥
ರುದ್ರೋ ಮಹೇಶ್ವರತ್ವಂ ಚ ಶಕ್ರಸ್ತ್ರಿದಿವರಾಜತಾಂ ।
ಲೇಭೇ ತಮರ್ಚ್ಯಂ ಜಗತಾಮರ್ಚಯಿಷ್ಯಾಮಿ ಶಾಶ್ವತಂ ॥ ೫೩ ॥
ಜಿತಂ ತೇನ ತ್ರಿಧಾ ರಾಶೀಭೂತಮಂಹೋ ಮಹಾತ್ಮನಾ ।
ಸಾಂಗೋಪಾಂಗೇನ ವಿಧಿನಾ ಯೇನ ಕೃಷ್ಣಸ್ಸಮರ್ಚಿತಃ ॥ ೫೪ ॥
ಕಲೇವರಮಿದಂ ಕ್ಷೇತ್ರಂ ಯತ್ರಾಹಂಕಾರವಾನ್ವಿಭುಃ ।
ಆವಿರ್ಭಾವ ತಿರೋಭಾವೌ ಸ್ಥಿತಿರ್ನಿತ್ಯಾಹಿ ಯತ್ರಭುಃ ॥ ೫೫ ॥
ಅತ್ರಸಾಕ್ಷಾದ್ವಪುಷ್ಮಂತಂ ಸಂಪೂಜ್ಯ ಜಗತಾಂ ಗುರುಂ ।
ಸಾಕ್ಷಾತ್ಕೃತಾರ್ಥೋ ಭವತಿ ಚತುರ್ವರ್ಗಸ್ಯ ಭಾಜನಂ ॥ ೫೬ ॥

---

ಆ ಪುಂಡರೀಕಾಕ್ಷನಲ್ಲಿಯೇ ನೆಲಸಿರುವಳು. ಆಕೆಯು ನನ್ನ ವಿಷಯದಲ್ಲಿ ಅನುಗ್ರಹಶಾಲಿನಿಯಾಗಿರುವಳು.

೫೧–೫೩. ಆಕೆಯು ಅನುಗ್ರಹಿಸಿದರೂ ಮಾನವನು ಏನುತಾನೆ ಮಾಡಲು ಸಾಧ್ಯವಾದೀತು? ದೇವದೇವನಾದ ಆ ಚಕ್ರಪಾಣಿಯ ಕಟಾಕ್ಷಪಾತವು ಯಾವನ ಮೇಲೆಯೋ ಅವನ ವಿಷಯದಲ್ಲಿ ಶ್ರೀದೇವಿಯೂ ಸಹ ಸರ್ವತೋಮುಖಿಯಾಗಿ ರುತ್ತಾಳೆ. ಅಷ್ಟಾದಶಾತ್ಮಿಕೆಯಾದ ಆ ದೇವಿಯು ಶ್ರೀಮನ್ನಾರಾಯಣನ ನಾಲಗೆಯ ತುದಿಯಲ್ಲಿ ನರ್ತಿಸುತ್ತಿರುತ್ತಾಳೆ. ಆ ಸ್ವಾಮಿಯನ್ನಾರಾಧಿಸಿ ವಿಧಾತನು ಬ್ರಹ್ಮಪದವಿಯನ್ನು ಪಡೆದನು. ರುದ್ರನು ಮಹೇಶ್ವರತ್ವವನ್ನು ಹೊಂದಿದನು. ಶಕ್ರನು ಸ್ವರ್ಗಲೋಕದ ರಾಜತ್ವವನ್ನು ಪಡೆದನು. ಅಂತಹ ಸರ್ವಪೂಜ್ಯನೂ, ಶಾಶ್ವತನೂ ಆದ ಜಗನ್ನಾಧನನ್ನು ನಾನು ಪೂಜಿಸುವೆನು.

೫೪. ಯಾವನಾದರೆ ಸಾಂಗೋಪಾಂಗವಾದ ವಿಧಾನದಿಂದ ಶ್ರೀಕೃಷ್ಣ ಮೂರ್ತಿಯನ್ನು ಪೂಜಿಸುವನೋ ಅವನು ಕಾಯಿಕ ವಾಚಿಕ ಮಾನಸಿಕವಾದ ಮೂರು ಬಗೆಯ ಪಾಪರಾಶಿಗಳನ್ನೂ ಜಯಿಸದವನಾಗುತ್ತಾನೆ.

೫೫–೫೬. ಈ ಕ್ಷೇತ್ರವು ಆ ಪರಮಾತ್ಮನ ಕಳೇಬರಸ್ವರೂಪವಾದುದು; ಇಲ್ಲಿ ವಿಭುವಾದ ಆ ಪುರುಷೋತ್ತಮನೇ ಅಹಂಕಾರವಂತನು. ಇಲ್ಲಿ ಆ ಪ್ರಭು ವಿನ ಆವಿರ್ಭಾವತಿರೋಭಾವಗಳೂ, ಸ್ಥಿತಿಯೂ ನಿತ್ಯವಾದುವು. ಇಲ್ಲಿ ಮಾನವನು ಸಾಕ್ಷಾದ್ದೇಹಧಾರಿಯಾಗಿ ನೆಲಸಿ ಜಗದ್ಗುರುವಾಗಿರುವ ಆ ಜಗನ್ನಾಥನನ್ನು

ಬಹುವ್ಯಯಾಽಯಾಸತೋ ಯಾ ರಾಜಋದ್ಧಿರ್ಮಯಾರ್ಜಿತಾ ।
ಅಸ್ಯೈವಾನುಗ್ರಹಾತ್ಸಾತು ಸಫಲಾಸ್ತು ಪದಾಂಬುಜೇ ॥ ೫೭ ॥
ಸರ್ವೋಽಪಚಾರೈಃ ಪರಿಪೂಜ್ಯ ದೇವಂ
ದ್ರವ್ಯೈರ್ಹೃತೈಃ ಸಾಗರಮೇಖಲಾಯಾಃ ।
ಯಾವತ್ಸಮಾಪ್ನೋತಿ ಹಿ ಕರ್ಮಪಾಕಃ
ಸಾಮ್ರಾಜ್ಯಯಾತ್ರಾ ಸಫಲಾ ಹಿ ಮಾಸ್ತು ॥ ೫೮ ॥
ಕಿಂ ದ್ರವ್ಯಜಾತಂ ಖಲು ಯೇನ ವಿಷ್ಣುಂ
ನೋಪಾಹರೇತ್ಸಂಗಮುಪೇತಕಲ್ಮಷಃ ।
ಕಿಂ ಪೌರುಷೇಯಂ ಯದಿ ವಾಸುದೇವ
ಪರಿಚ್ಛದೋ ಯೇನ ನ ಸಾಧಿತೋ ಮೇ ॥ ೫೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನ ನಾರದಕೃತ ದಾರುಮೂರ್ತಿಸ್ತೋತ್ರಂ—ಬ್ರಾಹ್ಮಣಾದಿ ಪೂಜನವರ್ಣನಂ" ನಾಮ ವಿಂಶೋಽಧ್ಯಾಯಃ

---

ಸಾಕ್ಷಾತ್ತಾಗಿ ಪೂಜಿಸಿದುದಾದರೆ ಕೃತಾರ್ಥನಾಗುವನಲ್ಲದೆ, ಧರ್ಮಾರ್ಥ ಕಾಮ ಮೋಕ್ಷಗಳೆಂಬ ನಾಲ್ಕುಬಗೆಯ ಪುರುಷಾರ್ಥಗಳಿಗೂ ಭಾಜನನಾಗುತ್ತಾನೆ.

೫೭. ಅಪಾರವಾದ ಧನವ್ಯಯ ಬಲವ್ಯಯಗಳಿಂದಲೂ, ಆಯಾಸದಿಂದಲೂ ನಾನು ಯಾವ ರಾಜ್ಯೈಶ್ವರ್ಯವನ್ನಾರ್ಜಿಸಿದೆನೋ ಅದೆಲ್ಲವೂ ಈ ಸ್ವಾಮಿಯ ಅನುಗ್ರಹದಿಂದಲೇ ಅಲ್ಲವೆ! ಅದೀಗ ಈ ಸ್ವಾಮಿಯ ಪದಕಮಲದಲ್ಲಿಯೇ ಅರ್ಪಿತವಾಗಿ ಸಫಲಗೊಳ್ಳಲಿ !

೫೮. ನಾನು ಸಾಗರಮೇಖಲೆಯಾದ ಈ ಭೂಮಂಡಲದಲ್ಲಿ ಜೈತ್ರಯಾತ್ರೆ ಯನ್ನೆಸಗಿ ಆರ್ಜಿಸಿ ತಂದಿರುವ ದ್ರವ್ಯಗಳಿಂದ ದೇವದೇವನಾದ ಈ ಜಗನ್ನಾಥ ನನ್ನು ಸರ್ವೋಪಚಾರಗಳಿಂದಲೂ ಪೂಜಿಸಿ, ಈ ಕರ್ಮಪರಿಪಾಕವು ನಮೆಯುವ ವರೆಗೂ ನನ್ನ ಈ ಸಾಮ್ರಾಜ್ಯಯಾತ್ರೆಯು ಸಫಲವಾಗದಿರಲಿ.

೫೯. ಶ್ರೀಮಹಾವಿಷ್ಣುವಿಗೆ ಸಮಸ್ತವನ್ನೂ ಸಂಪೂರ್ಣವಾಗಿ ಸಮರ್ಪಿಸಿ ಕಲ್ಮಷದೂರನಾಗಲು ಸಾಧ್ಯವಾಗದೆ ಉಳಿಯುವ ದ್ರವ್ಯದಿಂದೇನುಫಲ? ಈಗ ನಾನು ಶ್ರೀ ವಾಸುದೇವನಿಗೆ ದೇವಾಲಯವನ್ನು ಸಾಧಿಸದಿದ್ದರೆ ಈ ನನ್ನ ಪೌರುಷದಿಂದತಾನೇ ಏನುಪ್ರಯೋಜನವು ?"

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನನಾರದಕೃತ ದಾರುಮೂರ್ತಿ ಸ್ತೋತ್ರ—ಬ್ರಾಹ್ಮಣಾದಿಪೂಜನವರ್ಣನ" ವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶೋಽಧ್ಯಾಯಃ

### ದ್ವಿಜಕೃತದಾರುವಪುರ್ಮಾಹಾತ್ಮ್ಯವರ್ಣನಂ— ನಾರದಾನುಮೋದನಂ

ಜೈಮಿನಿರುವಾಚ :—

ಇತಿ ಬ್ರುವಾಣಂ ರಾಜರ್ಷಿಂ ಕಶ್ಚಿದೃಗ್ವೇದಪಾರಗಃ ।
ವೇದಾಂತವಿಜ್ಞಾನಶೀಲೋ ದ್ವಿಜೋ ವಾಕ್ಯಂ ಮುದಾ ಜಗೌ ॥ ೧ ॥

ಅಹೋ ತವಾಯಂ ಖಲು ಭಾಗ್ಯರಾಶಿ
ರ್ಯೇನಾವಿರಾಸೀದ್ಭುವಿ ದಾರುಮೂರ್ತಿಃ ।
ಯಸ್ಯಾತ್ಯುಪಾಸ್ತಿಂ ಶ್ರುತಿರಾಹಮುಕ್ತಿ
ಪ್ರದಾಮನಾತ್ಮಜ್ಞವಿಮೋಹಿತಾನಾಂ ॥ ೨ ॥

ಯ ಏಷ ಪ್ಲವತೇ ದಾರುಃ ಸಿಂಧೋಃ ಪಾರೇ ಹ್ಯಪೌರುಷಂ ।
ತಮುಪಾಸ್ಯ ದುರಾರಾಧ್ಯಂ ಮುಕ್ತಿಂ ಯಾಂತಿ ಸುದುರ್ಲಭಾಂ ॥ ೩ ॥

ಬ್ರಹ್ಮಜ್ಞಾನನಿಧಿಃ ಸಾಕ್ಷಾನ್ನಾರದಃ ಪ್ರತ್ಯುವಾಚ ಯತ್ ।
ನಹಿ ವೇದಾಂತವಚಸೋಽಪರಸ್ಮಾಜ್ಜ್ಞಾನಮಸ್ಯ ವೈ ॥ ೪ ॥

---

## ಕನ್ನಡದ ಅನುವಾದ

### ದ್ವಿಜಕೃತದಾರುವಪುರ್ಮಾಹಾತ್ಮ್ಯವರ್ಣನ—ನಾರದಾನುಮೋದನ

೧. ಜೈಮಿನಿಯು ಹೇಳುತ್ತಾನೆ:— ಎಲೈ ಮುನಿಗಳಿರಾ! ಈ ರೀತಿ ಹೇಳುತ್ತಿದ್ದ ಆ ರಾಜರ್ಷಿಯನ್ನು ಕುರಿತು ಆ ಸಭೆಯಲ್ಲಿದ್ದ ಒಬ್ಬಾನೊಬ್ಬ ಋಗ್ವೇದಪಂಡಿತನೂ, ವೇದಾಂತವಿಜ್ಞಾನಶಾಲಿಯೂ ಆದ ವಿಪ್ರನು ಸಂತುಷ್ಟನಾಗಿ ಈ ವಾಕ್ಯವನ್ನು ಹೇಳಿದನು :—

೨. "ಎಲೈ ರಾಜೇಂದ್ರನೇ! ನಿನ್ನ ಭಾಗ್ಯರಾಶಿಯನ್ನು ಹೊಗಳಲಳವೆ! ಆ ನಿನ್ನ ಭಾಗ್ಯದ ಮಹಿಮೆಯಿಂದಲೇ ದಾರುಮೂರ್ತಿಯಾದ ಶ್ರೀಮನ್ನಾರಾಯಣನು ಈ ಭೂಲೋಕದಲ್ಲಿ ಆವಿರ್ಭವಿಸಿದನು. ಆತ್ಮಜ್ಞಾನವಿಲ್ಲದೆ ವಿಶೇಷವಾಗಿ ಮೋಹಿತರಾದ ಮಾನವರಿಗೆ ಈ ಮೂರ್ತಿಯು ಅತ್ಯಂತೋಪಾಸನೆಯು ಮುಕ್ತಿಪ್ರದವೆಂದು ವೇದಶ್ರುತಿಯು ಸಾರುತ್ತಿದೆ.

೩. ಇಲ್ಲಿಯ ಕಡಲಕರೆಯಲ್ಲಿ ಯಾವ ಅಲೌಕಿಕವಾದ ದಾರುವು ತೇಲಿಬರುತ್ತದೆಯೋ ಅದೇ ದುರಾರಾಧ್ಯನಾದ ಶ್ರೀಹರಿಯ ಮೂರ್ತಿಯು. ಅದನ್ನು ಉಪಾಸನೆ ಮಾಡಿದುದಾದರೆ ಮಾನವನು ಅತ್ಯಂತ ದುರ್ಲಭವಾದ ಮುಕ್ತಿಯನ್ನು ಪಡೆಯುತ್ತಾನೆ."

೪. ಇಂತೆಂದು ಬ್ರಹ್ಮಜ್ಞಾನಕ್ಕೆ ಮಾತ್ರ ನಿಧಿಯಾಗಿರುವ ಈ ನಾರದ ಮುನೀಂದ್ರನು ಸಾಕ್ಷಾತ್ತಾಗಿ ಏನನ್ನು ಹೇಳಿದನೋ ಅದಂತಿರಲಿ. ಈತನಿಗೆ ವೇದಾಂತವಾಕ್ಯಗಳಿಗಿಂತಲೂ ಹೆಚ್ಚಾಗಿ ಏನೂ ತಿಳಿದಿಲ್ಲವು.

ನಹಿ ಪ್ರವೃತ್ತಿರ್ವಿಷ್ಣೋಽಸ್ತಿ ವಿನಾ ವೇದಂ ಪ್ರವರ್ತತೇ ।
ಪರೇಷಾಂ ಸ್ವಸ್ಯ ವಾ ಸೃಷ್ಟೌ ಶ್ರುತಿಪ್ರಾಮಾಣ್ಯವಾನ್ಪ್ರಭುಃ ॥ ೫ ॥
ವಿನಾ ಶ್ರುತಿಂ ಪ್ರವರ್ತೇಚ್ಚೇತ್ಕಸ್ತತ್ಪ್ರಾಮಾಣ್ಯಮೃಚ್ಛತಿ ।
ತಸ್ಮಾಚ್ಛ್ರುತಿಪ್ರಸಿದ್ಧೋಽಯಮವತಾರೋಽತ್ರ ಭೂಪತೇ ॥ ೬ ॥
ವೇದಾಂತವೇದ್ಯಂ ಪುರುಷಂ ಗೀತಂ ತಂ ಸಾಮಗೀತಿಷು ।
ಪ್ರತಿಮಾಂ ನ ತು ಜಾನೀಹಿ ನಿಃಶ್ರೇಯಸಕರಂ ನೃಣಾಂ ॥ ೭ ॥
ದರ್ಶನಾದೇವ ನಃ ಶಾಂತಂ ಸುದೃಢಂ ತಮ ಉತ್ತಮಂ ।
ಸಂತ್ಯೇವ ಶ್ರುತಯಃ ಪೂರ್ವಮೇತದರ್ಚಾಪ್ರಕಾಶಿಕಾಃ ।
ಏತದರ್ಚಾ ಪ್ರಶಸ್ತಾ ವೈ ಸದರ್ಥೇ ವಿನಿಯೋಜಿತಾ ॥ ೮ ॥
ಅಹೋ ಭಾರತವರ್ಷಸ್ಥಾ ಮನುಷ್ಯಾಃ ಕ್ಷೀಣಕಲ್ಮಷಾಃ ।
ಅಪವರ್ಗಪ್ರದೋ ಯೇಷಾಮಾವಿರಾಸೀಜ್ಜನಾರ್ದನಃ ॥ ೯ ॥
ತತ್ರಾಪ್ಯಯಂ ಚೋಢ್ರದೇಶಃ ಸರ್ವೇಷಾಮುತ್ತಮೋತ್ತಮಃ ।
ಯತ್ರಸ್ಥಾಶ್ಚರ್ಮನೇತ್ರೇಣ ಪಶ್ಯಂತಿ ಬ್ರಹ್ಮರೂಪಿಣಂ ॥ ೧೦ ॥

---

೫–೬. ವೇದವನ್ನುಳಿದು ಶ್ರೀಮಹಾವಿಷ್ಣುವಿನ ಪ್ರವೃತ್ತಿಯೇನೂ ನಡೆಯುವುದಿಲ್ಲವು. ಬ್ರಹ್ಮಾದಿ ದೇವತೆಗಳ ಅಥವಾ ತನ್ನ ಸೃಷ್ಟಿಯಲ್ಲಿ ಆ ಪ್ರಭುವು ಶ್ರುತಿಯನ್ನೇ ಪ್ರಾಮಾಣ್ಯವನ್ನಾಗಿ ಅಂಗೀಕರಿಸುವವನು. ಅಂತಹ ಶ್ರುತಿಯನ್ನೇ ಬಿಟ್ಟು ಆತನು ಪ್ರವರ್ತಿಸಿದುದಾದರೆ ಆ ಶ್ರುತಿಯನ್ನಾವನುತಾನೆ ಪ್ರಮಾಣವೆಂದು ತಿಳಿದಾನು? ಆದುದರಿಂದೆಲೈ ಭೂಪತಿಯಾದ ಇಂದ್ರದ್ಯುಮ್ನನೇ! ಭಗವಂತನ ಈ ದಾರುಮಯಮೂರ್ತಿಯ ಅವತಾರವೂ ಶ್ರುತಿಪ್ರಸಿದ್ಧವೇ!

೭–೮. ಮಹಾರಾಜ! ಆದುದರಿಂದ ಪರಮಾತ್ಮನ ಈ ಅವತಾರವನ್ನು ಕೇವಲ ದಾರುಪ್ರತಿಮೆಯೆಂದು ತಿಳಿಯಬೇಡ. ಇಲ್ಲಿ ವಿರಾಜಿಸುತ್ತಿರುವವನು ಉಪನಿಷತ್ಪ್ರತಿಪಾದ್ಯನಾಗಿ, ಸಾಮವೇದಶ್ರುತಿಗೀತಗಳಲ್ಲಿ ನಿರೂಪಿತವಾಗಿ ಗಾನ ಮಾಡಲಾಗಿರುವ ಪರಮಪುರುಷನೆಂದು ತಿಳಿ. ಈ ಸ್ವಾಮಿಯು ಮಾನವರಿಗೆ ಮುಕ್ತಿಪ್ರದಾಯಕನಾದವನು. ಈ ಪ್ರಭುವನ್ನು ಸಂದರ್ಶಿಸಿದ ಮಾತ್ರದಿಂದಲೇ ಸುದೃಢವೂ ಉತ್ತಮವೂ ಆದ ನಮ್ಮ ಅಜ್ಞಾನವು ಶಾಂತವಾಗುತ್ತದೆ. ಹಿಂದೆಯೇ ಪ್ರಸಿದ್ಧವಾಗಿರುವ ಶ್ರುತಿಗಳು ಈ ದಿವ್ಯಮೂರ್ತಿಯ ಪೂಜಾಕ್ರಮವನ್ನು ಪ್ರಕಾಶಗೊಳಿಸುವುದಾಗಿರುತ್ತವೆ. ಒಳ್ಳೆಯ ಉದ್ದೇಶದಿಂದ ಮಾಡಿದ ಈ ಸ್ವಾಮಿಯ ಶ್ರುತ್ಯುಕ್ತವಾದ ಅರ್ಚನೆಯು ಬಹಳ ಪ್ರಶಸ್ತವಾದುದು.

೯–೧೦. ಆಹ! ಯಾರಿಗೋಸ್ಕರವಾಗಿ ಈ ಜನಾರ್ದನಸ್ವಾಮಿಯು ಈ ರೂಪದಿಂದ ಅವತರಿಸಿದನೋ ಆ ಭಾರತವರ್ಷದ ಮನುಷ್ಯರೆಲ್ಲರೂ ಕ್ಷೀಣಪಾಪರಾದವರೇ ಸರಿ! ಆದರಲ್ಲಿಯೂ ಈ ಓಢ್ರದೇಶವು ಎಲ್ಲ ದೇಶಗಳಿಗಿಂತಲೂ

ಶ್ರುತಿಸ್ಮೃತೀನಾಂ ಗಹನಃ ಪಂಥಾಃ ಕರ್ಮಭಿರಾಕುಲಃ ।
ಯೇನ ಯಾತಾ ಭ್ರಮಂತೀಹ ಘಟೀಯಂತ್ರವದಾಕುಲಾಃ ॥ ೧೧ ॥
ನಿರ್ವ್ಯಲೀಕಪದಪ್ರಾಪ್ತಿಹೇತುರೇಷ ಸ ಚಿನ್ಮಯಃ ।
ಶ್ರುತ್ಯಾದಿಭಿರ್ವಿನೋಪಾಯೈಃ ಪರಮಾನಂದಮುಕ್ತಿದಃ ॥ ೧೨ ॥
ನಿರಂತರಗತಾಯಾತ ದುಃಸ್ಥಿತಾನಾಂ ದುರಾತ್ಮನಾಂ ।
ಏಷ ದಾರುವಪುರ್ವಿಷ್ಣುಃ ಸುಖದಾತಾ ಸುಬಾಂಧವಃ ॥ ೧೩ ॥
ಶ್ರುತಿಸ್ಮೃತ್ಯುಕ್ತನಿಯಮಾ ವರ್ತಂತೇ ನೇಹ ಪಾರ್ಥಿವ ।
ಯಥಾ ತಥಾ ದೃಷ್ಟಿಪಥಾಮಾಚಾಂಡಾಲಾದ್ವಿಮುಕ್ತಿದಃ ॥ ೧೪ ॥
ಅಭಕ್ತಶ್ಚೇದಮುಂ ಪಶ್ಯೇದ್ಗತಾನುಗತಿಕೋ ನರಃ ।
ಅಶ್ವಮೇಧಸಹಸ್ರಾಣಾಂ ಫಲಂ ಹ್ಯವಿಕಲಂ ಲಭೇತ್ ॥ ೧೫ ॥

---

ಉತ್ತಮೋತ್ತಮವಾದುದು !! ಆಹಾ ಇಲ್ಲಿರುವ ಮಾನವರ ಭಾಗ್ಯವೇ ಭಾಗ್ಯವು! ಅವರು ಸಾಕ್ಷಾತ್ ಪರಬ್ರಹ್ಮಸ್ವರೂಪಿಯಾದ ಶ್ರೀ ಜಗನ್ನಾಥಸ್ವಾಮಿಯನ್ನು ಕೇವಲ ಚರ್ಮಚಕ್ಷುಸ್ಸಿನಿಂದಲೇ ಸಂದರ್ಶಿಸುವರಲ್ಲವೆ!

೧೧. ಎಲೈ ಮಹಾರಾಜನೇ! ಶ್ರುತಿಸ್ಮೃತಿಗಳಲ್ಲಿ ಪ್ರತಿಪಾದಿತವಾಗಿರುವ ಮೋಕ್ಷಮಾರ್ಗವೆಲ್ಲ ಕೇವಲ ಕರ್ಮಗಳಿಂದಲೇ ತೊಡಕಾಗಿರುವುದರಿಂದ ತೀರ ಗಹನವಾಗಿರುವುದು. ಆ ಮಾರ್ಗದಲ್ಲಿ ಅಡಿಯಿಟ್ಟು ಹೊರಟ ಮಾನವರು ಘಟಯಂತ್ರದಂತೆ ಸುತ್ತುತ್ತಲೇ ಇರುತ್ತಾರೆ.

೧೨. ಚಿನ್ಮಯಮೂರ್ತಿಯಾದ ಈ ಸ್ವಾಮಿಯಾದರೋ ಯಾವ ಸಂಶಯವೂ ಇಲ್ಲದೆ ಸ್ಥಿರಪದಪ್ರಾಪ್ತಿಗೆ ಕಾರಣನಾಗಿರುತ್ತಾನೆ. ಈ ಪ್ರಭುವು ಶ್ರುತ್ಯಾದಿಗಳಿಂದಲಾಗಲಿ, ಇತರ ಉಪಾಯಗಳಿಂದಾಗಲಿ ದೊರೆಯಲಸದಳವಾದ ಅಥವಾ ಅವಾವುದೂ ಇಲ್ಲದೆಯೇ ಪರಮಾನಂದಲಕ್ಷಣವಾದ ಮುಕ್ತಿಯನ್ನು ಕೊಡುವನು.

೧೩. ನಿರಂತರವೂ ಜನನಮರಣರೂಪವಾಗಿ, ಬರುತ್ತಲೂ ಹೋಗುತ್ತಲೂ ಇರುವ ದುಃಸ್ಥಿತಿಗೊಳಗಾದ ಮಾನವರೆಲ್ಲರಿಗೂ ಸುಬಂಧುವಾಗಿ ದಾರುದೇಹಧಾರಿಯಾಗಿರುವ ಈ ಮಹಾವಿಷ್ಣುವು ಮೋಕ್ಷರೂಪವಾದ ಸುಖವನ್ನು ದಯೆಗೈಯುತ್ತಾನೆ.

೧೪. ಎಲೈ ಪಾರ್ಥಿವನೇ! ಈ ಕ್ಷೇತ್ರದಲ್ಲಿ ಶ್ರುತಿಸ್ಮೃತ್ಯುಕ್ತಗಳಾದ ಯಾವ ಬಗೆಯ ನಿಯಮಗಳೂ ಇರುವುದಿಲ್ಲವು. ಹೇಗೆಹೇಗಾದರೂ ಸಂದರ್ಶಿಸಿದುದಾದರೆ ಈ ಪ್ರಭುವು ಉತ್ತಮರಿಂದ ಮೊದಲುಗೊಂಡು ಚಂಡಾಲಾದಿಗಳವರೆಗಣ ಸಮಸ್ತರಿಗೂ ಮುಕ್ತಿಯನ್ನು ಕೊಡುವನು.

೧೫–೧೬. ಅಲ್ಲದೆ, ಭಕ್ತನಲ್ಲದವನಾದರೂ ಈತನನ್ನು ನೋಡಬಹುದು. ಏಕೆಂದರೆ, ಜನರು ಒಬ್ಬರನ್ನೊಬ್ಬರು ಅನುಸರಿಸುವುದೇ ಸ್ವಭಾವವಲ್ಲವೆ?

**ಭಜೇಚ್ಚೇನ್ನಿಯಮಸ್ಥೋಹಿ ಭಕ್ತಿಮಾನ್ದೃಢಮಾನಸಃ ।**
**ಅಸಂಶಯಂ ಸ ಸಾಯುಜ್ಯಂ ಬ್ರಹ್ಮಣಾ ಲಭತೇ ನರಃ ॥ ೧೬ ॥**
**ಕ್ವದುಃಖಾಯಾಸಬಹುಲಮನಾಯಾಸವಿನಶ್ವರಂ ।**
**ಅಚಿರಸ್ಥಕ್ಷುದ್ರಫಲಂ ಪುನರಾವೃತ್ತಿಲಕ್ಷಣಂ ॥ ೧೭ ॥**
**ಕ್ವೇದಂ ದಾರುಮಯಂ ಬ್ರಹ್ಮ ಪಾಪರಾಶಿದವಾನಲಂ ।**
**ಸಚ್ಚಿದಾನಂದಕೈವಲ್ಯಮುಕ್ತಿದಂ ದರ್ಶನಾದಪಿ ॥ ೧೮ ॥**
**ವೇದಾನುವಚನಾದೀನಿ ದುಷ್ಕರಾಣಿ ದುರಾತ್ಮನಾಂ ।**
**ಮಹಾತ್ಮಭಿಸ್ತೈರ್ಯತ್ಪ್ರಾಪ್ಯಂ ತದವ್ಯಗ್ರಮಯಂ ದದೇತ್ ॥ ೧೯ ॥**
**ಅನ್ಯಕ್ಷೇತ್ರೇಷು ಭಗವಾನ್ಸುದೂರೋ ಮರ್ತ್ಯವಾಸಿನಾಂ ।**
**ಸ್ವಕ್ಷೇತ್ರೇऽಸ್ಮಿನ್ನಿವಸತಿ ನಿತ್ಯಂ ಮುಕ್ತಿಪ್ರದೋ ವಿಭುಃ ॥ ೨೦ ॥**
**ತಸ್ಮಾದತ್ರಮಹಾಭಾಗ ತಿಷ್ಠ ಸ್ವಬಲಪೌರುಷಃ ॥ ೨೧ ॥**

---

ಅಂತಹನೂ ಸಹ ಈ ಸ್ವಾಮಿಯ ಸಂದರ್ಶನದಿಂದ ಸಹಸ್ರಾಶ್ವಮೇಧಯಾಗಗಳ ಫಲವನ್ನು ಪಡೆಯುತ್ತಾನೆ. ಭಕ್ತಿಮಂತನಾದ ಮಾನವನು ಸ್ಥಿರಮನಸ್ಕನಾಗಿ ನಿಯಮದಿಂದಿದ್ದು ಈ ಪ್ರಭುವನ್ನು ಭಜಿಸಿದುದೇ ಆದರೆ ನಿಸ್ಸಂಶಯವಾಗಿಯೂ ಬ್ರಹ್ಮನೊಡನೆ ಸಮಸಮವಾಗಿ ಸಾಯುಜ್ಯವನ್ನು ಹೊಂದುತ್ತಾನೆ.

೧೭. ಬಹಳವಾದ ದುಃಖವನ್ನೊಳಕೊಂಡು, ಸ್ವಲ್ಪಕಾಲಮಾತ್ರವಿದ್ದು ಕ್ಷುದ್ರವಾದ ಫಲಗಳನ್ನಿತ್ತು, ಜನನಮರಣಾತ್ಮಕವಾದ ಲಕ್ಷಣವನ್ನೊಳಗೊಂಡು ನಿರಾಯಾಸವಾಗಿಯೇ ನಾಶವನ್ನೈದುವ ಈ ಪ್ರಪಂಚವೆತ್ತ?

೧೮. ಪಾಪರಾಶಿಗೇ ದಳ್ಳುರಿಯಂತೆ ಬೆಳಗಿ ದಾರುಮಯವಾಗಿ, ದರ್ಶನ ಮಾತ್ರದಿಂದಲೇ ಸಚ್ಚಿದಾನಂದವೊಂದೇ ಲಕ್ಷಣವಾಗಿರುವ ಮುಕ್ತಿಯನ್ನು ಕೊಡುವಂತಹ ಈ ಪರಬ್ರಹ್ಮವೆತ್ತ?

೧೯. ಎಲೈ ಮಹಾರಾಜನೇ! ದುರಾತ್ಮರಾದವರಿಗೆ ವೇದೋಕ್ತಗಳಾದ ಕರ್ಮಗಳು ಆಚರಿಸಲು ಬಹಳ ಕಷ್ಟಸಾಧ್ಯವಾದುವುಗಳು. ಆದರೆ ಇಲ್ಲಿ ನೆಲಸಿರುವ ಶ್ರೀಮಹಾವಿಷ್ಣುವಿನ ದಾರುಮಯಮೂರ್ತಿಯಾದರೋ ಅಂತಹವರೆಲ್ಲರಿಗೂ ಕೇವಲ ಸಂದರ್ಶನಮಾತ್ರದಿಂದಲೇ, ಮಹಾತ್ಮರಾದವರು ಯಾವುದನ್ನು ಪಡೆಯುತ್ತಾರೆಯೋ ಅವ್ಯಗ್ರವಾದ ಆ ಪದವಿಯನ್ನು ದಯೆಪಾಲಿಸುತ್ತಾನೆ.

೨೦–೨೨. ಭಾರತಭೂಮಿಯ ಇತರ ಕ್ಷೇತ್ರಗಳಲ್ಲಿಯಾದರೋ ಭಗವಂತನು ಮಾನವಕೋಟಿಗೆ ಬಹಳ ದೂರನಾಗಿರುತ್ತಾನೆ. ಆದರೆ ಸ್ವಕ್ಷೇತ್ರವಾದ ಈ ಪುರುಷೋತ್ತಮಕ್ಷೇತ್ರದಲ್ಲಿ ಮಾತ್ರ ಆ ವಿಭುವು ಯಾವಾಗಲೂ ತನ್ನ ಭಕ್ತರಿಗೆ ಮುಕ್ತಿಪ್ರದನಾಗಿ ನೆಲಸಿರುತ್ತಾನೆ. ಆದುದರಿಂದೆಲೈ ಮಹಾ ಭಾಗ್ಯಶಾಲಿಯಾದ ಇಂದ್ರದ್ಯುಮ್ನನೇ! ನೀನು ನಿನ್ನ ಬಲಪೌರುಷಗಳೊಡನೆ

ವಿದ್ವತ್ತಮೋಽಸಿ ಭಕ್ತಶ್ಚ ಸಾಂಗೋಪಾಂಗಮಮುಂ ಭಜ ॥ ೨೨ ॥
ಜೈಮಿನಿರುವಾಚ :—
ದ್ವಿಜಸ್ಯ ತದ್ವಚಃ ಶ್ರುತ್ವಾ ನಾರದೋ ಹೃಷ್ಟಮಾನಸಃ ।
ಸಾಧೂಕ್ತಂ ದ್ವಿಜವರ್ಯೇಣ ಶ್ರೌತಮಾರ್ಗಾನುಸಾರಿಣಾ ॥ ೨೩ ॥
ಸೃಷ್ಟ್ಯಾದೌ ಬ್ರಹ್ಮನಿಃಶ್ವಾಸೈರಭವದ್ವೇದಸಂಹತಿಃ ।
ತತ್ರೋಪನಿಷದರ್ಥೋಽಯಂ ಸಾಂಪ್ರತಂ ವ್ಯಕ್ತಮಾಗತಃ ॥ ೨೪ ॥
ವೇತ್ತ್ಯೇತದರ್ಥಂ ಭಗವಾನ್ಪದ್ಮಯೋನಿಃ ಪ್ರಜಾಪತಿಃ ।
ಅಜ್ಞಾಸಿಷಂ ಚ ಭೂಪಾಲ ಸಾಂಪ್ರತಂ ತನ್ಮುಖಾದಹಂ ॥ ೨೫ ॥
ತಸ್ಯಾಜ್ಞಯಾ ಕೃತಂ ಸರ್ವಂ ಯಥಾಭಿಲಷಿತಂ ತವ ।
ಏನಮಾರಾಧ್ಯ ತಿಷ್ಠಾತ್ರ ಯಾಮ್ಯಹಂ ಬ್ರಹ್ಮಣೋಽಂತಿಕಂ ॥ ೨೬ ॥
ಕೃತಂ ನಿವೇದಯಿಷ್ಯಾಮಿ ಪ್ರಕಾಶಂ ಚ ಮುರದ್ವಿಷಃ ।
ಪ್ರಾಸಾದಂ ಕುರು ಭೂಪಾಲ ಧನೇನ ಮಹತಾ ತಥಾ ॥ ೨೭ ॥
ಪ್ರಾಸಾದೇ ನರಸಿಂಹಂ ತು ಪ್ರತಿಷ್ಠಾಪ್ಯ ವಿಮುಚ್ಯಸೇ ॥ ೨೮ ॥

---

ಈ ಕ್ಷೇತ್ರದಲ್ಲಿಯೇ ವಾಸವಾಗಿರು. ನೀನು ಬಹಳ ದೊಡ್ಡ ವಿದ್ವಾಂಸನಾಗಿದ್ದೀಯೆ ; ಈ ಪರಮಾತ್ಮನನ್ನು ಸಾಂಗೋಪಾಂಗವಾಗಿ ಸೇವಿಸಿ ಕೃತಾರ್ಥನಾಗು.''

೨೩. ಜೈಮಿನಿಯು ಹೇಳುತ್ತಾನೆ :—ಎಲೈ ಮುನಿಗಳಿರಾ ! ಈ ರೀತಿ ನುಡಿದ ಆ ವಿಪ್ರನ ಮಾತುಗಳನ್ನು ಕೇಳಿ ನಾರದಮಹರ್ಷಿಯು ಸಂತುಷ್ಟಮಾನಸನಾಗಿ, "ಮಹಾರಾಜ ! ಶ್ರುತಿಮಾರ್ಗವನ್ನು ಅನುಸರಿಸುವವನಾದ ಈ ದ್ವಿಜಶ್ರೇಷ್ಠನು ಚೆನ್ನಾಗಿ ಹೇಳಿದನು.

೨೪. ಸೃಷ್ಟಿಯ ಮೊದಲಲ್ಲಿಯೇ ಪರಬ್ರಹ್ಮನ ನಿಶ್ವಾಸಗಳಿಂದ ವೇದರಾಶಿಯು ಉದ್ಭವಿಸಿತು. ಆ ವೇದಗಳಲ್ಲಿಯೇ ಈಗಲೀ ವಿಪ್ರನು ನುಡಿದ ಉಪನಿಷದರ್ಥವು ಪ್ರಕಟವಾಗಿರುವುದು.

೨೫. ಈ ಉಪನಿಷದರ್ಥವನ್ನು ಭಗವಾನ್ ಕಮಲೋದ್ಭವನಾದ ಬ್ರಹ್ಮನು ತಿಳಿದಿರುತ್ತಾನೆ. ಆತನ ಮುಖದಿಂದ ನಾನು ಅದನ್ನರಿತುಕೊಂಡೆನು.

೨೬. ಆತನ ಆಜ್ಞೆಯಂತೆಯೇ ನಾನು ನಿನಗೆ ಅಭಿಲಷಿತವಾಗಿದ್ದುದೆಲ್ಲವನ್ನೂ ಮಾಡಿಕೊಟ್ಟಿರುತ್ತೇನೆ. ಪ್ರಕೃತದಲ್ಲಿ ನೀನು ದಾರುಮಯಮೂರ್ತಿಯಾದ ಈ ಪರಮಾತ್ಮನನ್ನಾರಾಧಿಸುತ್ತ ಈ ಕ್ಷೇತ್ರದಲ್ಲಿಯೇ ವಾಸವಾಗಿರು. ನಾನು ಬ್ರಹ್ಮನ ಸನ್ನಿಧಿಗೆ ಹೊರಡುತ್ತೇನೆ.

೨೭–೨೮. ಆತನ ಅಪ್ಪಣೆಯಂತೆ ನಾನು ಈ ಕ್ಷೇತ್ರದಲ್ಲೆಸಗಿದ ಕಾರ್ಯಗಳನ್ನೂ, ಶ್ರೀಮನ್ನಾರಾಯಣನು ದಾರುವಪುರ್ಧರನಾಗಿ ಪ್ರಕಾಶಗೊಂಡಿರುವ ವೃತ್ತಾಂತವನ್ನೂ ಅರಿಕೆಮಾಡಿ ಬರುವೆನು. ಅಷ್ಟರಲ್ಲಿ ನೀನು ಮಹತ್ತರವಾದ ಧನವ್ಯಯದಿಂದ ಪ್ರಾರಂಭಿಸಿರುವ ಈ ಪ್ರಾಸಾದವನ್ನು ಕಟ್ಟಿಸಿ ಮುಗಿಸು.

ಜೈಮಿನಿರುವಾಚ:—

ತಚ್ಛ್ರುತ್ವಾ ಸತು ಭೂಮೀಂದ್ರಃ ಪ್ರತ್ಯುವಾಚ ಮುನಿಂ ತದಾ ।
ಮಹರ್ಷೇಽಹಂ ತ್ವಯಾ ಸಾರ್ಧಂ ಯಿಯಾಸುರ್ಬ್ರಹ್ಮಣೋಽಂತಿಕಂ ॥
ಯತ್ಪ್ರಸಾದಾಜ್ಜಗನ್ನಾಥಶ್ಚಕ್ಷುಷೋಽಯಂ ಲೋಚನಾತಿಥಿಃ ।
ನಿವೇದ್ಯ ತಂ ಚ ಪ್ರಾಸಾದಂ ಪ್ರತಿಷ್ಠಾರ್ಥಂ ಮುರದ್ವಿಷಃ ॥ ೩೦ ॥
ವಿಜ್ಞಾಪಯಿಷ್ಯೇ ಸಾನ್ನಿಧ್ಯೇ ಪ್ರಾಸಾದಸ್ಥಾಪನೋತ್ಸವಂ ।
ಯಥಾ ಸ್ವಯಂ ಸಮಾಗಮ್ಯ ಬ್ರಹ್ಮಲೋಕಾತ್ಪಿತಾಮಹಃ ॥ ೩೧ ॥
ಮಹೋತ್ಸವಂ ಭಗವತಃ ಪ್ರಾಸಾದೇಽತ್ರ ಕರಿಷ್ಯತಿ ।
ತನ್ಮುನೇ ಮಾಮಪಿ ವಿಧೇಃ ಸನ್ನಿಧಿಂ ಪ್ರಾಪಯಸ್ವ ಚ ॥ ೩೨ ॥
ಗರ್ಭಪ್ರತಿಷ್ಠಾ ಪ್ರಾಸಾದೇ ಸಮಾಪ್ಯೇಹ ಸ್ಥಿತೋ ಮುನೇ ।
ಪಶ್ಚಾದಾವಾಂ ಗಮಿಷ್ಯಾವಃ ಕಿಂಚಿತ್ಕಾಲ ಪ್ರತೀಕ್ಷ ಮೇ ॥ ೩೩ ॥
ತತಃ ಸ ನೃಪತಿಃ ಸರ್ವಾನ್ಶಿಲ್ಪಶಾಸ್ತ್ರವಿಶಾರದಾನ್ ।
ಪಾಷಾಣಖಂಡಘಟನಾ ಕರ್ಮಣ್ಯೈಕೈಕಯೋಗತಃ ॥ ೩೪ ॥

---

ಇದರಲ್ಲಿ ನೀನು ಶ್ರೀನೃಸಿಂಹಸ್ವಾಮಿಯನ್ನು ಪ್ರತಿಷ್ಠೆಗೊಳಿಸಿದ ಬಳಿಕ ಮೋಕ್ಷವನ್ನು ಪಡೆಯುತ್ತೀಯೆ.''

೨೯–೩೨. ಜೈಮಿನಿಯು ಹೇಳುತ್ತಾನೆ:—ದೇವಮುನಿಯ ಈ ಮಾತನ್ನು ಕೇಳಿ, ಭೂಮೀಂದ್ರನಾದ ಇಂದ್ರದ್ಯುಮ್ನನು ಆತನನ್ನು ಕುರಿತು ಇಂತೆಂದನು :– ''ಎಲೈ ಮಹರ್ಷಿಯೇ! ಯಾರ ಅನುಗ್ರಹದಿಂದ ಶ್ರೀಜಗನ್ನಾಥನು ಈ ನನ್ನ ಚರ್ಮಚಕ್ಷುವಿಗೆ ಅತಿಥಿಯಾದನೋ ಆ ಬ್ರಹ್ಮದೇವನ ಸನ್ನಿಧಿಗೆ ನಾನೂ ನಿನ್ನೊಡನೆ ಹೊರಡಬಯಸಿರುವೆನು. ಈಗಲೂ ಮುರವೈರಿಯ ಪ್ರತಿಷ್ಠೆಗಾಗಿ ಕಟ್ಟಿಸುತ್ತಲಿರುವ ಈ ಪ್ರಾಸಾದದ ವಿಷಯವನ್ನೂ, ಇದರ ಸ್ಥಾಪನಮಹೋತ್ಸವದ ವಿಷಯವನ್ನೂ ಆತನ ಸನ್ನಿಧಿಯಲ್ಲಿ ವಿಜ್ಞಾಪಿಸಿಕೊಳ್ಳುವೆನು. ಆ ಪಿತಾಮಹನು ತಾನಾಗಿಯೇ ಬ್ರಹ್ಮಲೋಕದಿಂದೀಭೂಲೋಕಕ್ಕೆ ಬಿಜಮಾಡಿಸಿ ಈ ಪ್ರಾಸಾದದಲ್ಲಿ ಭಗವಂತನಿಗೆ ಮಹೋತ್ಸವವನ್ನು ನಡೆಸುವಂತೆ ಪ್ರಾರ್ಥಿಸಿಕೊಳ್ಳುವೆನು. ಆದುದರಿಂದೆಲೈ ನಾರದಮುನಿಯೇ! ನನ್ನನ್ನೂ ಬ್ರಹ್ಮನ ಸನ್ನಿಧಿಗೆ ಕರೆದುಕೊಂಡು ಹೋಗು.

೩೩. ಈ ಪ್ರಾಸಾದದಲ್ಲಿ ಗರ್ಭಗೃಹಪ್ರತಿಷ್ಠೆಯು ಮುಗಿಯಲಿ. ಎಲೈ ಮುನಿಯೇ! ಆ ಬಳಿಕ ನಾವು ಬ್ರಹ್ಮಸನ್ನಿಧಿಗೆ ಹೋಗೋಣ. ನನಗಾಗಿ ಸ್ವಲ್ಪ ಕಾಲ ನಿರೀಕ್ಷಿಸು.''

೩೪–೩೫. ಇಂತು ನುಡಿದ ತರುವಾಯ ಆ ದೊರೆಯು ಶಿಲ್ಪಶಾಸ್ತ್ರವಿಶಾರದರಾದ ಶಿಲ್ಪಿಗಳೆಲ್ಲರನ್ನೂ, ಸತ್ಕಾರಗಳಿಂದಲೂ, ದಾನಗಳಿಂದಲೂ, ವಿವಿಧ

**ಸತ್ಕಾರೈರ್ದಾನಮಾನೈಶ್ಚ ಯೋಜಯಾಮಾಸ ಸಾದರಂ ।**
**ದಿನೇ ದಿನೇ ಸುಘಟಿತಃ ಪ್ರಾಸಾದೋ ವವೃಧೇ ದ್ವಿಜಾಃ ।**
**ಪರಿತಃ ಪೂರ್ಯಮಾಣಸ್ತು ಶುಕ್ಲಪಕ್ಷೇ ಯಥಾ ಶಶೀ ॥ ೩೫ ॥**
**ಏವಂ ಸವರ್ಧ್ಯಮಾನೋಽಪಿ ಪ್ರಾಸಾದಃ ಪರಿವರ್ಧಿತಃ ।**
**ಮಹೋಚ್ಛ್ರಯತ್ವಾದಲ್ಪೇನ ನ ಕಾಲೇನಾಭಿಲಕ್ಷ್ಯತೇ ॥ ೩೬ ॥**
**ಪಾಷಾಣಸಂಖ್ಯಾ ಶಕ್ಯಾವಾ ಕಥಂಚಿದ್ಘಟನಾಕ್ರಮಾತ್ ।**
**ವಿತ್ತವ್ಯಯಸ್ತು ಕೋಟೀನಾಂ ನ ಸಂಖ್ಯಾತುಂ ಚ ಶಕ್ಯತೇ ॥ ೩೭ ॥**
**ಯಾವನ್ತೋ ಭಾರತೇ ವರ್ಷೇ ಲೋಕಾಃ ಸಮುಯವರ್ತಿನಃ ।**
**ಇಂದ್ರದ್ಯುಮ್ನಸ್ಯ ನೃಪತೇರ್ನಿಯುಕ್ತಾಸ್ತೇ ಮಹೀಭೃತಃ ॥ ೩೮ ॥**
**ಏಕೈಕಶೋ ನಿಯುಕ್ತಾ ಯೇ ಪರಸ್ಪರಸಮನ್ವಿತಾಃ ।**
**ತೇಽಪಿ ಚಾನ್ಯೈರ್ನಿಯುಕ್ತಾಸ್ತೇ ಸರ್ವೇ ತತ್ರ ಪ್ರವರ್ತಿತಾಃ ॥ ೩೯ ॥**
**ಅಜಸ್ರಂ ತನ್ನಿಯುಕ್ತಾನಾಂ ಯೋ ಹರ್ಷೋತ್ಥೋ ಮಹಾರವಃ ।**
**ಆಕಾಶಮುಚ್ಛ್ವಾನೋಽಸೌ ದಿಶಾಂ ಭಾಗಾನಪೂರಯನ್ ॥ ೪೦ ॥**

---

ಮರ್ಯಾದೆಗಳಿಂದಲೂ ಗೌರವಿಸಿ ಪ್ರಾಸಾದ ರಚನೆಗಾಗಿ ಕಲ್ಲುಗಳನ್ನೊಂದೊಂದಾಗಿ ಜೋಡಿಸುವ ಕೆಲಸಕ್ಕೆ ಆದರಪೂರ್ವಕವಾಗಿ ನಿಯೋಜಿಸಿದನು. ಎಲೈ ದ್ವಿಜರೆ! ಆ ಪ್ರಾಸಾದರಚನೆಯು ಕಲ್ಲುಗಳ ಜೋಡಣೆಯಿಂದ, ಸುತ್ತಲೂ ತುಂಬಿ ಬೆಳೆದು, ಬೆಳಗುವ ಶುಕ್ಲಪಕ್ಷದ ಚಂದ್ರನಂತೆ ಬೆಳೆಯತೊಡಗಿತು.

೩೬. ಹೀಗೆ ಕಟ್ಟಡವನ್ನು ಬೆಳಸಿದರೂ ಸಹ ಆ ಪ್ರಾಸಾದವು ಸುತ್ತಲೂ ಬೆಳೆದು ಬಹು ಎತ್ತರವಾಗಿದ್ದುದರಿಂದ ಸ್ವಲ್ಪಕಾಲದಲ್ಲಿಯೇ ಅದನ್ನು ನೋಡಲಾಗುತ್ತಿರಲಿಲ್ಲ.

೩೭. ಬಹಳ ಕಷ್ಟಪಟ್ಟು ಕ್ರಮವರಿತು ಜೋಡಿಸಿದ್ದುದರಿಂದ ಅದಕ್ಕಾಗಿರುವ ಕಲ್ಲುಗಳನ್ನು ಲೆಕ್ಕಮಾಡಲೂ ಸಾಧ್ಯವಾಗುತ್ತಿರಲಿಲ್ಲ. ಅದಕ್ಕಾಗಿ ವ್ಯಯವಾಗಿದ್ದ ಅನೇಕಕೋಟಿ ಧನವನ್ನೂ ಎಣಿಕೆಮಾಡಲು ಶಕ್ಯವಾಗದು.

೩೮. ಭಾರತವರ್ಷದಲ್ಲಿ ಇಂದ್ರದ್ಯುಮ್ನರಾಜನ ಅಣತಿಯನ್ನು ಪರಿಪಾಲಿಸುವ ಪ್ರಜೆಗಳೆಷ್ಟುಮಂದಿ ಇದ್ದರೋ ಅಷ್ಟು ಮಂದಿಯೂ ಆ ಪ್ರಾಸಾದ ನಿರ್ಮಾಣಕಾರ್ಯದಲ್ಲಿ ನಿಯುಕ್ತರಾಗಿದ್ದರು.

೩೯. ಹೀಗೆ ಒಬ್ಬೊಬ್ಬರಾಗಿಯೂ, ಒಟ್ಟಾಗಿಯೂ ನಿಯುಕ್ತರಾದ ಕೆಲಸಗಾರರು, ಇತರರಿಂದ ನಿಯೋಜಿತರಾದ ಕೆಲಸದವರೂ ಎಲ್ಲರೂ ಒಮ್ಮತಸಮ್ಮತಿಯಿಂದ ಅಲ್ಲಿ ಕೆಲಸಮಾಡುತ್ತಿದ್ದರು.

೪೦. ಆ ಜನರ ಸಂತತವಾದ ಸಂತೋಷಧ್ವನಿಯು ಬೆಳೆದು ಬಾನಸೇರಿ ಹರಡಿದುದೂ ಅಲ್ಲದೆ ದಿಗಂತಗಳನ್ನೂ ತುಂಬಿತು.

ನೃಪತೇಃ ಶ್ರದ್ಧಯಾ ಭಕ್ತ್ಯಾ ಸಾತ್ವಿಕೇನ ಪ್ರಸಾದಿತಾ ।
ಶ್ರೀಃ ಸಮ್ಮೃದ್ಧಾ ಭವದ್ವಿಪ್ರಾಃ ಕೀರ್ತ್ಯಾ ಸಹ ಮಹೀಪತೇಃ ॥ ೪೧ ॥
ಕ್ವಚಿತ್ಕಾಂಚನ ವಿನ್ಯಸ್ತನಾನಾರತ್ನಮಹೋಜ್ಜ್ವಲಃ ।
ಕ್ವಚಿತ್ಸ್ಫಟಿಕಭಾಗಾಂತಶಾರದಾಭ್ರನಿಭಚ್ಛವಿಃ ॥ ೪೨ ॥
ಕ್ವಚಿನ್ನೀಲಾಶ್ಮಘಟಿತಾ ಭಿತ್ತೀಃ ಕಾಲಾಭ್ರಮೇದುರಾ ॥ ೪೩ ॥
ಏವಂ ಸುಘಟಿತೇ ವಿಷ್ಣೋಃ ಪ್ರಾಸಾದೇ ಸುಮನೋಹರೇ ।
ಗರ್ಭಪ್ರತಿಷ್ಠಾಂ ವಿಧಿವತ್ಕೃತ್ವಾ ಸ ನೃಪಸತ್ತಮಃ ॥ ೪೪ ॥
ವಜ್ರಪಾತಾದಿ ಭಂಗಾದಿವಾರಣಾರ್ಥಂ ಯಥೋಚಿತಂ ।
ಶಿಲ್ಪಶಾಸ್ತ್ರೇಷು ಮಣ್ಯಾದಿ ವಿನ್ಯಸ್ಯ ಪೌರುಷಾಹೃತಂ ॥ ೪೫ ॥
ಪುನಃ ಪ್ರಾಸಾದಘಟನಾಸಂಭಾರೋಚಿತಮೇವ ವೈ ।
ಬಹುಮೂಲ್ಯಂ ವಸ್ತುಜಾತಂ ಯತ್ನಾತ್ತತ್ರ ನ್ಯವೇಶಯತ್ ॥ ೪೬ ॥
ತತೋ ವಿರಚ್ಯಮಾನೇಽಸ್ಮಿನ್ಪ್ರಾಸಾದೇ ಕೀರ್ತಿವರ್ಧನೇ ।
ಮನಸಾಪಿ ನ ಸಂಭಾವ್ಯೇ ತ್ರಿಷುಲೋಕೇಷು ಭೂಭುಜಾಂ ॥ ೪೭ ॥

---

೪೧. ಎಲೈ ವಿಪ್ರರೇ! ಆ ಮಹಾರಾಜನ ಶ್ರದ್ಧೆ, ಭಕ್ತಿ, ಸಾತ್ವಿಕಸ್ವಭಾವಗಳಿಂದ ಸುಪ್ರಸನ್ನವಾಗಿ ಆ ದೇವಾಲಯದ ರಚನಾಸಂಪತ್ತು ಆತನ ಕೀರ್ತಿಯೊಡನೆಯೇ ಸಮಸಮವಾಗಿ ತುಂಬಿ ಮೆರೆಯುತೊಡಗಿತು.

೪೨–೪೩. ಆ ದೇವಾಲಯವು ಕೆಲವೆಡೆ ಚಿನ್ನದ ಅಡಕಿನಲ್ಲಿ ರತ್ನಗಳ ಕೆತ್ತನೆಯನ್ನೊಳಕೊಂಡು ಉಜ್ಜ್ವಲವಾಗಿ, ಕೆಲವೆಡೆ ಸ್ಫಟಿಕಶಿಲಾಭಾಗಗಳನ್ನೊಳಕೊಂಡು ಶರತ್ಕಾಲದ ಮುಗಿಲುಗಳ ಶುಭ್ರಕಾಂತಿಯುತವಾಗಿ, ಕೆಲವೆಡೆ ನೀಲಮಣಿ ಶಿಲೆಗಳಿಂದ ರಚಿತವಾದ ಗೋಡೆಗಳುಳ್ಳದಾಗಿ ನೀಲಮೇಘದ ಕಾಂತಿಯನ್ನು ತಳೆದು ಕಂಗೊಳಿಸುತ್ತಿದ್ದಿತು.

೪೪–೪೬. ಹೀಗೆ ಬಹು ಚೆನ್ನಾಗಿ ರಚಿಸಿ ಮನೋಹರವಾಗಿದ್ದ ಆ ವಿಷ್ಣು ದೇವಾಲಯದಲ್ಲಿ ಇಂದ್ರದ್ಯುಮ್ನನೃಪಶ್ರೇಷ್ಠನು, ಗರ್ಭಗೃಹ ಪ್ರತಿಷ್ಠೆಯನ್ನು ವಿಧಿವತ್ತಾಗಿ ನಡೆಸಿ, ಸಿಡಿಲು ಬೀಳುವುದು, ಬಿರುಕುಬಿಡುವುದೇ ಮೊದಲಾದ ಆಪತ್ತುಗಳನ್ನು ನಿವಾರಿಸಲು, ಪೌರುಷದಿಂದ ಸಂಪಾದಿಸಿತಂದ ಶಿಲ್ಪಶಾಸ್ತ್ರೋಕ್ತವಾದ ಮಣಿ ಮೊದಲಾದವುಗಳನ್ನಿರಿಸಿ, ಮತ್ತೆ ಆ ಪ್ರಾಸಾದದ ಸಮಾಪ್ತಿಗೆ ಬೇಕಾದ ಸಂಭಾರಕ್ಕಾಗಿ ಬೇಕಾದ ಅಮೂಲ್ಯ ವಸ್ತುಜಾಲವೆಲ್ಲವನ್ನೂ ಪ್ರಯತ್ನಪೂರ್ವಕವಾಗಿ ಅಲ್ಲಿ ಶೇಖರಿಸಿಟ್ಟನು.

೪೭–೪೯. ಸ್ವರ್ಗಮರ್ತ್ಯಪಾತಾಳ ಲೋಕಗಳಲ್ಲೆಲ್ಲಿಯೂ ಸಂಭಾವಿಸಲಸದಳವಾಗಿ, ಭೂಲೋಕದ ಇತರ ರಾಜರಾರಿಗೂ ಅಸಾಧ್ಯವಾಗಿ ಇಂದ್ರದ್ಯುಮ್ನ ನೃಪಾಲನ ಕೀರ್ತಿಯನ್ನು ವೃದ್ಧಿಗೊಳಿಸುವುದಾಗಿರುವ ಆ ಜಗನ್ನಾಥ ದೇವಾ

ದೇವಾನಾಮಪಿ ನೋ ಲಕ್ಷ್ಯೇ ದ್ವಿಜಾಃ ಕಲ್ಪಾಂತವಾಸಿನಾಂ ।
ಪ್ರಾಸಾದ ಈದೃಶೋ ಭೂಮೌ ಕ್ವಚಿಚ್ಚ ಘಟಿತೋ ನ ಹಿ ॥ ೪೮ ॥
ಸ್ವರ್ಗೇ ವಾ ಇತ್ಥಮೂದಿತ್ವಾ ಆಲಪಂತಿ ಪರಸ್ಪರಂ ।
ಅಹೋ ಸುಬುದ್ಧಿರಸ್ಯೇಚ್ಛೈರ್ಯೇಯಮಿಾದೃಕ್ಪರಿಣತಾ ।
ಶ್ರದ್ಧಯಾ ಭಗವತ್ಪಾದಪದ್ಮಯೋಃ ಸಾಭಿಲಾಷಿಣೀ ॥ ೪೯ ॥
ಅಲೌಕಿಕಾನಿ ಕರ್ಮಾಣಿ ಪಶ್ಯಂತಿ ರಚಯಂತ್ಯಪಿ ॥ ೫೦ ॥
ಕೇ ವಾತ್ರ ಭೂಮೌ ರಾಜಾನೋ ಬಭೂವುರ್ನೀತಿಶಾಲಿನಃ ।
ಸಾರ್ವಭೌಮಾಸ್ತು ಸಾಮ್ರಾಜ್ಯಜೇತಾರಃ ಸರ್ವವಿದ್ವಿಷಾಂ ॥ ೫೧ ॥
ವಿತ್ತಾನಿ ಯೈಃ ಸಂಚಿತಾನಿ ಸುಬಹೂನಿಚ ಕೋಟಿಶಃ ।
ಅಶ್ವಮೇಧಸಹಸ್ರಂತು ಯತ್ಕೃತಂ ತ್ರಿದಿವೇಶಿತುಃ ॥ ೫೨ ॥
ಶಕ್ಯಂ ವಾ ಸ್ಯಾದ್ಭೂಭುಜಾಂ ತು ನಾತಃಪೂರ್ವಮನುಷ್ಠಿತಂ ।
ನದೃಷ್ಟಂ ನಶ್ರುತಂ ವಾಪಿ ವಾಜಿಮೇಧಸಹಸ್ರಕಂ ॥ ೫೩ ॥
ಮಹೀಕ್ಷಿತಾಽನುಷ್ಠಿತಂ ವೈ ಯತ್ರ ತ್ರೈಲೋಕ್ಯವಾಸಿನಃ ।
ಪೃಥಿವ್ಯಾಮಸ್ಯ ನೃಪತೇಃ ಸಹಸ್ರಾ ಭೋಗಭೋಗಿನಃ ॥ ೫೪ ॥

---

ಲಯವು ಈ ಪ್ರಕಾರವಾಗಿ ರಚನೆಯಾಗುತ್ತಿರಲು, ದೇವತೆಗಳು ಕಲ್ಪಾಂತವಾಸಿಗಳಾದರೂ ಅವರಿಗೂ ಸಹ ಅದು ಊಹೆಗೆ ನಿಲುಕದುದಾಗಿದ್ದಿತು. "ಇಂತಹ ದೇವಾಯತನವು ಭೂಲೋಕದಲ್ಲಿಯಾಗಲಿ ಸ್ವರ್ಗಲೋಕದಲ್ಲಿಯಾಗಲಿ ಯಾವಾಗಲೂ ರಚನೆಯಾಗಿರಲಿಲ್ಲ!" ಎಂದು ಅಚ್ಚರಿಗೊಂಡು ಅವರೆಲ್ಲರೂ ತಮ್ಮ ತಮ್ಮಲ್ಲಿಯೇ ಇಂತೆಂದು ಮಾತನಾಡಿಕೊಂಡರು. "ಆಹಾ! ಇಂದ್ರದ್ಯುಮ್ನ ಮಹಾರಾಜನ ಸದ್ಬುದ್ಧಿಯನ್ನೆಷ್ಟೆಂದು ಕೊಂಡಾಡೋಣ! ಶ್ರದ್ಧೆಯೊಡಗೂಡಿ, ಭಗವಂತನ ಪಾದಾರವಿಂದಗಳಲ್ಲಿ ಅಭಿಲಾಷೆಯುಳ್ಳುದಾಗಿರುವ ಆತನ ಬುದ್ಧಿಯು ಈ ಮಹಾದ್ಭುತದೇವಾಲಯನಿರ್ಮಾಣರೂಪವಾಗಿ ಪರಿಣತವಾಯಿತು.

೫೧-೫೩. ನೀತಿಶಾಲಿಗಳಾಗಿ ಅಲೌಕಿಕಗಳಾದ ಕಾರ್ಯಗಳನ್ನೆಸಗುವವರೂ, ಅವುಗಳನ್ನು ನೋಡುವವರೂ ಆದ ಭೂಪತಿಗಳು ಭೂಲೋಕದಲ್ಲಿ ಯಾರುತಾನೆ ಹುಟ್ಟಿದರು? ಸಾಮ್ರಾಜ್ಯಜೇತೃಗಳಾಗಿ ಕೋಟಿಕೋಟಿಸಂಖ್ಯೆಯ ಧನವನ್ನಾರ್ಜಿಸಿ, ಸಮಸ್ತ ಶತ್ರುಗಳನ್ನೂ ಜಯಿಸಿ ಮಹೇಂದ್ರನನ್ನುದ್ದೇಶಿಸಿ ಸಹಸ್ರಾಶ್ವಮೇಧಯಾಗಗಳನ್ನು ಮಾಡಿದ ಸಾರ್ವಭೌಮರು ಹಿಂದಾರುತಾನೆ ಇದ್ದರು? ರಾಜರಿಗೆ ಇಂತಹ ಕಾರ್ಯವು ಸಾಧ್ಯವಾದೀತೆ? ನಾವಂತೂ ರಾಜನಾದವನು ಇಂತಹ ಅಶ್ವಮೇಧ ಸಹಸ್ರವನ್ನು ಮಾಡಿದುದನ್ನು ಈ ಮೊದಲು ಕಂಡುದೂ ಇಲ್ಲ; ಕೇಳಿಯೂ ಇಲ್ಲವು!

೫೪. ಮಹಾರಾಜನಾದ ಇಂದ್ರದ್ಯುಮ್ನನೆಸಗಿದ ಈ ಅಶ್ವಮೇಧಸಹಸ್ರ

ಬ್ರಹ್ಮಲೋಕ ಇವಾಭಾತಿ ಸಭಾ ಯಸ್ಯ ಚ ಯಜ್ವಿನಃ ।
ಮೂರ್ತಿಮಂತಸ್ತ್ರಯೋ ವೇದಾಶ್ಚತುಷ್ಪಾದೋ ವೃಷಸ್ತಥಾ ॥ ೫೫ ॥
ಸುರಾಃ ಸಂಕಲ್ಪಕಾಮಾಸ್ತು ಯತ್ರಾದ್ಭುತಧಿಯೋಽಭವನ್ ।
ಅಯಂ ಪ್ರಾಸಾದವರ್ಯೋ ವೈ ಬುದ್ಧೇರ್ವಿಷಯತಾಂ ಗತಃ ॥ ೫೬ ॥
ಮನೋಽಪಿ ಯತ್ರಭವತಿ ನ ವಾ ತ್ರೈಲೋಕ್ಯವಾಸಿನಾಂ ।
ಭೂಪತೇರ್ದುರ್ಲಭಂ ಕಿಂ ಸ್ಯಾತ್ಸಹಾಯೋ ಯಸ್ಯ ನಾರದಃ ॥ ೫೭ ॥
ಪಿತಾಮಹಶ್ಚ ಜಗತಾಂ ಸ್ರಷ್ಟಾ ಸರ್ವಾಮರೇಶ್ವರಃ ।
ಅಥವಾ ವಿಷ್ಣುಭಕ್ತಸ್ಯ ನಾತಿದೂರಂ ಚಿಕೀರ್ಷಿತಂ ।
ವಿಷ್ಣೋಸ್ತದ್ಭಕ್ತಲೋಕಸ್ಯ ನಾಂತರಂ ವಿದ್ಯತೇ ದ್ವಿಜಾಃ ॥ ೫೮ ॥
ತತಃ ಸ ನಾರದಂ ಪ್ರಾಹ ಪ್ರಾಸಾದಾಂತೇ ಮುನೀಶ್ವರಂ ॥ ೫೯ ॥
ಸರ್ವಂ ಸಂಪನ್ನಮಾಸೀನ್ಮೇ ಯದಶಕ್ಯಂ ಸುರಾಸುರೈಃ ।
ಸಾಕ್ಷಾದ್ಭಗವತೋ ವಿಷ್ಣೋರದ್ವೈತೋಪಾಸನಾರತಃ ॥ ೬೦ ॥

---

ದಲ್ಲಿಯಾದರೋ ಸ್ವರ್ಗಮರ್ತ್ಯಪಾತಾಳಲೋಕಗಳ ನಿವಾಸಿಗಳೆಲ್ಲರೂ ಆತನೊಡನೆಯೇ ಭೋಗಭಾಗ್ಯಗಳನ್ನನುಭವಿಸಿದರು.

೫೫. ಆತನ ಯಜ್ಞಸಭಾಮಂಡಪವಾದರೋ ಬ್ರಹ್ಮಲೋಕದಂತೆ ಕಂಗೊಳಿಸುತ್ತಿದೆ. ಋಕ್, ಯಜುಸ್ಸು, ಸಾಮಗಳೆಂಬ ಮೂರು ವೇದಗಳೂ ಅಲ್ಲಿಯೆ ಮೂರ್ತೀಭವಿಸಿರುವುವು; ಧರ್ಮವಂತೂ ಚತುಷ್ಪಾದಗಳಿಂದಲೂ ಅಲ್ಲಿ ನೆಲೆಗೊಂಡಿರುವುದು.

೫೬-೫೮. ದೇವತೆಗಳೆಲ್ಲರೂ ಸಂಕಲ್ಪಮಾತ್ರದಿಂದಲೇ ಇಷ್ಟಾರ್ಥಗಳನ್ನೀಯುವವರಾಗಿರುವರು. ಅದ್ಭುತಮೇಧಾವಿಗಳೆಲ್ಲರೂ ಅಲ್ಲಿರುತ್ತಾರೆ. ಈ ಉತ್ತಮ ಪ್ರಾಸಾದವಾದರೋ ತ್ರೈಲೋಕ್ಯವಾಸಿಗಳ ಬುದ್ಧಿಗಾಗಲಿ ಮನಸ್ಸಿಗಾಗಲಿ ನಿಲುಕುವಂತೆಯೇ ಇಲ್ಲವು. ನಾರದಮುನೀಂದ್ರನೂ, ಸಮಸ್ತ ದೇವತೆಗಳಿಗೂ ಒಡೆಯನಾಗಿ ಪ್ರಪಂಚದ ನಿರ್ಮಾಣಕರ್ತನೇ ಆಗಿರುವ ಬ್ರಹ್ಮದೇವನೂ ಸಹಾಯವಾಗಿರುವ ಈ ಇಂದ್ರದ್ಯುಮ್ನಮಹಾರಾಜನಿಗೆ ದುರ್ಲಭವಾದುದೇನುತಾನೆ ಇರುವುದು? ಅಥವಾ, ವಿಷ್ಣುಭಕ್ತನಾದವನಿಗೆ ಮಾಡಲಸಾಧ್ಯವಾದ ಕಾರ್ಯವೆಂಬುದೇ ದೂರವಾಗಿರುತ್ತದೆ. ಆತನು ಸರ್ವಸಮರ್ಥನೇ! ಎಲೈ ದ್ವಿಜರೇ! ವಿಷ್ಣುವಿಗೂ ಆತನ ಭಕ್ತವೃಂದಕ್ಕೂ ಯಾವ ಅಂತರವೂ ಇರುವುದಿಲ್ಲವು."

೫೯. ತರುವಾಯ ಆ ಪ್ರಾಸಾದರಚನೆಯು ಮುಗಿದಬಳಿಕ ಇಂದ್ರದ್ಯುಮ್ನನು ನಾರದಮುನೀಶ್ವರನನ್ನು ಕುರಿತಿಂತೆಂದನು:—

೬೦-೬೧. "ಮುನೀಂದ್ರ! ಯಾವುದು ಸುರಾಸುರರಿಗೂ ಅಶಕ್ಯವೋ ಅಂತಹ ಈ ಪ್ರಾಸಾದರಚನಾಕಾರ್ಯವೆಲ್ಲವೂ ಇದೀಗ ಮುಗಿಯಿತು. ಭಗವಂತ

ಭಗವದ್ವಪುರಾಭಾತು ಪ್ರಾಸಾದಸ್ತು ಚಿರಂ ಮಯಿ ।
ಇತ್ಯುಕ್ತ್ವಾ ಪಾದಯೋರ್ಮೂರ್ಧ್ನಾ ಪ್ರಣನಾಮ ಸ ನಾರದಂ ॥ ೬೧ ॥
ನಾರದೋಽಪಿ ತಮುತ್ಥಾಪ್ಯ ಪರಿಪೂಜ್ಯ ನೃಪೋತ್ತಮಂ ।
ತ್ವತ್ತೋ ನ ಭೇದೋ ನೃಪತೇ ಮಮಾಸ್ತಿ ಖಲು ತತ್ತ್ವತಃ ॥ ೬೨ ॥
ಯಸ್ತು ಸಾಕ್ಷಾಜ್ಜಗನ್ನಾಥ ಆವಿರ್ಭೂತಃ ಕೃತೇನ ವಾ ।
ಅವಶ್ಯಮರ್ಚಯಸ್ವೈನಂ ಜೀವನ್ಮುಕ್ತೋಽಸಿ ಸಾಂಪ್ರತಂ ॥ ೬೩ ॥
ತತ್ಪಾದಪದ್ಮೇ ಯಾದೃಕ್ತೇ ಚೇತಃ ಪ್ರವಣತಾನ್ವಿತಂ ।
ಭಕ್ತ್ಯಾ ಹ್ಯನನ್ಯಯಾ ಪುಂಸಃ ಕಿಮತಃಪರಮಸ್ತಿ ವೈ ॥ ೬೪ ॥
ತೀರ್ಥೈರ್ಮಂತ್ರೈರ್ಜಪೈರ್ದಾನೈಃ ಕ್ರತುಭಿರ್ಭೂರಿದಕ್ಷಿಣೈಃ ।
ವ್ರತೈರಧ್ಯಯನೈರ್ಭೂಪ ತಪೋಭಿಶ್ಚ ಯದರ್ಜಿತಂ ॥ ೬೫ ॥
ನ ಶಕ್ಯಂ ತವ ರಾಜೇಂದ್ರ ಭಕ್ತ್ಯಾ ತತ್ಕರಮಾಗತಂ ।
ಅತಃ ಪರಂ ನಶೋಚಸ್ವ ಭಕ್ತಿಯೋಗೇ ನವೋಽಸ್ತುತೇ ॥ ೬೬ ॥
ಪ್ರಕರ್ಷಂ ಬಹು ರಾಜೇಂದ್ರ ಸ್ಥಿತ್ವಾ ಚಾಸ್ಮಿಂಶ್ಚಿರಂ ಭುವಿ ।
ಆರಾಧಯ ಜಗನ್ನಾಥಮುಪಚಾರೈರ್ಮಹೋತ್ಸವೈಃ ॥ ೬೭ ॥

---

ನಾದ ಸಾಕ್ಷಾತ್ ವಿಷ್ಣುವಿನ ಅದ್ವೈತೋಪಾಸನೆಯಲ್ಲಿ ಆಸಕ್ತನಾಗಿ ಭಗವಂತನ ಶರೀರರೂಪವಾದ ಈ ಪ್ರಾಸಾದವು ನನ್ನಲ್ಲಿ ಚಿರಕಾಲಬೆಳಗಲಿ'' ಇಂತು ನುಡಿದು ಆತನು ನಾರದನಡಿಗಳಿಗೆ ತಲೆಯಿಟ್ಟು ನಮಸ್ಕರಿಸಿದನು.

೬೨–೬೩. ನಾರದನೂ ಸಹ ಆ ನೃಪೋತ್ತಮನನ್ನು ಹಿಡಿದೆಬ್ಬಿಸಿ ಬಹಳವಾಗಿ ಗೌರವಿಸಿ, ''ಅಯ್ಯಾ ರಾಜನೇ! ದಿಟವಾಗಿಯೂ ನಿನ್ನಲ್ಲಿ ನನಗೆ ಯಾವ ಭೇದವೂ ಇರುವುದಿಲ್ಲ. ನೀನೆಸಗಿದ ಸತ್ಕರ್ಮದಿಂದ ಆವಿರ್ಭವಿಸಿರುವ ಜಗನ್ನಾಥನನ್ನು ಅವಶ್ಯವಾಗಿ ಅರ್ಚನೆಮಾಡು. ಆ ಸ್ವಾಮಿಯ ಅಡಿದಾವರೆಯಲ್ಲಿ ನಿನ್ನ ಮನಸ್ಸು ಇಷ್ಟು ಭಕ್ತಿಭರಿತವಾಗಿರುವುದನ್ನು ನೋಡಿದರೆ ಈಗ ನೀನು ಜೀವನ್ಮುಕ್ತನೇ ಆಗಿರುವೆ!

೬೪–೬೬. ರಾಜೇಂದ್ರ! ಈ ಲೋಕದಲ್ಲಿ ಪುರುಷನಾದವನಿಗೆ ಪರಮಾತ್ಮನಲ್ಲಿ ಅನನ್ಯವಾದ ಭಕ್ತಿಗಿಂತಲೂ ಹೆಚ್ಚಿನದೇನುತಾನೆ ಬೇಕಾದೀತು? ಪ್ರಕೃತದಲ್ಲಿ ತೀರ್ಥಸ್ನಾನಗಳಿಂದಾಗಲಿ, ಮಂತ್ರಗಳಿಂದಾಗಲಿ, ಜಪ, ದಾನ, ಭೂರಿದಕ್ಷಿಣೆಗಳಿಂದೆಸಗುವ ಯಜ್ಞಗಳಿಂದಾಗಲಿ, ವ್ರತಾಧ್ಯಯನಗಳಿಂದಾಗಲಿ, ತಪಸ್ಸಿನಿಂದಲೇ ಆಗಲಿ ಸಂಪಾದಿಸುವುದಕ್ಕೆ ಸಾಧ್ಯವಾಗದುದು ಇದೀಗ ನಿನ್ನ ಅನನ್ಯಭಕ್ತಿಯಿಂದ ಕೈಸೇರಿರುವುದು. ಇನ್ನುಮುಂದೆ ನೀನು ಯಾವುದಕ್ಕೂ ದುಃಖಿಸಬೇಡ. ನಿನ್ನ ಮನಸ್ಸು ಭಕ್ತಿಯೋಗದಲ್ಲಿ ನೆಲೆಯಾಗಿರಲಿ.

೬೭. ರಾಜೇಂದ್ರ! ನೀನು ಈ ಭೂಲೋಕದಲ್ಲಿ ಬಹಳಕಾಲವಿದ್ದು

**ಪಿತಾಮಹಂ ದ್ರಷ್ಟುಕಾಮೋ ಗಂತಾ ಚೇದಂತಿಕಂ ವಿಭೋಃ ।**
**ಉಪದೇಕ್ಷ್ಯತಿ ಸೋಽಪ್ಯಸ್ಯ ಯಾತ್ರಾಸ್ತಾಸ್ತಾಮಹೋತ್ಸವಾಃ ॥ ೬೮ ॥**
**ಸ್ವಯಂ ಚ ಭಗವಾನೇವ ವರಂ ತುಭ್ಯಂ ಪ್ರದಾಸ್ಯತಿ ।**
**ಪ್ರತಿಷ್ಠಾಪಿತೇ ಪ್ರಾಸಾದೇ ತಸ್ಮಿನ್ಕಾಲೇ ಸ್ವಯಂಭುವಾ ॥ ೬೯ ॥**
**ಅಹಮಪ್ಯಾಗಮಿಷ್ಯಾಮಿ ತದಾ ಸಪ್ತರ್ಷಿಭಿಃ ಸಹ ।**
**ತದಾವಾಂ ತತ್ರ ಗಚ್ಛಾವೋ ಬ್ರಹ್ಮಲೋಕಮಕಲ್ಮಷಂ ॥ ೭೦ ॥**
**ತ್ವಾಂ ವಿನಾ ಭುವಿ ಕಃ ಶಕ್ತೋ ಬ್ರಹ್ಮಲೋಕಗತಿಂ ಪ್ರತಿ ।**
**ಇತ್ಯುಕ್ತ್ವಾ ನಾರದೋ ಭೂಪಂ ಸಮುತ್ತಸ್ಥೌ ನಭಸ್ತಲಂ ॥ ೭೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ದ್ವಿಜಕೃತದಾರುವಪುರ್ಮಾಹಾತ್ಮ್ಯವರ್ಣನಂ — ನಾರದಾನುಮೋದನಂ" ನಾಮ ಏಕವಿಂಶೋಽಧ್ಯಾಯಃ**

---

ಉತ್ತಮೋತ್ತಮವಾದ ಉಪಚಾರಗಳಿಂದಲೂ, ನಿತ್ಯೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳಿಂದಲೂ ಈ ಜಗನ್ನಾಥನನ್ನಾರಾಧಿಸು.

೬೮. ನೀನು ಪಿತಾಮಹನನ್ನು ನೋಡಬಯಸಿರುವೆಯಲ್ಲವೆ! ನೀನು ಆತನ ಬಳಿಗೈದಿದರೆ ಆತನೂ ಸಹ ಇಲ್ಲಿ ನೀನು ನಡೆಸಬೇಕಾದ ಆಯಾ ಮಹೋತ್ಸವಗಳ ವಿಧಾನವನ್ನು ಉಪದೇಶಮಾಡುತ್ತಾನೆ.

೬೯-೭೦. ಸಾಕ್ಷಾತ್ ಭಗವಂತನೇ ನಿನಗೆ ವರವನ್ನು ನೀಡುತ್ತಾನೆ. ಈ ಪ್ರಾಸಾದವು ಬ್ರಹ್ಮನಿಂದ ಪ್ರತಿಷ್ಠೆಯಾಗುವ ಸಮಯದಲ್ಲಿ ನಾನು ಸಪ್ತರ್ಷಿಗಳೊಡನೆ ಇಲ್ಲಿಗೆ ಬರುತ್ತೇನೆ. ಈಗ ನಾವೀರ್ವರೂ ಪರಿಶುದ್ಧವಾದ ಬ್ರಹ್ಮಲೋಕಕ್ಕೆ ಹೋಗೋಣ.

೭೧. ಎಲೈ ಇಂದ್ರದ್ಯುಮ್ನನೇ! ಈ ಭೂಮಂಡಲದಲ್ಲಿ ನಿನ್ನೊಬ್ಬನನ್ನು ಉಳಿದು ಮತ್ತಾವನುತಾನೆ ಬ್ರಹ್ಮಲೋಕಕ್ಕೆ ಹೋಗಲು ಶಕ್ತನಾದಾನು?" ಎಲೈ ವಿಪ್ರರೇ! ನಾರದಮುನಿಯು ಈ ರೀತಿ ಆ ರಾಜನಿಗೆ ಹೇಳಿ ಆಕಾಶವನ್ನು ಕುರಿತು ಹೊರಡಲನುವಾದನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ದ್ವಿಜಕೃತದಾರುವಪುರ್ಮಾಹಾತ್ಮ್ಯವರ್ಣನ— ನಾರದಾನುಮೋದನ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ದ್ವಾವಿಂಶೋಽಧ್ಯಾಯಃ

## ಇಂದ್ರದ್ಯುಮ್ನ ನಾರದಯೋರ್ಬ್ರಹ್ಮಲೋಕಗಮನವರ್ಣನಂ

**ಜೈಮಿನಿರುವಾಚ :—**

**ರಾಜಾಥ ತಮುವಾಚೇದಂ ನಿರ್ಲಕ್ಷ್ಯ ಗಮನಂ ಕಥಂ ।**
**ಅಯಂ ಪುಷ್ಪರಥೋಽಸ್ತ್ಯೇವ ಮನಸೋ ವೇಗವಾನ್ಮುನೇ ॥ ೧ ॥**
**ಏನಮಾರುಹ್ಯ ಯಾಸ್ಯಾವಃ ಕ್ಷಣಂ ತಾವತ್ಪ್ರತೀಕ್ಷ್ಯತಾಂ ।**
**ಯಾವದೇತಾನನುಜ್ಞಾಪ್ಯ ಪ್ರಾಸಾದೇ ಹ್ಯಧಿಕಾರಿಣಃ ॥ ೨ ॥**
**ಪ್ರದಕ್ಷಿಣೀಕೃತ್ಯ ವಿಭುಮಾಯಾಮಿ ಮುನಿಸತ್ತಮ ।**
**ನಾರದೋಽಪಿ ವಚಃ ಶ್ರುತ್ವಾ ಶ್ರದ್ದಧಾನೋ ನೃಪೋಕ್ತಿಷು ॥ ೩ ॥**
**ಕರೇಣ ಧೃತ್ವಾ ರಾಜಾನಂ ಮಹಾವೇದೀಂ ಪ್ರವಿಶ್ಯಚ ।**
**ಸಹಿತಂ ರಾಮಭದ್ರಾಭ್ಯಾಂ ನತ್ವಾ ಕೃಷ್ಣಂ ಮುಹುರ್ಮುಹುಃ ।**
**ಅನುಜ್ಞಾಂ ಪ್ರಾರ್ಥಯಾಮಾಸ ಬ್ರಹ್ಮಲೋಕಗತಿಂ ಪ್ರತಿ ॥ ೪ ॥**
**ಇಂದ್ರದ್ಯುಮ್ನೋಽಪಿ ವಚಸಾ ಮನಸಾ ವಪುಷಾ ಹರಿಂ ।**
**ಪ್ರದಕ್ಷಿಣೀಕೃತ್ಯ ಪುನರ್ಗತ್ವಾ ಸಾಷ್ಟಾಂಗಮುನ್ಮನಾಃ ।**
**ಬ್ರಹ್ಮಲೋಕಗತಿಂ ವಿಪ್ರಾ ಯಾಚತೇಸ್ಮ ಕೃತಾಂಜಲಿಃ ॥ ೫ ॥**

---

## ಕನ್ನಡದ ಅನುವಾದ

### ಇಂದ್ರದ್ಯುಮ್ನನಾರದರ ಬ್ರಹ್ಮಲೋಕಗಮನವರ್ಣನ

೧–೪. ಜೈಮಿನಿಯು ಹೇಳುತ್ತಾನೆ:—ಈ ರೀತಿ ಗಗನಮಾರ್ಗದಲ್ಲಿ ಹೊರಡಲನುವಾದ ಆ ನಾರದನನ್ನು ಕುರಿತು ಇಂದ್ರದ್ಯುಮ್ನನು, "ಎಲೈ ಮುನಿಪುಂಗವನೇ! ಇದೇನಿದು; ನೋಡದೆಯೇ ಹೊರಡುವೆಯೇಕೆ? ಸ್ವಲ್ಪ ತಡೆ; ಮನೋವೇಗವುಳ್ಳ ಈ ನನ್ನ ಪುಷ್ಪರಥವಿದ್ದೇ ಇರುವುದು. ಇದನ್ನೇರಿ ನಾವೀರ್ವರೂ ಹೊರಡೋಣ. ಒಂದು ಕ್ಷಣಕಾಲ ನಿಧಾನಿಸು. ನಾನು ಈ ಪ್ರಾಸಾದದ ಅಧಿಕಾರಿಗಳನ್ನೊಪ್ಪಿಸಿ ವಿಭುವಾದ ಜಗನ್ನಾಥನನ್ನು ಪ್ರದಕ್ಷಿಣಮಾಡಿ ನಮಸ್ಕರಿಸಿ ಬರುತ್ತೇನೆ" ಎಂದು ಹೇಳಿದನು. ನಾರದನಾದರೋ ಇದನ್ನು ಕೇಳಿ ಆ ರಾಜನ ವಚನಗಳಲ್ಲಿ ನಂಬಿಕೆಯುಳ್ಳವನಾಗಿ ಅವನ ಕೈಹಿಡಿದುಕೊಂಡು ಮಹಾವೇದಿಯನ್ನು ಪ್ರವೇಶಿಸಿ ಬಲರಾಮ ಭದ್ರಾದೇವಿಯರೊಡನಿರುವ ಜಗನ್ನಾಥಸ್ವಾಮಿಯನ್ನು ಪುನಃ ಪುನಃ ನಮಸ್ಕರಿಸಿ ಬ್ರಹ್ಮಲೋಕಗಮನಕ್ಕಾಗಿ ಅನುಜ್ಞೆಯನ್ನು ಬೇಡಿದನು.

೫. ಇಂದ್ರದ್ಯುಮ್ನರಾಜನಾದರೋ ಮಾತು ಮನಸ್ಸು ದೇಹಗಳಿಂದ ಆ ಶ್ರೀಹರಿಗೆ ಪ್ರದಕ್ಷಿಣಮಾಡಿ ಮತ್ತೆ ಸಾಷ್ಟಾಂಗವಾಗಿ ನಮಸ್ಕರಿಸಿ ಭಕ್ತಿ

ಉಭೌ ತೌ ದಿವ್ಯಯಾನೇನ ಜಗ್ಮತುರ್ಮುನಿಭೂಭೃತೌ ।
ಪ್ರದಕ್ಷಿಣೀಕೃತ್ಯ ರವಿಂ ವ್ಯೋಮಮಂಡಲಮಧ್ಯಗಂ ।
ಉಪರ್ಯುಪರಿ ಜಗ್ಮಾತೇ ವ್ಯತೀತ್ಯ ಧ್ರುವಮಂಡಲಂ ॥ ೬ ॥
ಜನಲೋಕಗತೈಃ ಸಿದ್ಧೈಃ ಸತ್ವರಾವನತೋನ್ಮುಖೈಃ ।
ವೀಕ್ಷ್ಯಮಾಣೌ ಮುದಾ ಯುಕ್ತೌ ಸಂಲಪಂತೌ ಪರಸ್ಪರಂ ॥ ೭ ॥
ಭಗವಚ್ಚರಿತಂ ವಿಪ್ರಾ ಮನೋಮಲವಿಶೋಧನಂ ।
ಜೀವನ್ಮುಕ್ತೋ ಮುನಿಶ್ರೇಷ್ಠಃ ಸರ್ವಲೋಕಾನ್ಭ್ರಮನ್ನಯಂ ।
ಯಥಾನುಪಹತವ್ರಜ್ಯಸ್ತಥಾಯಂ ಮರ್ತ್ಯವಾಸ್ಯಪಿ ॥ ೮ ॥
ಭೂಪತಿಃ ಪ್ರಯಯೌ ಶೀಘ್ರಂ ವಿಷ್ಣುಭಕ್ತಿಪ್ರಸಾದತಃ ।
ಬ್ರಹ್ಮಾಂಡ ವಿಷಯೇ ನೈತದ್ದುಷ್ಪ್ರಾಪ್ಯಂ ವಸ್ತು ವಿದ್ಯತೇ ॥ ೯ ॥
ವಿಷ್ಣುಭಕ್ತೇನ ಯಲ್ಲಭ್ಯಮಥವಾ ಮುಕ್ತಿಮೇತಿ ಸಃ ।
ಮಹರ್ಲೋಕಗತೈಃ ಸಿದ್ಧೈಃ ಸಾದರಾಭ್ಯರ್ಚಿತೌ ಚ ತೌ ॥ ೧೦ ॥

---

ಯಿಂದ ಕೈಜೋಡಿಸಿಕೊಂಡು ಬ್ರಹ್ಮಲೋಕಗಮನಕ್ಕೆ ಅನುಜ್ಞೆಯನ್ನು ಬೇಡಿದನು.

೬–೭. ಬಳಿಕ ನಾರದಮುನಿಯೂ, ಇಂದ್ರದ್ಯುಮ್ನರಾಜನೂ ದಿವ್ಯ ವಿಮಾನಾರೂಢರಾಗಿ ಬ್ರಹ್ಮಲೋಕಕ್ಕೆ ಪ್ರಯಾಣಬೆಳಸಿ ಮಾರ್ಗದಲ್ಲಿ ವ್ಯೋಮ ಮಂಡಲಮಧ್ಯವರ್ತಿಯಾದ ಸೂರ್ಯಭಗವಂತನಿಗೆ ಪ್ರದಕ್ಷಿಣಮಾಡಿ, ಮೇಲೆ ಮೇಲಕ್ಕೆ ಹೋಗುತ್ತ ಧ್ರುವಮಂಡಲವನ್ನೂ ದಾಟಿ ಮತ್ತೂ ಮೇಲಕ್ಕೆ ಹೋಗಿ ಜನಲೋಕವಾಸಿಗಳಾದ ಸಿದ್ಧರು ಅತ್ಯಂತ ಸಂಭ್ರಮಯುಕ್ತರಾಗಿ ನಮ್ರರಾಗಿ ಎತ್ತಿದ ಮೊಗಗಳಿಂದ ನೋಡುತ್ತಿರಲು ಸಂತೋಷಭರಿತರಾಗಿ, ಒಬ್ಬರಿಗೊಬ್ಬರು ಮನಃಕಷಾಯವನ್ನು ದೂರಗೊಳಿಸುವ ಭಗವಚ್ಚರಿತೆಗಳನ್ನು ಕುರಿತು ಸಂಭಾಷಣೆ ಮಾಡುತ್ತ ಹೊರಟರು.

೮. ಎಲೈ ವಿಪ್ರರೇ! ಜೀವನ್ಮುಕ್ತನೂ, ಮುನಿಶ್ರೇಷ್ಠನೂ, ತ್ರಿಲೋಕ ಸಂಚಾರಿಯೂ, ಆದ ನಾರದನೆಂತು ಯಾವೊಂದು ಎಡರೂ ಇಲ್ಲದೆ ಸಂಚರಿಸು ವನೋ ಅಂತೆಯೇ ಮರ್ತ್ಯಲೋಕವಾಸಿಯಾದ ಇಂದ್ರದ್ಯುಮ್ನಮಹಾರಾಜನೂ ಸಹ ವಿಷ್ಣುಭಕ್ತಿಪ್ರಭಾವದಿಂದ ನಿರ್ವಿಘ್ನವಾಗಿ ಸಂಚಾರವನ್ನು ಮುಂದುವರಿ ಸಿದನು.

೯. ಎಲೈ ವಿಪ್ರರೇ! ಬ್ರಹ್ಮಾಂಡವಿಷಯದಲ್ಲಿ ವಿಷ್ಣುಭಕ್ತನಾದವನು ಹೊಂದಲಸದಳವಾದ ಯಾವ ವಸ್ತುವೂ ಇರುವುದಿಲ್ಲವು. ಅಥವಾ ಅವನು ಮುಕ್ತಿಯನ್ನೂ ಪಡೆಯುತ್ತಾನೆ.

೧೦. ತರುವಾಯ ಆ ಮುನಿಯೂ, ಇಂದ್ರದ್ಯುಮ್ನನೃಪಾಲನೂ ಈರ್ವರೂ

ಇಂದ್ರದ್ಯುಮ್ನೋ ನ ಸಸ್ಮಾರ ಪಾರ್ಥಿವಂ ವಾಸಮಾತ್ಮನಃ ।
ಕ್ರಮಾದೂರ್ಧ್ವಗತಿರ್ಗಚ್ಛನ್ಪಶ್ಯನ್ಸೌಖ್ಯೈಕಭಾಜನಾನ್ ॥ ೧೧ ॥
ನಿರ್ದ್ವಂದ್ವಾನಭಿಲಾಷೋತ್ಥ ತತ್ಕ್ಷಣಾನೇಕಪೌರುಷಾನ್ ।
ಕೇವಲಂ ಭಗವತ್ಪ್ರೀತ್ಯೈ ಕರ್ಮಭೂಮೌ ಚಕಾರ ಯತ್ ॥ ೧೨ ॥
ಪ್ರಾಸಾದಂ ಚಿಂತಯಾಮಾಸ ಸಂಪೂರ್ಣೋ ವಾ ನವಾ ಭವೇತ್ ।
ಮಯ್ಯಾಗತೇ ಬ್ರಹ್ಮಲೋಕಂ ಶತ್ರುಭಿರ್ವಾಭಿಭೂಯತೇ ॥ ೧೩ ॥
ಶ್ಲಥಾದರಾ ವಾ ಭೂಯಾಸುಃ ಸೇವಕಾ ದ್ರವ್ಯಲೋಭತಃ ।
ಗೃಹೀತವೇತನಾಃ ಶಿಲ್ಪಿವೃಂದಾ ಮಂದಕ್ರಿಯಾಸ್ತಥಾ ।
ನ ಶೀಘ್ರಂ ಘಟಯಿಷ್ಯಂತಿ ಮಯಿ ಬ್ರಹ್ಮಕ್ಷಯಾಗತೇ ॥ ೧೪ ॥
ಯಾವದ್ಗಮಿಷ್ಯೇ ಧಾತಾರಂ ಗೃಹೀತ್ವಾಹಂ ಚತುರ್ಮುಖಂ ।
ತಾವನ್ನ ಪುನರೇವ ಸ್ಯಾತ್ಪ್ರಾಸಾದೋ ಮಯಿ ದೂರಗೇ ॥ ೧೫ ॥

---

ಸಹ ಮಹರ್ಲೋಕನಿವಾಸಿಗಳಾದ ಸಿದ್ಧರಿಂದ ಆದರಪೂರ್ವಕವಾಗಿ ಸತ್ಕೃತರಾದರು.

೧೧. ಇಂದ್ರದ್ಯುಮ್ನನಾದರೋ ತನ್ನ ಪಾರ್ಥಿವವಾಸವನ್ನೇ ಸ್ಮರಿಸಲಿಲ್ಲವು. ಅವನು ಕ್ರಮವಾಗಿ ಊರ್ಧ್ವಗಮನದಿಂದ ಮೇಲೆಮೇಲಕ್ಕೆ ಹೋಗುತ್ತ ಸೌಖ್ಯವೊಂದಕ್ಕೇ ಪಾತ್ರರಾಗಿ, ದುಃಖಾದಿ ದ್ವಂದ್ವರಹಿತರಾಗಿ, ಅಭಿಲಾಷೆ ಹುಟ್ಟಿದೊಡನೆಯೇ ಅನೇಕ ಪೌರುಷಗಳನ್ನು ಸಾಧಿಸಬಲ್ಲ ಪುಣ್ಯಶೀಲರನ್ನು ನೋಡುತ್ತ ಹೊರಟನು.

೧೨–೧೩. ಆದರೆ ಅವನು ಕೇವಲ ಭಗವತ್ಪ್ರೀತಿಗಾಗಿ ಕರ್ಮಭೂಮಿಯಾದ ಭೂಲೋಕದಲ್ಲಿ ತಾನು ಕಟ್ಟಿಸುತ್ತಿರುವ ಪ್ರಾಸಾದವನ್ನು ಮಾತ್ರ ಸ್ಮರಿಸುತ್ತಿದ್ದನು. "ಪ್ರಾಸಾದವು ಪೂರ್ಣವಾಯಿತೋ ಇಲ್ಲವೋ! ನಾನಿಂತು ಬ್ರಹ್ಮಲೋಕಕ್ಕೆ ಹೊರಟುಬರಲು ಅತ್ತ ಶತ್ರುಗಳು ಅದನ್ನು ಕಡೆಗಂಡು ಕೆಡಿಸುವರೋ ಏನೋ!

೧೪. ಅಥವಾ, ಸೇವಕರು ಹಣದಾಸೆಯಿಂದ ರಚನಾಕಾರ್ಯದಲ್ಲಿ ಮಂದಾದರವುಳ್ಳವರಾಗುವರೇನೋ! ಅದೂ ಅಲ್ಲದಿದ್ದರೆ, ನಾನು ಹೀಗೆ ಬ್ರಹ್ಮಲೋಕಕ್ಕೆಹೊರಟುಬರಲು, ಸಂಬಳವನ್ನು ತೆಗೆದುಕೊಂಡು ಕೆಲಸಮಾಡುತ್ತಿರುವ ಶಿಲ್ಪಿಗಳೆಲ್ಲರೂ ತಾವೆಸಗಬೇಕಾದ ಕೆಲಸವನ್ನು ಸಾವಕಾಶ ಮಾಡುವರೋ ಏನೋ! ಅವರಂತೂ ಬೇಗಬೇಗನೆ ಕಟ್ಟಡವನ್ನು ಕಟ್ಟುವುದಿಲ್ಲವು.

೧೫. ಈಗ ನಾನು ಸಮೀಪದಲ್ಲಿಲ್ಲದೆ ದೂರದಲ್ಲಿರುವುದರಿಂದ, ನಾನು ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನನ್ನು ಕರೆದುಕೊಂಡು ಹಿಂತಿರುಗುವವರೆಗೂ ಪ್ರಾಸಾದ ರಚನೆಯು ನಡೆಯುವುದಿಲ್ಲವು.

ಇಹಾಯಾತಾಸ್ತು ಯೇ ಪೂರ್ವೇ ನ ಪುನಸ್ತೇ ಕ್ಷಿತಿಂ ಗತಾಃ ।
ಮನ್ವಾನಾ ಮಮ ಸಾಮಂತಾ ಇತ್ಥಂ ವಾ ದುಷ್ಟಮಾನಸಾಃ ।
ರಾಜ್ಯಂ ಮಮಾಹರಿಷ್ಯಂತಿ ದ್ವಿಷಂತಃ ಕಿಮು ಸಾಂಪ್ರತಂ ॥ ೧೬ ॥
ಇತ್ಥಂ ಸುವಿಗ್ನಮನಸಾ ಚಿಂತಯಾನಂ ಮಹೀಪತಿಂ ।
ಅತೀತಾನಾಗತಜ್ಞಾನನಿಧಿರ್ಮುನಿರುವಾಚ ತಂ ॥ ೧೭ ॥
ಕಿಂ ಚಿಂತಯಸಿ ರಾಜೇಂದ್ರ ತ್ವಮೇವಂ ದೀನಮಾನಸಃ ।
ಯತ್ರ ಚಾಭ್ಯಾಗತಾನಾಮಾಂ ನ ಚಿಂತಾವಿಷಯೋ ಹ್ಯಯಂ ॥ ೧೮ ॥
ನಾಧಯೋ ವ್ಯಾಧಯಶ್ಚಾತ್ರ ಪ್ರಭವಂತಿ ಕದಾಚನ ।
ನ ಜರಾ ನ ಚ ವಾ ಮೃತ್ಯುಃ ಕಿಮನ್ಯದುಃಖಹೇತುಕಂ ॥ ೧೯ ॥
ಕೃತಾರ್ಥೋಽಸಿ ಮಹಾಭಾಗ ಯನ್ಮಾನುಷ ವಪುಃ ಸ್ವಯಂ ।
ಬ್ರಹ್ಮಲೋಕಮಿಹಾಯಾತಃ ಪ್ರತ್ಯಕ್ಷ್ಯಂ ದೃಷ್ಟವಾನ್‌ಹರಿಂ ॥ ೨೦ ॥
ಇಹಾಯಾತಾ ನ ಶೋಚಂತಿ ಹೇಯೇ ಸಂಸಾರಕಲ್ಪಕೇ ।
ಬ್ರುವಾಣಮಿತ್ಥಂ ಭೂಪಾಲಸ್ತಮುವಾಚ ಮುನೀಶ್ವರಂ ॥ ೨೧ ॥

---

೧೬. ಬ್ರಹ್ಮಲೋಕಕ್ಕೆ ಹೋದವರು ಮತ್ತೆ ಭೂಲೋಕಕ್ಕೆ ಹಿಂತಿರುಗುವುದಿಲ್ಲವೆಂದು ಬಗೆದು ದುಷ್ಟಮನಸ್ಕರಾದ ನನ್ನ ಸಾಮಂತರಾಜರು ಶತ್ರುತ್ವವನ್ನು ಸಾಧಿಸಿ ನನ್ನ ರಾಜ್ಯವನ್ನೀಗ ಅಪಹರಿಸುವರೋ ಏನೋ! ಈಗ ಮಾಡತಕ್ಕುದೇನು?''

೧೭. ಎಲೈ ವಿಪ್ರರೆ! ಇಂತು ಕಾತರಗೊಂಡ ಮನಸ್ಸುಳ್ಳವನಾಗಿ ಚಿಂತಿಸುತ್ತಿರುವ ಆ ಮಹೀಪತಿಯನ್ನು ಕಂಡು, ಭೂತಭವಿಷ್ಯದ್ವರ್ತಮಾನಗಳನ್ನು ತಿಳಿಯುವುದರಲ್ಲಿ ಜ್ಞಾನನಿಧಿಯೆನಿಸಿದ ನಾರದಮುನೀಂದ್ರನು ಅವನನ್ನು ಕುರಿತು ಹೇಳಿದನು.

೧೮–೧೯. "ಓ ರಾಜೇಂದ್ರಾ! ದೀನಮನಸ್ಕನಾಗಿ ಇಂತೇಕೆ ನೀನು ಚಿಂತಿಸುತ್ತಿರುವೆ? ನಾವು ಬಂದಿರುವ ಈ ಪ್ರದೇಶವು ಈ ಬಗೆಯ ಚಿಂತೆಗೆ ವಿಷಯವಾದುದಲ್ಲವು. ರೋಗರುಜಿನಾದಿಗಳಾಗಲಿ, ಇತರ ವಿಘ್ನಗಳಾಗಲಿ, ಮುಪ್ಪುಸಾವುಗಳಾಗಲಿ ಈ ಪ್ರದೇಶದಲ್ಲಿ ಎಂದಿಗೂ ತಲೆದೋರುವುದಿಲ್ಲವು. ಇಂತಿರುವಲ್ಲಿ ನಿನ್ನ ಚಿಂತೆಗೆ ಬೇರಾವ ಕಾರಣವಿರುವುದು?

೨೦. ಎಲೈ ಭಾಗ್ಯಶಾಲಿಯೇ! ಮಾನವದೇಹಧಾರಿಯಾಗಿಯೇ ನೀನು ಬ್ರಹ್ಮಲೋಕಕ್ಕೆ ಬಂದಿರುವೆ. ಶ್ರೀಮನ್ನಾರಾಯಣನನ್ನು ಪ್ರತ್ಯಕ್ಷವಾಗಿ ಕಂಡಿರುವೆ. ಇದರಿಂದ ನೀನು ಕೃತಾರ್ಥನಾಗಿರುವೆ.

೨೧. ಇಲ್ಲಿ ಬಂದವರಾರೂ ಹೇಯವಾದ ಸಂಸಾರವಿಷಯದಲ್ಲಿ ಶೋಚಿಸುವುದಿಲ್ಲವು. ಆದುದರಿಂದ ನೀನೀ ವ್ಯಥೆಯನ್ನು ದೂರಮಾಡು.'' ಇಂತು

ನಹಿ ಶೋಚಾಮಿ ಭಗವನ್ಪ್ರಾಜ್ಞಃ ಸ್ವಜನಬಂಧುಷು ।
ಸಮಾರಬ್ಧೋ ಭಗವತಃ ಪ್ರಾಸಾದೋ ಯೋ ಮಯಾಧುನಾ ॥ ೨೨ ॥
ಅತ್ರಾಗತಂ ಮಾಂ ತೇ ಜ್ಞಾತ್ವಾ ನಾನುತಿಷ್ಠಂತಿ ಸೇವಕಾಃ ।
ಆರಬ್ಧಸ್ಯ ಪ್ರತಿಷ್ಠಾ ಹಿ ಕರ್ತವ್ಯಾ ನಿಶ್ಚಿತಾ ಮುನೇ ॥ ೨೩ ॥
ತಸ್ಯಾಂತರಾಯಂ ಸಂಭಾವ್ಯ ದುಃಖಿತಂ ಮೇ ಮನಃ ಪ್ರಭೋ ।
ತಸ್ಯೈತದ್ವಚನಂ ಶ್ರುತ್ವಾ ಪ್ರಹಸ್ಯ ಮುನಿರಬ್ರವೀತ್ ॥ ೨೪ ॥
ಪ್ರಜಾಪತಿಸಮಸ್ತ್ವಂ ಹಿ ನ ತು ಸಾಮಾನ್ಯಭೂಪತಿಃ ।
ಕೇನಾಪ್ಯಕೃತಂ ನೈವ ಭೂಮೌ ಪೂರ್ವೈರನುಷ್ಠಿತಂ ॥ ೨೫ ॥
ಕಿಂ ಪುನಸ್ತವ ಕೃತ್ಯಂ ತು ಯಃ ಸೃಷ್ಟಿಸ್ಥಿತಿಹಾನಿಕೃತ್ ।
ಬ್ರಹ್ಮಲೋಕಂ ಗತಾಸ್ತ್ವಾದ್ಯ ಪ್ರತಾಪಯಶಸಾ ತವ ॥ ೨೬ ॥
ತ್ರೈಲೋಕ್ಯೇ ಭ್ರಮತೋ ನಿತ್ಯಂ ಯಥಾ ಸೂರ್ಯನಿಶಾಕರೌ ।
ಯಸ್ಯ ಕಾರ್ಯೇಷು ಭಗವಾನ್ಸಹಾಯೋಽಸೌ ಚತುರ್ಮುಖಃ ॥ ೨೭ ॥

---

ನುಡಿಯುತ್ತಿರುವ ಆ ದೇವಮುನಿಯನ್ನು ಕುರಿತು ಇಂದ್ರದ್ಯುಮ್ನಭೂಪಾಲ ನಿಂತೆಂದನು :—

೨೨–೨೪. "ಭೋ ಭಗವನ್! ನಾನು ನನ್ನ ಸ್ವಜನರ ವಿಷಯದಲ್ಲಿ ಯಾಗಲಿ, ಬಂಧುಗಳ ವಿಷಯದಲ್ಲಿಯಾಗಲಿ ದುಃಖಿಸುತ್ತಿಲ್ಲವು. ಈಗ ನಾನು ಪರಮಾತ್ಮನಿಗೆ ಪ್ರಾಸಾದವನ್ನು ಕಟ್ಟಿಸಲು ಪ್ರಾರಂಭಿಸಿರುವೆನಲ್ಲವೆ. ಆ ವಿಷಯ ವನ್ನು ಕುರಿತು ಯೋಚಿಸುತ್ತಿರುವೆನು. ನನ್ನ ಸೇವಕರು ನಾನಿಲ್ಲಿಗೆ ಹೊರಟು ಬಂದಿರುವುದನ್ನರಿತು ಕೆಲಸಮಾಡಲಾರರು. ನಾನು ಪ್ರಾರಂಭಿಸಿರುವ ಆ ಪ್ರಾಸಾದದ ಪ್ರತಿಷ್ಠೆಯನ್ನು ಮಾಡಬೇಕಾಗಿರುವುದಷ್ಟೆ! ಎಲೈ ಮುನಿಯೇ! ಆ ಕಾರ್ಯಕ್ಕೆ ವಿಘ್ನವಾಗುವುದೇನೋ ಎಂದು ಶಂಕಿಸಿ ನನ್ನ ಮನಸ್ಸು ದುಃಖಿತ ವಾಗಿರುವುದು" ಎಂದು ನುಡಿದ ಆತನ ಮಾತನ್ನಾಲಿಸಿ ನಾರದನು ನಕ್ಕು ನುಡಿದನು.

೨೫. "ಎಲೈ ಇಂದ್ರದ್ಯುಮ್ನನೇ! ನೀನು ಸಾಕ್ಷಾತ್ ಬ್ರಹ್ಮನಿಗೆ ಸಮಾನವಾದವನು. ಸಾಮಾನ್ಯರಾಜನಲ್ಲವು. ಭೂಲೋಕದಲ್ಲಿ ಪೂರ್ವಿಕರು ಮಾಡಿರುವ ಸತ್ಕಾರ್ಯಕ್ಕೆ ಯಾರೂ ಅಡಚಣೆಯನ್ನುಂಟುಮಾಡುವುದಿಲ್ಲ.

೨೬–೩೧. ಎಂದಮೇಲೆ ಸೃಷ್ಟಿ ಸ್ಥಿತಿ ಲಯ ಶಕ್ತಿಯನ್ನೊಳಗೊಂಡಿರುವ ನೀನು ಮಾಡಿರುವ ಈ ಪ್ರಾಸಾದರಚನಾಕಾರ್ಯದ ವಿಷಯದಲ್ಲಿ ಹೇಳಬೇಕಾದುದೇನು? ಅಯ್ಯಾ ದೊರೆಯೇ! ಬ್ರಹ್ಮಲೋಕಕ್ಕೈತಂದಿರುವ ನಿನ್ನ ಪರಾಕ್ರಮ ಮತ್ತು ಕೀರ್ತಿಗಳೆರಡೂ ಸೂರ್ಯಚಂದ್ರರಂತೆ ಸ್ವರ್ಗಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಸಂಚರಿಸುತ್ತಿರುವುವು. ಯಾರ

ತೇಷು ಕಿಂ ರಾಜ ಶಾರ್ದೂಲ ವಿಘ್ನಶಂಕಾಪಿ ಜಾಯತೇ ।
ಏಷ ದೂರೇಽಸ್ತಿ ರಾಜೇಂದ್ರ ಪ್ರತ್ಯಕ್ಷಂ ಯಸ್ತವ ದ್ವಿಷಾಂ ॥ ೨೮ ॥
ಸದೋ ಮಧ್ಯಗತಃ ಶಕ್ರಃ ಸಾಕ್ಷಾತ್ತ್ರಿಜಗತೀಪತಿಃ ।
ವಿಶೇಷತೋ ಜಗನ್ನಾಥಪ್ರಾಸಾದೇ ಕಃ ಪುಮಾನ್ನೃಪ ॥ ೨೯ ॥
ನಿಹಂತುಂ ಮನಸಾಪೀಚ್ಛೇತ್ತತ್ರ ಶಂಕಾಸ್ತು ಮಾ ತವ ।
ತದಗ್ರತಃ ಪಶ್ಯ ಭೂಪ ಚಂದ್ರಕೋಟಿಸಮತ್ವಿಷಾ ॥ ೩೦ ॥
ಪರಿತೋ ಹ್ಲಾದಜನಕಃ ಸುಧಾಸಾಗರಕೋಟಿವತ್ ।
ಯಶ್ಚಾಯಂ ತೇಜಸಾಂ ರಾಶಿರ್ಜಾನೀಹಿ ಬ್ರಹ್ಮಸದ್ಮನಃ ॥ ೩೧ ॥
ಇತ್ಥಮಾಲಾಪತಸ್ತೌ ತು ಬ್ರಹ್ಮಲೋಕಾಂತಿಕಂ ಗತೌ ।
ಶುಶ್ರಾವಾತೇ ಸುದೂರಾತ್ತೌ ಬ್ರಹ್ಮರ್ಷೀಣಾಂ ಮುಖೋದ್ಗತಂ॥ ೩೨ ॥
ಸ್ವಾಧ್ಯಾಯಶಬ್ದಂ ಸುಪದಂ ಸ್ಪಷ್ಟವರ್ಣಕ್ರಮಸ್ವರಂ ।
ಇತಿಹಾಸಪುರಾಣಾನಿ ಛಂದಃಕಲ್ಪಾನಿ ಗಾಥಿಕಾಃ ॥ ೩೩ ॥

---

ಕಾರ್ಯಗಳಲ್ಲಿ ಸಾಕ್ಷಾತ್ ಷಡ್ಗುಣೈಶ್ವರ್ಯಸಂಪನ್ನನಾದ ಚತುರ್ಮುಖನೇ ಸಹಾಯಕನಾಗಿರುವನೋ ಆ ಕಾರ್ಯಗಳ ವಿಷಯದಲ್ಲಿ ವಿಘ್ನವಾಗುವುದೆಂಬ ಸಂದೇಹವೂ ಮೂಡುತ್ತದೆಯೆ? ರಾಜೇಂದ್ರ! ನೀನು ದೂರದಲ್ಲಿದ್ದರೂ, ನಿನ್ನ ಶತ್ರುಗಳಿಗೆಲ್ಲ, ತ್ರೈಲೋಕ್ಯನಾಥನಾದ ಸಾಕ್ಷಾತ್ ದೇವೇಂದ್ರನು ಸಭಾಮಧ್ಯ ಗತನಾಗಿ ಪ್ರತ್ಯಕ್ಷನಾಗಿಯೇ ಇರುವನು. ಇದೂ ಅಲ್ಲದೆ ಎಲೈ ರಾಜನೇ! ಜಗನ್ನಾಥಪ್ರಾಸಾದವನ್ನು ಅದಾವ ಮಾನವನುತಾನೆ ಹೊಡೆದು ಕೆಡವಲು ಮನಸ್ಸಿನಿಂದಾದರೂ ಅಪೇಕ್ಷಿಸಿಯಾನು? ಇಂತಹ ಸಂಶಯವೇ ನಿನಗಿಲ್ಲದಿರಲಿ! ಓ ನೃಪ! ಎದುರಿಗೆ ಕಣ್ಣಿಟ್ಟುನೋಡು. ಸುತ್ತಲೂ ಕೋಟಿಚಂದ್ರರಿಗೆ ಸಮಾನವಾದ ಕಾಂತಿಯಿಂದ ಆನಂದವನ್ನುಂಟುಮಾಡುತ್ತಿರುವುದಾಗಿ ಕೋಟಿ ಸಂಖ್ಯೆಯ ಕ್ಷೀರಸಮುದ್ರಗಳಂತೆ ಯಾವ ಈ ತೇಜೋರಾಶಿಯು ಕಾಣುತ್ತಿರು ವುದೋ ಅಂತಹ ಇದೇ ಬ್ರಹ್ಮಭವನದ ತೇಜಸ್ಸೆಂದು ತಿಳಿಯುವವನಾಗು.''

೩೨. ಎಲೈ ವಿಪ್ರರೇ! ನಾರದಮುನಿಯೂ, ಇಂದ್ರದ್ಯುಮ್ನನೃಪತಿಯೂ, ಈ ರೀತಿ ಮಾತನಾಡುತ್ತ ಬ್ರಹ್ಮಲೋಕದ ಬಳಿಗೈದಿ ಬಹಳ ದೂರದಿಂದಲೇ ಬ್ರಹ್ಮರ್ಷಿಗಳ ಮುಖದಿಂದ ಹೊರಬರುತ್ತಿದ್ದ ಸ್ಪಷ್ಟವಾದ ಪದವರ್ಣಕ್ರಮ ಸ್ವರ ಸಂಸ್ಕೃತವಾದ ವೇದಾಧ್ಯಯನ ಧ್ವನಿಯನ್ನು ಕೇಳಿದರು.

೩೩. ಅಂತೆಯೇ ಇತಿಹಾಸಪುರಾಣಗಳು, ಛಂದಸ್ಸು, ಕಲ್ಪಗಳು, ಗಾಥೆ ಗಳು ಇವುಗಳೆಲ್ಲವೂ ಒಂದರೊಡನೊಂದು ಮಿಶ್ರವಾಗದೆ ಬೆಳಗುತ್ತಿರುವ ಪದಗಳು ಳ್ಳುದಾಗಿ ಬೇರೆ ಬೇರೆಯಾಗಿಯೇ ಕೇಳಿಬರುತ್ತಿದ್ದುವು.

ಅಸಂಕೀರ್ಣೋಜ್ಜ್ವಲಪದಂ ಶ್ರೂಯತೇ ಸ್ವಾವಿಭಾಗಶಃ ।
ಅತ್ರೈತದ್ರಾಜಶಾರ್ದೂಲ ಜಾನೀಹಿ ಬ್ರಹ್ಮಣಃ ಪುರಂ ।
ಸಭಾಹಿ ದೃಶ್ಯತೇ ಚೈಷಾ ಯತ್ರ ಲೋಕಪಿತಾಮಹಃ ॥ ೩೪ ॥
ಸಾರ್ಧಂ ಬ್ರಹ್ಮರ್ಷಿಮುಖ್ಯೈಶ್ಚ ಸುಖಾಸೀನಶ್ಚತುರ್ಮುಖಃ ॥ ೩೫ ॥
ನಾನಾಚೈತನ್ಯಶಬಲೈರ್ಜೀವನ್ಮುಕ್ತೈರುಪಾಸಿತಃ ।
ಯತ್ರಾಗತಾನಿ ವರ್ತಂತೇ ನ ಸಂಸಾರಾಬ್ಧಿ ಸಂಕಟೇ ॥ ೩೬ ॥
ಸದಿತಿಬ್ರಹ್ಮಣೋ ನಾಮ ತಸ್ಯಾಯಂ ಭುವನೋತ್ತಮಃ ।
ಸತ್ಯಲೋಕ ಇತಿ ಖ್ಯಾತಸ್ತದೂರ್ಧ್ವಂ ನಾಸ್ತಿ ಕಿಂಚನ ॥ ೩೭ ॥
ಅಸ್ಯೈವ ಕಿಂಚಿದುಪರ್ಯಧಶ್ಚಾಂಡಕಪಾಲತಃ ।
ವೈಕುಂಠಭವನಂ ರಾಜನ್ಮುಕ್ತಾ ಯತ್ರ ವಸಂತಿ ವೈ ॥ ೩೮ ॥
ಯತ್ರ ಯೋಗೀಶ್ವರಃ ಸಾಕ್ಷಾದ್ಯೋಗಿಚಿಂತ್ಯೋ ಜನಾರ್ದನಃ ।
ಚೈತನ್ಯವಪುರಾಸ್ತೇ ವೈ ಸಾಂದ್ರಾನಂದಾತ್ಮಕಃ ಪ್ರಭುಃ ॥ ೩೯ ॥
ಯಂ ಪ್ರಾಪ್ಯ ನ ನಿವರ್ತಂತೇ ಮೃತ್ಯುಂ ಸಂಸಾರವರ್ತ್ಮನಿ ।
ಯಮುಪಾಸ್ತೇ ಸದಾ ಬ್ರಹ್ಮಾ ಜೀವನ್ಮುಕ್ತೈಃ ಸ್ವಮುಕ್ತಯೇ ॥ ೪೦ ॥

---

೩೪. ಆಗ ನಾರದಮುನಿಯು ದೊರೆಯನ್ನು ಕುರಿತು, "ಅಯ್ಯಾ ರಾಜ ಶಾರ್ದೂಲನೇ! ಇಲ್ಲಿ ಕಾಣುತ್ತಿರುವ ಇದೇ ಬ್ರಹ್ಮಪುರಿಯೆಂದು ತಿಳಿ. ಇಲ್ಲಿ ಲೋಕಪಿತಾಮಹನಾದ ಬ್ರಹ್ಮದೇವನ ಈ ಸಭೆಯು ಅದೋ ನೋಡು, ಕಾಣುತ್ತಿರುವುದು.

೩೫–೩೬. ಅಲ್ಲಿಯೇ ಚತುರ್ಮುಖನು, ಬಗೆ ಬಗೆಯ ಪ್ರಭಾವಗಳಿಂದೊಡಗೂಡಿರುವ ಜೀವನ್ಮುಕ್ತರಿಂದ ಉಪಾಸಿತನಾಗಿ ಮುಖ್ಯರಾದ ಬ್ರಹ್ಮರ್ಷಿಗಳೊಡನೆ ಸುಖಾಸೀನನಾಗಿರುವನು. ಇಲ್ಲಿಗೈತಂದವರು ಸಂಸಾರಸಮುದ್ರದ ಸಂಕಟಕ್ಕೆ ಮತ್ತೆ ಹಿಂತಿರುಗುವುದಿಲ್ಲವು.

೩೭. ಎಲೈ ಇಂದ್ರದ್ಯುಮ್ನನೇ! ಬ್ರಹ್ಮನಿಗೆ 'ಸತ್' ಎಂದು ಹೆಸರು. ಈ ಭವನವು ಆತನದಾಗಿರುವುದರಿಂದ, ಸತ್ಯಲೋಕವೆಂದು ಪ್ರಸಿದ್ಧವಾಗಿರುವುದು. ಇದಕ್ಕಿಂತಲೂ ಮೇಲೆ ಏನೂ ಇರುವುದಿಲ್ಲವು.

೩೮. ಈ ಸತ್ಯಲೋಕಕ್ಕೆ ಸ್ವಲ್ಪಮೇಲೆ ಅಂಡಕಪಾಲದ ಕೆಳಭಾಗದಲ್ಲಿಯೇ ಮುಕ್ತರಾದವರು ವಾಸಮಾಡುವ ವೈಕುಂಠಭವನವಿರುತ್ತದೆ.

೩೯. ಅಲ್ಲಿಯೇ ಯೋಗಿಗಳಿಂದ ಧ್ಯಾನಿಸಲ್ಪಟ್ಟವನೂ, ಯೋಗೀಶ್ವರನೂ, ಆದ ಸಾಕ್ಷಾತ್ ಜನಾರ್ದನನು ಶುದ್ಧ ಚೈತನ್ಯದೇಹಧಾರಿಯಾಗಿ, ಸಾಂದ್ರಾನಂದಸ್ವರೂಪನಾಗಿ ಸಮಸ್ತಕ್ಕೂ ಪ್ರಭುವಾಗಿ ನೆಲಸಿರುತ್ತಾನೆ.

೪೦–೪೧. ಯಾವನನ್ನು ಹೊಂದಿ ಮಾನವರು ಮತ್ತೆ ಮರ್ತ್ಯಸಂಸಾರ

ಕಲ್ಪಿತಸ್ಯಾಯುಷೋಂತೇಽಸಾವೇಭಿಃ ಸಾರ್ಧಂ ಪ್ರಪದ್ಯತೇ ।
ಸ ಏಷ ಸ್ರಷ್ಟಾ ಲೋಕಾನಾಂ ಮತ್ಸ್ಯಕೂರ್ಮಾದಿರೂಪಧೃಕ್ ॥ ೪೧ ॥
ರಕ್ಷಿತಾ ರೌದ್ರರೂಪೇಣ ಸಂಹರ್ತಾ ಲೋಕಭಾವನಃ ॥ ೪೨ ॥
ಇಂದ್ರದ್ಯುಮ್ನಂ ವದನ್ನಿತ್ಥಂ ಪ್ರಾಪ ಬ್ರಹ್ಮನಿಕೇತನಂ ।
ಕ್ಷಣೇನ ಚ ಸಭಾದ್ವಾರಿ ಪ್ರಕೋಷ್ಟೇ ಸ ನ್ಯವರ್ತತ ।
ಯತ್ರ ತಿಷ್ಠಂತಿ ದಿಕ್ಪಾಲಾಃ ಶಕ್ರಾದ್ಯಾಃ ಪರಿತಸ್ತಥಾ ॥ ೪೩ ॥
ಚಿರಕಾಲಂ ಧ್ಯಾನಪರಸ್ತಥಾ ಮನ್ವಂತರಾಧಿಪಾಃ ।
ಪೃಥಗ್ಜನನಿಭಾ ದ್ವಾಃಸ್ಥಾ ನಿಷಿದ್ಧಾಂತಪ್ರವೇಶನಾಃ ॥ ೪೪ ॥
ಇಂದ್ರದ್ಯುಮ್ನೇನ ಸಹಿತಂ ನಾರದಂ ಪ್ರವಿಲೋಕ್ಯ ಸಃ ।
ದ್ವಾರಪಾಲಃ ಸವಿನಯಂ ನನಾಮಾನತಕಂಧರಃ ॥ ೪೫ ॥
ಚತುರ್ದಶಾನಾಂ ಲೋಕಾನಾಂ ಭ್ರಮಣೇ ರಸಿಕ ಪ್ರಭೋ ।
ತ್ವಯಾ ವಿನಾ ಶೋಭತೇ ನೋ ಸ್ವಾಮಿಂಸ್ತವ ಪಿತುಃ ಸಭಾ ॥ ೪೬ ॥

---

ಮಾರ್ಗಕ್ಕೆ ಹಿಂತಿರುಗುವುದಿಲ್ಲವೋ, ಯಾವನನ್ನು ಬ್ರಹ್ಮದೇವನು ಜೀವನ್ಮುಕ್ತರೊಡಗೂಡಿ ಮೋಕ್ಷಕ್ಕಾಗಿ ಉಪಾಸಿಸುತ್ತಿರುವನೋ, ಕಲ್ಪಾವಸಾನದಲ್ಲಿ ಅವನು ಆ ಜೀವನ್ಮುಕ್ತರೊಡನೆ ಯಾವನನ್ನು ಹೊಂದುತ್ತಾನೆಯೋ (ಯಾವನಲ್ಲಿ ಐಕ್ಯವಾಗುತ್ತಾನೆಯೋ) ಅಂತಹ ಈ ಲೋಕನಿರ್ಮಾಣಕರ್ತನೂ, ಮತ್ಸ್ಯ ಕೂರ್ಮಾದಿ ರೂಪಗಳನ್ನು ತಾಳಿದವನೂ, ಸೌಮ್ಯರೂಪದಿಂದ ಪ್ರಪಂಚವನ್ನು ರಕ್ಷಿಸಿ, ರೌದ್ರರೂಪದಿಂದ ಸಂಹರಿಸಿ ಲೋಕಭಾವನನಾಗಿರುವ ಶ್ರೀಮನ್ನಾರಾಯಣಮೂರ್ತಿಯು ಅಲ್ಲಿ ನೆಲಸಿರುತ್ತಾನೆ.''

೪೩. ಈ ಪ್ರಕಾರ ಆ ನಾರದಮುನಿಯು ಇಂದ್ರದ್ಯುಮ್ನನಿಗೆ ಹೇಳುತ್ತಲಿರುವಂತೆಯೇ ಬ್ರಹ್ಮಭವನವನ್ನು ಸಮೀಪಿಸಿ ಒಂದು ಕ್ಷಣಮಾತ್ರದಲ್ಲಿಯೇ ದಿಕ್ಪಾಲಕರೂ, ಇಂದ್ರಾದಿ ದೇವತೆಗಳೂ ಸುತ್ತುಬಳಸಿರುವ ಸಭಾಭವನದ ಮಹಾದ್ವಾರದ ಕೈಸಾಲೆಯನ್ನು ಸೇರಿದನು.

೪೪. ಬಹಳಕಾಲದಿಂದಲೂ ಧ್ಯಾನಪರರಾಗಿ ಕಾದಿದ್ದ ಮನ್ವಂತರಗಳೊಡೆಯರೂ ಇತರ ಜನಸಮೂಹವೂ ದ್ವಾರಪಾಲಕನಿಂದ ನಿಷೇಧಿಸಲ್ಪಟ್ಟ ಪ್ರವೇಶವುಳ್ಳವರಾಗಿ ಅಲ್ಲಿಯೇ ಇದ್ದರು.

೪೫. ಎಲೈ ವಿಪ್ರರೇ! ಆದರೆ ಅಲ್ಲಿದ್ದ ದ್ವಾರಪಾಲಕನು ಇಂದ್ರದ್ಯುಮ್ನನೊಡಗೂಡಿದ ನಾರದಮುನಿಯನ್ನು ಕಂಡು ಒಡನೆಯೆ ವಿನಯದಿಂದ ತಲೆಬಾಗಿ ನಮಸ್ಕರಿಸಿದನು.

೪೬. ತರುವಾಯ ಅವನು ಆ ಮುನಿಯನ್ನು ಕುರಿತು, "ಎಲೈ ನಾರದನೇ! ಹದಿನಾಲ್ಕು ಲೋಕಗಳಲ್ಲಿಯೂ ಸಂಚರಿಸುವ ರಸಿಕನೂ, ಪ್ರಭುವೂ ಆದ

**ಸಂತ್ಯೇವ ಮುನಯಃ ಶ್ರೇಷ್ಠಾ ಬ್ರಾಹ್ಮಣಾ ಬ್ರಹ್ಮವಿದ್ವರಾಃ ।**
**ಗೌತಮಾದ್ಯಾಸ್ತಥಾಪ್ಯೇಷಾ ನ ರಮ್ಯಾ ಬ್ರಹ್ಮಣಃ ಸಭಾ ॥ ೪೭ ॥**
**ಬಹುತಾರಾಸು ರಜನೀ ಚಂದ್ರೇಣೇವ ಪ್ರಕಾಶತೇ ।**
**ಇತಿ ಸ್ತುವನ್ದದೌ ತಸ್ಯ ಪ್ರವೇಶಂ ವಿನಯಾನ್ವಿತಃ ॥ ೪೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನ ನಾರದಯೋರ್ಬ್ರಹ್ಮಲೋಕಗಮನವರ್ಣನಂ" ನಾಮ ದ್ವಾವಿಂಶೋಽಧ್ಯಾಯಃ**

---

ನೀನಿಲ್ಲದಿದ್ದರೆ ಓ ಸ್ವಾಮಿಯೇ! ನಿನ್ನ ಜನಕನಾದ ನಮ್ಮ ಪ್ರಭುವಾದ ಬ್ರಹ್ಮದೇವನ ಸಭೆಯು ಶೋಭಿಸುವುದೇ ಇಲ್ಲವು.

೪೭-೪೮. ಈ ಸಭೆಯಲ್ಲಿ ನಿನ್ನ ತಂದೆಯೊಡನೆ ಶ್ರೇಷ್ಠರೂ, ಬ್ರಾಹ್ಮಣರೂ, ಬ್ರಹ್ಮತತ್ತ್ವವೇತ್ತರಲ್ಲಿ ಮಿಗಿಲಾದವರೂ ಆದ ಗೌತಮಾದಿ ಮುನಿಗಳಿದ್ದೇ ಇರುವರು. ಆದರೂ ನೀನಿಲ್ಲದಿದ್ದರೆ ಬ್ರಹ್ಮಸಭೆಯು ಸೊಗಸುವುದಿಲ್ಲವು. ನೀನಿದ್ದುದಾದರೆ ಮಾತ್ರ ಅದು ಅನೇಕ ತಾರೆಗಳಿದ್ದು ಚಂದ್ರನೊಡಗೂಡಿದ ರಾತ್ರಿಯಂತೆ ಪ್ರಕಾಶಿಸುತ್ತದೆ" ಎಂದು ಹೇಳಿ ಹೊಗಳುತ್ತ, ಆತನಿಗೆ ಒಳಗೆ ಹೋಗಲು ಪ್ರವೇಶವನ್ನಿತ್ತನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನ ನಾರದರ ಬ್ರಹ್ಮಲೋಕ ಗಮನವರ್ಣನ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶೋಽಧ್ಯಾಯಃ

### ಇಂದ್ರದ್ಯುಮ್ನಕೃತಬ್ರಹ್ಮಸಂದರ್ಶನವರ್ಣನಂ

**ನಾರದ ಉವಾಚ :—**

**ದೌವಾರಿಕಾಯಂ ರಾಜರ್ಷಿರಿಂದ್ರದ್ಯುಮ್ನೋ ಮಹಾಯಶಾಃ ।**
**ಸಾರ್ವಭೌಮೋ ವೈಷ್ಣವಾಗ್ರ್ಯೋ ಧಾತಾರಂ ದ್ರಷ್ಟುಮಾಗತಃ ।**
**ಯಥಾ ತ್ವಯಂ ಪುರತಸ್ತಸ್ಯ ಯದಿ ತ್ವಮನುಮನ್ಯಸೇ ॥ ೧ ॥**
**ಇತ್ಯುಕ್ತಸ್ತಂ ಪುನಃ ಪ್ರಾಹ ನಾರದಂ ಮಣಿಕೋದರಃ ॥ ೨ ॥**
**ಸ್ವಾಮಿಂಸ್ತ್ವಯಾಗತೋ ಯೋಽಸೌ ನ ಸಾಮಾನ್ಯೋ ಹಿ ಬುಧ್ಯತೇ ।**
**ಯತ್ರ ಪಶ್ಯಸಿ ದಿಕ್ಪಾಲಾನ್ಪಿತೄನ್ಮನ್ವಂತರಾಧಿಪಾನ್ ॥ ೩ ॥**
**ತತ್ರಾಯಂ ಮರ್ತ್ಯನಿಲಯಸ್ತಿಷ್ಠೇದಪಿ ಹಿ ಪೌರುಷಂ ।**
**ಭವಾನ್ಗತ್ವಾ ಪದ್ಮಯೋನಿಂ ವಿಜ್ಞಾಪ್ಯೈನಂ ಪ್ರವೇಶಯ ॥ ೪ ॥**
**ಸಭಾದ್ವಾರಗತೋ ಯೋಽಸೌ ದಿಕ್ಪಾಲೈಃ ಸಹ ಯಾಸ್ಯತಿ ।**
**ಏಕಾಗ್ರಚಿತ್ತೋ ಭಗವಾನ್ಗಾಯನೇ ಚತುರಾನನಃ ॥ ೫ ॥**

---

### ಕನ್ನಡದ ಅನುವಾದ

#### ಇಂದ್ರದ್ಯುಮ್ನಕೃತ ಬ್ರಹ್ಮಸಂದರ್ಶನವರ್ಣನ

೧. ನಾರದನು ಹೇಳುತ್ತಾನೆ:—"ಅಯ್ಯಾ ದೌವಾರಿಕನೇ! ಈತನು ಮಹಾಕೀರ್ತಿಸಂಪನ್ನನೂ, ಸಾರ್ವಭೌಮನೂ, ವೈಷ್ಣವಾಗ್ರೇಸರನೂ ಆದ ಇಂದ್ರದ್ಯುಮ್ನನೆಂಬ ರಾಜರ್ಷಿಯು. ಕಮಲಾಸನನನ್ನು ಸಂದರ್ಶಿಸಬಯಸಿ ಬಂದಿರುವನು. ನೀನು ಸಮ್ಮತಿಸುವೆಯಾದರೆ ಈತನು ಬ್ರಹ್ಮನ ಸನ್ನಿಧಿಗೆ ಹೋಗಿ ಬರಲಿ."

೨–೬. ಇಂತೆಂದ ಆ ಮುನಿಯ ಮಾತನ್ನು ಕೇಳಿ ಮಣಿಕೋದರನೆಂಬ ಆ ದೌವಾರಿಕನು, "ಸ್ವಾಮಿನ್! ನಿನ್ನೊಡನೆ ಬಂದಿರುವ ಈತನು ಸಾಮಾನ್ಯನಂತೆ ತೋರುವುದಿಲ್ಲವು. ಮರ್ತ್ಯಲೋಕವಾಸಿಯಾದ ಈತನು, ದಿಕ್ಪಾಲಕರೂ ಮನ್ವಂತರಾಧಿಪತಿಗಳೂ ಸೇರಿರುವ ಆ ಪ್ರದೇಶದಲ್ಲಿ ಸ್ವಲ್ಪಹೊತ್ತು ಧೈರ್ಯವಾಗಿ ನಿಂತಿರಲಿ. ನೀನು ಒಳಗೆಹೋಗಿ ಬ್ರಹ್ಮದೇವನಿಗೆ ಈ ವಿಚಾರವನ್ನು ವಿಜ್ಞಾಪಿಸಿ ಈತನನ್ನು ಪ್ರವೇಶಗೊಳಿಸು. ಅಥವಾ ಈತನು ಈ ಸಭಾದ್ವಾರದಲ್ಲಿಯೇ ಇದ್ದು ದಿಕ್ಪಾಲಕರೊಡನೆ ಹೊರಡಲಿ. ಈಗ ಭಗವಾನ್ ಚತುರಾನನು ದೇವಗಾಯನದಲ್ಲಿ ಏಕಾಗ್ರಚಿತ್ತನಾಗಿರುವನು. ಎಲೈ ನಾರದಮುನಿಯೇ! ಬಾಗಿಲುಕಾಯುವ

ಅಸ್ಮಾಕಂ ದ್ವಾರಿ ಯುಕ್ತಾನಾಂ ಪ್ರತೀಕ್ಷ್ಯೋಽವಸರೋ ಧ್ರುವಂ ।
ನ ಕ್ರೋಧೋ ಮಯಿ ಕರ್ತವ್ಯೋ ದಾಸೇ ತವ ಪಿತುಶ್ಚ ತೇ ॥ ೬ ॥
ಇತ್ಯುಕ್ತೋ ನಾರದೋ ಗತ್ವಾ ಬ್ರಹ್ಮಾಣಂ ಜಗತಾಂ ಪತಿಂ ।
ನತ್ವಾ ಸಾಷ್ಟಾಂಗಪತನಂ ವಿಜ್ಞಪ್ತೋ ವಸುಧಾಧಿಪಃ ॥ ೭ ॥
ಕಟಾಕ್ಷೇಣಾದಿಶತ್ಸೋಽಥ ಇಂದ್ರದ್ಯುಮ್ನಪ್ರವೇಶನಂ ।
ನೋವಾಚ ಕಿಂಚಿದ್ಭಗವಾನ್ಗಾನೇ ದತ್ತಾವಧಾನತಃ ॥ ೮ ॥
ದಿವ್ಯಗಾಯನಸಂಗೀತೇ ಕೌತುಕಾವಿಷ್ಟಮಾನಸಃ ।
ಜ್ಞಾತ್ವೇಂಗಿತಂ ನಾರದೋಽಥ ಇಂದ್ರದ್ಯುಮ್ನಂ ನೃಪೋತ್ತಮಂ ।
ಪ್ರವೇಶಯಾಮಾಸ ತತಃ ಶಕ್ರಾದ್ಯೈಃ ಸುನಿರೀಕ್ಷಿತಃ ॥ ೯ ॥
ದೃಷ್ಟ್ವಾ ಪಿತಾಮಹಂ ದೂರಾತ್ಸ್ರಷ್ಟಾರಂ ಜಗತಾಂ ನೃಪಃ ।
ಅಮನ್ಯತ ದ್ವಿಜಶ್ರೇಷ್ಠಾಃ ಸಾಕ್ಷಾದ್ದಾರುಮಯಂ ಹರಿಂ ॥ ೧೦ ॥
ಶನೈಃ ಶನೈರ್ಯಯೌ ಭೂಪಃ ಪ್ರಣಮಂಶ್ಚ ಕೃತಾಂಜಲಿಃ ।
ಸ್ತುವನ್ನಮನ್ಪ್ರಣಿಪತನ್ಸಾಧ್ವಸಸ್ಖಲಿತಂ ವ್ರಜನ್ ।
ಕಿಂಚಿದ್ದೂರೇ ಸ್ಥಿತೋ ಭೂಪೋ ನಾರದಸ್ಯ ನಿದೇಶತಃ ॥ ೧೧ ॥

---

ವರಾದ ನಮ್ಮ ಸಮಯಸನ್ನಿವೇಶಗಳನ್ನು ನೋಡಿ ನೀನು ಖಂಡಿತವಾಗಿಯೂ ನನ್ನಲ್ಲಿ ಕೋಪಗೊಳ್ಳಬೇಡ. ನಾನು ನಿನಗೂ ನಿನ್ನ ತಂದೆಗೂ ದಾಸನು.

೭. ಆ ದ್ವಾರಪಾಲಕನಿಂತೆನಲು ನಾರದನು ಜಗತ್ಪತಿಯಾದ ಬ್ರಹ್ಮನ ಬಳಿಗೈದಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಇಂದ್ರದ್ಯುಮ್ನರಾಜನ ವಿಚಾರ ವನ್ನಾತನಿಗೆ ಅರಿಕೆಮಾಡಿದನು.

೮-೯. ಬ್ರಹ್ಮದೇವನಾದರೋ ಕೇವಲ ಕಣ್ಣುಸನ್ನೆಯಿಂದಲೇ ಆ ದೊರೆ ಯನ್ನು ಪ್ರವೇಶಗೊಳಿಸೆಂದು ಆಜ್ಞಾಪಿಸಿದನಲ್ಲದೆ, ದೇವಗಾಯನ ಸಂಗೀತ ದಲ್ಲಿ ತನ್ನ ಮನಸ್ಸು ಮಗ್ನವಾಗಿದ್ದುದರಿಂದ ಯಾವ ಮಾತನ್ನೂ ಆಡಲಿಲ್ಲವು. ನಾರದಮುನಿಯೂ ಸಹ ಆತನ ಇಂಗಿತವನ್ನರಿತವನಾಗಿ ನೃಪೋತ್ತಮನಾದ ಇಂದ್ರದ್ಯುಮ್ನನನ್ನು ಶಕ್ರನೇ ಮೊದಲಾದವರೆಲ್ಲರೂ ಕಣ್ಣಿಟ್ಟು ಚೆನ್ನಾಗಿ ನೋಡು ತ್ತಿರುವಂತೆಯೇ ಒಳಕ್ಕೆ ಕರೆತಂದನು.

೧೦. ಇಂದ್ರದ್ಯುಮ್ನನು ಜಗತ್ಪಿತಾಮಹನಾದ ಬ್ರಹ್ಮದೇವನನ್ನು ದೂರ ದಿಂದಲೇ ನೋಡಿ ಆತನು ಸಾಕ್ಷಾತ್ ದಾರುಮಯಮೂರ್ತಿಯಾದ ಶ್ರೀಹರಿ ಯೆಂದೇ ಭಾವಿಸಿದನು.

೧೧. ಆ ಭೂಪತಿಯು ಕೈಗಳನ್ನು ಜೋಡಿಸಿಕೊಂಡು ಪ್ರಣಾಮಮಾಡು ತ್ತಲೇ ಮೆಲ್ಲಮೆಲ್ಲನೆ ನಡೆದುಹೋದನಲ್ಲದೆ ಅವನು ಪರಮಾತ್ಮನನ್ನು ಸ್ತುತಿ ಸುತ್ತಲೂ, ನಮಸ್ಕರಿಸುತ್ತಲೂ, ದೀರ್ಘದಂಡಪ್ರಣಾಮ ಮಾಡುತ್ತಲೂ ಭಕ್ತ್ಯ

**ತತಃ ಪುಣ್ಯಂ ಗೀಯಮಾನಂ ಚರಿತಂ ಸಿಂಧುಜಾಪತೇಃ ।**
**ಶೃಣ್ವಂಶ್ಚತುರ್ಮುಖಸ್ತಸ್ಥೌ ಮುಹೂರ್ತಂ ದ್ವಿಜಪುಂಗವಾಃ ॥ ೧೨ ॥**
**ಸಾವಿತ್ರೀಶಾರದಾಭ್ಯಾಂ ಚ ವೀಜ್ಯಮಾನಸ್ತು ಪಾರ್ಶ್ವಯೋಃ ।**
**ಶುದ್ಧದೇಹಧರೈರ್ವೇದೈಃ ಸ್ತೂಯಮಾನಃ ಸ್ವಯಂಭುವಃ ॥ ೧೩ ॥**
**ಕಲಾಕಾಷ್ಠಾನಿಮೇಷಾದಿ ಕಲ್ಪಯನ್ಯುಗಪರ್ಯಯಂ ।**
**ನ ಜರಾಜನ್ಮಮರಣಂ ರೂಪಾದಿಪರಿಣಾಮನಂ ॥ ೧೪ ॥**
**ಯಸ್ಯ ಲೋಕಗತಾನಾಂ ವೈ ನಾಧಯೋ ವ್ಯಾಧಯಸ್ತಥಾ ।**
**ಮನ್ವಂತರಾದಯೋ ಯತ್ರ ಯುಗಾವರ್ತಾದಯಸ್ತಥಾ ॥ ೧೫ ॥**
**ಕಲ್ಪಾಂತಾದ್ಯಾ ನವಿದ್ಯಂತೇ ಸ ಸಾಕ್ಷಾತ್ಪರಮೇಶ್ವರಃ ।**
**ಗೀತಾವಸಾನೇ ತಂ ಭೂಪಮುವಾಚ ಪ್ರಹಸನ್ನಿವ ॥ ೧೬ ॥**
**ಇಂದ್ರದ್ಯುಮ್ನ ಮಹಾಸತ್ತ್ವ ಸಾಕ್ಷಾತ್ತ್ವಂ ಭಗವತ್ಪ್ರಿಯಃ ।**
**ಅನ್ಯಸ್ಯ ದುರ್ಲಭೋ ಲೋಕಃ ಸತ್ಯಾಖ್ಯೋ ವಿದಿತಸ್ತವ ॥ ೧೭ ॥**

---

ದ್ರೇಕದಿಂದ ಅಲ್ಲಲ್ಲಿ ಜಾರುತ್ತಲೂ ಹೊರಟು ನಾರದಮುನಿಯ ಅಪ್ಪಣೆಯಂತೆ ಬ್ರಹ್ಮಸನ್ನಿಧಿಗೆ ಸ್ವಲ್ಪ ದೂರದಲ್ಲಿಯೇ ನಿಂತನು.

೧೨. ಎಲೈ ದ್ವಿಜಪುಂಗವರೇ! ಆ ತರುವಾಯ ಬ್ರಹ್ಮದೇವನು ದೇವ ಗಾಯಕರು ಗಾಯನಮಾಡುತ್ತಿದ್ದ ಪುಣ್ಯಕರವಾದ ಶ್ರೀಲಕ್ಷ್ಮೀರಮಣನ ಚರಿತ್ರೆಯನ್ನು ಕೇಳಿ ಒಂದು ಮುಹೂರ್ತಕಾಲ ಹಾಗೆಯೇ ಧ್ಯಾನಮಗ್ನನಾಗಿದ್ದನು.

೧೩–೧೪. ಆಗಲಾತನ ಉಭಯಪಾರ್ಶ್ವಗಳಲ್ಲಿಯೂ, ಸಾವಿತ್ರೀ ಶಾರದೆಯರು ಚಾಮರಗಳನ್ನು ಹಾಕುತ್ತಿದ್ದರು. ಶುದ್ಧವಾದ ದೇಹಗಳನ್ನು ಧರಿಸಿದ್ದ ಚತುರ್ವೇದಗಳು ಕಲಾಕಾಷ್ಟನಿಮೇಷಾದಿಗಳನ್ನೂ ಯುಗಪರ್ಯಾಯವನ್ನೂ ಕಲ್ಪಿಸುತ್ತಾ ಆ ಚತುರ್ಮುಖನನ್ನು ಸ್ತುತಿಸುತ್ತಿದ್ದುವು.

೧೫–೧೬. ಜರಾಮರಣಗಳೂ, ರೂಪಪರಿವರ್ತನೆಯೂ, ಆಧಿವ್ಯಾಧಿಗಳೂ, ಮನ್ವಂತರಾದಿಗಳೂ, ಯುಗಪರಿವರ್ತನೆಯೂ ಯಾವ ಲೋಕದ ನಿವಾಸಿಗಳಿಗಿರುವುದಿಲ್ಲವೋ ಆ ಸತ್ಯಲೋಕದ ಪ್ರಭುವಾದ ಸಾಕ್ಷಾತ್ ಪರಮೇಶ್ವರನು ದಿವ್ಯಗೀತಾವಸಾನವಾದ ಬಳಿಕ ಇಂದ್ರದ್ಯುಮ್ನನನ್ನು ಕುರಿತು ನಸುನಗುತ್ತಾ ಇಂತೆಂದನು:—

೧೭. "ಎಲೈ ಮಹಾಸತ್ತ್ವಸಂಪನ್ನನಾದ ಇಂದ್ರದ್ಯುಮ್ನನೇ! ನೀನು ಸಾಕ್ಷಾತ್ ಭಗವಂತನಿಗೆ ಅತ್ಯಂತ ಪ್ರಿಯನಾದವನು. ದೊರೆಯೇ! ಈ ಸತ್ಯಲೋಕವು ನಿನ್ನನ್ನುಳಿದು ಇತರರಾರಿಗೂ ದುರ್ಲಭವೆಂಬ ವಿಷಯವು ನಿನಗೆ ತಿಳಿದೇ ಇರುವುದಷ್ಟೆ.

ಅತ್ರಾಗತಿಂ ವಾಂಛಂತೋ ಮುನಯಃ ಕ್ಷೀಣಕಲ್ಮಷಾಃ ।
ತಪೋನಿಷ್ಠಾಶ್ಚ ತಿಷ್ಠಂತಿ ಯಾವದಾಭೂತಸಂಪ್ಲವಂ ॥ ೧೮ ॥
ಚತುರ್ದಶಸು ಲೋಕೇಷು ಸೃಷ್ಟಾನಾಂ ಪ್ರಾಣಿನಾಂ ಹಿ ಯತ್ ।
ಚೈತನ್ಯಾದಿವಿಚಿತ್ರಾಣಿ ಸರ್ವೇಷಾಮಾಶ್ರಯೋ ಹ್ಯಸೌ ॥ ೧೯ ॥
ಜಾನನ್ನಪಿ ಹಿ ತತ್ಕಾರ್ಯಂ ಮಾನಯನ್ನೃಪಸತ್ತಮಂ ।
ಉವಾಚ ಪರಮಪ್ರೀತ ಇಂದ್ರದ್ಯುಮ್ನಂ ಪಿತಾಮಹಃ ॥ ೨೦ ॥
ಕಿಮರ್ಥಮಾಗತೋಽಸ್ಯತ್ರ ತದ್ಬ್ರೂಹಿ ಹೃದಯಸ್ಥಿತಂ ।
ಮಯಿ ದೃಷ್ಟೇ ನ ದುಷ್ಪ್ರಾಪಮಮೃತಂ ಕಿಂ ನು ವಾಂಛಿತಂ ॥ ೨೧ ॥

ಇಂದ್ರದ್ಯುಮ್ನ ಉವಾಚ :—

ಅಂತರ್ಯಾಮಿನ್ನಿ ಭಗವಂಸ್ತ್ವದಜ್ಞಾತಂ ಕುತೋ ಭವೇತ್ ।
ತಥಾಪಿ ಪ್ರಶ್ನೋ ಯೋ ನಾಥ ಮಯ್ಯನುಕ್ರೋಶ ಏವ ಸಃ ॥ ೨೨ ॥
ಮೂರ್ಧನ್ಯಾಧಾಯ ತವಾನುಜ್ಞಾಂ ಕಥಿತಂ ತವ ಸೂನುನಾ
ಇಷ್ಟಾಃ ಸಹಸ್ರಂ ಕ್ರತವಸ್ತದಂತೇ ದಾರುದೇಹಭೃತ್ ॥ ೨೩ ॥

---

೧೮. ಕ್ಷೀಣಕಲ್ಮಷರಾಗಿ ತಪೋನಿಷ್ಠರೂ ಆದ ಮುನಿಗಳು ಇಲ್ಲಿಗೆ ಬರಬೇಕೆಂದು ಬಯಸಿ ಪ್ರಳಯದವರೆಗೂ ಕಾದಿರುತ್ತಾರೆ.

೧೯. ಎಲೈ ದೊರೆಯೇ! ಈ ಬ್ರಹ್ಮಲೋಕವು ಈಗ ಸೃಷ್ಟಿಯಾಗಿರುವ ಹದಿನಾಲ್ಕು ಲೋಕಗಳಲ್ಲಿರುವ ಚಿತ್ರ ವಿಚಿತ್ರಚೈತನ್ಯವನ್ನೊಳಕೊಂಡಿರುವ ಸಮಸ್ತ ಪ್ರಾಣಿಗಳಿಗೂ ಆಶ್ರಯವಾಗಿರುವುದು.''

೨೦–೨೧. ಎಲೈ ವಿಪ್ರರೇ! ಪಿತಾಮಹನಿಂತು ನುಡಿದು ಆ ಇಂದ್ರದ್ಯುಮ್ನರಾಜನು ಏತಕ್ಕಾಗಿ ಬಂದಿರುವನೆಂಬ ವಿಷಯವೆಲ್ಲವನ್ನೂ ಮೊದಲೇ ತಿಳಿದಿದ್ದನಾದರೂ ಅವನನ್ನು ಸನ್ಮಾನಿಸುತ್ತ ಪರಮಪ್ರೀತನಾಗಿ, "ಅಯ್ಯಾ ದೊರೆಯೇ! ನೀನೀಗ ಇಲ್ಲಿಗೈತಂದ ಕಾರಣವೇನು? ನಿನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ತಿಳಿಸು. ನನ್ನನ್ನು ಕಂಡಬಳಿಕ ಯಾರೊಬ್ಬರಿಗೂ ಹೊಂದಲಸದಳವಾದ ಅಮೃತವೂ ಸುಲಭಸಾಧ್ಯವೇ ಆಗುವುದು. ಎಂದಬಳಿಕ ಯಾವ ಇಷ್ಟಾರ್ಥವುತಾನೆ ಕೈಗೂಡುವುದಿಲ್ಲವು?'' ಎಂದು ಕೇಳಿದನು.

೨೨. ಇಂದ್ರದ್ಯುಮ್ನನು ಹೇಳುತ್ತಾನೆ:—"ಎಲೈ ಕಮಲಾಸನನೇ! ಸಮಸ್ತ ಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ನಿನಗೆ ತಿಳಿಯದಿರುವ ಸಂಗತಿಯೇನುಂಟು? ಆದರೂ ನೀನು ಈ ರೀತಿ ನನ್ನನ್ನು ಪ್ರಶ್ನಿಸಿರುವುದು ನನ್ನ ಮೇಲೆ ನಿನಗಿರುವ ದಯೆಯಿಂದಲೇ ಹೊರತು ಮತ್ತೆಬೇರೆಯಲ್ಲವು.

೨೩. ಭೋ ಬ್ರಹ್ಮನ್! ನಿನ್ನ ಪುತ್ರನಾದ ಈ ನಾರದಮಹರ್ಷಿಯು ನಿನ್ನ ಅಪ್ಪಣೆಯನ್ನು ನನಗೆ ತಿಳಿಸಿದಂತೆಯೇ ನಾನದನ್ನು ಶಿರಸಾವಹಿಸಿ ಸಹಸ್ರಾಶ್ವ

ಆವಿರ್ಬಭೂವ ಭಗವಾನ್ಭೂತಭವ್ಯಭವತ್ಪ್ರಭುಃ ।
ತ್ವದನುಗ್ರಹಸಂಪತ್ತಿವಶಾದೇವಾವಲೋಕಯನ್ ॥ ೨೪ ॥
ತಾದೃಶಂ ಪುಂಡರೀಕಾಕ್ಷಂ ಯೇನ ತ್ವಲ್ಲೋಕಮಾಗತಃ ।
ಯಸ್ಯಾರಬ್ಧೋ ಮಯಾ ದೇವ ಪ್ರಾಸಾದಸ್ತತ್ರ ಚೇತ್ಸ್ವಯಂ ॥ ೨೫ ॥
ಗತ್ವಾ ದೇವಂ ಜಗನ್ನಾಥಂ ಸ್ಥಾಪಯಿಷ್ಯಸಿ ಚೇತ್ಪ್ರಭೋ ।
ತ್ವದನುಗ್ರಹಸ್ತು ಸಫಲೋ ಭವೇನ್ಮೇ ಲೋಕಭಾವನ ॥ ೨೬ ॥
ಏತದರ್ಥಂ ಜಗತ್ಸ್ವಾಮಿನ್ನಾರದೇನ ಸಹಾಧುನಾ ।
ತ್ವತ್ಪಾದಪದ್ಮಯುಗಳಂ ದ್ರಷ್ಟುಂ ತ್ವಲ್ಲೋಕಮಾಗತಃ ॥ ೨೭ ॥
ಪ್ರಸೀದ ಮಾಂ ಕುರುಷ್ವೇದಂ ಜಗನ್ನಾಥಸ್ತ್ವಮೇವ ಹಿ ।
ತ್ವಮೇವ ಸ ಜಗನ್ನಾಥೋ ನ ಭೇದೋ ಯುವಯೋರ್ವಿಭೋ ॥ ೨೮ ॥
ಸ್ಥಾಪ್ಯಃ ಸ್ಥಾಪಯಿತಾ ಚಾಸಿ ವೇದ್ಯೋ ವೇದಯಿತಾ ಭವಾನ್ ॥ ೨೯ ॥

ಜೈಮಿನಿರುವಾಚ :—

ಏವಂ ವಿಜ್ಞಾಪನಾಂತೇ ತು ದುರ್ವಾಸಾಃ ಸ ಮಹಾಮುನಿಃ ।
ಪ್ರಣಮ್ಯ ಸಾಷ್ಟಾಂಗಪಾತಂ ಕೃತಾಂಜಲಿರುಪಸ್ಥಿತಃ ।
ಪ್ರೋವಾಚ ವಿನಯಾನ್ನೀಚೋ ಧಾತಾರಂ ಜಗತಾಂ ಗುರುಂ ॥ ೩೦ ॥

---

ಮೇಧಯಾಗಗಳನ್ನು ಮಾಡಿದೆನು. ಅದು ಸಮಾಪ್ತವಾದ ಬಳಿಕ ಭೂತಭವ್ಯಭವತ್‌ಪ್ರಭುವಾದ ಶ್ರೀಮನ್ನಾರಾಯಣಮೂರ್ತಿಯು ದಾರುದೇಹಧಾರಿಯಾಗಿ ಆವಿರ್ಭವಿಸಿದನು.

೨೪–೨೭. ಓ ಕಮಲಾಸನ! ನಿನ್ನ ಅನುಗ್ರಹೈಶ್ವರ್ಯದಿಂದಲೇ ಅಂತು ಆವಿರ್ಭವಿಸಿದ ಪುಂಡರೀಕಾಕ್ಷನನ್ನು ಕಣ್ತುಂಬ ನೋಡಿದವನಾಗಿ ನಿನ್ನ ಲೋಕಕ್ಕೆ ಬಂದಿರುವೆನು. ಯಾರ ಅನುಗ್ರಹದಿಂದ ನಾನು ಈ ಕಾರ್ಯವನ್ನು ಮೊದಲು ಮಾಡಿದೆನೋ ಆ ನಿನ್ನ ಅನುಗ್ರಹವು ಸಾಕ್ಷಾತ್ತಾಗಿರುವುದಾದರೆ, ಎಲೈ ಪ್ರಭುವೇ! ನೀನೇ ಸಾಕ್ಷಾತ್ತಾಗಿ ಭೂಲೋಕಕ್ಕೆ ಬಿಜಮಾಡಿಸಿ ಆ ಜಗನ್ನಾಥಸ್ವಾಮಿಯನ್ನು ಸ್ಥಾಪಿಸಿದರೆ ಅದು ಸಫಲವಾಗುವುದು. ಓ ಲೋಕಭಾವನನಾದ ಬ್ರಹ್ಮದೇವಾ! ಇದಕ್ಕಾಗಿಯೇ ನಾನು ಸ್ವಾಮಿಯಾದ ನಿನ್ನ ಅಡಿದಾವರೆಗಳನ್ನು ಸಂದರ್ಶಿಸಲು ನಿನ್ನ ಈ ಸತ್ಯಲೋಕಕ್ಕೆ ಬಂದಿರುವೆನು.

೨೮–೨೯. ದೇವಾ! ನನ್ನ ಮೇಲೆ ಅನುಗ್ರಹವನ್ನು ತೋರು. ನೀನೇ ಜಗನ್ನಾಥನಾಗಿರುವೆ. ಆ ಜಗನ್ನಾಥನೇ ನೀನು. ನಿಮ್ಮಿಬ್ಬರಲ್ಲಿ ನನಗಾವ ಭೇದವೂ ಕಾಣುವುದಿಲ್ಲವು. ಸ್ಥಾಪಿಸಲ್ಪಡಬೇಕಾದವನೂ, ಸ್ಥಾಪಿಸುವವನೂ, ತಿಳಿಯಲ್ಪಡಬೇಕಾದವನೂ, ತಿಳಿಸುವವನೂ ನೀನೇ ಆಗಿರುವೆ.''

೩೦. ಜೈಮಿನಿಯು ಹೇಳುತ್ತಾನೆ:— ಇಂದ್ರದ್ಯುಮ್ನಮಹಾರಾಜನು ಬ್ರಹ್ಮ

**ವಿಭೋ ದ್ವಾರಪ್ರವೇಶೇಽತ್ರ ದೌವಾರಿಕನಿವಾರಿತಾಃ ।**
**ಲೋಕಪಾಲಾಃ ಸ ಪಿತರಸ್ತಥಾ ಮನ್ವಂತರಾಧಿಪಾಃ ॥ ೩೧ ॥**
**ತಿಷ್ಠಂತಿ ದೀನಜನವತ್ಸುಚಿರಾಲ್ಲೋಕಭಾವನ ।**
**ತದಾಜ್ಞಾಪಯ ಪಶ್ಯಂತು ತವ ಪಾದಸರೋರುಹಂ ॥ ೩೨ ॥**
**ತಚ್ಛ್ರುತ್ವಾ ದೇವದೇವಸ್ತು ತದಾ ದೂರ್ವಾಸಸೋ ವಚಃ ।**
**ಪ್ರಹಸ್ಯ ವಚನಂ ಪ್ರಾಹ ನೈಷಾಂ ಪ್ರಸ್ತಾವ ಏವ ಹಿ ॥ ೩೩ ॥**
**ಇಂದ್ರದ್ಯುಮ್ನೇನ ಸ್ಪರ್ಧಂತೇ ಕಿಂ ತು ಮೋಹವಶಾನುಗಾಃ ।**
**ಜೀವನ್ಮುಕ್ತೋಽಯಂ ನೃಪತಿಃ ಕ್ಷೀಣಕರ್ಮಾಘಸಂಹತಿಃ ॥ ೩೪ ॥**
**ಮತ್ಸಂತತೇಃ ಪಂಚಮೋಽಯಂ ವೈಷ್ಣವೋ ವಿಷ್ಣುತತ್ಪರಃ ।**
**ಏತೇ ಹಿ ಸುಖಭೋಗಾಯ ಕರ್ಮಣಾ ಪ್ರಾಪ್ತಪೌರುಷಾಃ ॥ ೩೫ ॥**
**ಅತ್ರಾಗತಿಂ ಪ್ರಾರ್ಥಯಂತಸ್ತಪಸ್ತಪ್ತ್ವಾ ಹಿ ದೇವತಾಃ ।**
**ಮಮಾನುಗ್ರಹತ ಏತೇ ಆಯಾತಾ ಮದುಪಾಸನೇ ॥ ೩೬ ॥**

---

ದೇವನಿಗೆ ಈ ರೀತಿ ವಿಜ್ಞಾಪನೆಮಾಡಿ ಮುಗಿಸಿದ ತರುವಾಯ ಆ ಸಭೆಯಲ್ಲಿದ್ದ ದುರ್ವಾಸಮಹಾಮುನಿಯು ಬ್ರಹ್ಮನಿಗೆ ಸಾಷ್ಟಾಂಗಪ್ರಣಾಮವಂಗೈದು ಕೈಜೋಡಿಸಿಕೊಂಡು ಬಳಿಗೈದಿ ನಮ್ರತೆಯಿಂದ ಮೆಲ್ಲಗೆ ಆ ಜಗದ್ಗುರುವಾದ ಬ್ರಹ್ಮನನ್ನು ಕುರಿತು ಹೇಳತೊಡಗಿದನು.

೩೧–೩೨. "ಎಲೈ ಪ್ರಭುವೇ! ಲೋಕಪಾಲಕರೂ, ಪಿತೃದೇವತೆಗಳೂ, ಮನ್ವಂತರಾಧಿಪತಿಗಳೂ, ಓ ಲೋಕಭಾವನಾ! ದ್ವಾರಪಾಲಕರಿಂದ ತಡೆಗೊಳಿಸಿದ ಪ್ರವೇಶವುಳ್ಳವರಾಗಿ ಕೇವಲ ದೀನಮಾನವರಂತೆ ಹೊರಗಡೆಯೇ ಕಾದಿರುತ್ತಾರೆ. ಆದುದರಿಂದವರನ್ನು ಒಳಕ್ಕೆ ಪ್ರವೇಶಗೊಳಿಸಲು ಆಜ್ಞಾಪಿಸು. ಅವರೂ ನಿನ್ನ ಪಾದಕಮಲಗಳನ್ನು ಸಂದರ್ಶಿಸಲಿ!"

೩೩–೩೪. ಇಂತು ನುಡಿದ ದುರ್ವಾಸಮಹಾಮುನಿಯ ಮಾತುಗಳನ್ನಾಲಿಸಿ ದೇವದೇವನಾದ ಆ ಕಮಲಾಸನನು ನಕ್ಕು ನುಡಿದನು:—"ಎಲೈ ಮುನಿಯೇ! ಈ ಸಂದರ್ಭದಲ್ಲಿ ಅವರ ಪ್ರಸ್ತಾಪವೇ ಬೇಕಾಗಿಲ್ಲ. ಅವರೆಲ್ಲರೂ ಈ ಇಂದ್ರದ್ಯುಮ್ನಮಹಾರಾಜನೊಡನೆ ಹುರುಡಿಸುತ್ತಾರೆ. ಈತನಾದರೋ ಜೀವನ್ಮುಕ್ತನು; ಈತನ ಕರ್ಮಗಳೂ, ಪಾಪಸಮೂಹವೂ ನಶಿಸಿಹೋಗಿರುತ್ತವೆ.

೩೫. ಅಲ್ಲದೆಯೇ ಈ ಭೂಪನು ನನ್ನ ಸಂತತಿಯಲ್ಲಿ ಐದನೆಯವನು. ವೈಷ್ಣವನು, ಆ ಮಹಾವಿಷ್ಣುವಿನಲ್ಲಿಯೇ ನೆಲೆಗೊಂಡ ಮನವುಳ್ಳವನು. ನೀನು ಪ್ರಸ್ತಾಪಿಸಿದ ಈ ಇಂದ್ರಾದಿಗಳಾದರೋ ಕೇವಲ ಸುಖಭೋಗಕ್ಕಾಗಿ ವಿವಿಧ ಕರ್ಮಗಳನ್ನಾಚರಿಸಿ ಪೌರುಷವನ್ನು ಸಂಪಾದಿಸಿರುವವರು.

೩೬. ಇವರೆಲ್ಲರೂ ಈ ಸತ್ಯಲೋಕಕ್ಕೆ ಬರಬಯಸಿ ಪ್ರಾರ್ಥಿಸಿ ತಪಸ್ಸು

ತಥಾಪಿ ತ್ವದನುಜ್ಞಾತಾ ಆಯಾಂತು ಮಮ ದರ್ಶನೇ ।
ತತಃ ಪ್ರವಿಷ್ಟಾಸ್ತೇ ಸರ್ವೇ ದೂರ್ವಾಸವಚನೇನ ವೈ ॥ ೩೭ ॥
ದೂರಾತ್ಪ್ರಣೇಮುರ್ಬ್ರಹ್ಮಾಣಂ ಗಾಯಕಾನಾಂ ಸಮೀಪತಃ ।
ಇಂದ್ರದ್ಯುಮ್ನಂ ನರಪತಿಂ ಸಂಲಪಂತಂ ಕೃತಾಂಜಲಿಂ ॥ ೩೮ ॥
ತಾಂಲ್ಲೋಕಪಾಲಾನ್ಪ್ರಣತಾನ್ಕಟಾಕ್ಷೇಣ ಜಗತ್ಪ್ರಭುಃ ।
ಅನುಜಗ್ರಾಹ ಕಥಯನ್ನಿಂದ್ರದ್ಯುಮ್ನಂ ಸಸಾದರಂ ॥ ೩೯ ॥
ರಾಜನ್ಕೃತಸ್ತ್ವಯಾ ಸತ್ಯಂ ಪ್ರಾಸಾದೋ ಭಗವತ್ಸ್ಥಿತೌ ।
ನಾಯಂ ಕಾಲಸ್ತಥಾ ರಾಜ್ಯಂ ನ ವಾ ತ್ವತ್ಸಂತತಿರ್ನೃಪ ॥ ೪೦ ॥
ಗೀತಗಾನಾವಸರತೋ ಭೂಯಾನ್ಕಾಲೋ ಗತಸ್ತವ ।
ಮನ್ವಂತರೋ ಹಿ ದಿವ್ಯಾನಾಂ ಯುಗಾನಾಮೇಕಸಪ್ತತಿಃ ॥ ೪೧ ॥
ತವ ವಂಶೋಽಪಿ ವಿಚ್ಛಿನ್ನಃ ಕೋಟಿಶಃ ಕ್ಷಿತಿಪಾ ಗತಾಃ ।
ದೇವೋಽಂತಿಮಶ್ಚ ಪ್ರಾಸಾದೋ ದ್ವಯಮತ್ರ ವಿಶಿಷ್ಯತೇ ॥ ೪೨

---

ಗಳನ್ನು ಮಾಡಿ ನನ್ನ ಅನುಗ್ರಹದಿಂದಲೇ ನನ್ನನ್ನು ಸೇವಿಸಲೋಸುಗ ಬಂದಿರುವ ದೇವತೆಗಳಲ್ಲವೆ?

೩೭. ಅದಂತಿರಲಿ. ಆದರೂ ನೀನು ಹೇಳಿದೆಯಾಗಿ ಇವರೆಲ್ಲರೂ ನಿನ್ನಿಂದ ಆಜ್ಞಪ್ತರಾಗಿ ನನ್ನ ದರ್ಶನಕ್ಕಾಗಿ ಒಳಕ್ಕೆ ಬರಲಿ.'' ಬ್ರಹ್ಮದೇವನಿಂತು ನುಡಿದ ಬಳಿಕ ದುರ್ವಾಸಮುನಿಯು ಆ ದ್ವಾರಪಾಲಕರಿಗೆ ಆಜ್ಞಾಪಿಸಲು ಅವರು ಆ ಇಂದ್ರಾದಿಗಳೆಲ್ಲರನ್ನೂ ಸಭೆಗೆ ಬೀಳ್ಕೊಟ್ಟರು.

೩೮. ಇಂತು ಪ್ರವೇಶಿಸಿದ ತರುವಾಯ ಅವರು ಕೃತಾಂಜಲಿಯಾದ ಇಂದ್ರದ್ಯುಮ್ನನೊಡನೆ ಗಾಯಕರ ಸಮೀಪದಲ್ಲಿ ಸಲ್ಲಪಿಸುತ್ತಿದ್ದ ಬ್ರಹ್ಮದೇವನನ್ನು ಕಂಡು ದೂರದಿಂದಲೇ ನಮಸ್ಕರಿಸಿದರು.

೩೯. ಆಗಲಾ ಜಗತ್ಪ್ರಭುವು ಪ್ರಣತರಾದ ಆ ಲೋಕಪಾಲಕರನ್ನು ಕಟಾಕ್ಷಿಸಿ ಅನುಗ್ರಹಿಸಿ ತರುವಾಯ ಆದರಪೂರ್ವಕವಾಗಿ ಇಂದ್ರದ್ಯುಮ್ನನನ್ನು ಕುರಿತಿಂತೆಂದನು:—

೪೦. ''ಎಲೈ ರಾಜನೇ! ನೀನು ಭಗವಂತನನ್ನು ನೆಲೆಗೊಳಿಸಲೋಸುಗ ಪ್ರಾಸಾದವನ್ನು ಕಟ್ಟಿಸಿರುವುದೇನೋ ದಿಟವೇ ಸರಿ. ಆದರೆ ಆಗಿನ ಕಾಲವು ಈಗಿರುವುದಿಲ್ಲವು. ನಿನ್ನ ರಾಜ್ಯವಾಗಲಿ, ನಿನ್ನ ಸಂತತಿಯಾಗಲಿ ಈಗಿರುವುದಿಲ್ಲವು.

೪೧–೪೨. ಈ ಗೀತಗಾನದ ಅವಸರದಲ್ಲಿ ಬಹಳಕಾಲವು ಕಳೆದುಹೋಗಿರುವುದು. ಎಪ್ಪತ್ತೊಂದು ಮಹಾಯುಗಗಳನ್ನೊಳಕೊಂಡ ಒಂದು ಮನ್ವಂತರವು ಕಳೆದುಹೋಗಿರುವುದು. ನಿನ್ನ ವಂಶದಲ್ಲಿಯೂ ಸಹ ವಿಚ್ಛಿತ್ತಿಯುಂಟಾಗಿರುವುದು. ಕೋಟ್ಯಂತರ ಸಂಖ್ಯೆಯ ದೊರೆಗಳು ಈಗಾಗಲೇ ಆಗಿಹೋಗಿದ್ದಾರೆ. ಅಲ್ಲಿ

ದ್ವಿತೀಯಸ್ಯ ಮನೋರಾದಿಯುಗಂ ಸ್ವಾರೋಚಿಷಸ್ಯ ತು ।
ಮಮಾಂತಿಕೇಽತ್ರ ವಸತೋ ಮೃತ್ಯುರ್ವಾ ನ ಜರಾ ತಥಾ ॥ ೪೩ ॥
ವಿಪರ್ಯಯಮೃತೂನಾಂ ವಾ ನ ಕಾಲಪರಿಣಾಮತಾ ।
ತದ್ಗಚ್ಛ ಭೂಮೌ ರಾಜೇಂದ್ರ ದೇವಂ ಪ್ರಾಸಾದಮೇವ ಚ ॥ ೪೪ ॥
ಆತ್ಮಸಂಬಂಧಿನಂ ಕೃತ್ವಾ ಪುನರಾಯಾಹಿ ವೇಗವಾನ್ ।
ಅಥವಾಽಹಂ ಪ್ರಯಾಸ್ಯಾಮಿ ತವಾನುಪದಮೇವ ಹಿ ॥ ೪೫ ॥
ತ್ವಮಗ್ರತೋ ಧರಾಂ ಗತ್ವಾ ಯಾವತ್ಸಂಭಾರಮೃದ್ಧಿಮತ್ ।
ಕರಿಷ್ಯಸಿ ಮಹಾಭಾಗ ತಾವದೇವ ವ್ರಜಾಮ್ಯಹಂ ॥ ೪೬ ॥
ಇತ್ಯಾಜ್ಞಾಪ್ಯೇಂದ್ರದ್ಯುಮ್ನಂ ತಂ ಭಗವಾನ್ಸಪಿತಾಮಹಃ ।
ದೇವಾನ್ಪುರಃಸ್ಥಿತಾನಾಹ ವಿನಯಾನತಕಂಧರಾನ್ ॥ ೪೭ ॥
ಬದ್ಧಾಂಜಲೀನ್ಸಾಧ್ವಸಾಂಸ್ತಾಂಸ್ತತ್ಪಾದನ್ಯಸ್ತವೀಕ್ಷಣಾನ್ ।
ಉವಾಚ ಭಗವಾನ್ ಸ್ನಿಗ್ಧಗಂಭೀರವಚಸಾ ದ್ವಿಜಾಃ ॥ ೪೮ ॥

---

ನಿನಗೆ ಪ್ರತ್ಯಕ್ಷನಾದ ಜಗನ್ನಾಥಸ್ವಾಮಿಯೂ, ನೀನು ಕಟ್ಟಿಸಿದ ಅಂತಿಮ ಪ್ರಾಸಾದವೂ ಈ ಎರಡು ಮಾತ್ರವೇ ಉಳಿದಿರುವುದು.

೪೩–೪೫. ಈಗ ಮನುಗಳಲ್ಲಿ ಎರಡನೆಯವನಾದ ಸ್ವಾರೋಚಿಷ ಮನ್ವಂತರದಲ್ಲಿ ಆದಿಯುಗವಾದ ಕೃತಯುಗವು ನಡೆಯುತ್ತಿರುವುದು. ಅಯ್ಯಾ ಭೂಪಾಲನೇ! ನೀನು ನನ್ನ ಸನ್ನಿಧಿಯಲ್ಲಿರುವೆಯಾದುದರಿಂದ ನಿನಗೆ ಮೃತ್ಯುವಾಗಲಿ, ಮುಪ್ಪಾಗಲಿ ಘಟಿಸಿರುವುದಿಲ್ಲವು. ಅಲ್ಲದೆ ಋತುಗಳ ಬದಲಾವಣೆಗಳಾಗಲಿ, ಕಾಲಪರಿಣಾಮವಾಗಲಿ ಸಂಭವಿಸಿರುವುದಿಲ್ಲವು. ಆದುದರಿಂದೆಲೈ ರಾಜೇಂದ್ರನೇ! ನೀನೀಗ ಭೂಲೋಕಕ್ಕೆ ತೆರಳು. ನೀನು ಭೂಲೋಕಕ್ಕೆ ಹೋಗಿ ಅಲ್ಲಿ ನೀನು ಕಟ್ಟಿಸಿರುವ ದೇವಾಲಯವನ್ನೂ, ನಿನ್ನ ಭಕ್ತಿಗೆ ಮೆಚ್ಚಿ ನಿನಗೆ ಪ್ರತ್ಯಕ್ಷನಾದ ಜಗನ್ನಾಥಸ್ವಾಮಿಯನ್ನೂ ನಿನ್ನದಾಗಿಸಿಕೊಂಡು ಜಾಗ್ರತೆಯಾಗಿ ಮತ್ತೆ ಬರುವವನಾಗು. ಅಥವಾ ನಿನ್ನ ಹಿಂದೆಯೇ ನಾನೂ ಬರುತ್ತೇನೆ.

೪೬. ಎಲೈ ಮಹಾರಾಜನೇ! ಈಗ ನೀನು ಮುಂದಾಗಿಯೇ ಭೂಲೋಕಕ್ಕೆ ಹೋಗಿ ಸ್ವಾಮಿಯ ಪ್ರತಿಷ್ಠೆಗಾಗಿ ಸಂಭಾರಗಳನ್ನೆಲ್ಲ ಸಂಪದ್ಭರಿತವಾಗಿ ಸಿದ್ಧಪಡಿಸಿದ ತರುವಾಯ ನಾನು ಇಲ್ಲಿಂದ ಹೊರಟುಬರುತ್ತೇನೆ.''

೪೭–೪೮. ಎಲೈ ವಿಪ್ರರೇ! ಬ್ರಹ್ಮದೇವನು ಇಂದ್ರದ್ಯುಮ್ನರಾಜನಿಗಿಂತೆಂದು ಆಜ್ಞಾಪಿಸಿದ ಬಳಿಕ ವಿನಯದಿಂದ ತಲೆಬಾಗಿ ಕೈಗಳನ್ನು ಜೋಡಿಸಿಕೊಂಡು ಭಯಭಕ್ತಿಭರಿತರಾಗಿ ಆತನಡಿಗಳಲ್ಲಿಯೇ ನೆಟ್ಟ ದೃಷ್ಟಿಯುಳ್ಳವರಾಗಿ ತನ್ನ ಮುಂಗಡೆ ನಿಂತಿರುವ ದೇವತೆಗಳನ್ನು ಕುರಿತು ಪ್ರೀತಿಪುರಸ್ಸರವಾಗಿ ಗಂಭೀರವಾದ ಮಾತುಗಳಿಂದ, ''ಎಲೈ ದೇವತೆಗಳಿರಾ! ದೇವಲೋಕವಾದ

**ಕಿಮರ್ಥಮಾಗತಾಃ ಸರ್ವೇ ಯುಗಪತ್ತು ದಿವೌಕಸಃ ।**
**ಯತ್ಕಾರ್ಯಂ ವೋ ಮಯಾ ಕಾರ್ಯಂ ವಿಜ್ಞಾಪಯತ ಮಾಚಿರಂ ॥**

**ಜೈಮಿನಿರುವಾಚ :—**

**ಇತಿ ಶ್ರುತ್ವಾ ವಚೋ ಧಾತುಸ್ತ್ರಿದಶಾ ವಿಗತಜ್ವರಾಃ ।**
**ಪ್ರತ್ಯೂಚುರ್ಹರ್ಷಿತಾಃ ಸರ್ವೇ ಭಗವಂತಂ ಪಿತಾಮಹಂ ॥ ೫೦ ॥**

**ದೇವಾ ಊಚುಃ :—**

**ಉಪಾಸಿತಃ ಪುರಾಸ್ಮಾಭಿರ್ಯೋ ನೀಲಾದ್ರೌ ಮಣೀಮಯಃ ।**
**ಅಂತರ್ಹಿತಃ ಕಥಂ ದೇವ ಇದಾನೀಂ ದಾರುದೇಹಧೃಕ್ ॥ ೫೧ ॥**
**ಆವಿರ್ಭೂತಃ ಕ್ರತೋರಂತ ಇಂದ್ರದ್ಯುಮ್ನಸ್ಯ ಭೂಪತೇಃ ।**
**ಏತಸ್ಯ ಕಾರಣಂ ಜ್ಞಾತುಂ ಭವತಃ ಪಾದಪಂಕಜಂ ॥ ೫೨ ॥**
**ಆರಾಧಿತುಮಿಹಾಯಾತಾಃ ಪ್ರಸೀದ ಕಥಯಸ್ವ ತತ್ ।**
**ಇತ್ಯುಕ್ತೋ ತ್ರಿದಶೈರ್ದೇವೋ ಭಗವಾನ್ಪಂಕಜಾಸನಃ ॥ ೫೩ ॥**
**ರಹಸ್ಯಮೇತದ್ಭೋ ದೇವಾಃ ಕಸ್ಯಚಿನ್ನೋದಿತಂ ಪುರಾ ।**
**ಸರ್ವೇ ಸಮುದಿತಾ ಯಸ್ಮಾದಪೃಚ್ಛತ ಚಿರಾಗತಾಃ ॥ ೫೪ ॥**

---

ಸ್ವರ್ಗದಲ್ಲಿ ಸುಖವಾಗಿ ವಾಸಿಸುತ್ತಿರುವ ನೀವೆಲ್ಲರೂ ಈ ರೀತಿ ಏಕಕಾಲದಲ್ಲಿಯೇ ಗುಂಪುಗೂಡಿ ಇಲ್ಲಿಗೆ ಬಂದ ಕಾರಣವೇನು ? ನನ್ನಿಂದ ನಿಮಗಾವ ಕಾರ್ಯವಾಗ ಬೇಕಾಗಿರುವುದೋ ಅದನ್ನು ಜಾಗ್ರತೆಯಾಗಿ ಹೇಳಿರಿ'' ಎಂದನು.

೫೦. ಜೈಮಿನಿಯು ಹೇಳುತ್ತಾನೆ:—ಇಂತೆಂದು ನುಡಿದ ಬ್ರಹ್ಮದೇವನ ಮಾತುಗಳನ್ನು ಕೇಳಿ ಆ ದೇವತೆಗಳೆಲ್ಲರೂ ಭಯವನ್ನು ತೊರೆದು ಸಂತುಷ್ಟಾಂತ ರಂಗರಾಗಿ ಆ ಭಗವಂತನಿಗೆ ಅರಿಕೆಮಾಡಿದರು.

೫೧. ದೇವತೆಗಳು ಹೇಳುತ್ತಾರೆ:—"ಎಲೈ ಬ್ರಹ್ಮದೇವಾ! ಪೂರ್ವದಲ್ಲಿ ನೀಲಾಚಲದಲ್ಲಿ ನಮ್ಮ ಸೇವೆಯನ್ನು ಸ್ವೀಕರಿಸಿ ಮಣಿಮಯಮೂರ್ತಿಯಾಗಿ ವಿರಾಜಿಸುತ್ತಿದ್ದ ದೇವದೇವನು ಅದೃಶ್ಯನಾಗಿ ಇದೀಗ ದಾರುಮಯಮೂರ್ತಿ ಯಾಗಿ ಆವಿರ್ಭವಿಸಿದುದೆಂತು ?

೫೨–೫೩. ಆ ಸ್ವಾಮಿಯು ಇಂದ್ರದ್ಯುಮ್ನರಾಜನೆಸಗಿದ ಅಶ್ವಮೇಧ ಸಹಸ್ರದ ಕಡೆಯಲ್ಲಿ ಉದ್ಭವಿಸಿದನಲ್ಲವೆ? ಇದಕ್ಕೆ ಕಾರಣವನ್ನು ತಿಳಿಯಲೋಸುಗ ನಾವು ನಿನ್ನ ಅಡಿದಾವರೆಗಳನ್ನಾರಾಧಿಸಲೈತಂದೆವು. ದೇವಾ! ಪ್ರಸನ್ನನಾಗು ; ಈ ವಿಷಯವನ್ನು ನಮಗೆ ತಿಳಿಸು.'' ಎಲೈ ವಿಪ್ರರೇ! ದೇವತೆಗಳಿಂತೆಂದು ಪ್ರಶ್ನಿಸಲು ಆ ಬ್ರಹ್ಮನಿಂತೆಂದನು :—

೫೪–೫೬. ಎಲೈ ದೇವತೆಗಳಿರಾ! ಇದು ಪರಮರಹಸ್ಯವು. ನಾನೀ ವಿಷಯ ವನ್ನು ಈ ಮೊದಲು ಯಾರಿಗೂ ಹೇಳಿರುವುದಿಲ್ಲವು. ನೀವೆಲ್ಲರೂ ಬಹಳ ಹಿಂದೆಯೇ

ತತೋ ವಃ ಕಥಯಿಷ್ಯಾಮಿ ಸುರಾಣಾಂ ಗುಹ್ಯಮುತ್ತಮಂ ।
ಪೂರ್ವೇ ಪರಾರ್ಧೇ ಭೋ ದೇವಾಃ ಕ್ಷೇತ್ರಂ ಶ್ರೀಪುರುಷೋತ್ತಮಂ ॥
ನೀಲಾಶ್ಮವಪುರಾಸ್ಥಾಯ ನ ತತ್ಯಾಜ ಜನಾರ್ದನಃ ।
ಸಾಂಪ್ರತಂ ಮೇ ದ್ವಿತೀಯಂ ತು ಪರಾರ್ಧಂ ಸಮುಪಸ್ಥಿತಂ ॥ ೫೬ ॥
ಮನುಃ ಸ್ವಾಯಂಭುವೋ ನಾಮ ಶ್ವೇತವಾರಾಹಕಲ್ಪಕೇ ।
ಪ್ರವರ್ತತೇಽಯಂ ಕಾಲೋ ವೈ ಪ್ರಾತರಾದ್ಯದಿನಸ್ಯ ಚ ॥ ೫೭ ॥
ದಾರುಮೂರ್ತಿರಯಂ ದೇವೋ ಭುವನಾನಾಂ ಹಿ ಮಧ್ಯಮೇ ।
ಮಮಾಯುಷಃ ಪ್ರಮಾಣಂ ತು ಸ್ಥಾಸ್ಯತೇ ಮಾನಯನ್ಪ್ರಭುಃ॥ ೫೮ ॥
ಮಮಾತ್ಮಾ ಏಷ ಭಗವಾನಹಮೇತನ್ಮಯಃ ಸುರಾಃ ।
ನಾವಯೋರ್ವಿದ್ಯತೇ ಕಿಂಚಿದಸ್ಮಿನ್ ಸ್ಥಾವರಜಂಗಮೇ ॥ ೫೯ ॥
ಕ್ಷೀರೋದಾರ್ಣವಮಧ್ಯೇ ಹಿ ಶ್ವೇತದ್ವೀಪೇ ಹಿ ಕಲ್ಪಕೇ ।
ಯಃ ಶೇತೇ ಯೋಗನಿದ್ರಾಂ ತಾಂ ಮಾನಯನ್ ಪುರುಷೋತ್ತಮಃ ॥
ಸ ಮೂಲಂ ಜಗತಾಮಾದಿಸ್ತಸ್ಯ ರೋಮಾಣಿ ಯಾನಿ ವೈ ।
ತಾನಿ ಕಲ್ಪದ್ರುಮಾಖ್ಯಾನಿ ಶಂಖಚಕ್ರಾಂಕಿತಾನಿ ವೈ ॥ ೬೦ ॥

---

ಬಂದು ಕಾದಿದ್ದು ಈ ವಿಷಯದಲ್ಲಿ ಉತ್ಸುಕರಾಗಿ ಪ್ರಶ್ನಿಸುತ್ತಿರುವುದರಿಂದ ದೇವತೆಗಳಾದ ನಿಮ್ಮೆಲ್ಲರಿಗೂ ರಹಸ್ಯವಾಗಿರುವ ಈ ಉತ್ತಮ ವಿಚಾರವನ್ನು ಹೇಳುವೆನು; ಕೇಳಿರಿ. ನನ್ನ ಪೂರ್ವಪರಾರ್ಧದಲ್ಲಿ ನೀಲಮಣಿಮಯದೇಹ ಧಾರಿಯಾದ ಜನಾರ್ದನಮೂರ್ತಿಯು ಶ್ರೀ ಪುರುಷೋತ್ತಮಕ್ಷೇತ್ರವನ್ನು ಬಿಟ್ಟೆಲ್ಲಿಗೂ ಹೋಗಲಿಲ್ಲವು. ಆದರೆ ಇದೀಗ ನನ್ನ ದ್ವಿತೀಯಪರಾರ್ಧವು ಬಂದಿರುವುದು.

೫೭–೫೮. ಈಗ ಶ್ವೇತವರಾಹಕಲ್ಪದ ಸ್ವಾಯಂಭುವ ಮನ್ವಂತರದಲ್ಲಿ ಮೊದಲದಿನದ ಪ್ರಾತಃಕಾಲವು ನಡೆಯುತ್ತಿರುವುದು. ಆದುದರಿಂದ ಈ ಸಮಯ ದಲ್ಲಿ ಆವಿರ್ಭವಿಸಿರುವ ದಾರುಮೂರ್ತಿಯಾದ ಈ ಜಗನ್ನಾಥಸ್ವಾಮಿಯು ಭುವನ ಮಧ್ಯದಲ್ಲಿ ನನ್ನ ಆಯುಸ್ಸಿರುವವರೆಗೂ ವಿರಾಜಿಸುತ್ತಿರುತ್ತಾನೆ.

೫೯. ಈ ಭಗವಂತನು ನನ್ನ ಆತ್ಮಸ್ವರೂಪವಾಗಿಯೇ ಇರುವನು. ನಾನೂ ಸಹ ಆ ಭಗವಂತನ ಸ್ವರೂಪನೇ ಆಗಿರುವೆನು. ಸ್ಥಾವರಜಂಗಮಾತ್ಮಕವಾದ ಈ ಜಗತ್ತಿನಲ್ಲಿ ನಮ್ಮಿಬ್ಬರಿಗೆ ಯಾವ ಭೇದವೂ ಇರುವುದಿಲ್ಲವು.

೬೦–೬೧. ಯಾವ ಪುರುಷೋತ್ತಮನು ಕ್ಷೀರಸಾಗರದ ಮಧ್ಯದಲ್ಲಿರುವ ಶ್ವೇತದ್ವೀಪದಲ್ಲಿ ಶೇಷತಲ್ಪವನ್ನಲಂಕರಿಸಿ ಯೋಗನಿದ್ರೆಯನ್ನು ಮನ್ನಿಸಿ ನಿದ್ರಿಸು ತ್ತಿರುವನೋ ಆ ಸ್ವಾಮಿಯೇ ಜಗತ್ತಿಗೆ ಮೂಲವೂ ಆದಿಯೂ ಆಗಿರುವನು.

ತನ್ಮಧ್ಯಸ್ಥೋ ಹ್ಯಯಂ ವೃಕ್ಷಶ್ಚೈತನ್ಯಾಧಿಷ್ಠಿತಃ ಸುರಾಃ ।
ಸ್ವಯಮುತ್ಪತಿತಃ ಸಿಂಧೋಃ ಸಲಿಲೇ ಸತ್ಯಪೂರುಷಃ ॥ ೬೨ ॥
ಭೋಗಾನ್ಭೋಕ್ತುಂ ತ್ರಿಲೋಕಸ್ಥಾನ್ ದಾರುವರ್ಷ್ಮಾ ಜನಾರ್ದನಃ ।
ಅನೇಕಜನ್ಮಸಾಹಸ್ರೈರ್ಭಕ್ತಿಯೋಗೇನ ಭಾವಿತಃ ॥ ೬೩ ॥
ಘೋರಸಂಸಾರನಾಶಾಯ ಮಯಾ ಪೂರ್ವಂ ಪ್ರಯಾಚಿತಃ ।
ಪುನಃ ಪುನಃ ಸೃಷ್ಟಿಲೀನಪಾಲನೋದ್ವಿಗ್ನಚೇತಸಾ ॥ ೬೪ ॥
ಅಶೇಷಕರ್ಮನಾಶಾಯ ಜಗತಾಂ ಸರ್ವಮುಕ್ತಯೇ ।
ಧಾರಣಾಧ್ಯಾನಯೋಗಾನಾಂ ದುಷ್ಕರಾಣಾಂ ವಿನಾಪಿ ಸಃ ॥ ೬೫ ॥
ಮೋಕ್ಷಾಯ ಭಗವಾನಾವಿರ್ಬಭೂವ ಪುರುಷೋತ್ತಮಃ ।
ಪ್ರಚ್ಛನ್ನಂ ವಪುರೇತಸ್ಯ ಕ್ಷೇತ್ರಂ ನಾಸ್ಮಿನ್ ವಿಚಾರಯೇತ್ ॥ ೬೬ ॥
ಧರ್ಮಗ್ರಾಹಪ್ರಮಾಣೇನ ಯಾದೃಗ್ದೃಷ್ಟಃ ಸ ಏವ ಸಃ ।
ಚತುರ್ವರ್ಗಪ್ರದೋ ದೇವೋ ಯೋ ಯಥಾ ತಂ ವಿಭಾವಯೇತ್ ॥

---

ಆತನ ರೋಮಗಳೇ ಶಂಖಚಕ್ರಾಂಕಿತಗಳಾದ ಕಲ್ಪವೃಕ್ಷಗಳೆಂದು ಪ್ರಸಿದ್ಧಿಗೊಂಡಿರುವುವು.

೬೨–೬೪. ಆ ಕಲ್ಪವೃಕ್ಷಗಳ ಮಧ್ಯದಲ್ಲಿ ಭಗವಚ್ಚೈತನ್ಯವನ್ನು ತಳೆದಿದ್ದ ಈ ವೃಕ್ಷವು ತಾನಾಗಿಯೇ ಆಕಾಶದಿಂದ ಸಮುದ್ರಜಲದಲ್ಲಿ ಬಿದ್ದಿತು. ಅಲ್ಲದೆ ಸತ್ಯಪುರುಷನಾದ ಜನಾರ್ದನನು, ಮತ್ತೆ ಮತ್ತೆ ಸೃಷ್ಟಿಕ್ರಿಯೆಯಲ್ಲಿಯೇ ತೊಡಗಿ ಉದ್ವಿಗ್ನವಾದ ಮನಸ್ಸುಳ್ಳವನಾದ ನಾನು ಅನೇಕ ಜನ್ಮಸಹಸ್ರಗಳ ತಪಸ್ಸನ್ನುಮಾಡಿ ಭಕ್ತಿಯೋಗದಿಂದ ಭಾವಿಸಿ ಬಹು ಪೂರ್ವದಲ್ಲಿಯೇ ಘೋರವಾದ ಈ ಸಂಸಾರವನ್ನು ನಾಶಗೊಳಿಸಬೇಕೆಂದು ಬೇಡಿಕೊಳ್ಳಲು ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳ ಭೋಗಗಳನ್ನು ಭೋಗಿಸುವ ಸಲುವಾಗಿ ಈ ರೀತಿ ದಾರುದೇಹಧಾರಿಯಾಗಿ ಆವಿರ್ಭವಿಸಿರುವನು.

೬೫–೬೬. ಎಲೈದೇವತೆಗಳಿರಾ! ಈ ಪರಮಾತ್ಮನಾದ ಪುರುಷೋತ್ತಮನು ಆಚರಿಸಲಸಾಧ್ಯವಾದ ಧ್ಯಾನಧಾರಣಯೋಗಗಳಾವುವೂ ಇಲ್ಲದೆಯೇ ಸಮಸ್ತ ಚರಾಚರಪ್ರಾಣಿಗಳ ಪಾಪಕ್ಷಯಕ್ಕಾಗಿಯೂ, ಮೋಕ್ಷಕ್ಕಾಗಿಯೂ ಭೂಲೋಕದಲ್ಲಿ ದಾರುದೇಹಧಾರಿಯಾಗಿ ಆವಿರ್ಭವಿಸಿರುವನು. ಈ ಪುರುಷೋತ್ತಮಕ್ಷೇತ್ರವು ಪರಮಾತ್ಮನ ಗುಪ್ತದೇಹವೇ ಆಗಿರುವುದರಿಂದ ಈ ವಿಷಯದಲ್ಲಿ ಯಾರೂ ಸಂದೇಹಪಡಬಾರದು.

೬೭. ಧರ್ಮಗ್ರಾಹಪ್ರಮಾಣದಿಂದ ಆ ಮೂರ್ತಿಯು ಹೇಗೆ ಕಾಣಿಸಿದನೋ ಹಾಗೆಯೇ ಆತನನ್ನು ಭಾವಿಸಿ ಧ್ಯಾನಿಸತಕ್ಕುದು. ಧರ್ಮಾದಿ ಚತುರ್ವಿಧ ಪುರುಷಾರ್ಥಪ್ರದನಾದ ಸ್ವಾಮಿಯನ್ನಾಗಿ ಆ ಮೂರ್ತಿಯನ್ನು ವಿಭಾವಿಸಬೇಕು.

ತದ್ದರ್ಶನಪರಿಕ್ಷೀಣಪಾಪಸಂಘಾಃ ಕ್ರಮಾದ್ಭುವಿ ।
ಭವಂತಿ ನಿರ್ಮಲಾತ್ಮಾನಃ ಪುರುಷಾ ಮುಕ್ತಿಭಾಜನಂ ॥ ೬೮ ॥

ಜೈಮಿನಿರುವಾಚ :—

ಏತಚ್ಛೃತ್ವಾ ತು ತೇ ದೇವಾಃ ಪದ್ಮಯೋನೇರ್ವಚೋಽಮೃತಂ ।
ಹೃಷ್ಟಾಃ ಸಂಚಿಂತಯಾಮಾಸುಃ ಪ್ರಹೃಷ್ಟೇನಾಂತರಾತ್ಮನಾ ॥ ೬೯ ॥
ಅಚಿರಸ್ಥಾಯಿ ದೇವತ್ವಂ ವಿಹಾಯೈತದ್ಭುವಂಗತಾಃ ।
ಅಸ್ಮಿನ್ ಕ್ಷೇತ್ರವರೇ ದೇವಮಾರಾಧ್ಯಾಮಃ ಸುಸಂಯುತಾಃ ॥ ೭೦ ॥
ಹರ್ಷಪ್ರಫುಲ್ಲವದನಾನ್ ಸುರಾನ್ ದೃಷ್ಟ್ವಾ ಪಿತಾಮಹಃ ।
ಇಂದ್ರದ್ಯುಮ್ನಾನುಗ್ರಹಾಯ ಯಃ ಪ್ರಕಾಶಂ ಗತಃ ಪ್ರಭುಃ ॥ ೭೧ ॥
ಯಾತಾತ್ರ ಪ್ರತಿಮಾತ್ವಸ್ಯ ಸ್ವಯಮೇವ ವದಿಷ್ಯತಿ ।
ವರಾನ್ ಪ್ರಾದಾಸ್ಯತಿ ಬಹೂನ್ ಭಗವಾನ್ಭಕ್ತವತ್ಸಲಃ ॥ ೭೨ ॥

---

೬೮. ದಾರುದೇಹಧರನಾಗಿ ಆವಿರ್ಭವಿಸಿರುವ ಆ ಪುರುಷೋತ್ತಮನನ್ನು ಸಂದರ್ಶನಮಾಡುವುದರಿಂದ ತಮ್ಮ ಪಾತಕಸಂಚಯುಗಳೆಲ್ಲವನ್ನೂ ಕಳೆದು ಕೊಂಡು ಭೂಲೋಕದಲ್ಲಿರುವ ಮಾನವರೆಲ್ಲರೂ ಕ್ರಮವಾಗಿ ನಿರ್ಮಲಾತ್ಮರಾಗಿ ಪುನರಾವೃತ್ತಿರಹಿತವಾದ ಮುಕ್ತಿಗೆ ಪಾತ್ರರಾಗುವರು.

೬೯. ಜೈಮಿನಿಯು ಹೇಳುತ್ತಾನೆ:—ದೇವತೆಗಳೆಲ್ಲರೂ ಬ್ರಹ್ಮನಾಡಿದ ಅಮೃತಪ್ರಾಯಗಳಾದ ಈ ಮಾತುಗಳನ್ನು ಕೇಳಿ ಸಂತೋಷಗೊಂಡು ಪ್ರಹೃಷ್ಟಾಂತರಂಗರಾಗಿ ಈ ರೀತಿ ಯೋಚಿಸಿದರು :—

೭೦. "ಎಲೈ ದೇವತೆಗಳಿರಾ! ನಮಗಿರುವ ಈ ದೇವತ್ವವು ಬಹಳ ಸ್ವಲ್ಪ ಕಾಲಮಾತ್ರವೇ ಇರತಕ್ಕುದು. ಆದುದರಿಂದ ನಾವೆಲ್ಲರೂ ನಶ್ವರವಾದ ಈ ದೇವತ್ವವನ್ನೀಗ ತೊರೆದು ಎಲ್ಲರೂ ಭೂಲೋಕಕ್ಕೆ ಹೋಗಿ ಈ ಪುರುಷೋತ್ತಮ ಕ್ಷೇತ್ರದಲ್ಲಿ ನೆಲಸಿರುವ ಶ್ರೀಜಗನ್ನಾಥಸ್ವಾಮಿಯನ್ನು ಸ್ಥಿರಮನಸ್ಕರಾಗಿ ಭಕ್ತಿಯಿಂದ ಆರಾಧಿಸೋಣ."

೭೧–೭೨. ಇಂತು ಯೋಚಿಸಿದ ಬಳಿಕ ಆನಂದದಿಂದರಳಿದ ಮುಖಗಳುಳ್ಳವರಾದ ಆ ದೇವತೆಗಳನ್ನು ಕಂಡು ಲೋಕಪಿತಾಮಹನಾದ ಬ್ರಹ್ಮದೇವನು ಅವರೆಲ್ಲರನ್ನೂ ಕುರಿತು, "ಎಲೈ ದೇವತೆಗಳಿರಾ! ಇಂದ್ರದ್ಯುಮ್ನನನ್ನು ಅನುಗ್ರಹಿಸಲೋಸುಗ ಪ್ರಭುವಾದ ಜಗನ್ನಾಥಸ್ವಾಮಿಯು ಎಲ್ಲಿ ಆವಿರ್ಭವಿಸಿ ಪ್ರಕಾಶಿಸುತ್ತಿರುವನೋ ಆ ಪುರುಷೋತ್ತಮಕ್ಷೇತ್ರಕ್ಕೆ ನೀವೆಲ್ಲರೂ ಹೋಗಿರಿ. ಅಲ್ಲಿ ಆ ಪ್ರಭುವಿನ ಪ್ರತಿಮೆಯೇ ನೀವು ನಡೆಯಬೇಕಾದ ನಡೆವಳಿಯನ್ನು ಸಾಕ್ಷಾತ್ತಾಗಿ ನುಡಿಯುತ್ತದೆ. ಅನೇಕ ವರಗಳನ್ನೂ ದಯೆಗೈಯುತ್ತದೆ. ಅಯ್ಯಾ ದೇವತೆಗಳಿರಾ! ದೇವದೇವನಾದ ಆ ಭಗವಂತನು ಭಕ್ತವತ್ಸಲನು.

ಪ್ರಾಸಾದಮಿಂದ್ರದ್ಯುಮ್ನಸ್ಯ ಪ್ರತಿಷ್ಠಾಪಯಿತುಂ ವಿಭುಂ ।
ಅಹಂ ಚಾಪಿ ಗಮಿಷ್ಯಾಮಿ ಯೂಯಂ ತತ್ರ ಪ್ರಯಾತ ವೈ ॥ ೭೩ ॥
ಇಂದ್ರದ್ಯುಮ್ನೋಽಗ್ರತೋ ಯಾತು ಪ್ರತಿಷ್ಠಾವಸ್ತುಸಂಭೃತೌ ।
ಸಹಾಯಾಸ್ತತ್ರ ಭವತ ಯೂಯಂ ಕ್ಷೀಣಾಧಿಕಾರಿಣಃ ॥ ೭೪ ॥
ಮನ್ವಂತರಂ ವ್ಯತೀತಂ ವೈ ಪ್ರಥಮಂ ಸಾಂಪ್ರತಂ ಸುರಾಃ ।
ಇಂದ್ರದ್ಯುಮ್ನೇನ ಸಹಿತಾಸ್ತತ್ರ ಗತ್ವಾ ಸುರೋತ್ತಮಾಃ ॥ ೭೫ ॥
ಪ್ರಾಸಾದಪ್ರತಿಮಾನಾಂ ಚ ವಿಧತ್ತ ಸ್ವಾಮ್ಯಮಸ್ಯ ವೈ ।
ತಸ್ಮಾತ್ಸಂಭೃತಸಂಭಾರಃ ಸಸಹಾಯೋಽಧುನಾ ಹ್ಯಸೌ ॥ ೭೬ ॥
ಅಸ್ಯ ಸಂತತಿಸಂಬಂಧಸ್ಮರಣಾದಪಿ ಭೂತಲೇ ।
ಮದಾಜ್ಞಯಾ ಪದ್ಮನಿಧಿಃ ಸಹ ಯಾಸ್ಯತಿ ಭೂತಲಂ ।
ಪ್ರತಿಷ್ಠಾಯೈ ಭಗವತಃ ಸಂಯುತೌ ಸರ್ವವಸ್ತುನಃ ॥ ೭೭ ॥
ಇಂದ್ರದ್ಯುಮ್ನೋಽಪಿ ಹೃಷ್ಟಾತ್ಮಾ ದೃಷ್ಟ್ವಾ ಬ್ರಾಹ್ಮೀಂ ಶ್ರಿಯಂ ದ್ವಿಜಾಃ ॥
ಮಹದಾಶ್ಚರ್ಯಸಂಪನ್ನಃ ಪ್ರಣಿಪತ್ಯ ಜಗದ್ಗುರುಂ ।
ತದಾಜ್ಞಾಂ ಶಿರಸಾ ಧೃತ್ವಾ ದೇವೈಃ ಕ್ಷೀಣಾಧಿಕಾರಿಭಿಃ ॥ ೭೮ ॥

---

೭೩. ಈ ಇಂದ್ರದ್ಯುಮ್ನಮಹಾರಾಜನು ಕಟ್ಟಿಸಿರುವ ಆ ಪ್ರಭುವಿನ ಪ್ರಾಸಾದವನ್ನು ಪ್ರತಿಷ್ಠೆಗೊಳಿಸಲೋಸುಗ ನಾನೂ ಅಲ್ಲಿಗೆ ಬರುವೆನು. ನೀವು ಮೊದಲೇ ಅಲ್ಲಿಗೆ ಹೊರಡಿರಿ.

೭೪. ಎಲೈ ದೇವತೆಗಳಿರಾ! ಈ ಇಂದ್ರದ್ಯುಮ್ನನು ಮುಂದಾಗಿ ಪ್ರಯಾಣ ಮಾಡಲಿ. ಕ್ಷೀಣಾಧಿಕಾರಿಗಳಾದ ನೀವೆಲ್ಲರೂ ಈ ಮಹಾರಾಜನ ಪ್ರತಿಷ್ಠಾ ಸಂಭಾರ ಸಂಗ್ರಹಕಾರ್ಯಕ್ಕೆ ಸಹಾಯಕರಾಗಿರಿ.

೭೫-೭೭. ಎಲೈ ಸುರರೇ! ಇದೀಗ ಪ್ರಥಮ ಮನ್ವಂತರವು ಕಳೆದುಹೋಗಿರುವುದು. ನೀವು ಪ್ರಕೃತದಲ್ಲಿ ಈ ಇಂದ್ರದ್ಯುಮ್ನನೊಡನೆ ಭೂಲೋಕಕ್ಕೆ ಹೋಗಿ ಪ್ರಾಸಾದಪ್ರತಿಮೆಗಳ ಸ್ವಾಮ್ಯವನ್ನೀತನಿಗೆ ಉಂಟುಮಾಡಿಕೊಡಿರಿ. ಅದಾದತರುವಾಯ ಈತನು ತನ್ನ ಸಂತತಿಯ ಸಂಬಂಧದ ನೆನಪನ್ನು ಹೊಂದಿ ಪ್ರತಿಷ್ಠೆಗೆ ಬೇಕಾದ ಸಂಭಾರಗಳನ್ನು ಒದಗಿಸಿಕೊಳ್ಳುವುದರಲ್ಲಿ ಸಹಾಯನಾಗುವನು. ಇಷ್ಟೆಯಲ್ಲದೆ ನನ್ನ ಆಜ್ಞೆಯಂತೆ ಪದ್ಮನಿಧಿಯಾದ ಕುಬೇರನು ಭೂಲೋಕಕ್ಕೆ ತೆರಳುವನು. ಅವನು ಭಗವಂತನ ಪ್ರತಿಷ್ಠೆಗಾಗಿ ಬೇಕಾಗುವ ಸಕಲ ವಸ್ತುಗಳನ್ನೂ ಸಂಗ್ರಹಿಸುವುದರಲ್ಲಿ ಪ್ರಯತ್ನಿಸುವನು.''

೭೮-೮೦. ಎಲೈ ಬ್ರಾಹ್ಮಣೋತ್ತಮರಿರಾ! ಇಂತು ಬ್ರಹ್ಮದೇವನು ಅಪ್ಪಣೆ ಕೊಡಿಸಿದ ಬಳಿಕ ಸಂತೋಷಗೊಂಡ ಮನಸ್ಸುಳ್ಳವನಾದ ಇಂದ್ರದ್ಯುಮ್ನ ಮಹಾರಾಜನೂ ಸಹ ಆ ಬ್ರಹ್ಮಲೋಕದೈಸಿರಿಯನ್ನು ಕಂಡು ಮಹದಾಶ್ಚರ್ಯ

**ಆಜಗಾಮ ಭುವಂ ವಿಪ್ರಾ ವಿಧಿನಾ ಚಾನುಮೋದಿತಃ ॥ ೮೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನಕೃತ ಬ್ರಹ್ಮಸಂದರ್ಶನವರ್ಣನಂ"ನಾಮ ತ್ರಯೋವಿಂಶೋಽಧ್ಯಾಯಃ**

---

ಸಂಪನ್ನನಾಗಿ ಆ ಜಗದ್ಗುರುವಿಗೆ ಪ್ರಣಾಮಮಾಡಿ ಆತನ ಆಣತಿಯನ್ನು ಶಿರಸಾ ಧರಿಸಿದವನಾಗಿ ಕ್ಷೇಣಾಧಿಕಾರಿಗಳಾಗಿದ್ದ ಆ ದೇವತೆಗಳೊಡನೆಯೆ ಭೂಲೋಕಕ್ಕೈತಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನಕೃತ ಬ್ರಹ್ಮಸಂದರ್ಶನ ವರ್ಣನ"ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

**ಇಂದ್ರದ್ಯುಮ್ನಕೃತ ಭಗವತ್ಸ್ತುತಿಃ— ದಾರುಮೂರ್ತಿ ಸ್ಥಾಪನಾಯ ಭಗವದ್ವಚನಾದಿವರ್ಣನಂ**

ಜೈಮಿನಿರುವಾಚ :—

**ಆಗತ್ಯ ಚ ಜಗನ್ನಾಥಂ ಚಿರಾದುತ್ಕಂಠಮಾನಸಃ ।**
**ದಂಡವತ್ಪ್ರಣನಾಮಾಸೌ ಘನರೋಮಾಂಚಕಂಚುಕಃ ॥ ೧ ॥**
**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಪ್ರಣತಾರ್ತಿವಿನಾಶಾಯ ಚತುರ್ವರ್ಗೈಕಹೇತವೇ ॥ ೨ ॥**
**ಹಿರಣ್ಯಗರ್ಭ ಪುರುಷ ಪ್ರಧಾನವ್ಯಕ್ತರೂಪಿಣೇ ।**
**ಓಂ ನಮೋ ವಾಸುದೇವಾಯ ಶುದ್ಧಜ್ಞಾನಸ್ವರೂಪಿಣೇ ॥ ೩ ॥**
**ಇತ್ಯುಚ್ಚರನ್ ಸ್ತುತಿಂ ಭೂಪಃ ಸಾನಂದಾಶ್ರುವಿಲೋಚನಃ ।**
**ಪ್ರದಕ್ಷಿಣಂ ಪುನಃ ಕುರ್ವನ್ನನಾಮ ಚ ಪುನಃ ಪುನಃ ॥ ೪ ॥**

---

### ಕನ್ನಡದ ಅನುವಾದ

**ಇಂದ್ರದ್ಯುಮ್ನಕೃತ ಭಗವತ್ಸ್ತುತಿ— ದಾರುಮೂರ್ತಿ ಸ್ಥಾಪನೆಗಾಗಿ ಭಗವಂತನು ಆಜ್ಞಾಪಿಸಿದುದು**

೧. ಜೈಮಿನಿಯು ಹೇಳುತ್ತಾನೆ:—ಎಲೈ ಮುನಿಗಳಿರಾ! ಕೇಳಿರಿ. ಆ ಬಳಿಕ ಇಂದ್ರದ್ಯುಮ್ನಮಹಾರಾಜನು ಬ್ರಹ್ಮಲೋಕದಿಂದ ಹೊರಟು ಭೂಲೋಕಕ್ಕೈತಂದು ಪುರುಷೋತ್ತಮಕ್ಷೇತ್ರವನ್ನು ಸೇರಿ. ಅಲ್ಲಿ ಶ್ರೀಜಗನ್ನಾಥಸ್ವಾಮಿಯನ್ನು ಸಂದರ್ಶಿಸಿ ಬಹಳಕಾಲವಾಗಿದ್ದುದರಿಂದ ಆತನನ್ನು ಕಂಡೊಡನೆಯೇ ಉತ್ಕಂಠಿತಮನಸ್ಕನೂ, ರೋಮಾಂಚಿತಗಾತ್ರನೂ ಆಗಿ ಒಡನೆಯೇ ದೀರ್ಘದಂಡಪ್ರಣಾಮವನ್ನೆಸಗಿದನು.

೨. "ಬ್ರಹ್ಮಣ್ಯದೇವನಾಗಿ, ಗೋಬ್ರಾಹ್ಮಣರಿಗೆ ಹಿತಂಕರನಾಗಿ, ಪ್ರಣತರಾದ ಭಕ್ತಜನರ ಸಂಕಟಗಳನ್ನು ಪರಿಹರಿಸುವವನಾಗಿ, ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ದಯೆಗೈಯುವ ಪ್ರಭುವಾಗಿರುವ ಓ ಜಗನ್ನಾಥನೇ! ನಿನಗೆ ನಮಸ್ಕಾರವು!!

೩. ಅಕಾರ, ಉಕಾರ, ಮಕಾರಸಹಿತವಾದ ಪ್ರಣವಸ್ವರೂಪನೂ, ಸತ್ವರಜಸ್ತಮೋಗುಣಯುಕ್ತನಾಗಿ ಸೃಷ್ಟಿಸ್ಥಿತಿಲಯಗಳನ್ನು ಮಾಡುವ ಸರ್ವಶಕ್ತನೂ, ವಾಸುದೇವನೂ, ಶುದ್ಧಜ್ಞಾನಸ್ವರೂಪನೂ, ಹಿರಣ್ಯಗರ್ಭನೂ, ಪ್ರಧಾನಪುರುಷನೂ, ಅವ್ಯಕ್ತರೂಪನೂ ಆಗಿರುವ ಓ ಪರಮಾತ್ಮ! ನಿನಗೆ ನಮಸ್ಕಾರವು!!"

೪. ಎಲೈ ದ್ವಿಜರೇ! ಇಂತು ಸ್ತುತಿಸುತ್ತ ಆ ಭೂಪನು ಆನಂದಭಾಷ್ಪ

ತತೋಽನ್ಯಾದೇವತಾ ಯಾ ವೈ ತತ್ರಾಗಚ್ಛನ್ಮುದಾನ್ವಿತಾಃ ।
ತುಷ್ಟುವುಃ ಪ್ರಣತಾ ದೇವಂ ಕೃತಾಂಜಲಿಪುಟಾ ಮುದಾ ॥ ೫ ॥

ದೇವಾ ಊಚುಃ:—

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ಸರ್ವತೋ ವ್ಯಾಪ್ಯ ಅಧ್ಯತಿಷ್ಠದ್ದಶಾಂಗುಲಂ ॥ ೬ ॥
ಯಃ ಪುಮಾನ್ಪರಮಂ ಬ್ರಹ್ಮ ಪರಮಾತ್ಮೇತಿ ಗೀಯತೇ ।
ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ಪುರುಷ ಏವ ತತ್ ॥ ೭ ॥
ಏತಾವಾನಸ್ಯ ಮಹಿಮಾ ಜ್ಯಾಯಾನೇಷ ಪುಮಾನ್ ಪ್ರಭುಃ ।
ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೮ ॥
ಛಂದಾಂಸಿ ಜಜ್ಞಿರೇ ತ್ವತ್ತಸ್ತ್ವತ್ತೋ ಯಜ್ಞಪುಮಾನಪಿ ।
ತ್ವತ್ತೋಽಶ್ವಾಶ್ಚ ವ್ಯಜಾಯಂತ ಗಾವೋ ಮೇಷಾದಯಸ್ತಥಾ ॥ ೯ ॥

---

ಗಳು ತುಂಬಿದ ಕಂಗಳುಳ್ಳವನಾಗಿ ಭಕ್ತಿಭರಿತನಾಗಿ ಪುನಃ ಪುನಃ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದನು.

೫. ತರುವಾಯ ಇತರ ದೇವತೆಗಳೆಲ್ಲರೂ ಅಲ್ಲಿಗೈತಂದು ಆ ಸ್ವಾಮಿಯನ್ನು ನಮಸ್ಕರಿಸಿ ಕೃತಾಂಜಲಿಪುಟರಾಗಿ ಸಂತೋಷದಿಂದೀಪ್ರಕಾರವಾಗಿ ಸ್ತುತಿಸಿದರು.

೬. ದೇವತೆಗಳು ಸ್ತುತಿಸುತ್ತಾರೆ:—"ಸರ್ವಪ್ರಾಣಿಗಳ ಸಮಷ್ಟಿರೂಪನೂ, ಬ್ರಹ್ಮಾಂಡರೂಪನೂ, ವಿರಾಜನೂ ಆಗಿರುವ ಓ ಪರಬ್ರಹ್ಮಮೂರ್ತಿಯೇ! ಸಹಸ್ರ (ಅನಂತ) ಶೀರ್ಷನೂ, ಪರಮಪುರುಷನೂ, ಸಹಸ್ರಾಕ್ಷನೂ, ಸಹಸ್ರಪಾದನೂ, ಭೂಮಂಡಲವೆಲ್ಲವನ್ನೂ ವ್ಯಾಪಿಸಿ ಅದಕ್ಕೂ ಮೀರಿ ಹತ್ತುಅಂಗುಲಗಳಷ್ಟು ಪ್ರದೇಶವನ್ನು ಅಧಿಷ್ಠಿಸಿರುವವನೂ ನೀನೇ!

೭. ಪರಮಾತ್ಮನೆಂದು ಗಾನಮಾಡಲ್ಪಡುವ ಬ್ರಹ್ಮವೇ ಪರಮಪುರುಷನಾದ ನೀನಾಗಿರುವೆ! ಪುರುಷನಾದ ನೀನೇ ಕಳೆದುದು, ಈಗ ನಡೆವುದು, ಮುಂದಾಗುವುದೂ ಆದ ಸಮಸ್ತವೂ ಆಗಿರುವೆ.

೮. ಪರಮಪುರುಷನಾದ ನಿನ್ನ ಮಹಿಮೆಯು ಇಂತಹದು; ಇನ್ನೂ ಅತಿಶಯವಾದುದು. ನೀನು ಪುರುಷೋತ್ತಮನು; ಪ್ರಭುವೇ! ನಿನ್ನ ಒಂದಂಶವೇ ಸಮಸ್ತ ಭೂತಗಳೂ ಆಗಿರುವುವು. ನಿನ್ನ ಮೂರಂಶಗಳು ದೇವಲೋಕದಲ್ಲಿ ಅಮೃತವಾಗಿರುವುವು.

೯. ಎಲೈ ಸ್ವಾಮಿಯೇ! ನಿನ್ನಿಂದಲೇ ಛಂದಶ್ಶಾಸ್ತ್ರಗಳು ಹುಟ್ಟಿದುವು; ನಿನ್ನಿಂದಲೇ ಯಜ್ಞಪುರುಷನೂ ಉದಿಸಿದನು. ಕುದುರೆಗಳೂ, ಆಕಳುಗಳೂ ಮೇಕೆ ಮೊದಲಾದ ಯಜ್ಞಪಶುಗಳೂ ನಿನ್ನಿಂದಲೇ ಜನಿಸಿದವು.

ಬ್ರಾಹ್ಮಣಾ ಮುಖತೋ ಜಾತಾ ಬಾಹುಜಾ ಕ್ಷತ್ರಿಯಾಸ್ತಥ ।
ವಿಶಸ್ತವೋರುಜಾ ಪದ್ಭ್ಯಾಂ ತಥಾ ಶೂದ್ರಾಃ ಸಮಾಗತಾಃ ॥ ೧೦ ॥
ಮನಸಶ್ಚಂದ್ರಮಾ ಜಾತಶ್ಚಕ್ಷುಷಸ್ತೇ ದಿವಾಕರಃ ।
ಕರ್ಣಾಭ್ಯಾಂ ಶ್ವಸನಃ ಪ್ರಾಣೈರ್ಜಿಹ್ವಾಯಾ ಹವ್ಯವಾಡಪಿ ॥ ೧೧ ॥
ನಾಭಿತೋ ಗಗನಂ ದ್ಯೌಶ್ಚ ಮೂರ್ಧ್ನಸ್ತೇ ಸಮವರ್ತತ ।
ಪಾದಾಭ್ಯಾಂ ತೇ ಧರಾ ಜಾತಾ ದಿಶಶ್ಚಾಷ್ಟೌ ಶ್ರುತೇರ್ಗತಾಃ ॥ ೧೨ ॥
ಸಪ್ತಾಸನ್ಪರಿಧಯಸ್ತ್ವತ್ತ ಏಕವಿಂಶತ್ಸಮಿಚ್ಚ ವೈ ।
ಚರಾಚರಾಃ ಸರ್ವಭಾವಾಸ್ತ್ವತ್ತ ಏವ ಹಿ ಜಜ್ಞಿರೇ ॥ ೧೩ ॥
ತ್ವಮೇವ ಜಗತಾಂ ನಾಥಸ್ತ್ವಮೇವ ಪರಿಪಾಲಕಃ ।
ಉಗ್ರರೂಪಶ್ಚ ಸಂಹರ್ತಾ ತ್ವಮೇವ ಪರಮೇಶ್ವರ ॥ ೧೪ ॥
ತ್ವಮೇವ ಯಜ್ಞೋ ಯಜ್ಞಾಂಶಸ್ತ್ವಂ ಯಜ್ಞೇಶಃ ಪರಾತ್ಪರಃ ।
ಶಬ್ದಬ್ರಹ್ಮಪರಂ ತ್ವಂ ಹಿ ಶಬ್ದಬ್ರಹ್ಮಾಸಿ ವಿಶ್ವರಾಟ್ ॥ ೧೫ ॥

---

೧೦. ಬ್ರಾಹ್ಮಣರು ನಿನ್ನ ಮುಖದಿಂದಲೂ, ಕ್ಷತ್ರಿಯರು ನಿನ್ನ ಬಾಹುಗಳಿಂದಲೂ, ವೈಶ್ಯರು ನಿನ್ನ ತೊಡೆಗಳಿಂದಲೂ, ಶೂದ್ರರು ನಿನ್ನ ಕಾಲುಗಳಿಂದಲೂ ಹುಟ್ಟಿ ಬಂದರು.

೧೧. ನಿನ್ನ ಮನಸ್ಸಿನಿಂದ ಚಂದ್ರನೂ, ಕಣ್ಣುಗಳಿಂದ ಸೂರ್ಯನೂ, ಕಿವಿಗಳಿಂದ ವಾಯುವೂ, ಪ್ರಾಣಗಳಿಂದಲೂ, ಜಿಹ್ವೆಯಿಂದಲೂ ಯಜ್ಞೇಶ್ವರನೂ ಹುಟ್ಟಿದರು.

೧೨. ನಿನ್ನ ನಾಭಿಪ್ರದೇಶದಿಂದ ಗಗನವೂ, ಮೂರ್ಧಾನದಿಂದ ನಾಕಲೋಕವೂ ಉಂಟಾದುವು. ನಿನ್ನಡಿಗಳಿಂದ ಈ ಧರೆಯುಂಟಾಯಿತು. ನಿನ್ನ ಕಿವಿಗಳಿಂದ ಎಂಟು ದಿಕ್ಕುಗಳುಂಟಾದುವು.

೧೩. ನಿನ್ನಿಂದಲೇ ಗಾಯತ್ರ್ಯಾದಿ ಸಪ್ತಪರಿಧಿಗಳೂ, ಇಪ್ಪತ್ತೊಂದು ದ್ವಾದಶಮಾಸಗಳು, ಪಂಚಋತುಗಳು, ಸ್ವರ್ಗ ಮರ್ತ್ಯ ಪಾತಾಳಲೋಕಗಳೂ, ಆದಿತ್ಯ ಎಂಬ ಸಮಿತ್ತುಗಳೂ, ಚರಾಚರಗಳಾದ ಸರ್ವಭಾವಗಳೂ ನಿನ್ನಿಂದಲೇ ಉಂಟಾದುವು.

೧೪. ನೀನೇ ಜಗತ್ತುಗಳಿಗೆಲ್ಲ ನಾಥನು! ನೀನೇ ಅವುಗಳನ್ನು ಪರಿಪಾಲಿಸುವವನು. ಓ ಪರಮೇಶ್ವರ! ನೀನು ಉಗ್ರರೂಪಧರನಾಗಿ ಆ ಜಗತ್ತುಗಳನ್ನು ಸಂಹರಿಸುವವನೂ ಆಗಿರುವೆ.

೧೫. ಎಲೈ ವಿರಾಟ್ ಪುರುಷನೇ! ಯಜ್ಞಸ್ವರೂಪನೂ, ಯಜ್ಞಾಂಶನೂ, ಯಜ್ಞೇಶನೂ, ಪರಾತ್ಪರನೂ, ಶಬ್ದಬ್ರಹ್ಮಪರನೂ ನೀನೇ ಆಗಿ ಸಾಕ್ಷಾತ್ ಶಬ್ದಬ್ರಹ್ಮವೇ ನೀನಾಗಿರುವೆ!

ಸ್ವರಾಟ್ ಸಂಮ್ರಾಟ್ ಜಗನ್ನಾಥ ವಿರಾಡಸಿ ಜಗತ್ಪತೇ ।
ಅಧಶ್ಚೋರ್ಧ್ವಂ ಚ ತಿರ್ಯಕ್ತ್ವಂ ತ್ವಯಾ ವ್ಯಾಪ್ತಂ ಜಗನ್ಮಯ ॥ ೧೬ ॥
ಪ್ರಾಪ್ನುವಂತಿ ಪರಂ ಸ್ಥಾನಂ ತ್ವಾಂ ಯಜಂತಶ್ಚ ಯಾಜ್ಞಿಕಾಃ ।
ಭೋಜ್ಯಂ ಭೋಕ್ತಾ ಹವಿರ್ಹೋತಾ ಹವನಂ ತ್ವಂ ಫಲಪ್ರದಃ ॥ ೧೭ ॥
ಸಮಸ್ತಕರ್ಮಭೋಕ್ತಾ ತ್ವಂ ಸರ್ವಕರ್ಮಾತ್ಮಕಃ ಪ್ರಭೋ ।
ಸರ್ವಕರ್ಮೋಪಕರಣಂ ಸರ್ವಕರ್ಮಫಲಪ್ರದಃ ॥ ೧೮ ॥
ಕರ್ಮಪ್ರೇರಯಿತಾ ತ್ವಂ ಹಿ ಧರ್ಮಕರ್ಮಾರ್ಥಸಿದ್ಧಿದಃ ।
ತ್ವಾಮೃತೇ ಮುಕ್ತಿದಃ ಕೋಽನ್ಯೋ ಹೃಷೀಕೇಶ ನಮೋಽಸ್ತು ತೇ ॥

ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ
ಸಹಸ್ರಪಾದಾಕ್ಷಿಶಿರೋರುಬಾಹವೇ ।
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ
ಸಹಸ್ರಕೋಟೀ ಯುಗಧಾರಿಣೇ ನಮಃ ॥ ೨೦ ॥

---

೧೬. ಓ ಜಗನ್ನಾಥ! ಸ್ವರಾಜನೂ, ಸಮ್ರಾಜನೂ ನೀನೇ! ಓ ಜಗತ್ಪತಿಯೆ! ನೀನು ಜಗನ್ಮಯನಾದುದರಿಂದ ಈ ಬ್ರಹ್ಮಾಂಡದ ಕೆಳಗೂ ಮೇಲೂ, ಅಡ್ಡಲಾಗಿಯೂ ನೀನೇ ವ್ಯಾಪಿಸಿರುತ್ತೀಯೆ!

೧೭. ಯಾಜ್ಞಿಕರು ನಿನ್ನನ್ನುದ್ದೇಶಿಸಿ ಯಜ್ಞಗಳನ್ನು ಮಾಡುತ್ತ ಕಡೆಗೆ ನಿನ್ನ ಪರಮಪದವಿಯನ್ನು ಪಡೆಯುತ್ತಾರೆ. ಭುಜಿಸಬೇಕಾದ ವಸ್ತುವೂ, ಭುಜಿಸುವವನೂ, ಹವಿಸ್ಸೂ, ಹೋತೃವೂ, ಹವನವೂ ಎಲ್ಲವೂ ಫಲಪ್ರದನಾದ ನೀನೇ ಆಗಿರುವೆ!

೧೮–೧೯. ಎಲೈ ಪ್ರಭುವೇ! ಸಮಸ್ತ ಕರ್ಮಗಳ ಫಲಗಳನ್ನೂ ಭೋಗಿಸುವವನೂ ನೀನೇ! ಸಮಸ್ತಕರ್ಮಗಳ ಸ್ವರೂಪದಿಂದಿರುವವನೂ ನೀನೇ! ಸಮಸ್ತ ಕರ್ಮಗಳಿಗೂ ಉಪಕರಣರೂಪನಾಗಿ, ನೀನೇ ಸರ್ವಕರ್ಮಫಲಪ್ರದನೂ ಆಗಿರುವೆ. ಸಕಲ ಕರ್ಮಗಳಿಗೂ ಪ್ರೇರಕನಾಗಿ ಆ ಕರ್ಮಗಳನ್ನು ಮಾಡಿದ ಬಳಿಕ ಅವವುಗಳಿಗೆ ಅನುಗುಣವಾದ ಫಲಗಳನ್ನನುಗ್ರಹಿಸುವ ಸ್ವಾಮಿಯೂ ನೀನೇ! ಧರ್ಮಕಾಮಾರ್ಥಗಳು ಭಕ್ತರಿಗೆ ಸಿದ್ಧಿಸುವಂತೆಸಗುವವನೂ ನೀನೆ! ಓ ಹೃಷೀಕೇಶ! ನಿನ್ನನ್ನು ಬಿಟ್ಟರೆ ಮೋಕ್ಷವನ್ನು ದಯೆಪಾಲಿಸುವವನು ಮತ್ತಾವನಿರುವನು? ಪ್ರಭೂ! ನಿನಗೆ ನಮಸ್ಕಾರವು!

೨೦. ಅನಂತನೂ, ಸಹಸ್ರಮೂರ್ತಿಯೂ, ಸಹಸ್ರನೇತ್ರ, ಸಹಸ್ರಪಾದ, ಸಹಸ್ರಬಾಹುಗಳುಳ್ಳವನೂ, ಸಹಸ್ರನಾಮಗಳುಳ್ಳ ಪರಮಪುರುಷನೂ, ಶಾಶ್ವತನೂ, ಸಹಸ್ರಕೋಟಿ ಯುಗಗಳನ್ನು ಧರಿಸಿ ಪ್ರವರ್ತನಗೊಳಿಸಿ ಸೃಷ್ಟ್ಯಾದಿಗಳಿಗೆ ಕಾರಣನಾದವನೂ ಆದ ಓ ಪುರುಷೋತ್ತಮಾ! ನಿನಗೆ ನಮೋ ನಮಃ!!

ವಯಂ ಚ್ಯುತಾಧಿಕಾರಾಸ್ತ್ವಾಂ ಪ್ರಪನ್ನಾಃ ಶರಣಂ ಪ್ರಭೋ ।
ತ್ರಾಹಿ ನಃ ಪುಂಡರೀಕಾಕ್ಷ ಅಗತೀನಾಂ ಗತಿರ್ಭವ ॥ ೨೧ ॥
ಸಂಸಾರಪತಿತಸ್ಯೈಕೋ ಜಂತೋಸ್ತ್ವಂ ಶರಣಂ ಪ್ರಭೋ ।
ಸ್ವಸೃಷ್ಟೌ ತ್ವಾದೃಶೋ ನಾಸ್ತಿ ಯೋ ದೀನಪರಿಪಾಲಕಃ ॥ ೨೨ ॥
ದೀನಾನಾಥೈಕಶರಣಂ ಪಿತಾ ತ್ವಂ ಜಗತಃ ಪ್ರಭೋ ।
ಪಾತಾ ಪೋಷ್ಯಾ ತ್ವಮೇವೇಶ ಸರ್ವಾಪದ್ವಿನಿವಾರಕಃ ॥ ೨೩ ॥
ತ್ರಾಹಿ ವಿಷ್ಣೋ ಜಗನ್ನಾಥ ತ್ರಾಹಿ ನಃ ಪರಮೇಶ್ವರ ।
ತ್ವಾಮೃತೇ ಕಮಲಾಕಾಂತ ಕಃ ಶಕ್ತಃ ಪರಿರಕ್ಷಣೇ ॥ ೨೪ ॥
ಅಂತರ್ಯಾಮಿನ್ನಮಸ್ತೇಽಸ್ತು ಸರ್ವತೇಜೋನಿಧೇ ನಮಃ ॥ ೨೫ ॥
ಇತಿ ಸ್ತುವಂತಸ್ತೇ ದೇವಾಃ ಪ್ರಣಿಪತ್ಯ ಪುನಃ ಪುನಃ ।
ಇಂದ್ರದ್ಯುಮ್ನೇನ ಸಹಿತಾಃ ಬಹಿರ್ಭೂಯ ದ್ವಿಜೋತ್ತಮಾಃ ॥ ೨೬ ॥
ಕ್ಷೇತ್ರಂ ಶ್ರೀನರಸಿಂಹಸ್ಯ ಗತ್ವಾ ತಂ ಪ್ರಣಿಪತ್ಯ ಚ ।
ನಮಸ್ಕೃತ್ಯ ಪರಾಂ ಭಕ್ತಿಂ ಕೃತ್ವಾಭ್ಯರ್ಚ್ಯ ನೃಕೇಸರಿಂ ॥ ೨೭ ॥

---

೨೧. ಪ್ರಭುವೇ! ಅಧಿಕಾರಗಳಿಂದ ಚ್ಯುತರಾಗಿ ನಾವೆಲ್ಲರೂ ಪ್ರಪನ್ನರಾಗಿ ನಿನ್ನನ್ನು ಶರಣುಹೊಂದಿರುವೆವು! ಎಲೈ ಪುಂಡರೀಕಾಕ್ಷನೇ! ಗತಿಯೇ ಇಲ್ಲದೆ ನೀನೇ ಗತಿಯೆಂದು ನಂಬಿರುವ ನಮಗೆ ಗತಿಯಾಗು.

೨೨. ಸಂಸಾರಸಾಗರದಲ್ಲಿ ಬಿದ್ದಿರುವ ಜಂತುವಿಗೆ ಶರಣಾಗುವವನು ಪ್ರಭುವಾದ ನೀನೊಬ್ಬನೇ! ನೀನೇ ಸೃಷ್ಟಿಸಿದ ಈ ಜಗತ್ತಿನಲ್ಲಿ ನಿನಗೆ ಸಮಾನನಾದ ದೀನಪರಿಪಾಲಕನು ಮತ್ತಾವನೂ ಇರುವುದಿಲ್ಲವು.

೨೩. ಎಲೈ ಜಗತ್ಪ್ರಭುವೇ! ನೀನು ದೀನರಿಗೂ, ಅನಾಥರಿಗೂ ತಂದೆಯಾದವನು. ಜಗದೀಶ! ಸಮಸ್ತ ಆಪತ್ತುಗಳನ್ನೂ ನಿವಾರಿಸುವವನಾದ ನೀನೇ ಸಮಸ್ತವನ್ನೂ, ಸಮಸ್ತರನ್ನೂ ಪಾಲಿಸುವವನು; ಪಾಲಿಸಬೇಕಾದ ಜಗತ್ಸ್ವರೂಪನೂ ನೀನೇ ಆಗಿರುವೆ.

೨೪. ಎಲೈ ವಿಷ್ಣುವೇ! ಜಗನ್ನಾಥ! ಪರಮೇಶ್ವರಾ! ನಮ್ಮನ್ನು ಕಾಪಾಡು. ಕಮಲಾಕಾಂತ! ನಿನ್ನನ್ನು ಬಿಟ್ಟರೆ ನಮ್ಮನ್ನು ಕಾಪಾಡಲು ಸಮರ್ಥರಾದವರಾರಿರುವರು?

೨೫. ಓ ಸರ್ವಭೂತಾಂತರ್ಯಾಮಿಯೇ! ಸಮಸ್ತ ತೇಜಸ್ಸುಗಳಿಗೂ ನಿಧಿಸ್ವರೂಪನಾಗಿರುವ ನಿನಗೆ ನಮೋ ನಮಃ!"

೨೬–೨೮. ಎಲೈ ಮಹರ್ಷಿಗಳಿರಾ! ಆ ದೇವತೆಗಳಿಂತು ಸ್ತುತಿಸಿದ ಬಳಿಕ ಅಡಿಗಡಿಗೂ ಆ ಪರಮಾತ್ಮನನ್ನು ನಮಸ್ಕರಿಸುತ್ತ ಇಂದ್ರದ್ಯುಮ್ನನೊಡನೆ ಹೊರಟವರಾಗಿ ಶ್ರೀನೃಸಿಂಹಮೂರ್ತಿಯಕ್ಷೇತ್ರಕ್ಕೆ ಹೋಗಿ ಅಲ್ಲಿ ಆ ನೃಸಿಂಹ

ನೀಲಾಚಲಾದ್ರೇಃ ಶಿಖರಂ ಯತ್ರ ಪ್ರಾಸಾದ ಉತ್ತಮಃ ।
ಯಯುಸ್ತೇ ಪದ್ಮನಿಧಿನಾ ಸಾರ್ಧಂ ಸಂಭಾರಕಾರಣಾತ್ ॥ ೨೮ ॥
ದದೃಶುಸ್ತೇ ಮಹಾಪ್ರಾಂಶುಂ ವ್ಯಾಪ್ತಂ ಗಗನಮಂಡಲೇ ।
ಉತ್ತಿಷ್ಠಂತಂ ಇಂದ್ರಗಿರಿಂ ರೋದ್ಧುಂ ಭಾನೋರ್ಗತಿಂ ಕಿಮು ॥ ೨೯ ॥
ವ್ಯಶ್ನುವಾನಂ ದಿಶಃ ಸರ್ವಾ ವಿಚಿತ್ರಘಟನೋಜ್ಜ್ವಲಂ ।
ಬಹುಕಾಲವ್ಯತಿಕ್ರಾಂತಸ್ವಸ್ತಿಭಂಗಿವಿಚಿತ್ರಕಂ ॥ ೩೦ ॥
ತತಶ್ಚ ಚಿಂತಯಾಮಾಸ ಇಂದ್ರದ್ಯುಮ್ನಃ ಸ ವೈಷ್ಣವಃ ।
ಘಟನಾರ್ಥೇ ಮಯಾ ಯಾತಃ ಸತ್ಯಲೋಕಮಿತಃ ಪುರಾ ॥ ೩೧ ॥
ಸುಚಿರಾದ್ದೃಷ್ಟಿಪಥಗಃ ಪೂರ್ಣಃ ಪ್ರಾಸಾದ ಉತ್ತಮಃ ।
ಅನುಗ್ರಹಾದ್ದೈವ ದೇವಸ್ಯ ನಾತ್ರ ಮಾನುಷಪೌರುಷಂ ॥ ೩೨ ॥
ಮನ್ವಂತರಸಮಾಪ್ತಿಶ್ಚ ಸೂರ್ಯಚಂದ್ರೇಂದ್ರರೋಧಿಕಾ ।
ತಥಾಪಿ ತಿಷ್ಠತೇ ಚಾಯಂ ಪ್ರಾಸಾದೋ ಹ್ಯೇಷ ದುರ್ಲಭಃ ॥ ೩೩ ॥

---

ಸ್ವಾಮಿಗೆ ಭಕ್ತಿಪೂರ್ವಕವಾಗಿ ಪೂಜೆಯನ್ನು ಸಲ್ಲಿಸಿ, ಉತ್ತಮವಾದ ಪ್ರಾಸಾದವು ಕಂಗೊಳಿಸುತ್ತಲಿದ್ದ ನೀಲಾಚಲದ ಶಿಖರಕ್ಕೆ ಜಗನ್ನಾಥಸ್ವಾಮಿಯ ಪ್ರತಿಷ್ಠಾಪನೆಯ ಸಂಭಾರಗಳ ನಿಮಿತ್ತವಾಗಿ ಕುಬೇರನೊಡಗೂಡಿ ಬಂದರು.

೨೯. ಅಲ್ಲಿಯಾದರೋ ಅವರೆಲ್ಲರೂ ಗಗನಮಂಡಲದಲ್ಲಿ ಎತ್ತೆತ್ತಲೂ ವ್ಯಾಪಿಸಿರುವುದಾಗಿಯೂ, ಬಹು ಎತ್ತರವಾದುದಾಗಿಯೂ, ಸೂರ್ಯನ ಗಮನವನ್ನು ತಡೆಯಲು ಮೇಲಕ್ಕೆದ್ದಿರುವ ವಿಂಧ್ಯಗಿರಿಯಂತಿರುವುದಾಗಿಯೂ ಕಂಗೊಳಿಸುತ್ತಿದ್ದ ಆ ದಿವ್ಯಪ್ರಾಸಾದವನ್ನು ಕಂಡರು.

೩೦. ಆ ಪ್ರಾಸಾದವು ದಶದಿಶೆಗಳಲ್ಲಿಯೂ ಹರಡಿ, ವಿಚಿತ್ರವಾದ ರಚನಾ ವಿಶೇಷದಿಂದ ಬೆಳಗಿ, ಬಹುಕಾಲ ಕಳೆದರೂ ಕಳೆಗುಂದದೆ ಮಂಗಳಕರವಾಗಿಯೂ, ವಿಚಿತ್ರವಾಗಿಯೂ ವಿರಾಜಿಸುತ್ತಿದ್ದಿತು.

೩೧–೩೩. ಆಗ ಮಹಾವಿಷ್ಣುಭಕ್ತನಾದ ಇಂದ್ರದ್ಯುಮ್ನನಾದರೋ ಈ ರೀತಿ ಯೋಚಿಸಿದನು: "ಹಿಂದೆ ನಾನು ಈ ದೇವಾಲಯದ ರಚನೆಗಾಗಿಯೆ ಇಲ್ಲಿಂದ ಸತ್ಯಲೋಕಕ್ಕೆ ಹೋದೆನು. ಬಹಳಕಾಲವಾದ ಬಳಿಕ ಈಗ ನೋಡಲಾಗಿ ಈ ಉತ್ತಮಪ್ರಾಸಾದವು ಪೂರ್ಣವಾಗಿರುವುದು. ಇದು ದೇವದೇವನ ಅನುಗ್ರಹದಿಂದಲೇ ನಿರ್ಮಾಣವಾಗಿರುವುದಲ್ಲದೆ ಮನುಷ್ಯಪ್ರಯತ್ನದಿಂದಾಗಿಲ್ಲವು. ಆಹಾ! ಸೂರ್ಯಚಂದ್ರರಗತಿಯನ್ನೂ ತಡೆಯುವ ಮನ್ವಂತರ ಸಮಾಪ್ತಿಯೆತ್ತ? ಇಂತಾದರೂ ಈ ಪ್ರಾಸಾದವು ಅಚ್ಚಳಿಯದೆ ಅಂತೇ ನಿಂತಿರುವುದು. ಇದು ದುರ್ಲಭವಾದುದು!

ವಲ್ಮೀಕಸದೃಶಾ ಹ್ಯೇತೇ ಪ್ರಾಸಾದಾ ಮಾನುಷೈಃ ಕೃತಾಃ ।
ಶೀರ್ಯಂತಿ ರೋಹಣೈರ್ವೃಕ್ಷೈಃ ಸ್ವಲ್ಪಕಾಲಗತಾಯುಷಃ ॥ ೩೪ ॥
ಮದನುಕ್ರೋಶಬುಧ್ಯಾ ತು ರಕ್ಷಿತಂ ಭವನಂ ಹರೇಃ ।
ತತಸ್ತಾನ್ ಸಸಹಾಯಾನ್ಸ್ವೈ ಜಗಾದ ಪ್ರಶ್ರಯಂ ವಚಃ ॥ ೩೫ ॥
ಜಾನೀತ ಜಗದೀಶಸ್ಯ ಪ್ರಾಸಾದಂ ಕಾರಿತಂ ಮಯಾ ।
ಆವಿರ್ಬಭೂವ ಭಗವಾನ್ದಾರುರೂಪವಪುಃ ಸ್ವಯಂ ।
ತದಾಂತರಿಕ್ಷಗಾ ವಾಣೀ ಮಾಮುವಾಚಾಶರೀರಿಣೀ ॥ ೩೬ ॥
ಸಹಸ್ರಪಾಣಿಸಂಮಿತಂ ನೀಲಾದ್ರೇಃ ಶಿಖರೋಪರಿ ।
ಪ್ರಾಸಾದಂ ಕಾರಯಸ್ವೇತಿ ಸ್ಥಿತಯೇ ಜಗದೀಶಿತುಃ ॥ ೩೭ ॥
ಏತತ್ಪ್ರತಿಷ್ಠಾನವಿಧೌ ಸ್ವಯಮತ್ರಾಗಮಿಷ್ಯತಿ ।
ಪದ್ಮಯೋನಿಃ ಸ್ವಯಂ ಸಾರ್ಧಂ ಸಿದ್ಧಬ್ರಹ್ಮರ್ಷಿದೈವತೈಃ ॥ ೩೮ ॥
ತದತ್ರ ಕ್ರಿಯತೇ ಕೋ ವಾ ಸಂಭಾರೋ ಜ್ಞಾಯತೇ ಕಥಂ ।
ಇತ್ಯುಕ್ತವಂತಂ ತೇ ಪ್ರೋಚುರ್ದೇವಾ ಭಗ್ನಾಧಿಕಾರಿಣಃ ॥ ೩೯ ॥

---

೩೪. ಭೂಲೋಕದ ಮಾನವರು ಕಟ್ಟಿದ ಪ್ರಾಸಾದಗಳೆಲ್ಲವೂ ಹಾವಿನ ಹುತ್ತಗಳಿಗೆ ಸಮಾನವಾದವುಗಳೇ ಸರಿ. ಅವುಗಳು ಹಬ್ಬುವ ಬಳ್ಳಿಗಳಿಂದಲೂ, ಬೆಳೆವ ವೃಕ್ಷಗಳಿಂದಲೂ ಸೀಳಿಹೋಗುತ್ತವೆಯಾಗಿ ಸ್ವಲ್ಪಕಾಲದಲ್ಲಿಯೇ ನಾಶವಾಗತಕ್ಕವು.

೩೫–೩೯. ನನ್ನಲ್ಲಿ ಅನುಗ್ರಹಬುದ್ಧಿಯಿಂದಲೇ ಶ್ರೀಹರಿಯ ಈ ಪ್ರಾಸಾದವು ಆ ಸ್ವಾಮಿಯಿಂದಲೇ ಸುರಕ್ಷಿತವಾಗಿರುವುದು.'' ಈ ಪ್ರಕಾರವಾಗಿ ಯೋಚಿಸಿದಬಳಿಕ ಆ ಭೂಪಾಲನು ತನಗೆ ಸಹಾಯವೆಸಗಲು ತನ್ನೊಡನೆಬಂದಿದ್ದ ದೇವತೆಗಳೆಲ್ಲರನ್ನೂ ಕುರಿತು ಈ ರೀತಿ ಹೇಳಿದನು. ``ಎಲೈ ದೇವತೆಗಳಿರಾ! ಜಗದೀಶನ ಈ ಪ್ರಾಸಾದವನ್ನು ನಾನು ರಚಿಸಿದುದೆಂದು ತಿಳಿಯಿರಿ. ಭಗವಂತನು ಇಲ್ಲಿ ದಾರುಶರೀರಧರನಾಗಿ ಸಾಕ್ಷಾತ್ತಾಗಿ ಆವಿರ್ಭವಿಸಿದನು. ಆಗ ಅಂತರಿಕ್ಷದಲ್ಲಿ ಅಶರೀರವಾಣಿಯು ನನ್ನನ್ನು ಕುರಿತು, 'ಅಯ್ಯಾ ಇಂದ್ರದ್ಯುಮ್ನನೇ! ನೀಲಾಚಲದ ಈ ಶಿಖರದಲ್ಲಿ ಜಗನ್ನಾಥನು ನೆಲಸುವುದಕ್ಕಾಗಿ ನೂರು ಹಸ್ತಗಳ ಎತ್ತರವುಳ್ಳ ಪ್ರಾಸಾದವನ್ನು ನಿರ್ಮಾಣಮಾಡು. ಇದರ ಪ್ರತಿಷ್ಠೆಗಾಗಿ ಸಾಕ್ಷಾತ್ ಬ್ರಹ್ಮನು, ಸಿದ್ಧರಿಂದಲೂ, ಬ್ರಹ್ಮರ್ಷಿಗಳಿಂದಲೂ ಸಹಿತನಾಗಿ ಇಲ್ಲಿಗೈತರುವನು' ಎಂದು ಹೇಳಿತು. ಆದುದರಿಂದ ಈಗ ಪ್ರತಿಷ್ಠಾಸಂಭಾರಗಳನ್ನು ಅಣಿಮಾಡುವವರಾರು? ಅವುಗಳನ್ನು ತಿಳಿದಿರುವವರಾರು?''—ಎಂದು ಹೇಳುತ್ತಿರುವ ಆ ದೊರೆಯನ್ನು ಕುರಿತು ಅಧಿಕಾರದಿಂದ ಚ್ಯುತರಾಗಿದ್ದ ಆ ದೇವತೆಗಳು ಹೇಳಿದರು.

ದೇವಾ ಊಚುಃ :—

ನ ಜಾನೀಮೋ ವಯಮಪಿ ತದಸ್ಮಾಕಂ ಗುರುರ್ಗುರುಃ ।
ಇದಾನೀಂ ನ ವಶೇಽಸ್ಮಾಕಂ ಸ ಹಿ ಸ್ವರ್ಗಪುರೋಹಿತಃ ॥ ೪೦ ॥

ಪದ್ಮನಿಧಿರುವಾಚ :—

ಸ್ವಾಮಿನ್ವಿಧೇರನುಜ್ಞಾನಾದಾಗತೋಽಸ್ಮಿ ತ್ವಯಾ ಸಹ ।
ಕರ್ತವ್ಯಂ ಕಿಂ ಮಯಾ ಚಾತ್ರ ಕಿಂವಾ ವಸ್ತು ಪ್ರತೀಕ್ಷ್ಯತೇ ॥ ೪೧ ॥

ಜೈಮಿನಿರುವಾಚ :—

ಇತಿ ಹ್ಯಾಲಪ್ಯಮಾನಾನಾಂ ನಾರದಃ ಪುರತಃ ಸ್ಥಿತಃ ।
ಬ್ರಹ್ಮಣಾ ಪ್ರೇಕ್ಷಿತಃ ಪೂರ್ವಂ ಸರ್ವಶಾಸ್ತ್ರವಿಶಾರದಃ ॥ ೪೨ ॥
ಸರ್ವಸಂಭಾರವಸ್ತೂನಿ ಯಥಾಶಾಸ್ತ್ರಂ ಮುನೇ ಕುರು ।
ಸಂಪಾದಯಿಷ್ಯತಿ ತವ ಶಾಸನಾತ್ಪದ್ಮಕೋ ನಿಧಿಃ ॥ ೪೩ ॥
ತಂ ದೃಷ್ಟ್ವಾ ತೇ ಮುದಾ ಯುಕ್ತಾ ಉತ್ತಸ್ಥುರ್ಬ್ರಹ್ಮಣಃ ಸುತಂ ।
ಷಡರ್ಘ್ಯಪೂಜಾ ಯಾ ತಸ್ಯ ಪೂಜಾಂ ಚಕ್ರೇ ನೃಪೋತ್ತಮಃ ॥ ೪೪ ॥

---

೪೦. ದೇವತೆಗಳು ಹೇಳುತ್ತಾರೆ:—"ಎಲೈ ಇಂದ್ರದ್ಯುಮ್ನನೇ! ಈ ವಿಷಯವು ನಮಗೂ ತಿಳಿದಿರುವುದಿಲ್ಲವು. ನಮ್ಮೆಲ್ಲರಿಗೂ ಗುರುವಾಗಿರುವ ಬೃಹಸ್ಪತ್ಯಾಚಾರ್ಯನಿಗೆ ತಿಳಿದಿರುವುದು. ಆದರೆ ಆತನೀಗ ನಮ್ಮ ವಶದಲ್ಲಿರುವುದಿಲ್ಲವು. ಆತನು ಸ್ವರ್ಗಲೋಕದಲ್ಲಿ ಮಾತ್ರ ನಮಗೆ ಪುರೋಹಿತನು."

೪೧. ಪದ್ಮನಿಧಿಯು ಹೇಳುತ್ತಾನೆ:—"ಸ್ವಾಮಿನ್! ನಾನು ಬ್ರಹ್ಮನ ಅಪ್ಪಣೆಯಂತೆ ಇಲ್ಲಿಗೆ ನಿನ್ನೊಡನೆ ಬಂದಿರುವೆನು. ಈಗ ನಾನು ಮಾಡಬೇಕಾದ ಕಾರ್ಯವಾವುದು? ಯಾವ ಯಾವ ವಸ್ತುವು ಪ್ರಕೃತದಲ್ಲಿ ಬೇಕಾಗಿರುವುದೆಂಬುದನ್ನು ತಿಳಿಸಬೇಕು."

೪೨. ಜೈಮಿನಿಯು ಹೇಳುತ್ತಾನೆ:—ಎಲೈ ಮುನಿಗಳಿರಾ! ಈ ರೀತಿ ಆ ಇಂದ್ರದ್ಯುಮ್ನಾದಿಗಳು ಮಾತನಾಡಿಕೊಳ್ಳುತ್ತಿರುವಂತೆಯೇ, ಮೊದಲೇ ಬ್ರಹ್ಮನಿಂದ ಪ್ರೇಷಿತನಾದ ಸಕಲಶಾಸ್ತ್ರಪಾರಂಗತನಾದ ನಾರದಮುನಿಯು ಅವರ ಮುಂಗಡೆ ಬಂದು ನಿಂತನು.

೪೩. ಬ್ರಹ್ಮಮಾನಸಪುತ್ರನಾದ ಆ ದೇವಮುನಿಯನ್ನು ನೋಡುತ್ತಲೇ ಅಲ್ಲಿದ್ದವರೆಲ್ಲರೂ ಸಂತೋಷಗೊಂಡು ಗೌರವಪೂರ್ವಕವಾಗಿ ಮೇಲಕ್ಕೆದ್ದು ಆತನನ್ನು ಎದುರುಗೊಂಡರು. ಆಗ ಇಂದ್ರದ್ಯುಮ್ನನು ಆರು ಅರ್ಘ್ಯಗಳಿಂದ ಕೂಡಿದ ಅತಿಥಿಪೂಜೆಯನ್ನಾಮುನಿಗೆ ಸಮರ್ಪಿಸಿದನು.

೪೪. ಮಾನವಾಕಾರವನ್ನು ಧರಿಸಿದ್ದ ಆ ದೇವತೆಗಳೂ ಸಹ ಆತನನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸಿದರು. ಇಂದ್ರದ್ಯುಮ್ನನಾದರೋ ದೇವದೇವನ

**ಪ್ರಣೇಮುಸ್ತೇಽಪಿ ತಂ ದೇವಾ ಮನುಷ್ಯಾಕಾರಧಾರಿಣಃ ।**
**ಊಚೇ ತಮಿಂದ್ರದ್ಯುಮ್ನೋಽಪಿ ಪ್ರತಿಷ್ಠಾವಿಧಿವಸ್ತುನಿ ॥ ೪೫ ॥**
**ನಾಹಂ ವೇದ್ಮಿ ಮುನಿಶ್ರೇಷ್ಠ ಚಿರಾತ್ತ್ಯಕ್ತಃ ಪುರೋಧಸಾ ।**
**ಆದೇಶಯ ಕ್ರಮಾದ್ಬ್ರಹ್ಮನ್ ಸಂಪಾದ್ಯಂ ಯದ್ಯದೇವ ಹಿ ॥ ೪೬ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನಕೃತ ಭಗವತ್ಸ್ತುತಿಃ – ದಾರುಮೂರ್ತಿಸ್ಥಾಪನಾಯ ಭಗವದ್ವಚನಾದಿ ವರ್ಣನಂ" ನಾಮ ಚತುರ್ವಿಂಶೋಽಧ್ಯಾಯಃ

---

ಪ್ರತಿಷ್ಠಾವಿಧಾನ ವಿಷಯದಲ್ಲಿಯೂ, ಅದಕ್ಕೆ ಬೇಕಾದ ಸಂಭಾರಗಳ ವಿಷಯದಲ್ಲಿಯೂ ಈ ರೀತಿ ಆ ಮುನಿಯಲ್ಲಿ ಅರಿಕೆಮಾಡಿಕೊಂಡನು :—

೪೫. "ಓ ಮುನಿಶ್ರೇಷ್ಠ! ನಾನು ನನ್ನ ಪುರೋಹಿತನನ್ನಗಲಿ ಬಹಳ ಕಾಲವಾಗಿಹೋಗಿರುವುದರಿಂದ ಈ ಪ್ರತಿಷ್ಠಾಕಾರ್ಯಕ್ಕೆ ಯಾವ ಯಾವ ವಸ್ತುಗಳನ್ನು ಸಂಪಾದಿಸಬೇಕೆಂಬ ವಿಷಯವನ್ನು ತಿಳಿಯದವನಾಗಿರುವೆನು. ಆದುದರಿಂದ ಭೋ ಬ್ರಹ್ಮನ್! ಈಗ ನೀನದೆಲ್ಲವನ್ನೂ ಆಜ್ಞಾಪಿಸು.

೪೬. ನಾರದಮುನೀಂದ್ರಾ! ಶ್ರೀಹರಿಯ ಪ್ರತಿಷ್ಠೆಗೆ ಶಾಸ್ತ್ರೋಕ್ತವಾದ ಸಮಸ್ತ ಸಂಭಾರವಸ್ತುಗಳನ್ನೂ ತಿಳಿಸುವವನಾಗು. ನಿನ್ನ ಅಪ್ಪಣೆಯಂತೆ ಪದ್ಮನಿಧಿಯಾದ ಈ ಕುಬೇರನು ಅವುಗಳೆಲ್ಲವನ್ನೂ ಸಂಪಾದಿಸಿ ತರುವನು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನಕೃತ ಭಗವತ್ಸ್ತುತಿ— ದಾರುಮೂರ್ತಿ ಸ್ಥಾಪನೆಗಾಗಿ ಭಗವಂತನು ಆಜ್ಞಾಪಿಸಿದುದು" ಎಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶೋಽಧ್ಯಾಯಃ

ನಾರದಲಿಖಿತಪ್ರತಿಷ್ಠಾಸಾಹಿತ್ಯಸಂಭಾರಸಂಗ್ರಹಪತ್ರಂ— ವಿಶ್ವಕರ್ಮಕೃತಸ್ಯಂದನತ್ರಯ ನಿರ್ಮಾಣಪೂರ್ವಕ ರಥಪ್ರತಿಷ್ಠಾದಿವರ್ಣನಂ

ಜೈಮಿನಿರುವಾಚ :—

**ಇತ್ಯುಕ್ತೇ ನಾರದಃ ಸೋಽಥ ಯಥಾಶಾಸ್ತ್ರಂ ವಿಚಾರ್ಯ ವೈ ।**
**ಆಲೇಖ್ಯ ಕ್ರಮಶಃ ಪತ್ರೇ ತಸ್ಮೈ ರಾಜ್ಞೇ ನ್ಯವೇದಯತ್ ॥ ೧ ॥**
**ರಾಜಾಪಿ ಪತ್ರಂ ತಚ್ಛ್ರುತ್ವಾ ಸೋಽವಧಾರ್ಯ ಪುನಃ ಪುನಃ ।**
**ಪ್ರದದೌ ಪದ್ಮನಿಧಯೇ ಲಿಖಿತಾನ್ಯತ್ರ ಯಾನಿ ವೈ ॥ ೨ ॥**
**ಸಂಪಾದಯ ಪದ್ಮನಿಧೇ ಶಾಲಾಂ ಸ್ವರ್ಣಮಯೀಂ ಕುರು ।**
**ಬ್ರಹ್ಮಣಃ ಸದನಂ ದಿವ್ಯಂ ಬ್ರಹ್ಮರ್ಷೀಣಾಂ ಚ ನಿರ್ಮಲಂ ॥ ೩ ॥**
**ಇಂದ್ರಾದೀನಾಂ ಸುರಾಣಾಂ ಚ ಸಿದ್ಧಾನಾಂ ಮರ್ತ್ಯವಾಸಿನಾಂ ।**
**ಮುನೀಂದ್ರಾಣಾಂ ನಿವಾಸಾಯ ರಾಜ್ಞಾಂ ಪಾತಾಲವಾಸಿನಾಂ ॥ ೪ ॥**
**ತಥಾ ಚ ನಾಗರಾಜಾನಾಂ ನಿಧೇ ತ್ರೈಲೋಕ್ಯವಾಸಿನಾಂ ।**
**ಯಥಾಯೋಗ್ಯಾಸನೈರ್ಯುಕ್ತಂ ಗೃಹಂ ಗೃಹಮತಂದ್ರಿತಃ ॥ ೫ ॥**

---

## ಕನ್ನಡದ ಅನುವಾದ

ನಾರದಲಿಖಿತಪ್ರತಿಷ್ಠಾಸಾಹಿತ್ಯ ಸಂಭಾರಸಂಗ್ರಹಪತ್ರ— ವಿಶ್ವಕರ್ಮನು ರಥತ್ರಯವನ್ನು ನಿರ್ಮಾಣಮಾಡಿದುದು—ರಥಪ್ರತಿಷ್ಠಾದಿವರ್ಣನ

೧. ಜೈಮಿನಿಯು ಹೇಳುತ್ತಾನೆ:—ಎಲೈ ಮುನಿಗಳಿರಾ! ಕೇಳಿರಿ; ಇಂದ್ರದ್ಯುಮ್ನನಿಂತೆನಲು ನಾರದಮುನೀಂದ್ರನು ಶಾಸ್ತ್ರಾನುಸಾರವಾಗಿ ಎಲ್ಲವನ್ನೂ ಯೋಚಿಸಿ ನೋಡಿದ ಬಳಿಕ ಆ ಸ್ವಾಮಿಯ ದೇವಾಲಯದ ಪ್ರತಿಷ್ಠೆಗಾಗಿ ಬೇಕಾಗುವ ಸಾಹಿತ್ಯಸಂಭಾರ ಸಂಗ್ರಹವೆಲ್ಲವನ್ನೂ ಪತ್ರದಲ್ಲಿ ಬರೆದು ಆ ದೊರೆಗೆ ಒಪ್ಪಿಸಿದನು.

೨–೩. ರಾಜನೂ ಸಹ ಆ ಪತ್ರವನ್ನು ಓದಿಸಿ ಕೇಳಿ ಪುನಃ ಪುನಃ ಅದನ್ನು ತಿಳಿದುಕೊಂಡು ತರುವಾಯ ಅದನ್ನು ಪದ್ಮನಿಧಿಗಿತ್ತು "ಎಲೈ ಪದ್ಮನಿಧಿಯೇ! ಈ ಪತ್ರದಲ್ಲಿ ಬರೆದಿರುವ ಸಂಭಾರಗಳೆಲ್ಲವನ್ನೂ ಸಂಗ್ರಹಿಸು. ಸ್ವರ್ಣಶಾಲೆಯನ್ನು ನಿರ್ಮಾಣಮಾಡು. ದಿವ್ಯವಾದ ಬ್ರಹ್ಮಸದನವನ್ನೂ, ಬ್ರಹ್ಮರ್ಷಿಗಳಿಗೆ ನಿರ್ಮಲಭವನಗಳನ್ನೂ ನಿರ್ಮಾಣಮಾಡು.

೪–೫. ಇಂದ್ರಾದಿ ದೇವತೆಗಳಿಗೂ, ಸಿದ್ಧರಿಗೂ, ಮರ್ತ್ಯಲೋಕನಿವಾಸಿಗಳಾದ ಮುನೀಂದ್ರರಿಗೂ, ದೊರೆಗಳಿಗೂ, ಪಾತಾಳಲೋಕವಾಸಿಗಳಾದ ನಾಗರಾಜರಿಗೂ, ಅಂತೆಯೇ ಮೂರು ಲೋಕಗಳಲ್ಲಿಯೂ ವಾಸಮಾಡುವವರಿಗೂ ಅವರವರಿಗೆ ಯೋಗ್ಯವಾದ ಆಸನಗಳಿಂದ ಕೂಡಿದ ಭವನಗಳನ್ನು ಜಾಗರೂಕನಾಗಿ ನಿರ್ಮಿಸುವವನಾಗು.

ಕಾರಯಾಶು ನಿಧೇ ದ್ರವ್ಯಸಂಭಾರಂ ಯಾವದೇವ ತು ।
ವಿಶ್ವಕರ್ಮಾಪಿ ಚ ತವ ಸಾಹಾಯ್ಯಂ ರಚಯಿಷ್ಯತಿ ॥ ೬ ॥
ಇತ್ಯಾದಿಶಂತಂ ಸ ಮುನಿರಿಂದ್ರದ್ಯುಮ್ನಮುವಾಚ ವೈ ।
ಸಂಭಾರಾನ್ ಪೃಥಗೇತದ್ಧಿ ಕರ್ತವ್ಯಂ ವ್ಯವಧಾನತಃ ॥ ೭ ॥
ಸ್ವರ್ಣೈಃ ಸುಘಟಿತಂ ಸಾಧು ರಥತ್ರಯಮಲಂಕೃತಂ ।
ದುಕೂಲರತ್ನಮಾಲಾದ್ಯೈರ್ಬಹುಮೂಲ್ಯೈರ್ದೃಢಂ ಮಹತ್ ॥ ೮ ॥
ಶ್ರೀವಾಸುದೇವಸ್ಯ ರಥೋ ಗರುಡಧ್ವಜಚಿಹ್ನಿತಃ ।
ಪದ್ಮಧ್ವಜಃ ಸುಭದ್ರಾಯಾ ರಥಮೂರ್ಧನಿ ಧಾರ್ಯತಾಂ ॥ ೯ ॥
ರಥಃ ಷೋಡಶಚಕ್ರಸ್ತು ವಿಷ್ಣೋಃ ಕಾರ್ಯಃ ಪ್ರಯತ್ನತಃ ।
ಚತುರ್ದಶ ಬಲಸ್ಯೈವ ಸುಭದ್ರಾಯಾಸ್ತು ದ್ವಾದಶ ॥ ೧೦ ॥
ಹಸ್ತಷೋಡಶವಿಸ್ತಾರೋ ರಥಶ್ಚಕ್ರಧರಸ್ಯ ತು ।
ಚತುರ್ದಶ ಬಲಸ್ಯೈವ ಸುಭದ್ರಾಯಾಸ್ತು ದ್ವಾದಶ ॥ ೧೧ ॥

---

೬. ಎಲೈ ಪದ್ಮನಿಧಿಯೇ! ನಿನ್ನಲ್ಲಿ ದ್ರವ್ಯಸಂಭಾರವು ಎಷ್ಟಿರುವುದೋ ಅಷ್ಟನ್ನೂ ವಿನಿಯೋಜಿಸಿ ಈ ಭವನನಿರ್ಮಾಣ ಮತ್ತು ಪ್ರತಿಷ್ಠಾಸಾಹಿತ್ಯಸಂಭಾರ ಸಂಗ್ರಹ ಕಾರ್ಯಗಳನ್ನು ಆಗಮಾಡು. ದೇವಶಿಲ್ಪಿಯಾದ ಈ ವಿಶ್ವಕರ್ಮನೂ ಸಹ ನಿನಗೆ ಸರ್ವ ವಿಧದಲ್ಲಿಯೂ ಸಹಾಯವನ್ನು ಮಾಡುತ್ತಾನೆ.''

೭. ಈ ರೀತಿ ಆಜ್ಞಾಪಿಸುತ್ತಿರುವ ಇಂದ್ರದ್ಯುಮ್ನನನ್ನು ಕುರಿತು ನಾರದ ಮುನಿಯು ಹೇಳಿದನು. ''ಎಲೈ ದೊರೆಯೇ! ಈ ಸಂಭಾರಗಳೆಲ್ಲವನ್ನೂ ಅವವುಗಳಿಗೆ ಬೇಕಾದ ಅವಕಾಶವನ್ನು ಉಚಿತವರಿತು ಹೊಂದಿ ಬೇರೆ ಬೇರೆಯಾಗಿಯೇ ಸಂಗ್ರಹಿಸಬೇಕು.

೮. ಸುವರ್ಣಘಟಿತವಾಗಿ, ದಿವ್ಯದುಕೂಲಗಳಿಂದಲೂ, ರತ್ನಮಾಲಿಕೆಗಳಿಂದಲೂ, ಅಮೂಲ್ಯವಾದ ಇತರ ಅಲಂಕಾರಗಳಿಂದಲೂ ಕೂಡಿದುದಾದ ಮೂರು ರಥಗಳನ್ನು ಸಿದ್ಧಪಡಿಸತಕ್ಕುದು.

೯. ಶ್ರೀವಾಸುದೇವನ ರಥಕ್ಕೆ ಗರುಡಧ್ವಜವೇ ಗುರುತಾಗಿರಬೇಕು. ಸುಭದ್ರಾದೇವಿಯ ರಥದ ಶಿಖರದಮೇಲೆ ಪದ್ಮಧ್ವಜವನ್ನೇರಿಸಬೇಕು.

೧೦. ವಿಷ್ಣುವಿನ ರಥಕ್ಕೆ ಹದಿನಾರು ಚಕ್ರಗಳನ್ನು ಅಳವಡಿಸಬೇಕು. ಬಲದೇವನ ರಥಕ್ಕೆ ಹದಿನಾಲ್ಕು ಚಕ್ರಗಳನ್ನೂ, ಸುಭದ್ರೆಯ ರಥಕ್ಕೆ ಹನ್ನೆರಡು ಚಕ್ರಗಳನ್ನೂ ಕೀಲಿಸತಕ್ಕುದು.

೧೧. ಚಕ್ರಧರನಾದ ಶ್ರೀಜಗನ್ನಾಥನ ರಥವು ಹದಿನಾರು ಹಸ್ತಗಳಷ್ಟು ವಿಸ್ತಾರವಾಗಿರಬೇಕು. ಬಲರಾಮನ ರಥವು ಹದಿನಾಲ್ಕು ಹಸ್ತಗಳೂ, ಸುಭದ್ರೆಯ ರಥವು ಹನ್ನೆರಡು ಹಸ್ತಗಳೂ ವಿಸ್ತಾರವಾಗಿರಬೇಕು.

**ಆಸನಂ ಜಗತಾಂ ಭೂಯಃ ಸ್ವಯಂ ಸ್ವಾಸನವಿಗ್ರಹಃ ।**
**ತದ್ಯಾನೇ ಜಗತಾಂ ನಾಶಸ್ತತೋ ಯಾನಂ ನ ವಿದ್ಯತೇ ॥ ೧೨ ॥**
**ಪಶ್ಯೇಚ್ಚರಾಚರಂ ವಿಶ್ವಂ ಜ್ಞಾನಾದ್ದಶಸು ನಿರ್ಮಲೇ ।**
**ಸ್ಥಿತೋ ಹಸ್ತತಲೇ ನಿತ್ಯಂ ನಿರ್ಮಲಸ್ತಸ್ಯದರ್ಪಣಃ ॥ ೧೩ ॥**
**ತಲಸ್ಥತ್ವಾದಸೌ ತಾಲಃ ಸದಾ ತೇನಾಂಕಿತಃ ಪ್ರಭುಃ ।**
**ತತಃ ಸ ಏವ ಶೇಷಸ್ಯ ಬಲಭದ್ರಾವತಾರಿಣಃ ॥ ೧೪ ॥**
**ಅಥವಾ ಸೀರಿಣಃ ಕಾರ್ಯಂ ಸೀರಮೇವ ಧ್ವಜೋತ್ತಮಂ ।**
**ಧ್ವಜಸ್ಸುನಿರ್ಮಲಃ ಕಾರ್ಯಸ್ತಸ್ಮಾತ್ತಾಲಧ್ವಜೋ ಮತಃ ॥ ೧೫ ॥**
**ನ ವಾಸಿತವ್ಯೋ ದೇವೋಽಸಾವಪ್ರತಿಷ್ಠೇ ರಥೇ ನೃಪ ।**
**ಪ್ರಾಸಾದೇ ಮಂಡಪೇ ವಾಪಿ ಪುರೇ ತನ್ನಿಷ್ಫಲಂ ಭವೇತ್ ॥ ೧೬ ॥**

---

೧೨. ಸ್ವಾಮಿಯು ತಾನೇ ಜಗತ್ತಿಗೆ ಆಸನಭೂತನಾಗಿ ರಥದಲ್ಲಿ ಕೃತಕವಾದ ಆಸನದಲ್ಲಿ ಸುಖಾಸೀನನಾಗಿರುವಂತೆ ಕುಳ್ಳಿರಿಸಿದ್ದು ಆ ರಥವು ಮುಂಬರಿದುದಾದರೆ ಜಗತ್ತಿಗೆ ನಾಶವೇ ಉಂಟಾಗುವುದು. ಆಮೇಲೆ ಯಾನವೇ ಇರುವುದಿಲ್ಲವು. ರಥೋತ್ಸವವೇ ನಿಂತುಹೋದೀತು.

೧೩. ರಥಾರೂಢನಾದ ಸ್ವಾಮಿಯು ಜ್ಞಾನದೃಷ್ಟಿಯಿಂದ ಸುನಿರ್ಮಲವಾದ ಕನ್ನಡಿಯಲ್ಲಿ ಚರಾಚರಜಗತ್ತನ್ನು ನೋಡುತ್ತಿರಬೇಕಲ್ಲದೆ ಅದನ್ನು ಸಾಕ್ಷಾತ್ತಾಗಿ ದೃಷ್ಟಿಸಿ ನೋಡುತ್ತಿರಬಾರದು. ಆದುದರಿಂದ ಆತನ ಕೈಯಲ್ಲಿ ಯಾವಾಗಲೂ ನಿರ್ಮಲವಾದ ಕನ್ನಡಿಯಿರತಕ್ಕುದು.

೧೪. ಬಲದೇವನ ಅಂಗೈಯಲ್ಲಿ ಯಾವಾಗಲೂ ನೆಲಸಿರುವುದರಿಂದ ಅದು ತಾಲವೆನಿಸಿ ಅದರಿಂದಲೇ ಆ ಪ್ರಭುವು ಅಂಕಿತನಾಗಿರುವನು. ಆದುದರಿಂದ ಆದಿಶೇಷನ ಅವತಾರನಾದ ಬಲರಾಮನಿಗೆ ತಾಲವೇ ಧ್ವಜವೆನಿಸಿರುವುದು. ಆದುದರಿಂದ ಅದನ್ನೇ ಅವನ ರಥದ ಚಿಹ್ನೆಯನ್ನಾಗಿ ಮಾಡಬೇಕು.

೧೫. ಅಥವಾ ಆ ಸ್ವಾಮಿಯು ಸೀರಪಾಣಿ (ನೇಗಿಲು ಹಿಡಿದಿರುವ ಕೈಯುಳ್ಳವನಾದುದರಿಂದ)ಯಾದುದರಿಂದ ಆ ಸೀರವನ್ನೇ ಅವನ ರಥಕ್ಕೆ ಧ್ವಜವನ್ನಾಗಿಸಬೇಕು. ಇದೇ ಆ ರಥಕ್ಕೆ ಉತ್ತಮ ಧ್ವಜವು. ಈ ರೀತಿ ಬಲದೇವನ ರಥಕ್ಕೆ ಉತ್ತಮಧ್ವಜವನ್ನು ಕಟ್ಟಬೇಕು. ಈ ಧ್ವಜವಾದರೋ ತಾಲಧ್ವಜವೆಂದು ತಿಳಿಯಲಾಗಿದೆ.

೧೬. ದೇವತಾಮೂರ್ತಿಗಳನ್ನು ಆಗಮಶಾಸ್ತ್ರೋಕ್ತವಾದ ವಿಧಾನದಿಂದ ಪ್ರತಿಷ್ಠೆಮಾಡದಿರುವ ರಥದಮೇಲೆ ನೆಲೆಗೊಳಿಸಕೂಡದು. ಪ್ರತಿಷ್ಠೆಯಾಗದ ಪ್ರಾಸಾದದಲ್ಲಿಯಾಗಲಿ, ಮಂಟಪದಲ್ಲಿಯಾಗಲಿ, ಪುರದಲ್ಲಿಯಾಗಲಿ ದೇವತಾಮೂರ್ತಿಗಳನ್ನು ಕುಳ್ಳಿರಿಸಿದುದಾದರೆ ನಿಷ್ಫಲವಾಗುವುದು.

**ತಸ್ಮಾತ್ಪ್ರತಿಷ್ಠಾ ಪ್ರಥಮಂ ಹರೇಃ ಕಾರ್ಯಾ ರಥಸ್ಯ ವೈ ।**
**ಸಂಭಾರಃ ಕ್ರಿಯತಾಂ ತಸ್ಯ ಹ್ಯನುಷ್ಠೇಯಾ ಮಯಾ ತು ಸಾ ।**
**ಇತ್ಯಾಜ್ಞಾಂ ಪಿತುರ್ಲಬ್ಧ್ವಾ ಶೀಘ್ರಮಾಯಾಮ್ಯಹಂ ನೃಪ ॥ ೧೭ ॥**
**ತಸ್ಯ ತದ್ವಚನಂ ಶ್ರುತ್ವಾ ಘಟಿತಂ ಸ್ಯಂದನತ್ರಯಂ ॥ ೧೮ ॥**
**ನಿಧಿಸಂಪಾದಿತೈರ್ದ್ರವ್ಯೈರೇಕಾಹ್ನಾ ವಿಶ್ವಕರ್ಮಣಾ ।**
**ಸ್ವಕ್ಷಂ ಸುಚಕ್ರಂ ಸುಸ್ತಂಭಂ ಸುವಿಸ್ತೀರ್ಣಂ ಸುತೋರಣಂ ॥ ೧೯ ॥**
**ಸುಧ್ವಜಂ ಸುಪತಾಕಂ ಚ ನಾನಾಚಿತ್ರಮನೋಹರಂ ।**
**ವಿಚಿತ್ರಬಂಧಮಿಥುನಪುತ್ಥಲೀವಲಯಾನ್ವಿತಂ ॥ ೨೦ ॥**
**ಅರ್ಧಹಾಟಕನಿರ್ವ್ಯೂಢಂ ಸಾಕ್ಷಾದ್ರವಿರಥೋಪಮಂ ।**
**ಮೇಘಗಂಭೀರನಿರ್ಘೋಷಂ ದೃಷ್ಟ್ವಾಕರ್ಷಗುಣೈರ್ಯುತಂ ।**
**ವಾತರಂಹೋಹಯೈರ್ಯುಕ್ತಂ ಶತಸಂಖ್ಯೈಃ ಸಿತಪ್ರಭೈಃ ॥ ೨೧ ॥**
**ಯಥಾಶಾಸ್ತ್ರವಿಧಾನೇನ ನಾರದೇನ ಪ್ರತಿಷ್ಠಿತಂ ।**
**ಸುಲಗ್ನೇ ಸುಮುಹೂರ್ತೇ ಚ ಸುತಿಥೌ ಜ್ಯೋತಿಷೋದಿತೇ ॥ ೨೨ ॥**

---

೧೭. ಆದುದರಿಂದ ಮೊದಲು ಶ್ರೀಹರಿಯ ರಥಕ್ಕೆ ಪ್ರತಿಷ್ಠೆಯನ್ನು ಮಾಡಬೇಕು. ಆದುದರಿಂದ ಅದಕ್ಕೆ ಬೇಕಾದ ಸಂಭಾರಗಳೆಲ್ಲವನ್ನೂ ಸಿದ್ಧಗೊಳಿಸು. ನಾನು ಆ ರಥಪ್ರತಿಷ್ಠಾಕಾರ್ಯವನ್ನು ಮಾಡಬೇಕಾಗಿರುವುದು. —ಎಂದಿಂತು ನನ್ನ ತಂದೆಯಾದ ಬ್ರಹ್ಮದೇವನಿಂದ ಆಜ್ಞಾಪಿತನಾಗಿ ನಾನು ಬಹು ಜಾಗ್ರತೆಯಾಗಿ ಇಲ್ಲಿಗೈತಂದೆನು.''

೧೮–೨೦. ಇಂತೆಂದ ನಾರದಮುನೀಂದ್ರನ ಮಾತುಗಳನ್ನು ಕೇಳಿ ದೇವಶಿಲ್ಪಿಯಾದ ವಿಶ್ವಕರ್ಮನು, ಕುಬೇರನು ಸಂಪಾದಿಸಿತಂದ ದ್ರವ್ಯಗಳಿಂದ ಒಂದೇ ದಿನದಲ್ಲಿಯೇ ಆ ಮೂರು ರಥಗಳನ್ನೂ ನಿರ್ಮಿಸಿದನು. ಆ ರಥಗಳಾದರೋ ಒಳ್ಳೆಯ ಅಚ್ಚುಮರಗಳುಳ್ಳದಾಗಿ, ಒಳ್ಳೆಯ ಚಕ್ರಗಳೂ, ಸೊಗಸಾದ ಸ್ತಂಭಗಳೂ ಉಳ್ಳದಾಗಿ ಅಂದವಾದ ತೋರಣಗಳಿಂದಲಂಕೃತವಾಗಿ ಮನೋಹರವಾದ ಧ್ವಜಗಳಿಂದಲೂ, ಪತಾಕೆಗಳಿಂದಲೂ, ಬಗೆಬಗೆಯ ಚಿತ್ರಗಳಿಂದಲೂ ಮನೋಹರವಾಗಿದ್ದುವು. ವಿಚಿತ್ರವಾದ ಕಾಮಬಂಧಗಳನ್ನು ಮೆರೆಯುತ್ತಿರುವಂತೆ ಕೆತ್ತಿರುವ ಪುತ್ಥಳಿಗಳ ಪ್ರಾಕಾರಗಳಿಂದೊಪ್ಪಿದ್ದುವು.

೨೧–೨೨. ಅರ್ಧಭಾಗವೆಲ್ಲವೂ ಚಿನ್ನದ ಕೆತ್ತನೆಗೆಲಸದಿಂದ ಕೂಡಿದುದಾಗಿ ಸಾಕ್ಷಾತ್ ಸೂರ್ಯದೇವನ ರಥಕ್ಕೆಣೆಯಾಗಿ, ಮುಗಿಲನಾದದಂತೆ ಗಂಭೀರನಾದವುಳ್ಳದಾಗಿ, ವಾಯುವೇಗವುಳ್ಳ ನೂರು ಬೆಳುಗುದುರೆಗಳು ಹೂಡಿಕಂಗೊಳಿಸುತ್ತಿರುವ ಆ ರಥತ್ರಯವನ್ನು ಕಂಡು ದೇವಮುನೀಶ್ವರನಾದ ನಾರದಮುನಿಯು ಜೋತಿಷ್ಕರು ಹೇಳಿದ ಒಳ್ಳೆಯ ಲಗ್ನದಲ್ಲಿ ಒಳ್ಳೆಯ ಮುಹೂರ್ತದಲ್ಲಿ ಅವುಗಳಿಗೆ ಶಾಸ್ತ್ರೋಕ್ತವಿಧಾನದಿಂದ ಪ್ರತಿಷ್ಠೋತ್ಸವವನ್ನೆಸಗಿದನು.

ಮುನಯ ಊಚುಃ :—

ಭಗವನ್ ಜೈಮಿನೇ ಬ್ರೂಹಿ ಸರ್ವಜ್ಞೋಽಸಿ ಮತೋ ಹಿ ನಃ ॥ ೨೩ ॥
ವಿಧಿವಾಕ್ಯೇನ ಹಿ ರಥಃ ಪ್ರತಿಷ್ಠಾಪ್ಯೋ ಹರೇರಯಂ ।
ಯಥಾವದ್ವದ ನೋ ಯೇನ ಜಾನೀಮೋ ವಿಧಿವಿಸ್ತರಂ ॥ ೨೪ ॥

ಜೈಮಿನಿರುವಾಚ :—

ಯಥಾ ಪ್ರತಿಷ್ಠಿತಂ ತೇನ ನಾರದೇನ ಮಹಾತ್ಮನಾ ।
ತದ್ವೋ ವದಿಷ್ಯಾಮಿ ವಿಧಿಂ ಯಥಾ ದೃಷ್ಟಂ ಪುರಾ ಮಯಾ ॥ ೨೫ ॥
ರಥಸ್ಯೈಶಾನದಿಗ್ಭಾಗೇ ಶಾಲಾಂ ಕೃತ್ವಾ ಸುಶೋಭನಾಂ ।
ತನ್ಮಧ್ಯೇ ಮಂಡಪಂ ಕೃತ್ವಾ ವೇದಿಂ ತತ್ರ ಸುನಿರ್ಮಲಾಂ ॥ ೨೬ ॥
ಚತುರಸ್ರಾಂ ಚತುರ್ಹಸ್ತಮಿತಾಂ ಹಸ್ತೋಚ್ಛ್ರಿತಾಂ ದ್ವಿಜಾಃ ।
ಪ್ರತಿಷ್ಠಾಪೂರ್ವದಿವಸೇ ರಾತ್ರಾವುತ್ತರತಃ ಶುಭೇ ॥ ೨೭ ॥
ಮುಹೂರ್ತೇ ಸ್ವಸ್ತಿ ವಾಚ್ಯಾಥ ಕಾರಯೇದಂಕುರಾರ್ಪಣಂ ।
ದ್ವಾತ್ರಿಂಶದ್ದೇವತಾಭ್ಯಶ್ಚ ಬಲಿಂ ದತ್ವಾ ಯಥಾವಿಧಿ ॥ ೨೮ ॥

---

೨೩–೨೪. ಮುನಿಗಳು ಹೇಳುತ್ತಾರೆ:—ಭೋ ಭಗವನ್! ಜೈಮಿನಿ ಮುನಿಯೇ! ನೀನು ಸರ್ವಜ್ಞನಾಗಿರುವೆಯೆಂದು ನಮಗೆ ತಿಳಿದಿರುವುದು. ಶ್ರೀಹರಿಯ ಈ ರಥವನ್ನು ಯಾವ ವಿಧಾನದಂತೆ ಪ್ರತಿಷ್ಠಿಸಬೇಕೆಂಬ ವಿಷಯ ವನ್ನು ಹೇಳುವವನಾಗು. ಈ ರಥಪ್ರತಿಷ್ಠಾಪನವಿಧಾನವನ್ನು ನಮ್ಮೆಲ್ಲರಿಗೂ ತಿಳಿಯುವಂತೆ ವಿಸ್ತಾರವಾಗಿ ತಿಳಿಸುವವನಾಗು.

೨೫. ಜೈಮಿನಿಯು ಹೇಳುತ್ತಾನೆ:—ಅಯ್ಯಾ ಮುನಿಗಳಿರಾ! ನಾರದ ಮುನಿಯು ಆ ರಥಗಳನ್ನೆಂತುಪ್ರತಿಷ್ಠಿಸಿದನೋ, ಪೂರ್ವದಲ್ಲಿ ನಾನು ಆ ಪ್ರತಿಷ್ಠಾವಿಧಾನವನ್ನೆಂತು ನೋಡಿದೆನೋ ಅಂತೆಯೇ ವಿವರಿಸಿ ಹೇಳುವೆನು, ಆಲಿಸಿ ಕೇಳಿರಿ.

೨೬. ರಥದ ಈಶಾನ್ಯ ದಿಗ್ಭಾಗದಲ್ಲಿ ಸುಶೋಭನವಾದ ಶಾಲೆಯನ್ನು ನಿರ್ಮಾಣಮಾಡಿ ಅದರ ಮಧ್ಯದಲ್ಲಿ ಮಂಡಪವನ್ನು ರಚಿಸಿ ಅಲ್ಲಿ ನಿರ್ಮಲ ವಾದೊಂದು ವೇದಿಕೆಯನ್ನು ಹಾಕಬೇಕು.

೨೭–೨೮. ಆ ವೇದಿಕೆಯಾದರೋ ಚಚ್ಚೌಕನಾಗಿದ್ದು, ನಾಲ್ಕು ಹಸ್ತಗಳ ವಿಸ್ತಾರವೂ, ಒಂದು ಹಸ್ತದೆತ್ತರವೂ ಇರತಕ್ಕುದು. ಪ್ರತಿಷ್ಠೆಮಾಡುವ ಹಿಂದಣ ದಿನದಲ್ಲಿ ಉತ್ತರ ದಿಕ್ಕಿನಲ್ಲಿ ಶುಭಮುಹೂರ್ತದಲ್ಲಿ ಸ್ವಸ್ತಿವಾಚನವನ್ನು ಮಾಡಿ ಅಂಕುರಾರ್ಪಣವನ್ನು ಮಾಡಬೇಕು. ತರುವಾಯ ಮುವತ್ತೆರಡು ದೇವತೆಗಳಿಗೂ ಯಥಾಶಾಸ್ತ್ರವಾಗಿ ಬಲಿಯನ್ನೀಯಬೇಕು.

ಪ್ರಾತಸ್ತತೋ ವೇದಿಕಾಯಾಂ ಮಧ್ಯೇಮಂಡಲಮಾಲಿಖೇತ್ ।
ಪದ್ಮಂ ವಾ ಸ್ವಸ್ತಿಕಂ ವಾಪಿ ಕುಂಭಂ ತತ್ರ ನಿಧಾಪಯೇತ್ ॥ ೨೯ ॥
ಪಂಚದ್ರುಮಕಷಾಯಂ ಚ ತನ್ಮಧ್ಯೇ ಪೂರಯೇತ್ಸುಧೀಃ ।
ಗಂಗಾದಿಪುಣ್ಯತೋಯಾನಿ ಪಲ್ಲವಾನ್ಸಮೃತ್ತಿಕಾಃ ॥ ೩೦ ॥
ಸರ್ವಗಂಧಾನ್ಪಂಚರತ್ನಸರ್ವೌಷಧಿಗಣಂ ತಥಾ ।
ಪೂರಯಿತ್ವಾ ವಿಧಾನೇನ ಆಚಾರ್ಯಃ ಪ್ರಾಙ್ಮುಖಃ ಶುಚಿಃ ॥ ೩೧ ॥
ವಿಷ್ಣುಂ ಸ್ಮರನ್ ಪಂಚಗವ್ಯಂ ಪಂಚಾದಪಿ ಪ್ರಪೂರಯೇತ್ ।
ದುಕೂಲವೇಷ್ಟಿತಂ ಕಂಠೇ ಮಾಲ್ಯೈರ್ಗಂಧೈಃ ಸುಶೋಭನೈಃ ॥ ೩೨ ॥
ಫಲಪಲ್ಲವಸಂಯುಕ್ತಕೃತಕೌತುಕಮಂಗಲಂ ।
ಪೂರಯೇತ್ತತ್ರ ದೇವೇಶಂ ನರಸಿಂಹಮನಾಮಯಂ ॥ ೩೩ ॥
ಮಂತ್ರರಾಜೇನ ವಿಧಿವದುಪಚಾರೈಸ್ತಥಾಂತರೈಃ ।
ಪ್ರಾರ್ಥಯಿತ್ವಾ ಪ್ರಸಾದಾಯ ತಸ್ಮಿನ್ನಾವಾಹ್ಯ ತಂ ಹರಿಂ ॥ ೩೪ ॥
ಬಾಹ್ಯೋಪಚಾರೈರ್ವಿವಿಧೈಃ ಪೂಜಯೇದ್ವಿಧಿವದ್ದ್ವಿಜಾಃ ।
ವಾಯವ್ಯಾಂತಸ್ಯ ಕುಂಭಸ್ಯ ಸಮಿದಾಜ್ಯಚರುಂ ತಥಾ ॥ ೩೫ ॥

---

೨೯. ಬಳಿಕ ಮಾರನೆಯ ಪ್ರಾತಃಕಾಲದಲ್ಲಿ ವೇದಿಕೆಯಮೇಲೆ ಪದ್ಮವನ್ನಾಗಲಿ, ಸ್ವಸ್ತಿಕವನ್ನಾಗಲಿ ಮಂಡಲವನ್ನಾಗಿ ರಚಿಸಿ ಅದರಮೇಲೆ ಕುಂಭವನ್ನು ಸ್ಥಾಪಿಸಬೇಕು.

೩೦–೩೪. ಆ ಕುಂಭದಲ್ಲಿ ಪಂಚಪಲ್ಲವಕಷಾಯವನ್ನು ತುಂಬಿ, ಗಂಗಾದಿ ಪುಣ್ಯಜಲಗಳನ್ನೂ, ಪಂಚಪಲ್ಲವಗಳನ್ನೂ, ಮೃತ್ತಿಕೆಗಳನ್ನೂ, ಸಮಸ್ತ ಸುಗಂಧಗಳನ್ನೂ, ಪಂಚರತ್ನಗಳನ್ನೂ, ಸರ್ವೌಷಧಿಗಳನ್ನೂ ವಿಧಿಪೂರ್ವಕವಾಗಿ ಅದರಲ್ಲಿ ಹಾಕಬೇಕು. ತರುವಾಯ ಆಚಾರ್ಯನಾದವನು ಪೂರ್ವ ದಿಕ್ಕಿಗೆ ಕುಳಿತವನಾಗಿ ಶುಚಿಯಾಗಿ ವಿಷ್ಣುವನ್ನು ಸ್ಮರಿಸುತ್ತ ಪಂಚಗವ್ಯವನ್ನು ಮಾಡಿ ಆಮೇಲೆ ಆ ಕುಂಭಕ್ಕೆ ತುಂಬಬೇಕು. ಬಳಿಕ ಆ ಕುಂಭಕ್ಕೆ ದುಕೂಲವನ್ನು ಸುತ್ತಿ, ಕಂಠಭಾಗವನ್ನು ಮಂಗಳಕರವಾದ ಗಂಧಮಾಲ್ಯಾದಿಗಳಿಂದ ಅಲಂಕರಿಸಿ ಆಮೇಲೆ ಫಲಪಲ್ಲವಗಳನ್ನಿಟ್ಟು ಕೌತುಕಮಂಗಳವನ್ನಾಚರಿಸಿ ಅನುಪಮನಾದ ನೃಸಿಂಹಮೂರ್ತಿಯನ್ನು ಆ ಕುಂಭದಲ್ಲಿ ಆವಾಹನೆ ಮಾಡಬೇಕು. ಬಳಿಕ ನೃಸಿಂಹಮಂತ್ರರಾಜದಿಂದ ವಿಧಿವತ್ತಾಗಿ, ಷೋಡಶೋಪಚಾರ ಪೂಜೆಗಳಿಂದ ಆ ಮಧ್ಯದಲ್ಲಿಯೆ ಪ್ರಸಾದವನ್ನು ಪ್ರಾರ್ಥಿಸಿ ಆ ಕುಂಭದಲ್ಲಿಯೆ ಶ್ರೀಹರಿಯನ್ನಾವಾಹನೆಗೈದು, ಆ ಸ್ವಾಮಿಯನ್ನು ವಿವಿಧಬಾಹ್ಯೋಪಚಾರಗಳಿಂದ ವಿಧಿವತ್ತಾಗಿ ಪೂಜಿಸಬೇಕು.

೩೫–೩೬. ಇದಾದ ಬಳಿಕ ಆ ಕುಂಭದ ವಾಯವ್ಯದಿಕ್ಕಿನಲ್ಲಿ ಯಜ್ಞೇಶ್ವರ

ಅಷ್ಟೋತ್ತರಸಹಸ್ರಂ ಚ ಜುಹುಯಾದ್ವಿಧಿವದ್ಗುರುಃ ।
ಸಂಪಾತಾನ್ ಪ್ರಾಪಯೇತ್ತತ್ರ ಕುಂಭಮಧ್ಯೇ ತದಂತತಃ ॥ ೩೬ ॥
ರಥಂ ಸುಶೋಭನಂ ಕೃತ್ವಾ ಪತಾಕಾಗಂಧಮಾಲ್ಯಕೈಃ ।
ಸರ್ವಾಂಗಂ ಸೇಚಯೇತ್ತಸ್ಯ ಗಂಧಚಂದನವಾರಿಭಿಃ ॥ ೩೭ ॥
ಧೂಪಯೇತ್ಕಾಲಾಗುರುಣಾ ಶಂಖಕಾಹಾಲನಿಸ್ವನೈಃ ।
ಧ್ವಜೇ ತಸ್ಯ ನೃಸಿಂಹಸ್ಯ ಪ್ರತಿಷ್ಠಾಪ್ಯ ಸಮೀರಣಂ ॥ ೩೮ ॥
ಪೂಜಯಿತ್ವಾ ವಿಧಾನೇನ ರಕ್ತಸ್ರಗ್ಗಂಧಮಾಲ್ಯಕೈಃ ।
ಇಮಂ ಮಂತ್ರಂ ಸಮುಚ್ಚಾರ್ಯ ಸುಪರ್ಣಂ ಪ್ರಾರ್ಥಯೇತ್ತತಃ ॥

ಯೋ ವಿಶ್ವಪ್ರಾಣಹೇತುಸ್ತನುರಪಿ ಚ ಹರೇ
ರ್ಯಾನಕೇತುಸ್ವರೂಪೋ
ಯಂ ಸಂಚಿಂತ್ಯೈವ ಸದ್ಯಃ ಸ್ವಯಮುರಗವಧೂ
ವರ್ಗಗರ್ಭಾಃ ಪತಂತಿ ।
ಚಂಚಚ್ಚಂಡೋರುತುಂಡತ್ರುಟಿತ ಫಣಿವಸಾ
ರಕ್ತಪಂಕಾಂಕಿತಾಸ್ಯಂ
ವಂದೇ ಛಂದೋಮಯಂ ತಂ ಖಗಪತಿಮಮಲಂ
ಸ್ವರ್ಣವರ್ಣಂ ಸುಪರ್ಣಂ ॥

---

ನನ್ನು ಸ್ಥಾಪಿಸಿ ಸಮಿತ್ತು-ಆಜ್ಯ-ಚರುಗಳಿಂದ ಗುರುವಾದವನು ವಿಧಿವತ್ತಾಗಿ ನೃಸಿಂಹಾಷ್ಟೋತ್ತರ ಶತನಾಮಗಳಿಂದ ಹೋಮಮಾಡಬೇಕು. ಆ ಹೋಮದ ಕಡೆಯಲ್ಲಿ ಕುಂಭಮಧ್ಯೆ ಸಂಪಾತಗಳನ್ನು (ಆಜ್ಯಧಾರೆಗಳನ್ನು) ಬೀಳಿಸಬೇಕು.

೩೭. ಬಳಿಕ ರಥವನ್ನು ಪತಾಕೆಗಳಿಂದಲೂ, ಗಂಧಮಾಲ್ಯಗಳಿಂದಲೂ ಸಿಂಗರಿಸಿ ಮಂಗಳಕರವನ್ನಾಗಿಸಿ, ಆ ಮಂಗಳಕುಂಭದ ಗಂಧಚಂದನಜಲದಿಂದ ಸರ್ವಾಂಗವಾಗಿ ಸೇಚನಮಾಡಬೇಕು.

೩೮–೩೯. ಶಂಖ ಕಹಳೆಗಳು ಭೋರ್ಗರೆಯುತ್ತಿರಲು ಕೃಷ್ಣಾಗುರುಧೂಪವನ್ನು ಆ ರಥಕ್ಕೆ ಹಾಕತಕ್ಕುದು. ಇದಾದಬಳಿಕ ಆ ನೃಸಿಂಹನ ಧ್ವಜದಲ್ಲಿ ವಾಯುದೇವನನ್ನು ಪ್ರತಿಷ್ಠಿಸಬೇಕು. ತರುವಾಯ ಆತನನ್ನು ರಕ್ತಮಾಲ್ಯ, ರಕ್ತಗಂಧ, ರಕ್ತಪುಷ್ಪಗಳಿಂದ ಶಾಸ್ತ್ರೋಕ್ತವಾಗಿ ಪೂಜಿಸಿದ ಬಳಿಕ ಈ ಮುಂದೆ ಹೇಳುವ ಮಂತ್ರವನ್ನು ಪುರಶ್ಚರಣೆಮಾಡಿಕೊಂಡು ಗರುಡದೇವನನ್ನು ಪ್ರಾರ್ಥಿಸತಕ್ಕುದು.

೪೦. "ಯಾವನು ವಿಶ್ವದ ಜೀವನಕ್ಕೆ ಕಾರಣನೋ, ಯಾವನ ಮೈಯು ಶ್ರೀಹರಿಗೆ ಯಾನಕೇತುಸ್ವರೂಪವೋ, ಯಾವನನ್ನು ಸ್ಮರಣೆಮಾಡಿದೊಡನೆಯೇ ಪನ್ನಗಾಂಗನೆಯರ ಗರ್ಭನಿರ್ಭೇದವಾಗಿಬೀಳುವುದೋ, ಅಂತಹ ಹೊಳೆಹೊಳೆವ

ಬ್ರಹ್ಮಘೋಷೇ ಶಂಖನಾದೈರ್ನಾನಾವಾದ್ಯಸುವಿಸ್ತರೈಃ ।
ರಥಮೂರ್ಧ್ನಿ ಸ್ಥಾಪಯೇತ್ತಂ ಚಾರುಸೂಕ್ತಂ ಸಮುಚ್ಚರನ್ ॥ ೪೧ ॥
ತಸ್ಯೋಪರಿಷ್ಟಾತ್ತಂ ಕುಂಭಂ ಸಮಂತಾತ್ ಪ್ಲಾವಯನ್ ರಥಂ ।
ತ್ರಿರುಚ್ಚರನ್ ಮಂತ್ರರಾಜಂ ಸೇಚಯೇದ್ಬ್ರಹ್ಮಣಾ ಸಹ ॥ ೪೨ ॥
ತತಃ ಪೂರ್ಣಾಹುತಿಂ ದತ್ವಾ ಬ್ರಹ್ಮಣೇ ದಕ್ಷಿಣಾಂ ದದೇತ್ ।
ಆಚಾರ್ಯಂ ದಕ್ಷಿಣಾಂ ದದ್ಯಾದ್ಯೇನ ತುಷ್ಯತಿ ತದ್ಗುರುಃ ॥ ೪೩ ॥
ಬ್ರಹ್ಮಣಾನ್ಭೋಜಯೇದಂತೇ ಪಾಯಸೇ ಮಧುಸರ್ಪಿಷಾ ।
ದ್ವಾದಶಾಕ್ಷರಮಂತ್ರೇಣ ಬಲಭದ್ರಸ್ಯ ಕಾರಯೇತ್ ॥ ೪೪ ॥
ಲಾಂಗಲಂಚ ಪವಿರವನ್ಮಂತ್ರಃಸ್ಯಾಲ್ಲಾಂಗಲಧ್ವಜೇ ।
ಅಥವಾ ದ್ವಿಷಡ್ವರ್ಣೋऽಪಿ ಮೂಲಮಂತ್ರಃ ಪ್ರಕೀರ್ತಿತಃ ॥ ೪೫ ॥

---

ದೊಡ್ಡ ಕೊಕ್ಕಿನಿಂದ ತುಂಡು ತುಂಡಾಗಿಸಿದ ಸರ್ಪಗಳ ವಸೆ, ರಕ್ತಗಳ ಕೆಸರಿನಿಂದ ಕೆಸರೊಗೆದ ಮುಖವುಳ್ಳ, ವೇದಪ್ರತಿಪಾದ್ಯನಾದ ಅಮಲನೂ, ಸುವರ್ಣವರ್ಣನೂ ಪಕ್ಷಿರಾಜನೂ ಆದ ಸುಪರ್ಣನನ್ನು ನಮಸ್ಕರಿಸುವೆನು.

೪೧. ಹೀಗೆ ಮಂತ್ರವನ್ನು ಪುರಶ್ಚರಣೆಮಾಡಿದತರುವಾಯ, ವೇದಘೋಷಗಳಿಂದಲೂ, ಶಂಖನಾದದಿಂದಲೂ, ಇತರ ವಾದ್ಯವಾದನಧ್ವನಿಯಿಂದಲೂ ಅಮೋಘವಾದ ವೇದಸೂಕ್ತವನ್ನು ಉಚ್ಚರಿಸುತ್ತ ರಥದ ಮೂರ್ಧಾನದಲ್ಲಿ ಆ ಗರುಡದೇವನನ್ನು ಸಂಸ್ಥಾಪಿಸಬೇಕು.

೪೨. ಆ ತರುವಾಯ ಆ ಗರುಡನಮೇಲೆ ಮಂತ್ರಕುಂಭೋದಕವನ್ನು ಸುತ್ತಲೂ ಸುರಿದು ಮಂತ್ರರಾಜವನ್ನು ಮೂರಾವೃತ್ತಿ ಉಚ್ಚರಿಸಿ ಬ್ರಹ್ಮನೊಡನೆ ಆ ತೀರ್ಥದಿಂದ ರಥವನ್ನು ಪ್ರೋಕ್ಷಿಸಬೇಕು.

೪೩. ಬಳಿಕ ಪೂರ್ಣಾಹುತಿಯನ್ನು ಕೊಟ್ಟು ಬ್ರಹ್ಮನಿಗೆ ದಕ್ಷಿಣೆಯನ್ನು ಕೊಡಬೇಕು. ಇದಾದಮೇಲೆ ಆಚಾರ್ಯನಿಗೆ ದಕ್ಷಿಣೆಯನ್ನಿತ್ತು ಆತನನ್ನು ಸಂತೋಷಗೊಳಿಸಬೇಕು.

೪೪–೪೫. ಕಡೆಯಲ್ಲಿ ಪಾಯಸದಿಂದಲೂ, ಮಧುಸರ್ಪಿಷದಿಂದಲೂ ಬ್ರಾಹ್ಮಣರನ್ನು ಭೋಜನಮಾಡಿಸಬೇಕು. ಆಮೇಲೆ ಬಲಭದ್ರದೇವನ ರಥದಲ್ಲಿ ಲಾಂಗಲಧ್ವಜದಲ್ಲಿಯು ಲಾಂಗಲವನ್ನು "ಪವಿರವನ್" ಎಂಬ ಮಂತ್ರದಿಂದ ಸ್ಥಾಪಿಸತಕ್ಕದ್ದು. ಅಥವಾ ಈ ಲಾಂಗಲಸ್ಥಾಪನೆಗೆ ಹನ್ನೆರಡು ವರ್ಣಗಳಿಂದ ಕೂಡಿದ ಮೂಲಮಂತ್ರವನ್ನಾದರೂ ವಿನಿಯೋಜಿಸಬಹುದೆಂದು ಪ್ರಕೀರ್ತಿತವಾಗಿರುವುದು. ಈ ಮಂತ್ರದಿಂದಲೇ ಬಲಭದ್ರದೇವನ ರಥವನ್ನು ಪ್ರತಿಷ್ಠಿಸಬೇಕು.

**ಲಕ್ಷ್ಮೀಸೂಕ್ತೇನ ಭದ್ರಾಯಾಃ ಪ್ರತಿಷ್ಠಾಪ್ಯೋ ರಥಸ್ತಥಾ ।**
**ನಾಭಿಹೃದಾನ್ಮುರಾರೇಸ್ತ್ವಂ ಬ್ರಹ್ಮಾಂಡಾವಲಿರೂಪಧೃತ್ ॥ ೪೬ ॥**
**ಆಸನಂ ಚತುರಾಸ್ಯಸ್ಯ ಶ್ರಿಯೋ ವಾಸ ಸ್ಥಿರೋಭವ ।**
**ಇಮಂ ಮಂತ್ರಂ ಸಮುಚ್ಚಾರ್ಯ ಧ್ವಜಪದ್ಮಂ ಸಮುಚ್ಛ್ರಯೇತ್॥೪೭॥**
**ಯಿಯಾನ್ವಿಶೇಷೋ ಹವಿಷಾ ತ್ರಯಾಣಾಂಚ ಪೃಥಕ್ ಪೃಥಕ್ ।**
**ಪಂಚ ಪಂಚಭಿಹೋತವ್ಯ ಏಕೈಕಂ ತು ವಿಭಾಗಶಃ ॥ ೪೮ ॥**
**ಇತ್ಥಂ ರಥಂ ಪ್ರತಿಷ್ಠಾಪ್ಯ ಸುವರ್ಣಂ ಗಾಂ ಚ ವಸ್ತ್ರಕಂ ।**
**ಧಾನ್ಯಂ ಚ ದಕ್ಷಿಣಾಂ ದದ್ಯಾತ್ಸಂಮ್ಯಗ್ದೇವಸ್ಯ ಭಕ್ತಿತಃ ॥ ೪೯ ॥**
**ಏವಂ ಪ್ರತಿಷ್ಠಿತೇ ತತ್ರ ಸ್ಯಂದನೇಽಥ ಸುಭೂಷಿತೇ ।**
**ಆರೋಪ್ಯ ದೇವಂ ವಿಧಿವದ್ಬ್ರಹ್ಮಘೋಷಪುರಃಸರಂ ॥ ೫೦ ॥**
**ಜಯಮಂಗಲಶಬ್ದೈಶ್ಚ ನಾನಾವಾದ್ಯಪುರಃಸರೈಃ ।**
**ಚಾಮರಾಂದೋಲನೈರ್ಧೂಪೈಃ ಪುಷ್ಪವೃಷ್ಟಿಭಿರೇವಚ ॥ ೫೧ ॥**

---

೪೬–೪೭. ತರುವಾಯ ಲಕ್ಷ್ಮೀಸೂಕ್ತದಿಂದ ಬಲಭದ್ರಾದೇವಿಯ ರಥದ ಪ್ರತಿಷ್ಠೆಯನ್ನು ಮಾಡಬೇಕು. ಬಳಿಕ, "ಎಲೈ ಪದ್ಮವೇ! ನೀನು ಮುರರಿಪುವಾದ ಶ್ರೀಮನ್ನಾರಾಯಣಮೂರ್ತಿಯ ಹೊಕ್ಕಳ ಮಡುವಿನಿಂದುದಿಸಿ ಬ್ರಹ್ಮಾಂಡ ಗೋಳಕದ ರೂಪವನ್ನು ಧರಿಸಿರುವುದೂ ಅಲ್ಲದೆ ನಾಲ್ಮುಗನಾದ ಬ್ರಹ್ಮದೇವನ ಮತ್ತು ಶ್ರೀ ಲಕ್ಷ್ಮೀದೇವಿಯ ವಾಸಭವನವಾಗಿರುವೆ. ಇಂತಹ ನೀನು ಸ್ಥಿರವಾಗಿರು" ಎಂಬ ಈ ಮಂತ್ರವನ್ನು ಉಚ್ಚರಿಸಿ ಆ ರಥದ ಧ್ವಜದಲ್ಲಿ ಪದ್ಮವನ್ನು ಸ್ಥಾಪಿಸಿ ಎತ್ತಿಕಟ್ಟಬೇಕು.

೪೮. ಈ ಮೂರು ರಥಗಳ ಪ್ರತಿಷ್ಠೆಗಳಲ್ಲಿ ಇಷ್ಟು ಮಾತ್ರ ವಿಶೇಷವಿರುತ್ತದೆ. ಮೂರು ರಥಗಳ ಪ್ರತಿಷ್ಠೆಗಳಿಗೂ ಬೇರೆಬೇರೆಯಾಗಿ ಹವಿಸ್ಸುಗಳನ್ನು ಐದೈದು ಆವೃತ್ತಿ ಆಯಾ ವಿಭಾಗಗಳಿಗನುಗುಣವಾಗಿ ಒಂದೊಂದಕ್ಕೂ ಹೋಮ ಮಾಡತಕ್ಕುದು.

೪೯. ಹೀಗೆ ಮೂರು ರಥಗಳನ್ನೂ ಪ್ರತಿಷ್ಠಿಸಿದ ತರುವಾಯ ಭಗವದ್ಭಕ್ತಿಯಿಂದ ಸುವರ್ಣವನ್ನೂ, ಗೋವನ್ನೂ, ವಸ್ತ್ರವನ್ನೂ, ಧಾನ್ಯದಕ್ಷಿಣೆಗಳನ್ನೂ ದಾನಮಾಡಬೇಕು.

೫೦. ಈ ಪ್ರಕಾರವಾಗಿ ಪ್ರತಿಷ್ಠಿತವಾದ ಸರ್ವಾಲಂಕೃತರಥದಲ್ಲಿ ವೇದಘೋಷವನ್ನು ಮಾಡುತ್ತ ವಿಧ್ಯುಕ್ತರೀತಿಯಿಂದ ಸ್ವಾಮಿಯನ್ನು ಆರೋಹಣ ಮಾಡಿಸಬೇಕು.

೫೧–೫೩. ಹೀಗೆ ಸ್ವಾಮಿಯನ್ನು ರಥವನ್ನು ಆರೋಹಣಮಾಡಿಸುವಾಗ, ಜಯಮಂಗಲಶಬ್ದಗಳಿಂದಲೂ, ನಾನಾವಿಧವಾದ ವಾಧ್ಯಧ್ವನಿಪುರಸ್ಸರ

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈರ್ನೀಯತೇಸ್ಮ ರಥಂ ಪ್ರತಿ ।
ಹಯೈಃ ಸುಲಕ್ಷಣೈರ್ದಾಂತೈರ್ಬಲೀವರ್ದೈರಥಾಪಿ ವಾ ॥ ೫೨ ॥
ಪುರುಷೈರ್ವಿಷ್ಣುಭಕ್ತೈರ್ವಾ ನೇತವ್ಯಾ ಹ್ಯಪ್ರಮಾದತಃ ।
ಪ್ರೀಣಯಿತ್ವಾ ಜನಂ ಸರ್ವಂ ಭಕ್ಷಭೋಜ್ಯಾದಿಲೇಪನೈಃ ॥ ೫೩ ॥
ರಥಸ್ಯೋಪರಿ ದೇವೇಭ್ಯೋ ಬಲಿಮಂತ್ರೈಶ್ಚ ಭೋ ದ್ವಿಜಾಃ ।
ಬಲಿಂ ಗೃಹ್ಣಂತು ಭೋ ದೇವಾ ಆದಿತ್ಯಾ ವಸವಸ್ತಥಾ ॥ ೫೪ ॥
ಮರುತಶ್ಚಾಶ್ವಿನೌ ರುದ್ರಾಃ ಸುಪರ್ಣಾಃ ಪನ್ನಗಾ ಗ್ರಹಾಃ ।
ಅಸುರಾ ಯಾತುಧಾನಾಶ್ಚ ರಥಸ್ಥಾಶ್ಚೈವ ದೇವತಾಃ ॥ ೫೫ ॥
ದಿಕ್ಪಾಲಾ ಲೋಕಪಾಲಾಶ್ಚ ಯೇ ಚ ವಿಘ್ನವಿನಾಯಕಾಃ ।
ಜಗತಃ ಸ್ವಸ್ತಿ ಕುರ್ವಂತು ದಿವ್ಯಾ ಮಹರ್ಷಯಸ್ತಥಾ ॥ ೫೬ ॥
ಅವಿಘ್ನಮಾಚರಂತ್ವೇತೇ ಮಾ ಸಂತು ಪರಿಪಂಥಿನಃ ।
ಸೌಮ್ಯಾ ಭವಂತು ತೃಪ್ತಾಶ್ಚ ದೈತ್ಯಾ ಭೂತಗಣಾಸ್ತಥಾ ॥ ೫೭ ॥
ತತಸ್ತು ನೀಯತೇ ದೇವಃ ಸಮಭೂಮೌ ಸಮುಚ್ಚರನ್ ।
ಮಂತ್ರಂ ವೈಷ್ಣವಗಾಯತ್ರೀಂ ವಿಷ್ಣೋಃ ಸೂಕ್ತಂ ಪವಿತ್ರಕಂ ॥ ೫೮ ॥

---

ವಾಗಿಯೂ, ಚಾಮರಾಂದೋಳನಗಳಿಂದಲೂ, ಧೂಪಗಳಿಂದಲೂ, ಪುಷ್ಪವೃಷ್ಟಿಗಳಿಂದಲೂ ಬ್ರಾಹ್ಮಣರು, ಕ್ಷತ್ರಿಯರು, ವೈಶರೂ, ಅಶ್ವಗಳಿಂದಲೋ ಅಥವಾ ಬಲಾಢ್ಯಗಳಾದ ವೃಷಭಗಳಿಂದಲೋ, ವಿಷ್ಣುಭಕ್ತರಾದ ಪುರುಷರಿಂದಲೋ ಬಹು ಜಾಗರೂಕತೆಯಿಂದ ಸ್ವಾಮಿಯನ್ನು ರಥದಬಳಿಗೆ ಬಿಜೆಗೈಸಬೇಕು. ಆಗ ಅಲ್ಲಿರುವ ಜನರೆಲ್ಲರಿಗೂ ಭಕ್ಷ್ಯಭೋಜ್ಯಾದಿಗಳನ್ನು ಹಂಚಿ ಸಂತೋಷವನ್ನುಂಟುಮಾಡಬೇಕು.

೫೪–೫೬. ಎಲೈ ದ್ವಿಜರೇ! ತರುವಾಯ ರಥದಮೇಲಿರುವ ದೇವತೆಗಳಿಗೆಲ್ಲರಿಗೂ ಈ ಮುಂದೆ ಹೇಳುವ ಬಲಿಮಂತ್ರಗಳಿಂದ ಬಲಿಯನ್ನು ನೀಡಬೇಕು. "ಎಲೈ ದೇವತೆಗಳಿರಾ! ಆದಿತ್ಯರೂ, ವಸುಗಳೂ, ಮರುತ್ತುಗಳೂ, ಅಶ್ವಿನೀದೇವತೆಗಳೂ, ರುದ್ರರೂ, ಸುಪರ್ಣರೂ, ಪನ್ನಗರೂ, ಗ್ರಹಗಳೂ, ಅಸುರರೂ, ಯಾತುಧಾನರೂ, ರಥದಲ್ಲಿರುವ ಇತರ ದೇವತೆಗಳೂ, ದಿಕ್ಪಾಲಕರೂ, ಲೋಕಪಾಲಕರೂ, ವಿಘ್ನನಾಯಕರೂ, ದೇವಲೋಕದ ಮಹರ್ಷಿಗಳೂ ಆದ ನೀವೆಲ್ಲರೂ ಜಗಮಂಗಳವನ್ನುಂಟುಮಾಡುವವರಾಗಿರಿ.

೫೭. ನೀವೆಲ್ಲರೂ ದೇವಕಾರ್ಯಕ್ಕೂ, ಜಗತ್ತಿಗೂ, ಜಗಜ್ಜನಕ್ಕೂ ವಿಘ್ನಗಳನ್ನು ಮಾಡದಿರುವವರಾಗಿರಿ. ಶತ್ರುಗಳೆಂಬುವರೇ ಇಲ್ಲದಂತಾಗಲಿ. ದೈತ್ಯರೂ, ಭೂತಗಣಗಳೂ ಸೌಮ್ಯರೂ, ತೃಪ್ತರೂ ಆಗಲಿ."

೫೮–೬೦. ಹೀಗೆ ಬಲಿಹರಣವಾದ ಬಳಿಕ ಸಮಭೂಮಿಯಲ್ಲಿ ವಿಷ್ಣು

ವಾಮದೇವ್ಯೈಃ ಪವಿತ್ರೈಶ್ಚ ಮಾನಸ್ತೋಕೈ ರಥಂತರೈಃ ।
ತತಃ ಪುಣ್ಯಾಹಘೋಷೇಣ ಕೃತವಾದಿತ್ರನಿಃಸ್ವನಂ ॥ ೫೯ ॥
ಶನೈಃಶನೈ ರಥೋ ನೇಯೋ ರಥಸ್ನೇಹಾತ್ತು ಚಕ್ರಿಣಃ ।
ತತ್ರೋತ್ಪಾತಾನ್ ಪ್ರವಕ್ಷ್ಯಾಮಿ ರಥೇಽತ್ರ ದ್ವಿಜಸತ್ತಮಾಃ ॥ ೬೦ ॥
ಈಷಾಭಂಗೇ ದ್ವಿಜಭಯಂ ಭಗ್ನೇಽಕ್ಷೇ ಕ್ಷತ್ರಿಯಕ್ಷಯಃ ।
ತುಲಾಭಂಗೇ ವೈಶ್ಯನಾಶಃ ಶಮ್ಯಾ ಶೂದ್ರಭಯಂ ಭವೇತ್ ॥ ೬೧ ॥
ಧುರಾಭಂಗೇ ತ್ವನಾವೃಷ್ಟಿಃ ಪೀಠಭಂಗೇ ಪ್ರಜಾಭಯಂ ।
ಪರಚಕ್ರಾಗಮಂ ವಿದ್ಯಾಚ್ಚಕ್ರಭಂಗೇ ರಥಸ್ಯ ತು ॥ ೬೨ ॥
ಧ್ವಜಸ್ಯ ಪತನೇ ವಿಪ್ರಾ ನೃಪೋಽನ್ಯೋ ಜಾಯತೇ ಧ್ರುವಂ ।
ಪ್ರತಿಮಾಭಂಗತಾಯಾಂ ತು ರಾಜ್ಞೋ ಮರಣಮಾದಿಶೇತ್ ॥ ೬೩ ॥
ಪರ್ಯಸ್ತೇತು ರಥೇ ವಿಪ್ರಾಸ್ಸರ್ವಜಾನಪದಕ್ಷಯಃ ।
ಉತ್ಪನ್ನೇಷ್ವೇವಮಾದ್ಯೇಷು ಉತ್ಪಾತೇಷ್ವಶುಭೇಷು ಚ ॥ ೬೪ ॥

---

ಗಾಯತ್ರೀಮಂತ್ರವನ್ನೂ, ಪವಿತ್ರವಾದ ವಿಷ್ಣುಸೂಕ್ತವನ್ನೂ ಪಠಿಸುತ್ತ ರಥಾರೂಢನಾದ ಸ್ವಾಮಿಯನ್ನು ಉತ್ಸವ ತರತಕ್ಕುದು. ಆಗ ಪವಿತ್ರವಾದ ವಾಮದೇವಮಾನಸ್ತೋಕಾದಿ ಮಂತ್ರಗಳನ್ನೂ, ರಥಂತರಸೂಕ್ತಗಳನ್ನೂ ಹೇಳುತ್ತ, ಪುಣ್ಯಾಹಘೋಷದಿಂದಲೂ, ವಾದ್ಯಧ್ವನಿಗಳಿಂದಲೂ ವಿಷ್ಣುಭಕ್ತಿಪೂರ್ವಕವಾಗಿ ರಥವನ್ನು ಎಳೆಯಬೇಕು. ಅಯ್ಯಾ ಬ್ರಾಹ್ಮಣರೇ! ಈ ರಥೋತ್ಸವ ಸಮಯದಲ್ಲಿ ಆಗಬಹುದಾದ ಉತ್ಪಾತಾದಿಗಳನ್ನೀಗ ಹೇಳುತ್ತೇನೆ; ಕೇಳಿರಿ.

೬೧. ರಥವನ್ನೆಳೆಯುತ್ತಿರುವಾಗ ಅದರ ಯಾವ ಭಾಗವಾದರೂ ಮುರಿದುದಾದರೆ ಬ್ರಾಹ್ಮಣರಿಗೆ ಭಯವು. ಅಚ್ಚುಮರವು ಮುರಿದರೆ ಕ್ಷತ್ರಿಯರಿಗೆ ವಿನಾಶವುಂಟಾಗುತ್ತದೆ. ತೊಲೆಯು ಮುರಿದರೆ ವೈಶ್ಯರಿಗೆ ನಾಶವು. ಶಮ್ಯೆಯು ಮುರಿದರೆ ಶೂದ್ರರಿಗೆ ಭಯವೂ ಉಂಟಾಗುತ್ತದೆ.

೬೨. ನೊಗವು ಮುರಿದರೆ ಅನಾವೃಷ್ಟಿಯು. ಪೀಠವು ಮುರಿದರೆ ಪ್ರಜೆಗಳಿಗೆ ಭಯವು. ಚಕ್ರವು ಮುರಿದರೆ ಶತ್ರುಗಳಿಂದ ಭಯವೆಂದು ತಿಳಿಯಬೇಕು.

೬೩. ಎಲೈ ಬ್ರಾಹ್ಮಣರೇ! ರಥದ ಧ್ವಜವು ಮುರಿದುಬಿದ್ದರೆ ಆ ರಾಷ್ಟ್ರದಲ್ಲಿ ಮತ್ತೊಬ್ಬ ರಾಜನು ಹುಟ್ಟುವನೆಂಬುದು ಖಂಡಿತವು. ರಥಾರೂಢವಾದ ದೇವತಾಪ್ರತಿಮೆಯೇನಾದರೂ ಭಂಗಗೊಂಡುದಾದರೆ ಆ ರಾಷ್ಟ್ರದ ರಾಜನಿಗೆ ಮರಣವುಂಟಾಗುವುದೆಂದು ಹೇಳಬೇಕು.

೬೪–೬೫. ಎಲೈ ವಿಪ್ರರೇ! ರಥವೇನಾದರೂ ಮುಗ್ಗರಿಸಿದುದಾದರೆ ಸಮಸ್ತ ಜನಪದದವರಿಗೂ ವಿನಾಶವುಂಟಾಗುತ್ತದೆ. ಇಂತಹ ಅಮಂಗಳಕರವಾದ ಉತ್ಪಾತಗಳೇನಾದರೂ ಉಂಟಾದಲ್ಲಿ ಪುನಃ ಬಲಿಕರ್ಮವನ್ನು ಮಾಡಿ

ಬಲಿಕರ್ಮ ಪುನಃ ಕುರ್ಯಾಚ್ಛಾಂತಿಹೋಮಂ ತಥೈವ ಚ ।
ಬ್ರಾಹ್ಮಣಾನ್ಭೋಜಯೋದ್ಭೂಯೋ ದದ್ಯಾದ್ದಾನಾನಿ ಚೈವಹಿ ॥ ೬೫ ॥
ಪೂರ್ವೋತ್ತರೇ ಚ ದಿಗ್ಭಾಗೇ ರಥಸ್ಯಾಗ್ನಿಂ ಪ್ರಕಲ್ಪಯೇತ್ ।
ಸಮಿದ್ಭಿರ್ಘೃತಮಧ್ವಾಜ್ಯಮೂಲಾಗ್ರಾಭಿಶ್ಚ ಹೋಮಯೇತ್ ॥ ೬೬ ॥
ಪಾಲಾಶಾಭಿರ್ದ್ವಿಜಶ್ರೇಷ್ಠಾ ಮಂತ್ರರಾಜೇನ ದೀಕ್ಷಿತಃ ।
ಸೋಮಾಯಾಗ್ನಯೇ ಪ್ರಜಾಭ್ಯಃ ಪ್ರಜಾನಾಂಪತಯೇ ತಥಾ ॥ ೬೭ ॥
ಗ್ರಹೇಭ್ಯಶ್ಚ ಬ್ರಹ್ಮಣೇ ಚ ದಿಕ್ಪಾಲೇಭ್ಯಸ್ತದಂತತಃ ।
ಯತ್ರಯತ್ರ ರಥೇ ದೋಷಸ್ತತ್ರತತ್ರ ಚ ದೀಕ್ಷಿತಃ ॥ ೬೮ ॥
ಜುಹುಯಾತ್ಪ್ರತಿಷ್ಠಾಮಂತ್ರೇಣ ವಿಶೇಷಸ್ಸರ್ವತೋ ಭವೇತ್ ।
ಬ್ರಾಹ್ಮಣೈಸ್ಸಹಿತಃ ಕುರ್ಯಾದ್ಧೋಮಾಂತೇ ಶಾಂತಿವಾಚನಂ ॥ ೬೯ ॥
ಸ್ವಸ್ತಿ ಭವತು ವಿಪ್ರೇಭ್ಯಸ್ಸ್ವಸ್ತಿ ರಾಜ್ಞೋಽಸ್ತು ನಿತ್ಯಶಃ ।
ಗೋಭ್ಯಸ್ಸ್ವಸ್ತಿ ಪ್ರಜಾಭ್ಯಸ್ತು ಜಗತಶ್ಶಾಂತಿರಸ್ತು ವೈ ॥ ೭೦ ॥
ಸ್ವಸ್ತ್ಯಸ್ತು ದ್ವಿಪದೇ ನಿತ್ಯಂ ಶಾಂತಿರಸ್ತು ಚತುಷ್ಪದೇ ।
ಶಂ ಪ್ರಜಾಭ್ಯಸ್ತಥೈವಾಸ್ತು ಶಂ ತಥಾತ್ಮನಿ ಚಾಸ್ತು ನಃ ॥ ೭೧॥

---

ಶಾಂತಿಹೋಮವನ್ನು ಮಾಡಬೇಕಲ್ಲದೆ, ಬ್ರಾಹ್ಮಣಭೋಜನ ಮಾಡಿಸುವುದೂ ಅಲ್ಲದೆ, ದೀನಾನಾಥರಿಗೆ ಅನ್ನದಾನವನ್ನೂ ಅಧಿಕವಾಗಿ ಮಾಡಬೇಕು.

೬೬. ರಥದ ಪೂರ್ವೋತ್ತರ ದಿಗ್ಭಾಗಗಳಲ್ಲಿ ಅಗ್ನಿಯನ್ನು ಆವಾಹಿಸಿ ಸಮಿತ್ತುಗಳಿಂದಲೂ, ಘೃತ, ಮಧುಗಳಿಂದಲೂ ಆಜ್ಯಮೂಲಕವಾಗಿ ಹೋಮ ಮಾಡಬೇಕು.

೬೭–೬೯. ಎಲೈ ದ್ವಿಜಶ್ರೇಷ್ಠರೇ! ಬಳಿಕ ದೀಕ್ಷಿತನಾದವನು ಮಂತ್ರ ರಾಜವನ್ನು ಪುರಶ್ಚರಣೆಮಾಡುತ್ತ ಪಾಲಾಶಗಳಿಂದ ಸೋಮನಿಗೂ, ಅಗ್ನಿಗೂ ಪ್ರಜೆಗಳಿಗೂ, ಪ್ರಜಾಪತಿಗೂ, ಗ್ರಹಗಳಿಗೂ, ಬ್ರಹ್ಮನಿಗೂ, ದಿಕ್ಪಾಲಕರಿಗೂ ಆಹುತಿಗಳನ್ನು ಕೊಟ್ಟು ಹೋಮಮಾಡಬೇಕು. ಈ ಮಧ್ಯದಲ್ಲಿ ರಥದ ಯಾವ ಯಾವ ಭಾಗಗಳಲ್ಲಿ ದೋಷವಿರುತ್ತದೆಯೋ ಅಲ್ಲೆಲ್ಲ ದೀಕ್ಷಿತನು ರಥಪ್ರತಿಷ್ಠಾ ಮಂತ್ರಗಳಿಂದ ಹೋಮಮಾಡತಕ್ಕುದು. ಈ ಎಲ್ಲ ಹೋಮಗಳಲ್ಲಿಯೂ ಈ ಮಂತ್ರಗಳ ವಿನಿಯೋಗವು ವಿಶೇಷವಾಗುವುದು. ಹೋಮವು ಮುಗಿದ ಬಳಿಕ ದೀಕ್ಷಿತನು ಬ್ರಾಹ್ಮಣರೊಡಗೂಡಿ ಶಾಂತಿವಾಚನವನ್ನು ಮಾಡಬೇಕು.

೭೦. "ವಿಪ್ರರಿಗೆ ಸ್ವಸ್ತಿಯಾಗಲಿ; ರಾಜನಿಗೆ ಯಾವಾಗಲೂ ಕ್ಷೇಮವುಂಟಾಗಲಿ; ಗೋವುಗಳಿಗೂ, ಪ್ರಜೆಗಳಿಗೂ ಕ್ಷೇಮವಾಗಲಿ; ಜಗತ್ತಿಗೆ ಶಾಂತಿಯುಂಟಾಗಲಿ.

೭೧–೭೨. ದ್ವಿಪಾತ್ತುಗಳಿಗೂ, ಚತುಷ್ಪಾತ್ತುಗಳಿಗೂ ಸತತವೂ ಶಾಂತಿ

ಶಾಂತಿರಸ್ತು ಚ ದೇವಸ್ಯ ಭೂರ್ಭುವಸ್ಸ್ವಃ ಶಿವಂ ತಥಾ ।
ಶಾಂತಿರಸ್ತು ಶಿವಂ ಚಾಸ್ತು ಸರ್ವತಃ ಸ್ವಸ್ತಿರಸ್ತು ನಃ ॥ ೭೨ ॥
ತ್ವಂ ದೇವ ಜಗತಃ ಸ್ರಷ್ಟಾ ಪೋಷ್ಟಾ ಚೈವ ತ್ವಮೇವಹಿ ।
ಪ್ರಜಾಃ ಪಾಲಯ ದೇವೇಶ ಶಾಂತಿಂ ಕುರು ಜಗತ್ಪತೇ ॥ ೭೩ ॥
ಯಾತ್ರಾ ಕಾರಣಭೂತಸ್ಯ ಪುರುಷಸ್ಯ ಚ ಭೂಪತೇ ।
ದುಷ್ಟಾನ್ಗ್ರಹಾಂಸ್ತು ವಿಜ್ಞಾಯ ಗ್ರಹಶಾಂತಿಂ ಸಮಾಚರೇತ್ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ನಾರದಲಿಖಿತಪ್ರತಿಷ್ಠಾಸಾಹಿತ್ಯಸಂಭಾರಸಂಗ್ರಹಪತ್ರಂ — ವಿಶ್ವಕರ್ಮ ಕೃತ ಸ್ಯಂದನತ್ರಯನಿರ್ಮಾಣಪೂರ್ವಕ ರಥಪ್ರತಿಷ್ಠಾದಿವರ್ಣನಂ" ನಾಮ ಪಂಚವಿಂಶೋಽಧ್ಯಾಯಃ

---

ಯುಂಟಾಗಲಿ. ಪ್ರಜೆಗಳಿಗೆ ಶಾಂತಿಯುಂಟಾಗಲಿ; ಅಂತೆಯೇ ನಮ್ಮ ಆತ್ಮಕ್ಕೂ ಶಾಂತಿಯಾಗಲಿ. ಸ್ವಾಮಿಗೆ ಶಾಂತಿಯಾಗಲಿ, ಭೂರ್ಭುವಃ ಸ್ವರ್ಲೋಕಗಳಿಗೆ ಮಂಗಳವಾಗಲಿ. ಶಾಂತಿಯೂ, ಮಂಗಳವೂ, ಕ್ಷೇಮವೂ ನಮಗುಂಟಾಗಲಿ.

೭೩. ದೇವ! ನೀನು ಈ ಜಗತ್ತಿನ ಸೃಷ್ಟಿಕರ್ತನೂ, ಪಾಲನಕರ್ತನೂ ಆಗಿರುವೆ. ಓ ದೇವೇಶ! ಜಗತ್ತಿನ ಈ ಪ್ರಜೆಗಳನ್ನು ಪಾಲಿಸುವವನಾಗು. ಓ ಜಗತ್ಪತಿಯೇ! ಜಗತ್ತಿಗೆ ಶಾಂತಿಯನ್ನುಂಟುಮಾಡು!!"

೭೪. ಎಲೈ ಇಂದ್ರದ್ಯುಮ್ನರಾಜನೇ! ಇದು ಶಾಂತಿವಾಚನಮಂತ್ರವು. ಹೋಮಾಂತದಲ್ಲಿ ಈ ಮಂತ್ರಗಳನ್ನು ಪಠಿಸತಕ್ಕುದು ರಥಯಾತ್ರೆಗೆ ಕಾರಣ ಭೂತನಾದ ಪುರುಷನಿಗೆ ದುಷ್ಟಗ್ರಹಗಳಾವುವೆಂಬುದನ್ನು ತಿಳಿದುಕೊಂಡು ಈ ಪ್ರಕಾರವಾಗಿ ಗ್ರಹಶಾಂತಿಯನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ನಾರದಲಿಖಿತಪ್ರತಿಷ್ಠಾಸಾಹಿತ್ಯಸಂಭಾರ ಸಂಗ್ರಹಪತ್ರ—ವಿಶ್ವಕರ್ಮನು ರಥತ್ರಯವನ್ನು ನಿರ್ಮಾಣಮಾಡಿದುದು—ರಥಪ್ರತಿಷ್ಠಾದಿ ವರ್ಣನ"ವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡ್ವಿಂಶೋಽಧ್ಯಾಯಃ

## ಇಂದ್ರದ್ಯುಮ್ನಕೃತಭಗವತ್ಪೂಜನಂ— ಗಾಲಸ್ಯಪತಿವೃತ್ತಾಂತವರ್ಣನಂ

ಜೈಮಿನಿರುವಾಚ :—

ನಿರುತ್ಪಾತಂ ಸಮೇ ದೇಶೇ ವಿಧಿವರ್ತನಯಾಪಿ ಚ ।
ಪ್ರಾಸಾದನಿಕಟಂ ದೇವಾಃ ಪ್ರಾಪಿತಾಃ ಸುಮುಹೂರ್ತಕೇ ॥ ೧ ॥
ತತಃ ಶಾಲಾ ಸುಮಹತೀ ರತ್ನವರ್ಣವಿನಿರ್ಮಿತಾ ।
ನಿದೇಶಾದಿಂದ್ರದ್ಯುಮ್ನಸ್ಯ ನಿರ್ಮಿತಾ ವಿಶ್ವಕರ್ಮಣಾ ॥ ೨ ॥
ಸಭಾರ್ಚನಾಯಾಂ ವಸ್ತೂನಿ ಹವೀಂಷಿ ಚ ಸಮಿತ್ಕುಶಾಃ ।
ಭೋಜ್ಯಂ ನಾನಾವಿಧಂ ಗೀತನೃತ್ಯಾಂಶ್ಚ ವಿವಿಧಾಂಸ್ತಥಾ ॥ ೩ ॥
ಸಾಮ್ರಾಜ್ಯೇ ಯಾದೃಶೀ ಪೂರ್ವಂ ಸಂಪತ್ತಿರಭವತ್ಕ್ವಚಿತ್ ।
ತತಃ ಶ್ರೇಷ್ಠತರಾ ವಿಪ್ರಾಃ ಪ್ರತಿಷ್ಠಾಯಾಂ ಬಭೂವ ಹ ॥ ೪ ॥

---

## ಕನ್ನಡದ ಅನುವಾದ

### ಇಂದ್ರದ್ಯುಮ್ನಕೃತಭಗವತ್ಪೂಜನ— ಗಾಲಸ್ಯಪತಿವೃತ್ತಾಂತವರ್ಣನ

೧. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ! ತರುವಾಯ ಯಾವ ಉತ್ಪಾತಗಳೂ ಇಲ್ಲದ ಸಮಭೂಮಿಯಲ್ಲಿ ಶಾಸ್ತ್ರೋಕ್ತವಾದ ಕರ್ಮಗಳನ್ನಾಚರಿಸಿದ ತರುವಾಯ ಒಳ್ಳೆಯ ಮುಹೂರ್ತದಲ್ಲಿ ಶ್ರೀ ಜಗನ್ನಾಥ, ಬಲಭದ್ರ, ಸುಭದ್ರಾದೇವಿಯರ ದಾರುಮೂರ್ತಿಗಳನ್ನು ಪ್ರಾಸಾದದ ಬಳಿಗೆ ಬಿಜೆಗೊಳಿಸಿದರು.

೨. ತರುವಾಯ ಇಂದ್ರದ್ಯುಮ್ನ ಮಹಾರಾಜನ ಅಪ್ಪಣೆಯಂತೆ ವಿಶ್ವಕರ್ಮನು ಮಹತ್ತರವೂ, ರತ್ನವರ್ಣಶೋಭಿತವೂ ಆದ ಶಾಲೆಯನ್ನು ನಿರ್ಮಿಸಿದನು.

೩–೪. ಸಭಾ ಭವನದ ಪೂಜಾ ಸಮಯದಲ್ಲಿ ಪೂಜಾವಸ್ತುಗಳೂ, ಹವಿಸ್ಸುಗಳೂ, ಸಮಿತ್ತು ಮತ್ತು ಕುಶಗಳೂ, ನಾನಾ ವಿಧವಾದ ಭೋಜನ ಪದಾರ್ಥಗಳೂ, ವಿಧವಿಧವಾದ ಗೀತನೃತ್ಯಗಳೂ ಎಲ್ಲವೂ ಸಿದ್ಧವಾಗಿದ್ದುವಲ್ಲದೆ ಇಂದ್ರದ್ಯುಮ್ನನು ಪೂರ್ವದಲ್ಲಿ ಸಾಮ್ರಾಜ್ಯವನ್ನಾಳುತ್ತಿದ್ದಾಗ ಯಾವ ಸಂಪತ್ತುಗಳು ಕಂಗೊಳಿಸುತ್ತಿದ್ದುವೋ ಆ ಸಂಪತ್ತುಗಳಿಗಿಂತಲೂ ಶ್ರೇಷ್ಠತರಗಳಾದ ಸಂಪದ್ವಿಶೇಷಗಳು ಆ ಶಾಲಾಭವನದಲ್ಲಿಯೂ, ರಥಪ್ರತಿಷ್ಠಾದಿ ಸಮಯಗಳಲ್ಲಿಯೂ ವಿರಾಜಿಸುತ್ತಿದ್ದುವು.

ಗಾಲೋ ನಾಮ ಮಹೀಪಾಲಸ್ತದಾ ಕ್ಷಿತಿತಲೇಽಭವತ್ ।
ಸೋಽಪ್ಯತ್ರ ಪ್ರತಿಮಾಂ ಕೃತ್ವಾ ಮಾಧವಾಖ್ಯಾಂ ದೃಷನ್ಮಯೀಂ ॥ ೫ ॥
ಸ್ಥಾಪಯಿತ್ವಾತ್ರ ಪ್ರಾಸಾದೇ ಪೂಜಯಾಮಾಸ ವೃದ್ಧಿಮತ್ ।
ಕನೀಯಾಂಸಂ ಚ ಪ್ರಾಸಾದಂ ನಿರ್ಮಾಯ ನೃಪಸತ್ತಮಃ ॥ ೬ ॥
ತತ್ರ ತಾಂ ಸ್ಥಾಪಯಾಮಾಸ ತತೋ ನಿಷ್ಕೃತ್ಯ ಸಾದರಂ ।
ತತೋಽಸ್ಯ ನೃಪತಿರ್ದೂತಮುಖಾಚ್ಛೃತ್ವಾಽಸ್ಯ ಕರ್ಮ ತತ್ ॥ ೭ ॥
ಗಾಲೋಽಭ್ಯಾಗಾತ್ಸಸೈನ್ಯಸ್ಸನ್ ಕೃದ್ಧಸ್ತಂ ನೀಲಪರ್ವತಂ ।
ದೃಷ್ಟ್ವಾ ಪ್ರತಿಷ್ಠಾಸಂಭಾರಂ ಮರ್ತ್ಯೈಃ ಸ್ವಪ್ನೇಽಪಿದುರ್ಲಭಂ ॥ ೮ ॥
ವಿಸ್ಮಯಾವಿಷ್ಟಚೇತಾಸ್ಸ ತಸ್ಥೌ ಗಾಲೋ ನರಾಧಿಪಃ ।
ಕಿಮೇತದಿತಿ ವೃತ್ತಾಂತಂ ಕೋ ವಾ ಕಾರಯತೀದೃಶಮ್ ॥ ೯ ॥
ಯತ್ನಾದ್ದಿವ್ಯಂ ಸ ವಿಜ್ಞಾಯ ಇಂದ್ರದ್ಯುಮ್ನಂ ನರಾಧಿಪಂ ।
ಬ್ರಹ್ಮಲೋಕಾದಾಗತಂ ತಂ ಕರ್ತಾರಂ ದೇವವೇಶ್ಮನಃ ॥ ೧೦ ॥
ಪ್ರತಿಷ್ಠಾಪಯಿತುಂ ದೇವೈಃ ಸಾರ್ಧಂ ಸಂಭಾರಕಾರಕಂ ।
ಸಹಿತಂ ಪದ್ಮನಿಧಿನಾ ಗುರುಣಾ ನಾರದೇನ ಚ ॥ ೧೧ ॥

---

೫–೭. ಆ ಕಾಲದಲ್ಲಿ ಗಾಲನೆಂಬ ರಾಜನೊಬ್ಬನು ಭೂಮಂಡಲವನ್ನಾಳುತ್ತಿದ್ದನು. ಅವನೂ ಸಹ ಆ ಪುರುಷೋತ್ತಮ ಕ್ಷೇತ್ರದಲ್ಲಿ ಶಿಲಾಮಯವಾದ ಮಾಧವನ ಪ್ರತಿಮೆಯೊಂದನ್ನುಮಾಡಿಸಿ ಚಿಕ್ಕದೊಂದು ಪ್ರಾಸಾದವನ್ನು ನಿರ್ಮಿಸಿ ಆ ಪ್ರಾಸಾದದಲ್ಲಿ ಆ ಮೂರ್ತಿಯನ್ನು ಪ್ರತಿಷ್ಠಿಸಿ ಬಹಳ ಸಂಪತ್ಸಮೃದ್ಧಿಯಿಂದ ಪೂಜೆಮಾಡಿ ಸಂತೋಷಗೊಂಡು ಆದರ ಪೂರ್ವಕವಾಗಿ ಹೊರ ಬಂದು, ದೂತರಿಂದ ಇಂದ್ರದ್ಯುಮ್ನನೆಸಗುವ ಭಗವತ್ಪ್ರತಿಷ್ಠಾವೃತ್ತಾಂತವನ್ನು ಕೇಳಿ ತಿಳಿದುಕೊಂಡನು.

೮. ಒಡನೆಯೇ ಆ ರಾಜನು ಕುಪಿತನಾಗಿ ಸೈನ್ಯಸಮೇತನಾಗಿ ನೀಲಾಚಲಕ್ಕೆ ಬಂದು ಅಲ್ಲಿ ಮಾನವರಿಗೆ ಸ್ವಪ್ನದಲ್ಲಿಯೂ ದೊರಕಲಸದಳವಾದ ಪ್ರತಿಷ್ಠಾಸಂಭಾರಗಳನ್ನು ಕಣ್ಣಾರ ಕಂಡನು.

೯. ನರಾಧಿಪನಾದ ಆ ಗಾಲನು ಅವುಗಳನ್ನು ಕಂಡೊಡನೆಯೆ ಪರಮಾಶ್ಚರ್ಯಭರಿತನಾಗಿ "ಇದೇನು ಸಮಾಚಾರ? ಇಂತಹ ಪ್ರತಿಷ್ಠಾಕಾರ್ಯವನ್ನು ಮಾಡುವವರಾರು?" ಎಂದು ಯೋಚಿಸುತ್ತ ಸುಮ್ಮನೆ ನಿಂತನು.

೧೦. ತರುವಾಯ ಅವನು ಬಹುಪ್ರಯತ್ನಪೂರ್ವಕವಾಗಿ, ಅಲ್ಲಿದ್ದವರಿಂದ ಬ್ರಹ್ಮಲೋಕದಿಂದ ಬಂದಿರುವ ಇಂದ್ರದ್ಯುಮ್ನರಾಜನೇ ಆ ದೇವಾಲಯದ ನಿರ್ಮಾಣಕರ್ತನೆಂಬ ವಿಷಯವನ್ನರಿತುಕೊಂಡನು.

೧೧–೧೨. ಇಂದ್ರದ್ಯುಮ್ನನು ಸ್ವಾಮಿಯನ್ನು ದಿವ್ಯವಾದ ಆ ಪ್ರಾಸಾದದಲ್ಲಿ

**ಬ್ರಹ್ಮಾಣಂ ಚಾಗಮಿಷ್ಯಂತಂ ಪ್ರತಿಷ್ಠಾರ್ಥೈ ಸುರೋತ್ತಮಂ ।**
**ಶ್ರುತ್ವಾ ಸರ್ವಂಚ ವೃತ್ತಾಂತಂ ತದ್ರಾಜಾ ದಿವ್ಯಚೇಷ್ಟಿತಂ ॥ ೧೨ ॥**
**ಮೇನೇ ಕೃತಾರ್ಥಮಾತ್ಮಾನಂ ತದ್ರಾಜ್ಯೇ ಪರಮಾದ್ಭುತಂ ।**
**ಇತಃ ಶ್ರೇಯಸ್ಕರಂ ಕರ್ಮ ನ ಭೂತಂ ನ ಭವಿಷ್ಯತಿ ॥ ೧೩ ॥**
**ತದಸ್ಯ ನಿಕಟೇ ಸ್ಥಿತ್ವಾ ಜ್ಞಾತ್ವಾ ಕರ್ಮಕ್ರಮಂ ವಿಧಿಂ ।**
**ಉತ್ಸವಾಂಶ್ಚಾಪಿ ವಿಜ್ಞಾಯ ಕರಿಷ್ಯೇ ಪ್ರತಿವತ್ಸರಂ ॥ ೧೪ ॥**
**ಅಮುಂ ದಾರುಮಯಂ ಸಾಕ್ಷಾದ್ಬ್ರಹ್ಮರೂಪಂ ಜನಾರ್ದನಂ ।**
**ಅಭಾಗ್ಯೋಽಪಚಯಾದೇತಾವಂತಂ ಕಾಲಂ ನ ಜಾನತಾ ॥ ೧೫ ॥**
**ಅಸೇವ್ಯಮಾನೇನ ಕೃತಂ ಜನ್ಮೈವ ವಿಫಲಂ ಮಯಾ ।**
**ತದೇನಮಿಂದ್ರದ್ಯುಮ್ನಂ ವೈ ಪ್ರಣಿಪತ್ಯ ಜಗದ್ಗುರುಂ ॥ ೧೬ ॥**
**ಮಹಾಭಾಗವತಶ್ರೇಷ್ಠಂ ಬ್ರಹ್ಮಲೋಕಾದಿಹಾಗತಂ ।**
**ಉಪೇತ್ಯ ಶರಣಂ ಸಾಕ್ಷಾದ್ದ್ರಷ್ಟಾಸ್ವ ನಾರಾಯಣಂ ವಿಭುಂ ॥ ೧೭ ॥**

---

ಪ್ರತಿಷ್ಠಿಸಲು ದೇವತೆಗಳೊಡಗೂಡಿ ಬಂದು ಪದ್ಮನಿಧಿಯಾದ ಕುಬೇರನೊಡನೆಯೂ, ಗುರುವಾದ ನಾರದ ಮುನಿಯೊಡನೆಯೂ ಪ್ರತಿಷ್ಠಾಸಂಭಾರಗಳನ್ನು ಸಂಗ್ರಹಿಸಿರುವುದನ್ನೂ, ಆ ಪ್ರತಿಷ್ಠೆಗೆ ಸಾಕ್ಷಾತ್ ಬ್ರಹ್ಮದೇವನೇ ದಯೆಮಾಡಿಸುವನೆಂಬಿವೇ ಮೊದಲಾದ ಎಲ್ಲ ಸುದ್ದಿಯನ್ನೂ ಕೇಳಿ ಇದು ದೇವತೆಗಳ ಚೇಷ್ಟಿತವೆಂದು ಮನದಟ್ಟುಮಾಡಿಕೊಂಡನು.

೧೩–೧೪. ಗಾಲರಾಜನು ತಾನು ಕೃತಾರ್ಥನಾದನೆಂದೂ, ತನ್ನ ರಾಜ್ಯದಲ್ಲಿ ಪರಮಾದ್ಭುತವಾದ ಭಗವತ್ಪ್ರತಿಷ್ಠಾಕಾರ್ಯವು ನಡೆಯುವುದೆಂದೂ, ಭಾವಿಸಿದನು. "ಆಹಾ! ಇದಕ್ಕಿಂತಲೂ ಶ್ರೇಯಸ್ಕರವಾದ ಶುಭ ಕಾರ್ಯವು ನನ್ನ ರಾಜ್ಯದಲ್ಲಿ ಹಿಂದಾವಾಗಲೂ ನಡೆದಿರುವುದಿಲ್ಲವು. ಮುಂದೆಯೂ ನಡೆಯಲಾರದು! ಆದುದರಿಂದ ನಾನು ಇಂದ್ರದ್ಯುಮ್ನನೃಪತಿಯ ಬಳಿಯಲ್ಲಿಯೇ ಇದ್ದುಕೊಂಡು ಪ್ರತಿಷ್ಠಾಕಾರ್ಯದ ಕ್ರಮವನ್ನೂ, ವಿಧಿಯನ್ನೂ, ಉತ್ಸವಗಳನ್ನೂ ತಿಳಿದುಕೊಂಡು ಅಂತೆಯೇ ಪ್ರತಿವರ್ಷವೂ ಮಾಡುತ್ತೇನೆ.

೧೫–೧೭. ಸಾಕ್ಷಾದ್ಬ್ರಹ್ಮರೂಪನಾದ ಈ ದಾರುಮಯ ಜನಾರ್ದನನ್ನು ನನ್ನ ದುರದೃಷ್ಟವಶದಿಂದ ಈವರೆಗೂ ನಾನು ತಿಳಿಯದೆ, ತಿಳಿದು ಸೇವಿಸದೆ ಜನ್ಮವನ್ನೇ ವಿಫಲವನ್ನಾಗಿ ಮಾಡಿಕೊಂಡೆನು. ಆದುದರಿಂದ ಈಗ ನಾನು ಮಹಾಭಾಗವತಶ್ರೇಷ್ಠನೂ, ಬ್ರಹ್ಮಲೋಕದಿಂದ ಈ ಭೂಲೋಕಕ್ಕೈತಂದಿರುವವನೂ, ಜಗದ್ಗುರುವೂ ಆದ ಇಂದ್ರದ್ಯುಮ್ನನ ಬಳಿಗೈದಿ ಆತನನ್ನು ಶರಣು ಹೊಂದಿ ಈ ಭವ್ಯ ಪ್ರಾಸಾದದಲ್ಲಿ ಪ್ರತಿಷ್ಠಿತನಾಗುವ ಸಾಕ್ಷಾತ್ ನಾರಾಯಣ ವಿಭುವನ್ನು ಸಂದರ್ಶಿಸಿ ಮೋಕ್ಷವನ್ನು ಪಡೆಯುತ್ತೇನೆ. ಇದೇ ನಿಶ್ಚಯವು.

ಪ್ರತಿಷ್ಠಿತಂ ವೈ ಸ್ವಪ್ರಾಸಾದೇ ಮುಕ್ತಿಮೇಷ್ಯಾಮಿ ನಿಶ್ಚಯಂ ।
ವೈಕುಂಠಂ ಚ ಪ್ರತಿಷ್ಠಾಪ್ಯ ಮಯ್ಯೇವಾರೋಪಯಿಷ್ಯತಿ ॥ ೧೮ ॥
ಬ್ರಹ್ಮಲೋಕಂ ಗತೋ ಯೋ ವೈ ಕಿಂ ಕ್ಷಿತೌ ನೋಽವತಿಷ್ಠತೇ ।
ಉಪಚಾರಾನ್ ಸಮಾದಿಶ್ಯ ಕೋಶಂ ಸಂಭೃತ್ಯ ವೈ ಪ್ರಭೋಃ ॥ ೧೯ ॥
ಬ್ರಹ್ಮಣಾ ಸಹಿತೋಽವಶ್ಯಂ ಪುನರ್ಯಾಸ್ಯತಿ ತತ್ಕ್ಷಯಂ ।
ವಿಚಾರ್ಯ ಮಂತ್ರಿಭಿಃ ಸಾರ್ಧಂ ತತೋ ಗಾಲೋಽಪಿ ವೈಷ್ಣವಃ ॥ ೨೦ ॥
ಇಂದ್ರದ್ಯುಮ್ನಸ್ಯ ನಿಕಟಂ ವಿನೀತಃ ಪ್ರಯಯೌ ಮುದಾ ।
ಗತ್ವಾ ತಂ ದೂರತೋ ದೃಷ್ಟ್ವಾ ಪ್ರಣಿಪಾತಪುರಃಸರಂ ॥ ೨೧ ॥
ಬದ್ಧಾಂಜಲಿಪುಟೋ ರಾಜಾ ಮೂರ್ಧ್ನಿ ವೀಕ್ಷನ್ ಸ ಸಾಧ್ವಸಂ ।
ಶನೈಃ ಶನೈರ್ಯಯೌ ತಸ್ಯ ನಿಕಟಂ ಗಾಲಪಾರ್ಥಿವಃ ॥ ೨೨ ॥
ದೇವ ತ್ವಂ ರಾಜರಾಜೋಽಸಿ ಮರ್ತ್ಯೋಽಪಿ ಬ್ರಹ್ಮಲೋಕಗಃ ।
ಕಿಂ ಸ್ತೌಮಿ ನೃಪಕೀಟೋಽಹಂ ತ್ವಾಂ ಜೀವನ್ಮುಕ್ತಮೀಶ್ವರಂ ॥ ೨೩ ॥
ಅಜ್ಞಾತ್ವಾ ಮಹಿಮಾನಂ ತೇ ಸಚಿವೈರ್ಮಂತ್ರಯನ್ಮುಹುಃ ।
ಯೋದ್ಧುಮಭ್ಯಾಗತೋ ದೇವ ದೃಷ್ಟ್ವಾ ತೇ ಪೌರುಷಂ ಮಹತ್ ॥ ೨೪ ॥

---

ಆ ದೊರೆಯು ಶ್ರೀಮನ್ನಾರಾಯಣಮೂರ್ತಿಯನ್ನೀ ದೇವಾಯತನದಲ್ಲಿ ಪ್ರತಿಷ್ಠಿಸಿ ಪೂಜಾದಿಗಳನ್ನು ನನಗೇ ವಹಿಸುವನು.

೧೯–೨೨. ಬ್ರಹ್ಮಲೋಕಕ್ಕೆ ಹೋದ ಯಾವನುತಾನೆ ಭೂಲೋಕದಲ್ಲಿ ನಿಂತಾನು ? ಆದುದರಿಂದ ಆ ಇಂದ್ರದ್ಯುಮ್ನರಾಜನು ಸ್ವಾಮಿಗೆ ನಡೆಯಬೇಕಾದ ಪೂಜೋಪಚಾರಗಳೆಲ್ಲವೂ ಸರಿಯಾಗಿ ನಡೆಯುವಂತೆ ಆಜ್ಞಾಪಿಸಿ, ಪ್ರಭುವಿಗೆ ಕೋಶವನ್ನು ಸಂಗ್ರಹಿಸಿಟ್ಟು ಬ್ರಹ್ಮನೊಡನೆ ಅವಶ್ಯವಾಗಿಯೂ ಪುನಃ ಬ್ರಹ್ಮಲೋಕಕ್ಕೇ ಹೋಗುತ್ತಾನೆ" ಎಂಬೀ ಪ್ರಕಾರವಾಗಿ ಆ ಗಾಲರಾಜನು ತನ್ನ ಮಂತ್ರಿಗಳೊಡನೆ ಆಲೋಚಿಸಿ, ಮಹಾವಿಷ್ಣುಭಕ್ತನಾದುದರಿಂದ ಕೇವಲ ವಿನಯದಿಂದಲೂ, ಸಂತೋಷದಿಂದಲೂ ಆ ಇಂದ್ರದ್ಯುಮ್ನರಾಜನ ಬಳಿಗೆ ಹೊರಟು ದೂರದಿಂದಲೇ ಆತನನ್ನು ಕಂಡು ಪ್ರಣಾಮಪೂರ್ವಕವಾಗಿ ತಲೆಯಲ್ಲಿ ಕೈಗಳನ್ನು ಜೋಡಿಸಿಕೊಂಡು ಭಯಭಕ್ತಿಗಳಿಂದಾತನನ್ನು ಕಂಡು ಮೆಲ್ಲಮೆಲ್ಲನೆ ಆತನ ಬಳಿಸಾರಿದರು.

೨೩. "ದೇವ! ನೀನು ರಾಜರಿಗೆಲ್ಲ ರಾಜನಾಗಿರುವೆ. ಮರ್ತ್ಯನಾಗಿರುವೆ. ಆದರೂ ನೀನು ಬ್ರಹ್ಮಲೋಕದಲ್ಲಿರುವವನು. ನಾನಾದರೋ ನೃಪತಿಯೆನಿಸಿದ ಒಂದು ಕೀಟವು. ಇಂತಹ ನಾನು ಜೀವನ್ಮುಕ್ತನೂ, ಈಶ್ವರಸ್ವರೂಪನೂ ಆಗಿರುವ ನಿನ್ನನ್ನು ಏನೆಂದು ಸ್ತುತಿಸಲಿ!

೨೪. ಓ ಸ್ವಾಮಿಯೇ! ನಾನು ನಿನ್ನ ಮಹಿಮೆಯನ್ನರಿಯದೆ ಮಹತ್ತರ

ಅತಿಮಾನುಷಮಾಶ್ಚರ್ಯಂ ಪದಂ ಚಾಪಿ ಶಚೀಪತೇಃ ।
ದೃಷ್ಟ್ವೈತನ್ನಿಶ್ಚಿತಂ ದೇವ ಬ್ರಹ್ಮಲೋಕಗತಸ್ಯ ಹಿ ॥ ೨೫ ॥
ಈದೃಶಂ ಹಿ ಮಹತ್ಕರ್ಮ ಯದಾಜ್ಞಾಕೃನ್ಮಹಾನಿಧಿಃ ।
ಚೇತಃಪ್ರಸಾದಪ್ರವಣಂ ಮಯಿ ದೇಹಿ ಸುರೋತ್ತಮ ॥ ೨೬ ॥
ತ್ರೈಲೋಕ್ಯವಾಸಿನೋ ದೇವಾ ತ್ವದಾಜ್ಞಾವಶವರ್ತಿನಃ ॥ ೨೭ ॥

ಜೈಮಿನಿರುವಾಚ :—

ಇತ್ಥಂ ವಿಜ್ಞಾಪಯಂತಂ ತಂ ಗಾಲಂ ನೃಪತಿಕುಂಜರಂ ।
ಸ್ಮಯಮಾನ ಉವಾಚೇದಂ ರಾಜನ್ಕಿಂ ಬಹು ಭಾಷಸೇ ॥ ೨೮ ॥
ಭವಾನಪಿ ಹರೇರ್ಭಕ್ತಃ ಸಾರ್ವಭೌಮೋ ಮಹೀಪತಿಃ ।
ಸಾಮಾನ್ಯಮೇತದ್ರಾಜ್ಞಾಂ ವೈ ಭೂಸ್ವಾಮ್ಯಂ ಭುವಿ ವರ್ತತಾಂ ॥ ೨೯ ॥
ಸಾಂಪ್ರತಂ ಹಿ ಭವಾನತ್ರ ಪೃಥಿವ್ಯಾಮೇಕಪಾರ್ಥಿವಃ ।
ನೃಪಾಯತ್ತಾಃ ಕ್ರಿಯಾಃ ಸರ್ವಾ ಮರ್ತ್ಯಾನಾಂ ಮರುತಾಮಪಿ ॥ ೩೦ ॥

---

ವಾದ ನಿನ್ನ ಪೌರುಷವನ್ನು ಮಾತ್ರ ಕಂಡು ನನ್ನ ಮಂತ್ರಿಗಳೊಡನೆ ಮಂತ್ರಾಲೋಚನೆಯನ್ನುಮಾಡಿ ನಿನ್ನೊಡನೆ ಕಾಳಿಗವಾಡಲ್ಬೈತಂದೆನು.

೨೫. ಬ್ರಹ್ಮಲೋಕದಿಂದ ಭೂಲೋಕಕ್ಕೆ ಬಂದಿರುವ ನಿನ್ನ ಆಶ್ಚರ್ಯಕರವಾದ ಅತಿಮಾನುಷ ವ್ಯಾಪಾರವನ್ನೂ, ಶಚೀಪತಿಯಾದ ಮಹೇಂದ್ರನಿಗೆಣೆಯಾದ ಈ ನಿನ್ನ ಪದವಿಯನ್ನೂ ಕಂಡು ಎಲೈ ಪ್ರಭುವೇ! ನಾನು ಈ ನಿಶ್ಚಯಕ್ಕೆ ಬಂದಿರುವೆನು.

೨೬–೨೭. "ಕುಬೇರನೂ ಯಾವ ನಿನ್ನ ಆಜ್ಞಾಧಾರಕನಾಗಿರುವನೋ, ಮೂರು ಲೋಕಗಳಲ್ಲಿಯೂ ವಾಸಮಾಡುವ ಸಕಲದೇವತೆಗಳೂ ಯಾವ ನಿನ್ನ ಆಜ್ಞಾವಶವರ್ತಿಗಳಾಗಿರುವರೋ ಅಂತಹ ನಿನ್ನ ಈ ಬಗೆಯ ಕಾರ್ಯವು ಮಹತ್ತರವಾದುದು. ಆದುದರಿಂದೆಲೈ ದೇವೋತ್ತಮನೆ! ಈಗ ನೀನು ನನ್ನಲ್ಲಿ ಅನುಗ್ರಹವನ್ನು ತೋರುವವನಾಗು."

೨೮. ಜೈಮಿನಿಯು ಹೇಳುತ್ತಾನೆ:—ಎಲೈ ದ್ವಿಜರೇ! ಈ ರೀತಿ ಅರಿಕೆ ಮಾಡಿದ ಆ ಗಾಲನೃಪಾಲನನ್ನು ಕುರಿತು ಇಂದ್ರದ್ಯುಮ್ನರಾಜನು ನಸುನಗುತ್ತ ಇಂತೆಂದನು: "ದೊರೆಯೆ! ಇದೇನಿದು? ಇಷ್ಟೊಂದು ಮಾತನಾಡುತ್ತಿರುವೆ?

೨೯–೩೦. ನೀನೂ ವಿಷ್ಣುಭಕ್ತನಾಗಿರುವೆ. ಸಾರ್ವಭೌಮನಾದ ಮಹೀಪತಿಯಾಗಿರುವೆ. ಭೂಲೋಕದಲ್ಲಿರುವ ರಾಜರಿಗೆ ಭೂಮಿಯ ಒಡೆತನವೆಂಬುದು ಸರ್ವಸಾಮಾನ್ಯವಾದುದೇ ಅಲ್ಲವೆ. ಪ್ರಕೃತದಲ್ಲಿ ನೀನು ಈ ಭೂಮಿಗೆ ಏಕೈಕ ಭೂಪಾಲನಾಗಿರುವೆ. ದೇವತೆಗಳಿಗಾಗಲಿ, ಮರ್ತ್ಯರಿಗಾಗಲಿ ಸಮಸ್ತಕ್ರಿಯೆಗಳೂ ದೊರೆಯಮೂಲಕವಾಗಿಯೆ ನಡೆಯತಕ್ಕುವು.

ಅಷ್ಟದಿಕ್ಪಾಲಕಾಂಶೈಸ್ತು ಬ್ರಹ್ಮಣಾ ನಿರ್ಮಿತೋ ನೃಪಃ ।
ನ ಹ್ಯಲ್ಪಪುಣ್ಯಕೃದ್ರಾಜಾ ಪ್ರಜಾಪಾಲನತತ್ಪರಃ ॥ ೩೧ ॥
ಇಹ ಕೀರ್ತಿಂ ಚ ಧರ್ಮಂ ಚ ಯತ್ರ ಗಚ್ಛನ್ ಸುವರ್ತ್ಮನಿ ।
ಪ್ರಾಪ್ನೋತಿ ರಾಜಶಾರ್ದೂಲ ವಿಶೇಷಾತ್ತ್ವಂ ತು ವೈಷ್ಣವಃ ॥ ೩೨ ॥
ಪ್ರಾಸಾದೇ ಸ್ಥಾಪಯೇದ್ಯಸ್ತು ಹರೇರರ್ಚಾಂ ವಿಧಾನತಃ ।
ನ ದೇಹಬಂಧಮಾಪ್ನೋತಿ ಯಾತಿ ವಿಷ್ಣೋಃ ಪರಂ ಪದಂ ॥ ೩೩ ॥
ಮಾಧವಪ್ರತಿಮಾಮೇತಾಂ ದಾರವೀಂ ಶುಭಲಕ್ಷಣಾಂ ।
ಸಾಕ್ಷಾನ್ಮುಕ್ತಿಪ್ರದಾಂ ಭೂಪ ಸ್ವಯಂ ಸ್ಥಾಪಿತವಾನಸಿ ॥ ೩೪ ॥
ನಿರ್ವಿಘ್ನಂ ಕರ್ಮ ತೇ ಜಾತಂ ಮಮ ಮನ್ವಂತರಂ ಗತಂ ।
ಭವೇದ್ವಾ ಸಂಶಯೋ ಮೇಽತ್ರ ನ ಸ್ವತಂತ್ರಶ್ಚತುರ್ಮುಖಃ ॥ ೩೫ ॥

---

೩೧. ಅಯ್ಯಾ ಗಾಲರಾಜನೇ! ರಾಜನೆಂದರೆ ಸಾಮಾನ್ಯನಲ್ಲವು. ಎಂಟು ಮಂದಿ ದಿಕ್ಪಾಲಕರ ಅಂಶದಿಂದ ಬ್ರಹ್ಮದೇವನು ನೃಪಾಲನನ್ನು ನಿರ್ಮಿಸಿರುವನು. ಎಲೈ ಗಾಲನೃಪಾಲನೇ! ಪ್ರಜೆಗಳನ್ನು ಸಂರಕ್ಷಿಸುವುದರಲ್ಲಿ ತತ್ಪರನಾದ ರಾಜನು ಅಲ್ಪಪುಣ್ಯವನ್ನುಗಳಿಸಿದವನಲ್ಲ. ಅವನು ಮಹಾ ಭಾಗ್ಯಶಾಲಿಯು.

೩೨. ಅಯ್ಯಾ ರಾಜಶಾರ್ದೂಲನೇ! ದೊರೆಯಾದವನು ಈ ಲೋಕದಲ್ಲಿ ಸನ್ಮಾರ್ಗದಲ್ಲಿ ಸಂಚರಿಸುತ್ತ ಕೀರ್ತಿಯನ್ನೂ, ಧರ್ಮವನ್ನೂ ಸಂಪಾದಿಸಿ ಮೋಕ್ಷ ಭಾಗಿಯಾಗುತ್ತಾನೆ. ಅದರಲ್ಲಿಯೂ ವಿಷ್ಣುಭಕ್ತನಾದ ನೀನು ಈಗಾಗಲೇ ಶ್ರೀಮನ್ಮಹಾವಿಷ್ಣುವಿನ ಶಿಲಾಮೂರ್ತಿಯನ್ನು ನೀನೇ ಕಟ್ಟಿಸಿರುವ ದೇವಾಲಯದಲ್ಲಿ ಪ್ರತಿಷ್ಠಿಸಿ ಭಕ್ತಿಯಿಂದ ಪೂಜಿಸಿ ಪುಣ್ಯವನ್ನಾರ್ಜಿಸಿರುವೆ. ಇಂತಹ ನೀನು ಮೋಕ್ಷವನ್ನು ಪಡೆದೇ ಪಡೆಯುವೆಯೆಂಬುದರಲ್ಲಿ ಸಂಶಯವಿಲ್ಲವು.

೩೩. ಯಾವನಾದರೆ ದಿವ್ಯಪ್ರಾಸಾದದಲ್ಲಿ ಶ್ರೀಹರಿಯ ಅರ್ಚಾಮೂರ್ತಿಯನ್ನು ಶಾಸ್ತ್ರೋಕ್ತವಾಗಿ ಸ್ಥಾಪಿಸುವನೋ ಅವನು ದೇಹಬಂಧವನ್ನು ಕಳೆದು ವಿಷ್ಣುಲೋಕವನ್ನು ಪಡೆಯುತ್ತಾನೆ.

೩೪. ಎಲೈ ಭೂಪತಿಯೇ! ಶುಭಲಕ್ಷಣಲಕ್ಷಿತವಾಗಿ, ಸಾಕ್ಷಾತ್ ಮುಕ್ತಿಪ್ರದವಾಗಿರುವ ಶ್ರೀ ಮಾಧವನ ಈ ದಾರು ಮೂರ್ತಿಯನ್ನು ನೀನೇ ಸ್ಥಾಪಿಸುವಿಯಂತೆ.

೩೫. ನಿನ್ನ ಕಾರ್ಯವು ನಿರ್ವಿಘ್ನವಾಗಿ ನಡೆಯುವುದು. ನನಗಾದರೋ ಪ್ರಕೃತದಲ್ಲಿ ಮನ್ವಂತರವು ಕಳೆದಿರುತ್ತದೆ. ನನ್ನ ಕಾರ್ಯವು ಈಡೇರುವುದೋ ಇಲ್ಲವೋ ಎಂಬ ವಿಷಯದಲ್ಲಿ ನನಗೆ ಸಂಶಯವಾಗಿರುವುದು. ಈ ವಿಷಯದಲ್ಲಿ ನಾನು ಸ್ವತಂತ್ರನಲ್ಲವು.

ಪ್ರತಿಷ್ಠಾಯೈ ಪ್ರಾರ್ಥಿತೋಽಯಂ ತದನ್ಯಃ ಸ್ಥಾಪಯೇತ್ಕಥಂ ।
ಸಾಕ್ಷಾದ್ದಾರ್ವವತಾರಸ್ಯ ಪ್ರಾಸಾದಸ್ಯ ನೃಪೋತ್ತಮ ॥ ೩೬ ॥
ಸನ್ನಿಧಾನೇನ ಚೇದತ್ರ ವಿಧಾತಾನುಗ್ರಹಿಷ್ಯತಿ ।
ತದೇನಂ ಸ್ಥಾಪಯಿತ್ವಾ ತು ಚತೂರೂಪಂ ಜನಾರ್ದನಂ ॥ ೩೭ ॥
ಸಮರ್ಪ್ಯ ತ್ವಾಂ ಗಮಿಷ್ಯಾಮಿ ತ್ವಮೇವೋಪಚರಿಷ್ಯಸಿ ।
ನಿತ್ಯೋಪಹಾರಂ ಯಾತ್ರಾಶ್ಚ ಉತ್ಸವಾಂಶ್ಚ ಜಗತ್ಪತೇಃ ॥ ೩೮ ॥
ಯಾನೇವೋಪದಿಶೇದ್ದೇವಃ ಸ್ವಯಂ ವಾ ಪ್ರಪಿತಾಮಹಃ ।
ತಾಂಸ್ತಾನ್ ಪ್ರಯತ್ನಾತ್ಕುರ್ವೀತ ರಾಜಾ ವೈ ಧರ್ಮಪಾಲಕಃ ॥ ೩೯ ॥
ತತಃ ಸ ಗಾಲೋ ನೃಪತಿಃ ಶ್ರುತ್ವಾ ತಚ್ಚಿಂತಿತಂ ಸ್ವಯಂ ।
ಇಂದ್ರದ್ಯುಮ್ನಾದಿಷ್ಟಮೇತದಿತಿ ಪ್ರಾಪ ಪರಾಂ ಮುದಂ ॥ ೪೦ ॥
ತಸ್ಥೌ ತಸ್ಯಾಂತಿಕೇ ಗಾಲ ಆಜ್ಞಾಕಾರ ಇವ ಸ್ವಯಂ ।
ತತ್ತದಾಶು ಕರೋತ್ಯೇಷ ಇಂದ್ರದ್ಯುಮ್ನೋ ಯದಾದಿಶತ್ ॥ ೪೧ ॥

---

೩೬. ಎಲೈ ನೃಪೋತ್ತಮನೇ! ಈಗಲೀ ದಾರುಮಯ ಬ್ರಹ್ಮನ ಪ್ರತಿಷ್ಠಾಪನೆಯ ವಿಷಯದಲ್ಲಿ ನಾನು ಚತುರ್ಮುಖ ಬ್ರಹ್ಮನನ್ನು ಪ್ರಾರ್ಥಿಸಿಕೊಂಡಿರುವೆನು. ಆದುದರಿಂದ ಆತನನ್ನುಳಿದು ಮತ್ತಾರುತಾನೆ ಸಾಕ್ಷಾತ್ ಶ್ರೀಹರಿಯ ಈ ಮೂರ್ತಿಯನ್ನೂ ಈ ಪ್ರಾಸಾದವನ್ನೂ ಪ್ರತಿಷ್ಠಿಸಿಯಾರು?

೩೭-೩೮. ಆ ವಿಧಾತೃವು ಇಲ್ಲಿ ಸನ್ನಿಧಿಯನ್ನು ಅನುಗ್ರಹಿಸಿದುದಾದರೆ ನಾನು ಆತನ ಮೂಲಕ ದಾರುಮಯವಾದ ಶ್ರೀ ಮಹಾವಿಷ್ಣುವಿನ ಈ ನಾಲ್ಕು ಮೂರ್ತಿಗಳನ್ನೂ ಸ್ಥಾಪಿಸಿ ನಿನಗೆ ಸಮರ್ಪಿಸಿ ಹೊರಟು ಹೋಗುತ್ತೇನೆ. ಆ ತರುವಾಯ ಈ ಜಗತ್ಪತಿಯ ನಿತ್ಯಪೂಜೆಗಳನ್ನೂ, ರಥೋತ್ಸವಾದಿಗಳನ್ನೂ, ನಿತ್ಯೋತ್ಸವಗಳನ್ನೂ ನೀನೇ ನಡೆಸುವೆಯಂತೆ.

೩೯. ಪಿತಾಮಹನಾದ ಆ ಸ್ವಾಮಿಯೇ ಆಗಲಿ, ಬ್ರಹ್ಮದೇವನಾಗಲಿ ಏನೇನನ್ನು ಉಪದೇಶಮಾಡುವರೋ ಅವುಗಳೆಲ್ಲವನ್ನೂ ಧರ್ಮಸಂರಕ್ಷಕನಾದ ದೊರೆಯು ಪ್ರಯತ್ನಪೂರ್ವಕವಾಗಿ ಮಾಡತಕ್ಕುದು.''

೪೦. ಅಯ್ಯಾ ಮುನಿಗಳಿರಾ! ಗಾಲಭೂಪಾಲನು ಇಂದ್ರದ್ಯುಮ್ನರಾಜನು ಯೋಚಿಸಿ ನುಡಿದುದನ್ನು ಸಾಕ್ಷಾತ್ತಾಗಿ ಕೇಳಿದ ಬಳಿಕ ಇದೆಲ್ಲವನ್ನೂ ಆತನೇ ಆಜ್ಞಾಪಿಸಿದುದೆಂದು ತಿಳಿದು ಪರಮ ಸಂತುಷ್ಟನಾದನು.

೪೧. ತರುವಾಯ ಆ ರಾಜನು ಇಂದ್ರದ್ಯುಮ್ನನ ಸನ್ನಿಧಿಯಲ್ಲಿಯೇ ಆಜ್ಞಾಧಾರಕನಾಗಿದ್ದು ಆತನು ಹೇಳಿದುದೆಲ್ಲವನ್ನೂ ಜಾಗ್ರತೆಯಾಗಿ ನಡೆಸುತ್ತಿದ್ದನು.

ಏವಂ ಸಂಭೃತಸಂಭಾರಃ ಸಿಂಹಾಸನಗತಃ ಪ್ರಭುಃ ।
ದೇವೈಃ ಪರಿವೃತಶ್ಚೇಂದ್ರದ್ಯುಮ್ನಃ ಶಕ್ರ ಇವಾಬಭೌ ॥ ೪೨ ॥
ತತೋಽಶ್ರೂಯಂತ ನಿನದಾ ದಿವ್ಯದುಂದುಭಿಜಾಃ ಶುಭಾಃ ।
ಮೃದಂಗ ವೇಣುವೀಣಾದಿ ತಾಲಕಾಹಾಲನಿಃಸ್ವನಾಃ ॥ ೪೩ ॥
ಐರಾವತಾದಿಕರಿಣಾಂ ಬೃಂಹಿತಾನಿ ಬಹೂನಿ ಖೇ ।
ಸಮಂತಾಜ್ಜಯಶಬ್ದಾಶ್ಚ ಪುಷ್ಪವೃಷ್ಟಿವಿಮಿಶ್ರಿತಾಃ ॥ ೪೪ ॥
ಆಕಾಶಗಂಗಾಸಲಿಲಕಣಾ ಮಂದಾರಮಿಶ್ರಿತಾಃ ।
ದಿವ್ಯಸ್ರಗ್ಲೇಪಧೂಪಾನಾಂ ಗಂಧಾ ದಿಗ್ವ್ಯಾಪಿನಸ್ತಥಾ ।
ವೈಮಾನಿಕಾನಾಂ ದೇವಾನಾಂ ಕಿಂಕಿಣೀಜಾಲನಿಃ ಸ್ವನಾಃ ॥ ೪೫ ॥
ತತಶ್ಚ ತೇಜಸಾಂ ರಾಶೀ ರೋದಸೀಮಧ್ಯಪೂರಕಃ ।
ಆವಿರಾಸೀತ್ಕ್ಷಿತಿಗತಃ ನಯನಾಚ್ಛಾದಕೋ ದ್ವಿಜಾಃ ॥ ೪೬ ॥
ಉತ್ತೋಲಿತಾಕ್ಷಿಮಾಲಾಭಿಃ ಪ್ರಜಾಭಿರ್ವೀಕ್ಷಿತಃ ಪುರಃ ।
ತತಃ ಕ್ರಮಾತ್ಸ ದದೃಶೇ ವಿಮಾನಾಗ್ರ್ಯಂ ಪ್ರಜಾಪತೇಃ ॥ ೪೭ ॥

---

೪೨. ಹೀಗೆ ಪ್ರಾಸಾದದ ಪ್ರತಿಷ್ಠೆಗೆ ಬೇಕುಬೇಕಾದ ಸಂಭಾರಗಳೆಲ್ಲವನ್ನೂ ಸಜ್ಜುಗೊಳಿಸಿ ಆ ಇಂದ್ರದ್ಯುಮ್ನರಾಜನು ಸಿಂಹಾಸನಾಸೀನನಾಗಿ ದೇವತೆಗಳೆಲ್ಲರಿಂದಲೂ, ಪರಿವೃತನಾಗಿ ಸಾಕ್ಷಾದ್ದೇವೇಂದ್ರನಂತೆಯೆ ವಿರಾಜಿಸಿದನು.

೪೩–೪೪. ಆ ಸಮಯದಲ್ಲಿ ಅಲ್ಲಿದ್ದವರೆಲ್ಲರೂ ಆಕಾಶದಲ್ಲಿ ಮಂಗಳಕರವಾದ ದೇವದುಂದುಭಿಗಳ ನಿನಾದಗಳನ್ನೂ, ದಿವ್ಯಮೃದಂಗ ವೀಣಾವೇಣುಗಳೇ ಮೊದಲಾದ ವಾದ್ಯಧ್ವನಿಗಳನ್ನೂ, ಸ್ವರ್ಗಲೋಕದ ಐರಾವತಾದಿ ಗಜೋತ್ತಮಗಳ ಬೃಂಹಿತನಾದಗಳನ್ನೂ ಕೇಳಿದರು. ಎತ್ತತ್ತಲೂ ಜಯಜಯಶಬ್ದಗಳು ಕೇಳಿಬಂದವು. ಪುಷ್ಪವೃಷ್ಟಿಯಾಯಿತು.

೪೫. ಆಕಾಶಗಂಗೆಯ ತುಂತುರುಗಳೊಡಗೂಡಿ ಮಂದಾರ ಕುಸುಮ ಮಿಶ್ರಿತವಾದ ವೃಷ್ಟಿಯೂ, ದಿವ್ಯಪುಷ್ಪಹಾರ, ಚಂದನ, ಧೂಪಗಳ ಗಂಧಗಳೂ ದಶದಿಶೆಗಳಲ್ಲಿಯೂ ವ್ಯಾಪಿಸಿದ್ದುವು. ವಿಮಾನಾರೂಢರಾದ ದೇವತೆಗಳ ಕಿರುಗೆಜ್ಜೆಗಳ ನಿಃಸ್ವನಗಳು ಕೇಳಿಬರುತ್ತಿದ್ದುವು.

೪೬. ಇದಾದ ಬಳಿಕ ಭೂಮಂಡಲದ ಮೇಲಿರುವ ಸಮಸ್ತಜನ ಸಮುದಾಯದ ಕಣ್ಣುಗಳನ್ನೂ ಕೋರೈಸುವಂತಹ ತೇಜೋರಾಶಿಯು ಭೂಮ್ಯಂತರಿಕ್ಷಗಳ ಮಧ್ಯಭಾಗವನ್ನು ತುಂಬಿದುದಾಗಿ ಆವಿರ್ಭವಿಸಿತು.

೪೭. ಇದೇನಿದೇನೆಂದು ಆಶ್ಚರಿಗೊಂಡವರಾಗಿ ಪ್ರಜೆಗಳೆಲ್ಲರೂ ಮೇಲೆತ್ತಿದ ಕಣ್ಣೋಟಗಳ ಮಾಲೆಗಳುಳ್ಳವರಾಗಿ ನೋಡುತ್ತಿರಲು ಕ್ರಮಕ್ರಮವಾಗಿ ಬ್ರಹ್ಮದೇವನ ವಿಮಾನೋತ್ತಮವು ಕಂಗೊಳಿಸಿತು.

ಸ್ವರ್ಣಹಂಸಶತೈಃ ಸ್ಕಂಧೇನೋಹ್ಯಮಾನಃ ಸಮಂ ತತಃ ।
ದಿಕ್ಪಾಲೈಶ್ಚಾಮರವ್ಯಗ್ರಹಸ್ತೈರಾಸೇವಿತಃ ಪುರಃ ॥ ೪೮ ॥
ಜಾಹ್ನವೀಯಮುನಾನೀರಪ್ರಕೀರ್ಣಕಕರೇಃ ಭಿತಃ ।
ಪಾರ್ಶ್ವಯೋಶ್ಚಂದ್ರಸೂರ್ಯಾಭ್ಯಾಮುಭಾಭ್ಯಾಮಾತಪತ್ರಕೇ ॥ ೪೯ ॥
ಧಾರ್ಯಮಾಣೇ ಶನೈರ್ವಾಯೋರ್ಗತಿಚಂಚಲಚೋಲಕೇ ।
ಬ್ರಹ್ಮರ್ಷಿಭಿರ್ಗೌತಮಾದ್ಯೈಃ ಸ್ತೂಯಮಾನೋ ರಹಸ್ಯಕೈಃ ॥ ೫೦ ॥
ತನ್ಮಧ್ಯಸ್ಥಃ ಪ್ರಜಾನಾಥ ಇಂದ್ರದ್ಯುಮ್ನಾದಿಭಿಃ ಸ್ತುತಃ ।
ಆಲುಲೋಕೇ ದೇವಗಣೈರ್ಜಯಶಬ್ದೈರಭಿಷ್ಟುತಃ ॥ ೫೧ ॥
ರಂಭಾದಿಕಾಭಿರ್ವೇಶ್ಯಾಭಿರ್ನೃತ್ಯತೇ ಸ್ಮ ಸಸಾಧ್ವಸಂ ।
ಹಾಹಾಹೂಹೂಪ್ರಭೃತಿಭಿರ್ಗೀಯಮಾನಶ್ಚ ಗಾಯಕೈಃ ॥ ೫೨ ॥
ಸಿದ್ಧವಿದ್ಯಾಧರಗಣೈಃ ಸಾದರಂ ಚೋಪವೀಕ್ಷಿತಃ ।
ಕೃತಾಂಜಲಿಪುಟೈರ್ದೂರಾತ್ತಪಸ್ವಿಭಿರುಪಾಸಿತಃ ॥ ೫೩ ॥

---

೪೮. ಆ ವಿಮಾನವು ಸುತ್ತಲೂ ನೂರು ಚಿನ್ನದ ಹಂಸಗಳ ಹೆಗಲುಗಳ ಮೇಲೆ ಒಯ್ಯಲ್ಪಡುತ್ತಿರುವುದಾಗಿ ಅಷ್ಟದಿಕ್ಪಾಲಕರ ಚಾಮರ ಹಸ್ತಗಳಿಂದ ವೀಜಿತವಾಗಿ ಸೇವೆಗೊಳ್ಳುತ್ತಿದ್ದಿತು.

೪೯. ಗಂಗಾಯಮುನಾನದೀದೇವತೆಗಳು ತಮ್ಮ ಕೈಗಳಿಂದ ನೀರನ್ನು ಚಿಮುಕಿಸುತ್ತಿದ್ದರು. ಉಭಯಪಾರ್ಶ್ವಗಳಲ್ಲಿಯೂ ಚಂದ್ರಸೂರ್ಯರು ಶ್ವೇತ ಛತ್ರಗಳನ್ನು ಹಿಡಿದಿದ್ದರು.

೫೦. ಆಗಲಾ ವಿಮಾನವು ವಾಯುಗತಿಯಿಂದ ಮೆಲ್ಲಮೆಲ್ಲನೆ ಅಲುಗುತ್ತಲಿದ್ದಿತು. ಗೌತಮಾದಿ ಬ್ರಹ್ಮರ್ಷಿಗಳು ರಹಸ್ಯವಾಗಿ ಆ ಬ್ರಹ್ಮದೇವನನ್ನು ಸ್ತುತಿಸುತ್ತಿದ್ದರು.

೫೧. ಇಂತಹ ವಿಮಾನೋತ್ತಮದ ಮಧ್ಯವಲ್ಲಿ ವಿರಾಜಿಸುತ್ತಿದ್ದ ಬ್ರಹ್ಮದೇವನು ಇಂದ್ರದ್ಯುಮ್ನಾದಿಗಳಿಂದ ಸಂಸ್ತುತನಾಗಿ, ದೇವತಾ ಸಮೂಹಗಳೆಲ್ಲವೂ ತನ್ನನ್ನು ಎತ್ತೆತ್ತಲೂ ಸ್ತುತಿಸುತ್ತಿರಲು ಕಟಾಕ್ಷಿಸಿ ನೋಡಿದನು.

೫೨. ಆಗ ರಂಭೆಯೇ ಮೊದಲಾದ ದೇವವೇಶ್ಯೆಯರು ಭಯಭಕ್ತಿಭರಿತರಾಗಿ ಆ ದೇವನ ಮುಂಗಡೆ ನರ್ತಿಸುತ್ತಿದ್ದರು. ಹಾಹಾಹೂಹೂಗಳೇ ಮೊದಲಾದ ದೇವಗಾಯಕರು ಗಾಯನಮಾಡುತ್ತಿದ್ದರು.

೫೩. ಸಿದ್ಧವಿದ್ಯಾಧರಗಣಗಳು ಆದರ ಪೂರ್ವಕವಾಗಿ ಆ ಸ್ವಾಮಿಯ ಸನ್ನಿಧಿಯಲ್ಲಿ ವೀಣಾವಾದನವನ್ನೆಸಗುತ್ತಿದ್ದರು. ದೂರದಲ್ಲಿಯೇ ನಿಂತು ಕೈಗಳನ್ನು ಜೋಡಿಸಿಕೊಂಡವರಾಗಿ ತಪಸ್ವಿಗಳೆಲ್ಲರೂ ಆ ಚಾತುರಾನನನ್ನುಉಪಾಸನೆ ಮಾಡುತ್ತಿದ್ದರು.

ಸಾವಿತ್ರೀಶಾರದೇ ತಸ್ಯ ವಾಕ್ಪ್ರಬಂಧೈರ್ವಿಚಿತ್ರಕೈಃ ।
ತೋಷಮಾಸಾದಯಂತ್ಯೌ ಚ ಕೋಽನ್ಯಸ್ತತ್ತೋಷಣೇ ಕ್ಷಮಃ ॥ ೫೪ ॥
ಜಾಹ್ನವೀಯಮುನಾನೀರಪ್ರಕೀರ್ಣಿತಕಲೇವರಃ ।
ಯೇ ಚ ಗಂಧರ್ವಸಿದ್ಧಾದ್ಯಾ ನಾರದಪ್ರಮುಖಾ ದ್ವಿಜಾಃ ॥ ೫೫ ॥
ವೇತ್ರಹಸ್ತಾಃ ಸವಿನಯಾ ದಿವ್ಯಸೋಪಾನದರ್ಶನಾಃ ।
ಸಂಮರ್ದಃ ಸುಮಹಾನಾಸೀದ್ದೇವಾನಾಂ ದಿವಿ ಗಚ್ಛತಾಂ ॥ ೫೬ ॥
ನ ಕೋಽಪಿ ಗಣ್ಯತೇ ದೇವಃ ಕೋ ವಾ ಕೇನ ಪಥಾ ವ್ರಜೇತ್ ।
ಅಹಂಪೂರ್ವಿಕಯಾ ತೇಷಾಂ ವ್ರಜತಾಂ ತ್ರಿದಿವೌಕಸಾಂ ॥ ೫೭ ॥
ಸಮ್ಮರ್ದಾತಿಶಯಾತ್ತೇಷಾಂ ವಿಭ್ರಂಶೋಽಭೂತ್ಸ್ವವಾಹನೈಃ ।
ಸ್ರಷ್ಟಾ ಪಾತಾ ಚ ಸಂಹರ್ತಾ ಜಗತಾಂ ಯೋ ಜಗನ್ಮಯಃ ॥ ೫೮ ॥
ಸಾಕ್ಷಾದ್ವ್ರಜತಿ ತತ್ರೈಷಾಂ ಸುರಾಣಾಂ ಮಹಿಮಾ ಕುತಃ ।
ತಂ ದೃಷ್ಟ್ವಾ ಸಾಧ್ವಸಾನ್ನಮ್ರೋ ಭಕ್ತ್ಯಾ ಬದ್ಧಾಂಜಲಿರ್ನೃಪಃ ॥ ೫೯ ॥

---

೫೪. ಸಾವಿತ್ರೀಶಾರದೆಯರೀರ್ವರೂ ಆ ಪ್ರಭುವನ್ನು ವಿಚಿತ್ರಗಳಾದ ವಾಕ್ಪ್ರಬಂಧಗಳಿಂದ ಸಂತೋಷಗೊಳಿಸುತ್ತಿದ್ದರು. ಎಲೈ ದ್ವಿಜರೇ! ಇವರೀರ್ವರನ್ನೂ ಬಿಟ್ಟು ಮತ್ತಾರುತಾನೆ ಆ ಬ್ರಹ್ಮನನ್ನು ಸಂತೋಷಗೊಳಿಸಲು ಸಮರ್ಥರಾದಾರು?

೫೫–೫೬. ಆ ಪದ್ಮೋದ್ಭವನು ಗಂಗಾಯಮುನಾನದೀ ದೇವತೆಗಳೆಸಗುತ್ತಿದ್ದ ಜಲಸೇಚನವುಳ್ಳವನಾಗಿ ಆ ವಿಮಾನದಲ್ಲೈತರುತ್ತಿರಲು ಗಂಧರ್ವಸಿದ್ಧಾದಿಗಳೂ, ನಾರದನೇ ಮೊದಲಾದ ದೇವಮುನಿಗಳೂ ಕೈಗಳಲ್ಲಿ ಕೋಲುಗಳನ್ನು ಹಿಡಿದುಕೊಂಡು ಆ ವಿಮಾನದ ದಿವ್ಯ ಸೋಪಾನಗಳಲ್ಲಿ ಕಾಣುತ್ತಿದ್ದರು. ಆ ಸಮಯದಲ್ಲಿ ಆಕಾಶದಲ್ಲಿ ದೇವತೆಗಳ ಸಂಚಾರವು ಸಂಮರ್ದವಾಗಿ ಪರಿಣಮಿಸಿತು.

೫೭–೫೮. ಯಾವ ದೇವತೆಯು ಯಾವ ಮಾರ್ಗವಾಗಿ ಹೋಗುತ್ತಿರುವನೆಂಬುದನ್ನು ಯಾರೂ ಗಣಿಸಲಾಗಲಿಲ್ಲವು. ನಾನುತಾನೆಂದು ಮುನ್ನುಗ್ಗುತ್ತಿರುವ ಆ ದೇವತೆಗಳ ಅತಿಶಯವಾದ ಸಂಮರ್ದದ ದೆಸೆಯಿಂದ ಅವರಿಗೆ ಅವರವರ ವಾಹನಗಳಿಂದ ಭ್ರಂಶವೂ ಉಂಟಾಯಿತು. ಜಗನ್ಮಯನೂ, ಜಗತ್ತಿನ ಸೃಷ್ಟಿಸ್ಥಿತಿ ಸಂಹಾರ ಕರ್ತೃವೂ ಆದ ಬ್ರಹ್ಮದೇವನೇ ಸಾಕ್ಷಾತ್ತಾಗಿ ಬಿಜೆಮಾಡುತ್ತಿರಲು ಅಲ್ಲಿದ್ದ ದೇವತೆಗಳಿಗೆ ಮಹಿಮೆಯೆತ್ತಣದು?

೫೯–೬೦. ಎಲೈ ದ್ವಿಜರೇ! ಆ ಬಳಿಕ ಇಂದ್ರದ್ಯುಮ್ನಮಹಾರಾಜನು ಈ ರೀತಿ ಹಂಸವಿಮಾನಾರೂಢನಾಗಿ ದಯೆಮಾಡುತ್ತಿರುವ ಬ್ರಹ್ಮದೇವನನ್ನು ಕಂಡು ಭಯ ಭಕ್ತಿಗಳಿಂದ ನಮ್ರನಾಗಿ ಅಂಜಲಿಬಂಧವನ್ನು ಮಾಡಿಕೊಂಡ

ತೈರ್ದೇವೈರ್ಗಾಲರಾಜೇನ ನಾರದಪ್ರಮುಖೇನ ಚ ।
ಸಹಿತೋ ಧರಣೀಂ ಪ್ರಾಯಾತ್ಸಾಷ್ಟಾಂಗಂ ಪ್ರಣಿಪತ್ಯ ಚ ॥ ೬೦ ॥
ಉತ್ಥಾಯ ಪರಯಾ ಭಕ್ತ್ಯಾ ಪ್ರಹೃಷ್ಟೇನಾಂತರಾತ್ಮನಾ ।
ಪುಲಕಾಂಕಿತಸರ್ವಾಂಗಂ ಸ್ವಂ ಮನ್ಯಾನಃ ಕೃತಾರ್ಥಕಂ ॥ ೬೧ ॥
ಪುರತೋ ಜಗದೀಶಸ್ಯ ಪಶ್ಯಚ್ಛುದ್ಧಂ ಪಿತಾಮಹಂ ।
ಕೃತಾಂಜಲಿಪುಟೋ ರಾಜಾ ಮಮಜ್ಜಾನಂದಸಾಗರೇ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನಕೃತಭಗವತ್ಪೂಜನಂ—ಗಾಲನೃಪತಿವೃತ್ತಾಂತವರ್ಣನಂ" ನಾಮ ಷಟ್ತ್ರಿಂಶೋಽಧ್ಯಾಯಃ

---

ತನ್ನೊಡನಿದ್ದ ದೇವತೆಗಳಿಂದಲೂ, ಗಾಲರಾಜನಿಂದಲೂ, ನಾರದ ಪ್ರಮುಖರಿಂದಲೂ ಕೂಡಿದವನಾಗಿ ನೆಲಕ್ಕೆರಗಿ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು.

೬೧. ತರುವಾಯ ಮೇಲಕ್ಕೆದ್ದು ಪರಮಭಕ್ತಿಯಿಂದಲೂ, ಪರಮ ಸಂತುಷ್ಟವಾದ ಅಂತರಂಗದಿಂದಲೂ, ರೋಮಾಂಚಗೊಂಡ ಸರ್ವಾವಯವಗಳುಳ್ಳವನಾಗಿ ಅಂದಿಗೆ ತಾನು ಕೃತಾರ್ಥನಾದನೆಂದು ಭಾವಿಸಿದನು.

೬೨. ಆ ಮಹಾರಾಜನು ಜಗದೀಶ್ವರನ ಮುಂಗಡೆ ರಾಜಿಸುತ್ತಿದ್ದ ಪರಮ ಪಾವನನಾದ ಚತುರಾನನನ್ನೂ ಕಂಡು ಕೃತಾಂಜಲಿಪುಟನಾಗಿ ಒಡನೆಯೇ ಆನಂದಸಾಗರದಲ್ಲಿ ಮುಳುಗಿಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನಕೃತಭಗವತ್ಪೂಜನ—ಗಾಲನೃಪತಿವೃತ್ತಾಂತವರ್ಣನ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತವಿಂಶೋಽಧ್ಯಾಯಃ

### ಇಂದ್ರದ್ಯುಮ್ನಪ್ರಾರ್ಥನಾನಂತರ ಬ್ರಹ್ಮಕೃತ ರಥಪ್ರಾಸಾದದರ್ಶನಾದಿವರ್ಣನಂ

**ಜೈಮಿನಿರುವಾಚ :—**

**ಅಥಾಂತರಿಕ್ಷಾನ್ನಿಃಶ್ರೇಣೀ ರತ್ನಕಾಂಚನನಿರ್ಮಿತಾ ।**
**ಸಂಲಗ್ನಾ ಪಾದಸಂಪೀಠೇ ಪದ್ಮಯೋನೇರ್ವಿಮಾನಗಾ ॥ ೧ ॥**
**ಸಾ ಕ್ಷಿತಿಸ್ಪೃಷ್ಟಮೂಲಾ ವೈ ವಿಧಾತುರವರೋಹಣೇ ।**
**ಚತುರ್ವ್ಯಾಯಾಮತಾಪೀನಸೋಪಾನಶ್ರೇಣಿಸಂಯುತಾ ॥ ೨ ॥**
**ರಥಪ್ರಾಸಾದಯೋರ್ಮಧ್ಯೇ ಶಕ್ರಚಾಪ ಇವಾಂಶುಮಾನ್ ।**
**ಆವಿರ್ಬಭೂವ ಸಹಸಾ ಸಾದ್ಭುತಂ ವೀಕ್ಷಿತೋ ಜನೈಃ ॥ ೩ ॥**
**ತತೋ ಗಂಧರ್ವರಾಜೈಸ್ತು ರತ್ನವೇತ್ರಕರೈರ್ದ್ವಿಜಾಃ ।**
**ಏಷ ಪಂಥಾಃ ಪ್ರಭೋ ಹ್ಯೇಹಿ ಇತ್ಯಾದೇಶಿತಮಾರ್ಗಕೈಃ ॥ ೪ ॥**
**ದುರ್ವಾಸಸೋ ನಾರದಸ್ಯ ಕರಯೋರ್ದತ್ತಹಸ್ತಕಃ ।**
**ಸೋಪಾನೈರವತೀರ್ಣೋಽಥ ಪುನಾನಶ್ಚಕ್ಷುಷಾ ಜಗತ್ ॥ ೫ ॥**

---

### ಕನ್ನಡದ ಅನುವಾದ

#### ಇದ್ರದ್ಯುಮ್ನಪ್ರಾರ್ಥನಾನಂತರ ಬ್ರಹ್ಮಕೃತ ರಥ ಪ್ರಾಸಾದದರ್ಶನಾದಿವರ್ಣನ

೧. ಜೈಮಿನಿಯು ಹೇಳುತ್ತಾನೆ:—ಎಲೈ ಮುನಿಗಳಿರಾ! ತರುವಾಯ ಅಂತರಿಕ್ಷದಿಂದ ರತ್ನಕಾಂಚನ ನಿರ್ಮಿತವಾದ ನಿಃಶ್ರೇಣಿ(ಇಳಿವ ಮೆಟ್ಟಿಲು)ಯು ಆ ಪದ್ಮಯೋನಿಯ ವಿಮಾನದಿಂದ ಆತನ ಪಾದಪೀಠದಲ್ಲಿ ಬಂದು ಸೇರಿತು.

೨–೩. ಆ ಇಳಿಮೆಟ್ಟಿಲ ಅಡಿಯು ನೆಲವನ್ನು ಸೋಕಿ ಬ್ರಹ್ಮದೇವನು ಇಳಿಯಲನುವಾಗಿ ವಿಸ್ತಾರವೂ, ದಪ್ಪವೂ, ಚಚ್ಚೌಕವೂ ಆದ ಸೋಪಾನಗಳಿಂದ ಕೂಡಿದ್ದಿತು. ಎಲೈ ವಿಪ್ರರೇ! ಆ ಸಮಯದಲ್ಲಿಯಾದರೋ, ರಥ ಮತ್ತು ದೇವಪ್ರಾಸಾದಗಳ ನಡುವೆ ಆ ಬ್ರಹ್ಮವಿಮಾನದ ನಿಃಶ್ರೇಣಿಯು ಇದ್ದಕ್ಕಿದ್ದಂತೆಯೇ ಕಾಮನಬಿಲ್ಲಿನಂತೆ ಪ್ರಕಾಶಮಾನವಾದೊಂದು ತೇಜೋವಿಶೇಷವನ್ನು ಹರಡಿ ಮೂಡಿತು. ಅದನ್ನು ಅಲ್ಲಿದ್ದ ಜನವೆಲ್ಲ ಮಹದಾಶ್ಚರ್ಯಪೂರಿತವಾಗಿ ನೆಟ್ಟನೆ ನೋಡಿತು.

೪. ಬಳಿಕ ಗಂಧರ್ವರಾಜರೆಲ್ಲರೂ ಕೈಗಳಲ್ಲಿ ರತ್ನದ ಬೆತ್ತಗಳನ್ನು ಹಿಡಿದು, "ಪ್ರಭೋ! ಹೀಗೆ ಹೀಗೆ, ಇದೋ ದಾರಿ, ಹೀಗೆ ಬಿಜಯಂಗೈಸಬೇಕು" ಎಂದು ದಾರಿದೋರುತ್ತ ಬ್ರಹ್ಮನಿಗೆ ಅವಧಾನ ಹೇಳುತ್ತಿದ್ದರು.

೫–೮. ಆಗಲಾ ಬ್ರಹ್ಮದೇವನು ದುರ್ವಾಸ ನಾರದಮುನಿಗಳು ಹಸ್ತಲಾಘವವನ್ನು ನೀಡುತ್ತಿರಲು, ಸೋಪಾನದಿಂದಿಳಿದು ಬರುತ್ತ ಜಗತ್ತನ್ನೇ ತನ್ನ ದೃಷ್ಟಿ

ಸ್ತೂಯಮಾನೋ ರಥಾನ್ ದೃಷ್ಟ್ವಾ ಪ್ರಾಸಾದಂ ಸಮಲಂಕೃತಂ ।
ದಿಗಂತವ್ಯಾಪಿನೀಂ ಶಾಲಾಂ ರತ್ನಸ್ತಂಭೋಪಶೋಭಿತಾಂ ॥ ೬ ॥
ಶಕ್ರಸ್ಯಾಪ್ಯದ್ಭುತಕರೀಂ ಸರ್ವಸಂಭಾರಸಂಭೃತಾಂ ।
ಅವಾತರದ್ವಿಮಾನಾತ್ಸ ದೇವಬ್ರಹ್ಮರ್ಷಿರಾಜಭಿಃ ।
ಕಿರೀಟದತ್ತಾಂಜಲಿಭಿಃ ಸ್ತೂಯಮಾನೋ ಸಮಂತತಃ ॥ ೭ ॥
ಕಟಾಕ್ಷೇಣಾನುಗೃಹ್ಣಾತಿ ಯಾಂ ದಿಶಂ ಸ ಪಿತಾಮಹಃ ।
ತತ್ರಾಂಜಲೀನಾಂ ಸಮ್ಮರ್ದಾಃ ಕೋಟಿಯಃ ಶಿರಸಾ ಧೃತಾಃ ॥ ೮ ॥
ಪಾದಾಬ್ಜಪ್ರಣತಂ ದೃಷ್ಟ್ವಾ ಇಂದ್ರದ್ಯುಮ್ನಂ ಪ್ರಜಾಪತಿಃ ।
ಉವಾಚ ಪ್ರಶ್ರಯಗಿರಾ ಸ್ಮಿತಭಿನ್ನೋಷ್ಠಸಂಪುಟಃ ॥ ೯ ॥
ಅಂಗುಲ್ಯಾ ನಿರ್ದಿಶನ್ ದೇವಾನ್ ಪಿತೃಬ್ರಹ್ಮರ್ಷಿತಾಪಸಾನ್ ।
ಸಿದ್ಧವಿದ್ಯಾಧರಾನ್ಯಕ್ಷಗಂಧರ್ವಾಪ್ಸರಸಸ್ತಥಾ ॥ ೧೦ ॥
ಏಕತ್ರ ಮಿಲಿತಾನ್ ಸರ್ವಾನ್ಯುಗಪನ್ಮೋದನಿರ್ಭರಾನ್ ।
ಪಶ್ಯೇಂದ್ರದ್ಯುಮ್ನ ಭಾಗ್ಯಂ ತೇ ಸರ್ವಲೋಕವಶೀಕರಂ ॥ ೧೧ ॥

---

ಕ್ಷೇಪದಿಂದ ಪಾವನಗೊಳಿಸುತ್ತ, ಅಲ್ಲಿ ವಿರಾಜಿಸುತ್ತಿದ್ದ ಜಗನ್ನಾಥ, ಬಲಭದ್ರ, ಸುಭದ್ರಾದೇವಿಯರ ರಥಗಳನ್ನೂ, ಬಹು ಚೆನ್ನಾಗಿ ಅಲಂಕರಿಸಿದ್ದ ಪ್ರಾಸಾದವನ್ನೂ, ದಿಗಂತವನ್ನು ವ್ಯಾಪಿಸಿದ್ದ ರತ್ನಸ್ತಂಭಾಲಂಕೃತವಾದ ಶಾಲೆಯನ್ನೂ ನೋಡಿದನು. ಆ ರತ್ನಸ್ತಂಭಶಾಲೆಯಾದರೋ ಸಮಸ್ತ ಸಂಭಾರಸಂಪೂರ್ಣವಾಗಿ ಸಾಕ್ಷಾತ್ ದೇವೇಂದ್ರನಿಗೂ ಆಶ್ಚರ್ಯವನ್ನುಂಟುಮಾಡುತ್ತಿದ್ದಿತು. ಇಂತಿರುವ ಆ ಶಾಲೆಯನ್ನೀಕ್ಷಿಸುತ್ತ ಆ ಪದ್ಮೋದ್ಭವನು ದೇವರ್ಷಿ, ಬ್ರಹ್ಮರ್ಷಿ, ರಾಜರ್ಷಿಗಳು ತಮ್ಮ ತಮ್ಮ ಕಿರೀಟಾಂಜಲಿಗಳಿಂದ ಎತ್ತೆತ್ತಲೂ ತನ್ನನ್ನು ಸ್ತುತಿಸುತ್ತಿರಲು ಸೋಪಾನದಿಂದಿಳಿದುಬಂದನು. ಆ ಪಿತಾಮಹನು ಯಾವ ದಿಕ್ಕನ್ನು ತನ್ನ ಕಟಾಕ್ಷದಿಂದನುಗ್ರಹಿಸುತ್ತಿರುವನೋ ಆ ದಿಕ್ಕಿನಲ್ಲಿ ಕೋಟ್ಯಂತರ ಅಂಜಲಿಗಳು ಸಮಸ್ತರಿಂದಲೂ ಶಿರಸಾ ಧರಿಸಲಾದುವು.

೯. ತರುವಾಯ ತನ್ನಡಿದಾವರೆಗಳಿಗೆರಗಿದ ಇಂದ್ರದ್ಯುಮ್ನಮಹೀಪತಿಯನ್ನು ಕಂಡು ಆ ಪ್ರಜಾಪತಿಯು ನಸುನಗೆಯಿಂದರಳಿದ ತುಟಿಗಳುಳ್ಳವನಾಗಿ ದಯಾರಸಭರಿತವಾದ ನುಡಿಗಳನ್ನಾಡಿದನು.

೧೦. ಆ ದೇವನು ತನ್ನ ಬೆರಳಿನಿಂದ, ಒಂದೆಡೆಯಲ್ಲಿಯೇ ನೆರೆದು ಸಂತೋಷಭರಿತರಾಗಿರುವ ದೇವತೆಗಳನ್ನೂ, ಪಿತೃದೇವತೆಗಳನ್ನೂ, ಬ್ರಹ್ಮರ್ಷಿಗಳನ್ನೂ, ತಪಸ್ವಿಗಳನ್ನೂ, ಸಿದ್ಧವಿದ್ಯಾಧರಯಕ್ಷಗಂಧರ್ವ ಅಪ್ಸರರನ್ನೂ ತೋರಿ ಇಂತೆಂದನು.

೧೧. "ಎಲೈ ಇಂದ್ರದ್ಯುಮ್ನನೇ! ನೋಡು; ನಿನ್ನ ಭಾಗ್ಯವು ಸಮಸ್ತ

ತ್ವದರ್ಥಮೇಕದಾ ಸರ್ವೇ ಮಾಂ ಪುರಸ್ಕೃತ್ಯ ಸಂಗತಾಃ ।
ಇತ್ಯುಕ್ತ್ವಾ ಪ್ರಯಯೌ ಶೀಘ್ರಂ ನಾರಾಯಣರಥಂ ತತಃ ॥ ೧೨ ॥
ಪ್ರಣಿಪತ್ಯ ಜಗನ್ನಾಥಂ ತ್ರಿಃ ಪರೀತ್ಯ ಪಿತಾಮಹಃ ।
ಆನಂದಸಿಂಧುಸಮ್ಮಗ್ನಃ ಸರೋಮಾಂಚವಪುಃ ಸ್ವಯಂ ॥ ೧೩ ॥
ಸ್ವಮಾತ್ಮಾನಂ ಮನಾವಾಥ ಪ್ರತ್ಯಕ್ಷಂ ಸ್ವರಗದ್ಗದಂ ॥ ೧೪ ॥

ಬ್ರಹ್ಮೋವಾಚ:—

ನಮಸ್ತುಭ್ಯಂ ನಮೋ ಮಹ್ಯಂ ತುಭ್ಯಂ ಮಹ್ಯಂ ನಮೋನಮಃ ।
ಅಹಂ ತ್ವಂ ತ್ವಮಹಂ ಸರ್ವಂ ಜಗದೇತಚ್ಚರಾಚರಂ ॥ ೧೫ ॥
ಮಹದಾದಿಜಗತ್ಸರ್ವಂ ಮಾಯಾವಿಲಸಿತಂ ತವ ।
ಅಧ್ಯಸ್ತಂ ತ್ವಯಿ ವಿಶ್ವಾತ್ಮಂಸ್ತ್ವಯ್ಯೇವ ಪರಿಣಾಮಿತಂ ॥ ೧೬ ॥
ಯದೇತದಖಿಲಾಭಾಸಂ ತತ್ತ್ವತೋಽಜ್ಞಾನಸಂಭವಂ ।
ಜ್ಞಾತೇ ತ್ವಯಿ ವಿಲೀಯೇತ ರಜ್ಜುಸರ್ಪಾದಿಬೋಧವತ್ ॥ ೧೭ ॥

---

ಲೋಕಗಳನ್ನೂ ವಶಪಡಿಸಿಕೊಳ್ಳುವುದಾಗಿರುವುದು. ದೇವರ್ಷಿ, ಬ್ರಹ್ಮರ್ಷಿ, ರಾಜರ್ಷಿಗಳೂ, ದೇವತೆಗಳೂ ಆದ ಇವರೆಲ್ಲರೂ ನಿನಗಾಗಿಯೇ ನನ್ನನ್ನು ಪುರಸ್ಕರಿಸಿಕೊಂಡು ಒಂದೆಡೆಯಲ್ಲಿಯೇ ಸೇರಿರುತ್ತಾರೆ.''

೧೨–೧೪. ಇಂತೆಂದು ಆ ಕಮಲಾಸನನು ಬಹುಬೇಗನೆ ಅಲ್ಲಿಯೇ ಬೆಳಗುತ್ತಿದ್ದ ಶ್ರೀಮನ್ನಾರಾಯಣಮೂರ್ತಿಯ ರಥದ ಬಳಿಗೈದಿದನು. ಆತನು ಜಗನ್ನಾಥನಿಗೆ ಮಣಿದು ಮೂರಾವೃತ್ತಿಪ್ರದಕ್ಷಿಣಮಾಡಿ ಆನಂದದ ಕಡಲಲ್ಲಿ ಮುಳುಗಿ ರೋಮಾಂಚಿತನಾಗಿ ಗದ್ಗದಸ್ವರಭರಿತನಾಗಿ ತಾನೇ ತನ್ನಾತ್ಮಸ್ವರೂಪನಾದ ಆ ಪ್ರಭುವನ್ನಿಂತು ಸ್ತುತಿಸಿದನು.

೧೫. ಬ್ರಹ್ಮನು ಹೇಳುತ್ತಾನೆ:— ''ಎಲೈ ಸ್ವಾಮಿಯೇ! ನಿನಗೆ ನಮಸ್ಕಾರವು! ನನ್ನ ಆತ್ಮಸ್ವರೂಪನಾದ ನನಗೇ ನಮಸ್ಕಾರವು! ನನಗೂ, ನಿನಗೂ ನಮೋನಮಃ!! ಪ್ರಭೂ! ನಾನೇ ನೀನು; ನೀನೇ ನಾನು; ನಾನು ನೀನೇ ಚರಾಚರವಾದ ಈ ಜಗತ್ತಾಗಿರುವೆವು.

೧೬. ಎಲೈ ದೇವಾ! ಮಹತ್ತೇ ಮೊದಲಾದ ಈ ಜಗತ್ತೆಲ್ಲವೂ ನಿನ್ನ ಮಾಯೆಯಿಂದಲೇ ವಿಲಸಿತವಾಗಿರುವುದು. ಓ ವಿಶ್ವಾತ್ಮನೇ! ನಿನ್ನಲ್ಲಿಯೇ ಈ ಜಗತ್ತು ಅಧಿಷ್ಠಿತವಾದುದಾಗಿ, ನಿನ್ನಲ್ಲಿಯೇ ಲೀನವಾಗುವುದು.

೧೭. ಸಮಸ್ತವೂ ಆಭಾಸರೂಪವಾಗಿರುವುದೂ, ತತ್ತ್ವತಃ ಅಜ್ಞಾನದಿಂದುಂಟಾಗಿರುವುದೂ ಆದ ಯಾವ ಈ ಜಗತ್ತುಂಟೋ ಇದು ಜಗನ್ಮಯನಾದ ನಿನ್ನನ್ನು ಅರಿತಲ್ಲಿ ರಜ್ಜುವಿನಲ್ಲಿ ಸರ್ಪಜ್ಞಾನದಂತೆ ನಿನ್ನಲ್ಲಿಯೇ ಲೀನವಾಗುವುದು.

ಅನಿರ್ವಕ್ತವ್ಯಮೇವೇದಂ ಸತ್ವಾತ್ಸತ್ವವಿವೇಕತಃ ।
ಅದ್ವಿತೀಯ ಜಗದ್ಭಾಸ ಸ್ವಪ್ರಕಾಶ ನಮೋಽಸ್ತುತೇ ॥ ೧೮ ॥
ವಿಷಯಾನಂದಮಖಿಲಂ ಸಹಜಾನಂದರೂಪಿಣಃ ।
ಅಂಶಂ ತವೋಪಜೀವಂತಿ ಯೇನ ಜೀವಂತಿ ಜಂತವಃ ॥ ೧೯ ॥
ನಿಷ್ಪ್ರಪಂಚ ನಿರಾಕಾರ ನಿರ್ವಿಕಾರ ನಿರಾಶ್ರಯ ।
ಸ್ಥೂಲಸೂಕ್ಷ್ಮಾಣುಮಹಿಮನ್ ಸ್ಥೌಲ್ಯಸೂಕ್ಷ್ಮವಿವರ್ಜಿತ ॥ ೨೦ ॥
ಗುಣಾತೀತ ಗುಣಾಧಾರ ತ್ರಿಗುಣಾತ್ಮನ್ನಮೋಽಸ್ತುತೇ ॥ ೨೧ ॥
ತ್ವನ್ಮಾಯಯಾ ಮೋಹಿತೋಽಹಂ ಸೃಷ್ಟಿಮಾತ್ರಪರಾಯಣಃ ।
ಅದ್ಯಾಪಿ ನ ಲಭೇ ಶರ್ಮ ಅಂತರ್ಯಾಮಿನ್ನಮೋಽಸ್ತುತೇ ॥ ೨೨ ॥
ತ್ವನ್ನಾಭಿಪಂಕಜಾಜ್ಜಾತೋ ನಿತ್ಯಂ ತತ್ರೈವ ಸಂಸ್ತುವನ್ ।
ನಾತಿಕ್ರಮಿತುಮೀಶೋಽಸ್ಮಿ ಮಾಯಾಂ ತೇ ಕೋಽನ್ಯ ಈಶ್ವರಃ ॥ ೨೩ ॥

---

೧೮-೧೯. ಸತ್ವದಿಂದಲೋ (ಬುದ್ಧಿಬಲದಿಂದಲೋ) ಆ ಸತ್ವದ ವಿವೇಕದಿಂದಲೋ ಈ ವಿಷಯವನ್ನು ಹೇಳತಕ್ಕುದೇ ಅಲ್ಲವು ಅದ್ವಿತೀಯನಾಗಿ, ಜಗತ್ತನ್ನು ಪ್ರಕಾಶಗೊಳಿಸುವವನಾಗಿ, ಯಾವೊಂದು ಪ್ರಕಾಶಕವಸ್ತುವೂ ಬೇಕಿಲ್ಲದೆ ಸ್ವಯಂಪ್ರಕಾಶನಾಗಿ ವಿರಾಜಿಸುತ್ತಿರುವ ಓ ಸ್ವಾಮಿಯೇ! ನಿನಗೆ ನಮಸ್ಕಾರವಿರಲಿ! ಸಮಸ್ತ ವಿಷಯೋಪಭೋಗಗಳಿಂದುಂಟಾಗುವ ಆನಂದವು ಸಹಜವಾದ ಆನಂದಸ್ವರೂಪವುಳ್ಳ ನಿನ್ನದೇ ಆಗಿರುವುದು. ಈ ಆನಂದವೆಲ್ಲ ಯಾವುದರಿಂದ ಸಮಸ್ತ ಜಂತುಗಳು ಜೀವಿಸುತ್ತಿವೆಯೋ ಆ ನಿನ್ನ ಅಂಶವನ್ನೇ ಅವಲಂಬಿಸಿ ಜೀವಿಸಿರುತ್ತದೆ.

೨೦-೨೧. ಎಲೈ ನಿಷ್ಪ್ರಪಂಚನೇ! ನಿರಾಕಾರನೂ, ವಿಕಾರರಹಿತನೂ, ಆಶ್ರಯರಹಿತನೂ, ಸ್ಥೂಲ, ಸೂಕ್ಷ್ಮ, ಅಣು, ಮಹತ್ತು—ಎಂಬ ಭೇದಗಳಿಂದ ವಿವರ್ಜಿತನೂ, ಸತ್ವರಜಸ್ತಮೋಗುಣಗಳನ್ನು ಮೀರಿದವನಾದರೂ, ಆ ಗುಣಗಳಿಗೆಲ್ಲ ಆಧಾರನೂ, ತ್ರಿಗುಣಾತ್ಮಕನೂ ಆಗಿರುವ ನಿನಗೆ ನಮಸ್ಕಾರವು.

೨೨. ಓ ಭಗವಂತ! ನಾನು ಈಗ ನಿನ್ನ ಮಾಯೆಯಿಂದ ಮೋಹಿತನಾಗಿ ಕೇವಲ ಜಗನ್ನಿರ್ಮಾಣಕಾರ್ಯವೊಂದರಲ್ಲಿಯೇ ತೊಡಗಿರುವೆನು. ಓ ಅಂತರ್ಯಾಮಿಯೇ! ಅಂತಹ ನಾನು ಇಂದಿಗೂ ಶಾಂತಿಯನ್ನೈದಿರುವುದಿಲ್ಲವು. ನಿನಗಿದೋ ನಮಸ್ಕಾರವು.

೨೩. ದೇವಾ! ನಾನು ನಿನ್ನ ನಾಭಿಪದ್ಮದಿಂದಾವಿರ್ಭವಿಸಿ ಅನುದಿನವೂ ನಿನ್ನನ್ನೇ ಸ್ತುತಿಸುತ್ತ ಅಲ್ಲಿಯೇ ನೆಲಸಿದವನಾಗಿ ನಿನ್ನ ದುರ್ಭೇದ್ಯವಾದ ಮಾಯೆಯನ್ನು ಅತಿಕ್ರಮಿಸಲಾರದಾಗಿರುವೆನು. ಇಂತಿರುವಲ್ಲಿ ನಿನಗಿಂತಲೂ ಈಶ್ವರನಾದವನಾವನಿರುವನು?

**ಅಹಂ ಯಥಾಂಡಮಧ್ಯೇಽಸ್ಮಿನ್ನಿರ್ಮಿತಃ ಸೃಷ್ಟಿಕರ್ಮಣಿ ।**
**ತಥಾನುಲೋಮಕಲಿಕಾಬ್ರಹ್ಮಾಂಡೇ ಬ್ರಹ್ಮಕೋಟಯಃ ॥ ೨೪ ॥**
**ಸಾರ್ಧತ್ರಿಕೋಟಿಸಂಖ್ಯಾನಾಂ ವಿರಿಂಚೀನಾಮಪಿ ಪ್ರಭೋ ।**
**ನೈಕೋಽಪಿ ತತ್ವತೋ ವೇತ್ತಿ ಯಥಾಹಂ ತ್ವತ್ಪುರಃ ಸ್ಥಿತಃ ॥ ೨೫ ॥**
**ನಮೋಽಚಿಂತ್ಯಮಹಿಮ್ನೇ ತೇ ಚಿದ್ರೂಪಾಯ ನಮೋ ನಮಃ ।**
**ನಮೋ ದೇವಾಧಿದೇವಾಯ ದೇವದೇವಾಯ ತೇ ನಮಃ ॥ ೨೬ ॥**
**ದಿವ್ಯಾದಿವ್ಯಸ್ವರೂಪಾಯ ದಿವ್ಯರೂಪಾಯ ತೇ ನಮಃ ।**
**ಜರಾಮೃತ್ಯುವಿಹೀನಾಯ ಮೃತ್ಯುರೂಪಾಯ ತೇ ನಮಃ ॥ ೨೭ ॥**
**ಜ್ವಲದಗ್ನಿ ಸ್ವರೂಪಾಯ ಮೃತ್ಯೋರಪಿ ಚ ಮೃತ್ಯವೇ ।**
**ಪ್ರಪನ್ನಮೃತ್ಯುನಾಶಾಯ ಸಹಜಾನಂದರೂಪಿಣೇ ॥ ೨೮ ॥**
**ಪ್ರಣತಾರ್ತಿವಿನಾಶಾಯ ನಿತ್ಯೋದ್ಯೋಗಿನ್ನಮೋಽಸ್ತು ತೇ ।**
**ನಮೋನಮಸ್ತೇ ದೀನಾನಾಂ ಕೃಪಾಸಹಜಸಿಂಧವೇ ॥ ೨೯ ॥**

---

೨೪. ನಾನೆಂತು ಈ ಬ್ರಹ್ಮಾಂಡ ಮಧ್ಯದಲ್ಲಿ ಸೃಷ್ಟಿಕಾರ್ಯಕ್ಕಾಗಿಯೇ ನಿನ್ನಿಂದ ನಿರ್ಮಿತನಾಗಿರುವೆನೋ, ಅಂತೆಯೇ, ಓ ಸ್ವಾಮಿಯೇ! ನಿನ್ನಿಂದ ನಿರ್ಮಿತವಾಗಿರುವ ಅಖಂಡ ಬ್ರಹ್ಮಾಂಡದಲ್ಲಿ ನಿನ್ನ ಪ್ರತಿಯೊಂದು ಲೋಮದಲ್ಲಿಯೂ ಕೋಟಿ ಬ್ರಹ್ಮರು ನಿರ್ಮಿತರಾಗಿರುವರು.

೨೫. ಪ್ರಭುವೆ! ನಿನ್ನಿಂದ ನಿರ್ಮಿತರಾಗಿರುವ ಮೂರೂವರೆಕೋಟಿ ಬ್ರಹ್ಮರಲ್ಲಿ ಒಬ್ಬನಾದರೂ ನಿನ್ನಮುಂಗಡೆ ನಿಂತಿರುವ ನನ್ನಂತೆಯೇ ನಿನ್ನ ಸ್ವರೂಪವನ್ನರಿತಿರುವುದಿಲ್ಲವು.

೨೬. ಯೋಚಿಸಲಸದಳವಾದ ಮಾಹಾತ್ಮ್ಯವುಳ್ಳ ನಿನಗೆ ನಮೋ ನಮಃ! ಚಿದ್ರೂಪ (ಜ್ಞಾನರೂಪ) ನಾದ ನಿನಗೆ ನಮೋ ನಮಃ!! ದೇವಾಧಿದೇವನೂ, ದೇವದೇವನೂ ಆದ ನಿನಗೆ ನಮಸ್ಕಾರವು.

೨೭. ದಿವ್ಯಾದಿವ್ಯಸ್ವರೂಪನಾಗಿ, ದಿವ್ಯರೂಪನಾಗಿ, ಮುಪ್ಪು ಸಾವುಗಳಿಲ್ಲದೆ, ಮೃತ್ಯುಗಳಿಗೆಲ್ಲ ಮೃತ್ಯುರೂಪನಾದ ನಿನಗೆ ನಮಸ್ಕಾರವು.

೨೮. ಧಗಧಗನುರಿಯುತ್ತಿರುವ ಅಗ್ನಿಸ್ವರೂಪನಾಗಿ, ಸಮಸ್ತರನ್ನೂ ಮಡಿಯಿಸುವ ಮೃತ್ಯುವಿಗೂ ಮೃತ್ಯುವಾಗಿ, ನಿನ್ನನ್ನು ಶರಣುಹೊಕ್ಕವರ ಮೃತ್ಯುವನ್ನು ನಿವಾರಿಸುವವನಾಗಿ, ನೈಜವಾದ ಆನಂದಸ್ವರೂಪನಾಗಿರುವ ನಿನಗೆ ನಮೋ ನಮಃ! ಭಕ್ತಿಪ್ರಿಯನೂ, ಜಗತ್ತಿಗೆ ತಾಯಿಯೂ, ತಂದೆಯೂ ಆಗಿರುವ ನಿನಗೆ ನಮೋ ನಮಃ!!

೨೯. ಪ್ರಪನ್ನರ ದುಃಖಗಳನ್ನು ಪರಿಹರಿಸುವವನೂ, ಸತತವೂ ಭಕ್ತಸಂರಕ್ಷಣೋದ್ಯಮದಲ್ಲಿ ತೊಡಗಿರುವವನೂ ಆದ ನಿನಗೆ ನಮಸ್ಕಾರವು! ದೀನ

**ಪರಾಯ ಪರರೂಪಾಯ ಪರಂ ಪಾರಾಯ ತೇ ನಮಃ ।**
**ಅಪಾರಪಾರಭೂತಾಯ ಬ್ರಹ್ಮರೂಪಾಯ ತೇ ನಮಃ ॥ ೩೦ ॥**
**ಪರಮಾರ್ಥಸ್ವರೂಪಾಯ ನಮಸ್ತೇ ಪರಹೇತವೇ ।**
**ಪರಂಪರಾಪರಿವ್ಯಾಪ್ತಪರತತ್ವಪರಾಯ ತೇ ॥ ೩೧ ॥**
**ಪ್ರಣತಾರ್ತಿವಿನಾಶಾಯ ನಮಃ ಸ್ವಾತ್ಮೈಕಭಾನವೇ ।**
**ಪುರಾ ಯತ್ಪ್ರಾರ್ಥಿತಂ ಸ್ವಾಮಿನ್ ಸೃಷ್ಟಿಭಾರಾವತಾರಣೇ ॥ ೩೨ ॥**
**ತತ್ಕುರುಷ್ವ ಜಗನ್ನಾಥ ಸಹಜಾನಂದರೂಪಭಾಕ್ ।**
**ತ್ವಯಿ ಪ್ರಸನ್ನೇ ಕಿಂ ನಾಥ ದುರ್ಲಭಂ ಮಯಿ ವಿದ್ಯತೇ ॥ ೩೩ ॥**
**ತ್ವಯ್ಯೈವಾಹಂ ಪೃಥಗ್ಲೀಲಾ ಭೇದಾದ್ಭಿನ್ನಃ ಕೃಪಾಂಬುಧೇ ।**
**ಅಜ್ಞಾನತಿಮಿರಚ್ಛನ್ನೇ ಜಗತ್ಕಾರಾಗೃಹಾಂತರೇ ॥ ೩೪ ॥**
**ಭ್ರಾಮ್ಯನ್ನ ದ್ವಾರಮಾಪ್ನೋತಿ ತ್ವಾಮೃತೇ ಮುಕ್ತಿಹೇತವೇ ॥ ೩೫ ॥**

---

ರಾಗಿರುವವರಿಗೆ ದಯಾಸಮುದ್ರಪ್ರಾಯನಾಗಿರುವ ನಿನಗೆ ಮತ್ತೆ ಮತ್ತೆ ನಮಸ್ಕಾರವು.

೩೦. ದೃಶ್ಯಾದೃಶ್ಯ ಜಗತ್ತಿನಲ್ಲಿರುವ ಸಮಸ್ತಕ್ಕಿಂತಲೂ ಅತ್ಯುತ್ತಮನೂ, ಇರುವ ಸಮಸ್ತ ರೂಪಗಳಿಗಿಂತಲೂ ಅತ್ಯುತ್ತಮರೂಪನೂ, ಭಕ್ತರಲ್ಲದ ಅಜ್ಞರಿಗೆ ಗೋಚರವಾಗದಷ್ಟು ಅತ್ಯಂತಪಾರನೂ, ಅಪಾರಪಾರಭೂತನೂ, ಪರಬ್ರಹ್ಮರೂಪನೂ ಆದ ನಿನಗೆ ನಮಸ್ಕಾರವು.

೩೧. ಪರಮಾರ್ಥಸ್ವರೂಪನಾಗಿ, ಮೋಕ್ಷಕಾರಣವಾಗಿ, ಪರಂಪರೆಯಾಗಿ ಎತ್ತೆತ್ತಲೂ ವ್ಯಾಪಿಸಿರುವ ಪರತತ್ವಪರನಾಗಿರುವ ನಿನಗೆ ನಮಸ್ಕಾರವು.

೩೨. ಶರಣಾಗತರ ಸಂಕಟಗಳನ್ನು ಹೋಗಲಾಡಿಸುವವನೂ, ಸ್ವಯಂಪ್ರಕಾಶನೂ ಆದ ಓ ಪ್ರಭುವೇ! ನಿನಗೆ ನಮಸ್ಕಾರವು. ಓ ಸ್ವಾಮಿಯೇ! ಪೂರ್ವದಲ್ಲಿ ನಾನು ನನ್ನ ಮೇಲಿರುವ ಈ ಸೃಷ್ಟಿಕಾರ್ಯದ ಭಾರವನ್ನಿಳುಹೆಂದು ನಿನ್ನನ್ನು ಪ್ರಾರ್ಥಿಸಿಕೊಂಡಿದ್ದೆನು.

೩೩. ಎಲೈ ಜಗನ್ನಾಥನೇ! ಸಹಜಾನಂದಸ್ವರೂಪನಾದ ನೀನು ಆ ನನ್ನ ಪ್ರಾರ್ಥನೆಯನ್ನೀಗ ಈಡೇರಿಸಿಕೊಡುವವನಾಗು. ಓ ಪ್ರಭುವೇ! ನೀನು ನನ್ನ ವಿಷಯದಲ್ಲಿ ಪ್ರಸನ್ನನಾದುದಾದರೆ ನನಗೆ ದುರ್ಲಭವಾದುದಾವುದೂ ಇರುವುದಿಲ್ಲವು.

೩೪–೩೫. ಎಲೈ ಕೃಪಾಸಾಗರನೇ! ನಾನು ಪ್ರತ್ಯೇಕವಾದ ನಿನ್ನ ಲೀಲಾಭೇದದಿಂದ ನಿನ್ನಿಂದಲೇ ಬೇರ್ಪಡಿಸಲಾಗಿರುವೆನು. ಅಜ್ಞಾನವೆಂಬ ಕತ್ತಲು ಕವಿದಿರುವ ಈ ಜಗತ್ತೆಂಬ ಕಾರಾಗೃಹದ ಮಧ್ಯದಲ್ಲಿ ತಿರುಗುತ್ತಿರುವ ಮಾನವನು ಮುಕ್ತನಾಗಲು ನಿನ್ನನ್ನುಳಿದು ದ್ವಾರವನ್ನು ಪಡೆಯಲಾರನು.

ನಮೋ ನಮಸ್ತೇ ಜಗದೇಕವಂದ್ಯ
ಸುರಾಸುರಾಭ್ಯಾರ್ಚಿತ ಪಾದಪದ್ಮ ।
ನಮೋ ನಮಸ್ತಾಪಹರೈಕಚಂದ್ರ
ನಮೋ ನಮಃ ಶರ್ಮಸುಬೋಧಸಾಂದ್ರ ॥ ೩೬ ॥
ನಮೋ ನಮಃ ಕಲ್ಪಕದಾರುಭೂತ
ದುಷ್ಪ್ರಾಪ್ಯಕಾಮಪ್ರದ ಕಲ್ಪವೃಕ್ಷ ।
ದೀನಾಶರಣ್ಯ ಪ್ರಣತೈಕದುಃಖ
ಸಂಘೋದ್ಧೃತೌ ನಿತ್ಯಸುಬದ್ಧಪಕ್ಷ ॥ ೩೭ ॥
ಪ್ರಸೀದ ಜಗತಾಂ ನಾಥ ಮಗ್ನಾನಾಂ ದುಃಖಸಾಗರೇ ।
ಕಟಾಕ್ಷಲೀಲಾಪಾತೇನ ತ್ರಾಯಸ್ವ ಕರುಣಾಕರ ॥ ೩೮ ॥
ಸ್ತುತ್ವೇತ್ಥಂ ಶ್ರೀಜಗನ್ನಾಥಂ ವೇದಾರ್ಥೈಃ ಸ ಪಿತಾಮಹಃ ।
ಜಗಾಮ ಸೀರಿಣಂ ದ್ರಷ್ಟುಮವತೀರ್ಣಂ ಧರಾಧರಂ ॥ ೩೯ ॥
ಪ್ರಣಮ್ಯ ಪರಯಾ ಭಕ್ತ್ಯಾ ತುಷ್ಟಾವ ಬಲಿನಂ ಮುದಾ ।
ನಭಃ ಶಿರಸ್ತೇ ದೇವೇಶ ಆಪಸ್ತೇ ವಿಗ್ರಹಃ ಪ್ರಭೋ ॥ ೪೦ ॥

---

೩೬. ಓ ಜಗದೇಕವಂದ್ಯನೇ! ಸುರಾಸುರರಿಂದ ಪೂಜಿತವಾದ ಪಾದಪದ್ಮಗಳುಳ್ಳವನೂ, ಭಕ್ತರ ತಾಪವನ್ನು ಪರಿಹರಿಸುವುದರಲ್ಲಿ ಏಕಮಾತ್ರ ಚಂದ್ರಸ್ವರೂಪನೂ, ಶಾಂತಿಸುಜ್ಞಾನಪರಿಪೂರ್ಣನೂ ಆದ ನಿನಗೆ ನಮೋ ನಮಃ!

೩೭. ಕಲ್ಪವೃಕ್ಷದ ಕಾಷ್ಟರೂಪವನ್ನು ತಳೆದು, ಹೊಂದಲಸದಳವಾದ ಇಷ್ಟಾರ್ಥಗಳನ್ನು ದಯೆಗೈಯುವವನಾಗಿ, ಭಕ್ತರಿಗೆ ಕಲ್ಪವೃಕ್ಷವೇ ಆಗಿ, ದೀನರೂ, ಅನಾಥರೂ, ಶರಣಾಗತರೂ ಆದ ಭಕ್ತರ ದುಃಖಸಮೂಹಗಳನ್ನು ಕಳೆದು ಉದ್ಧಾರಮಾಡುವುದರಲ್ಲಿ ಸತತವೂ ಪಕ್ಷಪಾತಿಯಾದ ಓ ಸ್ವಾಮಿಯೆ! ನಿನಗೆ ನಮಸ್ಕಾರವು!

೩೮. ಎಲೈ ಜಗನ್ನಾಥನೇ! ಪ್ರಸನ್ನನಾಗು! ಓ ಕರುಣಾಕರನೇ! ದುಃಖಸಾಗರದಲ್ಲಿ ಮುಳುಗಿರುವ ನಮ್ಮನ್ನು ನಿನ್ನ ಕಟಾಕ್ಷಲೀಲಾಪಾತದಿಂದ ಕಾಪಾಡು!"

೩೯. ಎಲೈ ದ್ವಿಜರೇ! ಆ ಬ್ರಹ್ಮದೇವನಿಂತು ಶ್ರೀ ಜಗನ್ನಾಥನನ್ನು ವೇದಾರ್ಥಗಳನ್ನೊಳಕೊಂಡ ಸ್ತೋತ್ರಗಳಿಂದ ಸ್ತುತಿಸಿ ಭೂಮಂಡಲಕ್ಕವತರಿಸಿರುವ ಶ್ರೀ ಬಲಭದ್ರದೇವನನ್ನು ಕಾಣಲು ಹೋದನು.

೪೦–೪೧. ಅಲ್ಲಿಯಾದರೋ ಆತನು ಆ ಬಲದೇವನನ್ನು ಪರಮಭಕ್ತಿಯಿಂದ ಸ್ತುತಿಸಿ ಸಂತೋಷದಿಂದ ಆ ಸ್ವಾಮಿಯನ್ನಿಂತು ಸ್ತುತಿಸಿದನು. "ಎಲೈ ದೇವೇಶ್ವರನೇ! ಆಕಾಶವೇ ನಿನ್ನ ಶಿರಸ್ಸು; ಜಲವೇ ನಿನ್ನ ಮೈಯು; ಎಲೈ

ಪಾದೌ ಕ್ಷಿತಿರ್ಮುಖಂ ವಹ್ನಿಃ ಶ್ವಸಿತಾನಿ ಸಮೀರಣಃ ।
ಮನಸ್ತೇ ಹ್ಯೋಷಧೀನಾಥಶ್ಚಕ್ಷುಷೀ ತೇ ದಿವಾಕರಃ ॥ ೪೧ ॥
ಬಾಹವಃ ಕಕುಭೋ ನಾಥ ನಮಸ್ತೇ ಜ್ಞಾನದರ್ಪಣ ।
ಚತುರ್ದಶಾನಾಂ ಲೋಕಾನಾಂ ಮೂಲಸ್ತಂಭಾಯ ಸೀರಿಣೇ ॥ ೪೨ ॥
ಪದಾಂಬೋಜಪ್ರಪನ್ನಾನಾಂ ನಮಃ ಪಾಪೌಘದಾರಿಣೇ ।
ಅನಂತವಕ್ತ್ರನಯನಶ್ರೋತ್ರಪಾದಾಕ್ಷಿಬಾಹವೇ ॥ ೪೩ ॥
ನಮೋಽನಾದಿಮಹಾಮೂಲತಮಃಸ್ತೋಮೌಘಭಾನವೇ ।
ತ್ರಯೀಮಯ ತ್ರಿಧಾದೋಷನಾಶಾಯ ತ್ರ್ಯವತಾರಿಣೇ ॥ ೪೪ ॥
ಫಣಾಮಣಿಫಣಾಕಾರಕ್ಷಿತಿಮಂಡಲಧಾರಿಣೇ ।
ನಮಃ ಕಾಲಾಗ್ನಿರುದ್ರಾಯ ಮಹಾರುದ್ರಾಯ ತೇ ನಮಃ ॥ ೪೫ ॥
ಭೋಗತಲ್ಪಫಣಾಛತ್ರಮಧ್ಯೇ ಸುಪ್ತಾಯ ತೇ ನಮಃ ।
ಮಹಾರ್ಣವಜಲೇ ವೃದ್ಧ ಏಕೀಭೂತೇ ಜಗತ್ತ್ರಯೇ ॥ ೪೬ ॥

---

ಪ್ರಭುವೆ! ನಿನ್ನಡಿಗಳೇ ಭೂಮಿಯಾಗಿರುವುದು. ವಹ್ನಿಯೇ ನಿನ್ನ ಮುಖ; ನಿನ್ನ ಉಸಿರೇ ವಾಯುವಾಗಿರುವುದು. ಓಷಧಿಗಳೊಡೆಯನಾದ ಚಂದ್ರನೇ ನಿನ್ನ ಮನಸ್ಸು. ನಿನ್ನ ಕಂಗಳಾದರೋ ಸೂರ್ಯದೇವನು.

೪೨. ದಿಕ್ಕುಗಳೇ ನಿನ್ನ ತೋಳುಗಳಾಗಿರುವುವು. ಪ್ರಭು! ಜ್ಞಾನವೆಂಬ ಕನ್ನಡಿಯ ರೂಪವಾಗಿ, ಹದಿನಾಲ್ಕು ಲೋಕಗಳಿಗೂ ಮೂಲಾಧಾರಸ್ತಂಭವಾಗಿ ಹಲಾಯುಧಪಾಣಿಯಾಗಿ ಶೋಭಿಸುತ್ತಿರುವ ನಿನಗೆ ನಮಸ್ಕಾರವು!

೪೩. ನಿನ್ನಡಿದಾವರೆಗಳಿಗೆರಗಿದವರ ಪಾಪಸಮೂಹಗಳನ್ನು ಸೀಳುವವನೂ, ಅಸಂಖ್ಯಾತವಾದ ಮುಖಗಳೂ, ನೇತ್ರಗಳೂ, ಕಿವಿಗಳೂ, ಅಡಿಗಳೂ, ಕಣ್ಣು ಗಳೂ, ತೋಳುಗಳೂ ಉಳ್ಳವನೂ ಆಗಿರುವ ನಿನಗೆ ನಮಸ್ಕಾರವು!

೪೪. ಅನಾದಿಯಿಂದಲೂ ಬಹಳವಾಗಿ ಬೆಳೆದು ಬೇರುಬಿಟ್ಟಿರುವ ಕತ್ತಲೆಯ ಮೊತ್ತಕ್ಕೆ ಸೂರ್ಯಸ್ವರೂಪನೂ, ವೇದಮಯನೂ, ಕಾಯಿಕ ವಾಚಕ ಮಾನಸಿಕ ದೋಷಗಳನ್ನು ನಾಶಮಾಡುವವನೂ, ಆದಿಶೇಷ, ಬಲರಾಮ, ಲಕ್ಷ್ಮಣರೆಂಬ ಮೂರು ಅವತಾರಗಳನ್ನುಳ್ಳವನೂ ಆದ ನಿನಗೆ ನಮಸ್ಕಾರವು!

೪೫. ಹೆಡೆಮಣಿಗಳಿಂದೊಪ್ಪುತ್ತಿರುವ ಹೆಡೆಗಳಿಂದ ಭೂಮಂಡಲವನ್ನು ಧರಿಸಿರುವವನೂ, ಕಾಲಾಗ್ನಿರುದ್ರನೂ, ಮಹಾರುದ್ರನೂ ಆದ ನಿನಗೆ ನಮಸ್ಕೃತಿಯು.

೪೬–೪೭. ಪ್ರಳಯಕಾಲದಲ್ಲಿ ಮಹಾಸಮುದ್ರಜಲವೆಲ್ಲವೂ ವೃದ್ಧಿಗೊಂಡು ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳೂ ಒಂದಾಗಲು, ಭೋಗ ತಲ್ಪದಲ್ಲಿ ಹೆಡೆಗಳ ಛತ್ರದನಡುವೆ ಆನಂದವಾಗಿ ಯೋಗನಿದ್ರೆಗೈಯುವ

ತ್ವಮೇವ ಶೇಷೋ ಭಗವನ್ ಸಹಸ್ರಫಣಿಮಂಡಿತಃ ।
ಫಣಾಮಣಿಗಣವ್ಯಾಜಸಂಭೃತಾಖಿಲಭೌತಿಕಃ ॥ ೪೭ ॥
ತ್ವಮೇವ ನಾಥಃ ಸರ್ವೇಷಾಂ ಸ್ರಷ್ಟಾ ಪಾಲಯಿತಾ ವಿಭೋ ।
ಆತ್ತಾ ಧಾರಯಿತಾ ನಿತ್ಯಂ ಮದಾದ್ಯಾಸ್ತ್ವನ್ನಿಮಿತ್ತಕಾಃ ॥ ೪೮ ॥
ಏಷ ನಾರಾಯಣೋ ದೇವೋ ವೇದಾಂತೇಷೂಪಗೀಯತೇ ।
ತ್ವತ್ತೋ ನಭಿನ್ನೋ ಭಗವನ್ ಕಾರಣಾದ್ಭೇದಭಾಗಸಿ ॥ ೪೯ ॥
ಶಯ್ಯಾ ತ್ವಂ ಶಯಿತಾ ಹ್ಯೇಷ ಛಾದ್ಯಃ ಸಂಛಾದಕೋ ಭವಾನ್ ।
ಯೋ ವೈ ವಿಷ್ಣುಃ ಸ ವೈ ರಾಮೋ ಯೋ ರಾಮಃ ಕೃಷ್ಣ ಏವ ಸಃ ॥
ಯುವಯೋರಂತರಂ ನಾಸ್ತಿ ಪ್ರಸೀದ ತ್ವಂ ಜಗನ್ಮಯ ॥ ೫೦ ॥
ಇತಿ ಸ್ತವಾಂತೇ ಬಲಿನಂ ಪ್ರಣಮ್ಯ ಪರಮೇಶ್ವರಂ ।
ಈಶ್ವರೀಂ ಜಗತಾಂ ದ್ರಷ್ಟುಂ ಸುಭದ್ರಾಸ್ಯಂದನಂ ಯಯೌ ॥ ೫೧ ॥

---

ನಿನಗೆ ನತಿಯು! ಸಹಸ್ರಫಣಾಮಂಡಲಮಂಡಿತನಾದ ಆದಿಶೇಷನೇ ನೀನು. ಸ್ವಾಮಿಯೆ! ನೀನೇ ಆ ಫಣಾಮಣಿಗಳ ವ್ಯಾಜದಿಂದ ಅಖಿಲ ಭೌತಿಕ ಪ್ರಪಂಚ ವನ್ನೂ ಭರಿಸಿರುವವನು.

೪೮. ವಿಭುವೇ! ನೀನೇ ಸಮಸ್ತರಿಗೂ ಸೃಷ್ಟಿಕರ್ತನೂ, ಪಾಲನಕರ್ತನೂ ಆಗಿರುವೆ. ಜಗದ್ಭಕ್ಷಕನೂ, ಈ ಜಗತ್ತನ್ನು ಸತತವೂ ಧರಿಸಿರುವವನೂ ನೀನೇ! ನನ್ನನ್ನು ಮೊದಲುಗೊಂಡು ಸಮಸ್ತವೂ ನಿನ್ನ ನಿಮಿತ್ತಕವಾದುವೇ ಆಗಿರುವುದು. ಸಮಸ್ತಕ್ಕೂ ನೀನೇ ಆದಿಕಾರಣನಾದವನು.

೪೯. ಭೋ ಭಗವನ್! ವೇದಾಂತಗಳಾದ ಉಪನಿಷತ್ತುಗಳಲ್ಲಿ ಪ್ರತಿ ಪಾದಿತನಾಗಿ ಗಾನಮಾಡಲಾಗಿರುವ ಈ ನಾರಾಯಣದೇವನು ನಿನ್ನಿಂದ ಬೇರೆ ಯಾದವನಲ್ಲ. ನಿಮಿತ್ತಮಾತ್ರದಿಂದ ನೀನು ಬೇರೆಯಾಗಿರುವೆ.

೫೦. ನೀನೇ ಶ್ರೀಮನ್ನಾರಾಯಣಮೂರ್ತಿಯ ಶಯನವಾಗಿ, ಅದರ ಮೇಲೆ ಮಲಗುವ ಆ ಸ್ವಾಮಿಯೂ ನೀನೇ ಆಗಿ, ಹೊದಿಕೆಯೂ, ಹೊದೆಯು ವವನೂ ನೀನೇ ಆಗಿರುವೆ. ಯಾವನು ವಿಷ್ಣುವೋ ಆತನೇ ಬಲರಾಮನಾದ ನೀನು; ಯಾವನು ಬಲರಾಮನೋ ಆತನೇ ಕೃಷ್ಣನಾಗಿರುವನು.

೫೧. ಎಲೈ ಜಗನ್ಮಯನೇ! ಪ್ರಸನ್ನನಾಗು; ಬಲರಾಮನಾದ ನಿನಗೂ ಕೃಷ್ಣನಾದ ಆ ಪರಮಾತ್ಮನಿಗೂ ಯಾವ ಅಂತರವೂ ಇರುವುದಿಲ್ಲವು. ನೀವೀ ರ್ವರೂ ಒಂದೇ!"

೫೨. ಎಲೈ ಮುನಿಗಳಿರಾ! ಈ ಪ್ರಕಾರವಾಗಿ ಸ್ತುತಿಸಿದ ಬಳಿಕ ಆ ಬ್ರಹ್ಮ ದೇವನು ಬಲದೇವನಿಗೆ ಮಣಿದು ಜಗದೀಶ್ವರಿಯಾದ ಸುಭದ್ರಾದೇವಿಯನ್ನು ಸಂದರ್ಶಿಸಲು ಆಕೆಯ ರಥವನ್ನು ಸಮೀಪಿಸಿ ಆಕೆಯನ್ನಿಂತೆಂದು ಸ್ತುತಿಸಿದನು.

ಜಯ ದೇವಿ ಜಗನ್ಮಾತಃ ಪ್ರಸೀದ ಪರಮೇಶ್ವರಿ ।
ಕಾರ್ಯಕಾರಣಕರ್ತ್ರೀ ತ್ವಂ ಸರ್ವಶಕ್ತ್ಯೈ ನಮೋಸ್ತು ತೇ ॥ ೫೩ ॥
ಸರ್ವಸ್ಯ ಹೃದಿ ಸಂವಿಷ್ಟೇ ಜ್ಞಾನಮೋಹಾತ್ಮಿಕೇ ಸದಾ ।
ಕೈವಲ್ಯಮುಕ್ತಿದೇ ಭದ್ರೇ ತ್ವಾಂ ನಮಾಮಿ ಸುರಾರಣಿಂ ॥ ೫೪ ॥
ದೇವಿ ತ್ವಂ ವಿಷ್ಣುಮಾಯಾಸಿ ಮೋಹಯಂತೀ ಚರಾಚರಂ ।
ಹೃತ್ಪದ್ಮಾಸನಸಂಸ್ಥಾಸಿ ವಿಷ್ಣುಭಾವಾನುಸಾರಿಣೀ ॥ ೫೫ ॥
ತ್ವಮೇವ ಲಕ್ಷ್ಮೀರ್ಗೌರೀ ಚ ಶಚೀ ಕಾತ್ಯಾಯನೀ ತಥಾ ।
ಯಚ್ಚ ಕಿಂಚಿತ್ಕ್ವಚಿದ್ವಸ್ತು ಸದಸದ್ವಾಽಖಿಲಾತ್ಮಿಕೇ ।
ತಸ್ಯ ಸರ್ವಸ್ಯ ಶಕ್ತಿಸ್ತ್ವಂ ಸ್ತೋತುಂ ತ್ವಾಂ ಕಸ್ತು ಶಕ್ತಿಮಾನ್ ॥ ೫೬ ॥
ಜಯ ಭದ್ರೇ ಸುಭದ್ರೇ ತ್ವಂ ಸರ್ವೇಷಾಂ ಭದ್ರದಾಯಿನಿ ।
ಭದ್ರಾಭದ್ರಸ್ವರೂಪೇ ತ್ವಂ ಭದ್ರಕಾಲಿ ನಮೋಽಸ್ತುತೇ ॥ ೫೭ ॥

---

೫೩. "ಓ ಸುಭದ್ರಾದೇವಿಯೇ! ನೀನು ಭಕ್ತರ ಅಭೀಷ್ಟಸಿದ್ಧಿಗಾಗಿ ಜಯಶೀಲೆಯಾಗು. ನೀನು ಜಗನ್ಮಾತೆಯು. ಪರಮೇಶ್ವರಿಯೇ! ಪ್ರಸನ್ನಳಾಗು. ನೀನು ಸಮಸ್ತ ಬ್ರಹ್ಮಾಂಡದ ಕಾರ್ಯಕಾರಣಗಳನ್ನು ನಿರ್ಮಾಣ ಮಾಡುವವಳಾಗಿರುವೆ; ಇಂತಹ ಸರ್ವಶಕ್ತಿಸ್ವರೂಪಿಣಿಯಾದ ನಿನಗೆ ನಮಸ್ಕಾರವು.

೫೪. ಎಲೌ ಭದ್ರಾದೇವಿಯೇ! ಸಮಸ್ತರ ಹೃದಯಗಳಲ್ಲಿ ನೆಲಸಿರುವವಳಾಗಿ, ಯಾವಾಗಲೂ ಜ್ಞಾನ ಮೋಹಾತ್ಮಿಕೆಯಾಗಿ ನಿನ್ನನ್ನು ಭಜಿಸಿದ ಭಕ್ತರಿಗೆ ಕೈವಲ್ಯಮುಕ್ತಿಯನ್ನು ನೀಡುವವಳೂ, ದೇವತೆಗಳಿಗೆ ಅರಣಿ (ಉತ್ಪತ್ತಿಸ್ಥಾನ) ಭೂತಳೂ ಆಗಿರುವ ನಿನಗೆ ಮಣಿಯುತ್ತೇನೆ.

೫೫. ದೇವಿ! ನೀನು ವಿಷ್ಣುಮಾಯೆಯಾಗಿರುವೆ. ಚರಾಚರ ಜಗತ್ತನ್ನು ಮೋಹಗೊಳಿಸುತ್ತ, ಆ ಭಗವಂತನ ಹೃತ್ಪದ್ಮದಲ್ಲಿ ಆತನ ಮನಸ್ಸನ್ನೇ ಅನುಸರಿಸಿ ಸತತವೂ ನೆಲಸಿರುತ್ತೀಯೆ.

೫೬. ಲಕ್ಷ್ಮೀ, ಗೌರೀ, ಶಚೀ, ಕಾತ್ಯಾಯಿನೀ ಮೊದಲಾದವರೆಲ್ಲರೂ ನೀನೇ ಆಗಿರುವೆ. ಓ ಅಖಿಲಾತ್ಮಿಕೆಯೇ! ಜಗತ್ತಿನಲ್ಲಿ ಯಾವ ಸದಸದ್ವಸ್ತು ವಿದ್ದರೂ ಆ ಎಲ್ಲ ವಸ್ತುಗಳ ಶಕ್ತಿಯೂ ನೀನೇ ಆಗಿರುವೆ. ಇಂತಹ ನಿನ್ನನ್ನು ಸ್ತುತಿಸಲು ಯಾರುತಾನೆ ಶಕ್ತರಾದಾರು?

೫೭. ಎಲೌ ಭದ್ರೇ, ಸುಭದ್ರೇ! ನೀನು ಸಮಸ್ತರಿಗೂ ಮಂಗಳವನ್ನುಂಟು ಮಾಡುವವಳು. ನಿನಗೆ ಜಯ ಜಯ!! ನೀನು ಭದ್ರಾಭದ್ರಸ್ವರೂಪಿಣಿಯಾದವಳು. ಭದ್ರಕಾಳಿಯಾದ ನಿನಗಿದೋ ನಮಸ್ಕಾರವು!

ತ್ವಂ ಮಾತಾ ಜಗತಾಂ ದೇವಿ ಪಿತಾ ನಾರಾಯಣೋ ಹಿ ನಃ ।
ಸ್ತ್ರೀರೂಪಂ ತ್ವಂ ಸರ್ವಮೇವ ಪುಂರೂಪೋ ಜಗದೀಶ್ವರಃ ॥ ೫೮ ॥
ಯುವಯೋರ್ನಹಿ ಭೇದೋಽಸ್ತಿ ನಾಸ್ತ್ಯನ್ಯತ್ಪರಮೇವ ಹಿ ।
ಯಥಾ ವಯಂ ನಿಯುಕ್ತಾಹಿ ತ್ವಯಾ ವೈ ವಿಷ್ಣುಮಾಯಯಾ ॥ ೫೯ ॥
ನಿದೇಶಕಾರಿಣೋ ನಿತ್ಯಂ ಭ್ರಮಾಮಃ ಪರಮೇಶ್ವರಿ ।
ವೃತ್ತಿಃ ಪ್ರವೃತ್ತಿಃ ಪರಮಾ ಕ್ಷುಧಾ ನಿದ್ರಾ ತ್ವಮೇವ ಚ ॥ ೬೦ ॥
ಆಶಾ ತ್ವಮಾಶಾಪೂರ್ಣಾ ಚ ಸರ್ವಾಶಾಪರಿಪೂರಿಕಾ ।
ಮುಕ್ತಿಹೇತುಸ್ತ್ವಮೇವೇಶಿ ಬಂಧಹೇತುಸ್ತ್ವಮೇವಹಿ ॥ ೬೧ ॥
ಸರ್ವಜ್ಞಾನಪ್ರದೇ ನಿತ್ಯೇ ಭಕ್ತಾನಾಂ ಕಲ್ಪವಲ್ಲರೀ ।
ತ್ರಾಹಿ ಪಾದಾಬ್ಜನಮ್ರಂ ಮಾಂ ಕೃಪಾಪಾಂಗವಿಲೋಕನೈಃ ॥ ೬೨ ॥
ಸ್ತುತ್ವೇತ್ಥಂ ಭದ್ರರೂಪಾಂ ತಾಂ ತತ್ಸಮೀಪಸ್ಥಿತಂ ರಥೇ ।
ಚಕ್ರಂ ಸುದರ್ಶನಂ ವಿಷ್ಣೋಶ್ಚತುರ್ಥಂ ವಪುರಾಸ್ಥಿತಂ ॥ ೬೩ ॥

---

೫೮. ಎಲೌದೇವಿಯೆ! ನೀನು ಈರೇಳುಲೋಕಗಳಿಗೂ ಮಾತೆಯಾದವಳು. ಶ್ರೀಮನ್ನಾರಾಯಣನೇ ತಂದೆಯು. ಸಮಸ್ತ ಸ್ತ್ರೀರೂಪವೂ ನೀನೇ ಆಗಿರುವೆ. ಪುಂರೂಪವೆಲ್ಲವೂ ಆ ಜಗದೀಶ್ವರನೇ ಆಗಿರುವನು.

೫೯–೬೦. ಓ ಪರಮೇಶ್ವರಿಯೇ! ನಿಮ್ಮೀರ್ವರಿಗೂ ಯಾವ ಭೇದವೂ ಇರುವುದಿಲ್ಲವಲ್ಲದೆ, ನಿಮಗಿಂತಲೂ ಶ್ರೇಷ್ಠವಾದುದಾವುದೂ ಇರುವುದಿಲ್ಲವು. ವಿಷ್ಣುಮಾಯೆಯಾದ ನಿನ್ನಿಂದ ಯಾವರೀತಿ ನಾವು ಆಜ್ಞಾಪಿತರಾಗಿರುವೆವೋ ಅದೇರೀತಿಯೇ ನಡೆಯುತ್ತ ಸತತವೂ ಸಂಚರಿಸುತ್ತಿರುವೆವು. ಜಗತ್ತಿನ ವೃತ್ತಿಯೂ, ಪ್ರವೃತ್ತಿಯೂ, ಪ್ರಬಲವಾದ ಹಸಿವೂ, ನಿದ್ರೆಯೂ ನೀನೇ ಆಗಿರುವೆ.

೬೧. ನೀನೇ ಆಶೆಯು; ಆಶೆಯನ್ನು ಪೂರ್ಣಗೊಳಿಸುವವಳೂ ನೀನೇ! ನೀನೇ ಸಮಸ್ತ ಭಕ್ತಸಮೂಹದ ಸಕಲಾಶೆಗಳನ್ನೂ ಪರಿಪೂರ್ಣಮಾಡುವವಳು. ಓ ಪರಮೇಶ್ವರಿಯೇ! ಮುಕ್ತಿಗೆ ನೀನೇ ಕಾರಣಳು. ಸಂಸಾರ ಬಂಧದಲ್ಲಿ ತೊಡಗಿಸುವುದಕ್ಕೂ ನೀನೇ ಕಾರಣಳಾಗಿರುವೆ.

೬೨. ಸಮಸ್ತರಿಗೂ ತಿಳಿವನ್ನು ಕೊಡುವವಳೂ, ನಿತ್ಯೆಯೂ, ಭಕ್ತರಿಗೆ ಕಲ್ಪಲತೆಯೂ ಆದ ಓ ಭದ್ರಾದೇವಿಯೇ! ನಿನ್ನಡಿದಾವರೆಗಳಿಗೆ ನಮ್ರನಾಗಿ ನಮಸ್ಕರಿಸುತ್ತಿರುವ ನನ್ನನ್ನು ದಯಾಪೂರ್ಣವಾದ ನಿನ್ನ ಅಪಾಂಗವಿಲೋಕನಗಳಿಂದ ನೋಡಿ ಕಾಪಾಡು!"

೬೩. ಹೀಗೆ ಭದ್ರರೂಪಿಣಿಯಾದ ಆ ಸುಭದ್ರಾದೇವಿಯನ್ನು ಸ್ತುತಿಸಿದ ಬಳಿಕ ಬ್ರಹ್ಮನು ಆ ದೇವಿಯ ರಥದ ಬಳಿಯಲ್ಲಿಯೇ ಇದ್ದ ಮತ್ತೊಂದು ರಥದಲ್ಲಿ

ಪ್ರಣಮ್ಯ ಪರಯಾ ಭಕ್ತ್ಯಾ ಇಮಾಂ ಸ್ತುತಿಮುದಾಹರತ್ ।
ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ ॥ ೬೪ ॥
ಅಜ್ಞಾನತಿಮಿರಾಂಧಾನಾಂ ವೈಕುಂಠಾಧ್ವಪ್ರದರ್ಶಕ ।
ನಮಸ್ತೇ ನಿತ್ಯವಿಲಸದ್ವೈಷ್ಣವಸ್ವನಿಕೇತನ ॥ ೬೫ ॥
ಅಪಾರ್ಯವೀರ್ಯಂ ಯದ್ರೂಪಂ ವಿಷ್ಣೋಸ್ತತ್ಪ್ರಣಮಾಮ್ಯಹಂ ।
ಪ್ರಣಮ್ಯ ಸ್ತುತ್ವಾ ದೇವಾನ್ಸ ರಥೇಭ್ಯಃ ಪರಿವೃತ್ಯಚ ॥ ೬೬ ॥
ಇಂದ್ರದ್ಯುಮ್ನನಾರದಾಭ್ಯಾಮಾದಿಷ್ಟೇ ಪದಪದ್ಧತಿಃ ।
ನೀಲಾಚಲಮಥಾರೋಹತ್ಪ್ರಾಸಾದಂ ದ್ರಷ್ಟುಮುತ್ಸುಕಃ ॥ ೬೭ ॥
ತತಃ ಸ ಗತ್ವಾ ಪ್ರಾಸಾದಸಮೀಪಂ ದೈವತೈಃಸಹ ।
ದದರ್ಶ ಶಾಲಾಂ ರುಚಿರಾಂ ಸ್ವಚಿತ್ತಾಭಿಮತಾಂ ದ್ವಿಜಾಃ ॥ ೬೮ ॥
ತನ್ಮಧ್ಯೇ ಸ್ಥಾಪಯಾಮಾಸ ದೇವತೋರಗಭೂಪತೀನ್ ।
ಬ್ರಹ್ಮರ್ಷೀನ್ಯೋಗಿನೋ ವಿಪ್ರಾನ್ ವೈಷ್ಣವಾಂಶ್ಚ ತಪಸ್ವಿನಃ ॥ ೬೯ ॥

---

ವಿರಾಜಿಸುತ್ತಿದ್ದ ಶ್ರೀಮನ್ಮಹಾವಿಷ್ಣುವಿನ ನಾಲ್ಕನೆಯ ರೂಪವಾಗಿರುವ ಸುದರ್ಶನಚಕ್ರಮೂರ್ತಿಯನ್ನು ಕಂಡನು.

೬೪. ಒಡನೆಯೇ ಆ ವಿಧಾತನು ಪರಮಭಕ್ತಿಯಿಂದಾಸುದರ್ಶನನಿಗೆ ನಮಸ್ಕಾರಮಾಡಿ ಈ ಸ್ತೋತ್ರವನ್ನು ಹೇಳಿದನು: "ಎಲೈ ಮಹಾಜ್ವಾಲನಾದ ಸುದರ್ಶನನೇ! ನೀನು ಕೋಟಿಸೂರ್ಯರಿಗೆ ಸಮಾನವಾದ ಪ್ರಭೆಯುಳ್ಳವನು.

೬೫. ಅಜ್ಞಾನವೆಂಬ ಕತ್ತಲೆಯಿಂದ ಕುರುಡರಾಗಿರುವವರಿಗೆ ವೈಕುಂಠ ಲೋಕದ ಹಾದಿಯನ್ನು ತೋರುವವನು ನೀನು. ಸತತವೂ ಬೆಳಗುತ್ತಿರುವ ಶ್ರೀಮನ್ಮಹಾವಿಷ್ಣುವಿನ ಸ್ವಂತ ನಿಲಯವಾದ ವೈಕುಂಠಲೋಕವೇ ವಾಸಭವನವಾಗಿರುವವನೂ ನೀನೆ! ನಿನಗಿದೋ ನಮಸ್ಕಾರವು!

೬೬–೬೭. ತಡೆಯಲಸದಳವಾದ ವೀರ್ಯವುಳ್ಳ ವಿಷ್ಣುವಿನ ಯಾವ ರೂಪವಿರುವುದೋ ಆ ರೂಪವೇ ನೀನಾಗಿರುವೆ. ಅಂತಹ ನಿನಗೆ ನಮಸ್ಕಾರಮಾಡುತ್ತೇನೆ." ಎಂದಿಂತು ಆ ಮಹಾವಿಷ್ಣುವಿನ ನಾಲ್ಕು ರೂಪಗಳನ್ನೂ ಸ್ತುತಿಸಿದ ತರುವಾಯ ಆತನು ಆ ರಥಪ್ರದೇಶದಿಂದ ಹಿಂತಿರುಗಿ, ಇಂದ್ರದ್ಯುಮ್ನನೂ, ನಾರದಮುನಿಯೂ ದಾರಿತೋರುತ್ತಿರಲು ಪ್ರಾಸಾದವನ್ನು ನೋಡಲುತ್ಸುಕನಾಗಿ ನೀಲಾಚಲವನ್ನು ಆರೋಹಣಮಾಡಿದನು.

೬೮. ತರುವಾಯ ಆ ಕಮಲಾಸನನು ದೇವತೆಗಳೊಡಗೂಡಿ ಆ ನೀಲಾಚಲದ ಮೇಲಣ ದಿವ್ಯ ಪ್ರಾಸಾದದ ಬಳಿಗೈದಿ ತನ್ನ ಮನಸ್ಸಿಗೆ ರುಚಿಕರವಾದ ರೀತಿಯಲ್ಲಿ ರಚಿಸಿರುವ ರತ್ನಶಾಲೆಯನ್ನು ಕಂಡನು.

೬೯. ಆ ರತ್ನಶಾಲೆಯ ಮಧ್ಯದಲ್ಲಿ ಆ ಬ್ರಹ್ಮದೇವನು ದೇವತೆಗಳನ್ನೂ,

ದಿವ್ಯಸಿಂಹಾಸನವರೇ ನೃಪೇಣ ಪ್ರತಿಪಾದಿತೇ ।
ಸ ಪಾದಪೀಠೇ ಭಗವಾನುಪವಿಷ್ಟಃ ಸ್ವಯಂ ವಿಭುಃ ॥ ೭೦ ॥
ಶಾಂತಿಕಂ ಪೌಷ್ಟಿಕಂ ಕರ್ಮ ಭಾರದ್ವಾಜಂ ಮಹಾಮುನಿಂ ।
ಪಿತಾಮಹಾಜ್ಞಯಾ ಭೂಪೋ ಕಾರಯಾಮಾಸ ಬುದ್ಧಿಮತ್ ॥ ೭೧ ॥
ಪ್ರತಿಷ್ಠಾಯಾಂ ತು ತೇ ದೇವಾ ಬಲಿಪೂಜಾವಿಧೌ ಮತಾಃ ।
ಹೋಮೇಷು ಚ ತಥಾ ತೇ ವೈ ಧ್ಯಾನರೂಪಮುಪಾಶ್ರಿತಾಃ ॥ ೭೨ ॥
ಆಜ್ಞಯಾ ಪದ್ಮಯೋನೇಸ್ತು ಚತುರ್ದಿಗ್ಭಾಗಮಾಶ್ರಿತಾಃ ।
ಸುಪೂಜಿತಾ ಗಂಧಪುಷ್ಪಮಾಲ್ಯಾಲಂಕಾರಭೂಷಣೈಃ ॥ ೭೩ ॥
ತತಃ ಕರ್ಮ ಪ್ರವೃತ್ತೇ ಭಾರದ್ವಾಜೇನ ಧೀಮತಾ ।
ಪ್ರತ್ಯಕ್ಷಂ ದೇವದೇವಸ್ಯ ಸರ್ವೇಷಾಂ ಚ ದಿವೌಕಸಾಂ ॥ ೭೪ ॥
ತ್ರೈಲೋಕ್ಯವಾಸಿನಾಂ ಪೂಜಾಂ ಚಕಾರ ನೃಪತಿರ್ಮುದಾ ।
ಸಾಂಗೋಪಾಂಗಂ ಸಮಭ್ಯರ್ಚ್ಯ ಜಗತ್ಸ್ರಷ್ಟಾರಮಗ್ರತಃ ॥ ೭೫ ॥

---

ಪನ್ನಗರಾಜರನ್ನೂ, ಬ್ರಹ್ಮರ್ಷಿಗಳನ್ನೂ, ಯೋಗಿಗಳನ್ನೂ, ವಿಷ್ಣುಭಕ್ತರಾದ ವಿಪ್ರರನ್ನೂ, ತಪಸ್ವಿಗಳನ್ನೂ ನೆಲೆಗೊಳಿಸಿದನು.

೭೦. ಬಳಿಕ ಇಂದ್ರದ್ಯುಮ್ನನು ತೋರಿದ ಪಾದಪೀಠೋಪಶೋಭಿತವಾದ ದಿವ್ಯಸಿಂಹಾಸನಶ್ರೇಷ್ಠದಲ್ಲಿ ಭಗವಾನ್ ಬ್ರಹ್ಮನು ತಾನೂ ಕುಳಿತುಕೊಂಡನು.

೭೧. ಆಗ ವಿಭುವಾದ ಪಿತಾಮಹನ ಆಣತಿಯಂತೆ ಇಂದ್ರದ್ಯುಮ್ನ ರಾಜನು, ಶಾಂತಿ ಮತ್ತು ಪೌಷ್ಟಿಕ ಕರ್ಮಗಳನ್ನು ಆಗಮಾಡಲು ಮಹಾ ಮುನಿಯಾದ ಭರದ್ವಾಜನನ್ನು ಬಹುವಾಗಿ ಸತ್ಕರಿಸಿ ವರಣಮಾಡಿದನು.

೭೨–೭೩. ಪ್ರಾಸಾದ ಪ್ರತಿಷ್ಠೆಯ ಸಮಯದಲ್ಲಿ ಯಾವ ಯಾವ ದೇವತೆಗಳು ಬಲಿಪೂಜಾವಿಧಾನದಲ್ಲಿ ಸಮ್ಮತರೋ, ಹೋಮಕರ್ಮಗಳಲ್ಲಿ ಅವರೇ ಧ್ಯಾನರೂಪವನ್ನು ತಳೆದಿದ್ದರಲ್ಲದೆ, ಅವರೆಲ್ಲರೂ ಪದ್ಮಸಂಭವನಾದ ಬ್ರಹ್ಮದೇವನ ಅಪ್ಪಣೆಯಂತೆ ನಾಲ್ಕೂ ದಿಕ್ಕುಗಳನ್ನಾಶ್ರಯಿಸಿ ಗಂಧಪುಷ್ಪಮಾಲ್ಯಾಲಂಕಾರ ಭೂಷಣಗಳಿಂದ ಸುಪುಜಿತರಾದರು.

೭೪. ಇದಾದ ಬಳಿಕ ಆ ದೇವದೇವನ ಮತ್ತು ಸಮಸ್ತದೇವತೆಗಳ ಸಮ್ಮುಖದಲ್ಲಿಯೇ ಮಹಾಬುದ್ಧಿಶಾಲಿಯಾದ ಭಾರದ್ವಾಜಮುನಿಯು ಶಾಂತಿ ಮತ್ತು ಪೌಷ್ಟಿಕಕರ್ಮವನ್ನು ನಡೆಸಿದನು.

೭೫–೭೭. ಆಗ ಇಂದ್ರದ್ಯುಮ್ನನೃಪಾಲನು ಆರಂಭದಲ್ಲಿ ಜಗತ್ಸ್ರಷ್ಟೃವಾದ ಬ್ರಹ್ಮದೇವನನ್ನು ಸಂತೋಷವಾಗಿ ಸಾಂಗೋಪಾಂಗವಾಗಿ ಪೂಜಿಸಿ ಆಮೇಲೆ ಮೂರು ಲೋಕಗಳಲ್ಲಿಯೂ ವಾಸಮಾಡುವವರಾದ ದೇವತೆಗಳನ್ನು ಅರ್ಚಿಸಿದನು. ಬಳಿಕ ತ್ರೈಲೋಕ್ಯವಾಸಿಗಳಾದ ಸಮಸ್ತರೂ ಸಭಾಮಧ್ಯದಲ್ಲಿದ್ದ

**ತತಃ ಸಂಪೂಜಿತಾಃ ಸರ್ವೇ ತೇನ ತ್ರೈಲೋಕ್ಯವಾಸಿನಃ ।**
**ಪಶ್ಯಂತೋಽವಸ್ಥಿತಂ ಮಧ್ಯೇ ಸಾಕ್ಷಾದ್ಬ್ರಹ್ಮಾಣಮವ್ಯಯಂ ॥ ೭೬ ॥**
**ವಪುಷ್ಮಂತಂ ಜಗನ್ನಾಥಂ ಪ್ರತ್ಯಕ್ಷಂ ಬ್ರಹ್ಮರೂಪಿಣಂ ।**
**ಇಂದ್ರದ್ಯುಮ್ನಪ್ರಸಾದೇನ ಜೀವನ್ಮುಕ್ತತ್ವಮಾಪ್ನುವನ್ ॥ ೭೭ ॥**
**ಕಲೇವರಂ ಭಗವತಃ ಪ್ರಾಸಾದಂ ಸುಮನೋಹರಂ ।**
**ಪ್ರತಿಷ್ಠಾಯ ಭರದ್ವಾಜಃ ಸಮುಚ್ಛ್ರಿತಮಹಾಧ್ವಜಂ ॥ ೭೮ ॥**
**ವ್ಯಜ್ಞಾಪಯತ್ಪ್ರತಿಷ್ಠಾಯೈ ದೇವಸ್ಯಾಥ ಪಿತಾಮಹಂ ।**
**ಸಮುತ್ತಸ್ಥೌ ತತೋ ಬ್ರಹ್ಮಾ ಕೃತಸ್ವಸ್ತ್ಯಯನಃ ಸ್ವಯಂ ॥ ೭೯ ॥**
**ಋಷಿಭಿರ್ನಾರದಾದ್ಯೈಶ್ಚ ವಿದ್ವದ್ಭಿರ್ಬ್ರಾಹ್ಮಣೈಸ್ತಥಾ ।**
**ರಾಜಭಿಃ ಕ್ಷತ್ರಿಯೈರ್ನಾಗೈಃ ಸಹಿತಃ ಪರಮರ್ಷಿಭಿಃ ॥ ೮೦ ॥**
**ಗಂಧರ್ವೈರ್ಗಾಯಮಾನೇಷು ದಿವ್ಯಗಾನೇಷು ಸುಸ್ವರಂ ।**
**ಮಾಂಗಲ್ಯೋಚಿತರಾಗೇಷು ನೃತ್ಯಂತೀಷ್ವಪ್ಸರಸ್ಸು ಚ ॥ ೮೧ ॥**
**ಶಾಕುಂತೇಷು ಚ ಸೂಕ್ತೇಷು ಪಠ್ಯಮಾನೇಷು ಚ ದ್ವಿಜೈಃ ।**
**ಶಂಖಕಾಹಾಲಮುರಜಭೇರೀವಾದಿತ್ರವೈಣವೇ ॥ ೮೨ ॥**

---

ಅವ್ಯಯನಾದ ಬ್ರಹ್ಮದೇವನನ್ನು ಸಂದರ್ಶಿಸಿ ಇಂದ್ರದ್ಯುಮ್ನರಾಜನಿಂದ ಸತ್ಕೃತರಾದರು. ಅವರೆಲ್ಲರೂ ಸಾಕ್ಷಾತ್ ದೇಹಧಾರಿಯಾಗಿ ಬ್ರಹ್ಮರೂಪದಿಂದಿರುವ ಜಗನ್ನಾಥನನ್ನು ಪ್ರತ್ಯಕ್ಷವಾಗಿ ಕಂಡು ಇಂದ್ರದ್ಯುಮ್ನನ ಅನುಗ್ರಹದಿಂದ ಜೀವನ್ಮುಕ್ತಿಯನ್ನು ಪಡೆದವರಾದರು.

೭೮–೮೦. ತರುವಾಯ ಭರದ್ವಾಜಮುನಿಯು ಭಗವಂತನ ಕಳೇಬರ ಸ್ವರೂಪವೂ, ಮನೋಹರವೂ ಆಗಿ ಎತ್ತಿದ ಧ್ವಜದಿಂದೊಪ್ಪುತ್ತಿರುವ ಆ ಪ್ರಾಸಾದವನ್ನು ಪ್ರತಿಷ್ಠಿಸಿ ಅದಕ್ಕೆ ಪ್ರಾಣಪ್ರತಿಷ್ಠೆಯನ್ನೆಸಗಲೋಸುಗ ಪಿತಾಮಹನಿಗೆ ಅರಿಕೆಮಾಡಿದನು. ಅನಂತರದಲ್ಲಿ ಆ ಬ್ರಹ್ಮದೇವನು ತಾನೇ ಸ್ವಸ್ತ್ಯಯನವನ್ನಾಚರಿಸಿ ನಾರದನೇ ಮೊದಲಾದ ದೇವರ್ಷಿಗಳಿಂದಲೂ, ವಿದ್ವಾಂಸರಿಂದಲೂ, ಬ್ರಾಹ್ಮಣರಿಂದಲೂ, ರಾಜರಿಂದಲೂ, ಇತರ ಕ್ಷತ್ರಿಯರಿಂದಲೂ, ನಾಗರಿಂದಲೂ ಇತರ ಮಹರ್ಷಿಗಳಿಂದಲೂ, ಕೂಡಿದವನಾಗಿ ತನ್ನ ರತ್ನಸಿಂಹಾಸನದಿಂದ ಮೇಲಕ್ಕೆದ್ದನು.

೮೧–೮೩. ಆಗ ಗಂಧರ್ವರು ಸುಸ್ವರವಾಗಿ ದಿವ್ಯಗಾಯನವನ್ನು ಮಾಡುತ್ತಿರಲು, ಮಂಗಳೋತ್ಸವಕ್ಕನುಗುಣವಾದ ರಾಗಗೀತಗಳಿಂದ ಅಪ್ಸರಾಂಗನೆಯರು ನರ್ತನಮಾಡುತ್ತಿರಲು, ಬ್ರಾಹ್ಮಣರೆಲ್ಲರೂ ಶಾಕುಂತಸೂಕ್ತಗಳನ್ನು ಪಠಿಸುತ್ತಿರಲು ಶಂಖ, ಕಹಳೆ, ಮುರಜ, ಭೇರಿ, ವಾದಿತ್ರ, ವೇಣುವೇ ಮೊದಲಾದ ವಾದ್ಯಗಳು ಭೋರ್ಗರೆಯುತ್ತಿರಲು ಅವರೆಲ್ಲರೂ ರಥದ ಮೇಲಕ್ಕೆ

ಶಬ್ದೇ ಪ್ರವರ್ತಮಾನೇ ಚ ತತಃ ಸರ್ವೇ ತೇ ಸ್ಯಂದನೋಪರಿ ।
ಗತ್ವಾವತಾರಯಾಮಾಸೂ ರಥಾತ್ಸೋಪಾನವರ್ತ್ಮನಿ ॥ ೮೩ ॥
ಸಾವಧಾನಾ ಸಮಾಧಿಸ್ಥಾ ಭಕ್ತ್ಯಾ ಸಂಯಮಿತಾತ್ಮಕಾಃ ।
ಪಾರ್ಶ್ವಯೋರ್ಭುಜಯೋರ್ಮೂರ್ಧ್ನಿ ಪಾದಯೋರ್ನ್ಯಸ್ತಪಾಣಯಃ ॥
ಶನೈಃಶನೈಃ ಸಲೀಲಂ ತೇ ನಾರಾಯಣಮನಾಮಯಂ ।
ವಾಸಂವಾಸಂ ತೂಲಿಕಾಸು ನಿನ್ಯುಃ ಪ್ರಾಸಾದಸನ್ನಿಧಿಂ ॥ ೮೫ ॥
ಉಪರ್ಯುಪರಿ ಸಂತಾನವೃಷ್ಟಿಷೂತ್ಪತಿತಾಸು ಚ ।
ಜಯ ಕೃಷ್ಣ ಜಗನ್ನಾಥ ಜಯ ಸರ್ವಾಘನಾಶನ ॥ ೮೬ ॥
ಜಯ ಲೀಲಾದಾರುತನೋ ಜಯ ವಾಂಛಾಫಲಪ್ರದ ।
ಜಯ ಸಂಸಾರಸಮ್ಮಗ್ನ ಲೀಲೋದ್ಧಾರ ಜಯಾವ್ಯಯ ॥ ೮೭ ॥
ಜಯಾನುಕಂಪಾಪಾಥೋಧೇ ಜಯ ದೀನಪರಾಯಣ ।
ಜಯಾಚ್ಯುತ ಜಯಾನಂತ ಜಯೇಶಾನ ನಮೋಸ್ತು ತೇ ॥ ೮೮ ॥
ಏಭಿಸ್ತವೈಃ ಸ್ತೂಯಮಾನೋ ಬ್ರಹ್ಮಣಾ ಚ ಸ್ವಯಂಭುವಾ ।
ತುಷ್ಟಾವ ಸ ಮುದಾಯುಕ್ತೋ ನಾರದಶ್ಚೋಪವೀಣಯನ್ ॥ ೮೯ ॥

---

ಹೋಗಿ ಶ್ರೀಮನ್ನಾರಾಯಣಮೂರ್ತಿಯನ್ನು ಸೋಪಾನಮಾರ್ಗವಾಗಿ ಕೆಳಕ್ಕಿಳಿಸಿದರು.

೮೪–೮೫. ತರುವಾಯ ಸಮಾಧಾನಮನಸ್ಕರೂ, ಸಮಾಧಿಯಲ್ಲಿರುವವರೂ ಭಕ್ತಿಯಿಂದ ಆತ್ಮಸಂಯಮವಾಂತವರೂ ಆದ ಅವರೆಲ್ಲರೂ ಅನಾಮಯನಾದ ನಾರಾಯಣನ ದಾರುಮೂರ್ತಿಯನ್ನು ಪಾರ್ಶ್ವಗಳಲ್ಲಿಯೂ, ಭುಜಗಳಲ್ಲಿಯೂ, ಮೂರ್ಧಾನದಲ್ಲಿಯೂ, ಪಾದಗಳಲ್ಲಿಯೂ ಕೈಗಳನ್ನು ಕೊಟ್ಟು ತೂಲಿಕೆಗಳಲ್ಲಿ ಅಡಿಗಡಿಗೂ ನಿಲ್ಲಿಸಿಕೊಳ್ಳುತ್ತ ಮೆಲ್ಲಮೆಲ್ಲಗೆ ಪ್ರಸಾದದ ಬಳಿಗೊಯ್ದು ತಂದರು.

೮೬–೮೯. ಆ ಸ್ವಾಮಿಯ ಮೇಲೆ, ಮೇಲಿಂದಮೇಲೆ ಸಂತಾನ (ಕಲ್ಪ) ವೃಕ್ಷದ ಪುಷ್ಪಗಳ ವೃಷ್ಟಿಯು ಬೀಳುತ್ತಿರಲು, "ಕೃಷ್ಣ! ಜಯ ಜಯ; ಜಗನ್ನಾಥ ಜಯ ಜಯ; ಸಮಸ್ತ ಪಾಪಗಳನ್ನೂ ನಾಶಗೊಳಿಸುವ ಓ ಸ್ವಾಮಿಯೇ! ಜಯ ಜಯ: ಲೀಲೆಗೋಸಾಗವಾಗಿಯೇ ಮರದ ಮೈಯನ್ನು ತಾಳಿರುವ ಓ ಪ್ರಭುವೆ, ಭಕ್ತರ ವಾಂಛಿತಗಳನ್ನು ಈಡೇರಿಸುವ ಸ್ವಾಮಿಯೇ! ಜಯ ಜಯ!! ಸಂಸಾರ ಸಾಗರದಲ್ಲಿ ತೀರ ಮುಳುಗಿಹೋಗಿರುವವರನ್ನು ಲೀಲೆಯಿಂದಲೇ ಉದ್ಧಾರಮಾಡುವ ಅವ್ಯಯಮೂರ್ತಿಯೇ! ಜಯ ಜಯ! ಕರುಣಾಸಮುದ್ರನೇ! ಜಯ ಜಯ!! ದೀನರಿಗೆ ಶರಣ್ಯನಾಗಿರುವ ಎಲೈ ಅಚ್ಯುತನೇ! ಜಯ ಜಯ! ಅನಂತಮೂರ್ತಿಯೇ! ಜಯ ಜಯ!! ಓ ಈಶಾನ! ನಿನಗೆ ಜಯ ಜಯ!! ನಿನಗಿದೋ ನಮಸ್ಕಾರವು!!" ಎಂಬೀ ಸ್ತೋತ್ರಗಳಿಂದ ನಾರದ

ರತ್ನಚ್ಛತ್ರಯುಗೇ ಮೂರ್ಧ್ನಿ ಧಾರ್ಯಮಾಣೋಽಥ ಪೃಷ್ಠತಃ ।
ಶಶಿನಾ ಭಾಸ್ವತಾ ಭಕ್ತ್ಯಾ ದಿವ್ಯಧೂಪೇನ ಧೂಪಿತಾಃ ॥ ೯೦ ॥
ಶ್ರೇಣೀಕೃತಾಹ್ಯುಭಯತಃ ಪಾರ್ಶ್ವಯೋಶ್ಚಾಮರಗ್ರಹಾಃ ।
ಸಲಿಲಾಂದೋಲನವ್ಯಗ್ರಾ ಯೌವನಾಲಂಕೃತಾಸ್ತಥಾ ॥ ೯೧ ॥
ಏವಂ ಚ ಸಹಿತಾಃ ಸರ್ವೇ ಕೌತೂಹಲಸಮನ್ವಿತಾಃ ।
ಸುದರ್ಶನಂ ಸುಭದ್ರಾಂ ಚ ಬಲಭದ್ರಮನ್ಯೈಷಿಷುಃ ॥ ೯೨ ॥
ಪ್ರಾಸಾದದ್ವಾರಿ ರಚಿತೇ ರತ್ನಸಂಭೇಽಥ ಮಂಡಪೇ ।
ವಾಸಯಿತ್ವಾಭಿಷೇಕಾಯ ಸಮ್ಮುಖಾದರ್ಶಮಂಡಲೇ ॥ ೯೩ ॥
ಅಧಿವಾಸಿತೈ ರತ್ನಕುಂಭೈಸ್ತೀರ್ಥವಾರ್ಯುಪಸಂಭೃತೈಃ ।
ಸೂಕ್ತಾಭ್ಯಾಂ ಶ್ರೀಪುರುಷಯೋರಭಿಷೇಕಂ ಪಿತಾಮಹಃ ।
ಚಕಾರ ಭಗವಾನ್ ಲೋಕಸಂಗ್ರಹಾರ್ಥಂ ದ್ವಿಜೋತ್ತಮಾಃ ॥ ೯೪ ॥
ತತೋಽಪ್ಯಲಂಕೃತಾನ್ ದೇವಾನ್ ಗಂಧಮಾಲ್ಯೋಪಶೋಭಿತಾನ್ ।
ನೀರಾಜಯಿತ್ವಾ ಭಗವಾನ್ ಸ ಸ್ವಯಂ ಲೋಕಭಾವನಃ ।
ರತ್ನಸಿಂಹಾಸನೇ ರಮ್ಯೇ ಸ್ಥಾಪಯಾಮಾಸ ಮಂತ್ರತಃ ॥ ೯೫ ॥

---

ಮುನಿಯು ಸ್ವಯಂಭವನಾದ ಬ್ರಹ್ಮನೊಡಗೂಡಿ ವೀಣೆಯನ್ನು ನುಡಿಸಿ ಸಂತೋಷಯುಕ್ತನಾಗಿ ಸ್ತುತಿಸುತ್ತಿದ್ದನು.

೯೦-೯೨. ಆ ಸ್ವಾಮಿಯ ಹಿಂಭಾಗದಲ್ಲಿ ನಿಂತು ಚಂದ್ರಸೂರ್ಯರು ಆತನ ಶಿರಸ್ಸಿನ ಮೇಲೆ ರತ್ನದ ಛತ್ರಿಗಳೆರಡನ್ನೂ ಎತ್ತಿಹಿಡಿದು ಮುಂಬರಿಯುತ್ತಿರಲು, ದಿವ್ಯಧೂಪದಿಂದ ಧೂಪಿತರಾಗಿ ಉಭಯ ಪಾರ್ಶ್ವಗಳಲ್ಲಿರುವ ಯೌವನಾಲಂಕೃತರೂ ಸುಂದರಿಯರೂ ಆದ ಚಾಮರಗ್ರಾಹಿಣಿಯರು ಚಾಮರಗಳನ್ನು ವಿಲಾಸದಿಂದ ಬೀಸಿಹಾಕುತ್ತಿದ್ದರು. ಇದೇ ರೀತಿಯಲ್ಲಿಯೇ ದೇವತೆಗಳೆಲ್ಲರೂ ಕುತೂಹಲಸಮನ್ವಿತರಾಗಿ ಸುದರ್ಶನ, ಸುಭದ್ರಾ, ಬಲಭದ್ರದೇವರುಗಳ ದಾರುಮೂರ್ತಿಗಳನ್ನು ಪ್ರಸಾದದ ಬಳಿಗೆ ಒಯ್ದು ತಂದರು.

೯೩-೯೪. ಎಲೈ ದ್ವಿಜೋತ್ತಮರೇ! ತರುವಾಯ ಆ ದಿವ್ಯಪ್ರಾಸಾದದ ಹೊರಬಾಗಿಲಿನಲ್ಲಿ ರಚಿತವಾಗಿ ರತ್ನಸ್ತಂಭಸಂಯುಕ್ತವಾಗಿ, ಸಮ್ಮುಖದಲ್ಲಿಯೇ ಕನ್ನಡಿಗಳುಳ್ಳದಾಗಿ ಕಂಗೊಳಿಸುತ್ತಿದ್ದ ದಿವ್ಯಮಂಟಪದಲ್ಲಿ ಆ ಮೂರ್ತಿಗಳ ನ್ನಿಳುಹಿ ಭಗವಾನ್ ಪಿತಾಮಹನು ಲೋಕಸಂಗ್ರಹಾರ್ಥವಾಗಿ, ದಿವ್ಯಗಂಧ ವಾಸಿತವಾದ ರತ್ನಕುಂಭಗಳಲ್ಲಿ ಸಂಭೃತವಾಗಿದ್ದ ತೀರ್ಥೋದಕಗಳಿಂದ ಶ್ರೀ ಸೂಕ್ತ ಪುರುಷಸೂಕ್ತಗಳನ್ನು ಹೇಳಿಕೊಂಡು ಅಭಿಷೇಕಮಾಡಿದನು.

೯೫. ಇದಾದ ಬಳಿಕ ಲೋಕಭಾವನನಾದ ಆ ಬ್ರಹ್ಮದೇವನು ತಾನೇ ಸಾಕ್ಷಾತ್ತಾಗಿ ಆ ದಾರುಮೂರ್ತಿಗಳನ್ನು ಗಂಧಮಾಲ್ಯಗಳಿಂದ ಅಲಂಕರಿಸಿ

ಬ್ರಹ್ಮೋವಾಚ :—

ಅಶೇಷಜಗದಾಧಾರ ಸರ್ವಲೋಕಪ್ರತಿಷ್ಠಿತ ।
ಸುಪ್ರತಿಷ್ಠಾಽಖಿಲವ್ಯಾಪಿನ್ ಪ್ರಾಸಾದೇ ಸುಸ್ಥಿರೋ ಭವ ॥ ೯೬ ॥
ತ್ವಯಿ ಪ್ರತಿಷ್ಠಿತೇ ನಾಥ ವಯಂ ಸರ್ವೇ ಪ್ರತಿಷ್ಠಿತಾಃ ।
ತ್ವದಾಜ್ಞಯಾ ಪ್ರತಿಷ್ಠೇಯಂ ಪೂರ್ಣಾಽಸ್ತ್ವಾಂ ತ್ವತ್ಪ್ರಸಾದತಃ ॥ ೯೭ ॥
ಸ್ಥಾಪಯಿತ್ವಾ ಜಗನ್ನಾಥಂ ಸ್ಪೃಷ್ಟ್ವಾ ತಸ್ಯ ಹೃದಂಬುಜಂ ।
ಆನುಷ್ಟುಭಂ ಮಂತ್ರರಾಜಂ ಸಹಸ್ರಂ ಸ ಜಜಾಪ ಹ ॥ ೯೮ ॥
ವೈಶಾಖಸ್ಯಾಮಲೇ ಪಕ್ಷೇ ಅಷ್ಟಾಭ್ಯಾಂ ಪುಷ್ಯಯೋಗತಃ ।
ಕೃತಾ ಪ್ರತಿಷ್ಠಾ ಭೋ ವಿಪ್ರಾಃ ಶೋಭನೇ ಗುರುವಾಸರೇ ॥ ೯೯ ॥
ತದ್ದಿನಂ ನು ಮಹತ್ಪುಣ್ಯಂ ಸರ್ವಪಾಪಪ್ರಣಾಶನಂ ।
ಸ್ನಾನಂ ದಾನಂ ತಪೋ ಹೋಮಃ ಸರ್ವಮಕ್ಷಯ್ಯಮುಚ್ಯತೇ ॥ ೧೦೦ ॥

---

ಅವುಗಳೆಲ್ಲವೂ ಬಹಳವಾಗಿ ಶೋಭಿಸುತ್ತಿರಲು ಆ ಪ್ರಸಾದದ ಮಧ್ಯದಲ್ಲಿದ್ದ ರಮ್ಯವಾದ ರತ್ನಸಿಂಹಾಸನದಲ್ಲಿ ಮುಂದೆ ಹೇಳುವ ಮಂತ್ರೋಚ್ಚಾರಣಪೂರ್ವಕವಾಗಿ ಪ್ರತಿಷ್ಠಿಸಿದರು.

೯೬. ಬ್ರಹ್ಮನು ಹೇಳುತ್ತಾನೆ:—"ಎಲೈ ಜಗನ್ನಾಥನೇ! ನೀನು ಸಮಸ್ತ ಲೋಕಗಳಿಗೂ ಆಧಾರಸ್ವರೂಪನಾದವನು; ಸಮಸ್ತ ಲೋಕಗಳನ್ನೂ ಪ್ರತಿಷ್ಠೆಗೊಳಿಸಿ, ಸಮಸ್ತ ಲೋಕಗಳಲ್ಲಿಯೂ ಅಂತರ್ಯಾಮಿಯಾಗಿರುವವನು; ಎಲೈ ಸರ್ವವ್ಯಾಪಿಯೇ! ನೀನು ಈ ಪ್ರಾಸಾದದಲ್ಲಿ ಸುಪ್ರತಿಷ್ಠಿತನಾಗಿ ಸುಸ್ಥಿರವಾಗಿ ನೆಲಸಿ ಜಗತ್ತಿಗೆ ಮಂಗಳವನ್ನುಂಟುಮಾಡುವವನಾಗು.

೯೭. ಎಲೈ ಜಗದೀಶನೇ, ಮನ್ನಾಥಾ! ನೀನೊಬ್ಬನು ಸುಪ್ರತಿಷ್ಠಿತನಾಗಿ ಭಕ್ತಾನುಗ್ರಹತತ್ಪರನಾಗಿದ್ದರೆ, ದೇವತೆಗಳಾದ ನಾವೆಲ್ಲರೂ ಪ್ರತಿಷ್ಠಿತರಾದಂತೆಯೇ ಎಂಬುದರಲ್ಲಿ ಸಂಶಯವಿಲ್ಲವು. ಎಲೈ ಸ್ವಾಮಿಯೇ! ನಿನ್ನ ಆಜ್ಞೆಯಿಂದಲೇ ನಡೆದಿರುವ ಈ ನಿನ್ನ ದಿವ್ಯಮೂರ್ತಿಯ ಪ್ರತಿಷ್ಠೆಯು ನಿನ್ನ ಅನುಗ್ರಹದಿಂದಲೇ ಪೂರ್ಣವಾಗಲಿ!"

೯೮. ಎಲೈ ಮುನಿಗಳಿರಾ! ಇಂತು ಬ್ರಹ್ಮದೇವನು ಶ್ರೀಜಗನ್ನಾಥಸ್ವಾಮಿಯನ್ನು ಪ್ರಾರ್ಥಿಸಿ ಸ್ಥಾಪಿಸಿ ಆ ಮೂರ್ತಿಯ ಹೃದಯಕಮಲವನ್ನು ಸ್ಪರ್ಶಿಸಿ ಅನುಷ್ಟುಪ್‌ಶ್ಲೋಕರೂಪವಾದ ಮಂತ್ರರಾಜವನ್ನು ಒಂದು ಸಹಸ್ರಾವೃತ್ತಿ ಜಪ ಮಾಡಿದನು.

೯೯. ಎಲೈ ವಿಪ್ರರೇ! ಕಮಲೋದ್ಭವನು ಜಗನ್ನಾಥದೇವನ ಈ ಪ್ರತಿಷ್ಠೆಯನ್ನು ವೈಶಾಖಮಾಸದ ಶುಕ್ಲಪಕ್ಷದ ಅಷ್ಟಮಿಯ ದಿನ ಪುಷ್ಯನಕ್ಷತ್ರಯೋಗದಲ್ಲಿ ಮಂಗಳಕರವಾದ ಗುರುವಾರದ ದಿನ ಮಾಡಿದನು.

೧೦೦. ಆ ಶುಭ ದಿವಸವು ಅತ್ಯಂತ ಪುಣ್ಯಸಂಪಾದಕವಾದುದಲ್ಲದೆ ಸಮಸ್ತ

**ತಸ್ಮಿನ್ ದಿನೇ ಯೇ ಪಶ್ಯಂತಿ ಮಾನವಾ ಭಕ್ತಿಭಾವಿತಾಃ ।**
**ಕೃಷ್ಣಂ ರಾಮಂ ಸುಭದ್ರಾಂ ಚ ಮುಕ್ತಿಭಾಜೋ ನ ಸಂಶಯಃ ॥ ೧೦೧ ॥**
**ಶುಕ್ಲಾಷ್ಟಮೀ ಯಾ ವೈಶಾಖೇ ಗುರುಪುಷ್ಯಯುತಾ ಯದಾ ।**
**ತಸ್ಯಾಮಭ್ಯರ್ಚನಂ ವಿಷ್ಣೋಃ ಕೋಟಿಜನ್ಮಾಘನಾಶನಂ ॥ ೧೦೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ "ಇಂದ್ರದ್ಯುಮ್ನಪ್ರಾರ್ಥನಾನಂತರ ಬ್ರಹ್ಮಕೃತ ರಥಪ್ರಾಸಾದ ದರ್ಶನಾದಿವರ್ಣನಂ" ನಾಮ ಸಪ್ತವಿಂಶೋಽಧ್ಯಾಯಃ**

---

ಪಾಪಗಳನ್ನೂ ಕಳೆಯುವಂತಹುದು. ಆ ದಿನದಲ್ಲಿ ಆಚರಿಸಿದ ಸ್ನಾನ, ದಾನ, ತಪಸ್ಸು, ಹೋಮ–ಇವುಗಳೆಲ್ಲವೂ ಅಕ್ಷಯವಾಗುತ್ತವೆ.

೧೦೧. ಆ ಶುಭ ದಿನದಲ್ಲಿ ಯಾವ ಮಾನವರು ಭಕ್ತಿಭಾವಿತರಾಗಿ ಶ್ರೀ ಜಗನ್ನಾಥಕ್ಷೇತ್ರದಲ್ಲಿ ಸಾಕ್ಷಾತ್ ಬ್ರಹ್ಮದೇವನಿಂದ ಸುಪ್ರತಿಷ್ಠಿತವಾದ ಶ್ರೀಕೃಷ್ಣ (ಜಗನ್ನಾಥ)ನನ್ನೂ, ಬಲರಾಮನನ್ನೂ, ಸುಭದ್ರಾದೇವಿಯನ್ನೂ ಸಂದರ್ಶಿಸುವರೋ, ಅವರೆಲ್ಲರೂ ಮುಕ್ತಿಗೆ ಭಾಜನರಾಗುತ್ತಾರೆಂಬುದರಲ್ಲಿ ಸಂಶಯವಿಲ್ಲವು.

೧೦೨. ಅಯ್ಯಾ ವಿಪ್ರರೇ! ವೈಶಾಖಮಾಸದ ಶುಕ್ಲಾಷ್ಟಮಿಯದಿನ ಗುರುವಾರದ ಪುಷ್ಯನಕ್ಷತ್ರಯೋಗದಲ್ಲಿ ಶ್ರೀಮನ್ಮಹಾವಿಷ್ಣುವಿನ ಪೂಜೆಯು ಕೋಟಿ ಜನ್ಮಗಳಲ್ಲೆಸಗಿದ ಪಾಪಗಳನ್ನು ಕಳೆಯುತ್ತದೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನಪ್ರಾರ್ಥನಾನಂತರ ಬ್ರಹ್ಮಕೃತ ರಥಪ್ರಾಸಾದದರ್ಶನಾದಿವರ್ಣನ"ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟಾವಿಂಶೋಽಧ್ಯಾಯಃ

## ನೃಸಿಂಹಪ್ರಭಾವವರ್ಣನಂ

**ಜೈಮಿನಿರುವಾಚ :—**

**ತತಃ ಸ ಭಗವಾನ್ ಮಂತ್ರಮಹಿಮ್ನಾ ನರಕೇಸರೀ ।**
**ಇಂದ್ರದ್ಯುಮ್ನಾದಿಭಿಸ್ಸರ್ವೈರ್ದದೃಶೇಽದ್ಭುತದರ್ಶನಃ ॥ ೧ ॥**
**ಲೇಲಿಹಾನೋ ಜಗತ್ಸರ್ವಂ ಸಮಂತಾಜ್ಜ್ವಲಜಿಹ್ವಯಾ ।**
**ಕಾಲಾಗ್ನಿರುದ್ರಂ ಸಕಲಂ ಗ್ರಸಂತಮಿವ ಚೋತ್ಥಿತಂ ॥ ೨ ॥**
**ರೋದಸೀಕಂದರಂ ವ್ಯಾಪ್ಯ ತೇಜಸಾ ತಪಸಾ ಭೃಶಂ ।**
**ಅನೇಕಾಕ್ಷಿಮುಖಗ್ರೀವಕರಪಾದಶ್ರುತಿರ್ವಿಭುಃ ॥ ೩ ॥**
**ಸರ್ವಾಶ್ಚರ್ಯಮಯೋ ದೇವಃ ಕೇವಲಂ ತೇಜಸಾಂ ನಿಧಿಃ ।**
**ಭಯತ್ರಸ್ತಾಃ ಸಮುದ್ವಿಜ್ನಾ ನೇಶಾಃ ಸ್ತೋತುಮಪಿ ಪ್ರಭುಂ ॥ ೪ ॥**

---

## ಕನ್ನಡದ ಅನುವಾದ

### ನೃಸಿಂಹಪ್ರಭಾವವರ್ಣನ

೧. ಜೈಮಿನಿಯು ಹೇಳುತ್ತಾನೆ:—ಎಲೈ ದ್ವಿಜರೇ ! ತರುವಾಯ ಬ್ರಹ್ಮದೇವನು ಪುರಶ್ಚರಣೆಮಾಡಿದ ಮಂತ್ರರಾಜದ ಪ್ರಭಾವದಿಂದ ಸಾಕ್ಷಾತ್ ಶ್ರೀನೃಸಿಂಹಮೂರ್ತಿಯು ಅದ್ಭುತದರ್ಶನನಾಗಿ ಇಂದ್ರದ್ಯುಮ್ನಾದಿಗಳಿಗೆ ಕಾಣಿಸಿಕೊಂಡನು.

೨. ಆ ದೇವನು ಪ್ರಜ್ವಲಿಸುತ್ತಿರುವ ತನ್ನ ಜಿಹ್ವೆಯಿಂದ ಜಗತ್ತನ್ನೆತ್ತಲೂ ಸವರುತ್ತ, ಸಮಸ್ತ ಬ್ರಹ್ಮಾಂಡವನ್ನೂ ನುಂಗಲಾವಿರ್ಭವಿಸಿರುವ ಪ್ರಳಯಾಗ್ನಿರುದ್ರನಂತೆ ತೋರುತ್ತಿದ್ದನು.

೩. ಆ ವಿಭುವು ಭೂಮ್ಯಂತರಿಕ್ಷಗಳನ್ನು ವ್ಯಾಪಿಸಿ ತನ್ನೊಂದು ತೇಜಸ್ಸಿನಿಂದ ಬ್ರಹ್ಮಾಂಡವನ್ನೇ ತಪಿಸುತ್ತ, ಅಸಂಖ್ಯಾತವಾದ ಕಂಗಳಿಂದಲೂ, ಮುಖಗಳಿಂದಲೂ, ಕುತ್ತಿಗೆಗಳಿಂದಲೂ, ಕೈಕಾಲುಗಳಿಂದಲೂ, ಕಿವಿಗಳಿಂದಲೂ ಕಂಗೊಳಿಸುತ್ತಿದ್ದನು.

೪. ಕೇವಲ ತೇಜೋನಿಧಿಯಾದ ಆ ಸ್ವಾಮಿಯು ಇಂತು ಸಮಸ್ತರಿಗೂ ಆಶ್ಚರ್ಯವನ್ನುಂಟುಮಾಡುವವನಾಗಿದ್ದನು. ಇಂತಾವಿರ್ಭವಿಸಿದ ಆ ನೃಸಿಂಹದೇವನನ್ನು ಕಂಡು ಸಮಸ್ತರೂ ಭಯಗ್ರಸ್ತರಾಗಿ ಆ ಪ್ರಭುವನ್ನು ಸ್ತುತಿಸಲೂ ಸಮರ್ಥರಾಗದೆಹೋದರು.

ತಂ ತಥಾವಿಧಮಾಲೋಕ್ಯ ನಾರದಃ ಪಿತರಂ ತದಾ ।
ಪಪ್ರಚ್ಛ ಭಗವನ್ನಿತ್ಥಂ ಕಥಮೇಷ ಪ್ರಕಾಶತೇ ॥ ೫ ॥

ನಾರದ ಉವಾಚ :—

ಅನುಗ್ರಹಾಯಾವತರತ್ಪ್ರತ್ಯುತೈಷ ಭಯಪ್ರದಃ ।
ಸರ್ವೇ ಭಯಾತ್ಸ್ಥಿರತರಾಃ ಪ್ರಲಯಾಶಂಕಿನೋಽಧುನಾ ॥ ೬ ॥
ತ್ವಮೇವ ಭಗವಲ್ಲೀಲಾಂ ಜಾನಾಸಿ ಜಪತಾಂ ಪತೇ ॥ ೭ ॥
ತಚ್ಛ್ರುತ್ವಾ ನಾರದವಚಃ ಪದ್ಮಯೋನಿಃ ಸ್ಮಿತಾನನಃ ।
ಉವಾಚ ಕೌತುಕಂ ವಾಕ್ಯಂ ಸರ್ವೇಷಾಮುಪಕಾರಕಂ ॥ ೮ ॥

ಬ್ರಹ್ಮೋವಾಚ :—

ಅವತೀರ್ಣಂ ಜಗನ್ನಾಥಂ ದೃಷ್ಟ್ವಾ ದಾರುವಪುರ್ಧರಂ ॥ ೯ ॥
ಅವಜ್ಞಾಸ್ಯಂತಿ ವೈ ಲೋಕಾಃ ಸಾಕ್ಷಾದ್ಬ್ರಹ್ಮಸ್ವರೂಪಿಣಂ ।
ಅತತ್ವವೇದಿನೋ ಮೂಢಾಃ ಮಹಿಮಾನಂ ವಿದಂತ್ವಿತಿ ॥ ೧೦ ॥

---

೫–೬. ಆಗ ನಾರದಮುನೀಂದ್ರನು ಆ ಪ್ರಕಾರವಾಗಿ ಆವಿರ್ಭವಿಸಿದ ನೃಸಿಂಹಪ್ರಭುವನ್ನು ಕಂಡು ತನ್ನ ತಂದೆಯಾದ ಕಮಲಾಸನನನ್ನು ಕುರಿತು ಈ ಪ್ರಕಾರ ಹೇಳಿದನು :—"ಭೋ ಭಗವನ್! ಲೋಕರಕ್ಷಕನೂ, ಸೌಮ್ಯ ಮೂರ್ತಿಯೂ ಆಗಿದ್ದ ಜಗದೀಶ್ವರನಿಂತೇಕೆ ಆವಿರ್ಭವಿಸಿ ಪ್ರಕಾಶಿಸುತ್ತಿರುವನು? ಈ ಪ್ರಭುವು ಲೋಕಾನುಗ್ರಹಕ್ಕಾಗಿ ಈ ರೀತಿ ಆವಿರ್ಭವಿಸಿರುವನೋ ಅಥವಾ ಭಯವನ್ನುಂಟುಮಾಡಲಾವಿರ್ಭವಿಸಿರುವನೋ ತೋರದಾಗಿರುವುದು. ಇಲ್ಲಿರುವ ಸಮಸ್ತರೂ ಪ್ರಕೃತದಲ್ಲಿ ಪ್ರಳಯವೇನಾದರೂ ಉಂಟಾಗುವುದೇನೋ ಎಂಬ ಸಂಶಯದಿಂದ ಭಯಪಟ್ಟು ತತ್ತಳಿಸುತ್ತಿದ್ದಾರೆ.

೭. ಓ ಜಗತ್ಪತಿಯೇ! ಈ ಪ್ರಭುವಿನ ನಾಭೀಕಮಲದಿಂದುತ್ಪನ್ನನಾಗಿರುವುದರಿಂದ ನೀನೊಬ್ಬನು ಮಾತ್ರವೇ ಸರ್ವವ್ಯಾಪಿಯೂ, ಷಡ್ಗುಣೈಶ್ವರ್ಯ ಭರಿತನೂ ಆದ ಭಗವಂತನ ಲೀಲೆಯನ್ನರಿತವನಾಗಿರುವೆ."

೮. ಇಂತು ನುಡಿದ ನಾರದನ ನುಡಿಗಳನ್ನಾಲಿಸಿ ಆ ಪದ್ಮೋದ್ಭವನು ನಸುನಗೆ ಬೀರುತ್ತ ಸಮಸ್ತರಿಗೂ ಉಪಕಾರಕವಾದ ಈ ಆಶ್ಚರ್ಯಕರ ವಾಕ್ಯವನ್ನು ನುಡಿದನು :—

೯–೧೦. ಬ್ರಹ್ಮನು ಹೇಳುತ್ತಾನೆ:—"ಭಗವತ್ತತ್ತ್ವವನ್ನರಿಯದ ಮೂಢರು ದಾರುಶರೀರಧರನಾಗಿ ಆವಿರ್ಭವಿಸಿರುವ ಶ್ರೀಜಗನ್ನಾಥಸ್ವಾಮಿಯನ್ನು ಕಂಡು 'ಭಗವದ್ರೂಪವಿದೇಯೇ!' ಎಂದು ಅಪಹಾಸ್ಯಮಾಡುತ್ತಾರೆ, ಅವರೆಲ್ಲರೂ ಆ ಪರಮಾತ್ಮಸ್ವರೂಪನಾದ ತನ್ನ ಮಾಹಾತ್ಮ್ಯವನ್ನರಿತುಕೊಳ್ಳಲಿ" ಎಂದು ಈ ನೃಸಿಂಹಪ್ರಭುವು ಈ ರೀತಿ ಆವಿರ್ಭವಿಸಿರುವನು.

ಮಂತ್ರಿತೋ ಮಂತ್ರರಾಜೇನ ಯೇನಾಸೌ ಪರಮೇಷ್ಠಿನಾ ।
ಪುರಾಭಿಮಂತ್ರಿತೋ ಯೇನ ವಿದದಾರ ಮಹಾಸುರಂ ॥ ೧೧ ॥
ತಾದೃಗ್ರೂಪಂ ಸುದುರ್ದರ್ಶಂ ಪ್ರಾಪ್ಯಮೇತಿ ಭಯಪ್ರದಂ ।
ಮೂರ್ತಿರೇಷಾ ಪರಾ ಕಾಷ್ಠಾ ವಿಷ್ಣೋರಮಿತತೇಜಸಃ ॥ ೧೨ ॥
ಯಾಮಭ್ಯರ್ಚ್ಯ ಗತಿಂ ಯಾಂತಿ ಪುನರಾವೃತ್ತಿದುರ್ಲಭಾಂ ।
ಏವಮುಕ್ತ್ವಾ ತು ಭೋ ವಿಪ್ರಾಃ ಭಕ್ತಿಭಾವೇನ ಭಾವಿತಃ ।
ನೃಸಿಂಹಾಭಿಮುಖಃ ಸ್ತೋತ್ರಮಿದಮಾಹ ಮುದಾ ವಿಭುಃ ॥ ೧೩ ॥

ನಮೋಽಸ್ತು ತೇ ದೇವವರೈಕಸಿಂಹ
ನಮೋಽಸ್ತು ಪಾಪೌಘಗಜೈಕಸಿಂಹ ।
ನಮೋಽಸ್ತು ದುಃಖಾರ್ಣವಪಾರಸಿಂಹ
ನಮೋಽಸ್ತು ತೇಜೋಮಯ ದಿವ್ಯಸಿಂಹ ॥ ೧೪ ॥
ನಮೋಽಸ್ತು ಸರ್ವಾಕೃತಿಚಿತ್ರಸಿಂಹ
ನಮೋಽಸ್ತು ತೇ ಕ್ಲೇಶವಿಮುಕ್ತಿಸಿಂಹ ।
ನಮೋಽಸ್ತು ತೇ ದಿವ್ಯವಪುರ್ನೃಸಿಂಹ
ನಮೋಽಸ್ತು ತೇ ವೀರವರೈಕಸಿಂಹ ॥ ೧೫ ॥

---

೧೧–೧೩. ಪೂರ್ವದಲ್ಲಿ ಬ್ರಹ್ಮನಾದ ಯಾವ ಪ್ರಭುವು ನಾನು ಮಂತ್ರವನ್ನು ಪುರಶ್ಚರಣೆಮಾಡಲು, ಆವಿರ್ಭವಿಸಿ ಹಿರಣ್ಯಕಶಿಪುವಿನ ವಕ್ಷಸ್ಥಳವನ್ನು ಸಿಗಿದನೋ ಅದೇ ಮಂತ್ರದಿಂದಲೇ ಪ್ರಕೃತದಲ್ಲಿ ಅಭಿಮಂತ್ರಿತನಾಗಿ, ನೋಡಲಸದಳವೂ, ಭಯಪ್ರದವೂ, ಪ್ರಾಪ್ಯವೂ ಆದ ಅದೇ ರೂಪವನ್ನೇ ಪ್ರಕಟಗೊಳಿಸಿ ಆವಿರ್ಭವಿಸಿರುವನು. ಮಾನವರು ಯಾವುದನ್ನು ಅರ್ಚಿಸಿ ಪುನರಾವೃತ್ತಿರಹಿತವಾದ ಮುಕ್ತಿಯನ್ನು ಪಡೆಯುತ್ತಾರೆಯೋ ಅಂತಹ ಅಮಿತತೇಜಸ್ಸಂಪನ್ನವಾದ ಶ್ರೀಮನ್ಮಹಾವಿಷ್ಣುವಿನ ಈ ಮೂರ್ತಿಯೇ ಆತನ ಮಹಾಮಹಿಮೆಯ ಪರಾಕಾಷ್ಠ ರೂಪವಾದುದು'' ಎಂದು ನುಡಿದು ಆ ಕಮಲಾಸನನು ಶ್ರೀನೃಸಿಂಹದೇವನಿಗೆ ಅಭಿಮುಖನಾಗಿ ನಿಂತು ಭಕ್ತಿಭಾವದಿಂದ ಪ್ರೇರಿತನಾಗಿ ಸಂತೋಷದಿಂದ ಈ ಸ್ತೋತ್ರವನ್ನು ಹೇಳಿದನು.

೧೪. "ಎಲೈ ದೇವವರನೇ! ಏಕಸಿಂಹಸ್ವರೂಪನೂ, ಪಾಪಸಮೂಹವೆಂಬ ಆನೆಗೆ ಸಿಂಹವಾಗಿರುವವನೂ, ದುಃಖಸಮುದ್ರದ ತಡಿಯನ್ನು ಕಾಣಿಸುವ ಸಿಂಹನಾಗಿ, ತೇಜೋಮಯ ಸಿಂಹನೂ ಆಗಿರುವ ನಿನಗೆ ನಮಸ್ಕಾರವು!

೧೫. ಸಮಸ್ತ ರೂಪಗಳನ್ನೂ ಪಡೆಯುವ ಚಿತ್ರಸಿಂಹವೂ, ಸಮಸ್ತ ಕ್ಲೇಶಗಳನ್ನೂ ನಿವಾರಣೆಮಾಡುವ ಸಿಂಹವೂ, ದಿವ್ಯದೇಹಧರಸಿಂಹವೂ ಆಗಿ, ವೀರವರನೂ ಏಕಸಿಂಹಸ್ವರೂಪನೂ ಆಗಿರುವ ನೃಸಿಂಹನೇ! ನಿನಗೆ ನಮಸ್ಕಾರವು!

ನಮೋಽಸ್ತು ತೇ ದೈತ್ಯವಿದಾರಸಿಂಹ
ನಮೋಽಸ್ತು ದೇವೇಷ್ವಧಿದೇವಸಿಂಹ ।
ನಮೋಽಸ್ತು ವೇದಾಂತವನೈಕಸಿಂಹ
ನಮೋಽಸ್ತು ತೇ ಯೋಗಿಗುಹೈಕಸಿಂಹ ॥ ೧೬ ॥
ನಮೋಽಸ್ತು ತೇ ಸಿಂಹವೃಷ್ಯೈಕಸಿಂಹ
ನಮೋಽಸ್ತು ನೀಲಾಚಲಶೃಂಗಸಿಂಹ ॥ ೧೭ ॥

ಜೈಮಿನಿರುವಾಚ :—

ಸ್ತುತ್ವೇತ್ಥಂ ದಿವ್ಯಸಿಂಹಂ ತಮಿಂದ್ರದ್ಯುಮ್ನಂ ಪ್ರಜಾಪತಿಃ ।
ಸಿಂಹಯಂತ್ರಂ ಸಮಾಲಿಖ್ಯ ತಸ್ಯೋಪರಿ ನಿವೇಶ್ಯ ಚ ॥ ೧೮ ॥
ದೀಕ್ಷಯಿತ್ವಾ ಮಂತ್ರರಾಜಂ ಸಾಕ್ಷಾದಾಥರ್ವಣೋದಿತಂ ।
ಆಹುರ್ವೈಷ್ಣವನಿರ್ವಾಣಂ ಯಂ ವೇದಾಂತಪರಾಯಣಾಃ ॥ ೧೯ ॥
ಯತ್ರ ವೇದಾಶ್ಚ ಚತ್ವಾರಃ ಸಾಕ್ಷಾನ್ನಿತ್ಯಂ ಪ್ರತಿಷ್ಠಿತಾಃ ।
ಯಮಧೀತ್ಯ ಮಹಾಮಂತ್ರಂ ಮನುಸ್ಸ್ವಾಯಂಭುವಃ ಪುರಾ ॥ ೨೦ ॥
ಸೃಷ್ಟಿಂ ಚಕಾರ ಭಗವಾನ್ ಪ್ರಾಪ್ತಮಸ್ಮಾಚ್ಚತುರ್ಮುಖಾತ್ ।
ಅಣಿಮಾದಿಗುಣಾ ಯಸ್ಯ ಫಲಂ ಸ್ಯಾದಾನುಷಂಗಿಕಂ ॥ ೨೧ ॥

---

೧೬–೧೭. ಹಿರಣ್ಯಕಶಿಪುದೈತ್ಯನನ್ನು ಸಿಗಿದ ಸಿಂಹನಾಗಿ, ದೇವತೆಗಳಲ್ಲೆಲ್ಲ ಅಧಿದೇವತಾಸಿಂಹನಾಗಿ, ವೇದಾಂತ (ಉಪನಿಷತ್ತುಗಳೆಂಬ) ವನದಲ್ಲಿ ಸಂಚರಿಸುವ (ಪ್ರತಿಪಾದ್ಯನಾದ) ಸಿಂಹವೂ, ವೀರವರ್ಯೈಕ ಸಿಂಹವೂ ಆದ ಓ ನೃಸಿಂಹದೇವ! ನಿನಗೆ ನಮಸ್ಕಾರವು. ಎಲೈ ಬ್ರಹ್ಮೈಕಸಿಂಹನೇ! ನೃಸಿಂಹನೇ! ನೀಲಾದ್ರಿಶಿಖರದಲ್ಲಿ ವಿರಾಜಿಸುತ್ತಿರುವ ನೃಸಿಂಹಸ್ವಾಮಿಯೇ! ನಿನಗಿದೋ ನಮಸ್ಕಾರವು!!!"

೧೮–೧೯. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ! ಬ್ರಹ್ಮದೇವನು ದಿವ್ಯನೃಸಿಂಹಸ್ವಾಮಿಯನ್ನಿಂತು ಸ್ತುತಿಸಿದ ತರುವಾಯ ಇಂದ್ರದ್ಯುಮ್ನನನ್ನು ಕಂಡು, ನೃಸಿಂಹಯಂತ್ರವನ್ನು ಭೂಮಿಯಲ್ಲಿ ಬರೆದು ಅವನನ್ನಲ್ಲಿ ಕೂಡಿಸಿ ಅಥರ್ವಣವೇದದಲ್ಲಿ ಉಕ್ತವಾದ ನೃಸಿಂಹಮಂತ್ರದ ದೀಕ್ಷೆಯನ್ನು ಆತನಿಗಿತ್ತನು. ವೇದಾಂತಪರಾಯಣರಾದವರು ಈ ಮಂತ್ರರಾಜವನ್ನೇ ವೈಷ್ಣವ (ವಿಷ್ಣುಭಕ್ತ)ರಿಗೆ ನಿರ್ವಾಣ (ಮುಕ್ತಿ)ಕರವಾದುದೆಂದು ಹೇಳುತ್ತಾರೆ.

೨೦–೨೧. ಈ ಮಂತ್ರದಲ್ಲಿಯೇ ನಾಲ್ಕು ವೇದಗಳೂ ಸಾಕ್ಷಾತ್ತಾಗಿ ಸತತವೂ ಪ್ರತಿಷ್ಠಿತವಾಗಿರುವುವು. ಪೂರ್ವದಲ್ಲಿ ಈ ಮಹಾಮಂತ್ರವನ್ನು ಚತುರ್ಮುಖನಾದ ನನ್ನಿಂದಲೇ ಪಡೆದು ಪುರಶ್ಚರಣೆಮಾಡಿ ಸ್ವಾಯಂಭುವ ಮನವು ಸೃಷ್ಟಿಯನ್ನೆಸಗಿದನು. ಅಣಿಮಾಮಹಿಮಾದ್ಯಷ್ಟಸಿದ್ಧಿಗಳು ಈ ಮಹಾಮಂತ್ರಕ್ಕೆ ಆನುಷಂಗಿಕವಾದ ಫಲವು.

**ಏಕ ಏವ ಮಹಾಮಂತ್ರಃ ಪುರುಷಾರ್ಥಚತುಷ್ಟಯಂ।**
**ಪ್ರಾಪ್ತುಂ ಕಾರಣಭೂತೋ ಹಿ ಕಿಂ ಪುನಃ ಕ್ಷುದ್ರಕಾಮನಾಂ ॥ ೨೨ ॥**
**ಏಕ ಏವ ಮಹಾಮಂತ್ರಃ ಸರ್ವಕ್ರತುಫಲಪ್ರದಃ ।**
**ಸರ್ವತೀರ್ಥಪ್ರದಃ ಸರ್ವದಾನವ್ರತಫಲಪ್ರದಃ ॥ ೨೩ ॥**
**ಯಥಾಽಯಂ ಸರ್ವಪಾಪೌಘತೂಲರಾಶೇರ್ದವಾನಲಃ ।**
**ದಿವ್ಯಸಿಂಹಾಕೃತಿರ್ದೇವೋ ಮಂತ್ರರಾಜಸ್ತಥಾ ಹ್ಯಯಂ ॥ ೨೪ ॥**
**ಏನಮಭ್ಯಸ್ಯ ಯತಯೋ ಭವರೋಗಂ ತ್ಯಜಂತಿ ಹಿ ।**
**ಯಸ್ಯ ಗ್ರಹಣಮಾತ್ರೇಣ ಗ್ರಹಾಽಪಸ್ಮಾರರಾಕ್ಷಸಾಃ ॥ ೨೫ ॥**
**ಡಾಕಿನ್ಯೋ ಭೂತವೇತಾಲಪಿಶಾಚಾ ಉರಗಾ ಗ್ರಹಾಃ ।**
**ದೂರಾದೇವ ಪಲಾಯಂತೇ ನೇಶತೇ ವೀಕ್ಷಿತುಂ ಚ ತಂ ॥ ೨೬ ॥**
**ಮಂತ್ರರಾಜಂ ತತೋ ಲಬ್ಧ್ವಾ ಇಂದ್ರದ್ಯುಮ್ನಶ್ಚತುರ್ಮುಖಾತ್ ।**
**ನೃಸಿಂಹಂ ಶಾಂತವಪುಷಂ ಲಕ್ಷ್ಮೀಸಂಶ್ರಿತವಕ್ಷಸಂ ॥ ೨೭ ॥**

---

೨೨. ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕುಬಗೆಯ ಪುರುಷಾರ್ಥಗಳನ್ನು ಪಡೆಯಲು ಈ ಮಹಾಮಂತ್ರವು ಕಾರಣಭೂತವಾದುದು. ಎಂದಮೇಲೆ ಇತರ ಅಲ್ಪಫಲಗಳುಳ್ಳ ಬಯಕೆಗಳು ಈಡೇರುತ್ತವೆಯೆಂದು ಹೇಳಬೇಕಾದುದೇನು?

೨೩. ಸಮಸ್ತ ಯಾಗಗಳನ್ನೂ ಮಾಡುವುದರಿಂದುಂಟಾಗುವ ಸಮಸ್ತ ಫಲಗಳ, ಸಕಲ ತೀರ್ಥಯಾತ್ರೆಗಳ ಮತ್ತು ಸಮಸ್ತ ದಾನಗಳ ಫಲಗಳೆಲ್ಲವನ್ನೂ ದೊರಕಿಸುವ ಮಹಾಮಂತ್ರವಿದೊಂದೇ!

೨೪. ಸಮಸ್ತ ಪಾಪಗಳ ರಾಶಿಗೆ, ದಿವ್ಯಸಿಂಹಾಕೃತಿಯಾದ ಶ್ರೀನೃಸಿಂಹಸ್ವಾಮಿಯೆಂತೋ ಅಂತೆಯೆ ಈ ಮಹಾಮಂತ್ರವೂ ದಳ್ಳುರಿಯಂತಿರುವುದು.

೨೫–೨೬. ಈ ಮಂತ್ರವನ್ನು ಅಭ್ಯಾಸಮಾಡಿಯೇ ಯತಿಗಳು ಭವರೋಗಭಯವನ್ನು ತೊರೆಯುತ್ತಾರೆ; ಈ ಮಹಾಮಂತ್ರರಾಜವನ್ನು ಪಡೆದಿರುವವನನ್ನು ಕಂಡೊಡನೆಯೆ ಅಥವಾ ಇದನ್ನು ಹಿಡಿದೊಡನೆಯೆ ಗ್ರಹಗಳೂ, ಅಪಸ್ಮಾರ ಮೊದಲಾದ ರೋಗಗಳೂ, ರಾಕ್ಷಸರೂ, ಡಾಕಿನಿಯರೂ, ಭೂತಭೇತಾಳರೂ, ಪಿಶಾಚಿಗಳೂ, ಉರಗಗಳೂ, ದುಷ್ಟಗ್ರಹಗಳೂ ದೂರದಲ್ಲಿಯೇ ಓಡಿಹೋಗುವುವಲ್ಲದೆ ಅವನನ್ನು ನೋಡಲೂ ಸಾಧ್ಯವಾಗುವುದಿಲ್ಲವು.

೨೭–೩೦. ಇಂದ್ರದ್ಯುಮ್ನನು ಇಂತಹ ಮಂತ್ರರಾಜವನ್ನು ಚತುರ್ಮುಖಬ್ರಹನಿಂದ ಪಡೆದುಕೊಂಡು ತರುವಾಯ, ಶಾಂತಾಕಾರನಾಗಿ, ವಕ್ಷಸ್ಥಲದಲ್ಲಿ ಶ್ರೀಲಕ್ಷ್ಮೀದೇವಿಯನ್ನು ಹೊಂದಿ, ಚಕ್ರಪಿನಾಕಗಳನ್ನು ಧರಿಸಿ, ಚಂದ್ರಸೂರ್ಯಾಗ್ನಿ ನೇತ್ರಗಳನ್ನೊಳಕೊಂಡು, ಮೊಣಕಾಲವರೆಗೂ ಪಸರಿಸಿರುವ

ಚಕ್ರಂ ಪಿನಾಕಂ ದಧತಂ ಚಂದ್ರಸೂರ್ಯಾಗ್ನಿಚಕ್ಷುಷಂ ।
ಜಾನುಪ್ರಸಾದಿತಕರಸರೋಜದ್ವಂದ್ವಮುನ್ನಸಂ ॥ ೨೮ ॥
ಯೋಗಪಟ್ಟಾಸನಾರೂಢದ್ವಾತ್ರಿಂಶದ್ದಲಪದ್ಮಕೇ ।
ಮಂತ್ರವರ್ಣಮಯೇ ಮಧ್ಯೇ ಕರ್ಣಿಕಾಪ್ರಣವೋಜ್ಜ್ವಲೇ ॥ ೨೯ ॥
ಸುಖಾಸೀನಂ ಸಾಟ್ಟಹಾಸಂ ವೀಕ್ಷಂತಂ ಶ್ರೀಮುಖಾಂಬುಜಂ ।
ಸಟಾಮಂಡಿತವಕ್ತ್ರಾಬ್ಜಂ ದಿವ್ಯರತ್ನೋಜ್ವಲಾಕೃತಿ ॥ ೩೦ ॥
ಫಣಾಸಹಸ್ರಂ ವಿಸ್ತಾರ್ಯ ಪಶ್ಚಾಚ್ಛತ್ರಾಕೃತಿಂ ವಿಭೋಃ ।
ದದರ್ಶ ಬಲಭದ್ರಂ ತಂ ಹಲಲಾಂಗಲಧಾರಿಣಂ ॥ ೩೧ ॥
ಪ್ರಚಹರ್ಷ ನೃಪೋ ದೃಷ್ಟ್ವಾ ತಾದೃಶಂ ಪುರುಷೋತ್ತಮಂ ।
ವಿಸ್ಮಯಾವಿಷ್ಟಚೇತಾಶ್ಚ ಪಪ್ರಚ್ಛ ಕಮಲಾಸನಂ ॥ ೩೨ ॥
ಭಗವಂಶ್ಚಿತ್ರಮೇತದ್ವೈ ಚರಿತಂ ಮಧುಘಾತಿನಃ ।
ವಿಜ್ಞಾತುಂ ಕಥಮಸ್ಮಾಭಿಃ ಶಕ್ಯಸ್ಯಾಲ್ಲೋಕಭಾವನ ॥ ೩೩ ॥
ಯಜ್ಞಾಂತೇ ತಾದೃಶಂ ರೂಪಂ ಬಭಾರ ದಾರುನಿರ್ಮಿತಂ ।
ರಥಸ್ಥಂ ಭಗವಾನೇವ ಪ್ರಾಸಾದಾಂತರ್ನ್ಯವೇಶಯುತ್ ॥ ೩೪ ॥

---

ಕರಕಮಲ ದ್ವಂದ್ವಗಳಿಂದೊಪ್ಪಿ, ಉನ್ನತವಾದ ನಾಸಿಕೆಯಿಂದೆಸೆದು, ಯೋಗಪಟ್ಟಿಕೆಯ ಮೇಲೆ ಉದಿಸಿರುವ ಮೂವತ್ತೆರಡು ದಳಗಳನ್ನೊಳಕೊಂಡ ಕಮಲದ ಮಧ್ಯದಲ್ಲಿ ಮಂತ್ರವರ್ಣಮಯವೂ ಪ್ರಣವಸಮುಜ್ಜ್ವಲವೂ ಆದ ಕರ್ಣಿಕೆಯ ಮೇಲೆ ಸುಖಾಸೀನವಾಗಿ, ಅಟ್ಟಹಾಸಪೂರ್ವಕವಾದ ದೃಷ್ಟಿಯನ್ನು ಚಿಮ್ಮಿ ಶ್ರೀದೇವಿಯ ಮುಖವನ್ನೇ ನೆಟ್ಟನೆ ನೋಡುತ್ತ ಕೇಸರಾಲಂಕೃತವಾದ ಮುಖವುಳ್ಳವನಾಗಿ ದಿವ್ಯರತ್ನಗಳಿಂದ ಮಹೋಜ್ಜ್ವಲ ದೇಹಧರನಾಗಿ ಬೆಳಗುತ್ತಿದ್ದ ಆ ನೃಸಿಂಹಮೂರ್ತಿಯನ್ನು ಕಂಡನು.

೩೧–೩೨. ಆ ಪ್ರಭುವಿನ ಹಿಂಭಾಗದಲ್ಲಿ ಸಾವಿರ ಹೆಡೆಗಳನ್ನೂ ಹರಡಿಕೊಂಡು ಛತ್ರಾಕಾರವಾಗಿ ಕಂಗೊಳಿಸುತ್ತ ಹಲ ಲಾಂಗಲಗಳನ್ನು ಧರಿಸಿ ಬೆಳಗುತ್ತಲಿದ್ದ ಬಲಭದ್ರನನ್ನೂ ಆ ದೊರೆಯು ಕಂಡನು. ಇಂತಹ ಪುರುಷೋತ್ತಮನನ್ನು ಕಂಡು ಆ ದೊರೆಯು ಸಂತೋಷಗೊಂಡನಲ್ಲದೆ, ಆಶ್ಚರ್ಯಗೊಂಡ ಮನಸ್ಸುಳ್ಳವನಾಗಿ ಬ್ರಹ್ಮದೇವನನ್ನು ಈ ರೀತಿ ಪ್ರಶ್ನಿಸಿದನು :—

೩೩. "ಭೋ ಭಗವನ್, ಲೋಕಭಾವನ, ಚತುರಾನನ! ಶ್ರೀಹರಿಯ ಈ ಚರಿತ್ರೆಯು ಬಹಳ ವಿಚಿತ್ರವಾಗಿರುವುದು. ನಾವಿದನ್ನು ತಿಳಿದುಕೊಳ್ಳುವುದೆಂತು?

೩೪. ಸಹಸ್ರಾಶ್ವಮೇಧಯಾಗಗಳಾದ ಮೇಲೆ ಸ್ವಾಮಿಯು ಆ ರೀತಿ ದಾರುನಿರ್ಮಿತವಾದ ರೂಪವನ್ನು ತಾಳಿ ಬೆಳಗಿದನು. ರಥದಲ್ಲಿದ್ದ ದಾರುರೂಪ

ಸಮಾಹಾರ ಪೂರ್ವಂ ವಾಣೀ ಸಾ ಗಗನಾಂತರಿತಾ ತದಾ ।
ಅಪೌರುಷೇಯತರುಣಾ ಚತುರ್ಮೂರ್ತಿರ್ಭವಿಷ್ಯತಿ ॥ ೩೫ ॥
ಇದಾನೀಮೇಕ ಏವಾಸೌ ದೃಶ್ಯತೇ ಸುಪ್ರತಿಷ್ಠಿತಃ ।
ಮಾಯಾ ವಾ ತತ್ತ್ವಮಥ ವಾ ತತ್ತ್ವತೋ ಬ್ರೂಹಿ ಮೇ ಪ್ರಭೋ ॥ ೩೬ ॥
ಶ್ರವಣೇ ಯದಿ ಮಾಂ ವೇತ್ಸಿ ಭಾಜನಂ ಭವಭಾವನ ।
ಶ್ರುತ್ವೈತತ್ಪ್ರತ್ಯುವಾಚಾಥ ಸಂಶಯಾನಂ ನೃಪೋತ್ತಮಂ ॥ ೩೭ ॥
ಬ್ರಹ್ಮೋವಾಚ :—
ಆದ್ಯಾ ಮೂರ್ತಿರ್ಭಗವತೋ ನಾರಸಿಂಹಾಕೃತಿರ್ನೃಪ ।
ನಾರಾಯಣೇನ ಪ್ರಥಿತಾ ಮದನುಗ್ರಹತಸ್ತ್ವಯಿ ॥ ೩೮ ॥
ದಾರವೀ ಮೂರ್ತಿರೇಷೇತಿ ಪ್ರತಿಮಾಬುದ್ಧಿರತ್ರ ತೇ ।
ಮಾಭೂತ್ತೇ ನೃಪಶಾರ್ದೂಲ ಪರಂ ಬ್ರಹ್ಮಾಕೃತಿಸ್ತ್ವಯಂ ॥ ೩೯ ॥
ಖಂಡನಾತ್ಸರ್ವದುಃಖಾನಾಮಖಂಡಾನಂದದಾನತಃ ।
ಸ್ವಭಾವಾದ್ದಾರುರೇವಂ ಹಿ ಪರಂ ಬ್ರಹ್ಮಾಭಿಧೀಯತೇ ॥ ೪೦ ॥

---

ಧಾರಿಯಾದ ಆ ಮಧುಸೂದನನನ್ನೇ ಭಗವಂತನಾದ ನೀನು ಪ್ರಾಸಾದದಲ್ಲಿ ಪ್ರತಿಷ್ಠಿಸಿದೆ.

೩೫. ಪೂರ್ವದಲ್ಲಿ ಅಶರೀರವಾಣಿಯು, "ಅಯ್ಯಾ ಇಂದ್ರದ್ಯುಮ್ನನೇ! ಭಗವಂತನು ಅಪೌರುಷೇಯವಾದ ಈ ಕಲ್ಪವೃಕ್ಷದಿಂದ ಚತುರ್ಮೂರ್ತಿಯಾಗಿ ಅವತರಿಸುವನು" ಎಂದು ನುಡಿಯಿತು.

೩೬. ಈಗಲಾದರೋ ಈ ಸ್ವಾಮಿಯು ತಾನೊಬ್ಬನೇ ಪ್ರತಿಷ್ಠಿತನಾಗಿ ಕಾಣುತ್ತಿರುವನು. ಇದೇನು ಮಾಯೆಯೋ, ಯಥಾರ್ಥವೋ ತಿಳಿಯದಾಗಿರುವುದು. ಪ್ರಭುವೇ! ಈ ವಿಷಯವನ್ನು ನನಗೆ ತಿಳಿಯಹೇಳು.

೩೭. ಎಲೈ ಭವಭಾವನನಾದ ಕಮಲಾಸನನೇ! ಇದನ್ನು ಕೇಳಲು ನಾನು ಪಾತ್ರನೆಂದು ಭಾವಿಸುವೆಯಾದರೆ ಹೇಳುವವನಾಗು." ಎಂದಿಂತು ನುಡಿಯಲು, ಬ್ರಹ್ಮದೇವನು ಭಗವತ್ಸ್ವರೂಪದ ವಿಷಯದಲ್ಲಿ ಸಂಶಯಗೊಳ್ಳುತ್ತಿರುವ ಆ ನೃಪತಿಯನ್ನು ಕುರಿತು ಹೇಳಿದನು.

೩೮. ಬ್ರಹ್ಮನು ಹೇಳುತ್ತಾನೆ:—"ಎಲೈ ದೊರೆಯೇ! ಪರಮಾತ್ಮನಾದ ಶ್ರೀಜನ್ನಾಥಸ್ವಾಮಿಯ ಮೊದಲನೆಯ ಮೂರ್ತಿಯೇ ಈ ನರಸಿಂಹಮೂರ್ತಿಯು. ನನಗೆ ನಿನ್ನಲ್ಲಿರುವ ಅನುಗ್ರಹದಿಂದ ಶ್ರೀಮನ್ನಾರಾಯಣಮೂರ್ತಿಯು ಈ ರೂಪವನ್ನು ನಿನಗೆ ತೋರಿರುವನು.

೩೯–೪೦. ಅಯ್ಯಾ ನೃಪಶಾರ್ದೂಲನೇ! ಇದು ದಾರುಮೂರ್ತಿಯೆಂಬ ಬುದ್ಧಿಯು ನಿನಗುಂಟಾಗದಿರಲಿ. ಇದೇ ಸಾಕ್ಷಾತ್ ಪರಬ್ರಹ್ಮಾಕೃತಿಯು.

ಇತ್ಥಂ ದಾರುಮಯೋ ದೇವಶ್ಚತುರ್ವೇದಾನುಸಾರತಃ ।
ಸೃಷ್ಟ್ವಾ ಸ ಜಗತಾಂ ತಸ್ಮಾದಾತ್ಮಾನಂ ಚಾಪಿ ಸೃಷ್ಟವಾನ್ ॥ ೪೧ ॥
ಶಬ್ದಬ್ರಹ್ಮಪರಂ ಬ್ರಹ್ಮ ನಾನಯೋರ್ಭೇದ ಇಷ್ಯತೇ ।
ಲಯೇ ತು ಏಕಮೇವೇದಂ ಸೃಷ್ಟೌ ಭೇದಃ ಪ್ರವರ್ತತೇ ॥ ೪೨ ॥
ಅನ್ಯೋನ್ಯಾಪೇಕ್ಷಿಣೌ ಭೂಪ ಶಬ್ದಾರ್ಥೌ ಹಿ ಪರಸ್ಪರಂ ।
ಅರ್ಥಾಭಾವೇನ ಶಬ್ದೋಽಸ್ತಿ ಶಬ್ದಾಭಾವೇ ನ ಬುಧ್ಯತೇ ॥ ೪೩ ॥
ಅರ್ಥಸ್ತಸ್ಮಾಚ್ಚತುರ್ವೇದಾಃ ಶಬ್ದಾಹ್ಯರ್ಥಾಶ್ಚ ತಾದೃಶಾಃ ।
ಋಗ್ವೇದರೂಪೀ ಹಲಧೃಕ್ ಸಾಮವೇದೋ ನೃಕೇಸರೀ ॥ ೪೪ ॥
ಯಜುರ್ಮೂರ್ತಿಸ್ತ್ವಿಯಂ ಭದ್ರಾ ಚಕ್ರಮಾಥರ್ವಣಂ ಸ್ಮೃತಂ ।
ವೇದಶ್ಚತುರ್ಧಾ ಭೇದೋಽಯಮೇಕರಾಶಿಪ್ರಭೇದತಃ ॥ ೪೫ ॥
ಅತಸ್ತೇ ಸಂಶಯೋ ಮಾಭೂದೇಕಸ್ತು ಬಹುಧಾ ವಿಭುಃ ।
ಅವತಾರೇಷು ಚಾನ್ಯೇಷು ನ್ಯಾಯೇನೈತೇನ ವರ್ತತೇ ॥ ೪೬ ॥

---

ಇದು ಸಮಸ್ತ ದುಃಖಗಳನ್ನು ಖಂಡಿಸುವುದರಿಂದಲೂ, ಅಖಂಡವಾದ ಆನಂದವನ್ನು ನೀಡುವುದರಿಂದಲೂ ಸ್ವಭಾವದಿಂದಮಾತ್ರ ದಾರುಮಯವಾದ ಪರಬ್ರಹ್ಮವೆನಿಸಿರುವುದು.

೪೧–೪೩. ಹೀಗೆ ದಾರುಮಯನಾದ ಆ ಸ್ವಾಮಿಯೇ ನಾಲ್ಕುವೇದಗಳ ಮೂಲಕ ಜಗತ್ತುಗಳ ಸೃಷ್ಟಿಕರ್ತನಾಗಿರುವುದಲ್ಲದೆ ತನ್ನನ್ನೂ ಅಂತೆಯೇ ಪ್ರಕಟಗೊಳಿಸಿರುತ್ತಾನೆ. ಶಬ್ದಬ್ರಹ್ಮನಿಗೂ, ಪರಬ್ರಹ್ಮನಿಗೂ ಯಾವ ಭೇದವೂ ಇರುವುದಿಲ್ಲವು. ಜಗಲ್ಲಯಸಮಯದಲ್ಲಿ ಈ ಇಬ್ಬರು ಬ್ರಹ್ಮರಿಗೂ ಯಾವ ಭೇದವೂ ಇರುವುದಿಲ್ಲವು. ಆದರೆ ಸೃಷ್ಟಿಸಮಯದಲ್ಲಿ ಮಾತ್ರ ಭೇದವು ಪ್ರವರ್ತಿಸುವುದು. ಈ ಶಬ್ದಬ್ರಹ್ಮ ಪರಬ್ರಹ್ಮರೀರ್ವರೂ, ಒಬ್ಬರನ್ನೊಬ್ಬರು ಅಪೇಕ್ಷಿಸುವವರಾಗಿ ಶಬ್ದಾರ್ಥಗಳಂತೆ ವಿರಾಜಿಸುತ್ತಿರುವರು. ಅರ್ಥವಿಲ್ಲದಿದ್ದರೂ ಶಬ್ದವಿರುತ್ತದೆ. ಆದರೆ ಶಬ್ದವಿಲ್ಲದಿದ್ದರೆ ಅರ್ಥವು ತೋರುವುದಿಲ್ಲವು.

೪೪–೪೫. ಆದುದರಿಂದ ಅರ್ಥವೇ ಚತುರ್ವೇದಗಳು. ಶಬ್ದಗಳೂ, ಅರ್ಥಗಳೂ ಅಂತೆಯೇ. ಹಲಧರನಾದ ಬಲರಾಮನು ಋಗ್ವೇದಸ್ವರೂಪನು. ನೃಸಿಂಹದೇವನು ಸಾಮವೇದಸ್ವರೂಪನು. ಈ ಸುಭದ್ರಾದೇವಿಯಾದರೋ ಯಜುರ್ವೇದಸ್ವರೂಪಿಣಿಯು. ಸುದರ್ಶನ ಚಕ್ರವಾದರೋ ಅಥರ್ವಣವೇದ ಸ್ವರೂಪವು. ವೇದವು ಈ ರೀತಿ ನಾಲ್ಕುಬಗೆಯಾಗಿ ಭೇದಗೊಂಡಿರುವುದು. ಆದರೆ ಅಭೇದದಿಂದ ವೇದವೆಲ್ಲವೂ ಒಂದೇ ರಾಶಿಯಾದುದು.

೪೬. ಆದುದರಿಂದೆಲೈ ಇಂದ್ರದ್ಯುಮ್ನರಾಜನೇ ! ನಿನಗೆ ಸಂಶಯವಿಲ್ಲದಿರಲಿ. ವಿಭುವಾದ ಒಬ್ಬ ಪರಮಾತ್ಮನೇ ಅನೇಕ ರೂಪಧರನಾದನು. ರಾಮಕೃಷ್ಣಾದಿ ಇತರ ಅವತಾರಗಳಲ್ಲಿಯೂ ಪರಮಾತ್ಮನು ಈ ನ್ಯಾಯದಿಂದಲೇ ವರ್ತಿಸುತ್ತಾನೆ.

ಭೇದಾಭೇದೌ ತಥಾ ಖ್ಯಾತೌ ಜಗನ್ನಾಥಸ್ಯ ತೇ ನೃಪ ।
ಯೇನ ತೇ ಮಾನಸಸ್ತುಷ್ಟಿಸ್ತೇನ ಭಕ್ತ್ಯಾ ಸಮಾಚರ ॥ ೪೭ ॥
ಸರ್ವರೂಪಮಯೋ ಹ್ಯೇಷ ಸರ್ವಮಂತ್ರಮಯಃ ಪ್ರಭುಃ ।
ಆರಾಧ್ಯತೇ ಯಥಾ ಯೇನ ತಥಾ ತಸ್ಯ ಫಲಪ್ರದಃ ॥ ೪೮ ॥
ಯಥಾ ಸುಶುದ್ಧಂ ಕನಕಂ ಸ್ವೇಚ್ಛಯಾ ಘಟಿತಂ ನೃಪ ।
ತತ್ತತ್ಸಂಜ್ಞಾಮವಾಪ್ಯೇಹ ತತ್ತತ್ಸಂತೋಷಕಾರಕಂ ॥ ೪೯ ॥
ಏವಂ ಮಹಿಮ್ನಾ ಭಗವಾನತ್ರಾಽವಿರಭವನ್ನೃಪ ।
ಯಸ್ಯ ಯಾವಾಂಸ್ತು ವಿಶ್ವಾಸಸ್ತಸ್ಯ ಸಿದ್ಧಿಸ್ತು ತಾವತೀ ॥ ೫೦ ॥
ಕರ್ಮಣಾ ಮನಸಾ ವಾಚಾ ವಿಶುದ್ಧೇನಾಂತರಾತ್ಮನಾ ।
ಸಮಾರಾಧಯ ಗೋವಿಂದಮತ್ರ ದಾರುವಪುರ್ಧರಂ ॥ ೫೧ ॥
ಚತುರ್ವರ್ಗಫಲಾವಾಪ್ತ್ಯೈ ಯಥಾಭಿಲಷಿತಂ ತವ ।
ಅನೇನ ಮಂತ್ರರಾಜೇನ ವಿಷ್ಣುಮೇನಂ ಸಮರ್ಚಯ ॥ ೫೨ ॥

---

೪೭. ಎಲೈ ನೃಪನೇ! ಈ ರೀತಿ ನಿನಗೆ ಜಗನ್ನಾಥನ ಭೇದಾಭೇದಸ್ವರೂಪಗಳೆರಡನ್ನೂ ತಿಳಿಯಹೇಳಿದುದಾಯಿತು. ಈಗ ನಿನ್ನ ಮನಸ್ಸಿಗೆ ಸಂತೋಷವುಂಟಾಗಿರುವುದಷ್ಟೆ. ಆದುದರಿಂದ ನೀನೀ ಮೂರ್ತಿಯ ವಿಷಯದಲ್ಲಿ ಭಕ್ತಿಯಿಂದ ನಡೆದುಕೊಳ್ಳುವವನಾಗು.

೪೮. ಈ ಪ್ರಭುವು ಸರ್ವರೂಪಮಯನು; ಸರ್ವಮಂತ್ರಮಯನಾದವನೂ ಈತನೇ! ಯಾವನು ಯಾವ ರೀತಿ ಈತನನ್ನಾರಾಧಿಸುತ್ತಾನೆಯೋ ಆ ರೀತಿಯೇ ಈತನು ಫಲವನ್ನು ಅನುಗ್ರಹಿಸುತ್ತಾನೆ.

೪೯-೫೦. ಯಾವ ರೀತಿ ಪರಿಶುದ್ಧವಾದ ಚಿನ್ನವು, ಅವರವರ ಇಚ್ಛೆಗನುಗುಣವಾಗಿ ಆಭರಣಗಳಾಗಿ ರಚಿತವಾಗಿ ಆಯಾ ಸಂಜ್ಞೆಗಳನ್ನು ಪಡೆದು ಆಯಾ ಜನಕ್ಕೆ ಸಂತೋಷವನ್ನುಂಟುಮಾಡುವುದೋ ಅದೇ ರೀತಿಯೇ ಈ ಭಗವಂತನು ತನ್ನ ಮಹಿಮೆಯಿಂದಿಲ್ಲಿ ಈ ರೂಪದಿಂದವತರಿಸಿರುವನು. ಯಾವನಿಗೆ ಎಷ್ಟುಮಟ್ಟಿನ ನಂಬಿಕೆಯಿರುತ್ತದೆಯೋ ಅಷ್ಟೇಮಟ್ಟಿನ ಸಿದ್ಧಿಯೂ ಅವನಿಗುಂಟಾಗುತ್ತದೆ.

೫೧-೫೨. ಆದುದರಿಂದೆಲೈ ನೃಪಾಲನೇ! ನೀನು ದಾರುರೂಪಧರನಾದ ಈ ಜಗನ್ನಾಥನನ್ನು ಪೂಜಾದಿ ಕರ್ಮಗಳಿಂದಲೂ, ಧ್ಯಾನಾದಿ ಮಾನಸಿಕ ವ್ಯಾಪಾರಗಳಿಂದಲೂ, ಪ್ರಣಾಮಾದಿ ಕಾಯಿಕಗಳಿಂದಲೂ, ಪರಿಶುದ್ಧವಾದ ಮನಸ್ಸಿನಿಂದಲೂ ಆರಾಧಿಸು. ಇದರಿಂದ ನೀನು ಕೋರುವ ಚತುರ್ವಿಧ ಪುರುಷಾರ್ಥಗಳೂ ಲಭಿಸುತ್ತವೆ. ಆದುದರಿಂದ ನಾನು ನಿನಗೆ ಉಪದೇಶಿಸಿದ ಶ್ರೀನೃಸಿಂಹಮಂತ್ರರಾಜದಿಂದಲೇ ಈ ಮಹಾವಿಷ್ಣುವನ್ನು ಪೂಜಿಸು.

ನಾತಃ ಪರತರೋ ಮಂತ್ರೋ ನ ಭೂತೋ ನ ಭವಿಷ್ಯತಿ ।
ಅನೇನಾಭ್ಯರ್ಚಿತೋ ವಿಷ್ಣುಃ ಪ್ರೀತೋ ಭವತಿ ತತ್ಕ್ಷಣಾತ್ ॥ ೫೩ ॥
ದದಾತಿ ಸ್ವಪುರಂ ಚಾಪಿ ಭಗವಾನ್ ಭಕ್ತವತ್ಸಲಃ ।
ಯಜ್ಞೈಸ್ತೀರ್ಥೈರ್ವ್ರತೈರ್ದಾನೈಸ್ತಪೋಭಿಶ್ಚಾಪಿ ತಸ್ಯ ಕಿಂ ॥ ೫೪ ॥
ನೀಲಾಚಲಸ್ಥಂ ಯೋ ವಿಷ್ಣುಂ ದಾರುಮೂರ್ತಿಮುಪಾಸ್ತಿ ವೈ ।
ತತ್ವಂ ಬ್ರವೀಮಿ ತ್ವಾಂ ಭೂಪ ಶ್ರುತ್ವೈತದವಧಾರಯ ॥ ೫೫ ॥
ನ್ಯಗ್ರೋಧಮೂಲೇ ಕೂಲೇಽಸ್ಯ ಸಿಂಧೋರ್ನೀಲಾಚಲೇ ಸ್ಥಿತಂ ।
ದಾರುವ್ಯಾಜಾವೃತಂ ಬ್ರಹ್ಮ ದೃಷ್ಟ್ವಾ ಮುಚ್ಯೇನ್ನ ಸಂಶಯಃ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ "ನೃಸಿಂಹಪ್ರಭಾವವರ್ಣನಂ" ನಾಮ ಅಷ್ಟಾವಿಂಶೋಽಧ್ಯಾಯಃ

---

೫೩. ಈ ಮಂತ್ರಕ್ಕಿಂತಲೂ ಮೇಲಾದ ಮಂತ್ರವು ಹಿಂದಾವಾಗಲೂ ಇರಲಿಲ್ಲವು. ಮುಂದೆ ಹುಟ್ಟುವುದೂ ಇಲ್ಲವು. ಈ ಮಂತ್ರದಿಂದ ಶ್ರೀಮಹಾವಿಷ್ಣುವನ್ನು ಪೂಜಿಸಿದುದಾದರೆ ಆತನು ಒಡನೆಯೇ ಪ್ರತ್ಯಕ್ಷನಾಗುವನು.

೫೪–೫೫. ಇಂತು ಪ್ರತ್ಯಕ್ಷನಾಗಿ ಭಕ್ತವತ್ಸಲನಾದ ಆ ಭಗವಂತನು ತನ್ನ ವೈಕುಂಠಲೋಕವಾಸವನ್ನೇ ಅವನಿಗೆ ಅನುಗ್ರಹಿಸುತ್ತಾನೆ. ಯಾವನಾದರೆ ನೀಲಾಚಲದಲ್ಲಿ ದಾರುಮೂರ್ತಿಯಾಗಿ ಆವಿರ್ಭವಿಸಿರುವ ಈ ಮಹಾವಿಷ್ಣುವನ್ನು ಆರಾಧಿಸುವನೋ ಅವನಿಗೆ ತೀರ್ಥಯಾತ್ರೆಗಳಿಂದಾಗಲಿ, ಕೃಚ್ಛ್ರಚಾಂದ್ರಾಯಣಾದಿವ್ರತಗಳಿಂದಾಗಲಿ, ದಾನತಪಸ್ಸುಗಳಿಂದಲೇ ಆಗಲಿ ಆಗಬೇಕಾದುದೇನೂ ಇರುವುದಿಲ್ಲವು. ಸಮಸ್ತ ಇಷ್ಟಾರ್ಥಗಳೂ ಈ ಪ್ರಭುವನ್ನು ಆರಾಧಿಸುವುದರಿಂದಲೇ ಉಂಟಾಗುತ್ತವೆ. ಎಲೈ ದೊರೆಯೆ! ಯಥಾರ್ಥವನ್ನು ಹೇಳುವೆನು; ಕೇಳಿ ತಿಳಿದುಕೊಳ್ಳುವವನಾಗು.

೫೬. ಸಾಗರತೀರದಲ್ಲಿ ಕಂಗೊಳಿಸುತ್ತಿರುವ ನ್ಯಗ್ರೋಧವೃಕ್ಷಮೂಲದ ನೀಲಾಚಲದಲ್ಲಿ ನೆಲಸಿರುವ ದಾರುರೂಪಧರನಾದ ಪರಬ್ರಹ್ಮನನ್ನು ಸಂದರ್ಶಿಸಿದುದಾದರೆ ಮಾನವನು ಈ ಭವಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ನೃಸಿಂಹಪ್ರಭಾವವರ್ಣನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕೋನತ್ರಿಂಶೋಽಧ್ಯಾಯಃ

### ಇಂದ್ರದ್ಯುಮ್ನಕೃತ ಶ್ರೀಪುರುಷೋತ್ತಮಪೂಜಾದಿವರ್ಣನಂ

ಜೈಮಿನಿರುವಾಚ :—

ಇತ್ಯುಕ್ತ್ವಾ ನೃಪಶಾರ್ದೂಲಂ ಲೋಕಸಂಗ್ರಹಣಾಯ ವೈ ।
ಸಿಂಹಾಕೃತಿಂ ಸ ಹೃದಯೇ ಉದ್ವಾಸ್ಯ ಕಮಲಾಸನಃ ॥ ೧ ॥
ಪೂರ್ವಂ ಪ್ರಕಾಶರೂಪಂ ಯದ್ವಿಷ್ಣೋಽಸ್ತು ಪ್ರಕಟೀಕೃತಂ ।
ರಥಾವರೋಹಣೇ ದೃಷ್ಟಾಶ್ಚತಸ್ರೋ ಮೂರ್ತಯಃ ಪುರಾ ॥ ೨ ॥
ತಾ ಏವ ಸಿಂಹಾಸನಗಾಃ ಸರ್ವೇ ತೇ ದದೃಶುಃ ಪುನಃ ।
ದ್ವಿಷಡಕ್ಷರಮಂತ್ರೇಣ ಬಲಭದ್ರಮಪೂಜಯತ್ ॥ ೩ ॥
ಸೂಕ್ತೇನ ಪೌರುಷೇಣೈನಂ ನಾರಾಯಣಮನಾಮಯಂ ।
ದೇವೀಸೂಕ್ತೇನ ಚಕ್ರಂ ಚ ದ್ವಾದಶಾಕ್ಷರಕೇಣ ಚ ।
ಪೂಜಯಿತ್ವಾಽನುಗ್ರಹಾಯ ಪಾರ್ಥಿವಸ್ಯ ನ್ಯವೇದಯತ್ ॥ ೪ ॥

---

## ಕನ್ನಡದ ಅನುವಾದ

### ಭಗವಂತನು ಇಂದ್ರದ್ಯುಮ್ನನಿಗೆ ವರಗಳನ್ನು ಅನುಗ್ರಹಿಸಿದುದು

೧–೩. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ ! ಕಮಲಾಸನನಾದ ಆ ಚತುರ್ಮುಖಬ್ರಹ್ಮನು ರಾಜಶ್ರೇಷ್ಠನಾದ ಇಂದ್ರದ್ಯುಮ್ನನಿಗೆ ಈ ರೀತಿ ಹೇಳಿದ ತರುವಾಯ ಆ ಪುರುಷೋತ್ತಮನ ಸಿಂಹಾಕೃತಿಯನ್ನು ತನ್ನ ಹೃದಯದಲ್ಲಡಗಿಸಿಕೊಂಡನು. ಆಗ ಪೂರ್ವದಲ್ಲಿ ಭಗವಂತನ ಯಾವ ಪ್ರಕಾಶರೂಪವು ಕಂಗೊಳಿಸುತ್ತಿದ್ದಿತೋ ಅದೇ ರೂಪವೇ ಮತ್ತೆ ಪ್ರಕಟವಾಯಿತು. ಹಿಂದೆ ರಥಾವರೋಹಣಸಮಯದಲ್ಲಿ ಶ್ರೀಮಹಾವಿಷ್ಣುವಿನ ಯಾವ ಚತುರ್ಮೂರ್ತಿಗಳಿದ್ದುವೋ ಅವೇ ಸಿಂಹಾಸನದಲ್ಲಿ ಮಂಡಿಸಿದ್ದುದನ್ನು ಅಲ್ಲಿದ್ದ ಜನರೆಲ್ಲರೂ ಕಂಡರು. ಆಗಲಾ ಬ್ರಹ್ಮನು ಬಲಭದ್ರನನ್ನು ದ್ವಾದಶಾಕ್ಷರಮಂತ್ರದಿಂದ ಪೂಜಿಸಿದನು.

೪. ತರುವಾಯ ಪುರುಷಸೂಕ್ತಮಂತ್ರಗಳಿಂದ ಅನಾಮಯನಾದ ನಾರಾಯಣನನ್ನೂ, ದೇವೀಸೂಕ್ತದಿಂದ ಶ್ರೀಸುಭದ್ರಾದೇವಿಯನ್ನೂ, ದ್ವಾದಶಾಕ್ಷರಮಂತ್ರದಿಂದ ಸುದರ್ಶನ ಚಕ್ರವನ್ನೂ ಪೂಜಿಸಿ ಇಂದ್ರದ್ಯುಮ್ನನಿಗೆ ಅನುಗ್ರಹ ಮಾಡಲೋಸುಗ ಸ್ವಾಮಿಗೆ ಇಂತು ಅರಿಕೆಮಾಡಿದನು.

ಬ್ರಹ್ಮೋವಾಚ :—
ಭಗವನ್ ದೇವದೇವೇಶ ಭಕ್ತಾನುಗ್ರಹಕಾರಕ ।
ಇಂದ್ರದ್ಯುಮ್ನಸ್ಯ ಜನ್ಮಾನಿ ತ್ವಯಿ ಭಕ್ತಿಂ ಪ್ರಕುರ್ವತಃ ।
ಸಹಸ್ರಂ ಸಮತೀತಾನಿ ತದಂತೇ ತ್ವಾಮಲೋಕಯತ್ ॥ ೫ ॥
ತ್ವದ್ದರ್ಶನಂ ಹಿ ಭಗವಂಸ್ತ್ವಯಿ ಸಾಯುಜ್ಯಕಾರಣಂ ।
ಯದ್ಯಪ್ಯಯಂ ಭಕ್ತಿಯೋಗೇನೇಚ್ಛತಿ ತ್ವಾಂ ಸಮರ್ಚಿತುಂ ॥ ೬ ॥
ತದಾಜ್ಞಾಪಯ ಯೇನ ತ್ವಾಂ ಭಕ್ತಿಯೋಗೇನ ಭಾವಯೇತ್ ।
ದೇಶಕಾಲವ್ರತಾದ್ಯೈಸ್ತು ತಥಾ ನಾನೋಪಚಾರಕೈಃ ॥ ೭ ॥
ತ್ವನ್ಮುಖಾಂಭೋಜಗಲಿತಮಾಜ್ಞಾಮೃತರಸಂ ನೃಪಃ ।
ಪಿಪಾಸುಸ್ತ್ವಾಂ ಜಗನ್ನಾಥ ಪಶ್ಯತ್ಯೇಷೋಽನಿಮೇಷಕಂ ॥ ೮ ॥
ಜೈಮಿನಿರುವಾಚ :—
ಇತಿ ವಿಜ್ಞಾಪಿತೋ ದೇವಃ ಸಾಕ್ಷಾತ್ಕಮಲಯೋನಿನಾ ।
ದಾರುದೇಹೋಽಪಿ ವಿಹಸನ್ ಪ್ರಾಹ ಗಂಭೀರಯಾ ಗಿರಾ ॥ ೯ ॥

---

೫. ಬ್ರಹ್ಮನು ಹೇಳುತ್ತಾನೆ :—"ಎಲೈ ಷಡ್ಗುಣೈಶ್ವರ್ಯಸಂಪನ್ನನೂ, ಸಮಸ್ತ ದೇವತೆಗಳಿಗೂ ದೇವೋತ್ತಮನೂ, ಭಕ್ತಾನುಗ್ರಹಕಾರಕನೂ ಆದ ಸ್ವಾಮಿಯೆ! ನಿನ್ನಲ್ಲಿ ಭಕ್ತಿಯನ್ನು ಮಾಡುತ್ತಿರುವ ಈ ಇಂದ್ರದ್ಯುಮ್ನ ರಾಜನಿಗೆ ಇದೀಗ ಸಾವಿರ ಜನ್ಮಗಳು ಕಳೆದುಹೋದುವು. ಈಗಲೀತನು ನಿನ್ನನ್ನು ಸಂದರ್ಶಿಸಿರುವನು.

೬. ಭಗವನ್! ನಿನ್ನ ಸಂದರ್ಶನವೆಂಬುದು ಭಕ್ತನಾದವನಿಗೆ ನಿನ್ನ ಸಾಯುಜ್ಯವನ್ನುಂಟುಮಾಡತಕ್ಕುದು. ಆದರೂ ಈತನು ಆ ಸಾಯುಜ್ಯವನ್ನೂ ಬಯಸದೆ ಭಕ್ತಿಯೋಗದಿಂದ ನಿನ್ನನ್ನಾರಾಧಿಸಬಯಸುತ್ತಾನೆ.

೭. ಆದುದರಿಂದ ದೇಶಕಾಲಗಳಿಗನುಗುಣವಾದ ವಿವಿಧೋಪಚಾರಗಳಿಂದ ಈತನು ನಿನ್ನನ್ನು ಭಕ್ತಿಪೂರ್ವಕವಾಗಿ ಆರಾಧಿಸುವುದೆಂತೆಂಬ ವಿಷಯವನ್ನೀತನಿಗೆ ಅಪ್ಪಣೆಕೊಡಿಸುವವನಾಗು.

೮. ಪರಮಾತ್ಮಾ! ಜಗನ್ನಾಥಾ!! ಈ ದೊರೆಯು ನಿನ್ನ ಮುಖಕಮಲದಿಂದ ಹೊರಸೂಸುವ ಅಮೃತರಸವನ್ನೀಂಟಲು ಪಿಪಾಸುವಾಗಿ ಎವೆಯಿಕ್ಕದ ನೆಟ್ಟ ಕಂಗಳಿಂದ ನಿನ್ನನ್ನೇ ನೋಡುತ್ತಿರುವನು.

೯. ಜೈಮಿನಿಯು ಹೇಳುತ್ತಾನೆ :—ಕಮಲಸಂಭವನಾದ ಸಾಕ್ಷಾತ್ ಚತುರ್ಮುಖ ಬ್ರಹ್ಮದೇವನಿಂದ ಈ ರೀತಿ ವಿಜ್ಞಾಪಿತನಾಗಲು ಆ ಪುರುಷೋತ್ತಮನು ದಾರುದೇಹಧರನಾದರೂ ಎಲ್ಲರಿಗೂ ಆಶ್ಚರ್ಯವುಂಟಾಗುವಂತೆ ನಸುನಗುತ್ತಾ ಆ ದೊರೆಯನ್ನು ಕುರಿತು ಗಂಭೀರವಾದ ವಾಣಿಯಿಂದಿಂತೆಂದನು.

ಶ್ರೀಪ್ರತಿಮೋವಾಚ :—

ಇಂದ್ರದ್ಯುಮ್ನ ಪ್ರಸನ್ನಸ್ತೇ ಭಕ್ತ್ಯಾ ನಿಷ್ಕಾಮಕರ್ಮಭಿಃ ।
ತ್ವದನ್ಯೈರ್ನೇದೃಶೀ ಸಂಪನ್ನ ಕೇನಾಪ್ಯುಪವರ್ಜಿತಾ ॥ ೧೦ ॥
ವರಂ ದದಾಮಿ ತೇ ಭೂಪ ಮಯಿ ಭಕ್ತಿಃ ಸ್ಥಿರಾಸ್ತು ತೇ ।
ಉತ್ಸೃಜ್ಯ ವಿತ್ತಕೋಟೀಸ್ತು ಯನ್ಮಮಾಯತನಂ ಕೃತಂ ॥ ೧೧ ॥
ಭಂಗೇಽಪ್ಯೇತಸ್ಯ ರಾಜೇಂದ್ರ ಸ್ಥಾನಂ ನ ತ್ಯಜ್ಯತೇ ಮಯಾ ।
ಕಾಲಾಂತರೇ ಪಿ ಯೋಽಪ್ಯನ್ಯಃ ಪ್ರಾಸಾದಂ ಕಾರಯಿಷ್ಯತಿ ॥ ೧೨ ॥
ತವೈವ ಕೀರ್ತಿಃ ಸಾ ನೂನಂ ತ್ವತ್ಪ್ರೀತ್ಯಾ ತತ್ರ ಮೇ ಸ್ಥಿತಿಃ ।
ಸತ್ಯಂ ಸತ್ಯಂ ಪುನಃ ಸತ್ಯಂ ಸತ್ಯಮೇವ ಬ್ರವೀಮಿ ತೇ ॥ ೧೩ ॥
ಪ್ರಾಸಾದಭಂಗೇ ತತ್ಸ್ಥಾನಂ ನ ತ್ಯಕ್ಷ್ಯಾಮಿ ಕದಾಚನ ।
ಅನೇನ ದಾರುವಪುಷಾ ಸ್ಥಾಸ್ಯಾಮ್ಯತ್ರ ಪರಾರ್ಧಕಂ ॥ ೧೪ ॥
ದ್ವಿತೀಯಂ ಪದ್ಮಯೋನೇಸ್ತು ಯಾವತ್ಪರಿಸಮಾಪ್ಯತೇ ।
ಮನೋಃ ಸ್ವಾಯಂಭುವಸ್ಯಾಸ್ಯ ದ್ವಿತೀಯೇ ಚ ಚತುರ್ಯುಗೇ ॥ ೧೫ ॥

---

೧೦. ಶ್ರೀಪ್ರತಿಮಾರೂಪಿಯಾದ ಭಗವಂತನು ಹೇಳುತ್ತಾನೆ:—"ಅಯ್ಯಾ ಭೂಪಾಲನಾದ ಇಂದ್ರದ್ಯುಮ್ನನೇ! ನಿನ್ನ ಭಕ್ತಿಯಿಂದಲೂ, ನೀನೆಸಗಿದ ನಿಷ್ಕಾಮಕರ್ಮದಿಂದಲೂ ನಾನು ನಿನ್ನ ವಿಷಯದಲ್ಲಿ ಪ್ರಸನ್ನನಾಗಿರುವೆನು. ನಿನ್ನನ್ನುಳಿದು ಬೇರಾವಭಕ್ತನೂ ಸಹ ನನ್ನ ಆರಾಧನೆಗಾಗಿ ಇಂತಹ ಸಂಪತ್ತನ್ನು ವಿನಿಯೋಗಮಾಡಿರುವುದಿಲ್ಲವು.

೧೧. ಎಲೈ ದೊರೆಯೇ! ನೀನು ನಿನ್ನ ಧನವೆಲ್ಲವನ್ನೂ ವ್ಯಯಗೊಳಿಸಿ ನನ್ನ ಈ ದೇವಾಲಯವನ್ನು ರಚಿಸಿರುವೆಯಾದುದರಿಂದ ಈಗ ನಾನು ನಿನಗೆ ವರವನ್ನನುಗ್ರಹಿಸುವೆನು. ನನ್ನಲ್ಲಿ ನಿನಗೆ ಭಕ್ತಿಯು ಸ್ಥಿರವಾಗಿರಲಿ.

೧೨–೧೩. ರಾಜೇಂದ್ರ! ಈ ದೇವಾಲಯವು ಭಂಗವಾದರೂ ನಾನು ಈ ಸ್ಥಾನವನ್ನು ತೊರೆಯುವುದಿಲ್ಲವು. ಕಾಲಾಂತರದಲ್ಲಿ ಯಾವನಾದರೂ ನನ್ನ ಭಕ್ತನಾದವನು ಮತ್ತೆ ಈ ಆಯತನವನ್ನು ಕಟ್ಟಿಸಿಯಾನು. ಹಾಗೆ ಈ ದೇವಾಲಯವನ್ನು ಜೀರ್ಣೋದ್ಧಾರಮಾಡಿದರೂ ಆ ಸತ್ಕಾರ್ಯದ ಕೀರ್ತಿಯು ನಿನ್ನದೇ ಆಗಿರುತ್ತದೆ. ನಾನು ನಿನ್ನ ಮೇಲಣ ಪ್ರೀತಿಗಾಗಿಯೇ ಈ ಸ್ಥಾನದಲ್ಲಿ ಸ್ಥಿರವಾಗಿರುತ್ತೇನೆ. ಇದು ಮೂರು ಮೂರು ಬಾರಿಗೂ ಸತ್ಯವಾದುದು.

೧೪–೧೬. ಅಯ್ಯಾ ಇಂದ್ರದ್ಯುಮ್ನನೇ! ಈ ಪ್ರಾಸಾದವು ಭಂಗಗೊಂಡರೂ ನಾನೆಂದಿಗೂ ಈ ಸ್ಥಾನವನ್ನು ತೊರೆಯುವುದಿಲ್ಲವು. ನಾನಿಲ್ಲಿಯೇ ಚತುರ್ಮುಖನ ದ್ವಿತೀಯಪರಾರ್ಧಕಾಲವು ಕಳೆಯುವವರೆಗೂ ನೆಲಸಿರುತ್ತೇನೆ. ಈಗ ಸ್ವಾಯಂಭುವ ಮನುವಿನ ಅಂತರದ ಎರಡನೆಯ ಚತುರ್ಯುಗದಲ್ಲಿ ಮೊದಲನೆಯ

**ಕೃತಸ್ಯ ಪ್ರಥಮೋ ಜ್ಯೇಷ್ಠೋ ದಶೇತಿಕ್ರತುಸಂಸ್ಥಿತಿಃ ।**
**ಜ್ಯೇಷ್ಠ್ಯಾಮಹಂ ಚಾವತೀರ್ಣಃ ತತ್ಪುಣ್ಯಜನ್ಮವಾಸರಂ ॥ ೧೬ ॥**
**ತಸ್ಯಾಂ ಮೇ ಸ್ನಪನಂ ಕುರ್ಯಾನ್ಮಹಾಸ್ನಾನವಿಧಾನತಃ ।**
**ಪ್ರತ್ಯರ್ಚಾಯಾಂ ಮಹಾರಾಜ ಸಾಧಿವಾಸಂ ಸಮೃದ್ಧಿಮತ್ ॥ ೧೭ ॥**
**ಪಾಪಂ ವಿನಾಶಯಿಷ್ಯಾಮಿ ಕೋಟಿಜನ್ಮಭಿರಾರ್ಜಿತಂ ।**
**ಸರ್ವತೀರ್ಥಕ್ರತುಫಲಂ ಸರ್ವದಾನಫಲಂ ತಥಾ ॥ ೧೮ ॥**
**ಪಶ್ಯತಾಂ ಚಾಪಿ ರಾಜೇಂದ್ರ ಫಲಂ ತಾವತ್ಪ್ರಪದ್ಯತೇ ।**
**ನ್ಯಗ್ರೋಧಾದುತ್ತರೇ ಕೂಪಃ ಸರ್ವತೀರ್ಥಮಯೋಽಸ್ತಿ ಹಿ ॥ ೧೯ ॥**
**ಸ್ನಾನಾಯ ಪೂರ್ವಂ ನಿರ್ಮಾಯ ಕಿಂಚಿದಾಚ್ಛಾದಿತಂ ಭುವಾ ।**
**ಅವತೀರ್ಣಸ್ತ್ವಹಂ ಪಶ್ಚಾತ್ತಂ ವಿವಿಚ್ಯ ಪ್ರಕಾಶಯ ॥ ೨೦ ॥**
**ಸಂಸ್ಕಾರ್ಯಃ ಸ ಚತುರ್ದಶ್ಯಾಂ ಜಲಂ ದತ್ವಾ ವಿಧಾನತಃ ।**
**ರಕ್ಷಕಕ್ಷೇತ್ರಪಾಲಾಯ ದಿಶಾಂ ಪಾಲೇಭ್ಯ ಏವ ಚ ॥ ೨೧ ॥**

---

ಕೃತಯುಗದ ಜ್ಯೇಷ್ಠಾದಶೆ (ವಸಂತಋತು)ಯೆಂಬ ಕ್ರತುಸಂಸ್ಥಿತಿಯಾಗಿರುವುದು. ಈ ಋತುವಿನ ಪೂರ್ಣಿಮೆಯ ದಿನ ನಾನು ಅವತರಿಸಿರುವೆನಾದುದರಿಂದ ಆ ದಿನವೇ ನನ್ನ ಪುಣ್ಯಜನ್ಮದಿನವು.

೧೭. ಎಲೈ ಮಹಾರಾಜನೇ! ಆ ದಿನ ಮಹಾಸ್ನಾನವಿಧಾನದಿಂದ ನನಗೆ ಸ್ನಾನವನ್ನು ಮಾಡಿಸತಕ್ಕುದು. ಪ್ರತಿಯೊಂದು ಅರ್ಚನೆಯ ಸಮಯದಲ್ಲಿಯೂ ಸಂಪದ್ವಿಶಿಷ್ಟವಾಗಿಯೂ, ವಸ್ತ್ರಸಹಿತವಾಗಿಯೂ ಈ ಮಹಾಭಿಷೇಕವನ್ನು ಮಾಡತಕ್ಕುದು.

೧೮. ಇಂತು ನನ್ನ ಪುಣ್ಯಜನ್ಮದಿನದಲ್ಲಿ ನನ್ನನ್ನಾರಾಧಿಸಿದುದಾದರೆ ನಾನು ಕೋಟಿಜನ್ಮಗಳಲ್ಲಿ ಆರ್ಜಿಸಿದ ಪಾಪಗಳನ್ನೂ ಹೋಗಲಾಡಿಸುವೆನಲ್ಲದೆ, ಸಮಸ್ತ ತೀರ್ಥಗಳ, ಸಮಸ್ತ ಯಾಗಗಳ, ಸಮಸ್ತ ದಾನಗಳ ಆಚರಣೆಯಿಂದುಂಟಾಗುವ ಫಲಗಳನ್ನೂ ಅನುಗ್ರಹಿಸುವೆನು.

೧೯. ರಾಜೇಂದ್ರ! ಆ ಸಮಯದಲ್ಲಿ ನನ್ನನ್ನು ಸಂದರ್ಶಿಸಿದವರಿಗೂ ಅಷ್ಟೇ ಫಲವು ದೊರಕುತ್ತದೆ. ನ್ಯಗ್ರೋಧಕಲ್ಪವೃಕ್ಷದ ಉತ್ತರ ದಿಕ್ಕಿನಲ್ಲಿ ಸರ್ವತೀರ್ಥಮಯವಾದ ಕೂಪವಿರುವುದಷ್ಟೆ!

೨೦. ಎಲೈ ದೊರೆಯೇ! ಪೂರ್ವದಲ್ಲಿ ಆ ಕೂಪವು ನನ್ನ ಅಭಿಷೇಚನಕ್ಕಾಗಿಯೇ ನನ್ನಿಂದ ನಿರ್ಮಿತವಾಗಿ ಈಗ ಸ್ವಲ್ಪ ಭೂಮಿಯಿಂದ ಮುಚ್ಚಿ ಹೋಗಿರುವುದು. ಆ ತರುವಾಯ ನಾನು ಅವತರಿಸಿದೆನು. ಆದುದರಿಂದ ನೀನು ಆ ಕೂಪವನ್ನು ಹುಡುಕಿ ಪ್ರಕಾಶಗೊಳಿಸು.

೨೧.–೨೨. ಸರ್ವತೀರ್ಥಮಯವಾದ ಆ ಕೂಪವನ್ನು ಚತುರ್ದಶಿಯ

ಕಂಬುಕಾಹಾಲಮುರಜಧ್ವನಿಷು ಸುಸ್ವರೇಷು ಚ ।
ದ್ವಿಜಾತಯಃ ಸ್ವರ್ಣಕುಂಭೈರುದ್ಧರೇಯುಸ್ತತೋ ಜಲಂ ॥ ೨೨ ॥
ಜ್ಯೇಷ್ಠ್ಯಾಂ ಪ್ರಾತಸ್ತನೇ ಕಾಲೇ ಬ್ರಹ್ಮಣಾ ಸಹಿತಂ ಚ ಮಾಂ ।
ರಾಮಂ ಸುಭದ್ರಾಂ ಸಂಸ್ನಾಪ್ಯ ಮಮ ಲೋಕಮವಾಪ್ನುಯಾತ್ ॥
ಸ್ನಾಪ್ಯಮಾನಂ ತು ಯಃ ಪಶ್ಯೇನ್ಮಾಂ ತತೋ ನೃಪಸತ್ತಮ ।
ದೇಹಬಂಧಂ ಚ ನಾಪ್ನೋತಿ ಸ ಪುನರ್ನ ತು ಪೂರುಷಃ ॥ ೨೪ ॥
ಕಾರಯಿತ್ವಾ ದೃಢಂ ಮಂಚಮೈಶಾನ್ಯಾಂ ದಿಶಿ ಮಂಡಿತಂ ।
ವಿತಾನಶೋಭಾರಚಿತಂ ಚಂದನಾಂಭಃಸಮುಕ್ಷಿತಂ ॥ ೨೫ ॥
ತತ್ರ ಮಾಂ ರಾಮಭದ್ರಾಭ್ಯಾಂ ಸ್ನಾಪಯಿತ್ವಾ ಪುನರ್ನಯೇತ್ ॥ ೨೬ ॥
ದಕ್ಷಿಣಾಭಿಮುಖಂ ಯಾಂತಂ ಯೋ ಮಾಂ ಪಶ್ಯತಿ ಭಕ್ತಿತಃ ।
ತತ್ತ್ರಧ್ರುವಮವಾಪ್ನೋತಿ ಮನಸಾ ಯದ್ಯದಿಚ್ಛತಿ ॥ ೨೭ ॥
ತತಃ ಪಂಚದಶಾಹಾನಿ ಸ್ಥಾಪಯಿತ್ವಾ ತು ಮಾಂ ನೃಪ ।
ವಿರೂಪಮಭಿರೂಪಂ ವಾ ನ ಪಶ್ಯೇತ್ತು ಕದಾಚನ ॥ ೨೮ ॥

---

ದಿನವೇ ಶಾಸ್ತ್ರೋಕ್ತವಾಗಿ ರಕ್ಷಕರಾದ ಕ್ಷೇತ್ರಪಾಲಕನಿಗೂ, ದಿಕ್ಪಾಲಕರಿಗೂ ಬಲಿಯನ್ನಿತ್ತು, ಶಂಖ, ಕಹಳೆ, ಮುರಜವೇ ಮೊದಲಾದ ವಾದ್ಯಗಳು ಸುಸ್ವರವಾಗಿ ಧ್ವನಿಗೈಯುತ್ತಿರಲು ಬ್ರಾಹ್ಮಣರು ಚಿನ್ನದ ಕೊಡಗಳಲ್ಲಿ ಆ ಕೂಪದ ತೀರ್ಥವನ್ನು ತರತಕ್ಕುದು.

೨೩–೨೪. ಮಾರನೆಯ ಪೂರ್ಣಿಮೆಯ ಪ್ರಾತಃಕಾಲದಲ್ಲಿ ಬ್ರಹ್ಮ ಸುಭದ್ರಾ ಬಲರಾಮ ಸಹಿತನಾದ ನನಗೆ ಅಭಿಷೇಕಮಾಡಿದುದಾದರೆ ನನ್ನ ಲೋಕವನ್ನು ಸೇರುತ್ತಾರೆ. ಎಲೈ ನೃಪಶ್ರೇಷ್ಠನೇ! ಆ ಸಮಯದಲ್ಲಿ ನನ್ನ ಮಹಾಭಿಷೇಕವನ್ನು ನೋಡುವ ಮಾನವನೂ ಸಹ ಪುನರ್ಜನ್ಮವನ್ನು ಪಡೆಯುವುದಿಲ್ಲವು.

೨೫–೨೬. ಇದಾದ ಬಳಿಕ ಆ ಕೂಪದ ಈಶಾನ್ಯದಿಶೆಯಲ್ಲಿ ಮೇಲ್ಚಾವಣಿಯಿಂದೊಪ್ಪಿ ಸುಗಂಧೋದಕದಿಂದ ಚಿಮುಕಿಸಲ್ಪಟ್ಟ ಮಂಚವನ್ನು ರಚಿಸಿ ಅದರ ಮೇಲೆ ನನ್ನನ್ನು ಮಂಡಿತನನ್ನಾಗಿಸತಕ್ಕುದು. ಅಲ್ಲಿ ಬಲರಾಮ ಸುಭದ್ರಾದೇವಿಯರೊಡನಿರುವ ನನ್ನನ್ನು ಪುನಃ ಸ್ನಾನಮಾಡಿಸಿ ಕರೆತರಬೇಕು.

೨೭. ಆ ಸಮಯದಲ್ಲಿ ದಕ್ಷಿಣಾಭಿಮುಖವಾಗಿ ಉತ್ಸವ ಬರುವ ನನ್ನನ್ನು ಭಕ್ತಿಪೂರ್ವಕವಾಗಿ ಸಂದರ್ಶಿಸುವ ಮಾನವನು ಮನಸ್ಸಿನಲ್ಲಿ ಏನೇನನ್ನು ಬಯಸುವನೊ ಅದೆಲ್ಲವನ್ನೂ ಪಡೆಯುತ್ತಾನೆ.

೨೮. ಎಲೈ ರಾಜನೇ! ಆ ಬಳಿಕ ನನ್ನನ್ನು ಪ್ರಾಸಾದದಲ್ಲಿ ಸ್ಥಾಪಿಸಿ ಅಲ್ಲಿಂದ ಹದಿನೈದುದಿನಗಳವರೆಗೂ ನಾನು ವಿರೂಪನೋ, ಸುರೂಪನೋ ಹೇಗೇ ಇದ್ದರೂ ನನ್ನನ್ನು ಯಾವಾಗಲೂ ಸಂದರ್ಶಿಸಕೂಡದು.

**ಜ್ಯೇಷ್ಠಸ್ನಾನಮಿದಂ ಕೃತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೨೯ ॥**
**ಗುಂಡಿಚಾಖ್ಯಾಂ ಮಹಾಯಾತ್ರಾಂ ಪ್ರಕುರ್ವೀಥಾಃ ಕ್ಷಿತೀಶ್ವರ ।**
**ಯಸ್ಯಾಃ ಸಂಕೀರ್ತನಾದೇವ ನರಃ ಪಾಪಾದ್ವಿಮುಚ್ಯತೇ ॥ ೩೦ ॥**
**ಮಾಘಮಾಸಸ್ಯ ಪಂಚಮ್ಯಾಮಷ್ಟಮ್ಯಾಂ ಚೈತ್ರಶುಕ್ಲಕೇ ।**
**ಏತೇ ಕಾಲಾ ಪ್ರಶಸ್ತಾ ಹಿ ಗುಂಡಿಚಾಖ್ಯಮಹೋತ್ಸವೇ ॥ ೩೧ ॥**
**ವಿಶೇಷಾನ್ಮೋಕ್ಷದಾಷಾಢದ್ವಿತೀಯಾ ಪುಷ್ಯಸಂಯುತಾ ।**
**ಋಕ್ಷಾಭಾವೇ ತಿಥೌ ಕಾರ್ಯಾ ಸದಾ ಸಂಪ್ರೀತಯೇ ಮಮ ॥ ೩೨ ॥**
**ಆಷಾಢಸ್ಯ ಸಿತೇ ಪಕ್ಷೇ ದ್ವಿತೀಯಾ ಪುಷ್ಯಸಂಯುತಾ ।**
**ತಸ್ಯಾಂ ರಥೇ ಸಮಾರೋಪ್ಯ ರಾಮಂ ಮಾಂ ಭದ್ರಯಾ ಸಹ ॥ ೩೩ ॥**
**ಮಹೋತ್ಸವಪ್ರವೃತ್ಯರ್ಥಂ ಪ್ರೀಣಯಿತ್ವಾ ದ್ವಿಜಾನ್ ಬಹೂನ್ ।**
**ಗುಂಡಿಚಾಮಂಡಪಂ ನಾಮ ಯತ್ರಾಹಮಜನಂ ಪುರಾ ॥ ೩೪ ॥**
**ಅಶ್ವಮೇಧಸಹಸ್ರಸ್ಯ ಮಹಾವೇದೀ ತದಾಭವತ್ ।**
**ತಸ್ಯಾಃ ಪುಣ್ಯತಮಂ ಸ್ಥಾನಂ ಪೃಥಿವ್ಯಾಂ ನೇಹ ವಿದ್ಯತೇ ॥ ೩೫ ॥**

---

೨೯. ಈ ಪ್ರಕಾರವಾಗಿ ಪೂರ್ಣಿಮಾಸ್ನಾನವನ್ನು ನಡೆಸಿದರೆ ಕರ್ತನಾದವನು ಸಮಸ್ತಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

೩೦. ಇದಾದಬಳಿಕ, ಯಾವುದನ್ನು ಹೇಳಿದಮಾತ್ರದಿಂದಲೆ ಮಾನವನು ಪಾಪವಿಮುಕ್ತನಾಗುವನೋ ಅಂತಹ ಗುಂಡಿಚಾಮಹಾಯಾತ್ರೆಯೆಂಬ ಉತ್ಸವವನ್ನು ನಡೆಸಬೇಕು.

೩೧. ಮಾಘ ಶುಕ್ಲ ಪಂಚಮಿ, ಚೈತ್ರ ಶುಕ್ಲ ಅಷ್ಟಮಿ ಈ ದಿನಗಳು ಗುಂಡಿಚಾಮಹೋತ್ಸವಕ್ಕೆ ಪ್ರಶಸ್ತವಾದ ಕಾಲಗಳು.

೩೨. ಪುಷ್ಯ ನಕ್ಷತ್ರಯುಕ್ತವಾದ ಆಷಾಢ ಶುಕ್ಲ ದ್ವಿತೀಯೆಯು ಮಹೋತ್ಸವಕ್ಕೆ ವಿಶೇಷವಾದುದು. ಈ ಮಹೋತ್ಸವವನ್ನು ನಕ್ಷತ್ರಯೋಗ ವಿಲ್ಲದಿದ್ದರೂ ಆ ತಿಥಿಯಲ್ಲಿ ಮಾಡಬೇಕು. ಇದು ನನಗೆ ಅತ್ಯಂತ ಪ್ರಿಯಕರವಾದುದು.

೩೩–೩೪. ಆಷಾಢ ಶುಕ್ಲ ದ್ವಿತೀಯೆಯ ದಿನ ಪುಷ್ಯ ನಕ್ಷತ್ರಯೋಗದಲ್ಲಿ ನನ್ನನ್ನೂ, ಬಲಭದ್ರ ಭದ್ರಾದೇವಿಯರನ್ನೂ ರಥಾರೋಹಣ ಮಾಡಿಸಿ ಆ ಮಹೋತ್ಸವಕ್ಕಾಗಿ ಅನೇಕ ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿಗೊಳಿಸಬೇಕು. ನಾನು ಪೂರ್ವದಲ್ಲಿ ಆವಿರ್ಭವಿಸಿದೆಡೆಯೇ ಗುಂಡಿಚಾಮಂಡಪವೆಂದು ಪ್ರಸಿದ್ಧವಾಗಿರುವುದು.

೩೫. ಅಂದು ಆ ಮಂಡಪವು ಅಶ್ವಮೇಧಸಹಸ್ರದ ಮಹಾವೇದಿಯಾಗಿದ್ದಿತು. ಅದಕ್ಕೆ ಸಮಾನವಾದ ಪ್ರದೇಶವು ಭೂಮಂಡಲದಲ್ಲಿಯೆ ಇರುವುದಿಲ್ಲವು.

ಯತ್ರಾಜುಹೋಃ ಪಂಚಶತವರ್ಷಾಣಿ ಪ್ರೀತಯೇ ಮಮ ।
ಮಮ ಪ್ರೀತಿಕರಂ ಸ್ಥಾನಂ ತಸ್ಮಾನ್ನಾನ್ಯದ್ಧರಾಗತಂ ॥ ೩೬ ॥
ಯಥೇಯಂ ನೀಲಶಿಖರೀ ಪ್ರಾಸಾದೇನ ತವಾಧುನಾ ।
ಚತುರ್ಮುಖಾನುರೋಧೇನ ಮಹಾಪ್ರೀತಿಕರೀ ಮಮ ॥ ೩೭ ॥
ತಥಾ ನೃಸಿಂಹಕ್ಷೇತ್ರೇ ವೈ ಮಹಾವೇದೀ ತವ ಕ್ರತೋಃ ।
ಮಮೋತ್ಪತ್ತೇಶ್ಚ ನಿಲಯಂ ಪ್ರೀತಿಕೃನ್ಮಮ ಶಾಶ್ವತಂ ॥ ೩೮ ॥
ಬಹುಕಾಲಂ ಸ್ಥಿತಶ್ಚಾಹಂ ತಸ್ಯಾಂ ಮೇ ಪ್ರೀತಿರುತ್ತಮಾ ।
ಆತ್ಮಾ ಮೇ ಪದ್ಮಭೂರೇಷ ಪ್ರಾಸಾದೇ ಸ್ಥಾಪಿತೋಽಮುನಾ ॥ ೩೯ ॥
ಅಸ್ಯಾನುರೋಧಾತ್ತ್ವದ್ಭಕ್ತ್ಯಾ ಹ್ಯವತಿಷ್ಠೇಽತ್ರ ನಿತ್ಯದಾ ।
ದಿನಾನಿ ನವ ಯಾಸ್ಯಾಮಿ ತಥಾ ತಸ್ಮಾದಿಹಾಗತಃ ॥ ೪೦ ॥
ತತ್ರಾಸ್ತಿ ತೇ ಮಹಾರಾಜ ಸರ್ವತೀರ್ಥಮಯಂ ಸರಃ ।
ತತ್ತೀರೇ ಸಪ್ತ ದಿವಸಾನ್ ಸ್ಥಾಸ್ಯಾಮ್ಯನುಜಿಘೃಕ್ಷಯಾ ॥ ೪೧ ॥

---

೩೬. ಎಲೈ ಮಹಾರಾಜನೇ! ನೀನು ಆ ಪ್ರದೇಶದಲ್ಲಿ ನನ್ನನ್ನು ಸಂತೋಷಗೊಳಿಸುವುದಕ್ಕಾಗಿ ಒಂದೇ ಸಮನಾಗಿ ಐದುನೂರು ವರ್ಷಗಳ ಕಾಲ ಹೋಮ ಕರ್ಮವನ್ನಾಚರಿಸಿರುವೆ. ಆದುದರಿಂದ ಅದರಂತೆ ನನಗೆ ಪ್ರೀತಕರವಾದ ಸ್ಥಾನವು ಈ ಭೂಮಂಡಲದಲ್ಲಿಯೇ ಇರುವುದಿಲ್ಲವು.

೩೭-೩೮. ಈ ನೀಲಾದ್ರಿಯ ಶಿಖರದಲ್ಲಿ ನೀನು ಕಟ್ಟಿಸಿದ ಪ್ರಾಸಾದವೆಂತು ಚತುರ್ಮುಖನ ಸಲುವಾಗಿ ನನಗೆ ಮಹಾಪ್ರೀತಿಕರವಾಗಿರುವುದೋ, ಅಂತೆಯೇ ಇಲ್ಲಿಯ ಶ್ರೀನೃಸಿಂಹಕ್ಷೇತ್ರದಲ್ಲಿ ಶೋಭಿಸುತ್ತಿರುವ ನಿನ್ನ ಅಶ್ವಮೇಧಯಾಗದ ಮಹಾವೇದಿಕೆಯೂ ನನಗೆ ಪ್ರಿಯಂಕರವಾಗಿರುವುದು. ನನ್ನ ಉತ್ಪತ್ತಿಭವನವಾದ ಈ ಮಹಾವೇದಿಕೆಯು ಶಾಶ್ವತವಾಗಿದ್ದು ನನಗೆ ಪ್ರಿಯಕರವಾಗಿರುತ್ತದೆ.

೩೯. ಅರಸಾ! ನಾನು ಈ ವೇದಿಕೆಯ ಮೇಲೆ ಬಹಳಕಾಲವಿದ್ದೆನಾಗಿ ಅದು ನನಗೆ ಬಹಳ ಪ್ರೀತಿಪಾತ್ರವಾಗಿರುವುದು. ಪದ್ಮೋದ್ಭವನಾದ ಈ ಬ್ರಹ್ಮದೇವನು ನನ್ನ ಆತ್ಮವೇ ಆಗಿರುವನು. ಈತನು ನನ್ನನ್ನು ಈ ಪ್ರಾಸಾದದಲ್ಲಿ ಸ್ಥಾಪಿಸಿರುತ್ತಾನೆ.

೪೦. ಈತನ ಮೇಲೆ ನನಗಿರುವ ಅಭಿಮಾನದಿಂದಲೂ, ನಿನಗೆ ನನ್ನಲ್ಲಿರುವ ಭಕ್ತಿಯಿಂದಲೂ ನಾನು ಯಾವಾಗಲೂ ಈ ಪ್ರಾಸಾದದಲ್ಲಿ ವಾಸಿಸಿರುತ್ತೇನೆ. ಆದರೆ ವರ್ಷದಲ್ಲಿ ಒಂಬತ್ತುದಿನಗಳು ಮಾತ್ರ ಆ ಮಹಾವೇದಿಕೆಯಲ್ಲಿ ನೆಲಸಿದ್ದು ತರುವಾಯ ಇಲ್ಲಿಗೆ ಹಿಂತಿರುಗಿ ಬರುತ್ತೇನೆ.

೪೧. ಮಹಾರಾಜ! ಆ ಪ್ರದೇಶದಲ್ಲಿಯೇ ನಿನ್ನ ಹೆಸರಿನಿಂದ ಪ್ರಸಿದ್ಧವಾಗಿರುವ (ಇಂದ್ರದ್ಯುಮ್ನ)ಸರೋವರವಿರುವುದಷ್ಟೆ. ವರ್ಷದಲ್ಲಿ ಏಳು ದಿನಗಳು

**ತತ್ರ ಸ್ಥಿತಂ ಮಾಂ ಪಶ್ಯಂತೋ ಯಾಂತಿ ಮರ್ತ್ಯಾ ಮಮಾಲಯಂ ।**
**ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ಭುವನತ್ರಯೇ ॥೪೨॥**
**ತಾನಿ ಸರ್ವಾಣಿ ಸರಸಿ ಮತ್ಸಾನ್ನಿಧ್ಯಾದ್ವ್ರಜಂತಿ ತೇ ।**
**ತತ್ರ ಸ್ನಾತ್ವಾ ಚ ವಿಧಿವದ್ದೃಷ್ಟ್ವಾ ಮಾಂ ಭಕ್ತಿಭಾವತಃ ॥ ೪೩ ॥**
**ಜನನೀಜಠರೇ ಕ್ಲೇಶಂ ಪುನರ್ನಾನುಭವಂತಿ ಹಿ ।**
**ನವಮೇಽಹ್ನಿ ಸಮಾಯಾಂತಂ ದಕ್ಷಿಣಾಶಾಮುಖಂ ತದಾ ॥ ೪೪ ॥**
**ಯೇ ಪಶ್ಯಂತಿ ಪ್ರತಿಪದಮಶ್ವಮೇಧಕ್ರತೋಃ ಫಲಂ ।**
**ಪ್ರಾಪ್ಯ ಭೋಗಾನಿಂದ್ರಸಮಾನ್ ಭುಕ್ತ್ವಾಂತೇ ಮಾಂ ವಿಶಂತಿ ತೇ ॥**
**ಮಮೋತ್ಥಾನಂ ಮಮ ಸ್ವಾಪಂ ಮತ್ಪಾರ್ಶ್ವಪರಿವರ್ತನಂ ।**
**ಮಾರ್ಗಪ್ರಾವರಣಂ ಚೈವ ಪುಷ್ಯಸ್ನಾನಮಹೋತ್ಸವಂ ॥ ೪೬ ॥**
**ಫಾಲ್ಗುನ್ಯಾಂ ಕ್ರೀಡನಂ ಕುರ್ಯಾದ್ದೋಲಾಯಾಂ ಮಮ ಭೂಮಿಪ ।**
**ದೋಲಾಯಾಂ ಯೇಽಪಿ ಪಶ್ಯಂತಿ ದಕ್ಷಿಣಾಮುಖಪೂಜಿತಂ ॥ ೪೭ ॥**

---

ಮಾತ್ರ, ನಿನ್ನ ಮೇಲೆ ನನಗಿರುವ ಅನುಕಂಪೆಯಿಂದ ಆ ಸರಸ್ಸಿನ ತೀರದಲ್ಲಿ ರುತ್ತೇನೆ.

೪೨–೪೫. ಅಲ್ಲಿ ನೆಲಸಿರುವ ಸಮಯದಲ್ಲಿ ನನ್ನನ್ನು ಸಂದರ್ಶಿಸುವ ಮಾನವರು ನನ್ನ ಲೋಕವನ್ನೈದುವರು. ಎಲೈ ಭೂಪನೇ! ಅಲ್ಲಿ ನನ್ನ ಸಾನ್ನಿಧ್ಯವಿರುತ್ತದೆಯಾಗಿ ಈ ಭೂಮಂಡಲದಲ್ಲಿರುವ ಮೂರುವರೆಕೋಟಿ ತೀರ್ಥಗಳೂ ಆ ಸರಸ್ಸಿನಲ್ಲಿ ಸೇರಿ ನನ್ನನ್ನು ಸೇವಿಸುತ್ತಿರುತ್ತವೆ. ಆದುದರಿಂದ ಅಲ್ಲಿ ವಿಧ್ಯುಕ್ತವಾಗಿ ಸ್ನಾನಮಾಡಿ, ಭಕ್ತಿಭಾವದಿಂದ ನನ್ನನ್ನು ಸಂದರ್ಶಿಸಿದುದಾದರೆ ಮಾನವರು ಪುನಃ ತಾಯಗರ್ಭದಲ್ಲಿ ವಾಸಮಾಡುವ ದುಃಖವನ್ನು ಪಡೆಯುವುದಿಲ್ಲ. ಇದಾದ ಬಳಿಕ ಒಂಬತ್ತನೆಯದಿನ ಆ ಇಂದ್ರದ್ಯುಮ್ನಸರಸ್ತೀರದಿಂದ ದಕ್ಷಿಣದಿಙ್ಮುಖನಾಗಿ ಪ್ರಾಸಾದಕ್ಕೆ ಹಿಂತಿರುಗಿ ಉತ್ಸವ ಬರುವ ನನ್ನನ್ನು ನೋಡುವ ಮಾನವರು ಒಂದೊಂದು ಹೆಜ್ಜೆಗೂ ಅಶ್ವಮೇಧಫಲವನ್ನು ಪಡೆಯುವರಲ್ಲದೆ, ಇಂದ್ರಭೋಗೋಪಮವಾದ ಅಮಿತಭೋಗಗಳನ್ನು ಪಡೆದು ಅವುಗಳೆಲ್ಲವನ್ನೂ ಭೋಗಿಸಿದ ಬಳಿಕ ಮರಣಾನಂತರದಲ್ಲಿ ನನ್ನಲ್ಲಿ ಐಕ್ಯವಾಗುತ್ತಾರೆ.

೪೬. ಎಲೈ ದೊರೆಯೇ! ನನ್ನ ಉತ್ಥಾನ, ಶಯನ, ನನ್ನ ಪಾರ್ಶ್ವಪರಿವರ್ತನ, ಮಾರ್ಗಪ್ರಾವವರಣ ಮೊದಲಾದ ಉತ್ಸವಗಳನ್ನೂ, ಪುಷ್ಯಸ್ನಾನ ಮಹೋತ್ಸವವನ್ನೂ ಮಾಡಬೇಕು.

೪೭–೪೮. ಫಾಲ್ಗುನಮಾಸದಲ್ಲಿ ನನಗೆ ಡೋಲೋತ್ಸವವನ್ನು ಮಾಡತಕ್ಕುದು. ಯಾರಾದರೆ ಆಂದೋಲಿಕೆಯಲ್ಲಿ ದಕ್ಷಿಣದಿಕ್ಕಿಗೆ ತಿರುಗಿರುವ

ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯಂತೇ ನಾತ್ರ ಸಂಶಯಃ ॥ ೪೮ ॥
ಅನಯೋರ್ಮಾಂ ಸಮಭ್ಯರ್ಚ್ಯ ದೃಷ್ಟ್ವಾ ಮಾಂ ಪ್ರಣಿಪತ್ಯ ಚ ।
ಪ್ರತ್ಯೇಕಮಷ್ಟಸಾಹಸ್ರಂ ವಾಜಿಮೇಧಫಲಂ ಲಭೇತ್ ॥ ೪೯ ॥
ಚೈತ್ರೇ ಸಿತತ್ರಯೋದಶ್ಯಾಂ ಕುರ್ಯಾತ್ಕರ್ಮಪ್ರಪೂರಣಂ ।
ಚೈತ್ರೇ ಮಾಸಿ ಚತುರ್ದಶ್ಯಾಂ ದಮನೈರ್ಮೇ ಪ್ರಪೂಜನಂ ।
ಶುಕ್ಲಪಕ್ಷೇ ತು ಯೇ ಲೋಕಾಃ ಸರ್ವಪಾಪಕ್ಷಯೋ ಭವೇತ್ ॥ ೫೦ ॥
ವೈಶಾಖಸ್ಯ ಸಿತೇ ಪಕ್ಷೇ ತೃತೀಯಾಕ್ಷಯಸಂಯುತಾ ।
ತತ್ರ ಮಾಂ ಲೇಪಯೇದ್ಗಂಧಲೇಪನೈರತಿಶೋಭನೈಃ ॥ ೫೧ ॥
ಪ್ರೀತಯೇ ಮಮ ಯೇ ಕುರ್ಯುರುತ್ಸವಾನ್ಮಮ ಶಾಶ್ವತಾನ್ ।
ಚತುರ್ವರ್ಗಪ್ರದಾಹ್ಯೇತೇ ಪ್ರತ್ಯೇಕಂ ಪರಿಕೀರ್ತಿತಾಃ ॥ ೫೨ ॥

ಜೈಮಿನಿರುವಾಚ :—

ಇತಿ ದತ್ವಾ ವರಂ ತಸ್ಮಾದಿಂದ್ರದ್ಯುಮ್ನಾಯ ಭೋ ದ್ವಿಜಾಃ ।
ಬ್ರಹ್ಮಾಣಮಾಹ ಭಗವಾನ್ ಸ್ಮೇರಾಂಭೋರುಹಸನ್ಮುಖಃ ॥ ೫೩ ॥

---

ಮುಖವುಳ್ಳ ನನ್ನನ್ನು ನೋಡುತ್ತಾರೆಯೋ ಅವರು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತರಾಗುವರೆಂಬುದರಲ್ಲಿ ಸಂಶಯವಿಲ್ಲವು.

೪೯. ಯಾರಾದರೆ, ಬಲಭದ್ರಾಸಹಿತನಾದ ನನ್ನ ಪೂಜಿಸಿ ದರ್ಶನಮಾಡಿ ನಮಸ್ಕರಿಸುತ್ತಾರೆಯೋ ಅವರು ಪ್ರತ್ಯೇಕವಾಗಿ ಎಂಟುಸಾವಿರ ಅಶ್ವಮೇಧ ಯಾಗಗಳ ಫಲವನ್ನು ಪಡೆಯುತ್ತಾರೆ.

೫೦. ಚೈತ್ರ ಶುಕ್ಲ ತ್ರಯೋದಶಿಯ ದಿನದಲ್ಲಿ ಕರ್ಮಪೂರ್ತಿಯನ್ನೆಸಗ ಬೇಕು. ಅದೇ ಚೈತ್ರ ಶುಕ್ಲ ಚತುರ್ದಶಿಯ ದಿನ ನನ್ನನ್ನು ದವನಗಳಿಂದ ಪೂಜಿಸತಕ್ಕುದು. ಹೀಗೆ ಯಾವ ಜನರು ದಮನೋತ್ಸವವನ್ನು ಮಾಡು ತ್ತಾರೆಯೋ ಅವರ ಪಾಪಗಳೆಲ್ಲವೂ ಕ್ಷಯಿಸಿಹೋಗುತ್ತವೆ.

೫೧. ವೈಶಾಖಮಾಸದ ಶುಕ್ಲ ತೃತೀಯೆಯು ಅಕ್ಷಯ ತೃತೀಯೆಯೆಂದು ಹೆಸರಾಗಿರುತ್ತದೆ. ಈ ದಿನದಲ್ಲಿ ನನಗೆ ಮಂಗಳಕರವಾದ ಗಂಧಲೇಪನವನ್ನೆಸಗ ತಕ್ಕುದು.

೫೨. ಎಲೈ ರಾಜನೇ! ಈ ಉತ್ಸವಗಳು ಪ್ರತಿಯೊಂದೂ ಧರ್ಮಾದಿ ಚತುರ್ವಿಧಪುರುಷಾರ್ಥಗಳನ್ನುಂಟುಮಾಡತಕ್ಕವುಗಳು. ಇವುಗಳನ್ನು ಯಾರು ಶಾಶ್ವತವಾಗಿ ಮಾಡುತ್ತಾರೆಯೋ ಅವರು ಆ ಚತುರ್ವಿಧಪುರುಷಾರ್ಥಗಳನ್ನು ದಿಟವಾಗಿಯೂ ಪಡೆಯುತ್ತಾರೆ."

೫೩. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ! ಭಗವಂತನಾದ ಜಗನ್ನಾಥನು ಇಂದ್ರದ್ಯುಮ್ನರಾಜನಿಗೆ ಈ ರೀತಿ ವರಗಳನ್ನು ಅನುಗ್ರಹಿಸಿದ

**ಚತುರ್ಮುಖ ತವ ಪ್ರೀತ್ಯೈ ಸರ್ವಂ ಸಂಪಾದಿತಂ ಮಯಾ ।**
**ತ್ವದಿಚ್ಛಾ ಹಿ ಮಮೈವೇಚ್ಛಾ ನ ಭೇದೋ ಹ್ಯಾವಯೋರ್ಧ್ರುವಂ ॥**
**ಯನ್ಮಾಂ ಮಾಧವಮೂರ್ತಿಂ ತ್ವಂ ಪುರಾ ಪ್ರಾರ್ಥಿತವಾನಸಿ ।**
**ತಸ್ಯೈವ ಪರಿಪಾಕೋಽಯಮವತಾರಃ ಕೃತೋ ಮಯಾ ॥ ೫೫ ॥**
**ಮಾಮತ್ರ ದೃಷ್ಟ್ವಾ ತ್ವಭ್ಯರ್ಚ್ಯ ಪ್ರಾಣಾನ್ ಸಂತ್ಯಜ್ಯ ಮುಚ್ಯತೇ ।**
**ಕ್ರಮಾತ್ಸರ್ವೇ ತ್ವಯಾ ಸಾರ್ಧಂ ಭೂಯಃ ಸಾಯುಜ್ಯಮೇವ ಚ ॥ ೫೬ ॥**
**ಯದ್ವಾಚಾಽಖಿಲಪನ್ಮರ್ತ್ಯೋ ಮಾಮತ್ರ ಹಿ ನಿಷೇವತೇ ।**
**ಅವಶ್ಯಂ ತದವಾಪ್ನೋತಿ ಸಂಗತ್ಯಾ ಚಾತ್ರ ಭೂಪತಿಃ ॥ ೫೭ ॥**
**ವ್ರಜೇದಾನೀಂ ಸತ್ಯಲೋಕಂ ತ್ರಿದಿವಂ ಯಾಂತು ದೇವತಾಃ ।**
**ತವಾಯುಃಪೂರ್ಣಪರ್ಯಂತಮಹಮತ್ರ ಸ್ಥಿತೋ ಧ್ರುವಂ ॥ ೫೮ ॥**
**ತತಸ್ತೇ ಹೃಷಿತಾಸ್ಸರ್ವೇ ಬ್ರಹ್ಮರ್ಷಿಸುರಸತ್ತಮಾಃ ।**
**ಪ್ರಣಮ್ಯ ಶಿರಸಾ ದೇವಂ ಜಗ್ಮುಸ್ತೇ ನಿಲಯಂ ಸ್ವಕಂ ॥ ೫೯ ॥**

---

ತರುವಾಯ, ನಸುನಗೆಯೊಡಗೂಡಿದ ಮುಖಕಮಲವುಳ್ಳವನಾಗಿ ಬ್ರಹ್ಮನನ್ನು ಕುರಿತಿಂತೆಂದನು.

೫೪. ಎಲೈ ಚತುರ್ಮುಖನೇ! ನಿನ್ನ ಪ್ರೀತಿಗೋಸಗ ನಿನ್ನ ಅಪೇಕ್ಷೆಯಂತೆಯೆ ಎಲ್ಲವನ್ನೂ ಸಂಪಾದಿಸಿಕೊಟ್ಟಿರುತ್ತೇನೆ. ಇಂದ್ರದ್ಯುಮ್ನರಾಜನಿಗೆ ಸಮಸ್ತ ವರಗಳನ್ನೂ ಕರುಣಿಸಿರುತ್ತೇನೆ. ನಿನ್ನ ಇಚ್ಛೆಯೇ ನನ್ನ ಇಚ್ಛೆಯಾಗಿರುವುದು. ನಮ್ಮಿಬ್ಬರಲ್ಲಿ ಯಾವ ಭೇದವೂ ಇರುವುದಿಲ್ಲ.

೫೫. ಕಮಲಾಸನ! ಹಿಂದೆ ನಾನು ನೀಲಮಾಧವಮೂರ್ತಿಯಾಗಿದ್ದಾಗ ನೀನು ನನ್ನನ್ನು ಪ್ರಾರ್ಥಿಸಿದುದರ ಫಲವೇ ಈ ನನ್ನ ದಾರುಮಯಾವತಾರವು. ಇದನ್ನು ನಿನ್ನ ಪ್ರಾರ್ಥನೆಯಂತೆ ಮಾಡಿರುತ್ತೇನೆ.

೫೬–೫೭. ಈ ಕ್ಷೇತ್ರದಲ್ಲಿ ಯಾರಾದರೆ ನನ್ನನ್ನು ಸಂದರ್ಶಿಸಿ ಪೂಜಿಸಿ ಆಯುಷ್ಯವನ್ನು ಕಳೆಯುತ್ತಾರೆಯೋ ಅವರು ಮರಣಾನಂತರ ಮುಕ್ತಿಯನ್ನು ಪಡೆಯುವುದಲ್ಲದೆ ಕ್ರಮವಾಗಿ ನಿನ್ನೊಡನೆ ನನ್ನ ಸಾಯುಜ್ಯವನ್ನೂ ಪಡೆಯುತ್ತಾರೆ. ಮಾನವನು ವಾಚಾ ಯಾವ ಅಭೀಷ್ಟವನ್ನು ಬಯಸಿ ನನ್ನನ್ನು ಸೇವಿಸಿದರೂ ಆ ಅಭೀಷ್ಟವನ್ನು ಪಡೆಯುತ್ತಾನೆ. ಇದಕ್ಕೆ ಭೂಪತಿಯಾದ ಇಂದ್ರದ್ಯುಮ್ನನೇ ದೃಷ್ಟಾಂತವು.

೫೮. ಇದೀಗ ನೀನು ಸತ್ಯಲೋಕಕ್ಕೆ ಹೊರಡು. ದೇವತೆಗಳೆಲ್ಲರೂ ಸ್ವರ್ಗಲೋಕಕ್ಕೆ ಹೋಗಲಿ. ನಾನು ನಿನ್ನ ಆಯುಃಪೂರ್ತಿಯವರೆಗೂ ಈ ಕ್ಷೇತ್ರದಲ್ಲಿಯೇ ನೆಲಸಿರುತ್ತೇನೆ; ಇದು ದಿಟವು.

೫೯. ಎಲೈ ವಿಪ್ರರೇ! ಆ ಪುರುಷೋತ್ತಮನಿಂತು ನುಡಿದ ಬಳಿಕ

**ದೇವೋಽಪಿ ಚ ಜಗನ್ನಾಥಃ ಪ್ರತಿಮಾರೂಪಧೃಕ್ತದಾ ।**
**ತೂಷ್ಣೀಂ ತಿಷ್ಠತಿ ಸರ್ವೇಷಾಂ ಹರ್ಷಮಾಪಾದಯನ್ನೃಣಾಂ ॥ ೬೦ ॥**
**ಇಂದ್ರದ್ಯುಮ್ನೋಽಪಿ ಧರ್ಮಾತ್ಮಾ ವಿಷ್ಣುಭಕ್ತೋ ದೃಢವ್ರತಃ ।**
**ಅನುವ್ರಜನ್ ಪದ್ಮಯೋನಿಂ ತೇನಾದಿಷ್ಟೋ ನ್ಯವರ್ತತ ॥ ೬೧ ॥**
**ಯಾತ್ರಾಃ ಸರ್ವಾ ಭಗವತಾ ಆಜ್ಞಪ್ತಾಃ ಸಾಧು ಕಾರಯ ।**
**ಅಸ್ಮಿಂಸ್ತುಷ್ಟೇ ಜಗನ್ನಾಥೇ ಸಂತುಷ್ಟಂ ವೈ ಚರಾಚರಂ ॥ ೬೨ ॥**
**ಇತ್ಯಾಜ್ಞಾಂ ಪದ್ಮಯೋನೇಸ್ತು ಮೂರ್ಧ್ನ್ಯಾಧಾಯ ಕ್ಷಿತೀಶ್ವರಃ ।**
**ನಾರದೇನ ಸಹ ಶ್ರೀಮಾನ್ನಿಧಿನಾಚ ಸಮೃದ್ಧಿಮತ್ ।**
**ಜ್ಯೇಷ್ಠಸ್ನಾನಾದಿಕಂ ಸರ್ವಮುತ್ಸವಂ ನಿರವರ್ತಯತ್ ॥ ೬೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ "ಇಂದ್ರದ್ಯುಮ್ನಕೃತ ಶ್ರೀಪುರುಷೋತ್ತಮ ಪೂಜಾದಿ ವರ್ಣನಂ"ನಾಮ ಏಕೋನತ್ರಿಂಶೋಽಧ್ಯಾಯಃ**

---

ಬ್ರಹ್ಮರ್ಷಿಗಳೂ, ದೇವತಾಶ್ರೇಷ್ಠರೂ ಆ ಸ್ವಾಮಿಯನ್ನು ಶಿರಸಾ ಪ್ರಣಾಮಮಾಡಿ ತಂತಮ್ಮ ಲೋಕಗಳಿಗೆ ತೆರಳಿದರು.

೬೦. ಜಗನ್ನಾಥಸ್ವಾಮಿಯೂ ಸಹ ಪ್ರತಿಮಾರೂಪವನ್ನು ತಾಳಿದವನಾಗಿ ಸಮಸ್ತ ಭಕ್ತಸಮುದಾಯಕ್ಕೂ ಆನಂದವನ್ನುಂಟುಮಾಡುತ್ತ ಆ ಪುರುಷೋತ್ತಮಕ್ಷೇತ್ರದಲ್ಲಿ ಸುಮ್ಮನೆ ಕುಳಿತಿರುವನು.

೬೧. ಇದಾದ ಬಳಿಕ ವಿಷ್ಣುಭಕ್ತನೂ, ದೃಢವ್ರತನೂ, ಧರ್ಮಾತ್ಮನೂ ಆದ ಇಂದ್ರದ್ಯುಮ್ನರಾಜನಾದರೋ ಬ್ರಹ್ಮದೇವನನ್ನೇ ಹಿಂಬಾಲಿಸಿ ಹೋಗಿ ಆತನ ಅಪ್ಪಣೆಯಂತೆ ಭೂಲೋಕಕ್ಕೆ ಹಿಂತಿರುಗಿದನು.

೬೨–೬೩. "ಅಯ್ಯಾ ಇಂದ್ರದ್ಯುಮ್ನನೇ! ಭಗವಂತನು ಅಪ್ಪಣೆಕೊಡಿಸಿದ ಸಮಸ್ತ ಯಾತ್ರೆಗಳನ್ನೂ ನಡೆಸುವವನಾಗು. ಈ ಸ್ವಾಮಿಯು ಸಂತುಷ್ಟನಾದರೆ ಚರಾಚರಜಗತ್ತೇ ಸಂತುಷ್ಟವಾಗುವುದು" ಎಂದು ನುಡಿದ ಆ ಕಮಲಸಂಭವನ ಆಜ್ಞೆಯನ್ನು ಶಿರಸಾ ಧಾರಣೆಮಾಡಿ ಆ ಕ್ಷಿತೀಶನು ನಾರದಮುನಿಯೊಡನೆಯೂ, ಪದ್ಮನಿಧಿಯಾದ ಕುಬೇರನೊಡನೆಯೂ ಭೂಲೋಕಕ್ಕೆ ಹಿಂತಿರುಗಿ ಶ್ರೀಪುರುಷೋತ್ತಮಕ್ಷೇತ್ರಕ್ಕೆ ಬಂದು ಅಲ್ಲಿ ಶ್ರೀಜಗನ್ನಾಥಸ್ವಾಮಿಗೆ ಸಮಸ್ತಮಹೋತ್ಸವಗಳನ್ನೂ ನಡೆಸಿದನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಭಗವಂತನು ಇಂದ್ರದ್ಯುಮ್ನನಿಗೆ ವರಗಳನ್ನು ಅನುಗ್ರಹಿಸಿದುದು" ಎಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

## ವಿವಿಧೋತ್ಸವವಿಧಾನನಿರೂಪಣಂ

**ಮುನಯ ಊಚುಃ :–**

**ಚಕಾರ ಕೇನ ವಿಧಿನಾ ಜನ್ಮಸ್ನಾನಂ ಶ್ರಿಯಃ ಪತೇಃ ।**
**ಅನ್ಯಾನಪ್ಯುತ್ಸವಾನ್ ಸರ್ವಾನ್ವಿಧಿವದ್ಬ್ರೂಹಿ ನೋ ಮುನೇ ॥ ೧ ॥**
**ನಾರದೇನ ಪುರಾ ಪ್ರೋಕ್ತಂ ಸರ್ವಂ ತೇ ಮುನಿಸತ್ತಮ ।**
**ಸಹಿ ವೇದ ತಮಃಪಾರೇ ಬ್ರಹ್ಮ ಬ್ರಹ್ಮಸುತೋ ಮುನಿಃ ॥ ೨ ॥**
**ತತ್ಸರ್ವಂ ಬ್ರೂಹಿ ತತ್ತ್ವೇನ ಮುನೇ ಕೌತೂಹಲಂ ಹಿ ನಃ ।**
**ಅಹೋ ಭಾಗ್ಯಂ ನರಪತೇರಿಂದ್ರದ್ಯುಮ್ನಸ್ಯ ಭೋ ಮುನೇ ॥ ೩ ॥**
**ತಸ್ಯ ತಾವತಿ ಕರ್ಮಾಂತೇ ಅತ್ಯದ್ಭುತಮಿದಂ ಮಹತ್ ।**
**ನ ಶ್ರುತಾ ಹಿ ನ ದೃಷ್ಟಾ ಹಿ ಪ್ರತಿಮಾ ದಾರುನಿರ್ಮಿತಾ ॥ ೪ ॥**
**ಸಜೀವತನುವತ್ಸಾಕ್ಷಾದ್ದ್ವಾರಂ ದದ್ಯಾನ್ಮನುಷ್ಯವತ್ ।**
**ಸ್ಮಾರಂ ಸ್ಮಾರಂ ಭಗವತಶ್ಚರಿತಂ ಪಾಪನಾಶನಂ ॥ ೫ ॥**

---

## ಕನ್ನಡದ ಅನುವಾದ

### ವಿವಿಧೋತ್ಸವವಿಧಾನನಿರೂಪಣ

೧. ಮುನಿಗಳು ಕೇಳುತ್ತಾರೆ:–ಎಲೈ ಜೈಮಿನಿಋಷಿಯೇ! ಇಂದ್ರದ್ಯುಮ್ನ ಮಹಾರಾಜನು ಶ್ರೀಪತಿಯಾದ ಜಗನ್ನಾಥಸ್ವಾಮಿಗೆ ಜನ್ಮಸ್ನಾನಮಹೋತ್ಸವವನ್ನೂ, ಇತರ ಉತ್ಸವಗಳನ್ನೂ ನಡೆಸಿದ ವಿಧಾನವೆಂತೆಂಬುದನ್ನು ನಮಗೆ ತಿಳಿಯಹೇಳುವವನಾಗು.

೨. ಎಲೈ ಮುನಿಶ್ರೇಷ್ಠನೇ! ದೇವಮುನಿಯಾದ ನಾರದನು ಈ ಎಲ್ಲ ಸಂಗತಿಗಳನ್ನೂ ನಿನಗೆ ತಿಳಿಸಿರುವನು. ಆತನು ಬ್ರಹ್ಮಸುತನು. ಆ ಮುನಿಯು ಅಜ್ಞಾನದೂರನಾದ ಪರಬ್ರಹ್ಮವನ್ನು ತಿಳಿದವನು.

೩. ಆದುದರಿಂದ ನೀನು ನಮಗೆ ಆ ವೃತ್ತಾಂತವೆಲ್ಲವನ್ನೂ ಹೇಳುವವನಾಗು. ಕೇಳಬೇಕೆಂಬ ಕುತೂಹಲವು ನಮಗೆ ಬಹಳವಾಗಿದೆ. ಎಲೈ ಮುನಿಯೇ! ಇಂದ್ರದ್ಯುಮ್ನರಾಜನ ಭಾಗ್ಯವೇ ಭಾಗ್ಯವು!

೪–೫. ಆ ಭೂಪಾಲನೆಸಗಿದ ಅಂತಹ ಅದ್ಭುತಯಜ್ಞಕರ್ಮಾಂತ್ಯದಲ್ಲಂತೂ ಇದು ಅದ್ಭುತವೃತ್ತಾಂತವು. ದಾರುನಿರ್ಮಿತವಾದ ವಿಷ್ಣುವಿನ ಆ ಪ್ರತಿಮೆಯು ಸಜೀವಶರೀರಿಯಾದ ಮನುಷ್ಯನಂತೆ ಭಕ್ತರಿಗೆ ಸಾಕ್ಷಾತ್ತಾಗಿ ಮೋಕ್ಷದ್ವಾರವನ್ನು ನೀಡುತ್ತದೆಯೆಂಬ ಸಂಗತಿಯನ್ನು ನಾವು ಹಿಂದಾವಾಗಲೂ ಕೇಳಿದುದಿಲ್ಲ;

ಚರಿತಂ ತಸ್ಯ ನೃಪತೇರ್ದುರ್ಲಭಂ ಮರ್ತ್ಯವಾಸಿನಾಂ ।
ನ ಸಂತೋಷೋಽಸ್ತಿ ಭಗವನ್ ಶೃಣ್ವತಾಂ ನೋ ಮಹಾಮುನೇ ॥ ೬ ॥
ತದ್ವದಾಽನುಕ್ರಮೇಣಾಸ್ಮಾನ್ಯಾತ್ರಾಃ ಸರ್ವಾಘನಾಶನಾಃ ।
ಯಾಸಾಂ ಸಂದರ್ಶನಾದ್ವಾಸೋ ವೈಕುಂಠ ಇತಿ ನಿಶ್ಚಿತಂ ॥ ೭ ॥
ಯಾತ್ರಾಮಾಹಾತ್ಮ್ಯವಕ್ತಾಸೌ ಯತ್ಸಾಕ್ಷಾನ್ಮಧುಸೂದನಃ ।
ತನ್ನೋ ವದ ಮಹಾಭಾಗ ಜಗತಾಂ ಹಿತಕಾಮ್ಯಯಾ ॥ ೮ ॥

ಜೈಮಿನಿರುವಾಚ :—

ಜ್ಯೇಷ್ಠಸ್ನಾನಂ ಪ್ರವಕ್ಷ್ಯಾಮಿ ಶೃಣುಧ್ವಂ ಮುನಯೋಽಧುನಾ ।
ಜ್ಯೇಷ್ಠಶುಕ್ಲದಶಾಮ್ಯಾಂತು ವ್ರತಂ ಸಂಕಲ್ಪ್ಯ ವಾಗ್ಯತಃ ॥ ೯ ॥
ಪ್ರಾತರುತ್ಥಾಯ ಕುರ್ವೀತ ಪಂಚತೀರ್ಥವಿಧಾನತಃ ।
ಮಾರ್ಕಂಡೇಯವಟಂ ಗತ್ವಾ ಆಚಮ್ಯ ಪ್ರಯತಃ ಪುಮಾನ್ ॥ ೧೦ ॥
ಪ್ರಾರ್ಥಯೇಚ್ಛಂಕರಂ ನತ್ವಾ ಕೃತಾಂಜಲಿ ಪುಟೋಽಗ್ರತಃ ॥ ೧೧ ॥

---

ಕಂಡೂ ಇರುವುದಿಲ್ಲವು. ಇಂತಹ ಭಗವಂತನ ಚರಿತ್ರೆಯನ್ನು ಸ್ಮರಿಸಿದಂತೆಲ್ಲ ಮಾನವರ ಪಾಪಗಳು ನಾಶವಾಗುವುವು.

೬. ಎಲೈ ಮಹಾಮುನಿಯೇ! ಇಂದ್ರದ್ಯುಮ್ನಮಹಾರಾಜನ ಚರಿತೆಯಂತು ಮರ್ತ್ಯಲೋಕವಾಸಿಗಳಿಗೆ ಅತ್ಯಂತ ದುರ್ಲಭವಾದುದೇ ಸರಿ! ನಾವದನ್ನು ಎಷ್ಟುಕೇಳಿದರೂ ತೃಪ್ತಿಯೇ ಆಗಲಿಲ್ಲವು. ಇನ್ನೂ ಕೇಳಬೇಕೆಂದೆನಿಸುತ್ತಲೇ ಇರುವುದು.

೭. ಆದುದರಿಂದ ಪ್ರಕೃತದಲ್ಲಿ ನೀನು ಸಮಸ್ತ ಪಾಪಗಳನ್ನೂ ಕಳೆಯುವುದಾಗಿ, ಸಂದರ್ಶಿಸಿದೊಡನೆಯೇ ವೈಕುಂಠವಾಸವು ದೊರಕುವುದೆಂದು ನಿಶ್ಚಿತವಾಗಿರುವ ಆ ಜಗನ್ನಾಥಸ್ವಾಮಿಯ ಯಾತ್ರೋತ್ಸವಗಳನ್ನು ನಮಗೆ ಕ್ರಮವಾಗಿ ತಿಳಿಸು.

೮. ಸಾಕ್ಷಾತ್ ಮಧುಸೂದನನೇ ಆ ಯಾತ್ರಾಮಹೋತ್ಸವಗಳನ್ನು ಹೇಳಿರುವನಷ್ಟೆ! ಆದುದರಿಂದ ಜಗತ್ತಿನ ಹಿತವನ್ನು ಬಯಸಿ ಅವುಗಳನ್ನು ನಮಗೆ ತಿಳಿಯಹೇಳು.

೯–೧೧. ಜೈಮಿನಿಯು ಹೇಳುತ್ತಾನೆ:—ಎಲೈ ಮುನಿಗಳಿರಾ! ಈಗ ನಿಮಗೆ ಜ್ಯೇಷ್ಠಸ್ನಾನಮಹೋತ್ಸವವಿಧಾನವನ್ನು ಹೇಳುತ್ತೇನೆ ಆಲಿಸಿರಿ. ಈ ಜ್ಯೇಷ್ಠಸ್ನಾನೋತ್ಸವವನ್ನು ನಡೆಸುವ ಮಾನವನು, ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮಿಯದಿನ ವಾಕ್ಸಂಯಮವುಳ್ಳವನಾಗಿ ಈ ವ್ರತವನ್ನು ಮಾಡುತ್ತೇನೆಂದು ಸಂಕಲ್ಪಮಾಡಬೇಕು. ಅಂದಿನ ಪ್ರಾತಃಕಾಲದಲ್ಲಿ ಪಂಚತೀರ್ಥಸ್ನಾನಪೂರ್ವಕವಾಗಿ ಈ ಸಂಕಲ್ಪವನ್ನು ಮಾಡಬೇಕು. ಮಾರ್ಕಂಡೇಯ ಸರೋವರಕ್ಕೆ ಹೋಗಿ

ಅತಿತೀಕ್ಷ್ಣ ಮಹಾಕಾಯ ಕಲ್ಪಾಂತದಹನೋಪಮ ।
ಭೈರವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ ॥ ೧೨ ॥
ತತಃ ಪ್ರವಿಶ್ಯ ತೀರ್ಥಂತು ವೈದಿಕೈಃ ಪಂಚ ವಾರುಣೈಃ ।
ಅಘಮರ್ಷಣಸೂಕ್ತೇನ ತ್ರಿರಾವೃತ್ತೇನ ವಾ ದ್ವಿಜಾಃ ।
ಸ್ನಾತ್ವಾ ಯಥಾವತ್ಸ್ನಾಯೀತ ಮಂತ್ರೇಣಾನೇನ ಚಾಂತತಃ ॥ ೧೩ ॥
ನಮಃ ಶಿವಾಯ ಶಾಂತಾಯ ಸರ್ವಪಾಪಹರಾಯ ಚ ।
ಸ್ನಾನಂ ಕರೋಮಿ ದೇವೇಶ ಮಮ ನಶ್ಯತು ಪಾತಕಂ ॥ ೧೪ ॥
ಸಂಸಾರಸಾಗರೇ ಮಗ್ನಂ ಪಾಪಗ್ರಸ್ತಮಚೇತನಂ ।
ತ್ರಾಹಿ ಮಾಂ ಭಗನೇತ್ರಘ್ನ ತ್ರಿಪುರಾರೇ ನಮೋಸ್ತುತೇ ॥ ೧೫ ॥
ಏವಂ ಸ್ನಾತ್ವಾ ಬಹಿರ್ಗತ್ವಾ ಧೌತವಾಸಾಃ ಸ ಪುಂಡ್ರಕಃ ।
ದೇವಾನೃಷೀನ್ಪಿತೄಂಶ್ಚೈವ ತರ್ಪಯಿತ್ವಾ ಯಥಾವಿಧಿ ॥ ೧೬ ॥

---

ಶ್ರೀಶಂಕರನನ್ನು ನಮಸ್ಕರಿಸಿ ಕೈಗಳನ್ನು ಜೋಡಿಸಿಕೊಂಡು ಈ ರೀತಿ ಪ್ರಾರ್ಥಿಸ ತಕ್ಕುದು.

೧೨. "ಮಹಾಭಯಂಕರನೂ, ಮಹಾಕಾಯನೂ, ಪ್ರಳಯಾಗ್ನಿಗೆ ಸಮಾನನೂ ಆದ ಎಲೈ ಭೈರವಸ್ವಾಮಿಯೇ! ನಿನಗೆ ನಮಸ್ಕಾರವನ್ನೆಸಗುವೆನು. ನನಗೆ ಈ ತೀರ್ಥದಲ್ಲಿ ಸ್ನಾನಮಾಡಲು ಅನುಜ್ಞೆಯನ್ನು ನೀಡು."

೧೩. ಇಂತು ಪ್ರಾರ್ಥಿಸಿಕೊಂಡ ತರುವಾಯ ವೇದೋಕ್ತವಾದ ವರುಣ ದೇವತಾಕವಾದ ಐದು ಮಂತ್ರಗಳನ್ನು ಹೇಳಿಕೊಂಡೋ ಅಥವಾ ಅಘಮರ್ಷಣ ಸೂಕ್ತವನ್ನು ಮೂರಾವೃತ್ತಿ ಪಠಿಸುತ್ತಲೋ ಆ ತೀರ್ಥದಲ್ಲಿ ಸ್ನಾನವನ್ನು ಮಾಡಬೇಕು. ಹೀಗೆ ಸ್ನಾನವನ್ನೆಸಗಿದ ತರುವಾಯ ಕಡೆಯಲ್ಲಿ ಈ ಮುಂದೆ ಹೇಳುವ ಮಂತ್ರವನ್ನು ಹೇಳಿಕೊಂಡು ವಿಧಿವತ್ತಾಗಿ ಮತ್ತೊಮ್ಮೆ ಸ್ನಾನಮಾಡಬೇಕು.

೧೪. "ಎಲೈ ಶಿವನೇ! ಶಾಂತಮೂರ್ತಿಯೂ, ಸಮಸ್ತಪಾಪಗಳನ್ನು ಪರಿಹರಿಸುವನೂ ಆದ ಓ ಸ್ವಾಮಿಯೇ! ಈ ತೀರ್ಥದಲ್ಲಿ ಸ್ನಾನಮಾಡುವೆನು. ದೇವೇಶ್ವರಾ! ನನ್ನ ಪಾತಕಗಳು ನಾಶವಾಗಲಿ.

೧೫. ಭಗನೇತ್ರರಾಕ್ಷಸನನ್ನು ಸಂಹರಿಸಿದವನೂ, ತ್ರಿಪುರಾಸುರರನ್ನು ಧ್ವಂಸಗೈದವನೂ ಆದ ಎಲೈ ಪರಮೇಶ್ವರನೇ! ಸಂಸಾರಸಾಗರದಲ್ಲಿ ಮುಳುಗಿ, ಪಾಪಗಳು ಕವಿದು ಜ್ಞಾನವೇ ಇಲ್ಲದಿರುವ ನನ್ನನ್ನು ಕಾಪಾಡು; ಇದೋ ನಿನ್ನನ್ನು ನಮಸ್ಕರಿಸುವೆನು."

೧೬. ಎಲೈ ವಿಪ್ರರೇ! ಈ ಪ್ರಕಾರವಾಗಿ ಸ್ನಾನಮಾಡಿದ ಬಳಿಕ ಹೊರಗೆ ಬಂದು ಮಡಿಯುಟ್ಟು ತ್ರಿಪುಂಡವನ್ನು ಧರಿಸಿ ವಿಧ್ಯುಕ್ತರೀತಿಯಲ್ಲಿ ದೇವ ಋಷಿ ಪಿತೃಗಳಿಗೆ ತರ್ಪಣಕೊಡಬೇಕು.

**ಪ್ರವಿಶ್ಯ ಶಂಕರಾಗಾರಂ ಸ್ಪೃಷ್ಟ್ವಾ ವೃಷಣಮಾವೃಷಂ ।**
**ಮಂತ್ರೇಣಾನೇನ ಭೋ ವಿಪ್ರಾಃ ಸರ್ವಕ್ರತುಫಲಂ ಲಭೇತ್ ॥ ೧೭ ॥**
**ಧರ್ಮಶ್ಚತುಷ್ಪಾದ್ಯಜ್ಞಸ್ತ್ವಂ ಸ್ವರ್ಣಶೃಂಗಸ್ತ್ರಯೀವಪುಃ ।**
**ಗೋಪತೇ ವಾಹರೂಪಸ್ತ್ವಂ ಶೂಲಿನಸ್ತ್ವಾಂ ನಮಾಮ್ಯಹಂ ॥ ೧೮ ॥**
**ಅಘೋರಮಂತ್ರೇಣ ತತಃ ಪೂಜಯೇದ್ವೃಷವಾಹನಂ ।**
**ಪಂಚಬ್ರಹ್ಮಭಿರ್ಮಗ್ಭಿಸ್ತು ಸಂಸ್ಪೃಶೇಲ್ಲಿಂಗಮುತ್ತಮಂ ॥ ೧೯ ॥**
**ಅಂಗುಷ್ಠೇನ ಸ್ಪೃಶೇಲ್ಲಿಂಗಂ ಮುಷ್ಟಿನಾ ಶಕ್ತಿಮೇವಚ ।**
**ಪೂಜಯಿತ್ವಾತು ವಿಧಿವತ್ಸ್ತುತ್ವಾ ದೇವಂ ಪುರದ್ವಿಷಂ ॥ ೨೦ ॥**
**ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತ್ಯನುತ್ತಮಂ ।**
**ಮಾರ್ಕಂಡೇಯವಟೇ ಸ್ನಾತ್ವಾ ದೃಷ್ಟ್ವಾ ದೇವಂ ತು ಶಂಕರಂ ॥ ೨೧ ॥**
**ಫಲಂ ಪ್ರಾಪ್ನೋತ್ಯವಿಕಲಂ ರಾಜಸೂಯಾಶ್ವಮೇಧಯೋಃ ।**
**ಅಂತೇ ಶಿವಸ್ಯ ಸಾಲೋಕ್ಯಂ ಪ್ರಾಪ್ಯ ಜ್ಞಾನಂ ತತೋ ನರಃ ॥ ೨೨ ॥**
**ಕ್ರಮಾಚ್ಚ ಲಭತೇ ಮುಕ್ತಿಂ ಜಗನ್ನಾಥಪ್ರಸಾದತಃ ।**
**ತತೋ ಮೌನೀ ವ್ರಜೇದ್ದೇವಂ ನಾರಾಯಣಮನಾಮಯಂ ॥ ೨೩ ॥**

---

೧೭. ಆಮೇಲೆ ಶಿವಾಲಯವನ್ನು ಪ್ರವೇಶಿಸಿ ಅಲ್ಲಿ ಈ ಮುಂದೆ ಹೇಳುವ ಮಂತ್ರವನ್ನು ಪುರಶ್ಚರಣೆ ಮಾಡುತ್ತ ಧರ್ಮಸ್ವರೂಪವಾದ ವೃಷಭವನ್ನು ಸ್ಪರ್ಶ ಮಾಡಬೇಕು. ಇದರಿಂದ ಸಮಸ್ತ ಯಜ್ಞಗಳ ಫಲವೂ ಲಭಿಸುತ್ತದೆ.

೧೮. "ಸುವರ್ಣಶೃಂಗವಿರಾಜಿತನೂ, ವೇದಮಯಶರೀರನೂ ಆದ ಎಲೈ ಗೋಪತಿಯೇ! ನೀನು ಸಾಕ್ಷಾತ್ ಚತುಷ್ಪಾದ್ಧರ್ಮದ ಸ್ವರೂಪವೇ ಆಗಿರುವೆ; ಯಜ್ಞಸ್ವರೂಪಿಯೇ ನೀನಾಗಿರುವೆ: ಪರಮೇಶ್ವರನ ವಾಹನವಾಗಿರುವೆ; ಇದೋ ನಿನಗೆ ಮಣಿಯುವೆನು."

೧೯. ಹೀಗೆ ಪ್ರಾರ್ಥನೆಮಾಡಿದ ಬಳಿಕ ಅಘೋರಮಂತ್ರದಿಂದ ವೃಷಭ ವಾಹನನಾದ ಶಂಕರನನ್ನು ಪೂಜಿಸಿ ಪಂಚಬ್ರಹ್ಮಮಂತ್ರಗಳಿಂದ ಆ ಉತ್ತಮ ಲಿಂಗವನ್ನು ಸ್ಪರ್ಶಿಸಬೇಕು.

೨೦–೨೨. ಕೈಯ ಹೆಬ್ಬೆರಳಿನಿಂದ ಶಿವಲಿಂಗವನ್ನೂ, ಮುಷ್ಟಿಯಿಂದ ಶಕ್ತಿಯನ್ನೂ ಸ್ಪರ್ಶಮಾಡತಕ್ಕದು. ಇಂತು ವಿಧಿವತ್ತಾಗಿ ಆ ಪುರವೈರಿಯನ್ನು ಪೂಜಿಸಿ ಸ್ತುತಿಸಿದುದಾದರೆ ದಶಾಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ. ಮಾರ್ಕಂಡೇಯವಟದಲ್ಲಿ ಸ್ನಾನಗೈದು ಶಿವದರ್ಶನಮಾಡಿದುದಾದರೆ ರಾಜಸೂಯ, ಅಶ್ವಮೇಧಯಾಗಗಳ ಫಲವನ್ನು ಸಂಪೂರ್ಣವಾಗಿ ಪಡೆಯುತ್ತಾನೆ. ಕಡೆಗೆ ದಿವ್ಯಜ್ಞಾನವನ್ನು ಪಡೆದು ದೇಹಾವಸಾನವಾದ ಬಳಿಕ ಶಿವನ ಸಾಲೋಕ್ಯವನ್ನೂ ಪಡೆಯುವನು.

೨೩. ಅಯ್ಯಾ ಮುನಿಗಳಿರಾ! ಈ ಪ್ರಕಾರ ಆಚರಣೆಮಾಡಿದ ಮಾನವನು

**ತದ್ದಕ್ಷಿಣಸ್ಥಿತಂ ವಿಷ್ಣುರೂಪಂ ನ್ಯಗ್ರೋಧಮುತ್ತಮಂ ।**
**ದರ್ಶನಾದಪಿ ಪಾಪಾನಾಂ ಪಾಪಸಂಹತಿನಾಶನಂ ॥ ೨೪ ॥**
**ತಂ ದೃಷ್ಟ್ವಾ ಪ್ರಣಮೇದ್ದೂರಾದ್ಧ್ಯಾಯನ್ಪುರುಷೋತ್ತಮಂ ।**
**ಪ್ರದಕ್ಷಿಣಂ ತತಃ ಕುರ್ಯಾದಿಮಂ ಮಂತ್ರಮುದೀರಯನ್ ॥ ೨೫ ॥**
**ಅಮರಸ್ತ್ವಂ ಸದಾಕಲ್ಪ ವಿಷ್ಣೋರಾಯತನಂ ಮಹತ್ ।**
**ನ್ಯಗ್ರೋಧ ಹರ ಮೇ ಪಾಪಂ ವಿಷ್ಣುರೂಪ ನಮೋಽಸ್ತು ತೇ ॥ ೨೬ ॥**
**ನಮೋಽಸ್ತ್ವವ್ಯಕ್ತರೂಪಾಯ ಮಹಾಪ್ರಲಯಸ್ಥಾಯಿನೇ ।**
**ಏಕಾಶ್ರಯಾಯ ಜಗತಾಂ ಕಲ್ಪವೃಕ್ಷಾಯ ತೇ ನಮಃ ॥ ೨೭ ॥**
**ಸ್ತುವನ್ ಜಪೇತ್ತು ತದ್ವೃಕ್ಷ್ಯಾ ಮೂಲೇ ತಸ್ಯ ಜನಾರ್ದನಂ ।**
**ಕೋಟಿ ಜನ್ಮಶತೋದ್ಭೂತ ಪಾಪಾದೇವ ವಿಮುಚ್ಯತೇ ॥ ೨೮ ॥**

---

ಶ್ರೀ ಜಗನ್ನಾಥನ ಅನುಗ್ರಹದಿಂದ ಕ್ರಮವಾಗಿ ಮುಕ್ತಿಯನ್ನೂ ಪಡೆಯುವನು. ಈ ರೀತಿ ಮಾರ್ಕಂಡೇಯ ವಟಸ್ನಾನ, ಶಿವಸಂದರ್ಶನಗಳಾದ ತರುವಾಯ ವ್ರತಿಯಾದವನು ಮೌನವನ್ನಾಶ್ರಯಿಸಿದವನಾಗಿ ಶ್ರೀಮನ್ನಾರಾಯಣನ ಬಳಿಗೈದಬೇಕು.

೨೪. ಮೊದಲು ಆ ದೇವನ ದಕ್ಷಿಣದಿಶೆಯಲ್ಲಿರುವ ವಿಷ್ಣುಸ್ವರೂಪವೂ, ಉತ್ತಮವೂ ಆದ ನ್ಯಗ್ರೋಧವೃಕ್ಷವನ್ನು ದರ್ಶನಮಾಡಬೇಕು. ಆ ವೃಕ್ಷವಾದರೋ ದರ್ಶನಮಾತ್ರದಿಂದಲೇ ಪಾಪರಾಶಿಗಳನ್ನು ಕಳೆಯುವುದಾಗಿರುವುದು.

೨೫. ಎಲೈ ಮುನಿಗಳಿರಾ! ಆ ನ್ಯಗ್ರೋಧ ವೃಕ್ಷವನ್ನು ನೋಡಿ ಪುರುಷೋತ್ತಮನನ್ನು ಸ್ಮರಿಸಿ ಧ್ಯಾನಿಸುತ್ತ ದೂರದಿಂದಲೇ ನಮಸ್ಕರಿಸಬೇಕು. ತರುವಾಯ ಈ ಮುಂದೆ ಹೇಳುವ ಮಂತ್ರವನ್ನು ಹೇಳಿಕೊಂಡು ಅದಕ್ಕೆ ಪ್ರದಕ್ಷಿಣ ನಮಸ್ಕಾರವನ್ನು ಮಾಡತಕ್ಕುದು.

೨೬. "ಎಲೈ ನ್ಯಗ್ರೋಧಕಲ್ಪವೃಕ್ಷವೇ! ನೀನು ಅಮರನಾಗಿರುವೆ. ನೀನು ಸರ್ವವ್ಯಾಪಿಯಾದ ಶ್ರೀಮನ್ನಾರಾಯಣಮೂರ್ತಿಯ ಮಹತ್ತರವಾದ ಆಲಯವಾಗಿರುವೆ. ಎಲೈ ವಿಷ್ಣುರೂಪ ನ್ಯಗ್ರೋಧವೃಕ್ಷವೇ! ನಿನಗಿದೋ ನಮಸ್ಕಾರವು! ನನ್ನ ಪಾಪವನ್ನು ನಿವಾರಣೆಮಾಡು.

೨೭. ಅವ್ಯಕ್ತವಾದ ರೂಪವುಳ್ಳುದಾಗಿ, ಮಹಾಪ್ರಳಯ ಸಮಯದಲ್ಲಿಯೂ ಕಟ್ಟಕಡಲದೆ ನೆಲೆಯಾಗಿರುವುದಾಗಿ, ಜಗತ್ತಿಗೆಲ್ಲ ಒಂದೇ ಆಶ್ರಯವುಳ್ಳುದಾಗಿರುವ ಓ ಕಲ್ಪವೃಕ್ಷವೇ! ನಿನಗೆ ನಮೋ ನಮಃ"

೨೮. ಇಂತು ಸ್ತುತಿಸಿದ ಬಳಿಕ ವ್ರತಿಯು ಆ ವೃಕ್ಷದ ಬುಡದಲ್ಲಿ ಕುಳಿತು ಭಕ್ತಿಪೂರ್ವಕವಾಗಿ ಜನಾರ್ದನ ಮಂತ್ರವನ್ನು ಜಪಿಸತಕ್ಕುದು. ಇದರಿಂದ ಮಾನವನು ಒಂದುಕೋಟಿ ಜನ್ಮಗಳಲ್ಲಿ ಅನುಸರಿಸಿ ಬಂದ ಪಾಪಗಳಿಂದ ವಿಮುಕ್ತನಾಗುವನು.

ತಚ್ಛಾಯಾಕ್ರಮಣೇನಾಪಿ ನಿಷ್ಪಾಪೋ ಜಾಯತೇ ನರಃ ।
ತತಃ ಸುಪರ್ಣಂ ಪ್ರಣಮೇದ್ಧ್ಯಾನರೂಪಂ ಹರೇಃ ಪುರಃ ॥ ೨೯ ॥
ಸ್ಥಿತೋ ಭಕ್ತಿನತೋ ವಿಷ್ಣೋಃ ಕೃತಾಂಜಲಿಪುಟೋ ಮುದಾ ।
ಛಂದೋಮಯ ಜಗದ್ಧಾಮನ್ಯಾನರೂಪ ತ್ರಿವೃದ್ವಪುಃ ॥ ೩೦ ॥
ಯಜ್ಞರೂಪ ಜಗದ್ವ್ಯಾಪಿನ್ ಪ್ರೀಯಮಾಣಾಯ ತೇ ನಮಃ ।
ಸ್ತುತ್ವೇತ್ಥಂ ಗರುಡಂ ಪಾಪಾನ್ಮುಚ್ಯತೇಽನೇಕಜನ್ಮಜಾತ್ ॥ ೩೧ ॥
ವಾಙ್ಮನಃಕರ್ಮನಿಯತೋ ಗಚ್ಛೇದೇವಂ ವಿಚಿಂತಯನ್ ।
ಪ್ರವಿಶ್ಯ ದೇವತಾಗಾರಂ ಕೃತ್ವಾ ತಂ ತ್ರಿಃಪ್ರದಕ್ಷಿಣಂ ॥ ೩೨ ॥
ಪೂಜಯೇನ್ಮಂತ್ರರಾಜೇನ ಸೂಕ್ತೇನ ಪುರುಷಸ್ಯ ವಾ ।
ದ್ವಾದಶಾಕ್ಷರಮಂತ್ರೇಣ ಯತ್ರ ವಾ ಜಾಯತೇ ರುಚಿಃ ॥ ೩೩ ॥
ಪೂಜಾಧಿಕಾರಿಣಃ ಸರ್ವೇ ಬ್ರಹ್ಮಕ್ಷತ್ರವಿಶಸ್ತತಃ ।
ಅನ್ಯೇಷಾಂ ದರ್ಶನಂ ಭಕ್ತ್ಯಾ ತಯೋರ್ನಾಮಾನುಕೀರ್ತನಾತ್ ॥ ೩೪ ॥

---

೨೯. ಅಯ್ಯಾ ವಿಪ್ರರೇ! ಆ ನ್ಯಗ್ರೋಧವೃಕ್ಷದ ನೆರಳನ್ನು ನೆಮ್ಮಿದ ಮಾತ್ರದಿಂದಲೇ ಮಾನವನು ನಿಷ್ಪಾಪನಾಗುತ್ತಾನೆ. ಇದಾದ ಬಳಿಕ ಆ ವೃಕ್ಷದ ಸಮೀಪದಲ್ಲಿಯೇ ಇರುವ ಶ್ರೀಮನ್ನಾರಾಯಣಮೂರ್ತಿಯ ವಾಹನರೂಪನಾದ ಸುಪರ್ಣ (ಗರುಡ)ದೇವನನ್ನು ಸಂದರ್ಶಿಸಿ ನಮಿಸಬೇಕು.

೩೦–೩೧. ಆ ಸ್ವಾಮಿಯ ಮುಂಗಡೆ ನಿಂತು ಭಕ್ತಿನಮ್ರನೂ, ಕೃತಾಂಜಲಿಪುಟನೂ ಆಗಿ ಪ್ರಸನ್ನವಾದ ಮನಸ್ಸಿನಿಂದಿಂತು ಸ್ತುತಿಸಿ ನಮಸ್ಕರಿಸಬೇಕು. "ಎಲೈ ವೇದಮಯನೇ! ಜಗತ್ತೇ ಭವನವಾಗುಳ್ಳವನೂ, ಯಾನರೂಪನೂ, ಮೂರುಸುರಳಿಯ ಮೈಯುಳ್ಳವನೂ, ಯಜ್ಞಸ್ವರೂಪನೂ, ಜಗತ್ತನ್ನು ವ್ಯಾಪಿಸಿರುವವನೂ, ಸತತವೂ ಸಂತುಷ್ಟನೂ, ತೃಪ್ತನೂ ಆಗಿರುವವನೂ ಆದ ನಿನಗೆ ನಮಸ್ಕಾರವು." ಹೀಗೆ ಗರುಡನನ್ನು ಸ್ತುತಿಸಿದುದಾದರೆ ಅನೇಕ ಜನ್ಮಗಳಿಂದ ಬಂದ ಪಾಪಗಳಿಂದ ಮಾನವನು ಬಿಡುಗಡೆ ಹೊಂದುತ್ತಾನೆ.

೩೨. ಈ ಪ್ರಕಾರವಾಗಿ ವಾಕ್ಕು, ಮನಸ್ಸು, ಕರ್ಮಗಳ ನಿಯಮವುಳ್ಳವನಾಗಿ ಶ್ರೀಮನ್ನಾರಾಯಣನನ್ನೇ ಧ್ಯಾನಿಸುತ್ತ ದೇವಾಲಯವನ್ನು ಪ್ರವೇಶಮಾಡಿ ಮೂರಾವೃತ್ತಿ ಪ್ರದಕ್ಷಿಣೆಯನ್ನೆಸಗಬೇಕು.

೩೩. ಬಳಿಕ ಸ್ವಾಮಿಯ ಸನ್ನಿಧಿಗೆ ಹೋಗಿ ಮಂತ್ರರಾಜದಿಂದಲೋ, ಪುರುಷಸೂಕ್ತದಿಂದಲೋ, ಅಥವಾ ದ್ವಾದಶಾಕ್ಷರ ಮಂತ್ರದಿಂದಲೋ ತನಗೆ ಅಭಿರುಚಿಯಿದ್ದಂತೆ ಸ್ವಾಮಿಯನ್ನು ಪೂಜಿಸಬೇಕು.

೩೪. ಎಲೈ ದ್ವಿಜರೇ! ಶ್ರೀಜಗನ್ನಾಥಸ್ವಾಮಿಯ ಪೂಜೆಗೆ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಲ್ಲರೂ ಅಧಿಕಾರಿಗಳೇ! ತದಿತರರು ಆ ಪ್ರಭುವಿನಲ್ಲಿ ಭಕ್ತಿಸಂಪನ್ನರಾಗಿ ಆತನ ದಿವ್ಯನಾಮಗಳನ್ನು ಹೇಳಿಕೊಂಡು ದರ್ಶನಮಾಡಬೇಕು.

**ಪಂಚೋಪಚಾರವಿಧಿನಾ ಪೂಜಯೇತ್ಪರಮೇಶ್ವರಂ ।**
**ಕೃತಾಂಜಲಿಪುಟೋ ಭೂತ್ವಾ ಇದಂ ಸ್ತೋತ್ರಮುದೀರಯೇತ್ ॥ ೩೫ ॥**
**ದೇವದೇವ ಜಗನ್ನಾಥ ಸಂಸಾರಾರ್ಣವತಾರಕ ।**
**ಭಕ್ತಾನುಗ್ರಾಹಕ ಸದಾ ರಕ್ಷ ಮಾಂ ಪಾದಯೋರ್ನತಂ ॥ ೩೬ ॥**
**ಜಯ ಕೃಷ್ಣ ಜಗನ್ನಾಥ ಜಯ ಸರ್ವಾಘನಾಶನ ।**
**ಜಯಾಶೇಷಜಗದ್ವಂದ್ಯಪಾದಾಂಭೋಜ ನಮೋಽಸ್ತು ತೇ ॥ ೩೭ ॥**
**ಜಯ ಬ್ರಹ್ಮಾಂಡ ಕೋಟೀಶ ವೇದನಿಃಶ್ವಾಸವಾತಕ ।**
**ಅಶೇಷಜಗದಾಧಾರ ಪರಮಾತ್ಮನ್ನಮೋಽಸ್ತುತೇ ॥ ೩೮ ॥**
**ಜಯ ಬ್ರಹ್ಮೇಂದ್ರರುದ್ರಾದಿದೇವೌಘಪ್ರಣತಾರ್ತಿನುತ್ ।**
**ಜಯಾಖಿಲ ಜಗದ್ಧಾಮನ್ನಂತರ್ಯಾಮಿನ್ನಮೋಽಸ್ತು ತೇ ॥ ೩೯ ॥**
**ಜಯ ನಿರ್ವ್ಯಾಜಕರುಣಾಪಾಥೋಧೇ ದೀನವತ್ಸಲ ।**
**ದೀನಾನಾಥೈಕಶರಣ ವಿಶ್ವಸಾಕ್ಷಿನ್ನಮೋಽಸ್ತುತೇ ॥ ೪೦ ॥**

೩೫. ಪರಮೇಶ್ವರನನ್ನು ಪಂಚೋಪಚಾರ ಪೂಜೆಯಿಂದ ಸೇವಿಸಿದ ಬಳಿಕ ಕೈಗಳನ್ನು ಮುಗಿದುಕೊಂಡು ಮುಂದೆ ಹೇಳುವ ಈ ಸ್ತೋತ್ರವನ್ನು ಹೇಳಿಕೊಳ್ಳಬೇಕು.

೩೬. "ದೇವದೇವ, ಜಗನ್ನಾಥ, ಸಂಸಾರಸಮುದ್ರದಿಂದ ಉದ್ಧಾರ ಮಾಡುವ ಓ ಪ್ರಭುವೇ! ನೀನು ಭಕ್ತರಲ್ಲಿ ಅನುಗ್ರಹವನ್ನು ತೋರಿ ಅವರನ್ನು ಪಾಲಿಸುವವನು. ದೇವ! ನಿನ್ನಡಿಗಳಲ್ಲಿ ಬಿದ್ದಿರುವ ನನ್ನನ್ನು ರಕ್ಷಿಸು.

೩೭. ಎಲೈ ಕೃಷ್ಣನೇ! ನೀನು ಭಕ್ತಾಭೀಷ್ಟಫಲಪ್ರದನಾಗಿ ಜಯಿಸು. ಜಗನ್ನಾಥ! ನಿನಗೆ ಜಯ ಜಯ!! ನೀನು ಸಮಸ್ತಪಾಪಗಳನ್ನೂ ನಾಶಗೊಳಿಸುವ ಪ್ರಭುವು. ಎಲೈ ಸ್ವಾಮಿಯೇ! ಸಮಸ್ತ ಜಗತ್ತುಗಳಿಂದಲೂ ನಮಸ್ಕರಿಸಲ್ಪಟ್ಟ ಅಡಿದಾವರೆಗಳುಳ್ಳ ನಿನ್ನನ್ನು ನಮಸ್ಕರಿಸುವೆನು.

೩೮. ಅನೇಕಕೋಟಿ ಬ್ರಹ್ಮಾಂಡನಾಯಕನಾದ ಎಲೈ ಪುರುಷೋತ್ತಮನೆ! ನಿಃಶ್ವಾಸಗಳೇ ವೇದಗಳಾಗಿರುವ ನೀನು ಸಮಸ್ತಲೋಕಗಳ ಅಭ್ಯುದಯಕ್ಕಾಗಿ ಜಯಶೀಲನಾಗು. ಸಕಲಲೋಕಗಳಿಗೂ ಆಧಾರನಾಗಿ, ಪರಮಾತ್ಮನಾಗಿರುವ ನಿನಗೆ ನಮಸ್ಕಾರವಿರಲಿ.

೩೯ ಬ್ರಹ್ಮರುದ್ರೇಂದ್ರಾದಿ ದೇವತೆಗಳ ಮತ್ತು ನೀನೇ ಶರಣೆಂದು ಬರುವ ಭಕ್ತಜನರ ಸಮಸ್ತ ಸಂಕಟಗಳನ್ನೂ ಪರಿಹರಿಸುವವನೂ, ಅಖಿಲ ಜಗದ್ಧಾಮನೂ, ಸಮಸ್ತಭೂತಗಳ ಅಂತರ್ಯಾಮಿಯೂ ಆದ ಓ ಜಗನ್ನಾಥನೆ! ಜಯ ಜಯ!!

೪೦. ನಿರ್ವ್ಯಾಜಕರುಣಾಸಾಗರನೂ, ದೀನವತ್ಸಲನೂ, ದೀನರಿಗೂ

**ಸಂಸಾರಸಿಂಧುಸಲಿಲೇ ಮೋಹಾವರ್ತೇ ಸುದುಸ್ತರೇ ।**
**ಷಡೂರ್ಮಿಕುಲದುಷ್ಪಾರೇ ಕುಕರ್ಮಗ್ರಾಹದಾರುಣೇ ॥ ೪೧ ॥**
**ನಿರಾಶ್ರಯೇ ನಿರಾಲಂಬೇ ನಿಃಸಾರೇ ದುಃಖಫೇನಿಲೇ ।**
**ತವ ಮಾಯಾಗುಣೈರ್ಬದ್ಧಮವಶಂ ಪತಿತಂ ತತಃ ॥ ೪೨ ॥**
**ಮಾಂ ಸಮುದ್ಧರ ದೇವೇಶ ಕೃಪಾಪಾಂಗವಿಲೋಕನೈಃ ।**
**ತತ್ರ ಮಗ್ನಂ ಸುರಶ್ರೇಷ್ಠ ಸುಪ್ರಸಾದಪ್ರಕಾಶಕ ॥ ೪೩ ॥**
**ಏಕ ಏವ ಜಗನ್ನಾಥ ಬಂಧುಸ್ತ್ವಂ ಭವಭೀರುಣಾಂ ।**
**ಭುಭುಕ್ಷಾ ಚ ಪಿಪಾಸಾ ಚ ಪ್ರಾಣಸ್ಯ ಮನಸಃ ಸ್ಮೃತೌ ॥ ೪೪ ॥**
**ಶೋಕಮೋಹೌ ಶರೀರಸ್ಯ ಜರಾಮೃತ್ಯುರ್ವಪುರ್ಭವಃ ।**
**ತ್ವತ್ಸೃಷ್ಟೌ ತ್ವಾದೃಶೋ ನಾಸ್ತಿ ಯೋ ದೀನಪರಿಪಾಲಕಃ ॥ ೪೫ ॥**
**ಅವತೀರ್ಣೋಽಸಿ ಲೋಕಾನಾಮನುಗ್ರಹಧಿಯಾ ವಿಭೋ ।**
**ಪೂರ್ಣಕಾಮಸ್ಯ ತೇ ನಾಥ ಕಿಮನ್ಯತ್ಕಾರಣಂ ಕ್ಷಿತೌ ॥ ೪೬ ॥**

---

ಅನಾಥರಿಗೂ ಶರಣ್ಯನೂ, ವಿಶ್ವಸಾಕ್ಷಿಯೂ ಆದ ಓ ಪರಮಾತ್ಮಾ! ಜಯ ಜಯ! ನಿನಗಿದೋ ನಮಸ್ಕಾರವು.

೪೧–೪೩. ಮೋಹವೆಂಬ ಸುಳಿಯೊಡಗೂಡಿ, ದಾಟಲಸದಳವಾಗಿ, ಅರಿಷಡ್ವರ್ಗಗಳೆಂಬ ಅಲೆಗಳಿಂದೊಪ್ಪಿ, ದುಷ್ಕರ್ಮಗಳೆಂಬ ಮೊಸಳೆಗಳು ತುಂಬಿ ಭಯಂಕರವಾಗಿ, ಯಾವೊಂದು ಆಶ್ರಯವೂ ಇಲ್ಲದೆ ನಿರಾಲಂಬವೂ, ನಿಃಸಾರವೂ ಆಗಿ, ದುಃಖವೆಂಬ ನೊರೆಯುಳ್ಳುದಾಗಿರುವ ಸಂಸಾರವೆಂಬ ಸಾಗರದ ಜಲದಲ್ಲಿ ನಿನ್ನ ಮಾಯೆಯೆಂಬ ಹಗ್ಗಗಳಿಂದ ಬಂಧಿತನಾಗಿ ಪ್ರಜ್ಞೆತಪ್ಪಿ ಬಿದ್ದಿರುವ ನನ್ನನ್ನು, ದೇವೇಶ್ವರನೂ, ಮಹಾನುಗ್ರಹವನ್ನು ಪ್ರಕಟಗೊಳಿಸುವ ಪ್ರಭುವೂ ಆದ ನೀನು ಕೃಪಾವಲೋಕನಗಳಿಂದ ನೋಡಿ ಕಾಪಾಡು.

೪೪–೪೫. ಎಲೈ ಜಗನ್ನಾಥನೇ! ಭವಸಾಗರಕ್ಕೆ ಸಿಕ್ಕಿ ಭಯಗೊಂಡಿರುವವರಿಗೆ ನೀನೊಬ್ಬನೇ ಬಂಧುವು. ಭವಭೀರುವಾದ ಮಾನವನಿಗೆ ಹಸಿವು ಬಾಯಾರಿಕೆಗಳು ಪ್ರಾಣಮನಸ್ಸುಗಳಿಂದಲೇ ಬೆಳೆದುಬಂದಿರುವುದು. ಶರೀರಕ್ಕೋ ಶೋಕಮೋಹಗಳಡಸಿಯೇ ಇರುವುವು. ಮುಪ್ಪು ಸಾವುಗಳಂತೂ ದೇಹದಲ್ಲಿಯೇ ಹುಟ್ಟಿದವುಗಳು. ಇಂತಹ ಮಾನವನು ನಿನ್ನನ್ನು ಸ್ಮರಿಸಿ ಉದ್ಧಾರವಾಗುವುದೆಂತು? ಇಂತಹ ದೀನಮಾನವರನ್ನು ಸಂರಕ್ಷಿಸುವವನು ನೀನಲ್ಲದೆ ನಿನ್ನ ಸೃಷ್ಟಿಯಲ್ಲಿ ಬೇರಾವನಿರುವನು?

೪೬. ಎಲೈ ಸರ್ವವ್ಯಾಪಿಯೇ! ನೀನು ಭಕ್ತರನ್ನು ಅನುಗ್ರಹಿಸಿ ಕಾಪಾಡಲೋಸುಗವೇ ಅವತಾರಮಾಡಿರುವೆ! ಹಾಗಲ್ಲದಿದ್ದರೆ ಪೂರ್ಣಕಾಮನಾದ ನೀನಿಂತು ಈ ಭೂಲೋಕದಲ್ಲವತರಿಸಲು ಬೇರಾವಕಾರಣವಿರುವುದು?

ತ್ವತ್ಪಾದಪದ್ಮಮಾಸಾದ್ಯ ನ ಚಿಂತಾಸ್ತಿ ಜಗತ್ಪತೇ ।
ಯತಸ್ತೇ ಚರಣಾಂಭೋಜಂ ಚತುರ್ವರ್ಗೈಕಸಾಧನಂ ॥ ೪೭ ॥
ದರ್ಶನಾತ್ಸರ್ವಲೋಕಾನಾಂ ಸರ್ವವಾಂಛಾಫಲಪ್ರದಂ ।
ತತಃ ಶೀರಧ್ವಜಂ ಶೇಷಮಂತ್ರೇಣ ಪರಿಪೂಜಯೇತ್ ॥ ೪೮ ॥
ದ್ವಾದಶಾಕ್ಷರ ಮಂತ್ರೇಣ ನಾಮ್ನಾ ವಾ ಪ್ರಣವಾದಿನಾ ।
ಏಕಾಗ್ರಮಾನಸೋ ಭೂತ್ವಾ ಪ್ರಣಿಪತ್ಯ ಪ್ರಸಾದಯೇತ್ ॥ ೪೯ ॥
ಜಯ ರಾಮ ಸದಾರಾಮ ಸಚ್ಚಿದಾನಂದವಿಗ್ರಹ ।
ಅವಿದ್ಯಾಪಂಕರಹಿತ ನಿರ್ಮಲಾಕೃತಯೇ ನಮಃ ॥ ೫೦ ॥
ಜಯಾಖಿಲ ಜಗದ್ಭಾರಧಾರಣಶ್ರಮವರ್ಜಿತ ।
ತಾಪತ್ರಯ ವಿಕರ್ಷಾಯ ಹಲಂ ಕಲಯತೇ ಸದಾ ॥ ೫೧ ॥
ಪ್ರಪನ್ನದೀನತ್ರಾಣಾಯ ಸ್ಫುರನ್ನೇತ್ರಸರೋರುಹ ।
ತ್ವಮೇವೇಶ ಪರಾಶೇಷಕಲುಷಕ್ಷಾಲನೇ ಪ್ರಭುಃ ॥ ೫೨ ॥

---

೪೭. ಓ ಜಗತ್ಪತಿಯೇ! ನಿನ್ನ ಪಾದಪದ್ಮಗಳನ್ನು ಆಶ್ರಯಿಸಿರುತ್ತೇನೆ. ಇನ್ನು ನನಗೆ ಯಾವ ಚಿಂತೆಯೂ ಇರುವುದಿಲ್ಲವು. ದೇವ! ನಿನ್ನ ಚರಣಕಮಲವು ಧರ್ಮಾದಿ ಚತುರ್ವಿಧಪುರುಷಾರ್ಥಗಳಿಗೆ ಸಾಧನವಾದುದಲ್ಲದೆ!

೪೮–೪೯. ಎಲೈ ಜಗನ್ನಾಥಸ್ವಾಮಿಯೇ! ನಿನ್ನ ಸಂದರ್ಶನವು ಸಮಸ್ತ ಜನರಿಗೂ ಸಕಲಾಭೀಷ್ಟಗಳನ್ನೂ ದಯೆಗೈವುದಾಗಿರುವುದು." ಎಲೈ ದ್ವಿಜರೇ! ಈ ರೀತಿ ಶ್ರೀಪುರುಷೋತ್ತಮನನ್ನು ಸ್ತುತಿಸಿದಬಳಿಕ ಆದಿಶೇಷನ ಮಂತ್ರವನ್ನು ಪುರಶ್ಚರಣೆಮಾಡಿಕೊಂಡಾಗಲಿ, ದ್ವಾದಶಾಕ್ಷರ ಮಂತ್ರಪುರಶ್ಚರಣೆಯಿಂದಾಗಲಿ, ಪ್ರಣವಪೂರ್ವಕವಾದ ದಿವ್ಯನಾಮಗಳಿಂದಾಗಲಿ ಬಲಭದ್ರದೇವನನ್ನು ಪೂಜಿಸಿ ಏಕಾಗ್ರಮನಸ್ಕನಾಗಿ ನಮಸ್ಕರಿಸಿ ಈ ಮುಂದೆ ಹೇಳುವ ಸ್ತೋತ್ರದಿಂದ ಪ್ರಸನ್ನನಾಗಿಸಬೇಕು.

೫೦. "ಎಲೈ ಬಲರಾಮನೇ! ಜಯ ಜಯ!! ಸತತವೂ ಬ್ರಹ್ಮಾನಂದ ಸ್ವರೂಪನೂ, ಸಚ್ಚಿದಾನಂದವಿಗ್ರಹನೂ, ಅವಿದ್ಯೆಯೆಂಬ ಕೆಸರ ಸೋಕಿಲ್ಲದವನೂ, ನಿರ್ಮಲಾಕೃತಿಯುಳ್ಳವನೂ ಆದ ನಿನಗೆ ನಮಸ್ಕಾರವು!

೫೧. ನೀನು ಸಮಸ್ತ ಜಗತ್ತಿನ ಭಾರವನ್ನು ಭರಿಸಿಯೂ ಯಾವ ಶ್ರಮವೂ ಇಲ್ಲದಿರುವೆ; ಭಕ್ತರ ತಾಪತ್ರಯಗಳನ್ನು ವಿಶೇಷವಾಗಿ ಸೆಳೆದುಹಾಕಲು ಯಾವಾಗಲೂ ನೇಗಿಲನ್ನು ಕೈಯಲ್ಲಿ ತಾಳಿರುವೆ; ಓ ಸ್ವಾಮಿ! ಜಯ ಜಯ!! ನಿನಗಿದೋ ನಮಸ್ಕಾರವು.

೫೨. ಶರಣಾಗತರಾದ ದೀನ ಜನರನ್ನು ಸಂರಕ್ಷಿಸುವವನೂ, ಸ್ಫುಟವಾದ ನೇತ್ರಕಮಲವುಳ್ಳವನೂ ಆದ ಓ ಬಲಭದ್ರದೇವನೇ! ನೀನೇ ಅಶೇಷಕಲುಷಗಳನ್ನೂ ತೊಳೆಯುವುದರಲ್ಲಿ ಅತ್ಯಂತ ಸಮರ್ಥನಾದವನು.

ಪ್ರಸನ್ನಕರುಣಾಸಿಂಧೋ ದೀನಬಂಧೋ ನಮೋಽಸ್ತು ತೇ ।
ಚರಾಚರಾ ಫಣಾಗ್ರೇಣ ಧೃತಾ ಯೇನ ವಸುಂಧರಾ ॥ ೫೩ ॥
ಮಾಮುದ್ಧರಾಸ್ಮಾದ್ದುಷ್ಪಾರಾದ್ಭವಾಂಬೋಧೇರಪಾರತಃ ।
ಪರಾಪರಾಣಾಂ ಪರಮ ಪರಮೇಶ ನಮೋಽಸ್ತು ತೇ ॥ ೫೪ ॥
ಸ್ತುತ್ವೈನಂ ನಾಗರಾಜಾನಂ ಬಲಂ ಮುಸಲಧಾರಿಣಂ ।
ಪೂಜಯೇಜ್ಜಗತಾಮಾದಿಕಾರಣಾಂ ಭದ್ರಲೋಚನಾಂ ॥ ೫೫ ॥
ಸ್ತುತ್ವಾ ಜಯಾಂ ತಾಂ ಭೋ ವಿಪ್ರಾಃ ಪ್ರಣಿಪತ್ಯ ಪ್ರಸಾದಯೇತ್ ।
ಜಯ ದೇವಿ ಮಹಾದೇವಿ ಪ್ರಸೀದ ಭವತಾರಿಣಿ ॥ ೫೬ ॥
ಸುಕಾರಣಿ ಶ್ರಿತವತಾಂ ಜಯಸಂತುಷ್ಟಿಕಾರಿಣಿ ।
ಕಾರ್ಯಂ ಕಾರ್ಯಸ್ವರೂಪಾಣಾಂ ಕಾರಣಾನಾಂ ಚ ಕಾರಣಂ ।
ಧಾರಣಾಂ ಧಾರ್ಯಮಾಣಾನಾಂ ತ್ವಾಮಾದಿಂ ಪ್ರಣಮಾಮ್ಯಹಂ॥ ೫೭ ॥
ವಕ್ಷಸ್ಥಲಸ್ಥಿತಾಂ ವಿಷ್ಣೋಃ ಶಂಭೋರರ್ಧಾಂಗಧಾರಿಣೀಂ ।
ಪದ್ಮಯೋನಿಮುಖಾಧ್ಯಸ್ತಾಂ ಪ್ರಣಮಾಮಿ ಜಗತ್ಪ್ರಿಯಾಂ ॥ ೫೮ ॥

೫೩. ಪ್ರಸನ್ನಕರುಣಾಸಮುದ್ರನೇ, ದೀನಬಂಧುವೆ! ನಿನಗೆ ನಮಸ್ಕಾರವು. ಫಣಾಗ್ರದಿಂದಲೇ ಚರಾಚರಜಗತ್ತನ್ನು ಧರಿಸಿರುವ ನಿನಗಿದೋ ನತಿಯು!

೫೪. ದಾಟಲಶಕ್ಯವೂ, ಪಾರವಿಲ್ಲದುದೂ ಆದ ಈ ಭವಸಾಗರದಿಂದ ನನ್ನನ್ನು ಉದ್ಧರಿಸಿ ಕಾಪಾಡು. ಪರಾಪರವಸ್ತುಗಳೆಲ್ಲಕ್ಕಿಂತಲೂ ಶ್ರೇಷ್ಠನಾಗಿಯೂ ಪರಮೇಶ್ವರನಾಗಿಯೂ ಇರುವ ಓ ಬಲಭದ್ರನೇ! ನಿನಗೆ ನಮಸ್ಕಾರವು.''

೫೫. ಎಲೈ ವಿಪ್ರರೇ! ಮುಸಲಧರನೂ, ನಾಗರಾಜನೂ ಆದ ಶ್ರೀಬಲದೇವನನ್ನಿಂತು ಸ್ತುತಿಸಿದ ಬಳಿಕ ಜಗತ್ತಿಗೆ ಆದಿಕಾರಿಣಿಯೂ, ಜಗನ್ಮಾತೆಯೂ, ಮಂಗಳಲೋಚನೆಯೂ ಆದ ಸುಭದ್ರಾದೇವಿಯನ್ನು ಪೂಜಿಸಬೇಕು. ಜಯರೂಪಿಣಿಯಾದ ಆ ದೇವಿಯನ್ನು ಪೂಜಿಸಿದ ತರುವಾಯ ಈ ಮುಂದೆ ಹೇಳುವ ಸ್ತುತಿಯಿಂದ ಸ್ತುತಿಸಿ ಪ್ರಸನ್ನಗೊಳಿಸಬೇಕು.

೫೬. ''ದೇವಿ, ಮಹಾದೇವಿ, ಜಯ ಜಯ!! ಭವಸಾಗರದಿಂದ ಭಕ್ತರನ್ನು ಕಡೆಹಾಯಿಸುವವಳಾಗಿ, ಸುಖದ ಉತ್ಪತ್ತಿಸ್ಥಾನವಾಗಿ, ನಿನ್ನನ್ನು ಆಶ್ರಯಿಸಿ ಭಜಿಸುವವರಿಗೆ ಸಂತೋಷವನ್ನುಂಟುಮಾಡುವವಳು ನೀನು. ಓ ತಾಯಿ! ಪ್ರಸನ್ನಳಾಗು; ನಿನಗಿದೋ ನಮಸ್ಕಾರವು.

೫೭–೫೮. ಕಾರ್ಯಸ್ವರೂಪಗಳಿಗೆಲ್ಲಕ್ಕೂ ನೀನೇ ಕಾರ್ಯರೂಪಿಣಿಯಾಗಿ, ಎಲ್ಲ ಕಾರಣಗಳಿಗೂ, ಕಾರಣರೂಪಿಣಿಯಾಗಿ, ಧರಿಸಬೇಕಾದ ಸಮಸ್ತಕ್ಕೂ ನೀನೇ ಧಾರಣಾರೂಪಿಣಿಯಾಗಿ ಬೆಳಗುತ್ತಿರುವೆ! ದೇವಿ!! ಆದಿಶಕ್ತಿಯಾದ ನಿನ್ನನ್ನು ನಮಸ್ಕರಿಸುತ್ತೇನೆ. ಶ್ರೀಮಹಾವಿಷ್ಣುವಿನ ವಕ್ಷಸ್ಥದಲ್ಲಿ ನೆಲಸಿರು

ಸೃಷ್ಟಿಸ್ಥಿತಿವಿನಾಶಾದಿಕರ್ಮಣಾಂ ಪರಮಾತ್ಮನಃ ।
ತ್ವಮೇವ ಶಕ್ತಿರತುಲಾ ತ್ವಾಂ ವಿನಾ ಸೋऽಪಿ ನೇಶ್ವರಃ ॥ ೫೯ ॥
ತ್ವಾಂ ಸರ್ವಲೋಕಜನನೀಂ ವಿಷ್ಣುಮಾಯಾಂ ತಪಸ್ವಿನೀಂ ।
ಸುಭದ್ರಾಂ ಭದ್ರರೂಪಾಂ ತಾಂ ಮೂಲಭೂತಾಂ ನಮಾಮ್ಯಹಂ ॥ ೬೦ ॥
ತತಃ ಸಾಗರಸ್ನಾನಾಯ ಪ್ರಾರ್ಥಯೇತ್ಪುರುಷೋತ್ತಮಂ ॥ ೬೧ ॥
ನಮಸ್ತೇ ಭಗವನ್ವಿಷ್ಣೋ ಜಗದ್ವ್ಯಾಪಿನ್ ಚರಾಚರ ।
ನಿರ್ವಿಘ್ನಂ ಸಿದ್ಧಿಮಾಯಾತು ಸಿಂಧುಸ್ನಾನಂ ಮಮ ಪ್ರಭೋ ॥ ೬೨ ॥
ನಮಸ್ತೇ ಜಗತಾಮೀಶ ಶಂಖಚಕ್ರಗದಾಧರ ।
ದೇಹಿ ದೇವ ಮಮಾನುಜ್ಞಾಂ ತವ ತೀರ್ಥನಿಷೇವಣಾತ್ ॥ ೬೩ ॥
ತತೋ ಮೌನಂ ವ್ರಜೇದ್ವಿಷ್ಣುಂ ಚಿಂತಯನ್ ಸರಿತಾಂ ಪತಿಂ ।
ಉಗ್ರಸೇನಂ ಸ್ಥಿತಂ ಮಾರ್ಗೇ ಅನುಜ್ಞಾಪ್ಯ ಸಮಾಹಿತಃ ॥ ೬೪ ॥

---

ಮವಳೂ, ಶ್ರೀಶಂಭುವಿನ ಅರ್ಧಾಂಗವನ್ನು ಧರಿಸಿರುವವಳೂ, ಪದ್ಮಯೋನಿಯಾದ ಚತುರಾನನ ಮುಖಕಮಲದಲ್ಲಿ ನೆಲಸಿರುವವಳೂ, ಜಗತ್ಪ್ರಿಯೆಯೂ ಆದ ನಿನ್ನನ್ನು ನಮಸ್ಕರಿಸುತ್ತೇನೆ.

೫೯. ಎಲೌ ಭದ್ರಾದೇವಿಯೇ! ಪರಮಾತ್ಮನಾದ ಶ್ರೀಜಗನ್ನಾಥನೆಸಗುವ ಸೃಷ್ಟಿಸ್ಥಿತಿಲಯಕಾರ್ಯಗಳಿಗೆ ನೀನೊಬ್ಬಳೇ ಅಸದೃಶವಾದ ಶಕ್ತಿಯನ್ನು ದಯೆಗೈಯುವವಳಾಗಿರುವೆ. ನೀನಿಲ್ಲದಿದ್ದರೆ, ಓ ತಾಯಿ! ಜಗನ್ನಾಥನು ಆ ಕಾರ್ಯಗಳನ್ನು ಮಾಡಲು ಸಮರ್ಥನಲ್ಲವು!

೬೦. ಎಲೌ ತಾಯೇ! ಸಮಸ್ತಲೋಕಗಳಿಗೆ ಜನನಿಯೂ, ವಿಷ್ಣುಮಾಯೆಯೂ, ಸತತವೂ ತಪಸ್ಸಂಪನ್ನೆಯೂ, ಸುಭದ್ರೆಯೂ, ಮಂಗಳರೂಪಿಣಿಯೂ, ಸಮಸ್ತಕ್ಕೂ ಮೂಲಭೂತೆಯೂ ಆದ ನಿನ್ನನ್ನು ನಮಸ್ಕರಿಸುತ್ತೇನೆ.''

೬೧. ಇಂತು ಸುಭದ್ರಾದೇವಿಯನ್ನು ಸ್ತುತಿಸಿದಮೇಲೆ ಸಮುದ್ರಸ್ನಾನವನ್ನು ಮಾಡಲೋಸುಗ ಶ್ರೀಪುರುಷೋತ್ತಮನನ್ನಿಂತು ಪ್ರಾರ್ಥಿಸಬೇಕು.

೬೨. '' ಎಲೈ ಷಡ್ಗುಣೈಶ್ವರ್ಯಪರಿಪೂರ್ಣನೂ, ಜಗದ್ವ್ಯಾಪಿಯೂ, ಚರಾಚರಸ್ವರೂಪಿಯೂ ಆದ ವಿಷ್ಣುವೇ, ಪ್ರಭೂ! ನಾನೆಸಗುವ ಸಮುದ್ರಸ್ನಾನವು ನನಗೆ ಸಿದ್ಧಿಯನ್ನುಂಟುಮಾಡಲಿ!!

೬೩. ಜಗದೀಶ! ಶಂಖಚಕ್ರಗದಾಧರ, ನಿನಗೆ ನಮೋನಮಃ; ಪ್ರಭುವೇ! ಸಮುದ್ರಸ್ನಾನಮಾಡಲು ನನಗೆ ಅಪ್ಪಣೆಯನ್ನು ಕೊಡು.''

೬೪. ಅಯ್ಯಾ ದ್ವಿಜರೇ! ತರುವಾಯ ವ್ರತಿಯಾದ ಮಾನವನು ಮೌನವಾಗಿ ಆ ಮಹಾವಿಷ್ಣುವನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ ಸಾಗರದ ಬಳಿಗೈದಬೇಕು. ವ್ರತಿಯಾದವನು ಸಮುದ್ರಕ್ಕೆ ಹೋಗುವ ದಾರಿಯಲ್ಲಿಯೇ ನೆಲಸಿರುವ

ಉಗ್ರಸೇನ ಮಹಾಬಾಹೋ ಬಲವನ್ನುಗ್ರವಿಕ್ರಮ ।
ಲಬ್ಧ್ವಾ ವರಂ ಸುಪ್ರಸನ್ನಾತ್ಸಮುದ್ರತಟಮಾಸ್ಥಿತಃ ॥ ೬೫ ॥
ತೀರ್ಥರಾಜಕೃತಸ್ನಾನಸುಸಂಪೂರ್ಣಫಲಪ್ರದ ।
ಸಿಂಧುಸ್ನಾನಂ ಕರಿಷ್ಯಾಮಿ ಅನುಜ್ಞಾಂ ದಾತುಮರ್ಹಸಿ ॥ ೬೬ ॥
ತತೋ ಗಚ್ಛೇದ್ದ್ವಿಜಶ್ರೇಷ್ಠಾಃ ಸ್ವರ್ಗದ್ವಾರಂ ತತಃ ಪರಂ ।
ಯೇನ ದೇವಾಃ ಸಮಾಯಾಂತಿ ಕ್ಷೇತ್ರೇಽಸ್ಮಿನ್ ಪುರುಷೋತ್ತಮೇ ॥
ಭೂಸ್ವರ್ಗೇ ಜಗದೀಶಸ್ಯ ದರ್ಶನಾಯ ದಿನೇದಿನೇ ।
ಸ್ವರ್ಗಾವತಾರಮಾರ್ಗೇಣ ತತ್ರಸ್ಥೌ ನಾಂ ನಮಾಮ್ಯಹಂ ॥ ೬೮ ॥
ಮಾಮುಪ್ಯೂರ್ಧ್ವಂ ನಯೇತಾಂ ವೈ ಸಾಕ್ಷಿಣೋ ಕರ್ಮಣಾಂ ಸತಾಂ ।
ಸಾಗರಾಂಭಃಸಮುತ್ಪನ್ನೌ ಶ್ರೇಷ್ಠೌ ಸರ್ವಗುಣಾನ್ವಿತೌ ॥ ೬೯ ॥

---

ಉಗ್ರಸೇನನ ಅಪ್ಪಣೆಯನ್ನೂ ಸಮಾಧಾನ ಮನಸ್ಸಿನಿಂದ ಈ ರೀತಿ ಕೇಳಿಕೊಳ್ಳಬೇಕು.

೬೫-೬೬. "ಮಹಾಬಾಹುವೂ, ಮಹಾಬಲನೂ, ಉಗ್ರಪರಾಕ್ರಮಿಯೂ ಆದ ಎಲೈ ಉಗ್ರಸೇನ ಮಹಾರಾಜನೇ! ನಾನು ಸುಪ್ರಸನ್ನಮೂರ್ತಿಯಾದ ಶ್ರೀ ಜಗನ್ನಾಥಪ್ರಭುವಿನ ಅಪ್ಪಣೆಯನ್ನು ಪಡೆದು ಸ್ನಾನಾರ್ಥವಾಗಿ ಸಾಗರದ ತೀರಕ್ಕೆ ಬಂದಿರುವೆನು. ತೀರ್ಥರಾಜವೆನಿಸಿದ ಈ ಸಾಗರದ ಸ್ನಾನದಿಂದುಂಟಾಗುವ ಸಮಸ್ತ ಫಲವನ್ನೂ ಸಂಪೂರ್ಣವಾಗಿ ದೊರಕಿಸುವ ಎಲೈ ಉಗ್ರಸೇನನೇ! ನಾನೀಗ ಸಮುದ್ರಸ್ನಾನವನ್ನು ಮಾಡುವೆನು. ಯಾದವೋತ್ತಮನಾದ ನೀನು ನನಗೆ ಅನುಜ್ಞೆಯನ್ನು ದಯೆಪಾಲಿಸು."

೬೭-೬೮. ಎಲೈ ದ್ವಿಜಶ್ರೇಷ್ಠರೇ! ಇದಾದ ಬಳಿಕ ವ್ರತಿಯಾದ ಯಾತ್ರಿಕನು ಅಲ್ಲಿಂದ ಮುಂದಕ್ಕಿರುವ ಸ್ವರ್ಗದ್ವಾರಕ್ಕೆ ಹೋಗಿ ಅಲ್ಲಿಯ ದ್ವಾರಪಾಲಕರನ್ನೀರೀತಿ ಪ್ರಾರ್ಥಿಸಬೇಕು; "ಎಲೈ ದ್ವಾರಪಾಲಕರೇ! ಯಾವುದರಮೂಲಕ ಈ ದೇವತೆಗಳೆಲ್ಲರೂ ಪ್ರತಿನಿತ್ಯವೂ ಸ್ವರ್ಗದಿಂದೈತರುವವರಾಗಿ ಭೂಸ್ವರ್ಗವೆನಿಸಿದ ಈ ಪುರುಷೋತ್ತಮಕ್ಷೇತ್ರಕ್ಕೆ ಶ್ರೀಜಗನ್ನಾಥನ ದರ್ಶನಕ್ಕಾಗಿ ಬರುತ್ತಾರೆಯೋ ಅಂತಹ ಈ ದ್ವಾರವನ್ನು ರಕ್ಷಿಸುವವರಾದ ನಿಮ್ಮಿಬ್ಬರನ್ನೂ ನಮಸ್ಕರಿಸುತ್ತೇನೆ.

೬೯. ಸತ್ಪುರುಷರ ಸತ್ಕರ್ಮಗಳಿಗೆ ಸಾಕ್ಷಿಗಳಾಗಿರುವ ನೀವೀರ್ವರೂ ನನ್ನನ್ನೂ ಉತ್ತಮವಾದ ಊರ್ಧ್ವಲೋಕಗಳಿಗೆ ಕರೆದೊಯ್ಯಿರಿ. ನೀವು ಸಮುದ್ರಜಲದಿಂದಾವಿರ್ಭವಿಸಿದವರು. ಸಮಸ್ತ ಸದ್ಗುಣಗಳನ್ನೂ ಪಡೆದಿರುವ ಸರ್ವಶ್ರೇಷ್ಠರು.

ಮಧ್ಯೇನ ಯುವಯೋರ್ಯಾಮಿ ಸ್ವರ್ಗದ್ವಾರಮಪಾವೃತಂ ।
ಪ್ರಾರ್ಥಯಿತ್ವಾ ತತೋ ಗಚ್ಛೇತ್ತೀರ್ಥರಾಜಸ್ಯ ಸನ್ನಿಧಿಂ ॥ ೨೦ ॥
ಯಂ ದೃಷ್ಟ್ವಾ ದೂರತಃ ಪಾಪಾನ್ಮುಚ್ಯತೇ ಮಹತೋ ಧ್ರುವಂ ।
ಪ್ರಕ್ಷಾಲಿತಕರಾಂಘ್ರಿಕ ಆಚಾಂತಃ ಶುಚಿವಿಷ್ಟರೇ ॥ ೨೧ ॥
ಆಸೀನಃ ಪ್ರಾಙ್ಮುಖೋ ಭೂತ್ವಾ ಲಿಖೇನ್ಮಂಡಲಮಗ್ರತಃ ।
ಚತುರಸ್ರಂ ಚತುರ್ದ್ವಾರಂ ಚತುಸ್ಸ್ವಸ್ತಿಕಕೋಣಕಂ ॥ ೨೨ ॥
ತನ್ಮಧ್ಯೇ ವಿಲಿಖೇತ್ಪದ್ಮಮಷ್ಟಪತ್ರಸುಶೋಭನಂ ।
ತತೋಽಷ್ಟಾಕ್ಷರಮಂತ್ರಂ ತು ಕರಯೋಶ್ಚ ತನೌ ನ್ಯಸೇತ್ ॥ ೨೩ ॥
ಷಡ್ಭಿರ್ವರ್ಣೈಃಷ್ಷಡಂಗಾನಾಂ ನ್ಯಾಸಃ ಪ್ರೋಕ್ತೋ ಮನೀಷಿಭಿಃ ।
ಶೇಷೌ ಕುಕ್ಷೌ ಚ ಪೃಷ್ಟೇ ಚ ನ್ಯಸ್ತವ್ಯೌ ಚ ತತಃ ಪುನಃ ॥ ೨೪ ॥
ಪಾದಯೋರ್ಜಂಘಯೋರೂರ್ವೋಃ ಸ್ಫಿಚೋಶ್ಚ ಪಾರ್ಶ್ವಯೋಃ ಪುನಃ ।
ನಾಭೌ ಪೃಷ್ಟೇ ಬಾಹುಯುಗ್ಮೇ ಹೃದಿ ಕಂಠೇ ಚ ಕಕ್ಷಯೋಃ ॥ ೨೫ ॥
ಓಷ್ಠಯೋಃ ಕರ್ಣಯೋರಕ್ಷ್ಣೋರ್ಗಂಡಯೋರ್ನಾಸಯೋಸ್ತಥಾ ।
ಭ್ರುವೋರ್ಲಲಾಟೇ ಶಿರಸಿ ಮಂತ್ರವರ್ಣಾನ್ಯಥಾಕ್ರಮಂ ॥ ೨೬ ॥

---

೨೦. ಪ್ರಕೃತದಲ್ಲಿ ನಾನು ನಿಮ್ಮಿರ್ವರ ನಡುವೆ ಹೋಗುವೆನು. ನನ್ನ ಮೇಲೆ ದಯೆಯಿಟ್ಟು ಸ್ವರ್ಗದ ಬಾಗಿಲನ್ನು ತೆರೆಯಿರಿ.''

೨೧. ಈ ಪ್ರಕಾರ ಪ್ರಾರ್ಥಿಸಿದ ಬಳಿಕ ಯಾವುದನ್ನು ದೂರದಿಂದ ನೋಡಿ ದೊಡನೆಯೆ ಮಾನವನು ಮಹತ್ತರವಾದ ಪಾಪದಿಂದ ದಿಟವಾಗಿಯೂ ಬಿಡುಗಡೆ ಹೊಂದುತ್ತಾನೆಯೋ ಅಂತಹ ತೀರ್ಥರಾಜವೆನಿಸಿದ ಸಾಗರದ ಸನ್ನಿಧಿಗೆ ಬರಬೇಕು.

೨೨–೨೩. ಇಂತು ಸಾಗರದ ಸಮೀಪಕ್ಕೆ ಹೋಗಿ ಕೈಕಾಲುಗಳನ್ನು ತೊಳೆದು ಕೊಂಡು ಆಚಮನವಮಾಡಿ ನಿರ್ಮಲವಾದ ಆಸನದಲ್ಲಿ ಪೂರ್ವಾಭಿಮುಖವಾಗಿ ಕುಳಿತು ತನ್ನ ಮುಂದೆ ಚಚ್ಚೌಕವೂ, ಚತುರ್ದ್ವಾರವೂ, ನಾಲ್ಕುಮೂಲೆ ಗಳಲ್ಲಿಯೂ, ನಾಲ್ಕು ಸ್ವಸ್ತಿಕಗಳುಳ್ಳದೂ ಆದ ಮಂಡಲವನ್ನು ಬರೆಯಬೇಕು. ಆ ಮಂಡಲದ ಮಧ್ಯದಲ್ಲಿ ಮಂಗಳಕರವಾದ ಅಷ್ಟದಳಪದ್ಮವನ್ನು ಬರೆದು ಅಷ್ಟಾಕ್ಷರ ಮಂತ್ರವನ್ನು ಜಪಿಸಿ ಅಂಗನ್ಯಾಸಕರನ್ಯಾಸವಮಾಡತಕ್ಕದು.

೨೪–೨೬. ಮಂತ್ರದ ಆರು ಅಕ್ಷರಗಳಿಂದ ಷಡಂಗನ್ಯಾಸವನ್ನು ಮಾಡ ಬೇಕೆಂದು ತಿಳಿದವರು ಹೇಳುತ್ತಾರೆ. ಷಡಂಗನ್ಯಾಸವಾದ ಮೇಲೆ ಉಳಿದೆರಡು ಮಂತ್ರವರ್ಣಗಳನ್ನು ಕುಕ್ಷಿ ಮತ್ತು ಪೃಷ್ಠದಲ್ಲಿ ನ್ಯಾಸಗೊಳಿಸಬೇಕು. ಇದಾದ ಬಳಿಕ ಪಾದಗಳು, ಜಂಘೆಗಳು, ಊರುಗಳು, ಸ್ಫಿಕ್ಕುಗಳು (ಪೃಷ್ಠಭಾಗಗಳು), ಪಾರ್ಶ್ವಗಳು, ಪುನಃ ನಾಭಿ, ಪೃಷ್ಠ, ಬಾಹುಗಳು, ಹೃದಯ, ಕಂಠ, ಕೊಂಕುಳು,

ವಿನ್ಯಸ್ಯ ವ್ಯಾಪಕಂ ಸರ್ವೈರ್ನ್ಯಾಸಂ ಕುರ್ಯಾತ್ಸಮಾಹಿತಃ ।
ಪ್ರಾಣಾಯಾಮತ್ರಯಂ ಕುರ್ಯಾನ್ಮೂಲೇನ ಪಂಚವಿಂಶತಿಂ ॥ ೭೭ ॥
ಬಧ್ನೀಯಾತ್ಕವಚಂ ದಿವ್ಯಂ ಸರ್ವಪಾಪಾಪನೋದನಂ ।
ಪೂರ್ವೇ ಮಾಂ ಪಾತು ಗೋವಿಂದೋ ವಾರಿಜಾಕ್ಷಸ್ತು ದಕ್ಷಿಣೇ ॥
ಪ್ರದ್ಯುಮ್ನಃ ಪಶ್ಚಿಮೇ ಪಾತು ಹೃಷೀಕೇಶಸ್ತಥೋತ್ತರೇ ।
ಆಗ್ನೇಯ್ಯಾಂ ನರಸಿಂಹಸ್ತು ನೈರುತ್ಯಾಂ ಮಧುಸೂದನಃ ॥ ೭೯ ॥
ವಾಯವ್ಯಾಂ ಶ್ರೀಧರಃ ಪಾತು ಈಶಾನ್ಯಾಂ ಚ ಗದಾಧರಃ ।
ಊರ್ಧ್ವಂ ತ್ರಿವಿಕ್ರಮಃ ಪಾತು ಅಧೋ ವಾರಾಹರೂಪಧೃಕ್ ॥ ೮೦ ॥
ಸರ್ವತ್ರ ಪಾತು ಮಾಂ ದೇವಃ ಶಂಖಚಕ್ರಗದಾಧರಃ ।
ನಾರಾಯಣೋ ಮನಃ ಪಾತು ಚೈತನ್ಯಂ ಗರುಡಧ್ವಜಃ ॥ ೮೧ ॥
ಪಾತು ಮೇ ಬುದ್ಧ್ಯಹಂಕಾರೌ ತ್ರಿಗುಣಾತ್ಮಾ ಜನಾರ್ದನಃ ।
ಇಂದ್ರಿಯಾಣಿ ಸದಾ ಪಾತು ದೈತ್ಯವರ್ಗನಿಕೃಂತನಃ ।
ಏವಂ ಬದ್ಧ್ವಾ ಚ ಕವಚಂ ನಿಷ್ಪಾಪೋ ಜಾಯತೇ ಪುಮಾನ್ ॥ ೮೨ ॥

---

ಓಷ್ಠ, ಕಿವಿಗಳು, ಕಣ್ಣುಗಳು, ಗಂಡಸ್ಥಳ, ಮೂಗಿನ ಹೊಳ್ಳೆಗಳು, ಹುಬ್ಬುಗಳು, ಹಣೆ, ಶಿರಸ್ಸು, ಈ ಎಲ್ಲೆಡೆಗಳಲ್ಲಿಯೂ ಮಂತ್ರವರ್ಣಗಳನ್ನು ಯಥಾಕ್ರಮವಾಗಿ ನ್ಯಾಸಮಾಡಬೇಕು.

೭೭–೭೮. ಬಳಿಕ ಎಲ್ಲ ಮಂತ್ರವರ್ಣಗಳಿಂದಲೂ ಸಮಾಹಿತಮನಸ್ಕನಾಗಿ ವ್ಯಾಪಕನ್ಯಾಸವನ್ನೆಸಗಿ, ಮೂರಾವೃತ್ತಿ ಪ್ರಾಣಾಯಾಮವನ್ನು ಮಾಡಬೇಕು. ತರುವಾಯ ಇಪ್ಪತ್ತೈದುಸಲ ಮೂಲಮಂತ್ರವನ್ನು ಪುರಶ್ಚರಣೆಮಾಡಿ ಸಮಸ್ತ ಪಾಪಗಳನ್ನು ನಿವಾರಣೆಮಾಡುವ ದಿವ್ಯಕವಚವನ್ನಿಂತು ಕಟ್ಟಬೇಕು. "ಪೂರ್ವ ದಿಕ್ಕಿನಲ್ಲಿ ಗೋವಿಂದನು ನನ್ನನ್ನು ಪಾಲಿಸಲಿ: ದಕ್ಷಿಣದಿಕ್ಕಿನಲ್ಲಿ ವಾರಿಜಾಕ್ಷನು ನನ್ನನ್ನು ರಕ್ಷಿಸಲಿ.

೭೯. ಪ್ರದ್ಯುಮ್ನನು ಪಶ್ಚಿಮದಲ್ಲಿಯೂ, ಹೃಷೀಕೇಶನು ಉತ್ತರದಲ್ಲಿಯೂ, ಆಗ್ನೇಯದಲ್ಲಿ ನರಸಿಂಹನೂ, ನೈಋತ್ಯದಲ್ಲಿ ಮಧುಸೂದನನೂ ನನ್ನನ್ನು ಕಾಪಾಡಲಿ.

೮೦–೮೧. ವಾಯುವ್ಯದಲ್ಲಿ ಶ್ರೀಧರನೂ, ಈಶಾನ್ಯದಲ್ಲಿ ಗದಾಧರನೂ, ಊರ್ಧ್ವದಲ್ಲಿ ತ್ರಿವಿಕ್ರಮನೂ, ಅಧೋಭಾಗದಲ್ಲಿ ವರಾಹರೂಪಿಯೂ ರಕ್ಷಿಸಲಿ. ಶಂಖಚಕ್ರಗದಾಧರನಾದ ಸ್ವಾಮಿಯು ನನ್ನನ್ನು ಎಲ್ಲೆಡೆಯೂ ಸಂರಕ್ಷಿಸಲಿ. ಶ್ರೀಮನ್ನಾರಾಯಣನು ನನ್ನ ಮನಸ್ಸನ್ನು ಕಾಯಲಿ; ಚೈತನ್ಯವನ್ನು ಗರುಡಧ್ವಜನು ಸಲಹಲಿ.

೮೨. ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರುಗುಣಗಳನ್ನೊಳಕೊಂಡಿರುವ

ಷೋಡಶೈರುಪಚಾರೈಶ್ಚ ಮನಸಾ ಕಲ್ಪಿತೈರ್ನರಃ ॥ ೮೩ ॥
ಪುರುಷೋತ್ತಮಂ ಪೂಜಯಿತ್ವಾ ಯಥಾವದ್ವಿಧಿತೋ ದ್ವಿಜಾಃ ।
ಆವಾಹ್ಯ ಮಂಡಲೇ ತಸ್ಮಿನ್ ದೇವದೇವಮನಾಮಯಂ ॥ ೮೪ ॥
ಪೂಜಯಿತ್ವಾ ವಿಧಾನೇನ ಯಥಾಶಕ್ತ್ಯುಪಬೃಂಹಿತೈಃ ।
ಆತ್ಮಾನಂ ತೀರ್ಥರಾಜಸ್ಯ ದೇವದೇವಸ್ಯ ಚಿಂತಯನ್ ॥ ೮೫ ॥
ಏವಂ ಬದ್ಧಾಂಜಲಿಪುಟಿವಿಮಂ ಮಂತ್ರಮುದೀರಯೇತ್ ।
ಸುದರ್ಶನ ನಮಸ್ತೇಽಸ್ತು ಕೋಟಿಸೂರ್ಯಸಮಪ್ರಭ ।
ಅಜ್ಞಾನತಿಮಿರಾಂಧಸ್ಯ ವಿಷ್ಣೋರ್ಮಾರ್ಗಂ ಪ್ರದರ್ಶಯ ॥ ೮೬ ॥
ಏವಂ ಸಂಪ್ರಾರ್ಥ್ಯ ಭೋ ವಿಪ್ರಾಸ್ತೀರ್ಥರಾಜಜಲಾಂತಿಕೇ ॥ ೮೭ ॥
ಜಾನುಭ್ಯಾಮವನಿಂ ಗತ್ವಾ ಪ್ರಣಮೇದ್ಭಕ್ತಿಭಾವಿತಃ ।
ತೀರ್ಥರಾಜ ನಮಸ್ತುಭ್ಯಂ ಜಲರೂಪಾಯ ವಿಷ್ಣವೇ ॥ ೮೮ ॥

---

ಜನಾರ್ದನನು ನನ್ನ ಬುದ್ಧಿ ಮತ್ತು ಅಹಂಕಾರಗಳನ್ನೂ, ದೈತ್ಯಸಮೂಹವನ್ನೂ ಕುಟ್ಟಿ ಕೆಡವಿದ ಭಗವಂತನು ನನ್ನ ಇಂದ್ರಿಯಗಳನ್ನೂ ಕಾಪಾಡಲಿ.'' ಎಲೈ ವಿಪ್ರರೇ! ಈ ರೀತಿಯಾದ ಕವಚವನ್ನು ತೊಟ್ಟುದಾದರೆ ಮಾನವನು ಪಾಪ ರಹಿತನಾಗುತ್ತಾನೆ.

೮೩–೮೪. ಆಬಳಿಕ ಮಾನಸಿಕವಾಗಿ ಕಲ್ಪನೆಮಾಡಿದ ಷೋಡಶೋಪಚಾರ ಪೂಜೆಯನ್ನಾಪರಮಾತ್ಮನಿಗೆಸಗಬೇಕು. ತರುವಾಯ ಹಿಂದೆ ನಿರೂಪಿಸಿದ ಮಂಡಲದಲ್ಲಿ ಅನಾಮಯನೂ, ದೇವದೇವನೂ ಆದ ಜಗನ್ನಾಥಸ್ವಾಮಿಯನ್ನು ಯಥಾಶಾಸ್ತ್ರವಾಗಿ ಆವಾಹನೆಮಾಡಿ ಪೂಜಿಸಬೇಕು.

೮೫–೮೬. ಈ ರೀತಿ ವಿಧ್ಯುಕ್ತವಾಗಿಯೂ, ಯಥಾಶಕ್ತಿಯಾಗಿಯೂ ಆ ಪರಮಾತ್ಮನನ್ನು ಪೂಜಿಸಿದ ಮೇಲೆ ತನ್ನನ್ನೂ, ತೀರ್ಥರಾಜವಾದ ಸಾಗರವನ್ನೂ, ದೇವದೇವನಾದ ಜಗನ್ನಾಥನನ್ನೂ ಧ್ಯಾನಿಸಿ ಬದ್ಧಾಂಜಲಿಪುಟನಾಗಿ ಈ ಮಂತ್ರವನ್ನು ಹೇಳಬೇಕು :— ''ಎಲೈ ಸುದರ್ಶನಮೂರ್ತಿಯೇ! ಕೋಟಿಸೂರ್ಯರಿಗೆ ಸಮಾನವಾದ ಪ್ರಭೆಯುಳ್ಳ ನಿನಿಗಿದೋ ನಮಸ್ಕಾರವು. ಅಜ್ಞಾನವೆಂಬ ಕತ್ತಲೆಯಿಂದ ಕುರುಡಾಗಿ ದಾರಿಗಾಣದಿರುವ ನನಗೆ ಶ್ರೀಮಹಾವಿಷ್ಣುವಿರುವ ಪದವಿಗೆ ಮಾರ್ಗವನ್ನು ತೋರುವವನಾಗು.''

೮೭–೮೮. ಎಲೈ ವಿಪ್ರರೇ! ಈ ಪ್ರಕಾರವಾಗಿ ಪ್ರಾರ್ಥಿಸಿ ತೀರ್ಥರಾಜವಾದ ಸಾಗರದ ಜಲದ ಬಳಿಗೆ ಹೋಗಿ ಮೊಣಕಾಲುಗಳನ್ನೂರಿ ಭಕ್ತಿಭಾವಪೂರಿತನಾಗಿ ನಮಸ್ಕರಿಸಬೇಕು. ''ಎಲೈ ತೀರ್ಥರಾಜನೇ! ಜಲರೂಪನಾದ ವಿಷ್ಣುವೆ, ಜಗತ್ತಿನಲ್ಲಿರುವ ಸಮಸ್ತ ಜಂತುಗಳಿಗೂ ಜೀವನಾಧಾರನಾಗಿರುವವನೂ,

**ಜೀವನಾಯ ಚ ಜಂತೂನಾಂ ಪರಂ ನಿರ್ವಾಣಹೇತವೇ ॥ ೮೯ ॥**
**ಅಗ್ನಿಶ್ಚ ತೇ ಯೋನಿರಿಲಾಚ ದೇಹೇ**
**ರೇತೋಧಾ ವಿಷ್ಣೋರಮೃತಸ್ಯ ನಾಭಿಃ ।**
**ಉಪೈಮಿ ತೇ ರೂಪಮನನ್ಯಹೇತು**
**ಮಾನಂದಸಂಪನ್ನಮನುಪ್ರವಿಶ್ಯ ॥ ೯೦ ॥**
**ಇತಿ ಮಂತ್ರಂ ಪಠನ್ ವಿಪ್ರಾಃ ಪ್ರವಿಶೇಜ್ಜಲಮಧ್ಯತಃ ।**
**ಆವಾಹಯೇತ್ತೀರ್ಥರಾಜಂ ಭಾವಯನ್ನಗತಾಂ ಪತಿಂ ॥ ೯೧ ॥**
**ಜಲಾಧೀಶಂ ಕೃತಸ್ನಾನಫಲದಾನೇಽಗ್ರತಃ ಸ್ಥಿತಂ ।**
**ಅಘಮರ್ಷಣಸೂಕ್ತೇನ ನಾರಾಯಣಯುತೇನ ಚ ॥ ೯೨ ॥**
**ತ್ರಿರಾವೃತ್ತೇನ ಕುರ್ವೀತ ಪಂಚವಾರಣಕೇನ ಚ ।**
**ಸುಕೃತಾವಾಹನಾದೀನಿ ಷಡಂಗಾನ್ಯಭಿಷೇಚನೇ ॥ ೯೩ ॥**
**ಆವಾಹನಂ ಪುರಪ್ರೋಕ್ತಂ ಸನ್ನಿಧಾನಮಥೋಚ್ಯತೇ ।**
**ಸ್ನಾತುರಿಷ್ಟಫಲಪ್ರಾಪ್ತ್ಯೈ ಸಾನ್ನಿಧ್ಯಪರಿಕಲ್ಪನಂ ॥ ೯೪ ॥**

---

ನೈಜಾನಂದ ಮೂಲಕಾರಣನಾಗಿರುವವನೂ ಆದ ನಿನ್ನನ್ನು ನಮಸ್ಕರಿಸುವೆನು.

೯೦. ಎಲೈ ಸಮುದ್ರರಾಜನೇ! ನಿನ್ನ ಉದ್ಭವಕಾರಣವಾದವನೇ ಅಗ್ನಿಯು. ನಿನ್ನ ದೇಹದಿಂದಲೇ ಈ ಭೂಮಂಡಲವು ಆವಿರ್ಭವಿಸಿತು. ನೀನು ಈ ಪ್ರಪಂಚಕ್ಕೆ ತಂದೆಯಾಗಿರುವೆ. ಅಮೃತಸ್ವರೂಪನಾದ ಶ್ರೀಮನ್ನಾರಾಯಣನ ನಾಭಿಯೇ ನೀನಾಗಿರುವೆ. ಇಂತಹ ಅನನ್ಯಹೇತುವೂ ಕೇವಲ ಆನಂದಸಂಪನ್ನವೂ ಆಗಿರುವ ಸ್ವರೂಪವನ್ನು ತಾಳಿ ಬೆಳಗುತ್ತಿರುವ ನಿನ್ನಬಳಿಗೈದುತ್ತೇನೆ.''

೯೧. ಎಲೈ ವಿಪ್ರರೇ! ಈ ಮಂತ್ರವನ್ನು ಪಠಿಸುತ್ತ ನೀರಿನ ನಡುವೆಗೆ ಇಳಿದುಹೋಗಿ ಶ್ರೀಜಗನ್ನಾಥನನ್ನು ಭಾವಿಸುತ್ತ ಆ ತೀರ್ಥರಾಜನನ್ನು ಆವಾಹನೆ ಮಾಡಬೇಕು.

೯೨–೯೩. ವ್ರತಿಯಾದವನು ತಾನೆಸಗುವ ಸ್ನಾನಕ್ಕೆ ಫಲವನ್ನು ನೀಡಲೋಸುಗವೇ ತನ್ನ ಮುಂಗಡೆ ವಿರಾಜಿಸುತ್ತಿರುವ ಆ ಜಲಾಧೀಶ್ವರನನ್ನು ನಾರಾಯಣ ಮಂತ್ರಸಹಿತವಾದ ಅಘಮರ್ಷಣಸೂಕ್ತದಿಂದಲೂ, ಪಂಚವರುಣಮಂತ್ರಗಳಿಂದಲೂ ಆವಾಹಿಸತಕ್ಕುದು. ಅಭಿಷೇಚನ ವಿಷಯದಲ್ಲಿ ಸಕೃದಾವಾಹನಾದಿಗಳು ಷಡಂಗಗಳು.

೯೪. ಆವಾಹನ ವಿಧಾನವನ್ನು ಹಿಂದೆಯೇ ಹೇಳಿಯಾಗಿದೆ. ಈಗ ಸನ್ನಿಧಾನ ಕಲ್ಪನೆಯನ್ನು ಹೇಳುವೆನು. ಸ್ನಾನಮಾಡುವ ವ್ರತಿಯು ಇಷ್ಟಫಲಪ್ರಾಪ್ತಿಗಾಗಿ ಸಾನ್ನಿಧ್ಯವನ್ನು ಕಲ್ಪಿಸಿಕೊಳ್ಳಬೇಕು.

ಅಂತಶ್ಶುಧ್ಯರ್ಥಮಾಚಾಮೇತ್ಪೀತ್ವಾ ತದಭಿಮಂತ್ರಿತಂ ।
ಬಾಹ್ಯಾವಯವಶುದ್ಧ್ಯರ್ಥಂ ಮಾರ್ಜಯೇತ್ಕುಶವಾರಿಣಾ ॥ ೯೫ ॥
ಅಂತರ್ಬಹಿರ್ವಿಶುದ್ಧ್ಯರ್ಥಂ ಮಂತ್ರಪೂತೇನ ವಾರಿಣಾ ।
ತ್ರೀನಂಜಲೀನ್ಮೂರ್ಧ್ನಿ ಸಿಂಚೇತ್ಸಿಂಧೌ ನಾಂತರ್ಜಲೇ ಜಪಃ ॥ ೯೬ ॥
ತ್ರಿಃಸ್ನಾಯಾತ್ಸ್ವಕೃತಾಘಾನಿ ಕೋಟಿಜನ್ಮಕೃತಾನಿ ಚ ।
ಪ್ಲಾವಿತಾನಿ ಜಲೇ ತಸ್ಮಿನ್ ಭಾವಯನ್ನಘನಾಶನಂ ॥ ೯೭ ॥
ಉತ್ಥಾಯಾಚಮ್ಯ ವಿಧಿವತ್ಪ್ರಾರ್ಥಯೇನ್ಮಂತ್ರಮುಚ್ಚರನ್ ।
ತ್ವಮಗ್ನಿರ್ಜಗತಾಂ ನಾಥ ರೇತೋಧಾಃ ಕಾಮದೀಪನಃ ॥ ೯೮ ॥
ಪ್ರಧಾನಂ ಸರ್ವಭೂತಾನಾಂ ಜೀವಾನಾಂ ಪ್ರಭುರವ್ಯಯ ।
ಅಮೃತಸ್ಯಾರಣಿಸ್ತ್ವಂ ಹಿ ದೇವಯೋನಿರಪಾಂ ಪತೇ ॥ ೯೯ ॥
ವೃಜಿನಂ ಹರ ಮೇ ಸರ್ವಂ ತೀರ್ಥರಾಜ ನಮೋಽಸ್ತು ತೇ ।
ಜನ್ಮಕೋಟಿಸಹಸ್ರೇಷು ಯತ್ಪಾಪಂ ಪೂರ್ವಮರ್ಜಿತಂ ॥ ೧೦೦ ॥

---

೯೫. ಅಂತಃಶುದ್ಧಿಗೋಸುಗ ಅಭಿಮಂತ್ರಿತವಾದ ಜಲವನ್ನು ಕುಡಿದು ಆಚಮನ ಮಾಡಬೇಕು. ಬಾಹ್ಯಾವಯವಶುದ್ಧಿಗೋಸುಗ ಕುಶೋದಕದಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು.

೯೬. ಅಂತರ್ಬಹಿಃಶುದ್ಧಿಗಳಿಗೋಸುಗ ಮಂತ್ರಪೂರಿತವಾದ ನೀರಿನಿಂದ ಮೂರು ಬೊಗಸೆಗಳನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಳ್ಳತಕ್ಕದು. ಸಮುದ್ರ ಜಲದಲ್ಲಿ ನಿಂತು ಜಪವನ್ನು ಮಾಡಕೂಡದು.

೯೭. ಬಳಿಕ ಅಘನಾಶನನಾದ ಶ್ರೀಜಗನ್ನಾಥನನ್ನು ಧ್ಯಾನಿಸಿ, ಕೋಟಿ ಜನ್ಮಗಳಲ್ಲಿ ತಾನು ಮಾಡಿದ ಪಾಪಗಳೆಲ್ಲವೂ ಆ ಸಮುದ್ರಜಲದಲ್ಲಿ ತೊಳೆದು ಹೋಯಿತೆಂದು ಭಾವಿಸಿ ಮೂರಾವೃತ್ತಿ ಸ್ನಾನಮಾಡಬೇಕು.

೯೮. ತರುವಾಯ ಮೇಲಕ್ಕೆದ್ದು ಈ ಮಂತ್ರವನ್ನು ವಿಧ್ಯುಕ್ತವಾಗಿ ಉಚ್ಚರಿಸುತ್ತ ಸಾಗರರಾಜನನ್ನು ಪ್ರಾರ್ಥಿಸಬೇಕು :—"ಎಲೈ ಸ್ವಾಮಿಯೇ! ಜಗತ್ತಿಗೆಲ್ಲ ನೀನೇ ಅಗ್ನಿಸ್ವರೂಪನು; ನೀನೇ ತಂದೆಯು. ಸಮಸ್ತರಿಗೂ ಬಯಕೆಗಳನ್ನು ಬೆಳಗಿಸುವವನೂ ನೀನೇ!

೯೯. ಪೃಥಿವ್ಯಾದಿ ಪಂಚಭೂತಗಳಲ್ಲಿ ನೀನೇ ಪ್ರಧಾನವಾದ ಭೂತಸ್ವರೂಪನಾಗಿರುವೆ. ಎಲೈ ಅವ್ಯಯನೇ! ನೀನೇ ಸಮಸ್ತ ಜೀವಿಗಳಿಗೂ ಪ್ರಭುವು. ಎಲೈ ಅಪಾಂಪತಿಯೆ (ಸರಿತ್ಪತಿಯೆ)! ನೀನೇ ಅಮೃತಕ್ಕೆ ಉತ್ಪತ್ತಿಸ್ಥಾನವಾಗಿರುವವನು. ಅಂತೆಯೆ ದೇವತೆಗಳೆಲ್ಲರಿಗೂ ಕಾರಣನೂ ಆಗಿರುವೆ.

೧೦೦. ಓ ತೀರ್ಥರಾಜ! ನಿನಗಿದೋ ನಮಸ್ಕಾರವು. ನಾನು ಸಹಸ್ರಕೋಟಿ ಜನ್ಮಗಳಲ್ಲಿ ಸಂಪಾದಿಸಿರುವ ಸಮಸ್ತ ಪಾಪಗಳನ್ನೂ ಪರಿಹರಿಸಿ ಕಾಪಾಡು.

ತದಶೇಷಂ ಲಯಂ ಯಾತು ದೇಹಿ ಮೇ ಬ್ರಹ್ಮ ಶಾಶ್ವತಂ ।
ಸ್ನಾತ್ವಾ ಪಿ ಚ ತತಸ್ತೀರಮುತ್ತೀರ್ಯಾಚಮ್ಯ ವಾಗ್ಯತಃ ॥ ೧೦೧ ॥
ಧಾರಯೇದ್ವಾಸಸೀ ಶುಕ್ಲೇ ಪುಂಡ್ರಕಾನುಜ್ವಲಾಕೃತೀನ್ ।
ಶಂಖಚಕ್ರಗದಾಪದ್ಮತಿಲಕಾನಿ ಚ ಭಕ್ತಿತಃ ॥ ೧೦೨ ॥
ದೇವಾನ್ ಪಿತೄನ್ ಯಥಾನ್ಯಾಯಂ ಚಿಂತಯನ್ಭಗವದ್ಧಿಯಾ ।
ತರ್ಪಯೇದ್ವಿಧಿವದ್ವಿಪ್ರಾಃ ಸಮ್ಯಗವ್ಯಗ್ರಮಾನಸಃ ॥ ೧೦೩ ॥
ತತಃ ಪೂರ್ವವದಾಲಿಖ್ಯ ಮಂಡಲಂ ಚೋತ್ತರಾಮುಖಃ ।
ಪೂಜಯೇನ್ಮೂಲಮಂತ್ರೇಣ ಮಂತ್ರೈರೇಭಿಶ್ಚ ಭಕ್ತಿತಃ ॥ ೧೦೪ ॥
ನಾರಾಯಣಂ ಚತುರ್ಬಾಹುಂ ಶಂಖಚಕ್ರಗದಾಧರಂ ।
ಧರಾರಮಾಭ್ಯಾಂ ಸಹಿತಂ ಕೇವಲಂ ವಾ ದ್ವಿಜೋತ್ತಮಾಃ ।
ಧ್ಯಾತ್ವಾಂತರ್ಯಾಗಸಂತುಷ್ಟಂ ಬಹಿರಾವಾಹಯೇತ್ತತಃ ॥ ೧೦೫ ॥
ಆಗಚ್ಛ ಪರಮಾನಂದ ಜಗದ್ವ್ಯಾಪಿನ್ ಜಗನ್ಮಯ ।
ಅನುಗ್ರಹಾಯ ದೇವೇಶ ಮಂಡಲೇ ಸನ್ನಿಧಿಂ ಕುರು ॥ ೧೦೬ ॥

---

೧೦೧–೧೦೨. ಸ್ವಾಮಿ! ಆ ನನ್ನ ಪಾಪಗಳೆಲ್ಲವೂ ಅಳಿದುಹೋಗಲಿ. ನನಗೆ ಶಾಶ್ವತ ಬ್ರಹ್ಮಭಾವವನ್ನು ದಯೆಪಾಲಿಸು.'' ಇಂತು ಮಂತ್ರಪೂರ್ವಕವಾಗಿ ಪ್ರಾರ್ಥಿಸಿದಬಳಿಕ ತೀರಕ್ಕೆ ಬಂದು ವಾಕ್‌ಸಂಯಮವುಳ್ಳವನಾಗಿ ಆಚಮನ ಮಾಡಿ ಶುಭ್ರವಸ್ತ್ರಗಳನ್ನುಟ್ಟು ಉಜ್ವಲಾಕಾರವಾದ ಪುಂಡ್ರಗಳನ್ನೂ, ಶಂಖ ಚಕ್ರ ಗದಾಪದ್ಮತಿಲಕಾದಿ ಚಿಹ್ನೆಗಳನ್ನೂ ಭಕ್ತಿಯಿಂದ ಧಾರಣೆಮಾಡಬೇಕು.

೧೦೩. ಬಳಿಕ ದೇವತೆಗಳನ್ನೂ, ಪಿತೃದೇವತೆಗಳನ್ನೂ ವಿಧಿಪೂರ್ವಕವಾಗಿ ಭಗವದ್ಬುದ್ಧಿಯಿಂದ ಭಾವಿಸಿ ಅನನ್ಯಮನಸ್ಕನಾಗಿ ಶಾಸ್ತ್ರೋಕ್ತವಿಧಾನವನ್ನನುಸರಿಸಿ ತರ್ಪಣದ ಮೂಲಕ ತೃಪ್ತಿಗೊಳಿಸಬೇಕು.

೧೦೪–೧೦೫. ಇದಾದಬಳಿಕ ಮೊದಲಿನಂತೆಯೇ ಉತ್ತರದಿಗಭಿಮುಖನಾಗಿ ಕುಳಿತು ಮಂಡಲವನ್ನು ಬರೆದು ಮೂಲಮಂತ್ರದಿಂದಲೂ, ಈ ಮುಂದೆ ಹೇಳುವ ಮಂತ್ರಗಳಿಂದಲೂ ಭಕ್ತಿಭರಿತನಾಗಿ ಚತುರ್ಬಾಹುಸಮನ್ವಿತನೂ, ಶಂಖಚಕ್ರ ಗದಾಧರನೂ, ಭೂದೇವಿ ಶ್ರೀದೇವಿಯರೊಡಗೂಡಿರುವವನೂ ಆದ ಶ್ರೀಜಗನ್ನಾಥನಾದ ಶ್ರೀಮನ್ನಾರಾಯಣಮೂರ್ತಿಯನ್ನಾಗಲಿ ಅಥವಾ ಆತನೋರ್ವನನ್ನೇ ಆಗಲಿ ಧ್ಯಾನಮಾಡಿ ಅಂತರ್ಯಾಗದಿಂದ (ಮಾನಸಪೂಜೆಯಿಂದ) ಸುಪ್ರೀತನಾದ ಆತನನ್ನು ಹೊರಗೆ ಮಂಡಲದಲ್ಲಿ ಆವಾಹಿಸಬೇಕು.

೧೦೬. "ಎಲೈ ಪರಮಾನಂದಸ್ವರೂಪನೂ, ಜಗದ್ವ್ಯಾಪಿಯೂ, ಜಗದ್ರೂಪನೂ ಆದ ಶ್ರೀಮನ್ನಾರಾಯಣನೇ! ದೇವೇಶ್ವರಾ, ಭಕ್ತನಾದ ನನ್ನನ್ನು ಅನುಗ್ರಹಿಸಲೋಸುಗ ಈ ಮಂಡಲದಲ್ಲಿ ಸನ್ನಿಧಿಮಾಡುವವನಾಗು.'' ಇದು ಆಹ್ವಾನಮಂತ್ರವು.

**ಚರಾಚರಮಿದಂ ಸರ್ವಂ ಜಗದತ್ರ ಪ್ರತಿಷ್ಠಿತಂ ।**
**ತದಂತಸ್ಥಸ್ತ್ವಮೇವೇಶ ಆಸನಂ ಕಲ್ಪಯಾಮಿ ತೇ ॥ ೧೦೭ ॥**
**ಯಸ್ಯ ಪಾದಾಂಬುಜೇ ಧೌತೇ ಧರ್ಮೇಣ ಬ್ರಹ್ಮರೂಪಿಣಾ ।**
**ಪುನಾತಿ ತದ್ಭವಾ ಗಂಗಾ ಜಗತ್ಪಾದ್ಯಂ ದದಾಮ್ಯಹಂ ॥ ೧೦೮ ॥**
**ಅನರ್ಘ್ಯರತ್ನಘಟಿತಚೂಡಾಮಣಿಕರೋತ್ಕರೈಃ ।**
**ಬ್ರಹ್ಮಾದಯಃ ಪಾದಪದ್ಮಂ ಚಿಂತಯಂತಿ ದಿನೇದಿನೇ ।**
**ಅನರ್ಘ್ಯಾಯ ಜಗದ್ಧಾಮ್ನೇ ಅರ್ಘ್ಯಮೇತದ್ದದಾಮ್ಯಹಂ ॥ ೧೦೯ ॥**
**ಆಚಾಂತಸ್ತೀರ್ಥರಾಜೋ ವೈ ಯೇನಾಗಸ್ತ್ಯಸ್ವರೂಪಿಣಾ ।**
**ತಸ್ಮೈ ಸುವಾಸಿತಂ ವಾರಿ ದದಾಮ್ಯಾಚಮನೀಯಕಂ ॥ ೧೧೦ ॥**
**ಯಃ ಪ್ರಾಪ್ಯ ಮಧುಸಂಪರ್ಕಂ ಚಕರ್ಷ ಜಲರೂಪಿಣಂ ।**
**ಅಶೇಷಾಘನಿಕರ್ಷಾಯ ಮಧುಪರ್ಕಂ ದದಾಮ್ಯಹಂ ॥ ೧೧೧ ॥**

---

೧೦೭. "ಎಲೈ ಸ್ವಾಮಿಯೇ! ಚರಾಚರಾತ್ಮಕವಾದ ಈ ಜಗತ್ತೇ ನಿನ್ನಲ್ಲಿ ಪ್ರತಿಷ್ಠಿತವಾಗಿರುವುದು. ಇಂತಹ ಜಗತ್ತಿನಲ್ಲಿ ನೀನೇ ಅಂತರ್ಯಾಮಿಯಾಗಿರುವೆ. ಇಂತಹ ನಿನಗೆ ಆಸನವನ್ನು ಕಲ್ಪಿಸುವೆನು. ಸ್ವೀಕರಿಸು." ಇದು ಆಸನಮಂತ್ರವು.

೧೦೮. "ಯಾವ ನಿನ್ನ ಪಾದಾಂಬುಜವು ಬ್ರಹ್ಮರೂಪವಾದ ಧರ್ಮ(ಜಲ)ದಿಂದ ತೊಳೆಯಲ್ಪಟ್ಟುದಾಗಲು ಅದರಿಂದ ಉದ್ಭವಿಸಿದ ಗಂಗಾನದಿಯು ಜಗತ್ತನ್ನೇ ಪಾವನಗೊಳಿಸುತ್ತಿರುವುದೋ ಆ ನಿನಗೆ ಇದೋ ಪಾದ್ಯವನ್ನು ಕೊಡುವೆನು." ಇದು ಪಾದ್ಯಸಮರ್ಪಣಮಂತ್ರವು.

೧೦೯. "ಎಲೈ ಜಗನ್ನಾಥನೇ! ಯಾವ ನಿನ್ನ ಪಾದಪದ್ಮವನ್ನು ಬ್ರಹ್ಮಾದಿ ದೇವತೆಗಳು ಅನುದಿನವೂ ಧ್ಯಾನಿಸುತ್ತಿರುವರೋ ಅಂತಹ ಜಗದಾಧಾರನಾಗಿ ಜಗತ್ತೇ ಭವನವಾಗಿರುವ ಅನರ್ಘ್ಯನಾದ ನಿನಗಿದೋ ಅರ್ಘ್ಯವನ್ನು ನೀಡುವೆನು." ಇದು ಅರ್ಘ್ಯಸಮರ್ಪಣಮಂತ್ರವು.

೧೧೦. "ಅಗಸ್ತ್ಯರೂಪದಿಂದ ಯಾವ ನೀನು ಈ ಸಾಗರದ ಜಲವೆಲ್ಲವನ್ನೂ ಆಚಮನಮಾಡಿದೆಯೋ ಆ ನಿನಗೆ ನಾನು ಸುಗಂಧಪೂರಿತವಾದ ಈ ಜಲವನ್ನು ಆಚಮನಕ್ಕಾಗಿ ಒಪ್ಪಿಸುತ್ತೇನೆ." ಇದು ಆಚಮನಸಮರ್ಪಣಮಂತ್ರವು.

೧೧೧. "ಯಾವ ನೀನು ಜಲರೂಪಿಯಾದ ಮಧುವೆಂಬ ಅಸುರನೊಡನೆ ಸಂಪರ್ಕವನ್ನು ಪಡೆದು ಅವನನ್ನು ಧ್ವಂಸಗೊಳಿಸಿದೆಯೋ ಅಂತಹ ಸಮಸ್ತ ಪಾಪಪರಿಹಾರಕನಾದ ಓ ಪ್ರಭುವೇ! ನಿನಗಿದೋ ಮಧುಪರ್ಕವನ್ನು ಕೊಡುತ್ತೇನೆ." ಇದು ಮಧುಪರ್ಕಸಮರ್ಪಣಮಂತ್ರವು.

ಯಃ ಕ್ರೋಡರೂಪಮಾಸ್ಥಾಯ ಪ್ರಲಯಾರ್ಣವವಿಪ್ಲುತಾಂ ।
ಉಜ್ಜಹಾರ ಧರಾಮೇತಾಂ ಸ್ನಾಪಯಾಮಿ ತಮಂಭಸಾ ॥ ೧೧೨ ॥
ಬ್ರಹ್ಮಾಂಡಕೋಟಯೋ ಯಸ್ಯ ವಿಶ್ವರೂಪಸ್ಯ ಸಂವೃತಿಃ ।
ಆಚ್ಛಾದನಾಯ ಸರ್ವೇಷಾಂ ಪ್ರದದೇ ವಾಸಸೀ ಶುಭೇ ॥ ೧೧೩ ॥
ವಿನಾ ಯೇನಾನುಷ್ಠಿತೋಽಪಿ ಯಜ್ಞಃ ಸ್ಯಾದಕೃತೋ ಧ್ರುವಃ ।
ತಸ್ಮೈ ಯಜ್ಞೇಶ್ವರಾಯೇದಮುಪವೀತಂ ಪ್ರಕಲ್ಪಯೇ ॥ ೧೧೪ ॥
ಯದಂಗಸಂಗಮಾಸಾದ್ಯ ಶೋಭಂತೇ ಭೂಷಣಾನಿ ವೈ ।
ವಿಶ್ವಾಲಂಕೃತಯೇ ತಸ್ಮೈ ಭೂಷಣಾನಿ ಪ್ರಕಲ್ಪಯೇ ॥ ೧೧೫ ॥
ಯದಂಗಸಂಸ್ಪರ್ಶಿಮರುಸಂಗಾನ್ಮಲಯಜಾ ದ್ರುಮಾಃ ।
ಸುಗಂಧರಸಸಂಪನ್ನಾ ತಸ್ಮೈ ಗಂಧಾನುಲೇಪನಂ ॥ ೧೧೬ ॥
ಯಸ್ಯ ಸಂಚಿಂತನಾದೇವ ಸೌಮನಸ್ಯಂ ಹತಾಂಹಸಾಂ ।
ತಸ್ಮೈ ಸುಮನಸಾಂ ಮಾಲಾಂ ಸುಗಂಧಾಂ ಪರಿಕಲ್ಪಯೇ ॥ ೧೧೭ ॥

---

೧೧೨. "ಯಾವ ನಿನ್ನ ವರಾಹರೂಪವನ್ನು ತಾಳಿ ಪ್ರಳಯಸಮುದ್ರದಲ್ಲಿ ಮುಳುಗಿದ್ದ ಈ ಭೂಮಿಯನ್ನುದ್ಧಾರಮಾಡಿದೆಯೋ ಆ ನಿನಗೆ ಈ ಜಲದಿಂದ ಸ್ನಾನಮಾಡಿಸುವೆನು." ಇದು ಸ್ನಾನಸಮರ್ಪಣಮಂತ್ರವು.

೧೧೩. "ಬ್ರಹ್ಮಾಂಡಕೋಟಿಗಳು ವಿಶ್ವರೂಪನಾದ ಯಾವ ನಿನಗೆ ಹೊದಿಕೆಯಾಗಿರುವುವೋ ಆತನಿಗೆ ಮಂಗಳಕರವಾದ ಈ ವಸ್ತ್ರದ್ವಯವನ್ನು ಸಮರ್ಪಿಸುವೆನು." ಇದು ವಸ್ತ್ರಯುಗಸಮರ್ಪಣಮಂತ್ರವು.

೧೧೪. "ಯಾವಾತನನ್ನುಳಿದು ಯಜ್ಞವನ್ನು ಮಾಡಿದರೂ ಅದು ದಿಟವಾಗಿಯೂ ಅಕೃತವೇ ಆಗುತ್ತದೆಯೋ ಅಂತಹ ಯಜ್ಞೇಶ್ವರನಾದ ಓ ಸ್ವಾಮಿಯೇ! ನಿನಗಿದೋ ಯಜ್ಞೋಪವೀತವನ್ನು ಸಮರ್ಪಿಸುವೆನು." ಇದು ಯಜ್ಞೋಪವೀತ ಸಮರ್ಪಣಮಂತ್ರವು.

೧೧೫. "ಯಾವನ ಅಂಗಸಂಗವನ್ನು ಪಡೆದು ಸಮಸ್ತ ಭೂಷಣಗಳೂ ಬೆಳಗುತ್ತಿರುವುವೋ, ಅಂತಹ ವಿಶ್ವಕ್ಕೇ ಅಲಂಕಾರಪ್ರಾಯನಾದ ಪರಮಾತ್ಮನಿಗೆ ಭೂಷಣಗಳನ್ನೊಪ್ಪಿಸುವೆನು." ಇದು ಭೂಷಣಸಮರ್ಪಣಮಂತ್ರವು.

೧೧೬. "ಯಾವನ ಮೈಯನ್ನು ಸೋಕಿ ನುಳಿದ ಗಾಳಿಯ ಸೋಕಿನಿಂದ ಶ್ರೀಗಂಧವೇ ಮೊದಲಾದ ಮಲಯಗಿರಿಯ ಮರಗಳು ಸುಗಂಧರಸಸಂಪನ್ನಗಳಾಗಿರುವುವೋ ಆ ಸ್ವಾಮಿಗೆ ಶ್ರೀಗಂಧಲೇಪನವನ್ನು ಸಮರ್ಪಿಸುತ್ತೇನೆ." ಇದು ಶ್ರೀಗಂಧಸಮರ್ಪಣಮಂತ್ರವು.

೧೧೭. "ಯಾವಾತನ ಧ್ಯಾನಮಾತ್ರದಿಂದ ಪಾಪರಹಿತರಾದ ಭಕ್ತರಿಗೆ ಸೌಮನಸ್ಯವುಂಟಾಗುತ್ತದೆಯೋ ಆ ಪ್ರಭುವಿಗೆ ನಾನು ಸುಗಂಧಭರಿತವಾದ

ಯಂ ಚಿತ್ತೇ ಸ್ಥಿರಮಾದಾಯ ಭವಾಗ್ನಿಪರಿಧೂಪನಂ ।
ಜಹಾತಿ ತಸ್ಮೈ ಪ್ರದದೇ ಸುಗಂಧಂ ಧೂಪಮುತ್ತಮಂ ॥ ೧೧೮ ॥
ಸ್ವತೇಜಸಾಖಿಲಮಿದಂ ದೀಪಿತಂ ಯಸ್ಯ ಭಾಸತಃ ।
ತಸ್ಮೈ ದೀಪಪ್ರದೀಪ್ತಾಯ ದೀಪಮೇನಂ ದದಾಮ್ಯಹಂ ॥ ೧೧೯ ॥
ಚರಾಚರಂ ಜಗತ್ಸರ್ವಮತ್ತಿ ಯೋ ಯಶ್ಚ ಭಾವಯೇತ್ ।
ಅನೇನ ಚ ಪುನಃ ಪುಷ್ಟ್ಯೈ ತಸ್ಮಾದನ್ನಂ ನಿವೇದಯೇ ॥ ೧೨೦ ॥
ಯದೀಯಮುಖರಾಗೇಣ ಸಹಜಾವಾಸಿತೇನ ಚ ।
ಮೋಹಿತಾಃ ಸುರಸುಂದರ್ಯಸ್ತಸ್ಮೈ ತಾಂಬೂಲಮುತ್ತಮಂ ॥ ೧೨೧ ॥
ಪ್ರದಕ್ಷಿಣಪ್ರಕ್ರಮಣಾದ್ಭವಾಂಗಣವಿವರ್ತನಂ ।
ಹಂತಿ ಯಃ ಕರುಣಾಂಬೋಧಿಸ್ತಂ ನಮಾಮಿ ಜಗದ್ಗುರುಂ ॥ ೧೨೨ ॥

---

ಈ ಸುಮಮಾಲೆಯನ್ನು ಸಮರ್ಪಿಸುವೆನು.'' ಇದು ಸುಮಮಾಲಾಸಮರ್ಪಣ ಮಂತ್ರವು.

೧೧೮. ''ಯಾವನನ್ನು ಚಿತ್ತದಲ್ಲಿ ನೆಲೆಗೊಳಿಸಿದರೆ ಭವಾಗ್ನಿಯು ಹೊಗೆ ಯಾಡುವುದು ನಿಂತುಹೋಗುತ್ತದೆಯೋ ಆ ಜಗನ್ನಾಥನಿಗೆ ಉತ್ತಮೋತ್ತಮ ವಾದ ಈ ಸುಗಂಧಧೂಪವನ್ನೊಪ್ಪಿಸುವೆನು.'' ಇದು ಧೂಪಸಮರ್ಪಣಮಂತ್ರವು.

೧೧೯. ''ಸತತವೂ ಬೆಳಗುತ್ತಿರುವ ಯಾವ ಪ್ರಭುವಿನ ತೇಜಸ್ಸಿನಿಂದ ಈ ಸಮಸ್ತ ಜಗತ್ತೂ ಬೆಳಗಿಸಲಾಗಿರುವುದೋ ಅಂತಹ ದೀಪಪ್ರದೀಪಕನಾದ ಜಗದ್ದೀಪಕಸ್ವಾಮಿಗೆ ಈ ಸೊಡರದೀಪವನ್ನರ್ಪಿಸುವೆನು.'' ಇದು ದೀಪ ಸಮರ್ಪಣ ಮಂತ್ರವು.

೧೨೦. ''ಚರಾಚರಾತ್ಮಕವಾದ ಈ ಜಗತ್ತನ್ನಾವಾತನು ಭಕ್ಷಿಸುವನೋ, ಭಕ್ಷಿಸಿದ ಆ ಜಗತ್ತನ್ನೇ ಯಾವಾತನು ಸೃಜಿಸುವನೋ, ಹಾಗೆ ಸೃಷ್ಟಿಯಾದ ಆ ಜಗತ್ತು ಯಾವಾತನಿಂದಲೇ ಪುಷ್ಟವಾಗುವುದೋ ಆ ಜಗನ್ನಾಥಪ್ರಭುವಿಗೆ ನಾನು ಈ ಅನ್ನವನ್ನು ನಿವೇದಿಸುವೆನು.'' ಇದು ನೈವೇದ್ಯಸಮರ್ಪಣಮಂತ್ರವು.

೧೨೧. ''ಸ್ವಭಾವದಿಂದಲೇ ಸುವಾಸಿತವಾಗಿರುವ ಯಾವಾತನ ತುಟಿ ಗೆಂಪನ್ನು ಕಂಡು ಸುರಸುಂದರಿಯರೆಲ್ಲರೂ ಮೋಹಿತರಾಗಿಹೋದರೋ ಆ ದೇವನಿಗೆ ಈ ತಾಂಬೂಲವನ್ನೊಪ್ಪಿಸುವೆನು.'' ಇದು ತಾಂಬೂಲಸಮರ್ಪಣ ಮಂತ್ರವು.

೧೨೨. ''ಯಾವಾತನಿಗೆ ಪ್ರದಕ್ಷಿಣೆ ಮಾಡಿದರೆ ಭಕ್ತನು ಭವಾಂಗಣದಲ್ಲಿ ಮರಳಿ ಮರಳಿ ಪ್ರದಕ್ಷಿಣೆಗೈಯುವುದನ್ನು ಸಾಕುಮಾಡುವನೋ ಆ ಶ್ರೀಮನ್ನಾ ರಾಯಣಮೂರ್ತಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡುತ್ತೇನೆ.'' ಇದು ನಮಸ್ಕಾರ ಮಂತ್ರವು.

ಮಂತ್ರಾಸ್ತು ಕಥಿತಾಹ್ಯೇತ ಉಪಚಾರೈಃ ಪೃಥಕ್ ಪೃಥಕ್ ।
ಆವಾಹ್ಯ ಚಿಂತಯೇದ್ದೇವಂ ಬಹಿಃಸಂಸ್ಥಿತಮಾತ್ಮನಃ ॥ ೧೨೩ ॥
ರತ್ನಸಿಂಹಾಸನಂ ದತ್ವಾ ತತ್ರಾಸೀನಂ ವಿಚಿಂತಯೇತ್ ।
ಪಾದಪದ್ಮದ್ವಯೇ ದದ್ಯಾತ್ಪಾದ್ಯಂ ಶ್ಯಾಮಾಕಪಂಕಜೈಃ ॥ ೧೨೪ ॥
ದೂರ್ವಾಪರಾಜಿತಾಭ್ಯಾಂ ಚ ಸಂಸ್ಕೃತಂ ಮೂಲಮಂತ್ರಣಾತ್ ।
ಸೌವರ್ಣೇ ರಾಜತೇ ವಾಪಿ ತಾಮ್ರೇ ವಾ ಶಂಖ ಏವ ವಾ ॥ ೧೨೫ ॥
ಅರ್ಘ್ಯಂ ಸಂಸ್ಕೃತ್ಯ ವಿಧಿವದ್ವಾರಿಚಂದನಪುಷ್ಪಕೈಃ ।
ಯವದೂರ್ವಾಕುಶಾಗ್ರೈಶ್ಚ ಫಲಸಿದ್ಧಾರ್ಥಕೈಸ್ತಿಲೈಃ ॥ ೧೨೬ ॥
ದೂರ್ವಾಕುಶಾಗ್ರೈರ್ದೇವಸ್ಯ ಮೂರ್ಧ್ನಿ ಸಿಂಚೇತ್ತದಗ್ರತಃ ।
ಸಾವಶೇಷಂ ಕ್ಷಿಪೇದ್ಭೂಮಾವೇಷೋಽರ್ಘವಿಧಿರೀರಿತಃ ॥ ೧೨೭ ॥
ಜಾತೀಫಲೈರ್ವಾ ಕಂಕೋಲೈರ್ಲವಂಗೈಃ ಸಂಸ್ಕೃತಂ ಜಲಂ ।
ದದ್ಯಾದಾಚಮನಾರ್ಥಂ ತು ಮಧುಪರ್ಕಂ ತತೋ ದದೇತ್ ॥ ೧೨೮ ॥

---

೧೨೩. ಎಲೈ ವಿಪ್ರರೇ! ಮಂಡಲಾಂತರ್ಗತನಾದ ಆ ಪರಮಾತ್ಮನ ಷೋಡಶೋಪಚಾರ ಪೂಜೆಗೆ ಈ ರೀತಿ ಬೇರೆ ಬೇರೆಯಾಗಿ ಈ ಮಂತ್ರಗಳು ಹೇಳಲಾಗಿರುವುವು. ವ್ರತಿಯಾದವನು ತನ್ನ ಅಂತರಂಗದಲ್ಲಿ ನೆಲಸಿರುವ ಪರಮಾತ್ಮನನ್ನು ತಾನು ಬರೆದ ಮಂಡಲದಲ್ಲಿ ಬಹಿಃಸ್ಥಿತನನ್ನಾಗಿ ಭಾವಿಸಿ ಆವಾಹನೆ ಮಾಡಬೇಕು.

೧೨೪. ತರುವಾಯ ಆ ಸ್ವಾಮಿಗೆ ರತ್ನಸಿಂಹಾಸನವನ್ನಿತ್ತು ಅದರಮೇಲೆ ಆತನು ಸುಖಾಸೀನನಾಗಿರುವನೆಂದು ಭಾವಿಸಬೇಕು. ಬಳಿಕ ಆ ಪ್ರಭುವಿನ ಅಡಿದಾವರೆಗಳಲ್ಲಿ ದೂರ್ವೆಗಳಿಂದಲೂ, ತಾವರೆಗಳಿಂದಲೂ ಕೂಡಿದ ಪಾದ್ಯವನ್ನೊಪ್ಪಿಸಬೇಕು.

೧೨೫–೧೨೭. ಇದಾದ ಬಳಿಕ ಮೂಲಮಂತ್ರವನ್ನುಚ್ಚರಿಸಿಕೊಂಡು ಚಿನ್ನ, ಬೆಳ್ಳಿ, ತಾಮ್ರ ಪಾತ್ರೆಗಳಲ್ಲಿಯಾಗಲಿ, ಶಂಖದಲ್ಲಿಯಾಗಲಿ ಗರಿಕೆ ಮತ್ತು ಅಪರಾಜಿತೆ (ಬನ್ನಿಗಿಡದ ಪತ್ರೆ?)ಗಳು ಬೆರಸಿದ ಜಲವನ್ನು ತುಂಬಿಕೊಂಡು ಗಂಧಪುಷ್ಪಗಳಿಂದಲೂ, ಯವ, ದೂರ್ವೆ, ದರ್ಭೆಯ ಕೊನೆಗಳು, ಫಲ, ಬಿಳಿ ಸಾಸುವೆ, ಎಳ್ಳು ಈ ವಸ್ತುಗಳನ್ನು ಬೆರಸಿ ಶಾಸ್ತ್ರೋಕ್ತವಾಗಿ ಅದನ್ನು ಸಂಸ್ಕರಿಸಿ ಅರ್ಘ್ಯವನ್ನಾಗಿಸಿಕೊಂಡು ಅದನ್ನು ಗರಿಕೆ ಮತ್ತು ದರ್ಭೆಯ ತುದಿಗಳಿಂದ ತೆಗೆದುಕೊಂಡು ಮಂಡಲದಲ್ಲಿ ಆವಾಹಿತನಾಗಿರುವ ಪರಮಾತ್ಮನೆದುರಿಗೆ ಸೇಚನ ಮಾಡಬೇಕು. ಉಳಿದುದೆಲ್ಲವನ್ನೂ ನೆಲದಲ್ಲಿ ಚೆಲ್ಲಬೇಕು. ಇದು ಅರ್ಘ್ಯವಿಧಾನವೆಂದು ಹೇಳಿದೆ.

೧೨೮. ಜಾಯಿಕಾಯಿ, ಕಂಕೋಲೆ, ಲವಂಗ ಇವುಗಳಲ್ಲಿ ಯಾವುದ

ಮಧುಸರ್ಪಿರ್ಯುತಂ ಗವ್ಯಂ ದಧಿ ಕಾಂಸ್ಯೇ ಹಿ ನಿರ್ಮಲೇ ।
ಪಾತ್ರೇ ಸ್ಥಿತಂ ಚ ಪಿಹಿತಂ ಪಾತ್ರೇಣಾನ್ಯೇನ ತಾದೃಶಾ ।
ಸುಸಂಸ್ಕೃತಂ ಫಲಯುತಂ ಸ್ನಪನೇ ಜಲಮುಚ್ಯತೇ ॥ ೧೨೯ ॥
ಪಟ್ಟಕೌಶೇಯಕಾರ್ಪಾಸನಿರ್ಮಿತೇ ವಾಸಸೀ ಶುಭೇ ।
ಯಥಾಶಕ್ತಿ ಪ್ರದೇಯೇ ಚ ವಿತ್ತಶಾಠ್ಯಂ ನ ಕಾರಯೇತ್ ॥ ೧೩೦ ॥
ಹಾರಕೇಯೂರಮುಕುಟಗ್ರೈವೇಯಾದಿಕಭೂಷಣಂ ।
ಯಥಾಶಕ್ತಿ ಯಥಾಸ್ಥಾನಂ ದೇವಸ್ಯಾಂಗೇ ನಿವೇಶಯೇತ್ ॥ ೧೩೧ ॥
ಉಪವೀತಂ ಹರೇರ್ದದ್ಯಾತ್ಪಟ್ಟಸೂತ್ರವಿನಿರ್ಮಿತಂ ।
ಕಾರ್ಪಾಸಮಥವಾ ವಿಪ್ರ ಗಂಧಚಂದನಸಂಸ್ಕೃತಂ ॥ ೧೩೨ ॥
ಚಂದ್ರಚಂದನಕಸ್ತೂರೀಕುಂಕುಮೈರನುಲೇಪನಂ ॥ ೧೩೩ ॥
ತುಲಸೀದಲಮಾಲಾಂ ಚ ಜಾತೀಪಂಕಜಚಂಪಕೈಃ ।
ಅಶೋಕಚ್ಛುರಪುನ್ನಾಗನಾಗಕೇಸರಕೇಸರೈಃ ॥ ೧೩೪ ॥

---

ರಿಂದಾದರೂ ಮಿಶ್ರಮಾಡಿ ಸಂಸ್ಕರಿಸಿದ ನೀರನ್ನು ಸ್ವಾಮಿಗೆ ಆಚಮನವಾಗಿ ಕೊಡಬೇಕು. ಆಮೇಲೆ ಮಧುಪರ್ಕವನ್ನು ಸಮರ್ಪಿಸತಕ್ಕದ್ದು.

೧೨೯. ಕಂಚಿನ ಪಾತ್ರೆಯಲ್ಲಿ ಜೇನುತುಪ್ಪ, ಹಸುವಿನ ತುಪ್ಪ, ಮೊಸರುಗಳನ್ನು ಹಾಕಿ ಹಣ್ಣು ಬೆರಸಿ ಅದರ ಮೇಲೆ ಮತ್ತೊಂದು ಪಾತ್ರೆಯನ್ನು ಮುಚ್ಚಿಟ್ಟಿರಬೇಕು. ಇದು ಮಧುಪರ್ಕವೆನಿಸುವುದು ಇದಾದತರುವಾಯ ಪರಮಾತ್ಮನಿಗೆ ಶುದ್ಧೋದಕಸ್ನಾನವನ್ನರ್ಪಿಸಬೇಕು.

೧೩೦. ಸೊಗಸಾದ ರೇಷ್ಮೆ ಅಥವ ಹತ್ತಿಯಲ್ಲಿ ಮಾಡಿದ ಶುಭ್ರವಾದ ಎರಡು ವಸ್ತ್ರಗಳನ್ನು ಸ್ವಾಮಿಗೆ ಅರ್ಪಿಸಬೇಕು. ಧನವ್ಯಯವನ್ನು ಲೆಕ್ಕಿಸಬಾರದು (ಜಿಪುಣತನವನ್ನು ಮಾಡಕೂಡದು).

೧೩೧. ಹಾರ, ಬಾಹುಜಿಗೆ, ಕಿರೀಟ, ಗ್ರೈವೇಯಕ ಮುಂತಾದ ಆಭರಣ ಗಳನ್ನು ಶಕ್ತ್ಯನುಸಾರ ಆಯಾ ಸ್ಥಾನಗಳಿಗುಚಿತವಾಗಿ ಪರಮಾತ್ಮನಿಗೆ ಸಮರ್ಪಿಸಬೇಕು.

೧೩೨. ಇದಾದತರುವಾಯ ರೇಷ್ಮೆ ಅಥವಾ ಹತ್ತಿಯ ನೂಲಿಂದ ಮಾಡಿ ಗಂಧಚಂದನಗಳಿಂದ ಸಂಸ್ಕೃತವಾದ ಯಜ್ಞೋಪವೀತವನ್ನರ್ಪಿಸತಕ್ಕದ್ದು.

೧೩೩. ಆಮೇಲೆ ಚಂದ್ರ, ಚಂದನ, ಕಸ್ತೂರಿ, ಕುಂಕುಮಕೇಸರಿಗಳಿಂದ ಮಾಡಿದ ದಿವ್ಯಗಂಧಾನುಲೇಪವನ್ನೊಪ್ಪಿಸಬೇಕು.

೧೩೪–೧೩೫. ತುಲಸೀಮಾಲೆಯನ್ನಾಗಲಿ, ಜಾಜಿ, ಕಮಲ, ಸಂಪಿಗೆ, ಅಶೋಕ, ಛುರ, ಪುನ್ನಾಗ, ನಾಗಕೇಸರಿ ಮುಂತಾದ ಅನೇಕ ಕುಸುಮಗಳ

ಅನ್ಯೈಃ ಸುಗಂಧೈಃ ಕುಸುಮೈರ್ಮಾಲಾಂ ಮಾಲ್ಯಮಥಾಪಿ ವಾ ।
ಮುಕ್ತಿಕಾನಿ ಚ ಪುಷ್ಪಾಣಿ ದದ್ಯಾದ್ದೇವಸ್ಯ ಮೂರ್ಧನಿ ॥ ೧೩೫ ॥
ಮಾಲಾ ಸಾ ಪ್ರಪದೀನಾ ತು ಮಾಲ್ಯಂ ಕಂಠೋರುಸಮ್ಮಿತಂ ।
ಗರ್ಭಕಂ ಕೇಶಮಧ್ಯೇ ತು ಮೂರ್ಧ್ನಿ ಪುಷ್ಪಾಂಜಲಿಂ ಕ್ಷಿಪೇತ್ ॥೧೩೬॥
ಸಗುಗ್ಗುಲ್ವಗುರೂಶೀರಸಿತಾಜ್ಯಮಧುಚಂದನೈಃ ।
ಧೂಪಂ ದದ್ಯಾತ್ಸುಗಂಧಾಢ್ಯಂ ದೀಪಂ ಗೋಸರ್ಪಿಷಾ ಶುಭಂ ॥ ೧೩೭ ॥
ಕರ್ಪೂರಗರ್ಭಯಾ ವರ್ತ್ಯಾ ತಿಲತೈಲೇನ ವಾ ದದೇತ್ ।
ಅಖಂಡಿತಸಮುದ್ಧೂತಂ ಶಾಲಿತಂಡುಲನಿರ್ಮಿತಂ ।
ಸುಪಕ್ವಮನ್ನಂ ಸುರಭಿಸರ್ಪಿಷಾ ಚ ಸುವಾಸಿತಂ ॥ ೧೩೮ ॥
ಸೌರಭೇಯ ದಧಿಕ್ಷೀರಪಕ್ವರಂಭಾಸಿತಾಯುತಂ ।
ನಾನಾವ್ಯಂಜನಸಂಕೀರ್ಣಂ ಸೋಪದಂಶಂ ಸಪೂಪಕಂ ॥ ೧೩೯ ॥
ನಾನಾಫಲಯುತಂ ಹೃದ್ಯಂ ಸುಗಂಧಂ ಸರಸಂ ನವಂ ।
ನೈವೇದ್ಯಂ ದೇವದೇವಸ್ಯ ಪ್ರಸ್ಥಾದೂನಂ ನ ಶಸ್ಯತೇ ॥ ೧೪೦ ॥

---

ಮಾಲೆಯನ್ನಾಗಲಿ, ಕುಸುಮಗಳನ್ನೇ ಆಗಲಿ, ಮುತ್ತುಗಳನ್ನೂ, ಪುಷ್ಪಗಳನ್ನೇ ಆಗಲಿ ಸ್ವಾಮಿಯ ಶಿರಸ್ಸಿನಮೇಲೆ ಧರಿಸಬೇಕು.

೧೩೬. ಮಾಲೆಯು ಪಾದಗಳವರೆಗೂ ಇರತಕ್ಕದು. ಮಾಲ್ಯವು ಕೊರಳಿಂದ ತೊಡೆಯವರೆಗೂ ಇರಬೇಕು. ಕೇಶಮಧ್ಯದಲ್ಲಿದ್ದರೆ ಗರ್ಭಕವೆನಿಸುವುದು. ಶಿರಸ್ಸಿನಲ್ಲಿಯಾದರೋ ಪುಷ್ಪಾಂಜಲಿಯನ್ನಿಡಬೇಕು.

೧೩೭. ಗುಗ್ಗುಲು, ಅಗುರು, ಉಶೀರ (ವಾರಣದಬೇರು), ಶುದ್ಧವಾದ ತುಪ್ಪ, ಮಧುಚಂದನ ಇವುಗಳೊಡಗೂಡಿದ ಸುಗಂಧಭರಿತವಾದ ಧೂಪವನ್ನು ದೇವನಿಗೆ ಒಪ್ಪಿಸಬೇಕು. ಆಕಳ ತುಪ್ಪದಲ್ಲಿ ತೋಯಿಸಿದ ವರ್ತಿಯೊಡನೆಯಾಗಲಿ, ಎಳ್ಳೆಣ್ಣೆಯ ವರ್ತಿಯೊಡನಾಗಲಿ ಕೂಡಿದ ಕರ್ಪೂರದ ದೀಪವನ್ನು ಬೆಳಗಬೇಕು.

೧೩೮–೧೪೦. ನುಚ್ಚಾಗದಿರುವ ಅಕ್ಕಿಯನ್ನು ಚೆನ್ನಾಗಿ ತೊಳಸಿ ಹದವಾಗಿ ಬೇಯಿಸಿ ಪಕ್ವಮಾಡಿರುವ ಅನ್ನವನ್ನು ಅಭಿಘಾರ ಮಾಡಿ, ಗೋವಿನ ಹಾಲು, ಮೊಸರು, ಬಾಳೆಯಹಣ್ಣು, ಬಗೆಬಗೆಯ ವ್ಯಂಜನಗಳು, ಭಕ್ಷ್ಯಗಳು, ಮೋದಕ (ಕಡಬು)ಗಳು, ಬಗೆಬಗೆಯ ಹಣ್ಣುಗಳು ಇವುಗಳೊಡನೆ ಕೂಡಿ, ಮನೋಹರವೂ, ಸುಗಂಧಭರಿತವೂ, ಸುರಸವೂ, ಆಗತಾನೇ ಸಿದ್ಧಪಡಿಸಿದುದೂ ಆದ ನೈವೇದ್ಯವನ್ನು ದೇವದೇವನಿಗೆ ನಿವೇದಿಸತಕ್ಕುದು. ಒಂದು ಕೊಳಗಕ್ಕಿಂತ ಕಡಿಮೆಯಾಗಿ ನೈವೇದ್ಯವನ್ನಿಡಕೂಡದು.

ಧೂಪೇ ದೀಪೇ ಚ ನೈವೇದ್ಯೇ ಸ್ನಾನೇಽರ್ಘ್ಯೇ ಮಧುಪರ್ಕಕೇ ।
ವಸ್ತ್ರೇ ಯಜ್ಞೋಪವೀತೇ ಚ ದದ್ಯಾದಾಚಮನೀಯಕಂ ॥ ೧೪೧ ॥
ಅನ್ಯತ್ರ ಕೇವಲಂ ವಾರಿ ಸಂಸ್ಕೃತಂ ತ್ವೌಪಚಾರಿಕಂ ।
ನೈವೇದ್ಯಾಂತೇ ತ್ವಾಚಮನಂ ದದ್ಯಾಚ್ಚ ಕರಘೃಷ್ಟಿಕಂ ॥ ೧೪೨ ॥
ಸಗಂಧಚಂದನಂ ವಿಪ್ರಾಸ್ತಾಂಬೂಲಂ ಚ ದದೇತ್ತತಃ ।
ಸಕರ್ಪೂರಲವಂಗೈಲಾಜಾತಿಕ್ರಮುಕಸಂಯುತಂ ॥ ೧೪೩ ॥
ಅಷ್ಟೋತ್ತರಶತಂ ಜಪ್ತ್ವಾ ಮೂಲಮಂತ್ರಮನನ್ಯಧೀಃ ।
ಸ್ತುತ್ವಾ ಪ್ರದಕ್ಷಿಣಂ ಕೃತ್ವಾ ಪ್ರಾರ್ಥಯೇತ್ಪುರುಷೋತ್ತಮಂ ॥ ೧೪೪ ॥
ದೇವದೇವ ಜಗನ್ನಾಥ ಸರ್ವತೀರ್ಥಪ್ರವರ್ತಕ ।
ಸರ್ವತೀರ್ಥಮಯಶ್ಚಾಸಿ ಸರ್ವದೇವಮಯ ಪ್ರಭೋ ॥ ೧೪೫ ॥
ತ್ವತ್ಪ್ರಸಾದಾನ್ಮಯಾ ತೀರ್ಥರಾಜೇ ಸ್ನಾನಂ ಹಿ ಯತ್ಕೃತಂ ।
ತದಸ್ತು ಸಫಲಂ ದೇವ ಯಥೋಕ್ತಫಲದೋ ಭವ ॥ ೧೪೬ ॥

---

೧೪೧. ಧೂಪ, ದೀಪ, ನೈವೇದ್ಯ, ಅರ್ಘ್ಯ, ಸ್ನಾನ, ಮಧುಪರ್ಕ, ವಸ್ತ್ರ, ಯಜ್ಞೋಪವೀತ ಇವುಗಳನ್ನು ಸಮರ್ಪಣಮಾಡಿದ ಬಳಿಕ ಪರಮಾತ್ಮನಿಗೆ ಆಚಮನವನ್ನೊಪ್ಪಿಸಬೇಕು.

೧೪೨. ಇತರ ವಿಷಯಗಳಲ್ಲಿ ಸಂಸ್ಕರಿಸಿದ ಕಳಶೋದಕವನ್ನು ಮಾತ್ರ ಕೊಡಬೇಕು. ನೈವೇದ್ಯವಾದ ಮೇಲೆ ಆಚಮನವನ್ನು ಕೊಟ್ಟು ಕರೋದ್ವರ್ತನವನ್ನು ನೀಡತಕ್ಕದ್ದು.

೧೪೩. ಎಲೈ ವಿಪ್ರರೇ! ಆಮೇಲೆ ಕರ್ಪೂರ, ಲವಂಗ, ಏಲಕ್ಕಿ, ಜಾಯಿಕಾಯಿಗಳೊಡಗೂಡಿದ ಅಡಿಕೆಯ ಪುಡಿಯನ್ನಿಟ್ಟು ತಾಂಬೂಲವನ್ನು ಗಂಧಚಂದನಪೂರ್ವಕವಾಗಿ ಅರ್ಪಿಸಬೇಕು.

೧೪೪ ಇದಾದಬಳಿಕ ಮೂಲಮಂತ್ರವನ್ನು ನೂರೆಂಟುಬಾರಿ ಜಪಮಾಡಿ ಅನನ್ಯಮನಸ್ಕನಾಗಿ ಪರಮಾತ್ಮನನ್ನು ಸ್ತುತಿಸಿ ಆ ಪುರುಷೋತ್ತಮನಿಗೆ ಪ್ರದಕ್ಷಿಣಪೂರ್ವಕವಾದ ನಮಸ್ಕಾರಗಳನ್ನು ಮಾಡಬೇಕು.

೧೪೫. "ಎಲೈ ದೇವದೇವನೆ, ಜಗನ್ನಾಥನೆ! ನೀನು ಸಮಸ್ತ ತೀರ್ಥಗಳನ್ನೂ ಪ್ರವರ್ತನಗೊಳಿಸಿದವನು. ನೀನು ಸಮಸ್ತ ತೀರ್ಥಗಳ ಸ್ವರೂಪನಾಗಿರುವೆ. ಪ್ರಭೋ! ನೀನೇ ನಮಸ್ತ ದೇವತಾಮಯನು.

೧೪೬. ನಿನ್ನ ಅನುಗ್ರಹದಿಂದಲೇ ನಾನು ತೀರ್ಥರಾಜವೆನಿಸಿದ ಈ ಸಾಗರದಲ್ಲಿ ಸ್ನಾನವನ್ನು ಮಾಡಿದನಷ್ಟೆ! ಈ ಸ್ನಾನವು ಸಫಲವಾಗಲಿ. ಪರಮಾತ್ಮಾ! ಈ ಸ್ನಾನಕ್ಕೆ ಹೇಳಿರುವ ಫಲಗಳೆಲ್ಲವನ್ನೂ ನನಗೆ ದಯಗೈಯ್ಯುವವನಾಗು.

ಸಿಂಧುರಾಜಸ್ತ್ವಂ ಚ ವಿಭೋ ದ್ರವರೂಪೋಽಸ್ಯಸಂಶಯಂ ।
ಪಾಪಾಲಯೇ ನಿಮಗ್ನಂ ಮಾಂ ಪರಿತ್ರಾಹಿ ನಮೋಽಸ್ತು ತೇ ॥ ೧೪೭ ॥
ಇತ್ಥಂ ಪ್ರಪೂಜ್ಯ ದೇವೇಶಂ ನಾರಾಯಣಮನಾಮಯಂ ।
ತೀರ್ಥರಾಜಕೃತಸ್ನಾನಃ ಸರ್ವತೀರ್ಥಫಲಂ ಲಭೇತ್ ॥ ೧೪೮ ॥
ಗವಾಂ ಕೋಟಿ ಪ್ರದಾನೇನ ಕ್ರತುಕೋಟಿಕೃತೇನ ಚ ।
ಕೋಟಿಬ್ರಾಹ್ಮಣಭೋಜ್ಯೇನ ಮಹಾದಾನೈಶ್ಚ ಕೋಟಿಶಃ ।
ಯತ್ಪುಣ್ಯಂ ಕರ್ಮಿಣಾಂ ಪ್ರೋಕ್ತಂ ತದನೇನ ಹಿ ಲಭ್ಯತೇ ॥ ೧೪೯ ॥
ಧ್ಯಾನಂ ದಾನಂ ತಪೋ ಜಾಪ್ಯಂ ಶ್ರಾದ್ಧಂ ಚ ಸುರಪೂಜನಂ ।
ಸಿಂಧುರಾಜೇ ಕೃತಂ ಸರ್ವಂ ಕೋಟಿಕೋಟಿಗುಣಂ ಭವೇತ್ ॥ ೧೫೦ ॥
ಅಪಿ ನಃ ಸ ಕುಲೇ ಕಶ್ಚಿತ್ಸಿಂಧುಸ್ನಾಯೀ ಭವಿಷ್ಯತಿ ।
ದೇವೇಭ್ಯಶ್ಚ ಪಿತೃಭ್ಯಶ್ಚ ದಾಸ್ಯತೇ ಚ ತಿಲೋದಕಂ ॥ ೧೫೧ ॥
ಕ್ರಂದಂತಿ ಸರ್ವಪಾಪಾನಿ ಸಂಭ್ರಾಂತಾಃ ಸರ್ವಪಾತಕಾಃ ।
ಅನಿಷ್ಟಾನಿ ಪಲಾಯಂತೇ ಸಿಂಧುಸ್ನಾನೋದ್ಯತಸ್ಯ ವೈ ॥ ೧೫೨ ॥

---

೧೪೭. ಎಲೈ ಪ್ರಭುವೇ! ನೀನು ದ್ರವರೂಪನಾದ ಸಿಂಧುರಾಜನೇ ಆಗಿರುವೆಯೆಂಬುದರಲ್ಲಿ ಸಂಶಯವೇ ಇಲ್ಲವು. ಪಾಪವೆಂಬ ಮನೆಯಲ್ಲಿ ಅಡಗಿಕೊಂಡಿರುವ ನನ್ನನ್ನು ಕಾಪಾಡು! ನಿನಗಿದೋ ನಮಸ್ಕಾರವು.''

೧೪೮. ಎಲೈ ವಿಪ್ರರೇ! ಈ ರೀತಿ ತೀರ್ಥರಾಜವಾದ ಸಮುದ್ರದ ಸ್ನಾನವನ್ನು ಮಾಡಿ ಅನಾಮಯನಾದ ಶ್ರೀಜಗನ್ನಾಥನನ್ನು ಪೂಜಿಸಿದುದಾದರೆ ಸಮಸ್ತ ತೀರ್ಥಗಳಲ್ಲಿ ಮಿಂದ ಫಲವೂ ಲಭಿಸುತ್ತದೆ.

೧೪೯–೧೫೦. ಕೋಟಿ ಗೋದಾನಗಳಿಂದಲೂ, ಕೋಟಿ ಯಜ್ಞಗಳನ್ನು ಮಾಡುವುದರಿಂದಲೂ, ಕೋಟಿ ಮಹಾದಾನಗಳಿಂದಲೂ ಪುಣ್ಯಕರ್ಮಿಗಳಿಗೆ ಯಾವ ಪುಣ್ಯವುಂಟೋ ಆ ಪುಣ್ಯವೆಲ್ಲವೂ ಈ ತೀರ್ಥರಾಜ ಸ್ನಾನ ಮತ್ತು ಶ್ರೀಜಗನ್ನಾಥ ಪೂಜೆಗಳಿಂದುಂಟಾಗುತ್ತದೆ. ಸಮುದ್ರತೀರದಲ್ಲಿ ಸಗಿದ ಧ್ಯಾನ, ದಾನ, ತಪಸ್ಸು, ಜಪ, ಶ್ರಾದ್ಧ, ದೇವತಾಪೂಜೆ, ಇವೆಲ್ಲವೂ ಒಂದೊಂದೂ ಅನೇಕಕೋಟಿ ಫಲವನ್ನು ನೀಡುವುದಾಗುತ್ತದೆ.

೧೫೧. ''ನಮ್ಮ ವಂಶದಲ್ಲಿ ಸಮುದ್ರಸ್ನಾನವನ್ನು ಮಾಡಿ ದೇವತೆಗಳಿಗೂ ಪಿತೃದೇವತೆಗಳಿಗೂ ತರ್ಪಣವನ್ನು ಕೊಡುವವರಾರಾದರೂ ಹುಟ್ಟುತ್ತಾರೆಯೋ'' ಎಂದು ಎಲ್ಲರೂ ಆಶಿಸುವರು.

೧೫೨. ಸಮುದ್ರಸ್ನಾನವನ್ನು ಮಾಡಲುಜ್ಜುಗಿಸಿದ ಮಾನವನ ಸಮಸ್ತ ಪಾಪಗಳೂ, ಸಮಸ್ತ ಪಾತಕಗಳೂ, ಅನಿಷ್ಟಗಳೂ ತಳಮಳಿಸಿ ಕೂಗಿಕೊಂಡು ಓಡಿಹೋಗುತ್ತವೆ.

ಅನ್ಯತೀರ್ಥೇ ಕೃತಂ ಪಾಪಂ ಸಿಂಧುತೀರೇ ವಿನಶ್ಯತಿ ।
ಸಿಂಧುತೀರೇ ಕೃತಂ ಪಾಪಂ ಸಿಂಧುಸ್ನಾನೇ ವಿನಶ್ಯತಿ ॥ ೧೫೩ ॥
ಸಿಂಧುಸ್ನಾನರತಂ ನಿತ್ಯಂ ದೃಷ್ಟ್ವೈವ ಯಮಕಿಂಕರಾಃ ।
ದಿಶೋ ದಶ ಪಲಾಯಂತೇ ಸಿಂಹಂ ದೃಷ್ಟ್ವಾ ಯಥಾ ಮೃಗಾಃ ॥೧೫೪॥
ಯಮೋಽಪಿ ಭೀತಸ್ತಂ ದೃಷ್ಟ್ವಾ ಪ್ರಣಿಪತ್ಯ ಪ್ರಪೂಜ್ಯ ಚ ।
ನ ಶಕ್ನೋತಿ ತದಾ ಸ್ಥಾತುಂ ತಸ್ಯಾಗ್ರೇ ಪುಣ್ಯಕರ್ಮಿಣಃ ॥ ೧೫೫ ॥
ವಾಂಛಂತಿ ದೇವತಾ ನಿತ್ಯಂ ಮಾನುಷ್ಯಂ ಪ್ರಾಪ್ನುಯಾಮಹೇ ।
ಸಮ್ಯಕ್ಛುದ್ಧತನೋ ಭೂತ್ವಾ ಸಿಂಧುಸ್ನಾನಂ ಲಭೇಮಹಿ ॥ ೧೫೬ ॥
ಮೇರುಮಂದರಮಾತ್ರೋಽಪಿ ರಾಶಿಃ ಪಾಪಸ್ಯ ಕರ್ಮಣಃ ।
ಸಿಂಧುಸ್ನಾನೇನ ದಗ್ಧಃ ಸ್ಯಾತ್ತೂಲರಾಶಿರಿವಾನಲಾತ್ ॥ ೧೫೭ ॥
ಅಪ್ಸು ನಾರಾಯಣಂ ದೇವಂ ಸ್ನಾನಕಾಲೇ ಸ್ಮರೇತ್ಸದಾ ।
ಸಾಕ್ಷಾದ್ವಿಷ್ಣುಸ್ವರೂಪೋಽತ್ರ ಸಿಂಧೌ ಚೈವ ವಿಶೇಷತಃ ॥ ೧೫೮ ॥

---

೧೫೩. ಎಲೈ ವಿಪ್ರರೇ! ಇತರ ತೀರ್ಥಗಳಲ್ಲಿ ಮಾಡಿದ ಪಾಪವು ಸಮುದ್ರತೀರಕ್ಕೆ ಬಂದೊಡನೆಯೆ ಅಳಿದುಹೋಗುತ್ತದೆ. ಸಮುದ್ರತೀರದಲ್ಲಿಯೇ ಮಾಡಿದ ಪಾಪವಾದರೊ ಸಮುದ್ರಸ್ನಾನದಿಂದ ನಾಶವಾಗುತ್ತದೆ.

೧೫೪. ಸಮುದ್ರಸ್ನಾನದಲ್ಲಿ ತೊಡಗಿರುವ ಮಾನವನನ್ನು ಕಂಡೊಡನೆಯೇ ಯಮಕಿಂಕರರೆಲ್ಲರೂ, ಸಿಂಹವನ್ನು ಕಂಡು ಇತರ ವನಮೃಗಗಳೆಂತೋ ಅಂತು ದಶದಿಶೆಗಳಿಗೂ ಪಲಾಯನವಾಗುತ್ತಾರೆ.

೧೫೫. ಯಮನೂ ಸಹ ಅವನನ್ನು ನೋಡಿದೊಡನೆಯೇ ಹೆದರಿ ಅವನನ್ನು ನಮಸ್ಕರಿಸಿ ಪೂಜಿಸಿ ಗೌರವಿಸುತ್ತಾನೆ. ಆದರೂ ಸಮುದ್ರಸ್ನಾನವೆಂಬ ಪುಣ್ಯಕರ್ಮವನ್ನು ಮಾಡಿರುವ ಅವನ ಮುಂಗಡೆ ನಿಲ್ಲಲೂ ಸಮರ್ಥನಾಗುವುದಿಲ್ಲವು.

೧೫೬. ದೇವತೆಗಳೆಲ್ಲರೂ, "ನಾವು ಮನುಷ್ಯಜನ್ಮವನ್ನು ಪಡೆಯೋಣ. ಪರಿಶುದ್ಧದೇಹರಾಗಿ ಸಮುದ್ರಸ್ನಾನದಿಂದ ದೊರಕುವ ಪುಣ್ಯವನ್ನು ಸಂಪಾದಿಸೋಣ" ಎಂದು ಬಯಸುತ್ತಿರುತ್ತಾರೆ.

೧೫೭. ಅಯ್ಯಾ ದ್ವಿಜರೇ! ಮಾನವನೆಸಗಿದ ಪಾಪರಾಶಿಯು ಮೇರುಮಂದರಪರ್ವತಗಳಷ್ಟಿದ್ದರೂ ಸಹ ಅದು ಸಮುದ್ರಸ್ನಾನಮಾತ್ರದಿಂದ ಹತ್ತಿಯ ರಾಶಿಯು ಬೆಂಕಿಯಿಂದೆಂತೋ ಅಂತು ದಗ್ಧವಾಗಿಹೋಗುತ್ತದೆ.

೧೫೮. ಸ್ನಾನಮಾಡುವಾಗ ಮಾನವನು ಯಾವಾಗಲೂ ನೀರಿನಲ್ಲಿ ಶ್ರೀಮನ್ನಾರಾಯಣನನ್ನು ಸ್ಮರಿಸಬೇಕು. ಅದರಲ್ಲಿ ಈ ಪುರುಷೋತ್ತಮಕ್ಷೇತ್ರದಲ್ಲಿರುವ ಸಮುದ್ರನಾದರೊ ಸಾಕ್ಷಾತ್ ವಿಷ್ಣುಸ್ವರೂಪವೇ ಆಗಿರುವುದು.

ಬ್ರಹ್ಮಘ್ನೋ ವಾ ಸುರಾಪೋ ವಾ ಗೋಘ್ನೋ ವಾ ಪಂಚಪಾತಕೀ ।
ಸರ್ವೇ ತೇ ನಿಷ್ಕೃತಿಂ ಯಾಂತಿ ಸಿಂಧುಸ್ನಾನಾನ್ನ ಸಂಶಯಃ ॥ ೧೫೯ ॥
ಕಪಿಲಾಕೋಟಿದಾನಾಚ್ಚ ಸಿಂಧುಸ್ನಾನಂ ವಿಶಿಷ್ಯತೇ ।
ಸಕೃತ್ಸಿಂಧ್ವವಗಾಹೇನ ಕುಲಕೋಟಿಂ ಸಮುದ್ಧರೇತ್ ॥ ೧೬೦ ॥
ಸರ್ವತೀರ್ಥೇಷು ಯತ್ಪುಣ್ಯಂ ಸರ್ವೇಷ್ವಾಯತನೇಷು ಚ ।
ತತ್ಫಲಂ ಲಭತೇ ಸರ್ವಂ ಸಿಂಧುಸ್ನಾನಾನ್ನ ಸಂಶಯಃ ॥ ೧೬೧ ॥
ಯ ಇಚ್ಛೇತ್ಸಫಲಂ ಜನ್ಮ ಜೀವಿತುಂ ಶ್ರುತಮೇವ ವಾ ।
ಸ ಪಿತೄಂಸ್ತರ್ಪಯೇತ್ಸಿಂಧುಮಭಿಗಮ್ಯ ಸುರಾಂಸ್ತಥಾ ॥ ೧೬೨ ॥
ಚತ್ವಾರಃ ಸುಲಭಾ ವೇದಾಃ ಸಷಡಂಗಪದಕ್ರಮಾಃ ।
ಸುಲಭಾನಿ ಕುರುಕ್ಷೇತ್ರೇ ದಾನಾನಿ ವಿವಿಧಾನಿ ಚ ॥ ೧೬೩ ॥
ಚಾಂದ್ರಾಯಣಾನಿ ಕೃಚ್ಛ್ರಾಣಿ ತಪಾಂಸಿ ಸುಲಭಾನ್ಯಪಿ ।
ಅಗ್ನಿಷ್ಟೋಮಾದಯೋ ಯಜ್ಞಾಃ ಸುಲಭಾ ಬಹುದಕ್ಷಿಣಾಃ ॥ ೧೬೪ ॥

---

೧೫೯. ಬ್ರಹ್ಮಹತ್ಯೆ ಮಾಡಿದವನಾಗಲಿ, ಸುರಾಪಾನ ಮಾಡಿದವನಾಗಲಿ, ಗೋಹತ್ಯೆ ಮಾಡಿದವನಾಗಲಿ, ಅಥವಾ ಈ ಪಂಚಮಹಾಪಾತಕಗಳನ್ನೂ ಮಾಡಿದವನೇ ಆಗಲಿ ಸಮುದ್ರಸ್ನಾನದಿಂದ ನಿಷ್ಕೃತಿಯನ್ನು ಪಡೆಯುತ್ತಾನೆ.

೧೬೦. ಒಂದುಕೋಟಿ ಕಪಿಲಗೋವುಗಳ ದಾನಕ್ಕಿಂತಲೂ, ಸಮುದ್ರಸ್ನಾನವು ವಿಶೇಷವಾದುದು. ಒಂದುಬಾರಿ ಸಮುದ್ರಸ್ನಾನವನ್ನು ಮಾಡಿದುದಾದರೆ ಮಾನವನು ಕುಲಕೋಟಿಗಳನ್ನುದ್ಧರಿಸುವವನಾಗುತ್ತಾನೆ.

೧೬೧–೧೬೨. ಸಕಲ ತೀರ್ಥಗಳಲ್ಲಿ ಸ್ನಾನಮಾಡುವುದರಿಂದಲೂ, ಸಮಸ್ತ ದೇವಾಲಯಗಳ ಸಂದರ್ಶನದಿಂದಲೂ, ಯಾವ ಪುಣ್ಯವು ಲಭಿಸುತ್ತದೆಯೋ ಆ ಪುಣ್ಯಫಲವೆಲ್ಲವೂ ಸಮುದ್ರಸ್ನಾನದಿಂದ ಲಭಿಸುತ್ತದೆಯೆಂಬುದರಲ್ಲಿ ಸಂಶಯವಿಲ್ಲವು. ಯಾವ ಮಾನವನು ತನ್ನ ಜನ್ಮವೂ, ಬಾಳೂ, ತಾನು ಕೇಳಿದ ಧರ್ಮೋಪದೇಶ, ತಾನು ಮಾಡಿದ ವೇದಾಧ್ಯಯನಗಳೂ ಸಫಲವಾಗಬಯಸುತ್ತಾನೆಯೋ ಅವನು ಸಮುದ್ರಸ್ನಾನಮಾಡಿ ದೇವಪಿತೃಗಳಿಗೆ ತರ್ಪಣವನ್ನೆಸಗಬೇಕು.

೧೬೩. ಅಯ್ಯಾ ವಿಪ್ರರೇ! ಲೋಕದಲ್ಲಿ ಷಡಂಗಸಹಿತವೂ, ಪದಕ್ರಮಯುತವೂ ಆದ ನಾಲ್ಕು ವೇದಗಳು ಸುಲಭವಾದುವು. ಕುರುಕ್ಷೇತ್ರಕ್ಕೆ ಹೋಗಿ ವಿವಿಧ ದಾನಗಳನ್ನು ಮಾಡುವುದು ಸುಲಭವು.

೧೬೪. ಚಾಂದ್ರಾಯಣಗಳೂ, ಕೃಛ್ರಗಳೂ. ತಪಸ್ಸುಗಳೂ ಸುಲಭವಾದವು. ಅಗ್ನಿಷ್ಟೋಮವೇ ಮೊದಲಾದ ಬಹುದಕ್ಷಿಣಸಹಿತವಾದ ಯಜ್ಞಗಳೂ ಸುಲಭವಾದವು.

ಸಿಂಧುತೋಯೈಶ್ಚ ಸಲಿಲೈರ್ದುರ್ಲಭಂ ಪಿತೃತರ್ಪಣಂ ।
ಮಾಸಂ ತರ್ಪಣಮಾತ್ರೇಣ ಪಿಂಡಾನಾಂ ಪಾತನೇನ ಚ ॥ ೧೬೫ ॥
ಸಿಂಧೌ ವೈ ಪಿತರಃ ಸರ್ವೇ ವಿಮಾನಾನ್ಸೂರ್ಯವರ್ಚಸಃ ।
ಸಿಂಧುತರ್ಪಣಸಂತುಷ್ಟಾಃ ಶ್ರಾದ್ಧಪಿಂಡಸುತರ್ಪಿತಾಃ ।
ಆರುಹ್ಯ ಸಹಸಾ ಯಾಂತಿ ಬ್ರಹ್ಮಲೋಕಂ ಸನಾತನಂ ॥ ೧೬೬ ॥
ಆದ್ಯಂತಯೋರ್ಜಗನ್ನಾಥಂ ಪೂಜಯಿತ್ವಾ ಯಥಾವಿಧಿ ।
ತೀರ್ಥರಾಜೇಽಭಿಷಿಚ್ಯ ಸ್ವಂ ನರಃ ಸ್ಯಾನ್ಮುಕ್ತಿಭಾಜನಂ ॥ ೧೬೭ ॥
ತತಸ್ತೀರ್ಥವಿಸರ್ಗಂ ಚ ಕೃತ್ವಾ ಶ್ರದ್ಧಮನಾಃ ಪುಮಾನ್ ।
ರಾಮಂ ಕೃಷ್ಣಂ ಸುಭದ್ರಾಂ ಚ ನತ್ವಾ ರೂಪಂ ವಿಚಿಂತಯೇತ್ ॥ ೧೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ವಿವಿಧೋತ್ಸವವಿಧಾನನಿರೂಪಣಂ"ನಾಮ ತ್ರಿಂಶೋಽಧ್ಯಾಯಃ

---

೧೬೫–೧೬೬. ಆದರೆ ಸಮುದ್ರಸ್ನಾನ ಮತ್ತು ಸಮುದ್ರೋದಕದಿಂದ ಪಿತೃತರ್ಪಣ ಇವು ಮಾತ್ರ ದುರ್ಲಭವು. ಒಂದು ತಿಂಗಳ ತರ್ಪಣಮಾತ್ರದಿಂದಲೂ, ಪಿಂಡದಾನದಿಂದಲೂ, ಪಿತೃದೇವತೆಗಳೆಲ್ಲರೂ ಸಂತುಷ್ಟರಾಗಿ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ವಿಮಾನಗಳನ್ನೇರಿ ಒಡನೆಯೇ ಸನಾತನವಾದ ಬ್ರಹ್ಮಲೋಕವನ್ನು ಸೇರುತ್ತಾರೆ.

೧೬೭–೧೬೮. ಶ್ರೀಜಗನ್ನಾಥನನ್ನು ಮೊದಲೂ ಆಮೇಲೆಯೂ ವಿಧಿವತ್ತಾಗಿ ಅರ್ಚಿಸಿ ತರುವಾಯ ತೀರ್ಥರಾಜವಾದ ಸಮುದ್ರದಲ್ಲಿ ಸ್ನಾನಮಾಡಿದುದಾದರೆ ಮಾನವನು ಮುಕ್ತಿಭಾಜನನಾಗುತ್ತಾನೆ. ತರುವಾಯ ಆ ತೀರ್ಥವಿಸರ್ಜನೆಯನ್ನು ಮಾಡಿ ಆ ಕ್ಷೇತ್ರದಲ್ಲಿರುವ ಶ್ರೀರಾಮಕೃಷ್ಣಸುಭದ್ರೆಯರನ್ನು ನಮಸ್ಕರಿಸಿ ಆ ಬ್ರಹ್ಮರೂಪವನ್ನು ಧ್ಯಾನಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ವಿವಿಧೋತ್ಸವವಿಧಾನನಿರೂಪಣ"ವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋಽಧ್ಯಾಯಃ

## ಇಂದ್ರದ್ಯುಮ್ನಸರಃಸ್ನಾನಮಾಹಾತ್ಮ್ಯಾದಿವರ್ಣನಮ್

ಜೈಮಿನಿರುವಾಚ :—

ಕೃತಕೃತ್ಯಂ ತದಾತ್ಮಾನಂ ಮನ್ಯಮಾನಸ್ತತೋ ವ್ರಜೇತ್ ।
ಅಶ್ವಮೇಧಾಂಗಸಂಭೂತಮಿಂದ್ರದ್ಯುಮ್ನಸರಃಪ್ರತಿ ॥ ೧ ॥
ಯಸ್ಯ ತೀರೇ ನಿವಸತಿ ನರಸಿಂಹಾಕೃತಿರ್ಹರಿಃ ।
ನರಸಿಂಹಮನುಪ್ರಾರ್ಥ್ಯ ತತ್ರ ಸ್ನಾಯಾದ್ಯಥಾವಿಧಿ ॥ ೨ ॥
ನರಸಿಂಹ ನಮಸ್ತುಭ್ಯಂ ಯಸ್ಯ ತೇ ಕ್ಷೇತ್ರ ಉತ್ತಮೇ ।
ಸಹಸ್ರಂ ವಾಜಿಮೇಧಸ್ಯ ಕೃತೋಽಶ್ಚಕ್ರೇ ನೃಪೋತ್ತಮಃ ॥ ೩ ॥
ಇಂದ್ರದ್ಯುಮ್ನಃ ಪ್ರಸಾದಾತ್ತೇ ತಸ್ಯ ಕ್ರತ್ವಂಗಸಂಭವೇ ।
ಸರಸಿ ಸ್ನಾತುಮಾಯಾತೋ ಮಾಮನುಜ್ಞಾಪಯ ಪ್ರಭೋ ॥ ೪ ॥

---

## ಕನ್ನಡದ ಅನುವಾದ

### ಇಂದ್ರದ್ಯುಮ್ನಸರಸ್ನಾನಮಹಾತ್ಮ್ಯಾದಿವರ್ಣನ

೧. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ! ಈ ರೀತಿ ಜ್ಯೇಷ್ಠ ಮಾಸದಲ್ಲಿ ಸಮುದ್ರಸ್ನಾನವನ್ನು ಮಾಡಿದ ತರುವಾಯ ಮಾನವನು ತಾನು ಕೃತಕೃತ್ಯನಾದನೆಂದು ಭಾವಿಸಿ ಆ ಪುರುಷೋತ್ತಮಕ್ಷೇತ್ರದಲ್ಲಿ ಇಂದ್ರದ್ಯುಮ್ನ ರಾಜನು ಮಾಡಿದ ಅಶ್ವಮೇಧಯಾಗಸಮಯದಲ್ಲಿ ಉದ್ಭವಿಸಿ ಅವನ ಹೆಸರಿನಿಂದಲೇ ಪ್ರಸಿದ್ಧವಾಗಿರುವ ಇಂದ್ರದ್ಯುಮ್ನಸರೋವರಕ್ಕೆ ಹೋಗಬೇಕು.

೨. ಆ ಸರೋವರದ ತೀರದಲ್ಲಿ ನೃಸಿಂಹರೂಪನಾದ ಶ್ರೀಹರಿಯು ನೆಲಸಿರುವನಷ್ಟೆ. ಈ ಮುಂದೆ ಹೇಳುವ ಪ್ರಕಾರ ಆತನನ್ನು ಪ್ರಾರ್ಥಿಸಿ, ಆ ಸರಸ್ಸಿನಲ್ಲಿ ಯಥಾವಿಧಿಯಾಗಿ ಸ್ನಾನಮಾಡಬೇಕು.

೩. "ಎಲೈ ನೃಸಿಂಹಸ್ವಾಮಿಯೇ! ಯಾವ ನಿನ್ನ ಈ ಉತ್ತಮಕ್ಷೇತ್ರದಲ್ಲಿ ನೃಪೋತ್ತಮನಾದ ಇಂದ್ರದ್ಯುಮ್ನನು ಅಶ್ವಮೇಧಸಹಸ್ರವನ್ನು ಮಾಡಿದನೋ ಆ ನಿನಗಿದೋ ನಮಸ್ಕಾರವು.

೪. ನಿನ್ನ ಅನುಗ್ರಹದಿಂದ ಆ ದೊರೆಯು ಮಾಡಿದ ಅಶ್ವಮೇಧಯಾಗಗಳ ಅಂಗವಾಗಿ ಉದಿಸಿ ಆತನ ಹೆಸರಿನಿಂದಲೇ ಪ್ರಸಿದ್ಧವಾಗಿರುವ ಈ ಸರೋವರದಲ್ಲಿ ನಾನು ಸ್ನಾನಮಾಡಲೈತಂದಿರುವೆನು. ಪ್ರಭುವೇ! ನನಗೆ ಅನುಜ್ಞೆಯನ್ನು ಕೊಡುವವನಾಗು."

ತತಸ್ತೀರ್ಥತಟಂ ಗತ್ವಾ ಕೃತಶೌಚಾಚಮನಕ್ರಿಯಃ ।
ಪ್ರಾರ್ಥಯೇದಂಜಲಿಂ ಕೃತ್ವಾ ಇಮಂ ಮಂತ್ರಮುದೀರಯೇತ್ ॥ ೫ ॥
ಅಶ್ವಮೇಧಾಂಗಗೋಕೋಟಿಖುರಕ್ಷುಣ್ಣಮಹೀತಲಃ ।
ತನ್ಮೂತ್ರಫೇನದಾನಾಂಭಃ ಪೂರಿತಾಖಿಲಪಾವನಃ ॥ ೬ ॥
ಸ್ನಾತುಂ ತವಾಗತಃ ಪುಣ್ಯೇ ಸರ್ವತೀರ್ಥಮಯೇ ಜಲೇ ।
ಪೂರ್ವಜನ್ಮಸಹಸ್ರೋತ್ಥಂ ಪಾಪಂ ಸ್ನಾನಾದ್ವಿಮೋಚಯ ॥ ೭ ॥
ಅಂತಃ ಪ್ರವಿಶ್ಯ ಚ ತತೋ ವಾರುಣೈಃ ಪಂಚಭಿರ್ದ್ವಿಜಾಃ ।
ಸ್ನಾಯಾದಂತರ್ಜಲೇ ಜಪ್ಯಾಸ್ತ್ರಿರಾವೃತ್ತ್ಯಾಘಮರ್ಷಣಂ ॥ ೮ ॥
ಅಶ್ವಮೇಧಾಂಗಸಂಭೂತ ತೀರ್ಥ ಸರ್ವಾಘನಾಶನ ।
ಜನ್ಮಕೋಟಿಭವಂ ಪಾಪಂ ತ್ವಯಿ ಸ್ನಾನಾದ್ವಿನಶ್ಯತು ॥ ೯ ॥
ಇಮಂ ಮಂತ್ರಂ ತ್ರಿರುಚ್ಚಾರ್ಯ ತ್ರಿಃಸ್ನಾಯಾತ್ತಜ್ಜಲೇ ದ್ವಿಜಾಃ ।
ಸಂಸ್ಮರೇದ್ವಿಷ್ಣುಗಾಯತ್ರ್ಯಾ ನರಸಿಂಹಾಕೃತಿಂ ಹರಿಂ ॥ ೧೦ ॥

---

೫. ಈ ರೀತಿ ಶ್ರೀನೃಸಿಂಹನನ್ನು ಪ್ರಾರ್ಥಿಸಿ ಅನುಜ್ಞೆಯನ್ನು ಪಡೆದ ತರುವಾಯ ಸರಸ್ಸಿನ ತೀರಕ್ಕೆ ಹೋಗಿ ಶೌಚ ಆಚಮನಾದಿಕ್ರಿಯೆಗಳನ್ನು ಮುಗಿಸಿ ಅಂಜಲಿಬಂಧವನ್ನು ಮಾಡಿಕೊಂಡು ಆ ಸರೋವರವನ್ನು ಈ ಮಂತ್ರದಿಂದ ಪ್ರಾರ್ಥಿಸತಕ್ಕುದು.

೬-೭. ಅಶ್ವಮೇಧಯಾಗದ ಸಮಯದಲ್ಲಿ ಇಂದ್ರದ್ಯುಮ್ನರಾಜನೆಸಗಿದ ದಾನದ ಗೋವುಗಳ ಗೊರಸುಗಳ ತುಳಿತದಿಂದ ಉದ್ಭವಿಸಿ ಅವುಗಳ ಗಂಜಳ, ನೊರೆ ಮತ್ತು ದಾನಜಲಗಳಿಂದ ತುಂಬಿ ಸಮಸ್ತವನ್ನೂ ಪಾವನಗೊಳಿಸುವ ಸಾಮರ್ಥ್ಯವುಳ್ಳ ಎಲೈ ಸರಸ್ಸೇ! ನಾನು ಸಕಲ ತೀರ್ಥಮಯವೂ, ಪುಣ್ಯಕರವೂ ಆದ ನಿನ್ನ ಜಲದಲ್ಲಿ ಸ್ನಾನಮಾಡಲು ಬಂದಿರುವೆನು. ಈ ಸ್ನಾನದಿಂದ ಹಿಂದಣ ಸಹಸ್ರಾರು ಜನ್ಮಗಳಲ್ಲಿ ಮಾಡಿದ ನನ್ನ ಪಾಪಗಳನ್ನು ಕಳೆಯುವವನಾಗು."

೮. ಇಂತು ಪ್ರಾರ್ಥಿಸಿದ ಬಳಿಕ ನೀರಿನಲ್ಲಿಳಿದು ಪಂಚವಾರುಣಮಂತ್ರಗಳನ್ನು ಹೇಳಿಕೊಂಡು ಸ್ನಾನಮಾಡಿ, ಅಘಮರ್ಷಣಮಂತ್ರವನ್ನು ಮೂರಾವೃತ್ತಿ ಜಪಿಸಬೇಕು.

೯. "ಎಲೈ ಪುಣ್ಯತೀರ್ಥವೇ! ನೀನು ಅಶ್ವಮೇಧಯಾಗಾಂಗವಾಗಿ ಆವಿರ್ಭವಿಸಿದವನು. ಸಮಸ್ತ ಪಾಪಗಳನ್ನೂ ನಾಶಗೊಳಿಸುವವನು. ನಿನ್ನಲ್ಲಿ ಸ್ನಾನಮಾಡುವುದರಿಂದ ಕೋಟಿಜನ್ಮಗಳಲ್ಲಿ ನಾನು ಮಾಡಿದ ಪಾಪಗಳೆಲ್ಲವೂ ಕಳೆಯಲಿ."

೧೦. ಎಲೈ ವಿಪ್ರರೇ! ಈ ಮಂತ್ರವನ್ನು ಮೂರಾವೃತ್ತಿ ಹೇಳಿಕೊಂಡು ಮೂರಾವೃತ್ತಿ ಸ್ನಾನಮಾಡತಕ್ಕುದು. ತರುವಾಯ ವಿಷ್ಣುಗಾಯತ್ರೀಮಂತ್ರ

ಆಪೋ ನಾರಾ ಇತಿ ಪ್ರೋಕ್ತಾ ಯಸ್ಮಾತ್ತಾ ನರಸೂನವಃ ।
ಅಯನಂ ಪ್ರಥಮಂ ಚಾಸ್ಯ ತಸ್ಮಾದಪ್ಸು ಹರಿಂ ಸ್ಮರೇತ್ ॥ ೧೧ ॥
ದೇವಾನೃಷೀನ್ಪಿತೄಂಶ್ಚೈವ ತರ್ಪಯೇದ್ವಿಧಿವನ್ನರಃ ।
ನರಸಿಂಹಂ ತತೋ ಗಚ್ಛೇತ್ಪಶ್ಚಿಮಾಭಿಮುಖಂ ಸ್ಥಿತಂ ॥ ೧೨ ॥
ಸಿದ್ಧಂ ಶಂಭುಂ ಕೃತ್ರಿಮಂ ವಾ ಪಶ್ಚಿಮಾಭಿಮುಖಂ ಹರಿಂ ।
ದೃಷ್ಟ್ವಾ ವಿಮುಚ್ಯತೇ ಪಾಪೈರ್ಜನ್ಮಕೋಟಿಸಮುದ್ಭವೈಃ ॥ ೧೩ ॥
ತಮಾಥರ್ವಣಮಂತ್ರೇಣ ಯಜೇಚ್ಚ ನರಕೇಸರಿಂ ।
ನಾರದೇನ ಪುರಾ ಹ್ಯೇಷ ಮಂತ್ರರಾಜಃ ಪ್ರತಿಷ್ಠಿತಃ ॥ ೧೪ ॥
ಇಂದ್ರದ್ಯುಮ್ನೇನ ತೇನೈವ ಚಿರಾದೇಷ ಉಪಾಸಿತಃ ।
ನರಸಿಂಹಾಕೃತೌ ನಾನ್ಯೋ ಮಂತ್ರಸ್ತತ್ಸದೃಶೋ ದ್ವಿಜಾಃ ॥ ೧೫ ॥
ಯಸ್ಯೋಚ್ಚಾರಣಮಾತ್ರೇಣ ತುಷ್ಟೋ ಭವತಿ ಕೇಸರೀ ।
ಅನೇನ ದಾರುವರ್ಷ್ಮಾ(?)ಭಿರ್ಬ್ರಹ್ಮಣಾ ಸಂಪ್ರತಿಷ್ಠಿತಃ ॥ ೧೬ ॥

---

ವನ್ನು ಪುರಶ್ಚರಣೆಮಾಡಿಕೊಂಡು ಶ್ರೀನೃಸಿಂಹಸ್ವರೂಪನಾದ ಶ್ರೀಹರಿಯನ್ನು ಸ್ಮರಿಸಬೇಕು.

೧೧–೧೩. ಜಲವು ನಾರಗಳೆಂದು ಹೇಳಿರುವುದರಿಂದ ಅವು ನರಸೂನುಗಳೆನಿಸಿವೆ. ಇದೇ ಆ ಭಗವಂತನ ಪ್ರಥಮಸೃಷ್ಟಿಯು. ಆದುದರಿಂದ ಜಲದಲ್ಲಿ ಶ್ರೀಹರಿಯನ್ನು ಸ್ಮರಿಸಬೇಕು. ಆಮೇಲೆ ಆ ಸರಸ್ಸಿನ ಜಲದಿಂದ ದೇವಋಷಿ ಪಿತೃಗಳಿಗೆ ವಿಧ್ಯುಕ್ತವಾಗಿ ತರ್ಪಣವನ್ನುಕೊಟ್ಟು ಆ ಸರಸ್ಸಿಗೆ ಪಶ್ಚಿಮಾಭಿಮುಖನಾಗಿರುವ ಶ್ರೀನೃಸಿಂಹನ ಸಂದರ್ಶನಕ್ಕಾಗಿ ಹೋಗತಕ್ಕುದು. ಉದ್ಭವವಾದ ಅಥವಾ ಕೃತ್ರಿಮವಾದ ಶಿವಲಿಂಗವನ್ನಾಗಲಿ, ಪಶ್ಚಿಮಾಭಿಮುಖವಾಗಿರುವ ಹರಿಯನ್ನಾಗಲಿ ಸಂದರ್ಶಿಸಿದುದಾದರೆ ಮಾನವನು ಕೋಟಿಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಬಿಡುಗಡೆಹೊಂದುತ್ತಾನೆ.

೧೪. ಎಲೈ ವಿಪ್ರರೇ! ಶ್ರೀನೃಸಿಂಹಮೂರ್ತಿಯನ್ನು ಅಥರ್ವವೇದೋಕ್ತವಾದ ಮಂತ್ರದಿಂದ ಪೂಜಿಸತಕ್ಕುದು. ಪೂರ್ವದಲ್ಲಿ ಈ ಮಂತ್ರರಾಜವು ನಾರದಮುನಿಯಿಂದ ಪ್ರಸಿದ್ಧಗೊಳಿಸಲ್ಪಟ್ಟಿತು.

೧೫. ಇಂದ್ರದ್ಯುಮ್ನಮಹಾರಾಜನು ಈ ಮಂತ್ರದಿಂದಲೇ ಸ್ವಾಮಿಯನ್ನು ಬಹಳಕಾಲ ಉಪಾಸನೆಮಾಡಿರುವನು. ಎಲೈ ದ್ವಿಜರೇ! ಶ್ರೀನೃಸಿಂಹಸ್ವರೂಪ ನಿರೂಪಣದಲ್ಲಿ ಈ ಮಂತ್ರಕ್ಕೆಣೆಯಾದ ಮತ್ತೊಂದು ಮಂತ್ರವಿರುವುದಿಲ್ಲವು.

೧೬. ಯಾವುದನ್ನು ಉಚ್ಚರಿಸಿದೊಡನೆಯೇ ಶ್ರೀನೃಸಿಂಹಸ್ವಾಮಿಯು ಸುಪ್ರೀತನಾಗುವನೋ ಅಂತಹ ಈ ಮಂತ್ರದಿಂದಲೇ ಬ್ರಹ್ಮದೇವನೂ ಸಹ ದಾರುಮೂರ್ತಿಗಳನ್ನು ಪ್ರತಿಷ್ಠೆಮಾಡಿದನು.

ಪೂರ್ವೋಕ್ತೈರುಪಚಾರೈಸ್ತು ಪೂಜಯೇನ್ನರಕೇಸರಿಂ ।
ಜಪಾಪ್ರಸೂನೈರರುಣೈರನ್ಯೈಶ್ಚೈವ ಸುಗಂಧಿಭಿಃ ॥ ೧೭ ॥
ಚಂದನಾಗುರುಕರ್ಪೂರೈರ್ಲೇಪಯೇನ್ನರಕೇಸರಿಂ ।
ಪಾಯಸಂ ಸಿತಯಾ ಯುಕ್ತಂ ಸೌರಭೇಯೇನ ಸರ್ಪಿಷಾ ॥ ೧೮ ॥
ಕರ್ಪೂರಖಂಡಸಂಯುಕ್ತಾನ್ಮೋದಕಾನ್ ಘೃತಪಾಚಿತಾನ್ ।
ಸಂಯಾವಾನ್ ಘೃತರೂಪಾಂಶ್ಚ ಫಲಂ ನಾನಾವಿಧಂ ತಥಾ ।
ಶರ್ಕರಾದಧಿಸಂಯುಕ್ತಂ ಶಾಲ್ಯನ್ನಂ ವಿನಿವೇದಯೇತ್ ॥ ೧೯ ॥
ದೃಷ್ಟ್ವಾ ಸ್ಪೃಷ್ಟ್ವಾ ನಮಸ್ಕೃತ್ವಾ ಸಂಪೂಜ್ಯ ನರಕೇಸರಿಂ ॥ ೨೦ ॥
ಸ್ವಾನ್‌ಸ್ವಾನಭೀಷ್ಟಾನಾಪ್ನೋತಿ ನರೋ ವೈ ನಾತ್ರ ಸಂಶಯಃ ।
ದೇವತ್ವಮಮರೇಶತ್ವಂ ಗಂಧರ್ವತ್ವಂ ಚ ಭೋ ದ್ವಿಜಾಃ ॥ ೨೧ ॥
ಈಶಿತ್ವಂ ಚ ವಶಿತ್ವಂ ಚ ಸಾರ್ವಭೌಮತ್ವಮೇವ ವಾ ।
ಯದ್ಯತ್ಕಾಮಯತೇ ಚಿತ್ತೇ ತತ್ತದಾಪ್ನೋತ್ಯಸಂಶಯಂ ॥ ೨೨ ॥
ಪಂಚತೀರ್ಥವಿಧಾನಂ ಚ ಕಥಿತಂ ಪೃಚ್ಛತಾಂ ದ್ವಿಜಾಃ ।
ದಿನಾನಿ ಪಂಚಕೃತ್ವೈತಾಂ ಪಂಚಭೂತಮಯೇ ಪುನಃ ।
ನ ದೇಹೇ ಪ್ರವಿಶೇನ್ಮರ್ತ್ಯೋ ವ್ರತೀ ವಿಷ್ಣುಪರಾಯಣಃ ॥ ೨೩ ॥

---

೧೭. ಹಿಂದೆಯೇ ನಿರೂಪಿಸಿರುವ ಕ್ರಮವನ್ನನುಸರಿಸಿ ಷೋಡಶೋಪಚಾರಗಳಿಂದ ದಾಸವಾಳ ಮತ್ತು ಇತರ ಸುಗಂಧಭರಿತವಾದ ಕೆಂಪು ಹೂಗಳಿಂದ ನೃಸಿಂಹನನ್ನು ಪೂಜಿಸಬೇಕು.

೧೮–೧೯. ಚಂದನ ಅಗುರು ಕರ್ಪೂರಗಳಿಂದ ಮಿಶ್ರವಾದ ದಿವ್ಯಗಂಧವನ್ನು ದೇವನಿಗೆ ಲೇಪನಮಾಡಬೇಕು. ಗೋಕ್ಷೀರ ಮತ್ತು ಘೃತಗಳು ಬೆರತ ಪಾಯಸ, ಕರ್ಪೂರಖಂಡಸಹಿತವಾಗಿ, ಘೃತಪಕ್ವವಾದ ಕಡಬುಗಳು, ಘೃತಪಕ್ವವಾದ ಯವೆಯ ಭಕ್ಷ್ಯಗಳು, ಬಗೆ ಬಗೆಯ ಹಣ್ಣುಗಳು, ಸಕ್ಕರೆ, ಮೊಸರುಗಳು ಬೆರೆತ ಶಾಲ್ಯನ್ನ ಇವುಗಳನ್ನೂ ಆ ದೇವನಿಗೆ ನಿವೇದಿಸಬೇಕು.

೨೦–೨೩. ಎಲೈ ಮುನಿಗಳಿರಾ! ಈ ರೀತಿ ಶ್ರೀನೃಸಿಂಹಸ್ವಾಮಿಯನ್ನು ಸಂದರ್ಶಿಸಿ, ಸ್ಪರ್ಶಿಸಿ, ನಮಸ್ಕರಿಸಿ ಪೂಜಿಸಿದುದಾದರೆ ಮಾನವರು ತಂತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಾರೆ. ಇದರಲ್ಲಿ ಸಂಶಯವಿಲ್ಲವು. ದೇವತ್ವ, ಅಮರೇಶ್ವರತ್ವ, ಗಂಧರ್ವತ್ವ, ಈಶಿತ್ವ, ವಶಿತ್ವ, ಸಾರ್ವಭೌಮತ್ವಗಳೇ ಅಲ್ಲದೆ ಮನಸ್ಸಿನಲ್ಲಿ ಇನ್ನೂ ಏನೇನನ್ನು ಬಯಸುವರೋ ಅವುಗಳೆಲ್ಲವನ್ನೂ ಮಾನವರು ಪಡೆಯುತ್ತಾರೆ. ನೀವು ಕೇಳಿದುದರಿಂದ ನಾನು ನಿಮಗೆ ಪಂಚತೀರ್ಥವಿಧಾನವನ್ನು ಹೇಳಿದೆನು. ಐದು ದಿನಗಳು ಈ ಪಂಚತೀರ್ಥವಿಧಾನವನ್ನು ಆಚರಿಸಿದರೆ ವ್ರತಿಯೂ, ವಿಷ್ಣುಭಕ್ತನೂ ಆದ ಮಾನವನು ಮತ್ತೊಮ್ಮೆ ಪಾಂಚಭೌತಿಕವಾದ ಮಾನವದೇಹವನ್ನು ಪ್ರವೇಶಿಸುವುದಿಲ್ಲವು.

ಪೌರ್ಣಮಾಸ್ಯಾಂ ಪ್ರತ್ಯುಷಸಿ ತೀರ್ಥರಾಜಜಲೇ ಪುನಃ ॥ ೨೪ ॥
ಪೂರ್ವೋಕ್ತವಿಧಿನಾ ಸ್ನಾತ್ವಾ ಶುದ್ಧಾಹಾರೋ ಜಿತೇಂದ್ರಿಯಃ ।
ಏಕಭುಕ್ತವ್ರತೇನೈವ ವರ್ತತೇ ಪ್ರೀತಯೇ ನರಃ ।
ಯಾವತ್ಪಂಚದಿನಾನಿ ಸ್ಯುಸ್ತಾವತ್ಕಾಲಂ ದ್ವಿಜೋತ್ತಮಾಃ ॥ ೨೫ ॥
ತತಃ ಪ್ರವಿಶ್ಯ ಪ್ರಾಸಾದಂ ಮಂಚಸ್ಥಂ ಪುರುಷೋತ್ತಮಂ ।
ರಾಮಂ ಸುಭದ್ರಾಂ ದೃಷ್ಟ್ವಾ ಚ ಮುಚ್ಯತೇ ಪಾಪಕಂಚುಕೈಃ ॥ ೨೬ ॥
ಸರ್ವತೀರ್ಥಮಯಾತ್ಕೂಪಾದುದ್ಧೃತೇನ ಸುಗಂಧಿನಾ ।
ವಾರಿಣಾ ಸ್ನಾಪ್ಯಮಾನಂ ತು ಯೋ ಜ್ಯೇಷ್ಠ್ಯಾಂ ಪಶ್ಯತೇ ಹರಿಂ ॥ ೨೭ ॥
ನ ತಸ್ಯ ಪಾಪಸಂಬಂಧ ಆತ್ಮನಿ ಪ್ರಭವಿಷ್ಯತಿ ।
ಯಾತ್ರಾಕರ್ತೃವಿಧಿಂ ವಕ್ಷ್ಯೇ ಶೃಣುಧ್ವಂ ಮುನಯಃ ಪರಂ ॥ ೨೮ ॥
ಚತುರ್ದಶ್ಯಾಂ ದೃಢಂ ಮಂಚಂ ಕಾರಯಿತ್ವಾ ಸುಶೋಭನಂ ।
ತೃಣಕಾಷ್ಠಮಯಂ ಲಿಪ್ತಂ ಸುಧಯಾ ಬಹುಲಂ ಶುಭಂ ॥ ೨೯ ॥
ಅಥವಾ ದಾರ್ಷದಂ ಕುರ್ಯಾಚ್ಚಿರಸ್ಥಾಯಿ ದ್ವಿಜೋತ್ತಮಾಃ ।
ಸ್ನಾನಾರ್ಥಂ ದೇವದೇವಸ್ಯ ವಿತ್ತಶಾಠ್ಯಂ ನಕಾರಯೇತ್ ॥ ೩೦ ॥

---

೨೪–೨೫. ವ್ರತಿಯಾದವನು ಶ್ರೀಹರಿಯ ಪ್ರೀತ್ಯರ್ಥವಾಗಿ ಪೂರ್ಣಿಮೆಯ ದಿನ ಪ್ರಾತಃಕಾಲದಲ್ಲಿ ಹಿಂದೆ ಹೇಳಿದ ಕ್ರಮವನ್ನನುಸರಿಸಿ ತೀರ್ಥರಾಜದಲ್ಲಿ ಸ್ನಾನಮಾಡಿ, ಐದು ದಿನಗಳವರೆಗೂ ಶುದ್ಧಾಹಾರನೂ, ಜಿತೇಂದ್ರಿಯನೂ, ಏಕಭುಕ್ತವುಳ್ಳವನೂ ಆಗಿರಬೇಕು.

೨೬. ಇದಾದತರುವಾಯ ದೇವಾಲಯವನ್ನು ಪ್ರವೇಶಿಸಿ ಮಂಚಸ್ಥನಾದ ಶ್ರೀಪುರುಷೋತ್ತಮನನ್ನೂ, ಬಲಭದ್ರದೇವನನ್ನೂ, ಸುಭದ್ರಾದೇವಿಯನ್ನೂ ದರ್ಶನಮಾಡಿದುದಾದರೆ ಮಾನವನು ಪಾಪದ ತೊಡಿಗೆಯಿಂದ ಮುಕ್ತನಾಗುತ್ತಾನೆ.

೨೭–೨೮. ಸರ್ವತೀರ್ಥಮಯವಾದ ಕೂಪದಿಂದ ಸೇದಿಕೊಂಡ ಸುಗಂಧ ಜಲದಿಂದ ಜ್ಯೇಷ್ಠಮಾಸದ ಪೂರ್ಣಿಮೆಯದಿನ ಸ್ನಾನಮಾಡಿ ಶ್ರೀಹರಿಯನ್ನು ಯಾವ ಮಾನವನು ನೋಡುತ್ತಾನೆಯೋ ಅವನಿಗೆ ಪಾಪದ ಸಂಪರ್ಕವಿರುವುದಿಲ್ಲವಲ್ಲದೆ ಅವನ ಅಂತರಾತ್ಮವು ಶುದ್ಧವಾಗುತ್ತದೆ. ಎಲೈ ವಿಪ್ರರೇ! ಇನ್ನು ಮುಂದೆ ಯಾತ್ರೆ ಮಾಡುವವನು ಅನುಸರಿಸಬೇಕಾದ ವಿಧಾನವನ್ನು ಹೇಳುತ್ತೇನೆ; ಕೇಳಿರಿ.

೨೯–೩೦. ಚತುರ್ದಶಿಯ ದಿನದಲ್ಲಿ ದೇವದೇವನಾದ ಜಗನ್ನಾಥನ ಸ್ನಾನಾರ್ಥವಾಗಿ ಮಂಗಳಕರವಾದ ಹುಲ್ಲು ಮತ್ತು ಕಟ್ಟಿಗೆಗಳ ಅಥವಾ ಬಹಳ

**ನಾನಾದ್ರುಮಗಣಾಕೀರ್ಣಂ ದಕ್ಷಿಣಾನಿಲಶೀತಲಂ ।**
**ಉಲ್ಲಸತ್ಸಿಂಧುಕಲ್ಲೋಲಜಂಘಾಲೋಪರಿ ಸಂಸ್ಕೃತಂ ॥ ೩೧ ॥**
**ಸಮುಚ್ಛ್ರಿತಮಹಾಮೂಲ್ಯವಿತಾನವರಶೋಭಿತಂ ।**
**ವಿರಲಾಚ್ಛಾದನಂ ಕುರ್ಯಾದ್ದೇವಾನಾಂ ದರ್ಶನಾಯ ವೈ ॥ ೩೨ ॥**
**ಆಯಾಂತಿ ಬ್ರಹ್ಮಣಾ ಸಾರ್ಧಂ ಸ್ನಪನಾಯ ಜಗತ್ಪತೇಃ ।**
**ಸ್ವರ್ಗಂಗಾಂಭಃ ಸಮಾದಾಯ ಪಾರಿಜಾತವಿಭೂಷಿತಂ ॥ ೩೩ ॥**
**ಬ್ರಹ್ಮರ್ಷಯಶ್ಚ ತ್ರಿದಶಾ ಬ್ರಹ್ಮಣಾ ಸಹಿತಾ ವಿಭುಂ ।**
**ಮಂಚಸ್ಥಂ ಸ್ನಾಪಯಂತೀಹ ವಚನಾತ್ಪರಮೇಷ್ಠಿನಃ ॥ ೩೪ ॥**
**ಜಯಶಬ್ದೈಶ್ಚ ಸ್ತುತಿಭಿರ್ವಂದ್ಯೋಽಯಂ ತ್ರಿದಿವೌಕಸಾಂ ।**
**ತಸ್ಮಾನ್ಮಂಚಸ್ತು ಕರ್ತವ್ಯೋ ಮಂಡಿತೋ ಮಾಲ್ಯಚಾಮರೈಃ ॥ ೩೫ ॥**
**ನಾನಾಮಣಿಸ್ರಜಾಹಾರಿ ದುಕೂಲಕೃತತೋರಣಂ ।**
**ಸುಗಂಧಧೂಪಸುರಭಿಚಂದನಾಂಭಃಸಮುಕ್ಷಿತಂ ॥ ೩೬ ॥**

---

ಕಾಲವಿರುವ ಕಲ್ಲಿನ ವೇದಿಕೆಯನ್ನು ರಚಿಸಿ ಸುಣ್ಣತೊಳಿಸಿ ಶುಭ್ರಗೊಳಿಸಬೇಕು. ವಿತ್ತಶಾಠ್ಯವನ್ನು ಮಾಡಬಾರದು.

೩೧–೩೨. ಬಗೆಬಗೆಯ ಗಿಡಗಳ ಗುಂಪೊಡಗೂಡಿ, ದಕ್ಷಿಣದ ಗಾಳಿಯಿಂದ ಶೀತಲವಾಗಿ, ಬೆಳಗುತ್ತಿರುವ ಸಾಗರದ ಅಲೆಗಳು ಸೋಕುತ್ತಿರುವ ಹುಲ್ಲಿನ ಮೇಲೆ ಸುಸಂಸ್ಕೃತವಾಗಿ, ಎತ್ತರವಾಗಿ, ಬಹು ಬೆಲೆಬಾಳುವುದಾಗಿ ಕಟ್ಟಿರುವ ಉತ್ತಮವಾದ ಮಂಟಪದಿಂದ ಈ ಸ್ನಾನಮಂಚವು ಶೋಭಿಸುತ್ತಿರಬೇಕು. ದೇವತೆಗಳ ದರ್ಶನಕ್ಕಾಗಿ ಬರುವ ಭಕ್ತರಿಗೋಸುಗ ವಿರಳವಾಗಿ ಚಪ್ಪರವನ್ನು ಹಾಕಿ ನೆರಳನ್ನು ಮಾಡಬೇಕು.

೩೩–೩೪. ಬ್ರಹ್ಮರ್ಷಿಗಳೂ, ದೇವತೆಗಳೂ ಬ್ರಹ್ಮದೇವನೊಡನೆ ಶ್ರೀ ಜಗನ್ನಾಥಸ್ವಾಮಿಯ ಸ್ನಾನಾರ್ಥವಾಗಿ ಪಾರಿಜಾತಪುಷ್ಪಮಿಶ್ರಿತವಾದ ದೇವ ಗಂಗಾಜಲವನ್ನು ತೆಗೆದುಕೊಂಡು ಬರುತ್ತಾರೆ. ಅವರು ಬ್ರಹ್ಮನೊಡನೆಯೇ ಮಂಚಸ್ಥನಾದ ಶ್ರೀಜಗನ್ನಾಥನಿಗೆ ಆತನ ಅಪ್ಪಣೆಯಂತೆ ಆ ಜಲದಿಂದ ಸ್ನಾನ ವನ್ನು ಮಾಡಿಸುತ್ತಾರೆ.

೩೫–೩೬. ಆ ಸಮಯದಲ್ಲಿ ಈ ಪ್ರಭುವು ಜಯ ಜಯಧ್ವನಿಗಳಿಂದಲೂ. ಸ್ತುತಿಗಳಿಂದಲೂ ದೇವತೆಗಳಿಂದ ನಮಸ್ಕರಿಸಲ್ಪಡುವವನಾಗುವನು. ಆದುದ ರಿಂದ ಪುಷ್ಪಚಾಮರಭೂಷಿತವಾದ ಆ ದಿವ್ಯಮಂಚವನ್ನು ರಚಿಸಬೇಕು. ಆ ಮಂಚವನ್ನು ವಿವಿಧ ರತ್ನಮಣಿಹಾರಗಳಿಂದಲೂ, ಮನೋಹರವಾದ ಪಟ್ಟು ವಸ್ತ್ರಗಳ ತೋರಣಗಳಿಂದಲೂ ಅಲಂಕರಿಸಿ ಸುಗಂಧಧೂಪಗಳನ್ನು ಹಾಕಿ, ಚಂದನಜಲಸೇಚನೆಯಿಂದ ತಂಪುಗೊಳಿಸಬೇಕು.

**ಏವಂ ಮಂಚಂ ಪ್ರತಿಷ್ಠಾಪ್ಯ ತಸ್ಯ ದಕ್ಷಿಣತೋ ದ್ವಿಜಾಃ ।**
**ಕೂಪಾದ್ವಾರಿ ಸಮುದ್ಧೃತ್ಯ ಕಲಶಾನ್ಸ್ವರ್ಣನಿರ್ಮಿತಾನ್ ॥ ೩೭ ॥**
**ಶಾಲಾಯಾಂ ಶಾಸ್ತ್ರದೃಷ್ಟೇನ ವಿಧಿನಾ ತ್ವಧಿವಾಸಯೇತ್ ॥ ೩೮ ॥**
**ಸುವಾಸಿತಂ ಜಲಂ ತೇಷು ಪಾವಮಾನ್ಯಾ ಪ್ರಪೂರಯೇತ್ ।**
**ಚತುರ್ದಶೀನಿಶಾಮಧ್ಯೇ ಕರ್ಮೈತತ್ಸಮುದಾಹೃತಂ ॥ ೩೯ ॥**
**ಶನೈಃ ಶನೈಶ್ಚ ನೀಯಾಸುರ್ಹರಿಂ ಹಲಪುರಸ್ಸರಂ ।**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ರಾಜ್ಞಾ ಸಂಮಾನಿತಾದೃತಾಃ ॥ ೪೦ ॥**
**ಚಾಮರೈಸ್ತಾಲವೃಂತೈಶ್ಚ ವೀಜ್ಯಮಾನಂ ನಿರಂತರಂ ।**
**ಪುರಾಕೃತಾನುಲೇಪಂ ತಂ ವಿಷ್ಣೋರಂಗಾನ್ನ ಹಾಪಯೇತ್ ॥ ೪೧ ॥**
**ಯಥಾ ಸುಗಂಧಲೇಪೇನ ಸುಪುಷ್ಟಾಂಗೋ ದಿನೇ ದಿನೇ ।**
**ತಥಾ ಪ್ರಯತ್ನತಃ ಕಾರ್ಯಃ ಕೃಶಾಂಗೋ ನ ಹಿ ಪುಷ್ಟಿಕೃತ್ ॥ ೪೨ ॥**
**ನಯೇಯುರಪ್ರಮಾದ್ಯಂತೋ ಭಗವಂತಮನಂ ದಿತಾಃ ।**
**ಪ್ರಮಾದತೋ ಯದಿ ಭವೇತ್ಪತನಂ ಮುರವೈರಿಣಃ ॥ ೪೩ ॥**

---

೩೭–೩೮. ಎಲೈ ವಿಪ್ರರೇ! ಈ ರೀತಿ ಮಂಚವನ್ನು ರಚಿಸಿ ಅದರ ದಕ್ಷಿಣಕ್ಕೆ ಇರುವ ಕೂಪದಿಂದ ನೀರನ್ನು ಸೇದಿತಂದು ಸುವರ್ಣನಿರ್ಮಿತವಾದ ಕಲಶಗಳಲ್ಲಿ ತುಂಬಿ ಶಾಸ್ತ್ರದೃಷ್ಟವಾದ ವಿಧಾನದಿಂದ ಯಜನಶಾಲೆಯಲ್ಲಿ ಆ ಕಲಶಗಳನ್ನು ಸ್ಥಾಪಿಸಬೇಕು.

೩೯. ಪವಮಾನಮಂತ್ರಗಳಿಂದ ಸುವಾಸಿತವಾದ ಜಲವನ್ನು ಆ ಕಲಶಗಳಲ್ಲಿ ತುಂಬಬೇಕು. ಚತುರ್ದಶಿಯ ಮಧ್ಯರಾತ್ರಿಯಲ್ಲಿ ಈ ಶುಭ ಕರ್ಮವನ್ನು ಮಾಡಬೇಕೆಂದು ಹೇಳಿದೆ.

೪೦–೪೨. ತರುವಾಯ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ ರಾಜನಾದವನಿಂದ ಸಮ್ಮಾನಾದರಗಳನ್ನು ಪಡೆದು ಸತ್ಕೃತರಾಗಿ ಬಲಭದ್ರದೇವನನ್ನು ಮುಂದಿರಿಸಿಕೊಂಡು ಶ್ರೀಪುರುಷೋತ್ತಮಸ್ವಾಮಿಯನ್ನು ಆ ಮಂಚದ ಬಳಿಗೆ ಕರೆತರಬೇಕು. ಚಾಮರವ್ಯಜನಗಳಿಂದ ಯಾವಾಗಲೂ ಆ ದೇವನನ್ನು ಬೀಸುತ್ತಲಿರಬೇಕು. ಪೂರ್ವದಲ್ಲಿ ಮಾಡಿದ್ದ ಲೇಪವನ್ನು ವಿಷ್ಣುವಿನ ಆ ದಾರುಮೂರ್ತಿಯಿಂದ ಬೇರ್ಪಡಿಸಕೂಡದು. ದಿನ ದಿನದಲ್ಲಿಯೂ ಸುಗಂಧಲೇಪದಿಂದ ಮೂರ್ತಿಯು ಪುಷ್ಟವಾದ ಅಂಗವುಳ್ಳದಾಗಿರುವಂತೆ ಪ್ರಯತ್ನಿಸಬೇಕು. ಅದು ಕೃಶಾಂಗವಾದುದಾದರೆ ಒಳ್ಳೆಯದಾಗುವುದಿಲ್ಲವು.

೪೩–೪೪. ಎಲೈ ವಿಪ್ರರೇ! ದೇವಾಲಯದಿಂದ ಆ ಭಗವಂತನನ್ನು ಬಹಳ ಜಾಗರೂಕತೆಯಿಂದ ಕರೆತರಬೇಕು. ಪ್ರಮಾದವಶದಿಂದ ಶ್ರೀಜಗನ್ನಾಥನ, ಬಲದೇವನ ಅಥವಾ ಸುಭದ್ರೆಯ ಪ್ರತಿಮೆಗಳಲ್ಲಿ ಯಾವುದಾದರೂ ನೆಲಕ್ಕೆ

ಬಲಸ್ಯ ವಾ ಸುಭದ್ರಾಯಾ ರಾಜ್ಞೋ ರಾಜ್ಯಸ್ಯ ಭೀತಿಕೃತ್ ।
ಅಪಿ ಪಾತಯತಾಂ ಹಾನಿಃ ಸಂತತೇರ್ಬಹುದುಃಖಿತಾ ॥ ೪೪ ॥
ನರಕೇ ನಿಯತಂ ವಾಸೋ ಭವೇತ್ತೇಷಾಂ ದುರಾತ್ಮನಾಂ ।
ವಿಮುಹ್ಯಂತಶ್ಚಿರಾದ್ದಾರುಮಯೀಯಂ ಪ್ರತಿಮಾ ಕಥಂ ॥ ೪೫ ॥
ತಿಷ್ಠೇದವಿಶ್ವಸಂತೋ ಯೇ ಭಗವದ್ದ್ರೋಹಿಣಸ್ತು ತೇ ।
ನರಕಂ ಪ್ರತಿಪದ್ಯಂತೇ ಸರ್ವಕರ್ಮಬಹಿಷ್ಕೃತಾಃ ॥ ೪೬ ॥
ಮೂಢಾನಾಂ ನಾಸ್ತಿಕಾನಾಂ ಚ ಕೃತಘ್ನಾನಾಂ ಹತಾತ್ಮನಾಂ ।
ಧರ್ಮಕೃತ್ಯೇಷು ಜಾಯಂತೇ ಅವಿಶ್ವಾಸಶ್ಚ ಯುಕ್ತಯಃ ॥ ೪೭ ॥
ಅದೃಷ್ಟಂ ಯಸ್ಯ ಯಾವದ್ಧಿ ಸ ತು ತೇನ ವಿನಿರ್ಮಿತಃ ।
ತದಂತೇ ತಸ್ಯ ಕ್ಷೀಯಂತೇ ಪ್ರಾಸಾದಪ್ರತಿಮಾದಯಃ ॥ ೪೮ ॥
ನಚಾಯಂ ನಿರ್ಮಿತಃ ಕೇನ ದ್ರುಮಸ್ಸೋಽಪಿ ಪ್ರವರ್ತಿತಃ ।
ವರಂ ದದಾತಿ ಯಾ ನೂನಂ ನಚಾಽಸೌ ಪ್ರತಿಮಾ ಮತಾ ॥ ೪೯ ॥
ನಿರ್ಮಿತಾಯಾಂ ಪ್ರತಿಕೃತೌ ಪುರಾ ಮನ್ವಂತರಾದಿಷು ।
ವ್ಯತೀತೇಷ್ವಪಿ ವರ್ಧಂತೇ ಜನಾನಾಂ ಚ ಸುಪರ್ವಣಾಂ ॥ ೫೦ ॥

---

ಬಿದ್ದುದಾದರೆ ರಾಜನಿಗೂ, ರಾಜ್ಯಕ್ಕೂ ಭಯವು ಸಂಭವಿಸುತ್ತದೆ. ಹಾಗೆ ಕೆಳಗೆ ಬೀಳಿಸುವವರಿಗೆ ಹಾನಿಯುಂಟಾಗುವುದಲ್ಲದೆ ಅವರ ಸಂತತಿಗೂ ದುಃಖವು ಸಂಭವಿಸುತ್ತದೆ

೪೫–೪೬. "ಇದು ಬಹಳಕಾಲದಿಂದಲೂ ಮರದ ಬೊಂಬೆಯೇ ಆಗಿರುವುದು. ಭಗವಂತನ ಮೂರ್ತಿಯೆಂತಾದೀತು?" ಎಂದು ಮೋಹಗೊಳ್ಳುವ ದುರಾತ್ಮರಿಗೆ ನರಕವಾಸವು ತಪ್ಪುವುದಿಲ್ಲವು. ಯಾರು ಆ ಮೂರ್ತಿಯನ್ನು ಭಗವಂತನ ಸ್ವರೂಪವೆಂದು ನಂಬುವುದಿಲ್ಲವೋ ಅವರು ಭಗವದ್ದ್ರೋಹಿಗಳೇ ಸರಿ. ಅವರು ಸಕಲ ಕರ್ಮಗಳಿಂದಲೂ ಬಹಿಷ್ಕೃತರಾಗಿ ನರಕದಲ್ಲಿ ಬೀಳುತ್ತಾರೆ.

೪೭. ಮೂಢರಿಗೂ, ನಾಸ್ತಿಕರಿಗೂ, ಕೃತಘ್ನರಿಗೂ, ದುರ್ಬುದ್ಧಿಯುಳ್ಳವರಿಗೂ ಧರ್ಮಕಾರ್ಯಗಳಲ್ಲಿ ಅಪನಂಬಿಕೆಯುಂಟಾಗುತ್ತದೆ. ಅದಕ್ಕೆ ಬೇಕಾದ ಉಪಾಯಗಳೂ ಅವರಿಗೆ ತೋರಿಬರುತ್ತವೆ.

೪೮–೪೯. ಯಾವನಿಗೆ ಎಷ್ಟು ಅದೃಷ್ಟವಿರುತ್ತದೆಯೋ ಅವನು ಅಷ್ಟೇ ಅದೃಷ್ಟದಿಂದಲೇ ನಿರ್ಮಿತನಾಗಿರುತ್ತಾನೆ. ಆ ಅದೃಷ್ಟವು ಮುಗಿದಮೇಲೆ ಅವನು ಮಾಡಿದ ದೇವಾಲಯ, ಅಲ್ಲಿಯ ಮೂರ್ತಿಗಳು, ಎಲ್ಲವೂ ಕ್ಷಯಿಸಿಹೋಗುತ್ತವೆ. ಈ ಮೂರ್ತಿಗಳು ಯಾವ ಮರದಿಂದಾದುವೋ ಆ ಮರವನ್ನು ಯಾರೂ ಹುಟ್ಟಿಹಾಕಿದುದಲ್ಲ; ನೀರುಹಾಕಿ ಬೆಳಸಿದುದೂ ಅಲ್ಲ. ಇದು ದಿಟವಾಗಿಯೂ ವರವನ್ನು ಕೊಡುವುದಾಗಿರುವುದು. ಇದು ಪ್ರತಿಮೆಯೆಂದು ತೋರುವುದಿಲ್ಲ.

ಭಕ್ತ್ಯಯುಸ್ತಾದೃಶೋ ವಿಪ್ರಾಃ ಸರ್ವೇಷಾಂ ಪೃಥಿವೀಕ್ಷಿತಾಂ ।
ಸ್ವಾರೋಚಿಷೇಽಂತರೇ ಚೈವ ಆವಿರ್ಭೂತಃ ಕೃಪಾನಿಧಿಃ ॥ ೫೧ ॥
ವೈವಸ್ವತೇಽಂತರೇ ಸಪ್ತವಿಂಶೇ ಚೈವ ಚತುರ್ಯುಗೇ ।
ದ್ವಾಪರಾಂತೇ ಸಮಾಯಾತೌ ತದಾ ಕೃಷ್ಣಾರ್ಜುನಾವುಭೌ ॥ ೫೨ ॥
ತ್ರಿದಿನಾನಿ ಸ್ಥಿತಾವತ್ರ ವ್ರತಸ್ಥೌ ಮಧುಸೂದನಂ ।
ಭಕ್ತ್ಯಾ ಸಂಪೂಜ್ಯ ತಂ ಸ್ತುತ್ವಾ ಜಗ್ಮತುರ್ದ್ವಾರಕಾಂ ಪುನಃ ॥ ೫೩ ॥
ನ ಕೇಽಪಿ ತತ್ವಂ ಜಾನಂತಿ ಮಾನುಷೀಂ ತನುಮಾಸ್ಥಿತಾಃ ।
ಅವತಾರಾಃ ಪ್ರವರ್ತಂತೇ ವಿಷ್ಣೋರಪಿ ಯುಗೇ ಯುಗೇ ॥ ೫೪ ॥
ಧರ್ಮಸ್ಥಾಪನಯಾ ವಿಪ್ರಾ ಲೀಯಂತೇ ಸ್ವಪದೇ ಪುನಃ ।
ಪೂರ್ವಂ ಚ ಬ್ರಹ್ಮಣಾ ಪ್ರೋಕ್ತಃ ಸ ಚಾನೇನ ಪರಸ್ಪರಂ ॥ ೫೫ ॥
ಸ್ಥಾತಾ ಪರಾರ್ಧಪರ್ಯಂತಂ ಭಗವಾನ್ ದಾರುರೂಪಧೃಕ್ ।
ಸದಾಯಂ ವರದೋ ವಿಷ್ಣುಃ ಶುದ್ಧಸತ್ವೇನ ಭಾವಿತಃ ॥ ೫೬ ॥
ಯಸ್ಯ ಯಾವಾಂಸ್ತು ವಿಶ್ವಾಸಸ್ತಸ್ಯ ಸಿದ್ಧಿಸ್ತು ತಾವತೀ ।
ಪ್ರಮಾದೀಕೃತವಿಶ್ವಾಸೋ ಭಕ್ತೋ ದೃಢಮತಿಃ ಪುಮಾನ್ ॥ ೫೭ ॥

---

೫೦–೫೧. ಪೂರ್ವದಲ್ಲಿ ಈ ಪ್ರತಿಗಳು ನಿರ್ಮಿತವಾಗಿ ಅನೇಕ ಮನ್ವಂತರಗಳು ಕಳೆದುಹೋಗಿದ್ದರೂ ಇವುಗಳಲ್ಲಿ ಜನಗಳ ಮತ್ತು ದೇವತೆಗಳ ಸಮಸ್ತ ರಾಜರ ಭಕ್ತಿಯು ಹೆಚ್ಚುತ್ತಲೇ ಇರುವುದು. ಕೃಪಾನಿಧಿಯಾದ ಈ ಪುರುಷೋತ್ತಮಪ್ರಭುವು ಸ್ವಾರೋಚಿಷ ಮನ್ವಂತರದಲ್ಲಿ ಆವಿರ್ಭವಿಸಿದನು.

೫೨–೫೩. ಎಲೈ ವಿಪ್ರರಿರಾ! ವೈವಸ್ವತ ಮನ್ವಂತರದ ಇಪ್ಪತ್ತೇಳನೆಯ ಚತುರ್ಯುಗದ ದ್ವಾಪರಯುಗದಲ್ಲಿ ಶ್ರೀಕೃಷ್ಣಾರ್ಜುನರೀರ್ವರೂ ಈ ಪುರುಷೋತ್ತಮಕ್ಷೇತ್ರಕ್ಕೆ ಬಂದು ಮೂರು ದಿನಗಳು ವ್ರತಸ್ಥರಾಗಿದ್ದು ಮಧುಸೂದನನನ್ನು ಭಕ್ತಿಯಿಂದ ಅರ್ಚಿಸಿ ಸ್ತುತಿಸಿ ದ್ವಾರಕಾವತಿಗೆ ಹಿಂತಿರುಗಿರುತ್ತಾರೆ.

೫೪–೫೬. ಭಗವತ್ತತ್ತ್ವವು ಯಾರಿಗೂ ತಿಳಿದಿರುವುದಿಲ್ಲ. ಚತುರ್ಯುಗಗಳಲ್ಲಿಯೂ ಶ್ರೀಮನ್ಮಹಾವಿಷ್ಣುವು ಮಾನವದೇಹಧಾರಿಯಾಗಿ ಅವತಾರಗಳನ್ನೆತ್ತುವನು. ಹೀಗೆ ಅವತಾರಗಳನ್ನೆತ್ತಿ ಧರ್ಮಸಂಸ್ಥಾಪನೆಯನ್ನು ಮಾಡಿದ ತರುವಾಯ ಆ ಅವತಾರಗಳು ಶ್ರೀಮನ್ಮಹಾವಿಷ್ಣುವಿನಲ್ಲಿಯೇ ಲೀನವಾಗುತ್ತವೆ. ಪೂರ್ವದಲ್ಲಿ ಬ್ರಹ್ಮದೇವನು ದಾರುರೂಪಿಯಾದ ಈ ಜಗನ್ನಾಥನು ತನ್ನ ಪರಾರ್ಧಪರ್ಯಂತವೂ ಈ ಭೂಲೋಕದಲ್ಲಿ ನೆಲಸಿರುತ್ತಾನೆಂದು ಹೇಳಿರುತ್ತಾನೆ. ಶುದ್ಧವಾದ ಭಕ್ತಿಯಿಂದ ಭಾವಿಸಿದುದಾದರೆ ಈ ಸ್ವಾಮಿಯು ವರಪ್ರದಾಯಕನಾಗುತ್ತಾನೆ.

೫೭–೫೮. ಎಲೈ ವಿಪ್ರರೇ! ಯಾರು ಯಾರಿಗೆ ಈ ಸ್ವಾಮಿಯಲ್ಲಿ ಎಷ್ಟೆಷ್ಟು

ಯತ್ನಾನುರೂಪಂ ಲಭತೇ ಫಲಮುಸ್ಮಾತ್ಸುದುರ್ಲಭಂ ।
ಪುರಾ ವಃ ಕಥಿತಂ ಸರ್ವಮಂಬರೀಷವಿಮೋಚನಂ ॥ ೫೮ ॥
ತತಸ್ತಸ್ಮಿನ್ ಜಗನ್ನಾಥೇ ಪರಮಾತ್ಮಸ್ವರೂಪಿಣಿ ।
ವಿಧಾಯ ಸುದೃಢಾಂ ಭಕ್ತಿಂ ವಸಧ್ವಂ ಪುರುಷೋತ್ತಮೇ ॥ ೫೯ ॥
ಅತೋಽಯಂ ಭಕ್ತಿತೋ ನೇಯಃ ಶ್ರೀಕೃಷ್ಣಮಂಚ ಉತ್ತಮಃ ।
ಸುಭದ್ರಾಬಲಭದ್ರೌ ಚ ರಾಜವತ್ಪರಿಚರ್ಯಯಾ ॥ ೬೦ ॥
ಉತ್ತೋಲಿತೇಷು ಛತ್ರೇಷು ಚಾಮರೈರ್ವೀಜಿತೇಷು ಚ ।
ಕಾಲಾಗುರುಸುಧೂಪಾಸು ದಿಕ್ಷು ಗಂಭೀರನಾದಿಷು ॥ ೬೧ ॥
ನಾನಾವಿಧೇಷು ವಾದ್ಯೇಷು ತ್ವಗಾರೇ ಪರಿಪೂರಿತೇ ।
ತಾರ್ಯತ್ರಿಕೇ ಸಾಧುವೃತ್ತೇರ್ದೀಪಿಕಾಶ್ರೇಣಿರಾಜಿತೇ ॥ ೬೨ ॥
ಅಂಧಕಾರೇಽಥ ಸರ್ವೇಷಾಂ ವರ್ಧಮಾನೇ ಮಹೋತ್ಸವೇ ।
ಅಚ್ಛಿನ್ನೇ ಶ್ರೀಪತೇರಂಗೇ ಪ್ರಮಾದಪರಿಶಂಕಯಾ ॥ ೬೩ ॥

---

ಭಕ್ತಿಯಿರುತ್ತದೆಯೋ ಅವ್ವರಮಟ್ಟಿಗೆ ಅಭೀಷ್ಟಸಿದ್ಧಿಯೂ ಉಂಟಾಗುವುದು. ನಂಬಿಕೆಯನ್ನು ಬಿಡದೆ ದೃಢವಾದ ಬುದ್ಧಿಯುಳ್ಳವನಾದರೆ ಮಾನವನು ಅವನ ಪ್ರಯತ್ನಕ್ಕೆ ಅನುರೂಪವಾದ ಈ ಪ್ರಭುವಿನ ಅನುಗ್ರಹದಿಂದ ದುರ್ಲಭಗಳಾದ ಫಲಗಳನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಹಿಂದೆಯೇ ಮಹಾಪಾಪಿಷ್ಠನಾದ ಅಂಬರೀಷನು ಮುಕ್ತಿಯನ್ನು ಪಡೆದ ಸಂಗತಿಯನ್ನು ನಿಮಗೆ ತಿಳಿಸಿರುತ್ತೇನೆ.

೫೯. ಆದುದರಿಂದ ಪರಮಾತ್ಮಸ್ವರೂಪಿಯಾದ ಈ ಜಗನ್ನಾಥಸ್ವಾಮಿಯಲ್ಲಿ ನಿಶ್ಚಲವಾದ ಭಕ್ತಿಯುಳ್ಳವರಾಗಿ ಶ್ರೀಪುರುಷೋತ್ತಮಕ್ಷೇತ್ರದಲ್ಲಿಯೇ ವಾಸಮಾಡಿರಿ.

೬೦. ಎಲೈ ವಿಪ್ರರೇ! ಆದುದರಿಂದಲೇ ಉತ್ತಮವಾದ ಶ್ರೀಕೃಷ್ಣಮೂರ್ತಿಯ ಮಂಚವೂ, ಬಲಭದ್ರ, ಸುಭದ್ರಾದೇವಿಯ ಮಂಚಗಳೂ ರಾಜೋಪಚಾರಗಳಿಂದುಪಚರಿಸಲ್ಪಟ್ಟು ಪರಮ ಭಕ್ತಿಭಾವದಿಂದ ಒಯ್ಯುತ್ತರತಕ್ಕವು.

೬೧-೬೪. ಶ್ವೇತಚ್ಛತ್ರಗಳನ್ನು ಎತ್ತಿಹಿಡಿದಿರಲು, ಚಾಮರಗಳನ್ನು ಬೀಸಿಹಾಕುತ್ತಿರಲು, ಕಾಲಾಗುರುಧೂಪಗಳೆತ್ತತ್ತಲೂ ಹರಡಿರಲು, ದಶದಿಶೆಗಳಲ್ಲಿಯೂ ವಿವಿಧವಾದ್ಯಗಳು ಗಂಭೀರವಾಗಿ ಧ್ವನಿಗೈಯುತ್ತಿರಲು ದೇವಾಲಯವು ತುತ್ತೂರಿಯ ಧ್ವನಿಗಳಿಂದ ತುಂಬಿರಲು ದೀಪಮಾಲೆಗಳು ಒಳ್ಳೆಯ ಬತ್ತಿಗಳಿಂದ ಬೆಳಗುತ್ತಿರಲು ಅರ್ಧರಾತ್ರಿಯಲ್ಲಿ ಮಹೋತ್ಸವವು ಬೆಳೆದು ಭಗವಂತನನ್ನೇ ಕಾಣದಂತಾಗಿ ಪ್ರಮಾದವಾಯಿತೇನೋ ಎಂಬ ಶಂಕೆಯುದಿಸಿ ಆ

ಪಟುಪಟ್ಟೈದುಕೂಲೇಷು ನೀಯಮಾನೇಷು ದೂರತಃ ।
ಗತೇರ್ವೇಗಾತ್ತದೋತ್ತಾನೀಕೃತಾಸ್ಯೇ ಜಗತಾಂ ಗುರೌ ॥ ೬೪ ॥
ಆವರ್ತದೃಷ್ಟಯೋ ದೇವಾ ದಿವಾರೋಹಣಶಂಕಿನಃ ।
ಜಯಸ್ವ ರಾಮಕೃಷ್ಣೇತಿ ಜಯಭದ್ರೇತಿ ಚೋಚಿರೇ ॥ ೬೫ ॥
ಏವಂ ಸುಲೀಲಂ ಭಗವಾನ್ ಜನ್ಮಜ್ಯೇಷ್ಠಾಭಿಷೇಚನೇ ।
ನೀಯತೇ ಮಂಚದೇಶಂ ತು ನಿಶೀಥೇ ಬ್ರಾಹ್ಮಣಾದಿಭಿಃ ॥ ೬೬ ॥
ಅಹಂಪೂರ್ವಿಕಶಬ್ದಸ್ತು ದೇವಾನಾಂ ಶ್ರೂಯತೇ ದಿವಿ ।
ದೇವದುಂದುಭಯಶ್ಚೈವ ಜಯಶಬ್ದವಿಮಿಶ್ರಿತಾಃ ॥ ೬೭ ॥
ತತೋ ಮಂಚಸ್ಥಿತಂ ಬ್ರಹ್ಮರೂಪಂ ಪ್ರತ್ಯರ್ಚಯಾ ಸಹ ।
ಆಚ್ಛಾದ್ಯ ಸರ್ವಾಣ್ಯಂಗಾನಿ ಮುಖವರ್ಜ್ಯಂ ಸುಚೇಲಕೈಃ ॥ ೬೮ ॥
ವಿನಾ ನಿವೇದ್ಯಂ ಸಂಪೂಜ್ಯ ಉಪಾಚಾರ್ಯೈಃ ಪುರೋದಿತೈಃ ।
ಅಧಿವಾಸಿತಕುಂಭೈಶ್ಚ ಶಾಂತಿಘೋಷಪುರಸ್ಸರಂ ॥ ೬೯ ॥

---

ಪ್ರಭುವನ್ನು ಉತ್ತಮವಾದ ಪಟ್ಟುವಸ್ತ್ರಗಳನ್ನು ಹೊದಿಸಿ ದೂರವಾಗಿ ಕರೆದೊಯ್ಯುತ್ತಿರುವಾಗ ಒಯ್ಯುವವರ ಗಮನವೇಗದಿಂದ ಆ ಜಗದ್ಗುರುವು ಮುಖವನ್ನು ಒಮ್ಮೆ ಮೇಲಕ್ಕೆತ್ತಿ ನೋಡುವನು.

೬೫. ಆಗ ದೇವತೆಗಳೆಲ್ಲರೂ, ಶ್ರೀಜಗನ್ನಾಥನು ಸ್ವರ್ಗಕ್ಕೇರಿ ಹೊರಟು ಹೋಗುವನೇನೋ ಎಂದು ಶಂಕಿಸಿ, "ಜಯರಾಮ, ಕೃಷ್ಣ ಜಯ! ಸುಭದ್ರಾ ದೇವಿ, ಜಯ ಜಯ!" ಎಂದು ಹೇಳುವರು.

೬೬. ಎಲೈ ವಿಪ್ರರೇ! ಈ ರೀತಿ ಪೂರ್ಣಿಮೆಯ ದಿನದ ಜನ್ಮಜ್ಯೇಷ್ಠಾಭಿಷೇಕದ ಸಮಯದಲ್ಲಿ ಬ್ರಹ್ಮಕ್ಷತ್ರವೈಶ್ಯರಿಂದ ಶ್ರೀಪುರುಷೋತ್ತಮಸ್ವಾಮಿಯು ಅದಕ್ಕಾಗಿಯೇ ನೂತನವಾಗಿ ರಚಿತವಾಗಿರುವ ಮಂಚದ ಬಳಿಗೆ ಬಹು ವಿಲಾಸಭರಿತವಾಗಿ ಬಿಜೆಮಾಡಿಸಲ್ಪಡುವನು.

೬೭. ಆಗ ದೇವದುಂದುಭಿಗಳ ಶಬ್ದಗಳೂ, ಜಯಜಯಕಾರಗಳೂ ಮಿಶ್ರವಾದ 'ನಾನು ಮುಂದು, ತಾನು ಮುಂದು' ಎಂಬ ದೇವತೆಗಳ ಧ್ವನಿಗಳು ಅಂತರಿಕ್ಷದಲ್ಲಿ ಕೇಳಿಬರುತ್ತವೆ.

೬೮. ಬಳಿಕ ಮಂಚದ ಮೇಲೆ ಮಂಡಿಸಿರುವ ಬ್ರಹ್ಮಸ್ವರೂಪಿಯಾದ ಶ್ರೀಜಗನ್ನಾಥಸ್ವಾಮಿಗೆ ಅರ್ಚನೆಯೊಡನೆ ಆ ಸ್ವಾಮಿಯ ಮುಖವನ್ನು ಮಾತ್ರ ಬಿಟ್ಟು ಸಮಸ್ತ ಅಂಗಗಳನ್ನೂ ಒಳ್ಳೆಯ ವಸ್ತ್ರಗಳಿಂದ ಆಚ್ಛಾದನೆಮಾಡತಕ್ಕದು.

೬೯-೭೦. ಪೂರ್ವದಲ್ಲಿಯೇ ವಿವರಿಸಿ ಹೇಳಿರುವಂತೆ ಆ ಪ್ರಭುವಿಗೆ ನೈವೇದ್ಯವೊಂದನ್ನು ಬಿಟ್ಟು ಉಳಿದ ಷೋಡಶೋಪಚಾರ ಪೂಜೆಯನ್ನು ಸಮರ್ಪಿಸಬೇಕು. ಯಜನಶಾಲೆಯಲ್ಲಿಟ್ಟಿರುವ ಪೂರ್ಣಕುಂಭಗಳ ಸುಗಂಧೋ

ಸಮುದ್ರಜ್ಯೇಷ್ಠಾಮಂತ್ರೇಣ ಸ್ನಾಪಯೇತ್ಸುರಪುಂಗವಾನ್ ।
ಪಶ್ಯತಾಮಭಿಷೇಕನ್ತು ನೃಣಾಂ ಕೃತಕೃತ್ಯತ್ವಹೇತವೇ ॥ ೨೦ ॥
ಸ್ನಾಪ್ಯಮಾನಂ ತು ಪಶ್ಯಂತಿ ಯೇ ನರಾಸ್ತತ್ರ ಸಂಸ್ಥಿತಾಃ ।
ಗರ್ಭೋದಕೇನ ಸ್ನಪನಂ ನತೇ ಪುನರವಾಪ್ನುಯುಃ ॥ ೨೧ ॥
ಜ್ಯೇಷ್ಠಾಸ್ನಾನಂ ಭಗವತೋ ಯೇ ಪಶ್ಯಂತಿ ಮುದಾನ್ವಿತಾಃ ।
ನತೇ ಭವಾಬ್ಧೌ ಮಜ್ಜಂತ ಯಾತ್ರಾಮುತ್ಕಂಠಮಾನಸಾಃ ॥ ೨೨ ॥
ಬುದ್ಧ್ಯಬುದ್ಧಿ ಕೃತಂ ಪುಂಸಾಮನಾದಿಃ ಪಾಪಸಂಚಯಃ ।
ತತ್ಕ್ಷಣಾನ್ನಾಶಯಾಯಾತಿ ಪಶ್ಯತಾಂ ಸ್ನಪನಂ ಹರೇಃ ॥ ೨೩ ॥
ಸತ್ಯ ಸತ್ಯಂ ಪುನಃ ಸತ್ಯಂ ಬ್ರವೀಮಿ ದ್ವಿಜಪುಂಪಗವಾ ।
ಸರ್ವಸಂತಾಪಶಮನಮಶೇಷಮಲನಾಶನಂ ॥ ೨೪ ॥
ಸ್ನಪನಂ ಶ್ರೀಪತೇರ್ಜ್ಯೈಷ್ಠ್ಯಾಮಭಿಭಕ್ತ್ಯಾವಿಲೋಕನಂ ।
ಪ್ರಾಯಶ್ಚಿತ್ತ ನಿಮಿತ್ತಾನಿ ಯಾನಿ ಪಾಪನಿಸಂತಿ ವೈ ॥ ೨೫ ॥
ತಾನಿ ಸರ್ವಾಣಿ ಕ್ಷೀಯಂತೇ ಪಶ್ಯತಾಂ ಸ್ನಪನಂ ಹರೇಃ ।
ನಾತಃ ಪರತರಂ ಕರ್ಮ ಹ್ಯನಾಯಾಸೇನ ಮೋಚನಂ ॥ ೨೬ ॥

---

ದಕದಿಂದ ಶಾಂತಿಘೋಷಪುರಸ್ಸರವಾಗಿ "ಸಮುದ್ರಜ್ಯೇಷ್ಠಾ" ಎಂಬ ಮಂತ್ರವನ್ನುಚ್ಚರಿಸಿಕೊಂಡು ದೇವತಾಮೂರ್ತಿಗಳಿಗೆಲ್ಲ ಸ್ನಾನವನ್ನು ಮಾಡಿಸಬೇಕು. ಇದರಿಂದ ಅಭಿಷೇಕವನ್ನು ಮಾಡುವವರೆಲ್ಲರೂ ಕೃತಕೃತ್ಯರಾಗುತ್ತಾರೆ.

೨೧. ಎಲೈ ವಿಪ್ರರೇ! ಶ್ರೀಜಗನ್ನಾಥಸ್ವಾಮಿಗೆ ನಡೆಯುವ ಈ ಜ್ಯೇಷ್ಠಾಸ್ನಾನದ ಸಮಯದಲ್ಲಿ ಅಲ್ಲಿದ್ದು ನೋಡುವ ಮಾನವರು ಮತ್ತೊಮ್ಮೆ ಗರ್ಭೋದಕದಿಂದ ಸ್ನಾನಮಾಡುವುದಿಲ್ಲವು.

೨೨. ಯಾವ ಮಾನವರು ಶ್ರೀಪುರುಷೋತ್ತಮನಿಗೆ ಜ್ಯೇಷ್ಠಾಪೂರ್ಣಿಮೆಯ ದಿನ ನಡೆಯುವ ಅಭಿಷೇಕ ಸಮಾರಂಭವನ್ನು ಸಂದರ್ಶಿಸುವರೋ ಅವರು ಮತ್ತೆ ಜನನಮರಣರೂಪವಾದ ಯಾತ್ರೆಯನ್ನು ಮಾಡಿ ಭವಸಾಗರದ ಜಲದಲ್ಲಿ ಸ್ನಾನಮಾಡಿ ಮುಳುಗುವುದಿಲ್ಲವು.

೨೩. ಶ್ರೀಹರಿಯ ಈ ಜ್ಯೇಷ್ಠಾಪೂರ್ಣಿಮೆಯ ಮಂಗಳಸ್ನಾನವನ್ನು ನೋಡುವ ಮಾನವರ ಅನಾದಿಯಾದ ಪಾಪರಾಶಿಯು ತತ್ಕ್ಷಣದಲ್ಲಿಯೇ ನಾಶವಾಗುತ್ತದೆ.

೨೪–೨೮. ಎಲೈ ದ್ವಿಜಶ್ರೇಷ್ಠರೇ! ಇದೋ, ಕೇಳಿರಿ. ನಾನು ಮೂರು ಮೂರು ಬಾರಿಗೂ ಸತ್ಯವಾಗಿ ಹೇಳುವೆನು. ಜ್ಯೇಷ್ಠಮಾಸದ ಪೂರ್ಣಿಮೆಯ ದಿನದಲ್ಲಿ ಶ್ರೀಪತಿಯ ಸ್ನಪನೋತ್ಸವವನ್ನು ಭಕ್ತಿಯಿಂದ ಅವಲೋಕಿಸುವ ಮಾನವರಿಗೆ ಸಕಲ ಸಂತಾಪವೂ ಶಮನವಾಗುತ್ತದೆ; ಸಮಸ್ತ ಮಲಗಳೂ

ಜ್ಯೇಷ್ಠಜನ್ಮದಿನೇ ಸ್ನಾನಂ ಹರೇರ್ಯೇರ್ದವಲೋಕಿತಂ ।
ಸ್ನಾನದಾನತಪಃಶ್ರಾದ್ಧಜಪಯಜ್ಞಾದಯಸ್ತು ಯೇ ॥ ೭೭ ॥
ವಿಧಯಃ ಕೋಟಿಗುಣಿತಾಃ ಕೋಟಿಜನ್ಮೋಪಪಾದಿತಾಃ ।
ಸ್ನಾನದರ್ಶನಪುಣ್ಯಸ್ಯ ಹರೇಸ್ತೇನ ತುಲಾಂ ಗತಾಃ ॥ ೭೮ ॥
ಭಕ್ತ್ಯಾ ಯಃ ಸ್ನಪನಂ ವಿಷ್ಣೋರೇಕಸ್ಮಿನ್ವತ್ಸರೇಽಪಿ ವಾ ।
ಪಶ್ಯನ್ನ ಶೋಚತೇ ವಿಪ್ರಾಃ ಸ ಸಂಸಾರವಿಮೋಚನೇ ॥ ೭೯ ॥
ತೇನೇಷ್ಟಂ ಕ್ರತುಭಿಃ ಪುಣ್ಯೈಃ ಶ್ರದ್ಧಾವಿಪುಲದಕ್ಷಿಣೈಃ ।
ಮಹಾದಾನಾನಿ ದತ್ತಾನಿ ಭೋಜಿತಾ ಕೋಟಿಶೋ ದ್ವಿಜಾಃ ॥ ೮೦ ॥
ಶ್ರಾದ್ಧಾನಿ ಗಯಶೀರ್ಷಾದೌ ಕೋಟಿಶಶ್ಚ ಕೃತಾನಿ ವೈ ।
ಪುಣ್ಯಕಾಲೇ ಚ ತೀರ್ಥಾದೌ ತಪಾಂಸಿ ಚರಿತಾನಿ ಚ ॥ ೮೧ ॥
ಅರ್ಧೋದಯಾದಿ ಯೋಗೇಷು ಕೋಟಿತೀರ್ಥೇಷು ಕೋಟಿಶಃ ।
ಸ್ನಾತಾನಿ ತೇನ ಭೋ ವಿಪ್ರಾ ಯಃ ಪಶ್ಯೇತ್ಸ್ನಪನಂ ಹರೇಃ ॥ ೮೨ ॥

---

ನಿವೃತ್ತಿಯಾಗುತ್ತವೆ: ಪ್ರಾಯಶ್ಚಿತ್ತವಾಗತಕ್ಕ ಯಾವ ಯಾವ ಪಾಪಗಳಿರುವುವೋ ಅವುಗಳೆಲ್ಲವೂ ಕ್ಷಯಿಸುತ್ತವೆ; ಜ್ಯೇಷ್ಠಮಾಸದಲ್ಲಿ ಶ್ರೀಹರಿಯ ಜನ್ಮದಿನ ನಡೆಯುವ ಅಭಿಷೇಕ ಮಹೋತ್ಸವವನ್ನು ದರ್ಶನಮಾಡುವುದಕ್ಕಿಂತಲೂ ಸಕಲ ಪಾಪನಿವಾರಕವಾದ ಬೇರೊಂದು ಪುಣ್ಯಕರ್ಮವಿರುವುದಿಲ್ಲವು; ಒಂದು ಕೋಟಿ ಜನ್ಮಗಳಲ್ಲಿ ಮಾಡಿದ ಸ್ನಾನ, ದಾನ, ತಪಸ್ಸು, ಶ್ರಾದ್ಧ, ಜಪ, ಯಜ್ಞ ಮೊದಲಾದ ಯಾವ ವಿಧಿಗಳಿರುವುವೋ ಅವುಗಳೆಲ್ಲವೂ ಒಂದುಕೋಟಿಸಲ ಗುಣಿತವಾದರೂ, ಶ್ರೀಹರಿಯ ಜ್ಯೇಷ್ಠಸ್ನಾನ ಸಂದರ್ಶನದಿಂದುಂಟಾಗುವ ಪುಣ್ಯಕ್ಕೆ ಸರಿತೂಗಲಾರದು.

೭೯. ಒಂದು ಸಂವತ್ಸರದಲ್ಲಿಯಾದರೂ ಯಾವ ಮಾನವನು ಶ್ರೀಜಗನ್ನಾಥ ಸ್ವಾಮಿಯ ಜ್ಯೇಷ್ಠಸ್ನಾನವನ್ನು ನೋಡುತ್ತಾನೆಯೋ ಅವನು ಸಂಸಾರ ವಿಮೋಚನದ ವಿಷಯದಲ್ಲಿ ಶೋಚಿಸುವುದಿಲ್ಲವು.

೮೦–೮೨. ಯಾವನು ಶ್ರೀಪುರುಷೋತ್ತಮನ ಈ ಪೂರ್ಣಿಮಾಸ್ನಾನ ಮಹೋತ್ಸವವನ್ನು ನೋಡುತ್ತಾನೆಯೋ ಅವನು ಶ್ರದ್ಧೆಯೊಡಗೂಡಿ ಭೂರಿ ದಕ್ಷಿಣೆಗಳುಳ್ಳ ಸಮಸ್ತಯಾಗಗಳನ್ನೂ ಮಾಡಿದಂತೆಯೇ ಸರಿ; ಗಜಾದಿ ಮಹಾ ದಾನಗಳನ್ನು ನೀಡಿದಂತೆಯೆ, ಕೋಟ್ಯಂತರ ವಿಪ್ರರಿಗೆ ಭೋಜನವಿಟ್ಟಂತೆಯೆ; ಗಯಾಶೀರ್ಷಾದಿಗಳಲ್ಲಿ ಕೋಟ್ಯಂತರಾವೃತ್ತಿ ಪಿತೃಶ್ರಾದ್ಧಗಳನ್ನೆಸಗಿದಂತೆಯೆ; ಉತ್ತರಾಯಣಾದಿ ಪುಣ್ಯಕಾಲಗಳಲ್ಲಿ ಪುಣ್ಯಕರವಾದ ತೀರ್ಥಗಳಲ್ಲಿ ತಪಸ್ಸು ಮಾಡಿದಂತೆಯೆ, ಅರ್ಧೋದಯ ಮಹೋದಯ ಯೋಗಗಳಲ್ಲಿ ಕೋಟಿ ತೀರ್ಥಗಳಲ್ಲಿ ಕೋಟಿಸಲ ಸ್ನಾನಮಾಡಿದಂತೆಯೆ ಎಂದು ತಿಳಿಯಿರಿ. ಇವೆಲ್ಲವೂ

**ಸತ್ಯಂ ಸತ್ಯಂ ಪುನಸ್ಸತ್ಯಂ ಬ್ರವೀಮಿ ದ್ವಿಜಪುಂಗವಾಃ ।**
**ನಾಽತಃ ಶ್ರೇಯಸ್ಕರಂ ಕರ್ಮ ಶಾಸ್ತ್ರದೃಷ್ಟಪಥಿಸ್ಥಿತಂ ॥ ೮೩ ॥**
**ಮಂಚಸ್ಥಂ ಸ್ನಾಪ್ಯಮಾನಂ ಹಿ ಯಃ ಪಶ್ಯೇತ್ಪುರುಷೋತ್ತಮಂ ।**
**ಸ್ನಾನಾಚ್ಛತಗುಣಂ ಪುಣ್ಯಂ ಲಭತೇ ವೈ ನ ಸಂಶಯಃ ॥ ೮೪ ॥**
**ಮಂಚಸ್ಥಿತಂ ಜಗನ್ನಾಥಂ ಸ್ನಾನಾರ್ದ್ರಂ ಯಸ್ತು ಪಶ್ಯತಿ ।**
**ಸಾಂದ್ರಾನಂದಾರ್ದ್ರಚಿತ್ತೋಽಸೌ ನ ಕಿಂಚಿತ್ಪಾಪಮಶ್ನುತೇ ॥ ೮೫ ॥**
**ಯದೇವ ಪುಣ್ಯಮುದಿತಂ ಸ್ನಾನದರ್ಶನಕರ್ಮಣಿ ।**
**ತತ್ತತ್ಫಲಮವಾಪ್ನೋತಿ ದೃಷ್ಟ್ವಾ ಮಂಚಸ್ಥಮಚ್ಯುತಂ ॥ ೮೬ ॥**
**ಏಕ ಏವ ಜಗನ್ನಾಥಸ್ತ್ರಿಧಾ ತತ್ರ ಸ್ಥಿತೋ ದ್ವಿಜಾಃ ।**
**ಏಕೈಕಸ್ಯಾಪಿ ಸ್ನಪನದರ್ಶನಂ ಭುಕ್ತಿಮುಕ್ತಿದಂ ॥ ೮೭ ॥**
**ಜಯಸ್ವ ರಾಮಭದ್ರೇತಿ ಜಯ ಭದ್ರೇತಿ ಯೋ ವದೇತ್ ।**
**ಜಯ ಕೃಷ್ಣ ಜಗನ್ನಾಥ ಜಯೇತ್ಯುಚ್ಚಾರಯನ್ಮುದಾ ॥ ೮೮ ॥**

---

ಗಳಿಂದಲೂ ಉಂಟಾಗುವ ಪುಣ್ಯವೆಲ್ಲವೂ ಅವನಿಗೆ ಶ್ರೀಜಗನ್ನಾಥನ ಜ್ಯೇಷ್ಠ ಶುದ್ಧ ಪೂರ್ಣಿಮಾಸ್ನಾನಸಂದರ್ಶನವೊಂದರಿಂದಲೇ ಲಭಿಸುತ್ತದೆ.

೮೩. ಎಲೈ ವಿಪ್ರರೆ! ಮತ್ತೊಮ್ಮೆ ನಾನು ಸತ್ಯವಾಗಿಯೂ ಹೇಳುವೆನು. ಶಾಸ್ತ್ರದೃಷ್ಟವಾದ ಮಾರ್ಗವಲ್ಲಿ ಇದಕ್ಕಿಂತಲೂ ಪುಣ್ಯತಮವಾದ ಯಾವ ಕರ್ಮವೂ ಇರುವುದಿಲ್ಲವು.

೮೪. ಮಂಚಸ್ಥಿತನಾದ ಶ್ರೀಪುರುಷೋತ್ತಮನಿಗೆ ನಡೆಯುವ ಜ್ಯೈಷ್ಠೀ ಸ್ನಾನವನ್ನು ನೋಡುವ ಮಾನವರಿಗೆ ಆ ಸ್ನಾನಕ್ಕಿಂತಲೂ ಅಧಿಕವಾದ ಪುಣ್ಯವು ಲಭಿಸುವುದೆಂಬುದರಲ್ಲಿ ಸಂಶಯವಿರುವುದಿಲ್ಲವು.

೮೫. ಮಂಚದಲ್ಲಿ ಮಿಂಡಿಸಿ ಸ್ನಾನದಿಂದ ತೋಯ್ದಿರುವ ಶ್ರೀಜಗನ್ನಾಥ ನನ್ನು ನೋಡುವವನು ಸಾಂದ್ರಾನಂದದಿಂದ ತೋಯ್ದ ಚಿತ್ತವುಳ್ಳವನಾಗುವನು. ಅವನಿಗೆ ಯಾವ ಪಾಪಲೇಪವೂ ಉಂಟಾಗುವುದಿಲ್ಲವು.

೮೬. ಜ್ಯೇಷ್ಠಸ್ನಾನದಿಂದಲೂ, ಪುರುಷೋತ್ತಮನ ಸಂದರ್ಶನದಿಂದಲೂ ಯಾವ ಯಾವ ಫಲವು ಲಭಿಸುವುದೆಂದು ಹೇಳಿದೆಯೋ ಆ ಎಲ್ಲ ಫಲವನ್ನೂ ಸ್ನಾನಮಂಚಸ್ಥಿತನಾದ ಶ್ರೀ ಜಗನ್ನಾಥ ಮೂರ್ತಿಯನ್ನು ಸಂದರ್ಶಿಸುವುದರಿಂದ ಲಭಿಸುತ್ತದೆ.

೮೭. ಶ್ರೀಪುರುಷೋತ್ತಮನೊಬ್ಬನೇ ಬಲರಾಮ, ಸುಭದ್ರಾ ಜಗನ್ನಾಥ ರೆಂಬ ಭೇದದಿಂದ ಮೂರುಮೂರ್ತಿಗಳಾಗಿ ಮೆರೆಯುತ್ತಿರುವನು. ಒಂದೊಂದು ಮೂರ್ತಿಯ ಸ್ನಾನದರ್ಶನದಿಂದಲೂ ಭುಕ್ತಿ ಮುಕ್ತಿಗಳುಂಟಾಗುತ್ತವೆ.

೮೮-೯೧. ಎಲೈ ವಿಪ್ರರೇ! ಪರಮಾತ್ಮನ ಸ್ನಾನಸಮಯದಲ್ಲಿ ಯಾರಾ

ಸ್ನಾನಕಾಲೇ ಸ ವೈ ಮುಕ್ತಿಂ ಪ್ರಯಾತಿ ದ್ವಿಜಸತ್ತಮಾಃ ।
ಅಧಿವಾಸಾಧಿಕಂ ತತ್ರ ಯೈಃ ಕೃತಂ ಸ್ನಾನಕರ್ಮಣಿ ॥ ೮೯ ॥
ತೇಷಾಂ ಶ್ರದ್ಧಾಮುದಾಯುಕ್ತಃ ಪ್ರದದ್ಯಾದ್ದಕ್ಷಿಣಾಃ ಪೃಥಕ್ ।
ಬ್ರಾಹ್ಮಣೇಭ್ಯಶ್ಚ ಮಿಷ್ಟಾನ್ನಂ ವಸ್ತ್ರಾಲಂಕರಣಾನಿ ಚ ॥ ೯೦ ॥
ಪ್ರದದ್ಯಾಚ್ಛ್ರದ್ಧಯಾ ಯುಕ್ತೋ ದೀನಾನಾಥಾಂಶ್ಚ ತರ್ಪಯೇತ್ ।
ಯೇ ದ್ರಷ್ಟುಮಾಗತಾಃ ಸ್ನಾನಂ ಜೀವನ್ಮುಕ್ತಾಸ್ತು ತೇ ಧ್ರುವಂ ॥ ೯೧ ॥
ತಾನ್ಯಥಾಶಕ್ತಿ ವೈ ರಾಜಾ ಮಾನಯೇತ್ಪ್ರೀತಯೇ ಹರೇಃ ।
ಸ್ನಾನಾವಶೇಷತೋಯೇನ ಸ್ನಾಯಾದ್ಬ್ರಾಸನಸ್ಥಿತಃ ॥ ೯೨ ॥
ನಾರೀ ವಾ ಪುರುಷೋ ವಾಪಿ ತಸ್ಯ ಪುಣ್ಯಂ ವದಾಮಿ ವಃ ।
ಕಲ್ಪಾತ್ ಸ್ಯಾಚ್ಚಿರರೋಗಾರ್ತೋ ಹ್ಯಪಮೃತ್ಯುಂ ಜಯೇದಸೌ ॥ ೯೩ ॥
ಅಪುತ್ರಾ ಮೃತವತ್ಸಾ ವಾ ವಂಧ್ಯಾ ವಾಪಿ ಲಭೇತ್ಸುತಂ ।
ಸುಭಗಃ ಸರ್ವಲೋಕಾನಾಂ ನಿರ್ಧನೋ ಧನವಾನ್ ಭವೇತ್ ॥ ೯೪ ॥

ದರೆ, "ರಾಮಭದ್ರ! ಜಯ ಜಯ!! ಸುಭದ್ರಾದೇವಿ! ಜಯ ಜಯ!! ಜಗನ್ನಾಥಾ! ಕೃಷ್ಣಾ, ಜಯ ಜಯ" ಎಂದು ಭಕ್ತ್ಯುದ್ರೇಕದಿಂದ ನುಡಿಯುತ್ತಾರೆಯೋ ಅವರು ಮುಕ್ತಿಯನ್ನು ಪಡೆಯುತ್ತಾರೆ. ಸ್ನಾನಸಮಯದಲ್ಲಿ ಅಧಿವಾಸಾದಿ ಕರ್ಮಗಳನ್ನು ಮಾಡುವ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಮೃಷ್ಟಾನ್ನಭೋಜನವನಿಟ್ಟು ವಸ್ತ್ರಾಲಂಕಾರಗಳನ್ನೂ, ದಕ್ಷಿಣೆಗಳನ್ನೂ ಕೊಡಬೇಕು. ದೀನರಿಗೂ, ಅನಾಥರಿಗೂ ಭೋಜನವನ್ನೇರ್ಪಡಿಸಬೇಕು. ಯಾರಾದರೆ ಶ್ರೀಜಗನ್ನಾಥನ ಜ್ಯೇಷ್ಠಸ್ನಾನಮಹೋತ್ಸವವನ್ನು ನೋಡಲು ಬಂದಿರುವರೋ ಅವರೆಲ್ಲರೂ ಜೀವನ್ಮುಕ್ತರೇ ಎಂಬುದರಲ್ಲಿ ಸಂಶಯವಿಲ್ಲವು.

೯೨–೯೩. ಎಲೈ ವಿಪ್ರರೇ! ರಾಜನಾದವನು ಅವರೆಲ್ಲರನ್ನೂ ಯಥಾಶಕ್ತಿಯಾಗಿ ಸನ್ಮಾನಿಸಬೇಕು. ಹೆಂಗಸಾಗಲಿ, ಗಂಡಸಾಗಲಿ ಸ್ವಾಮಿಗೆ ಸ್ನಾನ ಮಾಡಿಸಿ ಉಳಿದ ನೀರಿನಿಂದ ಸ್ನಾನಮಾಡುತ್ತಾರೆಯೋ ಅವರಿಗೆ ದೊರಕುವ ಪುಣ್ಯಫಲವನ್ನೀಗ ಹೇಳುತ್ತೇನೆ ಕೇಳಿರಿ. ಹಾಗೆ ಸ್ನಾನಗೈದ ಪುರುಷನು ಒಂದು ಕಲ್ಪಕಾಲದಿಂದಲೂ ರೋಗಾರ್ತನಾಗಿದ್ದರೂ ಅವನು ಅಪಮೃತ್ಯುವನ್ನು ಜಯಿಸುತ್ತಾನೆ.

೯೪. ಮಕ್ಕಳಿಲ್ಲದವಳಾಗಲಿ, ಮಗನನ್ನು ಕಳೆದುಕೊಂಡವಳಾಗಲಿ, ಬಂಜೆಯೇ ಆಗಿರಲಿ ಸ್ತ್ರೀಯು ಪುತ್ರನನ್ನು ಪಡೆಯುತ್ತಾಳೆ. ವಟ್ಟದರಿದ್ರನಾದ ಪುರುಷನು ಈ ಸ್ನಾನಮಹಿಮೆಯಿಂದ ಧನಿಕನಾಗಿ ಸಕಲರಿಗೂ ಸುಂದರರೂಪನಾಗುತ್ತಾನೆ.

**ಗುರ್ವಿಣೀ ಲಭತೇ ಪುತ್ರಂ ದೀರ್ಘಾಯುರ್ಗುಣವತ್ತರಂ ।**
**ಗಂಗಾದಿ ಸರ್ವತೀರ್ಥಾನಾಂ ಸ್ನಾನಜಂ ಫಲಮಶ್ನುತೇ ॥ ೯೫ ॥**
**ಸ್ನಾನದರ್ಶನಜಂ ಪುಣ್ಯಂ ಧರ್ಮಾತ್ಮಾ ಲಭತೇ ಧ್ರುವಂ ॥ ೯೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ "ಇಂದ್ರದ್ಯುಮ್ನಸರಃಸ್ನಾನಮಾಹಾತ್ಮ್ಯಾದಿವರ್ಣನಂ" ನಾಮ ಏಕತ್ರಿಂಶೋಽಧ್ಯಾಯಃ**

---

೯೫. ಗರ್ಭಿಣಿಯು ದೀರ್ಘಾಯುವೂ, ಗುಣಾಢ್ಯನೂ ಆದ ಮಗನನ್ನು ಪಡೆಯುತ್ತಾಳೆ. ಸ್ತ್ರೀಪುರುಷರೆಲ್ಲರೂ ಗಂಗಾದಿ ಸಮಸ್ತತೀರ್ಥಸ್ನಾನ ದಿಂದುಂಟಾಗುವ ಫಲವನ್ನು ಈ ಸ್ನಾನಶೇಷೋದಕ ಸ್ನಾನದಿಂದ ಪಡೆಯುತ್ತಾರೆ.

೯೬. ಜ್ಯೇಷ್ಠೀಸ್ನಾನ, ಜಗನ್ನಾಥದರ್ಶನಗಳಿಂದುಂಟಾಗುವ ಫಲವನ್ನು ಶೇಷೋದಕಸ್ನಾನಮಾಡುವ ಧರ್ಮಾತ್ಮನಾದ ಮಾನವನು ಪಡೆಯುವ ನೆಂಬುದು ಖಂಡಿತವಾದುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನಸರಸ್ನಾನಮಾಹಾತ್ಮ್ಯಾದಿ ವರ್ಣನ"ವೆಂಬ ಮುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾತ್ರಿಂಶೋಽಧ್ಯಾಯಃ

## ದಕ್ಷಿಣಾಮೂರ್ತಿದರ್ಶನವರ್ಣನಂ— ಜ್ಯೇಷ್ಠಪಂಚಕವ್ರತನಿರೂಪಣಂ

**ಜೈಮಿನಿರುವಾಚ :—**

**ಅತಃಪರಂ ಪ್ರವಕ್ಷ್ಯಾಮಿ ದಕ್ಷಿಣಾಮೂರ್ತಿದರ್ಶನಂ ।**
**ಪದೇ ಪದೇಽಶ್ವಮೇಧಸ್ಯ ಫಲಂ ಯತ್ರೋಪಲಭ್ಯತೇ ॥ ೧ ॥**
**ತತೋ ನಾನಾವಿಧೈರ್ದಿವ್ಯೈರ್ಭಕ್ಷ್ಯಭೋಜ್ಯಾದಿಕೈಸ್ತಥಾ ।**
**ಯಥಾಶಕ್ತ್ಯುಪಚಾರೈಸ್ತು ಗಂಧೈರ್ಮಾಲ್ಯೈಶ್ಚ ಪೂಜಯೇತ್ ॥ ೨ ॥**
**ರಾಮಂ ಕೃಷ್ಣಂ ಸುಭದ್ರಾಂ ಚ ಗೀತನೃತ್ಯಾದಿಕೈಸ್ತಥಾ ।**
**ಪ್ರೇಕ್ಷಣೀಯೈಶ್ಚ ವಿವಿಧೈಃ ಶ್ರದ್ಧಯಾ ಚೋಪಪಾದಿತೈಃ ॥ ೩ ॥**
**ವಸ್ತ್ರಚಂದನಮಾಲ್ಯಾದ್ಯೈಃ ಪೂಜಯಿತ್ವಾ ದ್ವಿಜೋತ್ತಮಾನ್ ।**
**ಭಗವದ್ಬ್ರಾಹ್ಮಣಾಂಶ್ಚೈತಾನ್ ಮಹಾಭಾಗವತಾಂಸ್ತಥಾ ॥ ೪ ॥**
**ತತೋ ನಯೇದ್ದಕ್ಷಿಣಾಭಿಮುಖಾಂಸ್ತಾಂಸ್ತ್ರಿದಶೇಶ್ವರಾನ್ ।**
**ಉತ್ಸವಂ ಚ ಮಹತ್ಕೃತ್ವಾ ಪೂರ್ವಾನಯನವದ್ಧರೇಃ ॥ ೫ ॥**

---

## ಕನ್ನಡದ ಅನುವಾದ

### ದಕ್ಷಿಣಾಮೂರ್ತಿದರ್ಶನವರ್ಣನ ಜ್ಯೇಷ್ಠಪಂಚಕವ್ರತನಿರೂಪಣ

೧. ಜೈಮಿನಿಯು ಹೇಳುತ್ತಾನೆ:—ಎಲೈ ಮುನಿಗಳಿರಾ! ಇನ್ನು ನಿಮಗೆ, ಯಾವುದರಿಂದ ಅಡಿಗಡಿಗೂ ಅಶ್ವಮೇಧಯಾಗದ ಫಲವು ದೊರಕುತ್ತಿದೆಯೋ ಅಂತಹ ಶ್ರೀದಕ್ಷಿಣಾಮೂರ್ತಿಯ ದರ್ಶನವಿಧಾನವನ್ನು ಹೇಳುತ್ತೇನೆ; ಕೇಳಿರಿ.

೨–೩. ಹೀಗೆ ಜ್ಯೇಷ್ಠಸ್ನಾನವು ಮುಗಿದ ತರುವಾಯ ನಾನಾ ವಿಧವಾದ ಪೂಜಾದ್ರವ್ಯಗಳಿಂದಲೂ, ಭಕ್ಷ್ಯಭೋಜ್ಯಾದಿಗಳಿಂದಲೂ ಶಕ್ತ್ಯನುಸಾರವಾದ ಉಪಚಾರಗಳಿಂದಲೂ, ಗಂಧಮಾಲ್ಯಗಳಿಂದಲೂ, ಗೀತನೃತ್ಯಾದಿಗಳಿಂದಲೂ ಬಲರಾಮ, ಕೃಷ್ಣ, ಸುಭದ್ರಾದೇವಿಯರು ಮೂವರನ್ನೂ ಪೂಜಿಸಬೇಕು.

೪–೫. ವಸ್ತ್ರ ಚಂದನ ಪುಷ್ಪಾದಿಗಳಿಂದ ಭಗವದ್ಭಕ್ತರಾದ ಬ್ರಾಹ್ಮಣರನ್ನೂ, ಪರಮಭಾಗವತರನ್ನೂ ಸತ್ಕರಿಸಬೇಕು. ಇದಾದ ತರುವಾಯ ಆ ಮೂರ್ತಿಗಳನ್ನು ಪೂರ್ವದಲ್ಲಿ ಬಿಜಿಮಾಡಿಸಿದಾಗಲೆಂತೋ ಅಂತೆಯೇ ಮಹೋತ್ಸವವನ್ನು ಮಾಡಿಕೊಂಡು ದಕ್ಷಿಣಾಭಿಮುಖವಾಗಿ ಬಿಜಿಮಾಡಿಸತಕ್ಕುದು.

**ತಸ್ಮಿನ್ ಕಾಲೇ ಹರಿಂ ಪಶ್ಯೇದ್ವ್ರಜಂತಂ ದಕ್ಷಿಣಾಮುಖಂ ।**
**ರಾಮಂ ಸುಭದ್ರಾಂ ಯೋ ಮರ್ತ್ಯೋ ನ ಸ ಪ್ರಾಕೃತಮಾನುಷಃ ॥ ೬ ॥**
**ಸ್ನಾನಾರ್ಥಮಾಗತಾ ದೇವಾಃ ಸ್ನಾಪಯಿತ್ವಾ ಜಗದ್ಗುರುಂ ।**
**ಆಕಾಶೇಪಿ ಸಸಂಬಾಧಾಸ್ತಾವತ್ಕಾಲಂ ಸ್ಥಿತಾ ಹರಿಂ ।**
**ದ್ರಷ್ಟುಂ ವ್ರಜಂತಂ ಯಾಮ್ಯಾಶಾವದನಂ ಭವನಾಶನಂ ॥ ೭ ॥**
**ಧರ್ಮಶಾಸ್ತ್ರೇಷು ಯಾವಂತಿ ಧರ್ಮಕರ್ಮಾಣಿ ಸಂತಿ ವೈ ।**
**ತಾನಿ ಸರ್ವಾಣಿ ಸಂದ್ರಷ್ಟುಂ ವ್ರಜಂತಂ ದಕ್ಷಿಣಾಮುಖಂ ॥ ೮ ॥**
**ಸ್ನಾನದರ್ಶನಜಂ ಪುಣ್ಯಂ ಸಮಗ್ರಂ ಲಭತೇ ತು ಸಃ ।**
**ಸ್ನಾತಂ ಮುರಾರಿಂ ಯಃ ಪಶ್ಯೇದ್ವ್ರಜಂತಂ ದಕ್ಷಿಣಾಮುಖಂ ॥ ೯ ॥**
**ನೀರಾಜಯಿತ್ವಾ ದೇವೇಶಂ ರಾಮೇಣ ಸಹ ಭದ್ರಯಾ ।**
**ಪ್ರಾಸಾದಾಂತಃಪ್ರವಿಶ್ಯಾಥ ನ ಪಶ್ಯೇದ್ವೈ ಕಥಂಚನ ॥ ೧೦ ॥**

---

೬. ಆ ಸಮಯದಲ್ಲಿ ಯಾರಾದರೆ ಸುಭದ್ರಾದೇವಿಯೊಡನೆ ದಕ್ಷಿಣಾಭಿಮುಖವಾಗಿ ಮಹೋತ್ಸವವನ್ನು ಬೆಳಿಸಿರುವ ಶ್ರೀ ಜಗನ್ನಾಥಸ್ವಾಮಿಯನ್ನು ನೋಡುವನೋ ಅವನು ಸಾಮಾನ್ಯ ಮಾನವನೇ ಅಲ್ಲವು. ಅವನು ಜೀವನ್ಮುಕ್ತನೆಂದೇ ಹೇಳಬೇಕು.

೭. ಜ್ಯೇಷ್ಠಶುದ್ಧ ಪೂರ್ಣಿಮೆಯ ಜನ್ಮಸ್ನಾನಮಹೋತ್ಸವಕ್ಕಾಗಿ ದೇವಲೋಕದಿಂದೈತಂದಿರುವ ದೇವತೆಗಳೆಲ್ಲರೂ ಸ್ವಾಮಿಗೆ ಸ್ನಾನವನ್ನುಮಾಡಿಸಿ ತರುವಾಯ ಎಲ್ಲರೂ ಆಕಾಶದಲ್ಲಿ ಸಮ್ಮರ್ದವಾಗಿ ನಿಂತು ದಕ್ಷಿಣಾಭಿಮುಖನಾಗಿ ಉತ್ಸವ ಬರುವ ಭವನಾಶನನಾದ ಶ್ರೀಜಗನ್ನಾಥನನ್ನು ನೋಡುತ್ತಿರುವರು.

೮. ಎಲೈ ವಿಪ್ರರೇ! ದಕ್ಷಿಣಾಭಿಮುಖನಾದ ಜಗತ್ಪ್ರಭುವನ್ನು ಯಾವ ಮಾನವನು ನೋಡುತ್ತಾನೆಯೋ ಅವನು ಧರ್ಮಶಾಸ್ತ್ರದಲ್ಲಿ ಹೇಳಿರುವ ಎಲ್ಲ ಧರ್ಮಕಾರ್ಯಗಳ ಫಲವನ್ನೂ ಪಡೆಯುತ್ತಾನೆ.

೯. ಎಲೈ ವಿಪ್ರರೇ! ಪೂರ್ಣಿಮಾಸ್ನಾನಮಹೋತ್ಸವವನ್ನು ಮುಗಿಸಿಕೊಂಡು ದಕ್ಷಿಣಾಭಿಮುಖವಾಗಿಹೊರಟು ದಕ್ಷಿಣಾಮೂರ್ತಿಯಾಗಿ ಶೋಭಿಸುತ್ತ ಉತ್ಸವ ಬರುವ ಶ್ರೀಜಗನ್ನಾಥಸ್ವಾಮಿಯನ್ನು ಯಾರು ಸಂದರ್ಶಿಸುವರೋ ಅವರು ಆ ಸ್ವಾಮಿಯ ಸ್ನಾನ ದರ್ಶನದಿಂದ ಲಭಿಸುವ ಪುಣ್ಯಫಲವನ್ನು ಸಮಗ್ರವಾಗಿ ಪಡೆಯುತ್ತಾರೆ.

೧೦. ಈ ಪ್ರಕಾರ ದಕ್ಷಿಣಾಭಿಮುಖವಾಗಿ ಉತ್ಸವದಿಂದ ಬಿಜೆಮಾಡಿಸಿದ ಬಳಿಕ ದೇವಾಲಯದ ಬಳಿಗೆ ಬಂದು ಬಲಭದ್ರ ಸುಭದ್ರಾದೇವಿಯರೊಡಗೂಡಿಬರುವ ಆ ಪುರುಷೋತ್ತಮನಿಗೆ ನೀರಾಜನವನ್ನೆತ್ತಿ ಪ್ರಾಸಾದವನ್ನು ಪ್ರವೇಶಗೊಳಿಸಿದ ಬಳಿಕ ಆ ಸ್ವಾಮಿಯನ್ನು ಪುನಃ ಸಂದರ್ಶಿಸಕೂಡದು.

**ಏತತ್ತು ವಿಸ್ತರೇಣೋಕ್ತಂ ಪೂರ್ವಮೇವ ಮಯಾ ದ್ವಿಜಾಃ ॥ ೧೧ ॥**
**ಮುನಯ ಊಚುಃ:—**
**ಭಗವನ್ಯತ್ತ್ವಯಾ ಪ್ರೋಕ್ತಂ ಜ್ಯೇಷ್ಠಸ್ನಾನಪ್ರದರ್ಶನಾತ್ ।**
**ಫಲಂ ಪ್ರಾಪ್ನೋತಿ ನಿಯತಂ ತನ್ನೋ ಬ್ರೂಹಿ ವಿದಾಂವರ ॥ ೧೨ ॥**
**ಜೈಮಿನಿರುವಾಚ:—**
**ಹಂತ ವಃ ಕಥಯಿಷ್ಯಾಮಿ ತದ್ವ್ರತಂ ಜ್ಯೇಷ್ಠಪಂಚಕಂ ।**
**ನಾತಃ ಪರತರಂ ಪ್ರೋಕ್ತಮೃಷಿಭಿಃ ಶಾಸ್ತ್ರಪಾರಗೈಃ ॥ ೧೩ ॥**
**ಶ್ರೌತಸ್ಮಾರ್ತಪುರಾಣೋಕ್ತವ್ರತಾನಾಮಿದಮುತ್ತಮಂ ।**
**ಇದಂ ಪ್ರಥಮತಃ ಪ್ರೋಕ್ತಂ ಬ್ರಹ್ಮಣಾ ಪರಮೇಷ್ಠಿನಾ ॥ ೧೪ ॥**
**ಜ್ಯೇಷ್ಠತ್ವಾದ್ವ್ರತಮುಖ್ಯಾನಾಂ ಖ್ಯಾತಂ ತಜ್ಜ್ಯೇಷ್ಠಪಂಚಕಂ ।**
**ಸಮುದ್ರೋ ಜ್ಯೇಷ್ಠಫಲದಃ ಪ್ರಭುರ್ಜ್ಯೇಷ್ಠಫಲಪ್ರದಃ ॥ ೧೫ ॥**

---

೧೧. ಎಲೈ ವಿಪ್ರರೇ! ಈ ವಿಷಯವನ್ನು ಹಿಂದೆಯೇ ನಿಮಗೆ ವಿಸ್ತಾರವಾಗಿ ಹೇಳಿರುತ್ತೇನೆ.

೧೨. ಮುನಿಗಳು ಕೇಳುತ್ತಾರೆ:—ಭೋ ಭಗವನ್! ನೀನು ಈವರೆಗೆ ಅಪ್ಪಣೆಕೊಡಿಸಿದ ಶ್ರೀಜಗನ್ನಾಥಸ್ವಾಮಿಯ ಜ್ಯೇಷ್ಠಪೂರ್ಣಿಮೆಯ ಸ್ನಾನ ಮಹೋತ್ಸವ ಸಂದರ್ಶನದಿಂದುಂಟಾಗುವ ಪುಣ್ಯಫಲವನ್ನು ನಿಯತವಾಗಿಯೂ ಪಡೆಯುವುದೆಂತೆಂಬ ವಿಷಯವನ್ನು ಜ್ಞಾನಿಶ್ರೇಷ್ಠನಾದ ನೀನು ನಮಗೆ ತಿಳಿಸಬೇಕು.

೧೩. ಜೈಮಿನಿಯು ಹೇಳುತ್ತಾನೆ:—ಆಹಾ! ಬಹಳ ಸಂತೋಷವಾಗಿ ಹೇಳುತ್ತೇನೆ. ಅದೇ ಜ್ಯೇಷ್ಠಪಂಚಕವೆಂಬ ವ್ರತವು; ಶಾಸ್ತ್ರಪಾರಾಂಗತರಾದ ಋಷಿಗಳಿಂದ ಇದಕ್ಕಿಂತಲೂ ಶ್ರೇಷ್ಠವಾದ ವ್ರತವು ಉಕ್ತವಾಗಿರುವುದಿಲ್ಲವು.

೧೪. ಈ ಜ್ಯೇಷ್ಠಪಂಚಕವ್ರತವು ಶ್ರೌತಸ್ಮಾರ್ತಗಳಲ್ಲಿಯೂ ಪುರಾಣಾದಿಗಳಲ್ಲಿ ಹೇಳಿರುವ ಸಮಸ್ತ ವ್ರತಗಳಿಗಿಂತಲೂ ಅತ್ಯುತ್ತಮವಾದುದು. ಪರಮೇಷ್ಠಿಯಾದ ಬ್ರಹ್ಮದೇವನೇ ಈ ವ್ರತವನ್ನು ಮೊಟ್ಟಮೊದಲು ಈ ಲೋಕಕ್ಕೆ ಪ್ರಕಟಗೊಳಿಸಿದನು.

೧೫. ಈ ವ್ರತವು ವ್ರತಗಳಿಗೆಲ್ಲ ಜ್ಯೇಷ್ಠವಾ(ಹಿರಿಯದಾ)ದುದರಿಂದ ಇದಕ್ಕೆ ಜ್ಯೇಷ್ಠಪಂಚಕವೆಂದು ಹೆಸರು ಬಂದಿರುವುದು. ಪುರುಷೋತ್ತಮಕ್ಷೇತ್ರದಲ್ಲಿ ತೀರ್ಥರಾಜವೆನಿಸಿರುವ ಸಮುದ್ರವು ಜ್ಯೇಷ್ಠ ಫಲವನ್ನನುಗ್ರಹಿಸುವಂತಹುದು. ತೀರ್ಥರಾಜದಲ್ಲಿ ಜ್ಯೇಷ್ಠಸ್ನಾನ, ಜಗನ್ನಾಥದರ್ಶನ ಇವೆರಡೂ ಉತ್ತಮಫಲಪ್ರದವಾದವು.

ವರ್ಷಸಂದರ್ಶನಾತ್ಪುಣ್ಯಂ ಮಂಚಕೇನೈವ ಲಭ್ಯತೇ ।
ಮಂಚಕೇನ ತು ಯಲ್ಲಭ್ಯಂ ಮಹಾಜ್ಯೇಷ್ಠ್ಯಾಂ ತು ತಲ್ಲಭೇತ್ ॥ ೧೬ ॥
ಯನ್ಮಯೋಕ್ತಂ ಪುರಾ ವಿಪ್ರಾಃ ಸ್ನಾನದರ್ಶನಜಂ ಫಲಂ ।
ಸಮಗ್ರಂ ತದವಾಪ್ನೋತಿ ಮಹಾಜ್ಯೇಷ್ಠ್ಯಾಂ ನ ಸಂಶಯಃ ॥ ೧೭ ॥

ಮುನಯ ಊಚುಃ:—

ಮಹಾಜ್ಯೈಷ್ಠೀಂ ಸಮಾಚಕ್ಷ್ವ ಯತ್ರಸ್ನಾನಂ ಮಹಾಫಲಂ ।
ತತ್ರ ನಃ ಕೌತುಕಂ ಬ್ರಹ್ಮನ್ ಮಹದ್ವೈ ಸಂಪ್ರವರ್ತತೇ ॥ ೧೮ ॥

ಜೈಮಿನಿರುವಾಚ:—

ಜ್ಯೇಷ್ಠಸ್ಯ ವಿಮಲೇ ಪಕ್ಷೇ ಯಾ ವೈ ಪಂಚದಶೀ ಭವೇತ್ ।
ಶಕ್ರರ್ಕ್ಷೈಕಾಂಶುಗೌ ಚಂದ್ರಗುರೂ ಚ ಗುರುವಾಸರೇ ॥ ೧೯ ॥
ಶುಭೇ ಯೋಗೇ ಮಹಾಜ್ಯೈಷ್ಠೀ ಸರ್ವಪಾಪಪ್ರಣಾಶಿನೀ ।
ಸರ್ವಕ್ಷೇತ್ರಂ ಸರ್ವತೀರ್ಥಂ ಸಪ್ತ ವೈ ಸಾಗರಾಸ್ತಥಾ ॥ ೨೦ ॥
ಕ್ರತವಶ್ಚ ಮಹಾದಾನಸಮೂಹಶ್ಚ ತಪಾಂಸಿ ಚ ।
ವಿದ್ಯಾಶ್ಚಾಷ್ಟಾದಶವಿಧಾ ವ್ರತಾನಿ ವಿವಿಧಾನಿ ಚ ॥ ೨೧ ॥

---

೧೬. ಅಯ್ಯಾ ವಿಪ್ರರೇ! ಒಂದು ವರ್ಷಕಾಲ ದಿನಂಪ್ರತಿಯೂ ಶ್ರೀಜಗನ್ನಾಥಮೂರ್ತಿಯನ್ನು ಸಂದರ್ಶಿಸುವುದರಿಂದ ಲಭಿಸುವ ಫಲವೆಲ್ಲವೂ ಸ್ನಾನಮಂಚಕದರ್ಶನದಿಂದ ಲಭಿಸುವುದು. ಈ ಸ್ನಾನಮಂಚಕದರ್ಶನ ಫಲವೆಲ್ಲವೂ ಜ್ಯೇಷ್ಠಾಪೂರ್ಣಿಮೆಯ ಮಹಾಸ್ನಾನಸಂದರ್ಶನದಿಂದ ಲಭಿಸುವುದು.

೧೭. ಎಲೈ ವಿಪ್ರರೇ! ಪೂರ್ವದಲ್ಲಿ ಸಮುದ್ರಸ್ನಾನ ಮತ್ತು ಶ್ರೀ ಪುರುಷೋತ್ತಮಸಂದರ್ಶನಗಳಿಂದ ಯಾವ ಯಾವ ಫಲಗಳನ್ನು ಹೇಳಿರುವೆನೋ ಆ ಫಲಗಳೆಲ್ಲವೂ ಮಹಾಜ್ಯೈಷ್ಠಿಯ ಆಚರಣೆಯಿಂದ ಲಭಿಸುತ್ತದೆ.

೧೮. ಮುನಿಗಳು ಕೇಳುತ್ತಾರೆ:- ಭೋ ಬ್ರಹ್ಮನ್! ಯಾವ ಸಮಯದಲ್ಲಿ ಮಾಡಿದ ಸ್ನಾನದಿಂದ ಮಹತ್ಫಲವು ದೊರಕುತ್ತದೆಯೋ ಆ ಮಹಾ ಜ್ಯೈಷ್ಠೀ ಸಮಯವನ್ನು ನಮಗೆ ಅಪ್ಪಣೆಕೊಡಿಸುವವನಾಗು. ಇದನ್ನು ಕೇಳಲು ನಮಗೆ ಬಹಳ ಕುತೂಹಲವುಂಟು.

೧೯-೨೨. ಜೈಮಿನಿಯು ಹೇಳುತ್ತಾನೆ:— ಎಲೈಮುನಿಗಳಿರಾ! ಕೇಳಿರಿ; ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ ಪೂರ್ಣಿಮೆಯು ಬರಲಾಗಿ, ಜ್ಯೇಷ್ಠಾನಕ್ಷತ್ರದಲ್ಲಿ ಚಂದ್ರಗುರುಗಳೀರ್ವರೂ ಏಕಾಂಶದಲ್ಲಿರಲು ಆ ಶುಭಯೋಗದಲ್ಲಿ ಸಮಸ್ತ ಪಾಪಗಳನ್ನೂ ನಿವಾರಣೆ ಮಾಡುವ ಮಹಾಜ್ಯೈಷ್ಠಿಯು ಪ್ರವರ್ತಿಸುತ್ತದೆ. ಆಗ ಸಮಸ್ತ ಕ್ಷೇತ್ರಗಳೂ, ಸಮಸ್ತ ತೀರ್ಥಗಳೂ, ಸಪ್ತ ಸಾಗರಗಳೂ, ಸಮಸ್ತ

ಶಾಂತಿಪೌಷ್ಟಿಕಕರ್ಮಾಣಿ ಸಾಂಖ್ಯಯೋಗಸ್ತಥೈವ ಚ ।
ಸರ್ವೇ ಸಂಭೂಯ ಗಚ್ಛಂತಿ ಕ್ಷೇತ್ರಂ ಶ್ರೀಪುರುಷೋತ್ತಮಂ ॥ ೨೨ ॥
ವೃಂದಶಃ ಪ್ರವಿಭಕ್ತಾಸ್ತ್ವೇಕೈಕಂ ಕ್ಷೇತ್ರಕಂ ಪ್ರತಿ ।
ಕಸ್ಮೈ ವಯಂ ಭಾಗ್ಯವತೇ ಜ್ಯೇಷ್ಠಸ್ನಾನಾವಲೋಕನೇ ॥ ೨೩ ॥
ಮಹಾಜ್ಯೇಷ್ಠ್ಯಾಂ ಪ್ರವೇಕ್ಷ್ಯಾಮಃ ಪರಸ್ಪರಮಹಂ ಮಯಾ ।
ತತ್ರ ಯಾಂತಿ ಮಹಾಯೋಗೇ ಭಗವತ್ಕ್ಷೇತ್ರಮುತ್ತಮಂ ॥ ೨೪ ॥
ಮಹಾಜ್ಯೇಷ್ಠೀ ಮಹಾಪುಣ್ಯಾ ಭಗವತ್ಪ್ರೀತಿವರ್ಧನೀ ।
ತಸ್ಯಾಂ ಸಂಪೂಜ್ಯ ದೇವೇಶಂ ಜಗನ್ನಾಥಂ ಕೃಪಾರ್ಣವಂ ।
ದೃಷ್ಟ್ವಾ ಚ ಸ್ನಾಪ್ಯಮಾನಂ ತಂ ಪಾಪಕೋಶಾದ್ವಿಮುಚ್ಯತೇ ॥ ೨೫ ॥
ಅತ ಊರ್ಧ್ವಂ ಪ್ರವಕ್ಷ್ಯಾಮಿ ವ್ರತಂ ತಂ ಜ್ಯೇಷ್ಠಪಂಚಕಂ ।
ವ್ರತೇಽನಾನೇನ ಲಭ್ಯಂ ಯತ್ತತ್ತದೇವ ಬ್ರವೀಮಿ ವಃ ॥ ೨೬ ॥

---

ಯಾಗಗಳೂ, ಮಹಾ ದಾನಗಳ ಗುಂಪುಗಳೂ, ಸಕಲ ತಪಸ್ಸುಗಳೂ, ಹದಿನೆಂಟು ಬಗೆಯ ವಿದ್ಯೆಗಳೂ (ನಾಲ್ಕುವೇದಗಳು, ಷಡಂಗಗಳು, ಮೀಮಾಂಸಾ, ನ್ಯಾಯ ಧರ್ಮಶಾಸ್ತ್ರಗಳು, ಪುರಾಣಗಳು ಮತ್ತು ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ), ವಿವಿಧ ವ್ರತಗಳೂ, ಶಾಂತಿ ಪುಷ್ಟಿಕರವಾದ ಸಮಸ್ತ ಶುಭ ಕರ್ಮಗಳೂ, ಸಾಂಖ್ಯಯೋಗವೂ ಸಮಸ್ತವೂ ಒಟ್ಟುಗೂಡಿ ಶ್ರೀಪುರುಷೋತ್ತಮ ಕ್ಷೇತ್ರಕ್ಕೆ ಯಾತ್ರೆ ಹೋಗುತ್ತವೆ.

೨೩–೨೪. ಎಲೈ ಋಷಿಗಳಿರಾ! ಇವುಗಳೆಲ್ಲವೂ ಬೇರೆಬೇರೆ ಗುಂಪುಗಳಾಗಿ ಪುರುಷೋತ್ತಮಕ್ಷೇತ್ರಕ್ಕೆ ಬರುತ್ತ, "ಆಹಾ! ಜ್ಯೇಷ್ಠಸ್ನಾನವನ್ನು ನೋಡಲು ಬಂದಿರುವ ಯಾವ ಪುಣ್ಯಾತ್ಮನಿಗೆ ನಾವು ಸಮಸ್ತಫಲಗಳನ್ನೂ ಅನುಗ್ರಹಿಸೋಣ! ನಾವೆಲ್ಲರೂ ಮಹಾಜ್ಯೈಷ್ಠಿಯ ದಿನ ಆ ಕ್ಷೇತ್ರವನ್ನು ಪ್ರವೇಶಿಸೋಣ" ಎಂದು ಮಾತನಾಡಿಕೊಂಡು, "ನಾನು ಮೊದಲು ತಾನು ಮೊದಲು" ಎಂದು ಹುರುಡಿಸುತ್ತ ಭಗವತ್ಕ್ಷೇತ್ರವನ್ನು ಪ್ರವೇಶಿಸುತ್ತವೆ.

೨೫. ಭಗವಂತನಾದ ಶ್ರೀಜಗನ್ನಾಥಸ್ವಾಮಿಗೆ ಪ್ರೀತಿವರ್ಧನವಾದ ಈ ಮಹಾಜ್ಯೈಷ್ಠೀಯೋಗವು ಮಹಾಪುಣ್ಯಕರವಾದುದು. ಈ ಮಹಾಯೋಗದಲ್ಲಿ ಮಾನವರು ಕೃಪಾಸಮುದ್ರನಾದ ಜಗನ್ನಾಥನನ್ನು ಸಂದರ್ಶಿಸಿ, ಆತನು ಅಭಿಷಿಕ್ತನಾಗುವುದನ್ನು ನೋಡಿದಲ್ಲಿ ಪಾಪದಿಂದ ಬಿಡುಗಡೆಯಾಗುತ್ತಾರೆ.

೨೬. ಇದೀಗ ಆ ಜ್ಯೇಷ್ಠಪಂಚಕವ್ರತವನ್ನು ವಿಸ್ತಾರವಾಗಿ ನಿರೂಪಿಸಿ ಹೇಳುತ್ತೇನೆ; ಕೇಳಿರಿ. ಈ ವ್ರತದಿಂದ ಲಭಿಸುವ ಪುಣ್ಯಫಲವನ್ನೂ ತಿಳಿಸುತ್ತೇನೆ.

ದಶಮ್ಯಾಂ ನಿಯಮಂ ಕುರ್ಯಾತ್ ಪ್ರಾತಃ ಸ್ನಾತ್ವಾ ಯಥಾವಿಧಿ ।
ಆಚಾರ್ಯಂ ವೃಣಿಯಾತ್ತತ್ರ ವೈಷ್ಣವಂ ದ್ವಿಜಪುಂಗವಂ ॥ ೨೭ ॥
ಇತ್ಥಂ ಸಂಕಲ್ಪಮಮಲಂ ಗೃಹ್ಣೀಯಾದ್ವ್ರತಮುತ್ತಮಂ ॥ ೨೮ ॥
ದೇವದೇವ ಜಗನ್ನಾಥ ಸಂಸಾರಾರ್ಣವತಾರಕ ।
ಅದ್ಯಾರಭ್ಯ ವ್ರತಂ ದೇವ ಯಾವಜ್ಜ್ಯೇಷ್ಠೀ ಚ ಸಾ ತಿಥಿಃ ।
ತಾವದ್ವ್ರತಂ ಕರಿಷ್ಯಾಮಿ ಪ್ರೀತಯೇ ತವ ಕೇಶವ ॥ ೨೯ ॥
ಸರ್ವತೀರ್ಥಾಭಿಷೇಕಂ ಚ ಪ್ರತ್ಯಹಂ ವ್ರತಭೋಜನಂ ।
ಮೂರ್ತೀನಾಂ ತವ ಪಂಚಾನಾಮೇಕಸ್ಯಾಪಿ ಪ್ರಪೂಜನಂ ॥ ೩೦ ॥
ಏಕಸ್ಮಿನ್ ದಿವಸೇ ದೇವ ತ್ರಿಸಂಧ್ಯಂ ತ್ವತ್ಪ್ರಸಾದತಃ ।
ಸಮಾಪ್ಯತಾಂ ವ್ರತಮಿದಂ ಸಫಲಂ ಚಾಸ್ತು ತೇ ಪ್ರಭೋ ॥ ೩೧ ॥
ತತಃ ಪಂಚಸು ತೀರ್ಥೇಷು ಸ್ನಾತ್ವಾ ಚ ಗೃಹಮೇತ್ಯ ಚ ।
ಸ್ಥಂಡಿಲೇ ವಿಲಿಖೇತ್ಪದ್ಮಮಷ್ಟಪತ್ರಂ ಸ ಕರ್ಣಿಕಂ ॥ ೩೨ ॥
ತನ್ಮಧ್ಯೇ ಸ್ಥಾಪಯೇತ್ಕುಂಭಂ ತೀರ್ಥಾಂಬೋಭಿಃ ಪ್ರಪೂರಿತಂ ।
ಸ ಚಂದನ ಫಲೈರ್ಯುಕ್ತಂ ತನ್ಮುಖೇ ತಾಮ್ರಭಾಜನಂ ॥ ೩೩ ॥

---

೨೭–೨೮. ಜ್ಯೇಷ್ಠ ಶುಕ್ಲ ದಶಮಿಯದಿನ ಪ್ರಾತಃಕಾಲದಲ್ಲಿ ವಿಧಿವತ್ತಾಗಿ ಸ್ನಾನ ಮಾಡಿ ವೈಷ್ಣವನಾದ ಬ್ರಾಹ್ಮಣೋತ್ತಮನನ್ನು ವ್ರತಕ್ಕೆ ಆಚಾರ್ಯನನ್ನಾಗಿ ವರಣಮಾಡಬೇಕು. ಈ ಮುಂದೆ ಹೇಳುವಂತೆ ಸಂಕಲ್ಪಮಾಡಿ ವ್ರತವನ್ನು ಹಿಡಿಯತಕ್ಕುದು.

೨೯. "ದೇವದೇವನಾದ ಎಲೈ ಜಗನ್ನಾಥನೇ! ನೀನು ನಂಬಿದ ಭಕ್ತರೆಲ್ಲರನ್ನೂ ಈ ಸಂಸಾರಸಾಗರದಿಂದ ಕಡೆಹಾಯಿಸುವ ಸ್ವಾಮಿಯು! ಇದೋ, ಎಲೈ ಪ್ರಭುವೇ! ಓ ಕೇಶವಾ!! ನಾನಿಂದಿನಿಂದ ಮೊದಲುಗೊಂಡು ಪೂರ್ಣಿಮಾ ತಿಥಿಯವರೆಗೂ ನಿನ್ನ ಪ್ರೀತ್ಯರ್ಥವಾಗಿ ವ್ರತವನ್ನು ಮಾಡುವೆನು.

೩೦–೩೧. ಸಮಸ್ತತೀರ್ಥಸ್ನಾನಗಳನ್ನೂ ಮಾಡಿ ಆ ಬಳಿಕ ವ್ರತಭೋಜನವನ್ನೆಸಗಿ ನಿನ್ನ ಪಂಚಮೂರ್ತಿಗಳಿಗೂ ಬೇರೆಬೇರೆಯಾಗಿ ಒಂದು ದಿನ ತ್ರಿಕಾಲ ಪೂಜೆಯನ್ನು ನಿನ್ನ ಅನುಗ್ರಹದಿಂದ ಮಾಡುತ್ತೇನೆ. ಪ್ರಭುವೇ! ಇದು ನಿನ್ನ ಪ್ರಸಾದದಿಂದ ಸಂಪೂರ್ಣವಾಗಿ ಸಫಲವಾಗಲಿ."

೩೨. ಈ ರೀತಿ ವ್ರತಸಂಕಲ್ಪವನ್ನು ಮಾಡಿ ಪಂಚತೀರ್ಥಗಳಲ್ಲಿಯೂ ಸ್ನಾನ ಮಾಡಿ ಮನೆಗೆ ಬರಬೇಕು. ತರುವಾಯ ಶುದ್ಧವಾದ ಪ್ರದೇಶದಲ್ಲಿ ಕರ್ಣಿಕೆಯೊಡಗೂಡಿದ ಅಷ್ಟದಳಪದ್ಮವನ್ನು ಬರೆಯಬೇಕು.

೩೩–೩೪. ಆ ಅಷ್ಟದಳ ಕಮಲದ ಮಧ್ಯದಲ್ಲಿ ಪಂಚತೀರ್ಥಗಳಿಂದ ತಂದ ಜಲದಿಂದ ಪೂರ್ಣವಾಗಿ ಶ್ರೀಗಂಧಲೇಪನ ನಾರಿಕೇಳಾಫಲಸಮನ್ವಿತವಾದ

ವಾಸಸಾ ವೇಷ್ಟಿತಂ ಕಂಠೇ ಪಾತ್ರಂ ಚಾಕ್ಷತಪೂರಿತಂ ।
ತನ್ಮಧ್ಯೇ ಸ್ಥಾಪಯೇದ್ದೇವಂ ಸೌವರ್ಣಂ ಮಧುಸೂದನಂ ॥ ೩೪ ॥
ಶುಭಾಂಗಾವಯವಂ ಶಾಂತಂ ವಾಮೇ ಶ್ರೀಯುತಮೀಶ್ವರಂ ॥ ೩೫ ॥
ದಕ್ಷಿಣೇ ಚ ಗರುತ್ಮಂತಂ ಸ್ಪೃಶಂತಂ ಪೃಷ್ಠದೇಶತಃ ।
ಶಂಖಚಕ್ರಧರಂ ಚೋರ್ಧ್ವೇ ಪದ್ಮಾಸನಗತಂ ವಿಭುಂ ॥ ೩೬ ॥
ಪೂಜಯೇದುಪಚಾರೈಸ್ತು ಆಚಾರ್ಯೋ ವಾಪಿ ಭೋ ದ್ವಿಜಾಃ ।
ನೀಲೋತ್ಪಲಾನಾಂ ಮಾಲಾಂ ತು ಭಕ್ತ್ಯಾ ದೇವಾಯ ದಾಪಯೇತ್ ॥
ದಶಮ್ಯಾಂ ಪೂಜಯಿತ್ವೈವಂ ದಶಕೋಟ್ಯಘನಾಶನಂ ।
ಪ್ರಾರ್ಥಯೇತ್ಪ್ರಾಂಜಲಿರ್ಭೂತ್ವಾ ಮಂತ್ರಮೇತಂ ಸಮುಚ್ಚರನ್ ॥ ೩೮ ॥
ಮಧುಸೂದನ ದೇವೇಶ ನಮಸ್ತೇ ಮಾಧವೀಪ್ರಿಯ ।
ಕೃಪಾಪಾರಾಂನಿಧೇ ಪಾಹಿ ಪತಿತಂ ಮಾಂ ಭವಾರ್ಣವೇ ॥ ೩೯ ॥

---

ಕಳಶವನ್ನಿಟ್ಟು ಅದರ ಮೇಲೆ ತಾಮ್ರದ ತಟ್ಟೆಯನ್ನಿರಿಸಿ, ಕಂಠದೇಶದಲ್ಲಿ ವಸ್ತ್ರವನ್ನು ಸುತ್ತಿ ಅದರಲ್ಲಿ ಅಕ್ಷತೆಯನ್ನು ತುಂಬಿ ಅದರ ನಡುವೆ ಶ್ರೀ ಮಧುಸೂದನನ ಸುವರ್ಣಮೂರ್ತಿಯನ್ನು ಪ್ರತಿಷ್ಠಿಸಬೇಕು. ಭಗವಂತನ ಈ ಸ್ವರ್ಣಮೂರ್ತಿಯು ಮಂಗಳಕರವಾದ ಅವಯವಗಳುಳ್ಳದಾಗಿ ಶಾಂತಿಮೂರ್ತಿಯಾಗಿ, ವಾಮಭಾಗದಲ್ಲಿ ಶ್ರೀದೇವಿಯೊಡಗೂಡಿ ಬೆಳಗುತ್ತಿರಬೇಕು.

೩೬. ಬಲಭಾಗದಲ್ಲಿ ಆತನ ಹಿಂದೆ ಪದ್ಮಾಸನಾಸೀನನಾಗಿ ಶಂಖ ಚಕ್ರ ಗದಾಧರನಾದ ಆ ಪ್ರಭುವನ್ನು ಸ್ಪರ್ಶಿಸುತ್ತಿರುವಂತೆ ಗರುಡನನ್ನು ನೆಲೆಗೊಳಿಸಬೇಕು.

೩೭. ಈ ರೀತಿ ಸ್ಥಾಪಿಸಿದ ಶ್ರೀಜಗನ್ನಾಥದೇವನನ್ನು ತಾನಾಗಲಿ, ವರಣಮಾಡಿದ ಆಚಾರ್ಯನಾಗಲಿ ಷೋಡಶೋಪಚಾರಗಳಿಂದ ಪೂಜಿಸಬೇಕು. ತರುವಾಯ ಸ್ವಾಮಿಗೆ ಭಕ್ತಿಪೂರ್ವಕವಾಗಿ ·ಕನ್ನೈದಿಲೆಹೂಗಳ ಮಾಲೆಯನ್ನೊಪ್ಪಿಸಬೇಕು.

೩೮. ಹೀಗೆ ದಶಮಿಯದಿನ ಸ್ವಾಮಿಯನ್ನರ್ಚಿಸುವುದರಿಂದ ದಶಕೋಟಿ ಪಾಪಗಳು ನಾಶವಾಗುತ್ತವೆ. ಬಳಿಕ ವ್ರತಿಯಾದವನು ಬದ್ಧಾಂಜಲಿಪುಟನಾಗಿ ಭಗವಂತನನ್ನು ಈ ಮುಂದೆ ಹೇಳುವ ಮಂತ್ರವನ್ನು ಹೇಳಿಕೊಂಡು ಪ್ರಾರ್ಥಿಸತಕ್ಕದು.

೩೯. "ಮಧುಸೂದನ, ದೇವೇಶ್ವರ! ಲಕ್ಷ್ಮೀಪ್ರಿಯನಾದ ನಿನಗೆ ನಮಸ್ಕಾರವು. ಎಲೈ ಕೃಪಾಸಾಗರನೇ! ಭವಸಾಗರದಲ್ಲಿ ಬಿದ್ದಿರುವ ನನ್ನನ್ನು ಕಾಪಾಡು!"

**ಏಕಾದಶ್ಯಾಂ ಚತುರ್ಬಾಹುಂ ಶಂಖಚಕ್ರಗದಾಧರಂ ।**
**ನಾರಾಯಣಂ ಪದ್ಮಸಂಸ್ಥಂ ಪಂಚನಿಷ್ಕವಿನಿರ್ಮಿತಂ ।**
**ತದರ್ಧಂ ನಿರ್ಮಿತಂ ವಾಪಿ ಪೂಜಯೇತ್ಪದ್ಮಮಾಲಯಾ ॥ ೪೦ ॥**
**ನೈವೇದ್ಯಂ ಪಾಯಸಂ ದದ್ಯಾತ್ಸಿತಾಂ ರಂಭಾಫಲಾನಿ ಚ ।**
**ನಾನಾವಿಧಂ ಚ ನೈವೇದ್ಯಂ ದತ್ವಾ ಸಂಪ್ರಾರ್ಥಯೇನ್ಮುದಾ ॥ ೪೧ ॥**
**ನಾರಾಯಣ ನಮಸ್ತೇಽಸ್ತು ಭವಸಾಗರತಾರಣ ।**
**ತ್ರಾಹಿ ಮಾಂ ಪುಂಡರೀಕಾಕ್ಷ ಶರಣಾಗತವತ್ಸಲ ॥ ೪೨ ॥**
**ಏಕಾದಶೇಂದ್ರಿಯಕೃತಂ ಪಾಪರಾಶಿಮನುತ್ತಮಂ ।**
**ಅನಾದಿಭವನಿರ್ವ್ಯೂಢಂ ನಾಶಯೇತ್ಪೂಜಿತಃ ಪ್ರಭುಃ ॥ ೪೩ ॥**
**ದ್ವಾದಶ್ಯಾಂ ಯಜ್ಞವಾರಾಹಂ ಪೂಜಯೇತ್ಸ್ವರ್ಣನಿರ್ಮಿತಂ ।**
**ಚಂದನಾಗುರುಕರ್ಪೂರಲೇಪನೈಃ ಚಂಪಕಸ್ರಜಂ ॥ ೪೪ ॥**
**ನಾನಾವಿಧಾಪೂಪಸಾರ ಭಕ್ಷ್ಯಭೋಜ್ಯಫಲಾನ್ವಿತಂ ।**
**ನಿವೇದ್ಯ ಪ್ರಾರ್ಥಯೇದ್ದೇವಂ ಸ್ತುತಿಮೇತಾಂ ಸಮುಚ್ಚರನ್ ॥ ೪೫ ॥**

---

೪೦. ಎಲೈ ವಿಪ್ರರೇ! ಆ ತರುವಾಯ ಮಾರನೆಯ ಏಕಾದಶಿಯ ದಿನ ಐದು ಅಥವಾ ಎರಡೂವರೆ ಹೊನ್ನುಗಳಿಂದ ನಿರ್ಮಿತವಾಗಿ, ಪದ್ಮಾಸನದಲ್ಲಿ ಮಂಡಿತನಾಗಿರುವ ಶ್ರೀಮನ್ನಾರಾಯಣಮೂರ್ತಿಯನ್ನು ಕಮಲ ಮಾಲಿಕೆಯಿಂದ ಪೂಜಿಸತಕ್ಕದು.

೪೧. ಪಾಯಸ, ಹಾಲು, ಹಣ್ಣುಗಳೇ ಮೊದಲಾದ ಬಗೆಬಗೆಯ ನೈವೇದ್ಯಗಳನ್ನಿತ್ತು ಈ ರೀತಿ ಪ್ರಾರ್ಥಿಸಬೇಕು.

೪೨. "ಭವಸಾಗರತಾರಣನಾದ ನಾರಾಯಣನೇ! ನಿನಗೆ ನಮಸ್ಕಾರವು. ಪುಂಡರೀಕಾಕ್ಷ! ಶರಣಾಗತ ವತ್ಸಲನಾದ ಓ ಪ್ರಭೂ!! ನನ್ನನ್ನು ರಕ್ಷಿಸು."

೪೩. ಎಲೈ ವಿಪ್ರರೇ! ಈ ರೀತಿ ಪೂಜಿಸಿ ಪ್ರಾರ್ಥನೆಗೈದುದಾದರೆ, ಮಾನವನು ಬುದ್ಧಿಪೂರ್ವಕವಾಗಿ ಮಾಡಿ ಬಹಳ ಕಾಲದಿಂದಲೂ ಬೇರೂರಿರುವ ತೀಕ್ಷ್ಣವಾದ ಪಾಪಗಳೆಲ್ಲವನ್ನೂ ಆ ಸ್ವಾಮಿಯು ನಾಶಗೊಳಿಸುತ್ತಾನೆ.

೪೪. ಇದಾದಬಳಿಕ ಆ ಮಾರನೆಯ ದ್ವಾದಶಿಯದಿನ ಸ್ವರ್ಣನಿರ್ಮಿತವಾದ ಯಜ್ಞವರಾಹಮೂರ್ತಿಯನ್ನು ಚಂದನ, ಅಗುರು, ಕರ್ಪೂರಮಿಶ್ರಿತವಾದ ಗಂಧಲೇಪನದಿಂದಲೂ, ಚಂಪಕ ಮಾಲೆಯಿಂದಲೂ ಪೂಜಿಸಬೇಕು.

೪೫. ಎಲೈ ವಿಪ್ರರೇ! ಬಗೆಬಗೆಯ ಅಪೂಪಗಳು (ಕಡಬುಗಳು), ಅತಿ ರಸಗಳು ಇವೇ ಮೊದಲಾದ ಅನೇಕ ಭಕ್ಷ್ಯಭೋಜ್ಯಫಲಗಳ ನೈವೇದ್ಯವನ್ನು ಆ ಯಜ್ಞವರಾಹಮೂರ್ತಿಗೊಪ್ಪಿಸಿ ಈ ಮುಂದೆ ಹೇಳುವ ಸ್ತೋತ್ರವನ್ನು ಘಟ್ಟಿಯಾಗಿ ಉಚ್ಚರಿಸುತ್ತ ಪ್ರಾರ್ಥನೆ ಮಾಡಬೇಕು.

ಪ್ರಳಯಾರ್ಣವಸಂಮಗ್ನಾಂ ಧರಣೀಂ ಧೃತವಾನಸಿ ।
ಕಿನ್ನ ಶಕ್ತೋ ಮಮೋದ್ಧಾರೇ ಪತಿತಸ್ಯಾಂಘ್ರಿಪಂಕಜೇ ।
ತನ್ಮಾಮುದ್ಧರ ಗೋವಿಂದ. ನಿಮಗ್ನಂ ಶೋಕಸಾಗರೇ ॥ ೪೬ ॥
ಅಬ್ದೋ ದ್ವಾದಶಮಾಸೋ ವೈ ಯಾವದಬ್ದಕೃತಾನಿ ತು ।
ಪಾಪಾನಿ ಮಹದಲ್ಪಾನಿ ಇತಃ ಪೂರ್ವೇಷು ಜನ್ಮಸು ।
ತದ್ವಿನಾಶಯತೇ ದೇವೋ ದ್ವಾದಶ್ಯಾಮರ್ಚಿತೋ ನೃಣಾಂ ॥ ೪೭ ॥
ತ್ರಯೋದಶ್ಯಾಂ ತು ಪ್ರದ್ಯುಮ್ನಂ ಶಂಖಚಕ್ರವರಾಭಯಾನ್ ।
ಧಾರಯಂತಂ ಪದ್ಮಗತಂ ಚತುರ್ನಿಷ್ಕವಿನಿರ್ಮಿತಂ ॥ ೪೮ ॥
ಉಪಾಚಾರೈರ್ಯಥಾಪ್ರೋಕ್ತೈಃ ಪೂಜಯೇದ್ಭಕ್ತಿತೋ ನರಃ ।
ಅಶೋಕಪಾಟಲೀಮಾಲಾಂ ಚಂದ್ರಪೂರ್ಣಸಮುಜ್ಜ್ವಲಾಂ ॥ ೪೯ ॥
ನೈವೇದ್ಯಂ ಚೈವ ಪಕ್ವಾನ್ನಂ ಫಲಂ ಪಕ್ವಂ ಮನೋರಮಂ ।
ದತ್ವಾ ನಮಸ್ಕೃತಿಂ ಕುರ್ವನ್ ಪ್ರಾರ್ಥಯೇತ್ಪ್ರಾಂಜಲಿಃ ಶುಚಿಃ ॥ ೫೦ ॥

---

೪೬. "ಎಲೈ ಯಜ್ಞವರಾಹಸ್ವಾಮಿಯೇ! ನೀನು ಪ್ರಳಯ ಮಹಾಸಮುದ್ರದಲ್ಲಿ ಮುಳುಗಿ ಹೋಗಿದ್ದ ಭೂಮಿಯನ್ನೇ ಉದ್ಧರಿಸಿದ ಪ್ರಭುವು. ಇಂತಹ ನೀನು ನಿನ್ನಡಿದಾವರೆಗಳಲ್ಲಿ ಬಿದ್ದಿರುವ ನನ್ನನ್ನು ಉದ್ಧರಿಸಲು ಸಮರ್ಥನಾಗಲಾರೆಯಾ! ಸ್ವಾಮಿ: ಉದ್ಧಾರಮಾಡು. ಗೋವಿಂದ! ಶೋಕಸಾಗರದಲ್ಲಿ ಬಿದ್ದು ಮುಳುಗಿ ಹೋಗಿರುವ ನನ್ನನ್ನು ಉದ್ಧರಿಸು."

೪೭. ಎಲೈ ವಿಪ್ರರೇ! ಒಂದು ವರ್ಷಕ್ಕೆ ಹನ್ನೆರಡು ತಿಂಗಳುಗಳಲ್ಲವೆ? ಆ ಕಾಲದಲ್ಲಿ ಮಾಡಿದ ಪಾಪವು ಅತ್ಯಲ್ಪವಾದುದು. ಅದಂತಿರಲಿ. ಆ ಯಜ್ಞವರಾಹಮೂರ್ತಿಯು ಈ ರೀತಿ ದ್ವಾದಶಿಯ ದಿನ ಪೂಜಿತನಾದುದಾದರೆ ಪೂರ್ವಜನ್ಮಗಳಲ್ಲಿ ಮಾನವನು ಮಾಡಿದ ಪಾಪಗಳೆಲ್ಲವನ್ನೂ ನಾಶಮಾಡುವನು.

೪೮-೪೯. ಇದಾದಮೇಲೆ ಆ ಮಾರನೆಯ ತ್ರಯೋದಶಿಯ ದಿನದಲ್ಲಿ, ಶಂಖಚಕ್ರವರದಾಭಯಗಳನ್ನು ನಾಲ್ಕೂ ಕೈಗಳಲ್ಲಿ ಧರಿಸಿ, ಪದ್ಮಾಸನಾಸೀನನಾಗಿ ನಾಲ್ಕು ಹೊನ್ನುಗಳಿಂದ ನಿರ್ಮಿತವಾದ ಶ್ರೀ ಪ್ರದ್ಯುಮ್ನನ ಮೂರ್ತಿಯನ್ನು ಹಿಂದೆ ಹೇಳಿರುವ ರೀತಿ ವ್ರತಿಯಾದ ಮಾನವನು ಭಕ್ತಿಪೂರ್ವಕವಾಗಿ ಪೂಜಿಸಿ, ಚಂದ್ರನಂತೆ ಸಂಪೂರ್ಣಕಳೆಗಳಿಂದ ಕಂಗೊಳಿಸುತ್ತಿರುವ ಅಶೋಕ ಮತ್ತು ಪಾಟಲೀಕುಸುಮಗಳ ಮಾಲಿಕೆಯನ್ನು ಸಮರ್ಪಿಸಬೇಕು.

೫೦. ಪಕ್ವಾನ್ನಗಳ ಮತ್ತು ಪಕ್ವಫಲಗಳ ನೈವೇದ್ಯವನ್ನರ್ಪಿಸಿ ಆ ಸ್ವಾಮಿಯನ್ನು ನಮಸ್ಕರಿಸುತ್ತ ಶುದ್ಧಮನಸ್ಕನೂ ಪ್ರಾಂಜಲಿಯೂ ಆಗಿ ಈ ರೀತಿ ಪ್ರಾರ್ಥಿಸತಕ್ಕದ್ದು.

**ದೇವ ಪ್ರದ್ಯುಮ್ನ ಕಾಮಾನಾಂ ಪೂರಕ ಕಾಮರೂಪಧೃಕ್ ।**
**ಕಾಮಾಶ್ಚ ಸಫಲಾಸ್ಸಂತು ಕಾಮಪಾಲ ನಮೋಽಸ್ತು ತೇ ॥ ೫೧ ॥**
**ಚತುರ್ದಶ್ಯಾಂ ನರಹರಿಂ ಪೂಜಯೇತ್ಕನಕಾಕೃತಿಂ ।**
**ವಕ್ಷಃಸ್ಥಲಸ್ಥಯಾ ಲಕ್ಷ್ಮ್ಯಾ ಪ್ರೀಯಮಾಣಂ ಸಟೋಜ್ಜ್ವಲಂ ॥ ೫೨ ॥**
**ವ್ಯಾತ್ತಾನನಂ ಸಾಟ್ಟಹಾಸಂ ಯೋಗಪಟ್ಟಾಬ್ಜಸಂಸ್ಥಿತಂ ।**
**ಸತೀಕ್ಷ್ಣನಖರಂ ದೇವಂ ಸರ್ವಾಪದ್ವಿನಿವಾರಣಂ ॥ ೫೩ ॥**
**ಚತುರ್ಭಿರ್ಹೇಮನಿಷ್ಕೈಶ್ಚ ಘಟಿತಂ ಶುಭಲಕ್ಷಣಂ ।**
**ಪೂಜಯೇತ್ಪೂರ್ವವದ್ದೇವಂ ಸೋಪಹಾರಂ ಸುಭಕ್ತಿತಃ ॥ ೫೪ ॥**
**ಜಪಾಕುಸುಮಮಾಲಾಂ ಚ ಜಾತೀಪುಷ್ಪಸ್ರಜಂ ತಥಾ ।**
**ದತ್ವಾ ಪುಷ್ಪಾಂಜಲೀನ್ ಪಾದೇ ಪ್ರಣಮ್ಯ ಸ ಪ್ರದಕ್ಷಿಣಂ ॥ ೫೫ ॥**
**ಯಥಾ ಹಿರಣ್ಯಕಶಿಪುಂ ಲೋಕಾನಾಂ ಹಿತಕಾಮ್ಯಯಾ ।**
**ವ್ಯದಾರಯಸ್ತಥಾ ಪಾಪಸಂಘಂ ನಾಶಯ ಪೂಜಿತಃ ॥ ೫೬ ॥**

---

೫೧. "ಎಲೈ ಪ್ರದ್ಯುಮ್ನದೇವನೇ! ನೀನು ಭಕ್ತರ ಸಮಸ್ತ ಬಯಕೆಗಳನ್ನೂ ಈಡೇರಿಸುವವನು. ನೀನು ಬೇಕುಬೇಕಾದ ರೂಪಗಳನ್ನೂ ಧರಿಸಬಲ್ಲ ಪ್ರಭುವು. ಎಲೈ ಕಾಮಪಾಲನೇ! ನಿನಗಿದೋ ನಮಸ್ಕಾರವು. ಸ್ವಾಮಿಯೇ! ನನ್ನ ಇಷ್ಟಾರ್ಥಗಳೆಲ್ಲವೂ ನಿನ್ನ ಅನುಗ್ರಹದಿಂದ ಸಫಲವಾಗಲಿ."

೫೨-೫೬. ಎಲೈ ವಿಪ್ರರೇ! ಆ ಬಳಿಕ ಚತುರ್ದಶಿಯ ದಿನ, ಶ್ರೀ ನೃಸಿಂಹನ ಕನಕನಿರ್ಮಿತಮೂರ್ತಿಯನ್ನು ಪೂಜಿಸಬೇಕು. ಈ ಮೂರ್ತಿಯಾದರೋ ನಾಲ್ಕು ನಿಷ್ಕಗಳ ಸುವರ್ಣದಿಂದ ಘಟಿತವಾಗಿರಬೇಕು. ವಕ್ಷಸ್ಥಲದಲ್ಲಿ ಲಕ್ಷ್ಮೀದೇವಿಯೊಡಗೂಡಿ, ಆಕೆಯ ಸಾನ್ನಿಧ್ಯದಿಂದ ಸಂತೋಷಗೊಂಡು ಕೊರಳ ಕೇಸರಗಳಿಂದ ಮಹೋಜ್ಜ್ವಲನಾಗಿ, ತೆರದಬಾಯುಳ್ಳವನಾಗಿ ಅಟ್ಟಹಾಸವನ್ನು ಮೆರೆಯುತ್ತ, ಯೋಗಪಟ್ಟ ಕಮಲಸಂಸ್ಥಿತನಾಗಿ ಬಹು ಮೊನಚಾದ ಉಗುರುಗಳನ್ನೊಳಗೊಂಡು ಸಮಸ್ತ ಆಪತ್ತುಗಳನ್ನೂ ನಿವಾರಣೆಮಾಡುವವನಾಗಿರುವ ಆ ನೃಸಿಂಹಮೂರ್ತಿಯನ್ನು ಪೂರ್ವದಲ್ಲಿ ಹೇಳಿದ ರೀತಿಯೇ ಉಪಹಾರಾದಿಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿ ದಾಸವಾಳ ಮತ್ತು ಜಾಜಿಯ ಹೂಮಾಲೆಗಳನ್ನರ್ಪಿಸಿ, ಅಡಿದಾವರೆಗಳಿಗೆ ಪುಷ್ಪಾಂಜಲಿಯನ್ನು ಕೊಟ್ಟು ಪ್ರದಕ್ಷಿಣನಮಸ್ಕಾರಗಳನ್ನು ಮಾಡುತ್ತ, "ಎಲೈ ನೃಸಿಂಹನೇ! ನೀನು ಲೋಕಸಂರಕ್ಷಣಾರ್ಥವಾಗಿ ಹಿರಣ್ಯಕಶಿಪುವಿನ ವಕ್ಷಸ್ಥಳವನ್ನು ಸೀಳಿದೆ. ಅಂತೆಯೆ, ನನ್ನ ಪೂಜೆಯಿಂದ ಸುಪ್ರೀತನಾಗಿ ನೀನು ನನ್ನ ಪಾಪಗಳೆಲ್ಲವನ್ನೂ ನಾಶಗೊಳಿಸು" ಎಂದು ಪ್ರಾರ್ಥಿಸಬೇಕು.

ಏವಂ ಸಂಪ್ರಾರ್ಥ್ಯ ನೃಹರಿಂ ಪ್ರಣಮ್ಯ ದಂಡವತ್ ಕ್ಷಿತೌ ।
ನಿರ್ವರ್ತ್ಯ ವ್ರತಮೇವಂ ತದ್ವ್ರತೀ ಪಂಚದಿನಾತ್ಮಕಂ ।
ಪಂಚಪಂಚ ಪ್ರದೀಪಾಂಸ್ತು ದಿವಾರಾತ್ರೌ ಪ್ರದಾಪಯೇತ್ ॥ ೫೭ ॥
ವಸ್ತ್ರಯುಗ್ಮಂ ಪಂಚಪಂಚ ಛತ್ರೋಪಾನದ್ಯುಗಂ ತಥಾ ।
ಸಯಜ್ಞಸೂತ್ರಾನ್ ಕಲಶಾನ್ ಪಂಚಪಂಚಫಲಾನ್ವಿತಾನ್ ॥ ೫೮ ॥
ಭೋಜನಾಂತೇ ದ್ವಿಜೇಭ್ಯಶ್ಚ ಪ್ರದದ್ಯಾಚ್ಛ್ರದ್ಧಯಾನ್ವಿತಃ ॥ ೫೯ ॥
ರಾತ್ರೌ ಜಾಗರಗೀತಾದ್ಯೈಸ್ತಥಾ ನಾನೋಪಹಾರಕೈಃ ।
ತೋಷಯೇದ್ವಾಸುದೇವಂ ತು ಪುರಾಣಪಠನೇನ ತು ॥ ೬೦ ॥
ಪೌರ್ಣಮಾಸ್ಯುಷಸಿ ಸ್ನಾತ್ವಾ ಶ್ರೀಕೃಷ್ಣಾಂತಿಕಂ ವ್ರಜೇತ್ ॥ ೬೧ ॥
ರಾಮಂ ಕೃಷ್ಣಂ ಸುಭದ್ರಾಂ ಚ ಪೂಜಯಿತ್ವಾ ಯಥಾವಿಧಿ ।
ಸ್ನಾಪನಂ ಕಾರಯಿತ್ವಾಥ ದೃಷ್ಟ್ವಾ ವಾ ಶಾಸ್ತ್ರಚೋದಿತಂ ॥ ೬೨ ॥
ಸ್ನಾನಂ ಕೃತ್ವಾ ಪುನಃಸಿಂಧೌ ಗೃಹಮಾಗತ್ಯ ತತ್ರ ವೈ ।
ಯತ್ರ ವಿಷ್ಣೋರ್ಮೂರ್ತಯಸ್ತಾಃ ಕುಂಭಸ್ಥಾ ಮಂತ್ರಪೂಜಿತಾಃ ॥
ತಾಸಾಂ ಪಶ್ಚಿಮತೋ ವಹ್ನಿಂ ಸಮಾದಾಯ ಯಥಾವಿಧಿ ।
ಅಗ್ನಿಕಾರ್ಯಂ ಪ್ರಕುರ್ವೀತ ಸ್ವೈಃ ಸ್ವೈರ್ಮಂತ್ರೈಃ ಪುರೋಹಿತಃ ॥೬೪॥

---

೫೭. ಎಲೈ ಮುನಿಗಳಿರಾ! ಶ್ರೀ ನೃಸಿಂಹನನ್ನು ಈ ಪ್ರಕಾರ ಪ್ರಾರ್ಥಿಸಿದ ಬಳಿಕ ದೀರ್ಘದಂಡ ಪ್ರಣಾಮವನ್ನು ಮಾಡಬೇಕು. ಹೀಗೆ ವ್ರತವನ್ನು ಕೈಕೊಳ್ಳುವ ಮಾನವನು ಐದುದಿನಗಳೂ ವ್ರತವನ್ನು ಮಾಡಬೇಕು. ಐದು ದಿನಗಳು ಹಗಲಿರುಳೂ ಐದೈದು ದೀಪಗಳನ್ನಿಡಬೇಕು.

೫೮–೫೯. ಐದು ಜೊತೆ ವಸ್ತ್ರಗಳು, ಐದು ಛತ್ರಿಗಳು, ಐದು ಪಾದ ರಕ್ಷೆಗಳು, ಪಂಚಫಲ ಮತ್ತು ಪಂಚಯಜ್ಞ ಸೂತ್ರಸಹಿತವಾದ ಕಲಶಗಳು ಇವುಗಳೆಲ್ಲವನ್ನೂ ಬ್ರಾಹ್ಮಣಭೋಜನವಾದ ಮೇಲೆ ಆ ಬ್ರಾಹ್ಮಣರಿಗೆ ಶ್ರದ್ಧೆಯಿಂದ ದಾನಮಾಡಬೇಕು.

೬೦. ರಾತ್ರಿಯಲ್ಲಿಯಾದರೋ ಗೀತಗಳಿಂದಲೂ, ಬಗೆ ಬಗೆಯ ಉಪಹಾರಗಳಿಂದಲೂ, ಪುರಾಣಪಠನದಿಂದಲೂ ಶ್ರೀ ವಾಸುದೇವನನ್ನು ಸಂತೋಷಗೊಳಿಸತಕ್ಕದ್ದು.

೬೧–೬೪. ಬಳಿಕ ಪೂರ್ಣಿಮೆಯ ಉಷಃಕಾಲದಲ್ಲಿ ಸ್ನಾನಮಾಡಿ ಶ್ರೀ ಕೃಷ್ಣನ ಸನ್ನಿಧಿಯನ್ನು ಸಾರಿ ಅಲ್ಲಿ ಶ್ರೀ ರಾಮಕೃಷ್ಣ ಸುಭದ್ರೆಯರನ್ನು ಯಥಾ ವಿಧಿಯಾಗಿ ಪೂಜಿಸಿ ಆ ಮೂರ್ತಿಗಳಿಗೆ ವಿಪ್ರರ ಮೂಲಕ ಸ್ನಾನವನ್ನುಮಾಡಿಸಿ ಅಥವಾ ಇತರರು ಮಾಡಿಸಿದ ಅಭಿಷೇಕವನ್ನು ನೋಡಿಯೋ ಆದಮೇಲೆ ಪುನಃ ಸಮುದ್ರಸ್ನಾನವನ್ನು ಮಾಡಿಕೊಂಡು ಮನೆಗೆ ಬಂದು, ಅಲ್ಲಿ ಕಲಶಗಳ ಮೇಲೆ

**ಪ್ರಣವಾದಿಚತುರ್ಥ್ಯಂತಂ ನಮೋಽಂತಂ ನಾಮ ಈರಯೇತ್ ।**
**ದೇವಾನಾಂ ಮೂಲಮಂತ್ರಸ್ತು ಸ್ವಾಹಾಂತೋ ಹೋಮಕರ್ಮಣಿ ॥ ೬೫॥**
**ಚರೋರಾಜ್ಯಸ್ಯ ಸಮಿಧಾಂ ಪಲಾಶಾನಾಂ ಪೃಥಕ್ ಪೃಥಕ್ ।**
**ಏಕೈಕಂ ದೇವಮುದ್ದಿಶ್ಯ ಜುಹುಯಾಚ್ಚ ಶತಂ ಶತಂ ॥ ೬೬ ॥**
**ತಸ್ಯ ಪುಷ್ಪಶತಂ ಚೈವ ಜುಹುಯಾತ್ತದನಂತರಂ ।**
**ಪೂರ್ಣಾಹುತಿಂ ತತೋ ಹುತ್ವಾ ಬ್ರಹ್ಮಣೇ ದಕ್ಷಿಣಾಂ ದದೇತ್ ॥ ೬೭ ॥**
**ಆಚಾರ್ಯೇ ದಕ್ಷಿಣಾಂ ದದ್ಯಾತ್ ಸುವರ್ಣಂ ಧೇನುಮೇವ ಚ ।**
**ಸ್ವರ್ಣಶೃಂಗೀಂ ರೌಪ್ಯಖುರಾಂ ನಾನಾಲಂಕರಣೈರ್ಯುತಾಂ ॥ ೬೮ ॥**
**ಮಹಾರ್ಘ್ಯವಸ್ತ್ರದಾನಾನಿ ಯೇನ ತುಷ್ಯತಿ ವಾ ಗುರುಃ ।**
**ಸರ್ವೋಪಕರಣೈರ್ಯುಕ್ತಾಃ ಪ್ರತಿಮಾಶ್ಚ ನಿವೇದಯೇತ್ ॥ ೬೯ ॥**
**ಬ್ರಾಹ್ಮಣಾನ್ಭೋಜಯೇತ್ಸರ್ಪಿಃಖಂಡಯುಕ್ತೈಶ್ಚ ಪಾಯಸೈಃ ।**
**ಏತದ್ವ್ರತಂ ಸಮಾಖ್ಯಾತಂ ಜ್ಯೇಷ್ಠಪಂಚಕಮುತ್ತಮಂ ॥ ೭೦ ॥**

---

ಸ್ಥಾಪಿತರಾಗಿ ಪೂಜಿತರಾಗಿರುವ ಶ್ರೀ ಮಹಾ ವಿಷ್ಣುವಿನ ಮೂರ್ತಿಗಳ ಪಶ್ಚಿಮಕ್ಕೆ ಯಜ್ಞೇಶ್ವರನನ್ನು ಆಧಾನಮಾಡಿಸಿ ಪುರೋಹಿತನಿಂದ ಆಯಾ ಮಂತ್ರಗಳನ್ನು ಹೇಳಿಸಿ ವಿಧ್ಯುಕ್ತವಾಗಿ ಹೋಮಮಾಡಬೇಕು.

೬೫. ಶ್ರೀ ಮಹಾವಿಷ್ಣುವಿನ ನಾಮಗಳನ್ನು ಪ್ರಣವಪೂರ್ವಕವೂ, ನಮೋಂತ್ಯವೂ ಆಗಿ ಉಚ್ಚರಿಸಬೇಕು. ದೇವತೆಗಳಿಗೆ ಹೋಮ ಮಾಡುವಾಗ ಮೂಲಮಂತ್ರದ ಕಡೆಯಲ್ಲಿ ಸ್ವಾಹಾಕಾರವನ್ನುಚ್ಚರಿಸತಕ್ಕದ್ದು.

೬೬–೬೭. ಆಜ್ಯ ಚರು ಪಲಾಶಸಮಿತ್ತುಗಳನ್ನು ಬೇರೆಬೇರೆಯಾಗಿ ಒಬ್ಬೊಬ್ಬ ದೇವತೆಯನ್ನುದ್ದೇಶಿಸಿಯೂ ನೂರು ನೂರಾವೃತ್ತಿ ಹೋಮ ಮಾಡಬೇಕು. ಆಮೇಲೆ ಪ್ರತಿ ದೇವತೆಯನ್ನೂ ಉದ್ದೇಶಿಸಿ ಬೇರೆಬೇರೆಯಾಗಿ ಶತ ಪುಷ್ಪಗಳನ್ನು ಹೋಮಮಾಡಬೇಕು. ಕಡೆಯಲ್ಲಿ ಪೂರ್ಣಾಹುತಿಯನ್ನು ಹೋಮ ಮಾಡಿ ಬ್ರಹ್ಮನಿಗೆ ದಕ್ಷಿಣೆಯನ್ನು ಕೊಡಬೇಕು.

೬೮–೭೦. ತರುವಾಯ ಆಚಾರ್ಯನಿಗೆ ಚಿನ್ನದ ಕೋಡುಗಳೂ, ಬೆಳ್ಳಿಯ ಗೊರಸುಗಳೂ. ನಾನಾಲಂಕಾರಗಳೂ ಉಳ್ಳ ಚಿನ್ನದ ಆಕಳನ್ನೂ, ದಕ್ಷಿಣೆಯನ್ನೂ, ಆತನು ಸಂತೋಷಪಡುವ ಇತರ ಅಮೂಲ್ಯ ವಸ್ತ್ರಗಳನ್ನೂ, ಸರ್ವಾಲಂಕಾರಯುಕ್ತವಾದ ಆ ದೇವತಾಪ್ರತಿಮೆಗಳನ್ನೂ ಒಪ್ಪಿಸತಕ್ಕದ್ದು. ಆಮೇಲೆ ಬ್ರಾಹ್ಮಣರಿಗೆ ಕಲ್ಲುಸಕ್ಕರೆಯ ಪಾಯಸದ ಭೋಜನವನ್ನು ಮಾಡಿಸಬೇಕು. ಎಲೈ ವಿಪ್ರರೇ! ಈ ವ್ರತವೇ ಜ್ಯೇಷ್ಠಪಂಚಕವೆಂದು ಪ್ರಸಿದ್ಧವಾಗಿರುವುದು.

ಅನುಷ್ಠಾಯ ನರೋ ಭಕ್ತ್ಯಾ ಸ್ನಾನದರ್ಶನಜಂ ಫಲಂ ।
ಸಮಗ್ರಂ ಲಭತೇ ವಿಪ್ರಾಸ್ತದಾ ನೈವಾತ್ರ ಸಂಶಯಃ ॥ ೭೧ ॥
ಏಕಾದಶೀ ಯಾತು ಮಧ್ಯೇ ನಿರ್ಜಲಾ ಸಾ ಪ್ರಕೀರ್ತಿತಾ ।
ಏಕಾಂತಾಂ ಭಕ್ತಿಯುಕ್ತಾ ಯೇ ಯಥಾವಿಧಿ ಉಪಾಸತೇ ॥ ೭೨ ॥
ಯಾವಜ್ಜೀವಕೃತಾಃ ಸರ್ವಾ ಏಕಾದಶ್ಯೋನ ಸಂಶಯಃ ।
ವ್ರತರಾಜಮಿಮಂ ಕೃತ್ವಾ ಸರ್ವಂ ವ್ರತಫಲಂ ಲಭೇತ್ ॥ ೭೩ ॥
ಯಾನ್ಯಾನ್ಸಮಿಹತೇ ಕಾಮಾಂಸ್ತಾಂಸ್ತಾನಾಪ್ನೋತ್ಯಸಂಶಯಂ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ದಕ್ಷಿಣಾಮೂರ್ತಿದರ್ಶನವರ್ಣನಂ—ಜ್ಯೇಷ್ಠಪಂಚಕನಿರೂಪಣಂ" ನಾಮ ದ್ವಾತ್ರಿಂಶೋಽಧ್ಯಾಯಃ

---

೭೧. ಮಾನವನು ಈ ವ್ರತವನ್ನು ಭಕ್ತಿಯಿಂದ ಅನುಷ್ಠಾನಮಾಡಿದು ದಾದರೆ ಶ್ರೀ ಜಗನ್ನಾಥಸ್ವಾಮಿಯ ದರ್ಶನದಿಂದ ಲಭಿಸುವ ಫಲವನ್ನು ಸಂಪೂರ್ಣ ವಾಗಿ ಪಡೆಯುತ್ತಾನೆಂಬುದರಲ್ಲಿ ಸಂದೇಹವೇ ಇರುವುದಿಲ್ಲವು.

೭೨–೭೪. ಈ ಜ್ಯೇಷ್ಠಪಂಚಕವ್ರತದ ನಡುವೆ ಬರುವ ಏಕಾದಶಿ ಯಾದರೋ ನಿರ್ಜಲೈಕಾದಶಿಯೆನಿಸಿದುದು. ಯಾರಾದರೆ ಈ ಒಂದು ದಿನವನ್ನೇ ಭಕ್ತಿಯಿಂದ ಶಾಸ್ತ್ರೋಕ್ತವಾಗಿ ಉಪಾಸನೆಮಾಡುವರೋ ಅವರು ತಮ್ಮ ಜೀವ ಮಾನದಲ್ಲಿ ಬರುವ ಸಮಸ್ತ ಏಕಾದಶಿಗಳನ್ನೂ ಆಚರಿಸಿದಂತೆಯೇ ಆಗುವುದು. ಈ ವ್ರತರಾಜವನ್ನು ಆಚರಿಸಿದುದಾದರೆ ಸಮಸ್ತ ವ್ರತಗಳ ಫಲವನ್ನೂ ಪಡೆಯು ತ್ತಾನೆ. ಇದೂ ಅಲ್ಲದೆ ಈ ವ್ರತವನ್ನು ಆಚರಿಸಿದವನು ಯಾವ ಯಾವ ಬಯಕೆಗಳನ್ನು ಬಯಸಿದರೂ ಅವುಗಳೆಲ್ಲವನ್ನೂ ಪಡೆಯುವನೆಂಬುದರಲ್ಲಿ ಸಂಶಯವಿರುವುದಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿ ಋಷಿಸಂವಾದದಲ್ಲಿ "ದಕ್ಷಿಣಾಮೂರ್ತಿದರ್ಶನವರ್ಣನ— ಜ್ಯೇಷ್ಠಪಂಚಕವ್ರತನಿರೂಪಣ"ವೆಂಬ ಮುವ್ವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ಮಹಾವೇದೀಮಹೋತ್ಸವವರ್ಣನಂ

**ಜೈಮಿನಿರುವಾಚ :—**

**ಅಥ ಊರ್ಧ್ವಂ ಪ್ರವಕ್ಷ್ಯಾಮಿ ಮಹಾವೇದೀಮಹೋತ್ಸವಂ ।**
**ಅಜ್ಞಾನತಿಮಿರಾಂಧೋಽಪಿ ಯೇನ ಭಾಸ್ವತ್ಪದಂ ವ್ರಜೇತ್ ॥ ೧ ॥**
**ವೈಶಾಖಸ್ಯಾಮಲೇ ಪಕ್ಷೇ ತೃತೀಯಾ ಪಾಪನಾಶಿನೀ ।**
**ಸ್ವಯಮಾವಿಷ್ಕೃತಾ ಚೈಷಾ ಪ್ರಾಜಾಪತ್ಯರ್ಕ್ಷಸಂಯುತಾ ॥ ೨ ॥**
**ತಸ್ಯಾಂ ಸಂಕಲ್ಪ್ಯ ನೃಪತಿರಾಚಾರ್ಯಂ ವರಯೇಚ್ಛುಚಿಃ ।**
**ಏಕಂ ತ್ರೀನಥ ತಕ್ಷಾಣಂ ದೃಷ್ಟಕರ್ಮಾಣಮಾದರಾತ್ ॥ ೩ ॥**
**ವೃಣುಯಾದ್ವನಯಾಗಾಯ ವಸ್ತ್ರಾಲಂಕರಣಾದಿಭಿಃ ।**
**ತಕ್ಷ್ಣಾಸಾರ್ಧಂ ವನಂ ಗತ್ವಾ ಸಾದು ವೃಕ್ಷಗಣಾಕುಲಂ ॥ ೪ ॥**
**ತನ್ಮಧ್ಯೇ ವಹ್ನಿಮಾಧಾಯ ಮಂತ್ರರಾಜೇನ ಮಂತ್ರವಿತ್ ।**
**ಅಷ್ಟೋತ್ತರಶತಂ ಜಪ್ತ್ವಾ ಸಂಪಾತಾಜ್ಯವಿಮಿಶ್ರಿತಂ ॥ ೫ ॥**

---

## ಕನ್ನಡದ ಅನುವಾದ

### ಮಹಾವೇದೀಮಹೋತ್ಸವವರ್ಣನ

೧. ಜೈಮಿನಿಯು ಹೇಳುತ್ತಾನೆ:—ಎಲೈ ಮುನಿಗಳಿರಾ! ಇನ್ನು ಮುಂದೆ ಯಾವುದರ ಸಂದರ್ಶನ ಮಾತ್ರದಿಂದ ಅಜ್ಞಾನವೆಂಬ ಕಗ್ಗತ್ತಲೆಗೆ ಸಿಲುಕಿ ಕುರುಡನಾಗಿರುವವನೂ ಜಾಜ್ವಲ್ಯಮಾನವಾದ ಪರಮಪದವಿಯನ್ನು ಪಡೆಯುವನೋ ಅಂತಹ ಮಹಾವೇದೀಮಹೋತ್ಸವದ ವಿಚಾರವನ್ನು ನಿಮಗೆ ಹೇಳುತ್ತೇನೆ; ಕೇಳಿರಿ.

೨. ವೈಶಾಖಮಾಸದ ಶುಕ್ಲ ಪಕ್ಷದಲ್ಲಿ ತದಿಗೆಯು ಸಕಲಪಾಪಗಳನ್ನೂ ನಾಶಗೊಳಿಸುವಂತಹುದು. ಇದಕ್ಕೆ ಅಕ್ಷಯತದಿಗೆಯೆಂದು ಹೆಸರು. ಇದನ್ನು ಆದಿಯಲ್ಲಿ ಸಾಕ್ಷಾತ್ ಬ್ರಹ್ಮದೇವನೇ ಲೋಕಕ್ಕೆ ಪ್ರಕಟಗೊಳಿಸಿದನು.

೩–೫. ಆ ದಿನ ರಾಜನಾದವನು ವ್ರತಮಾಡುವುದಾಗಿ ಸಂಕಲ್ಪಮಾಡಿ ಶುದ್ಧಮನಸ್ಕನಾಗಿ ಆಚಾರ್ಯನನ್ನು ವರಣಮಾಡಬೇಕು. ಇದಾದ ಮೇಲೆ ವನಯಾಗಮಾಡಲೋಸುಗ ಒಬ್ಬನನ್ನೋ, ಮೂವರನ್ನೊ ಕುಶಲರಾದ ಬಡಗಿಗಳನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ ನೇಮಿಸಿಕೊಳ್ಳತಕ್ಕುದು. ತರುವಾಯ ದೊರೆಯು ಬಡಗಿಯೊಡನೆ ಒಳ್ಳೆಯ ಜಾತಿಯ ವೃಕ್ಷಗಳಿರುವ ವನಕ್ಕೆಹೋಗಿ, ಅದರ ಮಧ್ಯದಲ್ಲಿ ಮಂತ್ರರಾಜದ ಮೂಲಕ ಅಗ್ನಿಯನ್ನು ಆಧಾನಮಾಡಿ ಸಂಪಾತಾಜ್ಯಮಿಶ್ರವಾಗಿ ನೂರೆಂಟಾವೃತ್ತಿ ಹೋಮ ಮಾಡಬೇಕು.

**ಆಜ್ಯಂ ತರೂಣಾಂ ಮೂಲೇತು ಪ್ರತ್ಯೇಕಮಭಿಘಾರಯೇತ್ ।**
**ದಿಕ್ಪಾಲೇಭ್ಯೋ ಬಲಿಂ ದತ್ವಾ ಕ್ಷೇತ್ರಪಾಲಪಶೂಂಸ್ತಥಾ ॥ ೬ ॥**
**ವನಸ್ಪತಯೇ ಜುಹುಯಾತ್ಕ್ಷೀರೋದನಶತಾಹುತಿಂ ।**
**ತತಃ ಪರಶುಮಾದಾಯ ವೃಕ್ಷಮೂಲೇಷು ದಿಕ್ಷು ವೈ ॥ ೭ ॥**
**ಆಜ್ಯಸಂಸ್ಕೃತದೇಶೇಷು ಆಚಾರ್ಯೋ ಮಂತ್ರಮುಚ್ಚರನ್ ।**
**ಕಿಂಚಿತ್ ಕಿಂಚಿಚ್ಛೇದಯೇದ್ವೈ ಚಿಂತಯನ್ ಗರುಡಧ್ವಜಂ ॥ ೮ ॥**
**ನದತ್ಸು ತೂರ್ಯಘೋಷೇಷು ಗೀತಮಂಗಲವಾದಿಷು ।**
**ನಿಯೋಜ್ಯ ವರ್ಧಕಿಂ ತತ್ರ ಆಚಾರ್ಯಃ ಸ್ವಗೃಹಂ ವ್ರಜೇತ್ ॥ ೯ ॥**
**ಅಥವಾ ಸ್ಥಾನಲಬ್ಧಾನಿ ದಾರೂಣಿ ರಥಕರ್ಮಣಿ ।**
**ಉಕ್ತ ಸಂಸ್ಕಾರವಿಧಿನಾ ಸಂಸ್ಕುರ್ಯಾತ್ಕಲ್ಪಿತೇಽನಲೇ ॥ ೧೦ ॥**
**ಆರಭೇತ ರಥಂ ಕೃತ್ವಾ ವಿಷ್ವಕ್ಸೇನ ರಾಜಮಹೋತ್ಸವಂ ।**
**ಷೋಡಶಾರೈಃ ಷೋಡಶಭಿಶ್ಚಕ್ರೈರ್ಲೋಹಮಯೈರ್ದೃಢೈಃ ॥ ೧೧ ॥**
**ಯುಕ್ತಂ ವಿಷ್ಣೋ ರಥಂ ಕುರ್ಯಾದ್ದೃಢಾಕ್ಷಂ ದೃಢಕೂಬರಂ ।**
**ವಿಚಿತ್ರಘಟನಾಕಕ್ಷಪುತ್ತಲೀಪರಿವೇಷ್ಟಿತಂ ॥ ೧೨ ॥**

---

೬–೯. ಆಮೇಲೆ ತುಪ್ಪವನ್ನು ಪ್ರತಿಯೊಂದು ವೃಕ್ಷದ ಬುಡಕ್ಕೂ ಬೇರೆಬೇರೆಯಾಗಿ ಎರೆಯತಕ್ಕದ್ದು. ದಿಕ್ಪಾಲಕರಿಗೂ, ಕ್ಷೇತ್ರಪಾಲಕರಿಗೂ, ಪಶುಗಳಿಗೂ, ವನಸ್ಪತಿಗೂ, ಕ್ಷೀರಾನ್ನದಿಂದ ನೂರಾವೃತ್ತಿ ಆಹುತಿಯನ್ನು ಅಗ್ನಿಯಲ್ಲಿ ಹೋಮಮಾಡತಕ್ಕದ್ದು. ತರುವಾಯ ಆಚಾರ್ಯನಾದವನು ಕೊಡಲಿಯನ್ನು ತೆಗೆದುಕೊಂಡು ವಿಧ್ಯುಕ್ತವಾದ ಮಂತ್ರವನ್ನುಚ್ಚರಿಸುತ್ತ ತುತ್ತೂರಿಗಳು ಮತ್ತು ಇತರ ಮಂಗಳವಾದ್ಯಗಳು ಮೊಳಗುತ್ತಿರಲು, ತುಪ್ಪವನ್ನೆರೆದಿರುವ ಮರಗಳ ಬುಡಗಳಲ್ಲಿ ನಲ್ದಿಕ್ಕುಗಳಲ್ಲಿಯೂ ಸ್ವಲ್ಪ ಸ್ವಲ್ಪ ಚೆಕ್ಕೆಗಳನ್ನು ಶ್ರೀಮನ್ನಾರಾಯಣನನ್ನು ಸ್ಮರಿಸುತ್ತ ಕೆತ್ತಿಕೊಂಡಾದಬಳಿಕ ಬಡಗಿಯನ್ನು ಆ ಮರಗಳನ್ನು ಕಡಿಯುವುದಕ್ಕಾಗಿ ನೇಮಿಸಿ ಮನೆಗೆ ಬರತಕ್ಕದ್ದು.

೧೦. ಅಥವಾ ಆ ಪ್ರದೇಶದಲ್ಲಿಯೆ ದೊರಕುವ ಮರಗಳನ್ನೇ, ಹಿಂದೆ ಹೇಳಿದಂತೆ, ಅದಕ್ಕಾಗಿಯೆ ಕಲ್ಪಿಸಿದ ಅಗ್ನಿಯಲ್ಲ ವಿಧಿಪೂರ್ವಕವಾಗಿ ಸಂಸ್ಕರಿಸಿ ರಥನಿರ್ಮಾಣಕಾರ್ಯಕ್ಕೆ ಉಪಯೋಗಿಸಿಕೊಳ್ಳಬಹುದು.

೧೧–೧೨. ಹೀಗೆ ರಥವನ್ನು ನಿರ್ಮಿಸುವ ಮೊದಲು ವಿಷ್ವಕ್ಸೇನನಿಗೆ ಪೂಜಾ ಮಹೋತ್ಸವವನ್ನು ಮಾಡಬೇಕು. ತರುವಾಯ ಹದಿನಾರು ಹಲ್ಲುಗಳುಳ್ಳದಾಗಿ ಲೋಹಮಯವೂ, ದೃಢವೂ ಆದ ಹದಿನಾರು ಗಾಲಿಗಳಿಂದೊಪ್ಪಿ, ಬಲವಾದ ಅಚ್ಚುಮರ ಮತ್ತು ಕೂಬರಗಳೊಡಗೂಡಿ, ಚಿತ್ರವಿಚಿತ್ರವಾದ ಬಂಧಗಳನ್ನು

**ನಾನಾವಿಚಿತ್ರಬಹುಲಮಿಕ್ಷುಖಂಡವಿರಾಜಿತಂ ।**
**ಚತುಸ್ತೋರಣಸಂಯುಕ್ತಂ ಚತುರ್ದ್ವಾರಂ ಸುಶೋಭನಂ ॥ ೧೩ ॥**
**ನಾನಾವಿಚಿತ್ರಬಹುಲಂ ಹೇಮಪಟ್ಟವಿರಾಜಿತಂ ।**
**ದ್ವಾವಿಂಶತಿಕರೋಚ್ಛ್ರಾಯಂ ಪತಾಕಾಭಿರಲಂಕೃತಂ ॥ ೧೪ ॥**
**ಗಾರುಡಂ ಚ ಧ್ವಜಂ ಕುರ್ಯಾದ್ರಕ್ತಚಂದನನಿರ್ಮಿತಂ ।**
**ದೀರ್ಘನಾಸಂ ಸ್ಥೂಲದೇಹಂ ಕುಂಡಲಾಭ್ಯಾಂ ವಿಭೂಷಿತಂ ॥ ೧೫ ॥**
**ಚಂಚ್ವಗ್ರದಷ್ಟಭುಜಗಂ ಸರ್ವಾಲಂಕಾರಭೂಷಿತಂ ।**
**ವಿತತ್ಯ ಪಕ್ಷತೀ ವ್ಯೋಮ್ನಿ ಉಡ್ಡಯಂತಮಿವೋದಿತಂ ॥ ೧೬ ॥**
**ದೈತ್ಯದಾನವಸಂಘಸ್ಯ ಬಲದರ್ಪವಿನಾಶನಂ ।**
**ಸರ್ವಾಂಗಂ ತಸ್ಯ ಕನಕೈರಾಚ್ಛಾದ್ಯ ಪರಿಶೋಭಯೇತ್ ॥ ೧೭ ॥**
**ರಥಮೇವಂ ಹರೇಃ ಕುರ್ಯಾತ್ಸ್ವಾಸನಂ ಸುಪರಿಷ್ಕೃತಂ ।**
**ಚತುರ್ದಶರಥಾಂಗೈಸ್ತಂ ರಥಂ ಕುರ್ಯಾಚ್ಚ ಸೀರಿಣಃ ॥ ೧೮ ॥**

---

ಮೆರೆಯುವ ಜೊಂಬೆಸಾಲುಗಳಿಂದ ಸುತ್ತುವರೆದಿರುವ ರಥವನ್ನು ಶ್ರೀಜಗನ್ನಾಥ ಸ್ವಾಮಿಗಾಗಿ ನಿರ್ಮಿಸತಕ್ಕುದು.

೧೩. ಬಗೆ ಬಗೆಯ ವಿಚಿತ್ರಾಲಂಕಾರಗಳಿಂದಲೂ, ಕಬ್ಬಿನ ಜಳವೆಗಳಿಂದಲೂ ಆ ರಥವನ್ನು ಸಿಂಗರಿಸಿ, ನಾಲ್ಕುಕಡೆಗೂ ನಾಲ್ಕು ಹಸುರು ತೋರಣಗಳನ್ನು ಕಟ್ಟಿ, ನಾಲ್ಕು ಬಾಗಿಲುಗಳನ್ನುಮಾಡಿ ಸೊಗಸುಗೊಳಿಸಬೇಕು.

೧೪–೧೬. ಹೀಗೆ ನಾನಾ ವಿಚಿತ್ರಗಳಿಂದ ಪೂರ್ಣವಾಗಿ, ಪೀತಾಂಬರದಿಂದ ವಿರಾಜಿಸಿ, ಇಪ್ಪತ್ತೆರಡು ಹಸ್ತಗಳ ಔನ್ನತ್ಯವನ್ನೊಳಕೊಂಡು ಪತಾಕೆಗಳಿಂದೊಪ್ಪುತ್ತಿರುವ ಆ ರಥದ ಮೇಲ್ಭಾಗದಲ್ಲಿ ಗರುಡಧ್ವಜವನ್ನು ಕಟ್ಟಬೇಕು. ಆ ಧ್ವಜದಲ್ಲಿರುವ ಗರುಡನ ಮೂರ್ತಿಯು, ಉದ್ದವಾದ ಮೂಗು, ತುಂಬಿದ ಸ್ಥೂಲ ದೇಹ, ಕರ್ಣಕುಂಡಲಗಳಿಂದೊಪ್ಪುವ ಕಿವಿಗಳು, ಹಾವನ್ನು ಕಚ್ಚಿರುವ ಕೊಕ್ಕು ಉಳ್ಳವನಾಗಿರಬೇಕು. ಸರ್ವಾಲಂಕಾರಭೂಷಿತನಾಗಿರಬೇಕು. ರೆಕ್ಕೆಗಳನ್ನು ಹರಡಿಕೊಂಡು ಗಗನಕ್ಕೆ ಹಾರಲನುವಾಗಿರುವಂತೆ ತೋರಿ ಮೆರೆಯುತ್ತಿರಬೇಕು.

೧೭. ಎಲೈ ಮುನಿಗಳಿರಾ! ಸಕಲ ದೈತ್ಯದಾನವ ಸಮೂಹದ ಬಲವನ್ನೂ ಮರ್ದಿಸುವ ಆ ಗರುಡಮೂರ್ತಿಯ ದೇಹಾದ್ಯಂತವನ್ನೂ ಸ್ವರ್ಣಾಭರಣಗಳಿಂದ ಅಲಂಕರಿಸಬೇಕು.

೧೮. ಹೀಗೆ ದಿವ್ಯಪೀಠಾಲಂಕೃತವಾದ ರಥವನ್ನು ಶ್ರೀಹರಿಗಾಗಿ ನಿರ್ಮಿಸಿಯಾದ ಮೇಲೆ, ಬಲಭದ್ರದೇವನಿಗೆ ಹದಿನಾಲ್ಕು ಗಾಲಿಗಳೊಡಗೂಡಿದ ರಥವನ್ನು ನಿರ್ಮಿಸತಕ್ಕುದು.

ಚಕ್ರೈರ್ದ್ವಾದಶಭಿಃ ಕುರ್ಯಾತ್ಸುಭದ್ರಾಯಾ ರಥೋತ್ತಮಂ ।
ಸಪ್ತಚ್ಛದಮಯಂ ಕುರ್ಯಾತ್ಸೀರಿಣೋ ಲಾಂಗಲಧ್ವಜಂ ॥ ೧೯ ॥
ದೇವ್ಯಾಃ ಪದ್ಮಧ್ವಜಂ ಕುರ್ಯಾತ್ಪದ್ಮಕಾಷ್ಠವಿನಿರ್ಮಿತಂ ।
ವಿರಚಯ್ಯ ರಥಾನ್ ರಾಜಾ ಪ್ರತಿಷ್ಠಾಂ ಪೂರ್ವವಚ್ಚರೇತ್ ॥ ೨೦ ॥
ಯಥಾಮಂತ್ರಂ ಯಥಾಶಾಸ್ತ್ರಂ ವಿಶ್ವಸೇದ್ಬ್ರಾಹ್ಮಣೇಷು ಚ ।
ಬ್ರಾಹ್ಮಣಾ ಜಗದೀಶಸ್ಯ ಜಂಗಮಾಸ್ತನವಃ ಸ್ಮೃತಾಃ ॥ ೨೧ ॥
ಇತ್ಥಂ ಸುಘಟಿತಂ ಚಕ್ರಿತ್ರಯಂ ದೇವತ್ರಯಸ್ಯ ವೈ ।
ಆಷಾಢಸ್ಯ ಸಿತೇ ಪಕ್ಷೇ ದಿನೇ ವಿಷ್ಣೋಃ ಶುಭಪ್ರದೇ ॥ ೨೨ ॥
ಪ್ರತಿಷ್ಠಾಪ್ಯ ಸಮೃದ್ಧೇನ ವಿಧಿನಾ ಪೂರ್ವವದ್ದ್ವಿಜಾಃ ।
ರಕ್ಷಣೀಯಂ ತಥಾ ತತ್ರ ನಾರೋಹೇತ್ಕಶ್ಚನಾಶುಭಃ ॥ ೨೩ ॥
ಪಕ್ಷೀವಾ ಮಾನುಷೋ ವಾಪಿ ಮಾರ್ಜಾರನಕುಲಾದಯಃ ।
ತತೋ ದಿನತ್ರಯಾದರ್ವಾಗ್ರಥಾನಾಮುತ್ತರೇ ಕೃತೇ ॥ ೨೪ ॥

---

೧೯–೨೦. ಶ್ರೀ ಸುಭದ್ರಾದೇವಿಯ ರಥವನ್ನು ಹನ್ನೆರಡು ಚಕ್ರಗಳುಳ್ಳದನ್ನಾಗಿ ರಚಿಸಬೇಕು. ಬಲಭದ್ರದೇವನ ರಥಕ್ಕೆ ಲಾಂಗಲಧ್ವಜವನ್ನು ಏಳೆಲೆ ಬಾಳೆಯಿಂದ ಮಾಡಿ ಕಟ್ಟಬೇಕು. ಸುಭದ್ರಾದೇವಿಯ ರಥಕ್ಕೆ ಕಮಲನಾಳಗಳಿಂದ ನಿರ್ಮಿತವಾದ ಪದ್ಮಧ್ವಜವನ್ನು ಕಟ್ಟಬೇಕು. ಹೀಗೆ ಅರಸನಾದವನು ರಥರಚನೆಯನ್ನು ಮಾಡಿಸಿದ ತರುವಾಯ ಹಿಂದೆಯೆ ನಿರೂಪಿಸಿರುವಂತೆ ಅವುಗಳ ಪ್ರತಿಷ್ಠೆಯನ್ನೂ ಮಾಡಬೇಕು.

೨೧. ಈ ರಥಪ್ರತಿಷ್ಠಾಕಾರ್ಯವನ್ನು ಶಾಸ್ತ್ರೋಕ್ತವಾಗಿಯೂ, ಮಂತ್ರಾನುಪೂರ್ವಕವಾಗಿಯೂ ಬ್ರಾಹ್ಮಣರಿಂದ ಮಾಡಿಸಬೇಕು. ಅವರು ಹೇಳುವ ಶಾಸ್ತ್ರ ವಿಷಯಗಳಲ್ಲಿಯೂ, ಉಚ್ಚರಿಸುವ ಮಂತ್ರಗಳಲ್ಲಿಯೂ ನಂಬುಗೆಯನ್ನಿಡಬೇಕು. ಬ್ರಾಹ್ಮಣರು ಜಗದೀಶ್ವರನ ಜಂಗಮ ರೂಪರಾದವರು.

೨೨. ಎಲೈ ವಿಪ್ರರೇ! ಈ ರೀತಿ ಸುಘಟಿತವಾದ ಆ ಮುಮ್ಮೂರ್ತಿಗಳ ಮೂರು ರಥಗಳನ್ನೂ, ಆಷಾಢಶುಕ್ಲದ ಶುಭಪ್ರದವಾದ ವಿಷ್ಣುದಿನದಲ್ಲಿ ಪ್ರತಿಷ್ಠಿಸಬೇಕು.

೨೩–೨೪. ಇಂತ ಮೂರು ರಥಗಳನ್ನೂ ಪೂರ್ವದಂತೆಯೆ ವಿಧ್ಯುಕ್ತವಾಗಿಯೂ, ಸಂಪದ್ಭರಿತವಾಗಿಯೂ, ಪ್ರತಿಷ್ಠೆಮಾಡಿ ರಥಾರೋಹಣಸಮಯದವರೆಗೆ ಪಕ್ಷಿಯಾಗಲಿ, ಮನುಷ್ಯನಾಗಲಿ, ಬೆಕ್ಕು ಮುಂಗುಸಿ ಮೊದಲಾದ ಪ್ರಾಣಿಗಳಾಗಲಿ ಹೇಸಿಗೆಮಾಡಿ ಯಾವ ಅಶುಭಗಳೂ ಸಂಭವಿಸದಂತೆ ಅವುಗಳನ್ನು ರಕ್ಷಣೆಮಾಡಬೇಕು. ಬಳಿಕ ರಥಪ್ರತಿಷ್ಠೆಗೆ ಮೂರುದಿನಗಳ ಹಿಂದೆಯೆ ರಥಗಳಿಗೆ ಉತ್ತರದಲ್ಲಿ ರಚಿಸಿರುವ ಉತ್ಸವಾಂಗಮಂಡಪದಲ್ಲಿ ಅಂಕುರಾರ್ಪಣ

ಮಂಡಲೇ ಉತ್ಸವಾಂಗೇವಾ ಪ್ರಕುರ್ಯಾದಂಕುರಾರ್ಪಣಂ ।
ಅದ್ಭುತೇಷ್ವಥ ಜಾತೇಷು ಶಾಂತಿಂ ಕುರ್ಯಾತ್ಪುರೋದಿತಾಂ ॥ ೨೫ ॥
ರಥ್ಯಾ ಸುಸಂಸ್ಕೃತಾ ಕಾರ್ಯಾ ಮಹಾವೇದೀಂ ಯಥಾ ವ್ರಜೇತ್ ।
ಪಾರ್ಶ್ವಯೋರ್ಮಂಡಲಂ ಕುರ್ಯಾತ್ಪಥಿ ಗುಲ್ಮಾದಿಭಿಃ ಫಲೈಃ ॥ ೨೬ ॥
ಸುಮನಃಸ್ತಬಕೈರ್ಮಾಲ್ಯೈರ್ದುಕೂಲೈಶ್ಚಾಮರೈಸ್ತಥಾ ।
ಯಥಾ ಸುಪುಷ್ಪಿತಾರಣ್ಯರಾಜೀ ತತ್ರ ವಿರಾಜತೇ ॥ ೨೭ ॥
ಭೂಮಿಃ ಸಮಾ ಚ ಕಾರ್ಯಾ ವೈ ನಿಷ್ಪಂಕಾ ಸುಖಚಾರಣಾ ।
ನಿರ್ಮಲಾ ಚ ಸುಗಂಧಾ ಚ ಸುದೂರಾದ್ವರ್ಜಿತೋತ್ಕರಾ ॥ ೨೮ ॥
ಧೂಪಪಾತ್ರಾಣ್ಯನುಪದಂ ದಿಗಾಮೋದಕರಾಣಿ ಚ ।
ಚಂದನಾಂಭಃಪರಿಕ್ಷೇಪೋ ಯಂತ್ರಾಪಾತೋತ್ಕರಸ್ತಥಾ ॥ ೨೯ ॥
ಬಹೂನಿ ಋತುಪುಷ್ಪಾಣಿ ಪುಷ್ಪವೃಷ್ಟ್ಯರ್ಥಮೇವ ಹಿ ।
ನಟನರ್ತಕಮುಖ್ಯಾಶ್ಚ ಗಾಯನಾ ಬಹವಸ್ತಥಾ ॥ ೩೦ ॥
ವೇಶ್ಯಾ ಯೌವನಗರ್ವಾಢ್ಯಾ ರೂಪಾಲಂಕಾರಭೂಷಿತಾಃ ।
ಮೃದಂಗಾಃ ಪಣವಾಶ್ಚೈವ ಭೇರೀ ಢಕ್ಕಾದಯಸ್ತಥಾ ॥ ೩೧ ॥

---

ಮಹೋತ್ಸವವನ್ನು ಮಾಡಬೇಕು. ಈ ಮಹೋತ್ಸವವು ಅದ್ಭುತವಾಗಿ ನಡೆಯುತ್ತಿರುವಂತೆಯೆ ಪೂರ್ವದಲ್ಲಿ ಹೇಳಿರುವ ಶಾಂತಿಕರ್ಮವನ್ನು ಮಾಡತಕ್ಕದ್ದು.

೨೬–೨೭. ರಥಗಳು ಮಹಾವೇದಿಯ ಬಳಿಗೈದಲನುಕೂಲವಾಗಿರುವಂತೆ ಬೀದಿಯನ್ನು ಚೆನ್ನಾಗಿ ಶೋಧಿಸಬೇಕು. ಹಸರೆಲೆಗಳಿಂದಲೂ, ಫಲಗಳಿಂದಲೂ ಇತ್ತಂಡಗಳಲ್ಲಿಯೂ ಚಪ್ಪರಗಳನ್ನು ರಚಿಸಿ, ಹೂಗೊಂಚಲುಗಳಿಂದಲೂ, ಹೂಮಾಲಿಕೆಗಳಿಂದಲೂ, ರೇಷ್ಮೆಯ ವಸ್ತ್ರಗಳಿಂದಲೂ, ಚಾಮರಗಳಿಂದಲೂ ಅವುಗಳನ್ನು ಶೃಂಗರಿಸಿ ಆ ಪ್ರದೇಶವೆಲ್ಲವೂ ಹೂಮೊಳೆತು ರಾಜಿಸುವ ವನರಾಜಿಯೋಪಾದಿಯಲ್ಲಿ ಕಂಗೊಳಿಸುವಂತೆ ಮಾಡಬೇಕು.

೨೮–೩೩. ರಥಗಳು ಬರುವೆಡೆಯಲ್ಲಿ ಭೂಮಿಯನ್ನು ಸಮಗೊಳಿಸಿ ಕೆಸರಿಲ್ಲದೆ ಸುಖಸಂಚಾರಕ್ಕೆ ಯೋಗ್ಯವಾಗಿರುವಂತೆ ಮಾಡಬೇಕು; ನಿರ್ಮಲವೂ, ಸುಗಂಧಭರಿತವೂ ಆಗಿರುವಂತೆಸಗಿ, ಕಶ್ಮಲವೆಲ್ಲವನ್ನೂ ದೂರಗೊಳಿಸಬೇಕು. ಎತ್ತೆತ್ತಲೂ ಸುವಾಸನೆಯೇ ಬರುವಂತೆ ಅಲ್ಲಲ್ಲಿ ಧೂಪಪಾತ್ರೆಗಳನ್ನಿರಿಸಬೇಕು. ಸುಗಂಧೋದಕವನ್ನು ಚಿಮುಕಿಸಿ, ಅಲ್ಲಲ್ಲಿ ಪುಷ್ಪವೃಷ್ಟಿಗಾಗಿ ಸಮಸ್ತಋತುಗಳಲ್ಲಿಯೂ ದೊರಕುವ ಹೂಗಳಿಂದ ತುಂಬಿದ ಯಂತ್ರಗಳನ್ನು ಕಟ್ಟಬೇಕು. ನಟರೂ, ನರ್ತಕಿಯರೂ ಅಲ್ಲಿರತಕ್ಕದು. ಬಗೆ ಬಗೆಯ ಗಾಯನಗಳು ನಡೆಯುತ್ತಿರಬೇಕು. ಯೌವನಗರ್ವಿತೆಯರಾದ ವೇಶ್ಯೆಯರು ರೂಪಾಲಂಕಾರ

ಬಹವೋ ಬಹುಧಾ ತತ್ರ ಪತಾಕಾಶ್ಚಿತ್ರಿತಾಂತರಾಃ ।
ಧ್ವಜಾಶ್ಚ ಬಹವಸ್ತತ್ರ ಸ್ವರ್ಣರಾಜತನಿರ್ಮಿತಾಃ ॥ ೩೨ ॥
ವೈಜಯಂತ್ಯೋ ಬಹುವಿಧಾ ಭೂಮಿಗಾ ವಾಹನಾಸ್ತಥಾ ।
ಹಸ್ತಿನಶ್ಚ ಹಯಾಶ್ಚೈವ ಸುಸನ್ನದ್ಧಾಃ ಸ್ವಲಂಕೃತಾಃ ॥ ೩೩ ॥
ಏವಂ ಸಂಭೃತಸಂಭಾರಃ ಕ್ಷಿತಿಪಾಲಃ ಶುಚಿವ್ರತಃ ।
ಮುದಾ ಭಕ್ತ್ಯಾ ಚ ಪರಯಾ ಯುಕ್ತಃ ಕುರ್ಯಾನ್ಮಹೋತ್ಸವಂ ॥ ೩೪ ॥
ಆಷಾಢಸ್ಯ ಸಿತೇ ಪಕ್ಷೇ ದ್ವಿತೀಯಾ ಪುಷ್ಯಸಂಯುತಾ ।
ಅರುಣೋದಯವೇಲಾಯಾಂ ತಸ್ಯಾಂ ದೇವಂ ಪ್ರಪೂಜಯೇತ್ ॥ ೩೫ ॥
ಬ್ರಾಹ್ಮಣೈರ್ವೈಷ್ಣವೈಃ ಸಾರ್ಧಂ ಯತಿಭಿಶ್ಚ ತಪಸ್ವಿಭಿಃ ।
ವಿಜ್ಞಾಪಯೇದ್ದೇವದೇವಂ ಯಾತ್ರಾಯೈ ಸಂಸ್ಕೃತಾಂಜಲಿಃ ॥ ೩೬ ॥
ಇಂದ್ರದ್ಯುಮ್ನಂ ಕ್ಷಿತಿಭುಜಂ ಯಥಾಜ್ಞಾಸೀಃ ಪುರಾ ವಿಭೋ ।
ವಿಜಯಸ್ವ ರಥೇನಾಥ ಗುಂಡೀಚಾಮಂಡಪಂ ಪ್ರತಿ ॥ ೩೭ ॥

---

ಭೂಷಿತೆಯರಾಗಿರಬೇಕು. ಮೃದಂಗ, ಪಣವ, ಭೇರಿ, ಢಕ್ಕೆಯೇ ಮೊದಲಾದ ಅನೇಕ ವಾದ್ಯಗಳಿರಬೇಕು. ಚಿತ್ರವಿಚಿತ್ರವಾದ ಪತಾಕೆಗಳ ಶೃಂಗಾರವಿರತಕ್ಕುದು. ಚಿನ್ನ ಬೆಳ್ಳಿಯ ಧ್ವಜಸ್ತಂಭಗಳೂ, ಹಲಬಗೆಯ ವೈಜಯಂತೀ ಮಾಲೆಗಳೂ ಅಸಂಖ್ಯಾಕವಾಗಿ ಆ ಪ್ರದೇಶದಲ್ಲಿ ಬೆಳಗುತ್ತಿರಬೇಕು. ಭೂಮಿಯ ಮೇಲೆ ಹೋಗುವ ವಾಹನಗಳೂ, ಆನೆ, ಕುದುರೆ ಮುಂತಾದುವುಗಳೂ ಸುಸಜ್ಜಿತವೂ, ಸ್ವಲಂಕೃತವೂ ಆಗಿರಬೇಕು.

೩೪. ದೊರೆಯಾದವನು ಈ ರೀತಿ ಸಂಭಾರಗಳೆಲ್ಲವನ್ನೂ ಸಿದ್ಧಪಡಿಸಿಕೊಂಡು ಶುಚಿವ್ರತನಾಗಿ, ಸಂತೋಷದಿಂದಲೂ, ಪರಮಭಕ್ತಿಯಿಂದಲೂ ಕೂಡಿದವನಾಗಿ ಈ ಮಹಾವೇದೀಮಹೋತ್ಸವವನ್ನು ನಡೆಸತಕ್ಕುದು.

೩೫. ಆಷಾಢಮಾಸದ ಶುಕ್ಲಪಕ್ಷದ ದ್ವಿತೀಯೆಯ ದಿನ ಪುಷ್ಯ ನಕ್ಷತ್ರಯೋಗದಲ್ಲಿ ಅರುಣೋದಯಕಾಲಕ್ಕೆ ಶ್ರೀಜಗನ್ನಾಥನನ್ನು ಪೂಜಿಸಬೇಕು.

೩೬. ಇದಾದ ಮೇಲೆ ವಿಷ್ಣುಭಕ್ತರಾದ ಬ್ರಾಹ್ಮಣರಿಂದಲೂ, ಯತಿಗಳಿಂದಲೂ, ತಪಸ್ವಿಗಳಿಂದಲೂ ಸಹಿತನಾಗಿ ಅಂಜಲಿಬಂಧವನ್ನು ಮಾಡಿ ರಥಯಾತ್ರೆಗಾಗಿ ಆ ದೇವದೇವನನ್ನು ಪ್ರಾರ್ಥಿಸಬೇಕು.

೩೭. "ಎಲೈ ವಿಭುವೇ! ಪೂರ್ವದಲ್ಲಿ ನೀನು ಇಂದ್ರದ್ಯುಮ್ನಮಹಾರಾಜನನ್ನು ಎಂತು ಅರಿತೆಯೋ (ಅಂತೆಯೇ ನನ್ನನ್ನೂ ನಿನ್ನ ಪರಮ ಭಕ್ತನೆಂದು ಭಾವಿಸು) ಅಂತೆಯೇ, ಎಲೈ ಪ್ರಭುವೇ! ಪ್ರಕೃತದಲ್ಲಿ ನೀನು ಗುಂಡೀಚಾ ಮಂಡಪಕ್ಕೆ ಬಿಜಮಾಡು.

**ತವಾಪಾಂಗವಿಲೋಕೇನ ಪ್ರಪುನಂತು ದಿಶೋ ದಶ ।**
**ನಿಶ್ರೇಯಸಪದಂ ಯಾಂತು ಸ್ಥಾವರಾಣಿ ಚರಾಣಿ ಚ ॥ ೩೮ ॥**
**ಅವತಾರಃ ಕೃತೋ ಹ್ಯೇಷ ಲೋಕಾನುಗ್ರಹಕಾಮ್ಯಯಾ ।**
**ತದೇಹಿ ಭಗವನ್ ಪ್ರೀತ್ಯಾ ಚರಣಂ ನ್ಯಸ್ಯ ಭೂತಲೇ ॥ ೩೯ ॥**
**ತತಃ ಕರ್ಪೂರಚೂರ್ಣೈಶ್ಚ ಸುಮನೋಭಿರವಾಕಿರೇತ್ ।**
**ಪಥಿ ಶಾಕುನಸೂಕ್ತಾನಿ ಪ್ರಪಠಂತಿ ದ್ವಿಜಾತಯಃ ॥ ೪೦ ॥**
**ಕೇಚಿನ್ಮಂಗಲಗಾಥಾಶ್ಚ ಕೇಚಿಜ್ಜಯ ಜಯೇತಿ ಚ ।**
**ಜಿತಂತ ಇತಿಮಂತ್ರಂ ವೈ ಕೇಚಿದುಚ್ಚೈರ್ಜಪಂತಿ ಚ ॥ ೪೧ ॥**
**ಸೂತಮಾಗಧಮುಖ್ಯಾಶ್ಚ ಕೀರ್ತಿಂ ಪುಣ್ಯಾಂ ಮುದಾ ಜಗುಃ ।**
**ಸ್ವರ್ಣದಂಡಪ್ರಕೀರ್ಣಾನಾಂ ಶ್ರೇಣೀ ಚೋಭಯ ಪಾರ್ಶ್ವಯೋಃ ॥೪೨॥**
**ಲೀಲಯಾಂದೋಲಯಂತಿ ಸ್ಮ ರಣತ್ಕಂಕಣಮಂಜುಲಂ ।**
**ಸ್ವರ್ಣಪಾತ್ರಪರಿಕ್ಷಿಪ್ತಕೃಷ್ಣಾಗುರುಸುಧೂಪಿತೈಃ ॥ ೪೩ ॥**

---

೩೮. ನಿನ್ನ ಅಪಾಂಗ ವಿಲೋಕನದಿಂದ ದಶದಿಶೆಗಳೂ ಪಾವನವಾಗಲಿ: ಚರಾಚರಜಗತ್ತೇ ನಿನ್ನ ಸಂದರ್ಶನಭಾಗ್ಯವನ್ನು ಪಡೆದು ಮೋಕ್ಷವನ್ನು ಹೊಂದಲಿ.

೩೯. ಎಲೈ ಪುರುಷೋತ್ತಮನೇ! ನೀನು ಸಮಸ್ತಲೋಕಗಳ ಅನುಗ್ರಹಕ್ಕಾಗಿಯೇ ಈ ದಾರುಮಯಮೂರ್ತ್ಯವತಾರವನ್ನು ಮಾಡಿರುವೆಯಲ್ಲವೆ! ಆದುದರಿಂದೆಲೈ ಭಗವಂತನೇ! ನಿನ್ನ ಚರಣವನ್ನು ಭೂಮಿಗಿಟ್ಟು ನಡೆದು ಬರುವವನಾಗು."

೪೦. ಇಂತು ಪ್ರಾರ್ಥಿಸಿಯಾದ ಬಳಿಕ ದಾರಿಯಲ್ಲಿ ಕರ್ಪೂರದ ಧೂಳನ್ನೂ, ಹೂಗಳನ್ನೂ ಎರಚಬೇಕು. ಬ್ರಾಹ್ಮಣರು ಶಾಕುನ ಸೂಕ್ತಗಳನ್ನು ಹೇಳುವರು.

೪೧. ಕೆಲವರು ಮಂಗಲಗಾಥೆಗಳನ್ನು ಹಾಡುತ್ತಾರೆ. ಕೆಲವರು ಜಯ ಜಯ ಧ್ವನಿಗಳನ್ನು ಮಾಡುವರು. ಕೆಲವರು "ಜಿತಂತೇ" ಎಂಬ ಮಂತ್ರವನ್ನು ಘಟ್ಟಿಯಾಗಿ ಉಚ್ಚರಿಸುವರು.

೪೨-೪೪. ಸೂತಮಾಗಧಮುಖ್ಯರು ಶ್ರೀಜಗನ್ನಾಥಪ್ರಭುವಿನ ಪುಣ್ಯಾಕರವಾದ ಕೀರ್ತಿಯನ್ನು ಸಂತೋಷಭರಿತರಾಗಿ ಹಾಡುತ್ತಿರುವರು. ಸುಂದರನಾರಿಯರು ದಾರಿಯ ಇಕ್ಕಡೆಗಳಲ್ಲಿಯೂ ಸಾಲಾಗಿ ನಿಂತು ಕೈಕಡಗಗಳ ಶಬ್ದದೊಡಗೂಡಿ ಚಿನ್ನದ ಕೋಲುಗಳನ್ನು ವಿಲಾಸದಿಂದ ತಿರುಗಿಸುತ್ತ ಕೃಷ್ಣಾಗುರುಧೂಪದ ಪಾತ್ರೆಗಳನ್ನು ನೀರಾಜಿಸುತ್ತ ಸಮಸ್ತ ದಿಶೆಗಳನ್ನೇ ಅಲ್ಲದೆ ಗಗನವನ್ನೂ ಸುಗಂಧಭರಿತವನ್ನಾಗಿಸುತ್ತಿರುವರು. ಚರ್ಚರೀ, ಝುರ್ಝುರೀ, ವೇಣು, ವೀಣೆ ಮಾಧುರಿಕೆಯೇ ಮೊದಲಾದ ವಾದ್ಯಗಳು ಆ ಗೋವಿಂದನು ಬಿಜೆಗೈಯುವಾಗ ಮಧುರವಾಗಿ ಧ್ವನಿಗೈಯುತ್ತಿರುವುವು.

ಸುರಭೀಕೃತಸರ್ವೇಶಾಮುಖೇ ವ್ಯೋಮಾಂಗಣೇ ತಥಾ ।
ಚರ್ಚರೀ ಝರ್ಝರೀ ವೇಣು ವೀಣಾ ಮಾಧುರಿಕಾದಯಃ ।
ಶಬ್ದಾಯಂತೇ ಸುಮಧುರಂ ಗೋವಿಂದವಿಜಯಾಂತರೇ ॥ ೪೪ ॥
ಏವಂ ಪ್ರವೃತ್ತೇ ಸಮಯೇ ಕೃಷ್ಣರಾಮಪುರಃಸರಂ ।
ನಯಂತಿ ವಿಪ್ರಾ ಭದ್ರಾಂ ಚ ಕ್ಷತ್ರಿಯಾಶ್ಚ ವಿಶಸ್ತಥಾ ॥ ೪೫ ॥
ಛತ್ರಮಾಲಾ ಸಮುದಿತಾ ಮುಕ್ತಾಸ್ರಕ್ಚೀನತೋರಣಾ ।
ರತ್ನಧ್ವಜಾ ಹೇಮದಂಡಾಃ ಪಾರ್ಶ್ವಯೋರ್ಮುರವೈರಿಣಃ ॥ ೪೬ ॥
ರಾಜಾ ಚತುರ್ವಿಧಾ ವರ್ಣಾ ಅನ್ಯೇ ಯೇ ಚ ಪೃಥಗ್ಜನಾಃ ।
ದೀನಾ ಮಹಾಂತಶ್ಚ ತದಾ ಸಮಾನಾಸ್ತತ್ರ ಭಾಂತಿ ವೈ ॥ ೪೭ ॥
ಸಲೀಲಚರಣನ್ಯಾಸಂ ತೂಲಿಕಾಸ್ತರಣೇಷು ತಾಂ ।
ನಾಸಯಂತಃ ಕ್ವಚಿಚ್ಛಾಂತಾ ದೇವಾಂಸ್ತೇ ರಥಮನ್ವಿಯುಃ ॥ ೪೮ ॥
ಮಹೋತ್ಸವಂ ಸಮಾಸಾದ್ಯ ಗೀತಕೋಲಾಹಲಾನಿ ಚ ।
ಕರೇ ಕೃತ್ವಾ ಜಗನ್ನಾಥಂ ಭ್ರಾಮಯಿತ್ವಾ ರಥೋತ್ತಮಂ ॥ ೪೯ ॥
ರಾಮಂ ಕೃಷ್ಣಂ ಸುಭದ್ರಾಂ ಚ ರಥಮಧ್ಯೇ ನಿವೇಶಯೇತ್ ।
ಚಾರುಚಂದ್ರಾತಪಾಢ್ಯೇನ ಮಂಡಪೇನ ವಿರಾಜಿತೇ ॥ ೫೦ ॥

೪೫. ಎಲೈ ವಿಪ್ರರೇ! ಈ ಪ್ರಕಾರವಾಗಿ ಮಹೋತ್ಸವವು ಬಹು ಸಂಭ್ರಮದಿಂದ ನಡೆಯುತ್ತಿರುವ ಸಮಯದಲ್ಲಿ ಬ್ರಾಹ್ಮಣರು ಬಲರಾಮ ಸಹಿತನಾದ ಶ್ರೀ ಕೃಷ್ಣನನ್ನು ಉತ್ಸವತರುತ್ತಾರೆ. ಕ್ಷತ್ರಿಯರೂ, ವೈಶ್ಯರೂ ಅಂತೆಯೇ ಸುಭದ್ರಾದೇವಿಯನ್ನು ಬಿಜೆಮಾಡಿಸುವರು.

೪೬. ಮುರವೈರಿಯಾದ ಶ್ರೀ ಜಗನ್ನಾಥಸ್ವಾಮಿಯ ಉಭಯ ಪಾರ್ಶ್ವಗಳಲ್ಲಿಯೂ ಮುತ್ತಿನ ಮತ್ತು ಪುಷ್ಪಗಳ ತೋರಣಗಳೊಡಗೂಡಿದ ಛತ್ರಮಾಲೆಯೂ, ಚಿನ್ನದ ಹಿಡಿಗಳುಳ್ಳ ರಥದ ಧ್ವಜಗಳೂ ಶೋಭಿಸುತ್ತಿರುತ್ತವೆ.

೪೭. ಆ ವೇಳೆಯಲ್ಲಿ ರಾಜನೂ, ಚಾತುರ್ವರ್ಣ್ಯದವರೂ, ಇತರ ಬೇರೆ ಬೇರೆ ಜಾತಿಯವರೂ, ದೀನರೂ, ದರಿದ್ರರೂ, ಐಶ್ವರ್ಯವಂತರೂ ಸರಿ ಸಮಾನಸ್ಕಂಧರಾಗಿಯೇ ಇರುತ್ತಾರೆ.

೪೮ ೪೯. ಅವರೆಲ್ಲರೂ ತೂಲಿಕಾಸ್ತರಣಗಳಲ್ಲಿ ಆ ಮೂರ್ತಿಗಳನ್ನು ನಡೆದು ಬರುವಂತೆ ಮಾಡಿ ಅಲ್ಲಲ್ಲಿ ಸ್ವಲ್ಪ ನಿಲ್ಲಿಸಿಕೊಂಡು ರಥದ ಬಳಿಗೆ ಬಿಜೆಗೊಳಿಸುವರು. ಈ ರೀತಿ ಮಹೋತ್ಸವವನ್ನು ನಡೆಸಿದ ಬಳಿಕ ಗೀತಕೋಲಾಹಲಗಳನ್ನು ಮಾಡುತ್ತ ಶ್ರೀ ಜಗನ್ನಾಥನನ್ನು ಕೈಗಳಲ್ಲಿ ಕುಳ್ಳಿರಿಸಿಕೊಂಡು ಸುತ್ತಿಸುತ್ತ ರಥದ ಬಳಿಗೈದಬೇಕು.

೫೦-೫೨. ತರುವಾಯ ಬಲರಾಮನನ್ನೂ, ಕೃಷ್ಣನನ್ನೂ, ಸುಭದ್ರಾ

ಕಿಂಕಿಣೀಮಾಲಿಕಾಭಿಶ್ಚ ಮಾಲ್ಯಚಾಮರಭೂಷಿತೇ ।
ಸಸಾರಕೃಷ್ಣಾಗುರುಧೂಪಸಂಪೂರಿತಗರ್ಭಕೇ ॥ ೫೧ ॥
ತತಸ್ತಾನ್ವಾಸಯಿತ್ವಾ ತು ತೂಲಿಕಾಸು ಸುರೋತ್ತಮಾನ್ ।
ಭೂಷಯೇದ್ವಿವಿಧೈರ್ಭಕ್ತ್ಯಾ ವಸ್ತ್ರಾಲಂಕಾರಮಾಲ್ಯಕೈಃ ॥ ೫೨ ॥
ಪೂಜಯೇದುಪಚಾರೈಸ್ತೈಃ ಸಮೃದ್ಧೈರ್ಭಕ್ತಿಭಾವಿತೈಃ ।
ನಾತಃ ಪರತರಂ ವಿಷ್ಣೋರ್ಯಾತ್ರಾಂತರಮವೇಕ್ಷ್ಯತೇ ॥ ೫೩ ॥
ಯತ್ರ ಸ್ವಯಂ ತ್ರಿಲೋಕೇಶಃ ಸ್ಯಂದನೇನ ಕುತೂಹಲಾತ್ ।
ಮಾನಯನ್ ಪೂರ್ವಮಾಜ್ಞಾಂ ತಾಂ ವರ್ಷೇ ವರ್ಷೇ ವ್ರಜೇದಸೌ ॥ ೫೪ ॥
ರಥಸ್ಥಿತಂ ವ್ರಜಂತಂ ತಂ ಮಹಾವೇದೀಮಹೋತ್ಸವೇ ।
ಯೇ ಪಶ್ಯಂತಿ ಮುದಾ ಭಕ್ತ್ಯಾ ವಾಸಸ್ತೇಷಾಂ ಹರೇಃ ಪದೇ ॥ ೫೫ ॥
ಸತ್ಯಂ ಸತ್ಯಂ ಪುನಃ ಸತ್ಯಂ ಪ್ರತಿಜಾನೇ ದ್ವಿಜೋತ್ತಮಾಃ ।
ನಾತಃ ಶ್ರೇಯಃಪರಂ ವಿಷ್ಣೋರುತ್ಸವಃ ಶಾಸ್ತ್ರಸಂಮತಃ ॥ ೫೬ ॥

---

ದೇವಿಯನ್ನೂ ರಥ ಮಧ್ಯದಲ್ಲಿ ಮನೋಹರವಾದ ಬೆಳದಿಂಗಳು ತುಂಬಿದಂತೆ ಕಂಗೊಳಿಸುತ್ತಿರುವ ಮಂಡಪದಿಂದೊಡಗೂಡಿ ವಿರಾಜಿಸುತ್ತ, ಕಿರುಗೆಜ್ಜೆಗಳ ಮಾಲಿಕೆಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ಶೋಭಿಸಿ, ಪರಿಮಳ ಪೂರ್ಣವಾದ ಕೃಷ್ಣಾಗುರುಧೂಪದಿಂದ ಕೂಡಿರುವ ಪೀಠದ ಮೇಲೆ ನೆಲೆಗೊಳಿಸತಕ್ಕದು. ಇದಾದ ಬಳಿಕಲಾದರೋ ಆ ದೇವತಾ ಮೂರ್ತಿಗಳನ್ನು ತೂಲಿಕೆಗಳಲ್ಲಿ ವಾಸಗೊಳಿಸಿ ಭಕ್ತಿಪೂರ್ವಕವಾಗಿ ವಸ್ತ್ರಾಲಂಕಾರಮಾಲಿಕೆಗಳಿಂದ ಸಿಂಗರಿಸಬೇಕು.

೫೩. ಆಮೇಲೆ ಭಕ್ತಿಭಾವಿತವೂ, ಸುಸಮೃದ್ಧವೂ ಆದ ಷೋಡಶೋಪಚಾರಗಳಿಂದ ಆ ಮೂರ್ತಿಗಳನ್ನು ಪೂಜಿಸಬೇಕು. ಇಲ್ಲಿಂದ ಮುಂದೆ ತ್ರಿಲೋಕೇಶನಾದ ಆ ಮಹಾವಿಷ್ಣುವು ಕುತೂಹಲದಿಂದ ತಾನೇ ರಥಾರೂಢನಾಗುವ ಮಹೋತ್ಸವವೇನೂ ಇರುವುದಿಲ್ಲವು.

೫೪–೫೫. ಇಂತೆಯೇ ಪ್ರತಿವರ್ಷದಲ್ಲಿಯೂ ಆ ಜಗನ್ನಾಥಸ್ವಾಮಿಯು ಪೂರ್ವದಲ್ಲಿ ಇಂದ್ರದ್ಯುಮ್ನರಾಜನಿಗೆ ತಾನಿತ್ತ ಆಜ್ಞೆಯನ್ನನುಸರಿಸಿ ರಥಯಾತ್ರೆ ಹೊರಡುವನು. ಎಲೈ ವಿಪ್ರರೇ! ಈ ರೀತಿ ಮಹಾವೇದೀಮಹೋತ್ಸವದಲ್ಲಿ ರಥಾರೂಢನಾಗಿ ಬಿಜೆಮಾಡುವ ಸ್ವಾಮಿಯನ್ನು ಯಾವ ಮಾನವರು ದರ್ಶನ ಮಾಡುತ್ತಾರೆಯೋ ಅವರು ಶ್ರೀಹರಿಯ ವೈಕುಂಠಲೋಕವನ್ನು ಸೇರಿ ಅಲ್ಲಿ ಸಂತೋಷವಾಗಿ ವಾಸಮಾಡುತ್ತಾರೆ.

೫೬. ಎಲೈ ದ್ವಿಜೋತ್ತಮರೇ! ನಾನು ಮೂರು ಮೂರು ಬಾರಿಗೂ ಸತ್ಯವಾಗಿ ಹೇಳುತ್ತೇನೆ. ಇದಕ್ಕಿಂತಲೂ ಶಾಸ್ತ್ರಸಮ್ಮತವಾಗಿ ಸಮಸ್ತ

**ಯಥಾ ರಥವಿಹಾರೋಽಯಂ ಮಹಾವೇದೀಮಹೋತ್ಸವಃ ।**
**ಯತ್ರಾಗತ್ಯ ದಿವೋ ದೇವಾಃ ಸ್ವರ್ಗಂ ಯಾಂತ್ಯಧಿಕಾರಿಣಃ ॥ ೫೭ ॥**
**ಕಿಂ ವಚ್ಮಿ ತಸ್ಯ ಮಾಹಾತ್ಮ್ಯಮುತ್ಸವಸ್ಯ ಮುರದ್ವಿಷಃ ।**
**ಯಸ್ಯ ಸಂಕೀರ್ತನಾತ್ಪಾಪಂ ನಶ್ಯೇಜ್ಜನ್ಮಶತೋದ್ಭವಂ ॥ ೫೮ ॥**
**ಮಹಾವೇದೀಂ ವ್ರಜಂತಂ ತಂ ರಥಸ್ಥಂ ಪುರುಷೋತ್ತಮಂ ।**
**ಬಲಭದ್ರಂ ಸುಭದ್ರಾಂ ಚ ಜನ್ಮಕೋಟಿಸಮುದ್ಭವಂ ॥ ೫೯ ॥**
**ದೃಷ್ಟ್ವಾ ಪಾಪಂ ನಾಶಯತಿ ನಾತ್ರ ಕಾರ್ಯಾ ವಿಚಾರಣಾ ।**
**ರಥಚ್ಛಾಯಾಂ ಸಮಾಕ್ರಮ್ಯ ಬ್ರಹ್ಮಹತ್ಯಾ ವ್ಯಪೋಹತಿ ॥ ೬೦ ॥**
**ತದ್ರೇಣುಸಂಸಕ್ತವಪುಸ್ತ್ರಿವಿಧಾಂ ಪಾಪಸಂಹತಿಂ ।**
**ನಾಶಯೇತ್ಸ್ವರ್ಗಗಂಗಾಯಾಃ ಸ್ನಾನಜಂ ಫಲಮಾಪ್ನುಯಾತ್ ॥ ೬೧ ॥**
**ಘನಾಂಬುವೃಷ್ಟಿಯೋಗೇನ ರಥಮಾರ್ಗೇ ತು ಪಂಕಿಲೇ ।**
**ದಿವ್ಯದೃಷ್ಟ್ಯಾ ಚ ಕೃಷ್ಣಸ್ಯ ಸಮಸ್ತಮಲಹಾರಿಣಿ ॥ ೬೨ ॥**

---

ಲೋಕಕ್ಕೂ ಶ್ರೇಯಃಪ್ರದವಾದ ಶ್ರೀಮನ್ಮಹಾವಿಷ್ಣುವಿನ ಮಹೋತ್ಸವವು ಮತ್ತೊಂದಿರುವುದಿಲ್ಲವು.

೫೭. ಎಲೈ ವಿಪ್ರರೇ! ರಥವಿಹಾರವನ್ನೊಳಕೊಂಡ ಈ ಮಹಾವೇದೀ ಮಹೋತ್ಸವಕ್ಕೆ ಅಧಿಕಾರಿಗಳಾದ ದೇವತೆಗಳೆಲ್ಲರೂ ಈ ಕ್ಷೇತ್ರಕ್ಕೈತಂದು ತರುವಾಯ ಸ್ವರ್ಗಕ್ಕೆ ಹಿಂತಿರುಗುತ್ತಾರೆ.

೫೮. ಮುರವೈರಿಯಾದ ಶ್ರೀಪುರುಷೋತ್ತಮಸ್ವಾಮಿಯ ಈ ಮಹಾವೇದೀಮಹೋತ್ಸವದ ಮಹಿಮೆಯನ್ನೇನುಹೇಳಲಿ! ಈ ಉತ್ಸವದ ಹೆಸರನ್ನು ಹೇಳಿದ ಮಾತ್ರದಿಂದಲೇ ನೂರು ಜನ್ಮಗಳಿಂದ ಕೂಡಿಬಂದ ಪಾಪವೆಲ್ಲವೂ ಕಳೆದು ಹೋಗುತ್ತದೆ.

೫೯-೬೦. ರಥಾರೂಢನಾಗಿ ಮಹಾವೇದಿಯನ್ನು ಕುರಿತು ಹೋಗುತ್ತಿರುವ ಪುರುಷೋತ್ತಮನನ್ನಾಗಲಿ, ಬಲಭದ್ರ ಸುಭದ್ರಾದೇವಿಯರನ್ನಾಗಲಿ ಸಂದರ್ಶಿಸಿದುದಾದರೆ ಒಂದು ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ನಾಶವಾಗುತ್ತದೆ. ಈ ವಿಷಯದಲ್ಲಿ ಯಾವ ವಿಚಾರವನ್ನೂ ಮಾಡಬೇಕಾಗಿಲ್ಲವು. ಉತ್ಸವ ಸಮಯದಲ್ಲಿ ಮಾನವನು ಸ್ವಾಮಿಯ ರಥದ ನೆರಳನ್ನು ದಾಟಿದುದಾದರೆ ಬ್ರಹ್ಮಹತ್ಯಾದೋಷದಿಂದ ನಿವೃತ್ತಿಹೊಂದುತ್ತಾನೆ.

೬೧. ಆ ರಥದ ದೂಳು ಮೈಗೆ ಅಂಟಿದುದಾದರೆ ಮಾನವನ ಕಾಯಿಕ ವಾಚಿಕ ಮಾನಸಿಕಗಳಾದ ಪಾಪರಾಶಿಗಳನ್ನು ನಾಶಗೊಳಿಸುವುದಲ್ಲದೆ ದೇವಗಂಗಾ ಸ್ನಾನಮಾಡಿದ ಫಲವನ್ನವನಿಗೆ ದೊರಕಿಸುವುದು.

೬೨-೬೩. ಒಂದು ವೇಳೆ ಶ್ರೀಜಗನ್ನಾಥಸ್ವಾಮಿಯ ರಥವು ಬರುವ

**ತತ್ರ ಯೇ ಪ್ರಣಿಪಾತಾಂಸ್ತು ಕುರ್ವತೇ ವೈಷ್ಣವೋತ್ತಮಾಃ ।**
**ಅನಾದಿವ್ಯೂಢಪಂಕಾಂಸ್ತೇ ಹಿತ್ವಾ ಮೋಕ್ಷಮವಾಪ್ನುಯುಃ ॥ ೬೩ ॥**
**ಗವಾಂ ಕೋಟಿಪ್ರದಾನಸ್ಯ ಕನ್ಯಾನಾಮಯುತಸ್ಯ ಚ ।**
**ವಾಜಿಮೇಧಸಹಸ್ರಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೬೪ ॥**
**ಅನುಗಚ್ಛಂತಿ ಕೃಷ್ಣಂ ಯೇ ಯಾತ್ರಾಕೌತೂಹಲಾದಪಿ ।**
**ಅನುವ್ರಜಂತಿ ನಿತ್ಯಂ ವೈ ದೇವಾಃ ಶಕ್ರಪುರೋಗಮಾಃ ॥ ೬೫ ॥**
**ಪಶ್ಯಂತಿ ಯೇ ರಥಂ ಯಾಂತಂ ದಾರುಬ್ರಹ್ಮಸನಾತನಂ ।**
**ಪದೇಪದೇಽಶ್ವಮೇಧಸ್ಯ ಫಲಂ ತೇಷಾಂ ಪ್ರಕೀರ್ತಿತಂ ॥ ೬೬ ॥**
**ವೇದೈಃ ಸ್ತುವಂತಿ ವೇದಾನಾಂ ವಕ್ತಾರೋ ಮೋಕ್ಷದಾಯಿನಂ ।**
**ಇತಿಹಾಸಪುರಾಣಾದ್ಯೈಃ ಸ್ತೋತ್ರೈರ್ವಾಪಿ ಸ್ವಯಂಕೃತೈಃ ॥ ೬೭ ॥**
**ಸ್ತುವಂತಿ ಪುಂಡರೀಕಾಕ್ಷಂ ಯೇ ವೈ ವಿಗತಕಲ್ಮಷಾಃ ।**
**ವೈಷ್ಣವಂ ಯೋಗಮಾಸ್ಥಾಯ ಮೋದಂತೇ ನಾರದಾದಿಭಿಃ ॥ ೬೮ ॥**

---

ಮಾರ್ಗದಲ್ಲಿ ಮಳೆಯಾಗಿ ಕೆಸರು ತುಂಬಿದ್ದರೆ ಅದು ಆ ಸ್ವಾಮಿಯ ದೃಷ್ಟಿಕ್ಷೇಪಮಾತ್ರದಿಂದಲೇ ಸಮಸ್ತಮಲಗಳನ್ನೂ ಕಳೆಯುವುದಾಗುತ್ತದೆ. ಅಲ್ಲಿ ವಿಷ್ಣುಭಕ್ತರಾದ ಯಾವ ಮಾನವರು ಕೆಸರೆಂಬ ಶಂಕೆಯನ್ನೇ ತೊರೆದು ದೀರ್ಘದಂಡ ನಮಸ್ಕಾರಗಳನ್ನು ಮಾಡುತ್ತಾರೆಯೋ, ಅವರು ಮೊದಲಿನಿಂದಲೂ ಕೂಡಿ ಬಂದಿರುವ ಪಾಪದ ಕೆಸರನ್ನು ತೊಳೆದುಕೊಂಡು ಮುಕ್ತರಾಗುತ್ತಾರೆ.

೬೪–೬೫. ಎಲೈ ವಿಪ್ರರೇ! ಯಾವ ಮಾನವರು ಕುತೂಹಲಭರಿತರಾಗಿ ಶ್ರೀಪುರುಷೋತ್ತಮನ ರಥೋತ್ಸವವನ್ನು ಅನುಸರಿಸಿ ಹೋಗುತ್ತಾರೆಯೋ ಅವರು ಕೋಟಿ ಗೋದಾನ, ಹತ್ತುಸಾವಿರ ಕನ್ಯಾದಾನ, ಒಂದು ಸಾವಿರ ಅಶ್ವಮೇಧಯಾಗಗಳು ಇವುಗಳನ್ನು ಮಾಡುವುದರಿಂದುಂಟಾಗುವ ಫಲವನ್ನು ಪಡೆಯುವರಲ್ಲದೆ, ದೇವತೆಗಳೂ ಸಹ ಅವರನ್ನು ಅನುಸರಿಸಿ ಬರುತ್ತಾರೆ.

೬೬. ಯಾರಾದರೆ ದಾರುಬ್ರಹ್ಮಸನಾಥವಾದ ಈ ರಥೋತ್ಸವವನ್ನು ನೋಡುತ್ತಾರೆಯೋ ಅವರು ಅಶ್ವಮೇಧ ಫಲವನ್ನು ಪಡೆಯುತ್ತಾರೆ.

೬೭–೬೮. ವೇದಪಾಠಕರಾದ ಯಾವ ವಿಪ್ರರು ಮೋಕ್ಷದಾಯಕನಾದ ಸ್ವಾಮಿಯನ್ನು ವೇದಗಳಿಂದ ಸ್ತುತಿಸುವರೋ, ಯಾರಾದರೆ ಇತಿಹಾಸ ಪುರಾಣಾದಿಗಳಲ್ಲಿ ಉಕ್ತವಾಗಿರುವ ಸ್ತೋತ್ರಗಳಿಂದಾಗಲಿ, ತಾವೇ ಕವನಮಾಡಿದ ಸ್ತುತಿಗಳಿಂದಾಗಲಿ ಸ್ತುತಿಸುತ್ತಾರೆಯೋ ಅವರೆಲ್ಲರೂ ವಿಷ್ಣುಯೋಗವನ್ನು ಪಡೆದು ವಿಷ್ಣುಲೋಕವನ್ನು ಸೇರಿ ಪರಮವೈಷ್ಣವರಾದ ನಾರದಾದಿಗಳೊಡನೆ ಸಮಸಮವಾಗಿ ಸಂತೋಷಿಸುತ್ತಾರೆ.

**ಕುರ್ವಂತಿ ವಾಸುದೇವಾಗ್ರೇ ಜಯಶಬ್ದೇನ ವಾ ಸ್ತುತಿಂ ।**
**ತೇ ವೈ ಜಯಂತಿ ಪಾಪಾನಿ ವಿವಿಧಾನಿ ನ ಸಂಶಯಃ ॥ ೬೯ ॥**
**ಲಯತಾಲಾನಭಿಜ್ಞೋಽಪಿ ಗೀತಮಾಧುರ್ಯವರ್ಜಿತಃ ।**
**ನರ್ತನಂ ಕುರುತೇ ವಾಪಿ ಗಾಯತ್ಯಥ ನರೋತ್ತಮಃ ।**
**ವೈಷ್ಣವೋತ್ತಮಸಂಸರ್ಗಾನ್ಮುಕ್ತಿಂ ಪ್ರಾಪ್ನೋತ್ಯಸಂಶಯಂ ॥ ೭೦ ॥**
**ನಾಮಾನಿ ಕೀರ್ತಯನ್ನಸ್ಯ ತೇನ ಯಾತಿ ಸಹೈವ ಯಃ ।**
**ಅನುವ್ರಜ್ಯಾತ್ತತ್ಫಲಂ ವೈ ಪ್ರಾಪ್ನೋತ್ಯತ್ರ ನ ಸಂಶಯಃ ॥ ೭೧ ॥**
**ಜಯ ಕೃಷ್ಣ ಜಯ ಕೃಷ್ಣ ಜಯ ಕೃಷ್ಣೇತಿ ಯೋ ವದೇತ್ ।**
**ಗುಂಡೀಚಾನಗರಂ ಯಾಂತಂ ಕೃಷ್ಣಭಕ್ತಿಸಮನ್ವಿತಃ ।**
**ನಮಾತೃಗರ್ಭವಾಸಸ್ಯ ಸ ಚ ದುಃಖಮವಾಪ್ನುಯಾತ್ ॥ ೭೨ ॥**
**ಚಾಮರೈರ್ವ್ಯಜನೈಃ ಪುಷ್ಪಸ್ತಬಕೈರ್ನೀಲಚೋಲಕೈಃ ।**
**ರಥಸ್ಯಾಗ್ರಸ್ಥಿತೋ ಯೋ ವೈ ವೀಜಯೇತ್ಪುರುಷೋತ್ತಮಂ ॥ ೭೩ ॥**

---

೬೯. ಯಾರಾದರೆ ವಾಸುದೇವನ ಮುಂಗಡೆ ಜಯಜಯಕಾರಗಳನ್ನೂ, ಸ್ತೋತ್ರಗಳನ್ನೂ ಮಾಡುತ್ತಾರೆಯೋ ಅವರು ಬಗೆಬಗೆಯ ಪಾಪಸಮೂಹಗಳೆಲ್ಲವನ್ನೂ ಜಯಿಸುವರೆಂಬುದರಲ್ಲಿ ಸಂಶಯವೇ ಇರುವುದಿಲ್ಲವು.

೭೦. ಲಯತಾಳಗಳಿಲ್ಲದಿದ್ದರೂ, ಸಂಗೀತ ಮಾಧುರ್ಯವಿಲ್ಲದಿದ್ದರೂ ಯಾವ ಮಾನವೋತ್ತಮರು ಭಗವತ್ಸನ್ನಿಧಿಯಲ್ಲಿ ನರ್ತಿಸುವರೋ ಅಥವಾ ಗಾಯನಮಾಡುವರೋ ಅವರು ವೈಷ್ಣವೋತ್ತಮರ ಸಹವಾಸಯೋಗದಿಂದ ಮುಕ್ತಿಯನ್ನು ಪಡೆಯುವರೆಂಬುದರಲ್ಲಿ ಸಂದೇಹವಿಲ್ಲವು.

೭೧. ಎಲೈ ವಿಪ್ರರೇ! ಶ್ರೀಜಗನ್ನಾಥಪ್ರಭುವಿನ ದಿವ್ಯನಾಮಗಳನ್ನು ಸಂಕೀರ್ತನಮಾಡುತ್ತ ರಥೋತ್ಸವದ ಹಿಂದೆ ಹೋಗುವವನು ವಿಷ್ಣುಭಕ್ತನೊಡನೆಯೇ ವೈಕುಂಠಲೋಕವನ್ನು ಸೇರುತ್ತಾನೆ. ಹೀಗೆ ಶ್ರೀಹರಿಯ ರಥವನ್ನು ಹಿಂಬಾಲಿಸುವವನಿಗೆ ಉತ್ತಮಫಲವು ದೊರಕುತ್ತದೆಯೆಂಬುದರಲ್ಲಿ ಸಂಶಯವಿಲ್ಲವು.

೭೨. ಗುಂಡೀಚಾನಗರವನ್ನು ಕುರಿತು ಉತ್ಸವ ಹೊರಟಿರುವ ಶ್ರೀಪುರುಷೋತ್ತಮಸ್ವಾಮಿಯನ್ನು ಹಿಂಬಾಲಿಸಿ ಹೋಗುತ್ತ ಭಕ್ತಿಪೂರ್ವಕವಾಗಿ "ಜಯ ಕೃಷ್ಣ, ಜಯ ಕೃಷ್ಣ, ಜಯ ಕೃಷ್ಣ!" ಎಂದು ಹೇಳುವ ಮಾನವನು ಪುನಃ ಮಾತೃಗರ್ಭವಾಸದ ದುಃಖವನ್ನು ಅನುಭವಿಸುವುದಿಲ್ಲವು.

೭೩–೭೪. ಯಾವ ಪುಣ್ಯಾತ್ಮನಾದರೆ ಶ್ರೀಹರಿಯ ರಥದ ಮುಂದೆ ನಿಂತು, ಚಾಮರವ್ಯಜನಗಳನ್ನಾಗಲಿ, ಹೂಗೊಂಚಲುಗಳನ್ನಾಗಲಿ, ನೀಲಾಂಬರಗಳನ್ನೇ ಆಗಲಿ ಬೀಸುತ್ತ ಹೋಗುತ್ತಾನೆಯೋ ಅವನು, ಸ್ವರ್ಗಲೋಕದಲ್ಲಿ

ಸಂವೀಜ್ಯಮಾನೋಽಪ್ಸರೋಭಿರ್ಗಂಧರ್ವೈರುಪಶೋಭಿತಃ ।
ಅನುವ್ರಜದ್ಭಿಸ್ತ್ರಿದಶೈರ್ಮಹೇಂದ್ರಾಸನಸಂಸ್ಥಿತಃ ॥ ೭೪ ॥
ಭುನಕ್ತಿ ಭೋಗಾನತುಲಾನ್ಯಾವದಾಭೂತಸಂಪ್ಲವಂ ।
ತದಂತೇ ಚ ಬ್ರಹ್ಮಲೋಕಂ ಪ್ರಾಪ್ಯ ಮುಕ್ತಿಮವಾಪ್ನುಯಾತ್ ॥ ೭೫ ॥
ಕೃಷ್ಣಸ್ಯ ಪುರತೋ ಯೋ ವೈ ಪುಷ್ಪವೃಷ್ಟಿಂ ಪ್ರಕುರ್ವತೇ ।
ತೇ ವೈ ಮನೋಗತಾನ್ ಸರ್ವಾನ್ ಪ್ರಾಪ್ನುವಂತಿ ಮನೋರಥಾನ್ ॥
ಸಹಸ್ರನಾಮಭಿಃ ಪುಣ್ಯೈಃ ಪರ್ಯಟಂತಿ ರಥಂ ತು ಯೇ ।
ತೇಷಾಂ ಪ್ರದಕ್ಷಿಣಂ ಕುರ್ಯುಸ್ತ್ರಿದಶಾ ನತಕಂಧರಾಃ ॥ ೭೭ ॥
ವಸಂತಿ ವೈಕುಂಠಗೃಹೇ ವಿಷ್ಣುತುಲ್ಯಪರಾಕ್ರಮಾಃ ॥ ೭೮ ॥
ತಸ್ಮಿನ್ಕಾಲೇ ಮಹಾಪುಣ್ಯೇ ದೇವರ್ಷಿಪಿತೃಸೇವಿತೇ ।
ಏಕಂ ಬ್ರಹ್ಮ ತ್ರಿಧಾಭೂತಂ ಮಾಯಯಾನುಗತಂ ಸ್ವಯಾ ॥ ೭೯ ॥
ಸಾಕ್ಷಾದ್ದಾರುಸ್ವರೂಪೇಣ ಮಹಾವೇದೀಮಹೋತ್ಸವಂ ॥ ೮೦ ॥

---

ಅಪ್ಸರಾಂಗನೆಯರು ಚಾಮರಗಳನ್ನು ಹಾಕಿ ಸೇವೆ ಸಲ್ಲಿಸುತ್ತಿರಲು, ದೇವತೆಗಳೆಲ್ಲರೂ ತನ್ನನ್ನು ಹಿಂಬಾಲಿಸುತ್ತಿರಲು ಮಹೇಂದ್ರಭವನವನ್ನು ಸೇರಿ ಅಲ್ಲಿ ಸಿಂಹಾಸನಾಸೀನನಾಗಿ, ಪ್ರಳಯದವರೆಗೂ ಸಮಸ್ತ ದಿವ್ಯಭೋಗಗಳನ್ನೂ ಅನುಭವಿಸುತ್ತಲಿದ್ದು ಕಡೆಗೆ ಬ್ರಹ್ಮಲೋಕವನ್ನು ಸೇರಿ ಅಲ್ಲಿಂದ ಮುಂದೆ ಪುನರಾವೃತ್ತಿರಹಿತವಾದ ಮೋಕ್ಷವನ್ನೇ ಪಡೆಯುತ್ತಾನೆ.

೭೬. ಶ್ರೀಕೃಷ್ಣನ ಮುಂದೆ ಯಾರಾದರೆ ಪುಷ್ಪವೃಷ್ಟಿಯನ್ನು ಮಾಡುವರೋ ಅವರು ಮನಸ್ಸಿನಲ್ಲಿರುವ ಸಮಸ್ತ ಮನೋರಥಗಳನ್ನೂ ಪಡೆಯುತ್ತಾರೆ.

೭೭. ಶ್ರೀ ಪುರುಷೋತ್ತಮನ ದಿವ್ಯಸಹಸ್ರನಾಮಗಳನ್ನು ಹೇಳಿಕೊಂಡು ಯಾರು ರಥಕ್ಕೆ ಪ್ರದಕ್ಷಿಣೆಮಾಡುತ್ತಾರೆಯೋ ಅವರಿಗೆ ದೇವತೆಗಳು ಭಕ್ತಿಯಿಂದ ತಲೆಬಾಗಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುತ್ತಾರೆ.

೭೮. ಎಲೈ ವಿಪ್ರರೇ! ಅಂತಹರು ವೈಕುಂಠಲೋಕವನ್ನು ಸೇರಿ ಅಲ್ಲಿ ಶ್ರೀ ಮಹಾವಿಷ್ಣುವಿಗೆ ಸಮಾನವಾದ ಪರಾಕ್ರಮವುಳ್ಳವರಾಗಿ ವಾಸ ಮಾಡುತ್ತಾರೆ.

೭೯–೮೦. ಮಹಾಪುಣ್ಯಕರವಾಗಿ ದೇವ ಋಷಿ ಪಿತೃಗಳೆಲ್ಲರೂ ಸೇವಿಸುವ ಆ ಮಹಾವೇದೀಮಹೋತ್ಸವದ ಸಮಯದಲ್ಲಿ ಒಂದೇ ಪರಬ್ರಹ್ಮಸ್ವರೂಪವೇ ಕೃಷ್ಣ, ಬಲರಾಮ ಸುದರ್ಶನರೆಂಬ ಮೂರು ರೂಪಗಳನ್ನು ತಾಳಿ ಮಾಯಾಸ್ವರೂಪಿಣಿಯಾದ ಸುಭದ್ರಾದೇವಿಯೊಡನೆ ಕೇವಲ ದಾರುರೂಪದಿಂದ ಮಹಾವೇದೀಮಹೋತ್ಸವವನ್ನು ಕೈಗೊಳ್ಳುವನು.

ರಥಾರೂಢಃ ಕೌತುಕವಾನ್ಯತ್ರ ಯಾತಿ ಜಗತ್ಪ್ರಭುಃ ।
ತಸ್ಮಿನ್ಕಾಲೇ ಪೃಥಿವ್ಯಾಂ ತು ಚರೇತ್ತತ್ರ ಮಹೋತ್ಸವಂ ॥ ೪೧ ॥
ದೇವಾ ಅಪ್ಯುತ್ಸವೇ ತಸ್ಮಿನ್ಪುರುಹೂತಪುರೋಗಮಾಃ ।
ಅಭಿಮಾನಂ ಪರಿತ್ಯಜ್ಯ ಶ್ರೇಣೀಭೂತಾ ಹಿ ಪಾರ್ಶ್ವಯೋಃ ॥ ೪೨ ॥
ಪ್ರಕುರ್ವಂತೇ ಮಹಾಯಾತ್ರಾಂ ತೈಸ್ತೈರ್ದಿವ್ಯೈಃ ಪರಿಚ್ಛದೈಃ ॥ ೪೩ ॥
ತೇಷಾಮಗ್ರೇಸರಸ್ತತ್ರ ದೇವೋಽಪಿ ಪ್ರಪಿತಾಮಹಃ ।
ಚತುರ್ದಶಾನಾಂ ಜಗತಾಂ ಕರ್ತಾ ಯಃ ಪರಮೇಶ್ವರಃ ॥ ೪೪ ॥
ಸೋಽಪಿ ತತ್ರ ಜಗನ್ನಾಥಂ ರಥೇ ಯಾಂತಂ ಮಹೋತ್ಸವೇ ।
ಬ್ರಹ್ಮಲೋಕಾತ್ಪರಾವೃತ್ಯ ಸ್ತುವನ್ವೇದಮಯೈಸ್ತವೈಃ ।
ಪದೇಪದೇ ಪ್ರಣಮತಿ ಭಗವಂತಂ ಸನಾತನಂ ॥ ೪೫ ॥
ಯದ್ಯಪ್ಯಬ್ಜನಿಧೇಃ ಕೃಷ್ಣಾನ್ನ ಭೇದೋಽಸ್ತಿ ತಥಾಪ್ಯಯಂ ।
ಮಹೋತ್ಸವಸ್ಯ ಮಹಿಮಾ ಯತ್ರ ಸರ್ವೇಽನುಯಾಯಿನಃ ॥ ೪೬ ॥
ನಾತಃ ಪರತರೋ ಲೋಕೇ ಮಹಾವೇದೀಮಹೋತ್ಸವಾತ್ ।
ಸರ್ವಪಾಪಹರೋ ಯೋಗಃ ಸರ್ವತೀರ್ಥಫಲಪ್ರದಃ ॥ ೪೭ ॥

---

೪೧. ಯಾವ ಸಮಯದಲ್ಲಿ ಜಗತ್ಪ್ರಭುವು ರಥಾರೂಢನಾಗಿ ಕೌತುಕದಿಂದ ಉತ್ಸವಬರುವನೋ ಆ ಸಮಯದಲ್ಲಿಯೇ ಈ ಮಹಾವೇದೀಮಹೋತ್ಸವವು ನಡೆಯುತ್ತದೆ.

೪೨–೪೩. ಆಗ ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳೂ ತಂತಮ್ಮ ಪದವಿ ಪ್ರತಿಷ್ಠೆಗಳ ಅಭಿಮಾನವನ್ನು ತೊರೆದು ಸ್ವಾಮಿಯ ರಥದ ಇಕ್ಕಡೆಗಳಲ್ಲಿಯೂ ಸಾಲುಗಟ್ಟಿಕೊಂಡು ತಂತಮ್ಮ ದೇವತಾ ಮರ್ಯಾದೆಗಳಿಂದ ಅಲಂಕೃತರಾಗಿ ಮಹಾಯಾತ್ರೆಯನ್ನು ಮಾಡುತ್ತಾರೆ.

೪೪–೪೫. ದೇವತೆಗಳೆಲ್ಲರಿಗೂ ಮುಖಂಡನಾದ ಬ್ರಹ್ಮದೇವನೂ ಸಹ ಅಂತೆಯೇ ಶ್ರೀಜಗನ್ನಾಥನ ಮಹಾವೇದೀಮಹೋತ್ಸವವನ್ನು ಸೇವಿಸುತ್ತಾನೆ. ಆ ಪ್ರಭುವು ತಾನು ಈರೇಳುಲೋಕಗಳ ಸೃಷ್ಟಿಕರ್ತನಾದರೂ, ಶ್ರೀಜಗನ್ನಾಥನ ರಥೋತ್ಸವಕ್ಕೆ ಬ್ರಹ್ಮಲೋಕದಿಂದ ಭೂಲೋಕಕ್ಕೆ ಬಂದು ವೇದಮಂತ್ರಗಳಿಂದ ಸನಾತನಮೂರ್ತಿಯಾದ ಆ ದೇವದೇವನನ್ನು ಸ್ತುತಿಸಿ ಅಡಿಗಡಿಗೂ ನಮಸ್ಕರಿಸುತ್ತಾನೆ.

೪೬. ಎಲೈ ವಿಪ್ರರೇ! ಶ್ರೀಕೃಷ್ಣನಿಗೂ, ಬ್ರಹ್ಮನಿಗೂ ಯಾವ ಭೇದವೂ ಇಲ್ಲದಿದ್ದರೂ ಈ ಮಹಾವೇದೀಮಹೋತ್ಸವದ ಮಾಹಾತ್ಮ್ಯದಿಂದ ಆ ಬ್ರಹ್ಮನೇ ಅಲ್ಲದೆ ಸಮಸ್ತ ದೇವತೆಗಳೂ ಆತನನ್ನು ಅನುಸರಿಸುವರು.

೪೭. ಸಮಸ್ತ ಪಾಪಗಳನ್ನು ಪರಿಹರಿಸುವುದಾದ ಮಹಾಯೋಗವೆಂದರೆ

**ಕೃಷ್ಣಮುದ್ದಿಶ್ಯ ಯಸ್ತತ್ರ ದಾನಂ ದದಾತಿ ವೈ ನರಃ ।**
**ಯತ್ಕಿಂಚಿದಕ್ಷಯಫಲಂ ಮೇರುದಾನೇನ ತತ್ಸಮಂ ॥ ೪೮ ॥**
**ತಸ್ಯಾಗ್ರೇ ದೇವದೇವಸ್ಯ ವ್ರಜತೋ ಗುಂಡಿಚಾಲಯಂ ।**
**ಯತ್ಕಿಂಚಿತ್ಕುರುತೇ ಕರ್ಮ ತತ್ತದಕ್ಷಯಮುಚ್ಯತೇ ॥ ೪೯ ॥**
**ಉಪಾಯನಾನಿ ನಾನಾ ವೈ ಭಕ್ಷ್ಯಭೋಜ್ಯಾನಿ ತೇನ ವೈ ।**
**ಸಮರ್ಪಯಂತಿ ದೇವಾಯ ತತ್ಪ್ರೀತ್ಯೈ ವಾ ದ್ವಿಜನ್ಮನೇ ।**
**ತೇಷಾಮಕ್ಷಯಪುಣ್ಯಾನಿ ಸರ್ವಕಾಮಪ್ರದಾನಿ ಚ ॥ ೫೦ ॥**
**ಹರೇರಗ್ರೇಸರಾ ವೈ ಯೇ ಪಶ್ಯಂತಸ್ತನ್ಮುಖಾಂಬುಜಂ ।**
**ಪದೇಪದೇ ನಮಂತಶ್ಚ ಪದಧೂಲಿಪರಿಪ್ಲುತಾಃ ॥ ೫೧ ॥**
**ವಿಹಾಯ ಪಾಪಕವಚಮಭೇದ್ಯಂ ಕೋಟಿಜನ್ಮಭಿಃ ।**
**ಕ್ಷಣಾನ್ಮುಕ್ತಿಫಲಂ ಪ್ರಾಪ್ಯ ಯಾಂತಿ ವಿಷ್ಣೋಃ ಶುಭಾಲಯಂ ॥ ೫೨ ॥**

---

ಈ ಮಹಾವೇದೀಮಹೋತ್ಸವವೇ! ಇದಕ್ಕಿಂತಲೂ ಉತ್ತಮವಾದ ಸುಯೋಗ ವಾವುದೂ ಇರುವುದಿಲ್ಲವು.

೪೮. ಎಲೈ ಮುನಿಗಳಿರಾ! ಈ ಮಹಾಯೋಗದ ಸಮಯದಲ್ಲಿ, ಶ್ರೀಕೃಷ್ಣನನ್ನುದ್ದೇಶಿಸಿ ಯಾವ ಮಾನವನು ಎಷ್ಟೇ ಸ್ವಲ್ಪವಾದ ದಾನವನ್ನು ಮಾಡಿದರೂ ಅದು ಮೇರುದಾನಕ್ಕೆ ಸಮಾನವಾಗುತ್ತದೆ.

೪೯. ಶ್ರೀ ಪುರುಷೋತ್ತಮನು ಗುಂಡಿಚಾಲಯಕ್ಕೆ ಉತ್ಸವ ಹೊರಡುತ್ತಿರುವ ಸಮಯದಲ್ಲಿ ಮಾನವನೆಸಗಿದ ಎಷ್ಟೇ ಸ್ವಲ್ಪವಾದ ಸತ್ಕರ್ಮವಾದರೂ ಅಕ್ಷಯವಾಗುತ್ತದೆ.

೫೦. ಆ ಸಮಯದಲ್ಲಿ ಭಗವಂತನಿಗಾಗಲಿ, ಭಗವದ್ಬುದ್ಧಿಯಿಂದ ಬ್ರಾಹ್ಮಣರಿಗಾಗಲಿ ಅರ್ಪಿಸುವ ಅಥವಾ ದಾನಮಾಡುವ ನಾನಾ ಬಗೆಯ ಭಕ್ಷ್ಯಭೋಜ್ಯಗಳ ಉಪಾಯನ ದಾನಗಳು ಅಕ್ಷಯವಾದ ಪುಣ್ಯವನ್ನುಂಟುಮಾಡುವುದಲ್ಲದೆ ಸಮಸ್ತ ಇಷ್ಟಾರ್ಥಗಳನ್ನೂ ಈಡೇರಿಸುತ್ತದೆ.

೫೧–೫೨. ಯಾವ ಮಾನವನು ಶ್ರೀ ಹರಿಯ ಮುಂಗಡೆ ಹೋಗುತ್ತ ಆ ಪ್ರಭುವಿನ ಮುಖಕಮಲವನ್ನು ಸಂದರ್ಶಿಸುತ್ತಲೂ, ಕೆಸರು ಧೂಳಿಗಳಿಂದ ಲೇಪಿತವಾದ ದೇಹಗಳುಳ್ಳವರಾಗಿ ಪದೇಪದೇ ಭಕ್ತಿಪೂರ್ವಕವಾಗಿ ಆ ಭಕ್ತವತ್ಸಲನನ್ನು ನಮಸ್ಕರಿಸುತ್ತಲೂ ಹೋಗುವರೋ, ಅವರು ಕೋಟಿ ಜನ್ಮಗಳಿಂದಲೂ ಮೈಗಂಟಿಬಂದಿರುವುದೂ, ಬಿಡಿಸಲಾಗದುದೂ ಆದ ಪಾಪದ ತೊಡಿಗೆಯಿಂದ ಒಂದೇ ಕ್ಷಣದಲ್ಲಿಯೇ ಬಿಡುಗಡೆಯನ್ನು ಹೊಂದಿ ಮುಕ್ತಿ ಫಲವನ್ನು ಪಡೆದು ಶ್ರೀಮನ್ಮಹಾವಿಷ್ಣುವಿನ ಮಂಗಳಕರವಾದ ವೈಕುಂಠ ಲೋಕವನ್ನು ಸೇರಿ ಸುಖಿಸುತ್ತಾರೆ.

**ಸರ್ವಕ್ರತೂನಾಂ ತೀರ್ಥಾನಾಂ ದಾನಾನಾಂ ಯಾಂತಿ ತೇ ಫಲಂ ।**
**ಭಗವದ್ಭಕ್ತಿಭಾವಾನಾಂ ನಾತಃ ಪುಣ್ಯತಮೋ ಮಹಃ ॥ ೯೩ ॥**
**ಏವಂ ಸ ಭಗವಾನ್ ಕೃಷ್ಣಃ ಸುಭದ್ರಾರಾಮಸಂಗತಃ ।**
**ವ್ರಜನ್ ಸ್ಯಂದನಶ್ರೇಷ್ಠಸ್ಥೋ ದ್ಯೋತಯಂಶ್ಚ ಚತುರ್ದಿಶಃ ॥ ೯೪ ॥**
**ಶ್ರೀಮದಂಗೋಪಸೃಷ್ಟೇನ ಮರುತಾ ಸರ್ವದೇಹಿನಾಂ ।**
**ಪಾಪಾನಿ ನಾಶಯಂಚ್ಛ್ರೀಮಾನ್ ದಯಾಲುರ್ಭಕ್ತಭಾವನಃ ॥ ೯೫ ॥**
**ಅಜ್ಞಾನಾಮಪ್ಯವಿಶ್ವಾಸಭಾಜಾಂ ವಿಶ್ವಾಸಹೇತವೇ ।**
**ನಿಸರ್ಗಮುಕ್ತಿದೋಽಪ್ಯೇಷ ಯಾತ್ರಾರಂಭಾನ್ಕರೋತಿ ವೈ ॥ ೯೬ ॥**
**ವ್ರಜನ್ನಪ್ಯೃಧ್ವ್ಯ ದೇವಾನಾಂ ಮರ್ತ್ಯಾನಾಂ ತು ಜನಾರ್ದನಃ ।**
**ಸೂರ್ಯೋ ಲಲಾಟಂ ತಪತಿ ಮಧ್ಯಾಹ್ನೇ ಮಾರ್ಗಮಧ್ಯತಃ ॥ ೯೭ ॥**
**ಶ್ರಾಂತಾ ಕರ್ಷಜನಸ್ತಸ್ಥೌ ಮ್ಲಾಯನ್ ವೈ ತದ್ರಜೋವೃತಃ ।**
**ತತ್ರಾತಪಸ್ಯ ಶಾಂತ್ಯರ್ಥಂ ದರ್ಪಣೇಷ್ವಭಿಷೇಚಯೇತ್ ॥ ೯೮ ॥**

---

೯೩. ಅಯ್ಯಾ ಮುನಿಗಳಿರಾ! ಅವರು ಸಮಸ್ತ ಯಾಗಗಳ, ತೀರ್ಥಗಳ ಮತ್ತು ದಾನಗಳ ಸಮಸ್ತ ಫಲಗಳನ್ನೂ ಈ ಮಹಾ ವೇದೀಮಹೋತ್ಸವದಲ್ಲಿ ಶ್ರೀ ಜಗನ್ನಾಥಸ್ವಾಮಿಯನ್ನು ಸೇವಿಸುವುದರಿಂದ ಪಡೆಯುತ್ತಾರೆ. ಭಗವದ್ಭಕ್ತರಾದವರಿಗೆ ಪುಣ್ಯಸಂಪಾದಕವಾದ ಜ್ಯೋತಿಯು ಇದಕ್ಕಿಂತ ಮತ್ತಾವುದೂ ಇರುವುದಿಲ್ಲವು.

೯೪–೯೬. ಈ ಪ್ರಕಾರವಾಗಿ ಶ್ರೀಕೃಷ್ಣಪರಮಾತ್ಮನು ಸುಭದ್ರಾಬಲರಾಮ ಸಹಿತನಾಗಿ ಉತ್ತಮ ರಥಾರೂಢನಾಗಿ ನಾಲ್ದಿಕ್ಕುಗಳನ್ನೂ ತನ್ನ ಅನುಪಮ ತೇಜೋವಿಶೇಷದಿಂದ ಬೆಳಗಿಸುತ್ತ, ತೇಜಃಪೂರ್ಣವಾದ ತನ್ನ ಮೈಗೆ ಸೋಕಿ ಬೀಸುವ ಗಾಳಿಯಿಂದ ಸಮಸ್ತ ಮಾನವರ ಪಾಪಗಳನ್ನೂ ತೂರುತ್ತ ದಯಾಲುವೂ, ಭಕ್ತವತ್ಸಲನೂ ಆಗಿ, ಅಜ್ಞಾನಿಗಳೂ, ತನ್ನಲ್ಲಿ ನಂಬಿಕೆಯಿಲ್ಲದವರೂ ಆದವರಿಗೆ ನಂಬುಗೆಯನ್ನುಂಟುಮಾಡಲೋಸುಗ ಸ್ವಭಾವದಿಂದಲೇ ನಂಬಿದವರಿಗೆ ಮುಕ್ತಿಯನ್ನು ದೊರಕಿಸುವ ಪ್ರಭುವಾಗಿ ಈ ರೀತಿ ರಥಯಾತ್ರಾ ಮಹೋತ್ಸವವನ್ನು ಮೆರೆಯುತ್ತಾನೆ.

೯೭–೧೦೩. ದೇವತೆಗಳೂ, ಮಾನವರೂ ಕಿಕ್ಕಿರಿದು ನೆರೆದು ಹಿಂಬಾಲಿಸುತ್ತಿರಲು ಶ್ರೀ ಜಗನ್ನಾಥನು ರಥಾರೂಢನಾಗಿ ಬರುತ್ತಿರುವ ಸಮಯದಲ್ಲಿ ಮಟಮಟ ಮಧ್ಯಾಹ್ನವಾಗಿ ದಿನಕರನು ಹಣೆಯನ್ನು ಸುಡುತ್ತಿರಲು ದಾರಿಯ ನಡುವೆ ರಥವನ್ನೆಳೆಯುವ ಜನರು ಬಿಸಿಲಿನ ಬೇಗೆಯಿಂದ ಬೇಸತ್ತು, ಧೂಳಿ ತುಂಬಿದವರಾಗಿ ನಿಲ್ಲುತ್ತಾರೆ. ಆ ಸಮಯದಲ್ಲಿ ತಾಪಶಾಂತಿಗಾಗಿ ಕನ್ನಡಿಗಳಲ್ಲಿ ಪಂಚಾಮೃತದಿಂದಲೂ ಪುಷ್ಪಕರ್ಪೂರವಾಸಿತವಾದ ಶೀತಳೋದಕದಿಂದಲೂ

ಪಂಚಾಮೃತೈಃ ಶೀತತೋಯೈಃ ಪುಷ್ಪಕರ್ಪೂರವಾಸಿತೈಃ ।
ಚಾಮರೈಶ್ಚ ಜಲಾದ್ರಾಂತೈಃ ಶೀತಲೈರ್ವ್ಯಜನೈಸ್ತಥಾ ॥ ೯೯ ॥
ವೀಜಯೇತ್ಪುಂಡರೀಕಾಕ್ಷಂ ಸುಭದ್ರಾಂ ರಾಮಮೇವ ಚ ।
ಶೀತೈಶ್ಚ ಪಾನಕೈರ್ಹೃದ್ಯೈಸ್ತಥಾ ಖಂಡವಿಕಾರಕೈಃ ॥ ೧೦೦ ॥
ಖರ್ಜೂರೈರ್ನಾರಿಕೇಳೈಶ್ಚ ನಾನಾರಂಭಾಫಲೈಸ್ತಥಾ ।
ತಥಾ ಕ್ಷೀರವಿಕಾರೈಶ್ಚ ಪನಸೈಸ್ತೃಣರಾಜಕೈಃ ॥ ೧೦೧ ॥
ಇಕ್ಷುಭಿಃ ಸ್ವಾದುಹೃದ್ಯೈಶ್ಚ ಫಲೈರ್ನಾನಾವಿಧೈಸ್ತಥಾ ।
ವಾಸಿತೈಃ ಶೀತತೋಯೈಶ್ಚ ಪಕ್ವತಾಂಬೂಲಪತ್ರಕೈಃ ॥ ೧೦೨ ॥
ಸಕರ್ಪೂರಲವಂಗಾದ್ಯೈಃ ಪೂಜಯೇತ್ಪುರುಷೋತ್ತಮಂ ।
ತಸ್ಮಿನ್ ಕಾಲೇ ದ್ವಿಜಶ್ರೇಷ್ಠಾ ಯೇ ಪಶ್ಯಂತಿ ಜನಾರ್ದನಂ ॥ ೧೦೩ ॥
ಪೂಜಯಂತಿ ಯಥಾಶಕ್ತ್ಯಾ ನ ತೇ ಸಂಸಾರಜಂ ಶ್ರಮಂ ॥ ೧೦೪ ॥
ಪ್ರಾಪ್ನುವಂತಿ ದ್ವಿಜಶ್ರೇಷ್ಠಾ ಬ್ರಹ್ಮಲೋಕನಿವಾಸಿನಃ ॥ ೧೦೫ ॥
ರಥತ್ರಯಸ್ಥಿತಂ ದೇವತ್ರಯಂ ಯೇ ಪುರುಷರ್ಷಭಾಃ ।
ಪ್ರದಕ್ಷಿಣಂ ಪ್ರಕುರ್ವಂತಿ ತ್ರಿಶ್ಚತುಃ ಸಪ್ತ ಏವ ವಾ ॥ ೧೦೬ ॥

---

ಅಭಿಷೇಚನಮಾಡಿ, ನೀರಿನಲ್ಲಿ ತೋಯಿಸಿದ ಚಾಮರಗಳಿಂದ ಬೀಸಿ, ಶೀತಳವಾದ ಬೀಸಣಿಗೆಗಳಿಂದ ಗಾಳಿ ಹಾಕಿ ಶ್ರೀಪುಂಡರೀಕಾಕ್ಷನಾದ ಜಗನ್ನಾಥದೇವನನ್ನೂ, ಸುಭದ್ರಾಬಲರಾಮರನ್ನೂ ಸೇವಿಸಬೇಕು. ತಣ್ಣನೆಯ ಮನಕಿಂಪಾದ ಪಾನಕಗಳಿಂದಲೂ, ಖಂಡ ಖರ್ಜೂರಗಳಿಂದಲೂ, ಎಳನೀರುಗಳಿಂದಲೂ, ಬಗೆಬಗೆಯ ಬಾಳೆಯಹಣ್ಣುಗಳಿಂದಲೂ, ರಸಭರಿತವಾದ ಹಲಸಿನಹಣ್ಣು, ಕಬ್ಬು, ರುಚಿಕರವಾದ ಬಗೆಬಗೆಯ ಹಣ್ಣುಗಳಿಂದಲೂ, ಸುವಾಸನೆಯೊಡಗೂಡಿದ ಶೀತಳೋದಕದಿಂದಲೂ, ಪಕ್ವಗೊಳಿಸಿದ ತಾಂಬೂಲಗಳಿಂದಲೂ ಶ್ರೀ ಪುರುಷೋತ್ತಮನನ್ನು ಸೇವಿಸಬೇಕು.

೧೦೪–೧೦೫. ಎಲೈ ದ್ವಿಜಶ್ರೇಷ್ಠರೇ! ಆ ಸಮಯದಲ್ಲಿ ಶ್ರೀಪುರುಷೋತ್ತಮನನ್ನು ಯಾರು ಸಂದರ್ಶಿಸುತ್ತಾರೆಯೋ, ಸಂದರ್ಶಿಸಿ ಯಥಾಶಕ್ತಿಯಾಗಿ ಪೂಜಿಸುತ್ತಾರೆಯೋ ಅವರು ಈ ಭವದ ಭಯವನ್ನೂ ಅದರಿಂದುಂಟಾದ ಆಯಾಸವನ್ನೂ ಪಡೆಯುವುದಿಲ್ಲವಲ್ಲದೆ ಬ್ರಹ್ಮಲೋಕದಲ್ಲಿ ವಾಸಮಾಡುವವರಾಗುತ್ತಾರೆ.

೧೦೬–೧೦೮. ಯಾವ ಪುರುಷಶ್ರೇಷ್ಠರಾದರೆ, ರಥತ್ರಯದಲ್ಲಿ ಮಂಡಿಸಿರುವ ಬಲರಾಮ ಜನಾರ್ದನ ಸುಭದ್ರಾ ರೂಪವಾದ ದೇವತ್ರಯವನ್ನು ಸಂದರ್ಶಿಸಿ ಮೂರು, ನಾಲ್ಕು, ಏಳುಬಾರಿ ಪ್ರದಕ್ಷಿಣೆಗಳನ್ನಾಗಲಿ, ಹತ್ತು ನಮಸ್ಕಾರಗಳನ್ನಾಗಲಿ ಮಾಡಿ ಕೈಗಳನ್ನು ಜೋಡಿಸಿಕೊಂಡು ಮುಂಗಡೆ ನಿಂತು ಹಿಂದೆ

ದಶಪ್ರಣಾಮಾನ್ ಕೃತ್ವಾಂತೇ ಸ್ಥಿತಾ ಪ್ರಾಂಜಲಯೋಽಗ್ರತಃ ।
ಪುರಾ ರಥಸ್ಥಿತಾನ್ ಬ್ರಹ್ಮಾ ಸ್ತುತಿಭಿರ್ಯಾಭಿರಬ್ಜಭೂಃ ॥ ೧೦೭ ॥
ತುಷ್ಟಾವ ತಾಭಿರ್ದೇವೇಶಂ ದಕ್ಷಿಣಾನಿಲವೀಜಿತಂ ।
ಯೇ ನರಾ ಬ್ರಹ್ಮಲೋಕಂ ತೇ ಪ್ರಯಾಂತಿ ನಿಯತಂ ದ್ವಿಜಾಃ ॥ ೧೦೮ ॥
ತತೋಽಪರಾಹ್ಣೇ ದೇವೇಶಂ ದಕ್ಷಿಣಾನಿಲವೀಜಿತಂ ।
ಶನೈಃ ಶನೈರ್ನಯೇದ್ಗೀತೈರ್ವೇಣುವೀಣಾದಿನಾದಿತೈಃ ॥ ೧೦೯ ॥
ಬಂದಿನಃ ಸ್ತುತಿಪಾಠೈಶ್ಚ ಕಲೈರ್ಮಾಧುರಿಕಾಸ್ವನೈಃ ।
ನಿರಂತರಂ ಪುಷ್ಪವರ್ಷೈಶ್ಚಾಮರಾಂದೋಲನೈಸ್ತಥಾ ॥ ೧೧೦ ॥
ಏವಂ ವ್ರಜತಿ ದೇವೇಶೇ ಸೂರ್ಯಶ್ಚಾಸ್ತಂಗತೋ ಭವೇತ್ ।
ದೀಪಿಕಾನಾಂ ಸಹಸ್ರಾಣಿ ಜ್ವಾಲಿತಾನಿ ಸಹಸ್ರಶಃ ॥ ೧೧೧ ॥
ತದಾಲೋಕಪ್ರಕಾಶೇನ ಮಾರ್ಗಶೇಷಶ್ಚ ನೀಯತೇ ।
ರಥಾವರೋಹಣೇನೈಷಾಂ ಮಂಡಪಾರೋಹಣೇನ ಚ ॥ ೧೧೨ ॥
ಸಮ್ಮರ್ದಃ ಸುಮಹಾಂಸ್ತತ್ರ ದಿದೃಕ್ಷೂಣಾಂ ಕುತೂಹಲಾತ್ ।
ಮಂಡಪೇ ವಾಸಯೇದ್ದೇವಂ ಗುಂಡಿಚಾಖ್ಯೇ ಮನೋಹರೇ ॥ ೧೧೩ ॥

---

ಬ್ರಹ್ಮದೇವನು ಪ್ರತಿಷ್ಠಾ ಸಮಯದಲ್ಲಿ ಸ್ತುತಿಸಿದ ಸ್ತೋತ್ರಗಳನ್ನು ಹೇಳಿಕೊಂಡು ಆ ಪರಮೇಶ್ವರನನ್ನು ಸ್ತುತಿಸಿದುದಾದರೆ ಯಾವ ಸಂದೇಹವೂ ಇಲ್ಲದೆ ಖಂಡಿತವಾಗಿಯೂ ಬ್ರಹ್ಮಲೋಕವನ್ನು ಸೇರುತ್ತಾರೆ.

೧೦೯–೧೧೦. ಎಲೈ ಮುನಿಗಳಿರಾ! ಇದಾದ ತರುವಾಯ ಅಪರಾಹ್ಣ ಸಮಯದಲ್ಲಿ ದಕ್ಷಿಣದ ಮಲಯಮಾರುತದಿಂದ ಸಂಸೇವಿತನಾದ ಆ ದೇವೇಶ್ವರನನ್ನು ಗೀತಗಳಿಂದಲೂ, ವೀಣಾವೇಣುಗಳೇ ಮೊದಲಾದ ವಾದ್ಯವಾದನಗಳಿಂದಲೂ, ವಂದಿಮಾಗಧರ ಸ್ತುತಿಪಾಠಗಳಿಂದಲೂ, ಮನೋಹರವಾದ ಮಾಧುರಿಕವಾದ್ಯಧ್ವನಿಗಳಿಂದಲೂ, ನಿರಂತರವಾದ ಪುಷ್ಪವೃಷ್ಟಿಗಳಿಂದಲೂ, ಚಾಮರಗಳ ಬೀಸುಗಳಿಂದಲೂ ಬಿಜೆಮಾಡಿಸಬೇಕು.

೧೧೧–೧೧೨. ಸ್ವಾಮಿಯು ಈ ರೀತಿ ಉತ್ಸವ ಬರುತ್ತಿರುವಾಗಲೇ ಸೂರ್ಯನು ಅಸ್ತಮಿಸಿದನಾದರೆ ಆಗ ಸಹಸ್ರಾರು ದೀಪಮಾಲೆಗಳ ಸೇವೆಯು ನಡೆಯಬೇಕು. ಈ ದೀಪಮಾಲೆಗಳ ಬೆಳಕಿನಲ್ಲಿಯೇ ಉಳಿದ ದಾರಿಯೆಲ್ಲ ಕಳೆದು ಸ್ವಾಮಿಯ ರಥಾವರೋಹಣ ಮತ್ತು ಗುಂಡಿಚಾಮಂಡಪದ ಆರೋಹಣ ಮಹೋತ್ಸವಗಳು ನಡೆಯುತ್ತವೆ.

೧೧೩–೧೧೬. ಎಲೈ ವಿಪ್ರರೇ! ಆ ಸಮಯದಲ್ಲಿ ಕುತೂಹಲದಿಂದ ಉತ್ಸವವನ್ನು ನೋಡುವ ಜನರಲ್ಲಿ ಸಮ್ಮರ್ದವು ಬಹಳವಾಗಿರುತ್ತದೆ. ಆಗ ಬಳ್ಳಿಯ ಬೆಳದಿಂಗಳಿನಲ್ಲಿ ಉತ್ತಮವೂ, ಮನೋಹರವೂ ಆದ ಪುಷ್ಪಹಾರ

ಚಾರುಚಂದ್ರಾತಪೇ ಚಾರುಮಾಲ್ಯಚಾಮರಭೂಷಿತೇ ।
ರತ್ನಸ್ತಂಭಮಯೇ ಸ್ವರ್ಣವೇದಿಕೋಪಸ್ಕೃತಾಂತರೇ ॥ ೧೧೪ ॥
ಪ್ರಾಚೀರವಲಯಾವೀತೇ ಸುಧಾಲೇಪಸಮುಜ್ವಲೇ ।
ಸಾಧುಸೋಪಾನಘಟಿತೇ ಚತುರ್ದ್ವಾರೋಪಶೋಭಿತೇ ॥ ೧೧೫ ॥
ತ್ರೈಲೋಕ್ಯಾಡಂಬರಯುತೇ ಮಹಾವೇದ್ಯಾಂ ಮಹಾಕ್ರತೋಃ ।
ಪ್ರಾದುರ್ಭಾವೋ ಮಹೇಶಸ್ಯ ಯತ್ರಾಭೂದ್ದಾರುವರ್ಷ್ಮಣಃ ॥ ೧೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಮಹಾವೇದೀಮಹೋತ್ಸವವರ್ಣನಂ"ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ಗಳಿಂದಲೂ, ಚಾಮರಗಳಿಂದಲೂ ಭೂಷಿತವಾಗಿ, ರತ್ನಸ್ತಂಭಾಲಂಕೃತವಾಗಿ ಸ್ವರ್ಣವೇದಿಯನ್ನೊಳಗೊಂಡು, ಗೋಡೆಗಳ ಆವರಣವುಳ್ಳುದಾಗಿ, ಸುಣ್ಣ ತೊಳಸಿ ಬೆಳ್ಳಗೆ ಬೆಳಗುತ್ತಿರುವ ಸುಂದರಸೋಪಾನಗಳಿಂದೊಪ್ಪಿ, ನಾಲ್ಕು ಬಾಗಿಲುಗಳುಳ್ಳುದಾಗಿ, ಮೂರು ಲೋಕದ ಮಹೈಶ್ವರ್ಯದಿಂದ ಮಹೋಜ್ವಲವಾಗಿ ವಿರಾಜಿಸುತ್ತಿರುವ ಅಶ್ವಮೇಧಯಾಗಾಂಗವಾಗಿ ಎಲ್ಲಿ ದಾರುದೇಹಧಾರಿಯಾದ ಮಹೇಶ್ವರನ ಅವತಾರವಾಯಿತೋ ಆ ಮಹಾವೇದಿಯಮೇಲೆ ಶ್ರೀ ಜಗನ್ನಾಥಸ್ವಾಮಿಯನ್ನು ಕುಳ್ಳಿರಿಸಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಮಹಾವೇದೀಮಹೋತ್ಸವವರ್ಣನ"ವೆಂಬ ಮುವತ್ತುಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಸ್ತ್ರಿಂಶೋಽಧ್ಯಾಯಃ

## ಮಹಾವೇದೀಮಹೋತ್ಸವಪ್ರಭಾವವರ್ಣನಂ

**ಜೈಮಿನಿರುವಾಚ :—**

**ಅಶ್ವಮೇಧಾಂಗಸರಸೋ ನೃಸಿಂಹಸ್ಯ ಚ ದಕ್ಷಿಣೇ ।**
**ತತ್ರಾಸೀನಶ್ಚ ಭಗವಾನ್ಪುನಶ್ಚಾವತರನ್ನಿವ ॥ ೧ ॥**
**ಬಭಾಸೇ ದಿವ್ಯರೂಪೋಽಸೌ ದುರ್ವಿಭಾವ್ಯಃ ಸುರಾಸುರೈಃ ।**
**ತದಾ ಪೂಜೋಪಹಾರೈಶ್ಚ ಭಕ್ಷ್ಯಭೋಜ್ಯಾದಿಕೈಸ್ತಥಾ ॥ ೨ ॥**
**ಪೂಜಯಿತ್ವಾ ಜಗನ್ನಾಥಂ ತೋಷಯೇದ್ಗೀತನೃತ್ತಕೈಃ ।**
**ಪುಷ್ಪೋಪಹಾರೈರ್ವಿವಿಧೈಃ ಸುಗಂಧೈರನುಲೇಪನೈಃ ॥ ೩ ॥**
**ಕೃಷ್ಣಾಗುರೂತ್ಥ ಧೂಪೈಶ್ಚ ಗಂಧತೈಲಪ್ರದೀಪಕೈಃ ।**
**ತೋಷಯೇಜ್ಜಗತಾಂ ನಾಥಮನೇಕೈರುಪಹಾರಕೈಃ ॥ ೪ ॥**
**ಬಿಂದುತೀರ್ಥತಟೇ ತಸ್ಮಿನ್ ಸಪ್ತಾಹಾನಿ ಜನಾರ್ದನಃ ।**
**ತಿಷ್ಠೇತ್ಪುರಾ ಸ್ವಯಂ ರಾಜ್ಞೇ ವರಮೇತತ್ಸಮಾದಿಶತ್ ॥ ೫ ॥**

---

### ಕನ್ನಡದ ಅನುವಾದ

#### ಮಹಾವೇದೀಮಹೋತ್ಸವಪ್ರಭಾವವರ್ಣನ

೧–೪. ಜೈಮಿನಿಯು ಹೇಳುತ್ತಾನೆ :—ಎಲೈ ವಿಪ್ರರೇ! ಅಶ್ವಮೇಧ ಯಾಗದ ಸಮಯದಲ್ಲಿ ಉದ್ಭವಿಸಿದ ಸರೋವರದಿಂದ, ಶ್ರೀ ನೃಸಿಂಹಸ್ವಾಮಿಯ ದಕ್ಷಿಣಕ್ಕಿರುವ ಮಹಾವೇದಿಯಲ್ಲಿ ಕುಳಿತು ಭಗವಂತನಾದ ಆ ಜಗನ್ನಾಥ ಪ್ರಭುವು ಮತ್ತೊಮ್ಮೆ ಅವತಾರಮಾಡಿದನೋ ಎಂಬಂತೆ ತೋರಿ, ದಿವ್ಯರೂಪ ಧರನಾಗಿ ಸುರಾಸುರರಿಂದಲೂ ಇಂತೆಂದು ಊಹಿಸಲಸದಳನಾಗಿ ವಿರಾಜಿಸುತ್ತಿರುವನು. ಆ ಸಮಯದಲ್ಲಿ ಪೂಜೋಪಹಾರಗಳಿಂದಲೂ, ಭಕ್ಷ್ಯಭೋಜ್ಯಾದಿಗಳಿಂದಲೂ, ವಿವಿಧ ಪುಷ್ಪೋಪಹಾರಗಳಿಂದಲೂ, ಸುಗಂಧಾನುಲೇಪನಗಳಿಂದಲೂ ಕೃಷ್ಣಾಗುರುಧೂಪಗಳಿಂದಲೂ, ಗಂಧದೆಣ್ಣೆಯ ದೀಪಗಳಿಂದಲೂ ಇನ್ನೂ ಬಗೆಬಗೆಯ ಸೇವೆ ಸತ್ಕಾರಗಳಿಂದಲೂ ಆತನನ್ನು ಸಂತೋಷಗೊಳಿಸಬೇಕು.

೫. ಶ್ರೀಜನಾರ್ದನಸ್ವಾಮಿಯು ಬಿಂದುತೀರ್ಥವೆಂದು ಪ್ರಸಿದ್ಧವಾಗಿರುವ ಆ ಸರೋವರದ ತೀರದಲ್ಲಿ ತಾನು ಪೂರ್ವದಲ್ಲಿ ಇಂದ್ರದ್ಯುಮ್ನರಾಜನಿಗೆ ವಚನವಿತ್ತಿರುವಂತೆ ಏಳು ದಿನಗಳ ಕಾಲ ನೆಲಸಿರುತ್ತಾನೆ.

**ತತ್ತೀರ್ಥತೀರೇ ರಾಜೇಂದ್ರ ಸ್ಥಾಸ್ಯಾಮಿ ಪ್ರತಿವತ್ಸರಂ ।**
**ಸರ್ವತೀರ್ಥಾನಿ ತಸ್ಮಿಂಶ್ಚ ಸ್ಥಾಸ್ಯಂತಿ ಮಯಿ ತಿಷ್ಠತಿ ॥ ೬ ॥**
**ತತ್ರ ಸ್ನಾತ್ವಾ ವಿಧಾನೇನ ತೀರ್ಥೇ ತೀರ್ಥೌಘಪಾವನೇ ।**
**ಸಪ್ತಾಹಂ ಯೇ ಪ್ರಪಶ್ಯಂತಿ ಗುಂಡಿಚಾಮಂಡಪೇ ಸ್ಥಿತಃ ।**
**ಮಾಂ ಚ ರಾಮಂ ಸುಭದ್ರಾಂ ಚ ಮತ್ಸಾಯುಜ್ಯಮವಾಪ್ನುಯುಃ ॥**
**ತತಸ್ತಸ್ಮಿನ್ಮಹಾಪುಣ್ಯೇ ಸರ್ವಪಾಪಪ್ರಣಾಶನೇ ॥ ೮ ॥**
**ಸರ್ವತೀರ್ಥೈಕಫಲದೇ ವಿಷ್ಣುಪ್ರೀತಿಕರೇ ಶುಭೇ ।**
**ಸ್ನಾತ್ವಾ ಸಂತರ್ಪ್ಯ ವಿಧಿವತ್ಪಿತ್ರೂನ್ ದೇವಾನತಂದ್ರಿತಃ ॥ ೯ ॥**
**ತತಸ್ತನ್ನರಸಿಂಹಂ ತಂ ಪೂಜಯಿತ್ವಾ ಪ್ರಣಮ್ಯ ಚ ।**
**ಮಹಾವೇದೀಂ ನರೋ ಗತ್ವಾ ಕೃತಶೌಚಾಚಮನಕ್ರಿಯಃ ॥ ೧೦ ॥**
**ಪೂಜಯೇತ್ಪೂರ್ವವದ್ವಿಪ್ರಾಃ ಪ್ರಣಮೇದ್ವಾಪಿ ಭಕ್ತಿತಃ ।**
**ಸಪ್ತಾಹಂ ಯೋ ನರೋ ನಾರೀ ನತೌ ಪ್ರಾಕೃತಮಾನುಷೌ ॥ ೧೧ ॥**

---

೬. "ಎಲೈ ರಾಜೇಂದ್ರನೇ! ನಾನು ನಿನ್ನ ಹೆಸರಿನಿಂದ ಪ್ರಸಿದ್ಧವಾಗಿರುವ ಆ ಸರಸ್ತೀರದಲ್ಲಿ ಪ್ರತಿ ವರ್ಷವೂ ಏಳು ದಿನಗಳ ಕಾಲ ನೆಲಸುತ್ತೇನೆ. ಆಗ ಸಮಸ್ತ ತೀರ್ಥಗಳೂ ನನ್ನನ್ನು ಸೇವಿಸುವುದಕ್ಕಾಗಿ ಆ ಸರಸ್ಸಿಗೆ ಬಂದು ನೆಲಸುತ್ತವೆ.

೭. ಆ ಸಮಯದಲ್ಲಿ ಯಾವ ಮಾನವರು ತೀರ್ಥಸಮೂಹಗಳು ಸೇರಿ ಪಾವನವಾಗಿರುವ ಆ ಸರಸ್ಸಿನಲ್ಲಿ ವಿಧ್ಯುಕ್ತವಾಗಿ ಸ್ನಾನವನ್ನು ಮಾಡಿ ಏಳು ದಿನಗಳೂ ಗುಂಡಿಚಾಮಂಡಪದಲ್ಲಿ ಮಂಡಿಸಿರುವ ನನ್ನನ್ನು ಸಂದರ್ಶಿಸುವರೋ, ಅಂತೆಯೇ ಬಲರಾಮ ಸುಭದ್ರೆಯರನ್ನೂ ದರ್ಶನಮಾಡಿ ಸೇವಿಸುವರೋ ಅವರು ನನ್ನ ಸಾಯುಜ್ಯವನ್ನು ಪಡೆಯುತ್ತಾರೆ.

೮–೯. ಇದಾದ ಬಳಿಕ ಮಹಾ ಪುಣ್ಯಕರವೂ, ಸಮಸ್ತ ಪಾಪಗಳನ್ನು ಪರಿಹರಿಸುವುದೂ, ಸಮಸ್ತ ತೀರ್ಥಗಳ ಫಲಗಳನ್ನು ಕೊಡುವುದೂ ವಿಷ್ಣುವಿಗೆ ಪ್ರೀತಿಕರವೂ, ಮಂಗಳಕರವೂ ಆದ ಇಂದ್ರದ್ಯುಮ್ನಸರಸ್ಸಿನಲ್ಲಿ ಸ್ನಾನಮಾಡಿ, ಶ್ರದ್ಧಾಭಕ್ತಿಗಳಿಂದ ಪಿತೃಗಳಿಗೂ ದೇವತೆಗಳಿಗೂ ತರ್ಪಣವನ್ನು ಕೊಡಬೇಕು.

೧೦–೧೧. ತೀರದಲ್ಲಿರುವ ಶ್ರೀನೃಸಿಂಹಸ್ವಾಮಿಯನ್ನು ಸಂದರ್ಶಿಸಿ ಪೂಜಿಸಿ ನಮಸ್ಕರಿಸಿದ ತರುವಾಯ ಮಹಾವೇದಿಯ ಬಳಿಗೈದಿ ಶೌಚ ಆಚಮನ ಕ್ರಿಯೆಗಳನ್ನು ಮಾಡಿ ಶ್ರೀಜಗನ್ನಾಥಸ್ವಾಮಿಗೆ ಯಾವ ನರನಾಗಲಿ, ನಾರಿಯಾಗಲಿ ಪೂರ್ವದಲ್ಲಿ ಹೇಳಿರುವಂತೆ ಪೂಜೆಯನ್ನಾಗಲಿ, ನಮಸ್ಕಾರಗಳನ್ನಾಗಲಿ ಮಾಡುತ್ತಾರೆಯೋ ಅವರು ಪ್ರಾಕೃತ (ಸಾಮಾನ್ಯ) ರೆನಿಸುವುದಿಲ್ಲವು.

ವಿಷ್ಣುಸಾಯುಜ್ಯಮಾಪ್ನೋತಿ ಶಾಸನಾನ್ಮುರವೈರಿಣಃ ।
ದಿವಾ ತದ್ದರ್ಶನಂ ಪುಣ್ಯಂ ರಾತ್ರೌ ದಶಗುಣಂ ಭವೇತ್ ॥ ೧೨ ॥
ಯತ್ಕಿಂಚಿತ್ಕ್ರಿಯತೇ ಕರ್ಮ ಸನ್ನಿಧೌ ಜಗದೀಶಿತುಃ ।
ಸ್ವಲ್ಪಂ ವಾಪ್ಯಥ ವಾ ಭೂರಿ ಕೋಟಿಕೋಟಿಗುಣಂ ಭವೇತ್ ॥ ೧೩ ॥
ತುಲಾಪುರುಷದಾನಾನಿ ಮಹಾದಾನಾನಿ ಯೋ ದದೇತ್ ।
ಏಕೇ ಪ್ರದತ್ತೇ ದಾನೋಽಪಿ ಸರ್ವಂ ದತ್ತಂ ಭವೇದ್ದ್ವಿಜಾಃ ॥ ೧೪ ॥
ಸರ್ವಂ ಮೇರುಸಮಂ ದಾನಂ ಸರ್ವೇ ವ್ಯಾಸಸಮಾ ದ್ವಿಜಾಃ ।
ಮಹಾವೇದ್ಯಾಂ ಗತೇ ಕೃಷ್ಣೇ ಯೋಗೋಽಯಂ ಖಲು ದುರ್ಲಭಃ ॥
ಅರ್ಧೋದಯಾದಿಕಾ ಯೋಗಾಃ ಸ್ಕಂದೇನ ಪರಿಭಾಷಿತಾಃ ।
ಮಹಾವೇದ್ಯಾಖ್ಯ ಯೋಗಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೧೬ ॥
ಅತಃ ಪರಂ ಪ್ರವಕ್ಷ್ಯಾಮಿ ಪಿತೄಣಾಂ ಕಾರ್ಯಮುತ್ತಮಂ ।
ಯಾವಜ್ಜೀವಂ ಗಯಾಶ್ರಾದ್ಧೈರಲಭ್ಯಂ ಭುವಿ ಯತ್ಫಲಂ ॥ ೧೭ ॥

---

೧೨. ಅವರು ಮುರವೈರಿಯಾದ ಆ ಜಗನ್ನಾಥನ ಅಪ್ಪಣೆಯಂತೆ ವಿಷ್ಣು ಸಾಯುಜ್ಯವನ್ನು ಪಡೆಯುತ್ತಾರೆ. ಎಲೈ ವಿಪ್ರರೇ! ಆ ಪ್ರಭುವಿನ ಹಗಲು ದರ್ಶನವು ಪುಣ್ಯಪ್ರದವಾದದು; ರಾತ್ರಿಯಲ್ಲಿ ಅದಕ್ಕೆ ಹತ್ತರಷ್ಟು ಹೆಚ್ಚಾದ ಫಲವನ್ನುಂಟುಮಾಡುವುದು.

೧೩. ಜಗದೀಶ್ವರನ ಸನ್ನಿಧಿಯಲ್ಲಿ ಮಾಡಿದ ಎಷ್ಟೇ ಸ್ವಲ್ಪವಾದ ಸತ್ಕರ್ಮವಾದರೂ, ಅದು ಸ್ವಲ್ಪವೋ, ಬಹಳವೋ ಹೇಗೇ ಇದ್ದರೂ ಕೋಟಿ ಕೋಟಿ ಗುಣವುಳ್ಳದಾಗುತ್ತದೆ.

೧೪. ಯಾರಾದರೆ ಶ್ರೀ ಪುರುಷೋತ್ತಮನ ಸನ್ನಿಧಿಯಲ್ಲಿ ತುಲಾಪುರುಷ ದಾನಗಳನ್ನೂ, ಗಜಾದಿ ಮಹಾ ದಾನಗಳನ್ನೂ ಮಾಡುವರೋ, ಅವರು ಒಂದೇ ದಾನವನ್ನು ಮಾಡಿದರೂ ಎಲ್ಲ ದಾನಗಳನ್ನೂ ಮಾಡಿದಂತೆಯೇ ಆಗುತ್ತದೆ.

೧೫. ಅಲ್ಲಿ ಮಾಡಿದ ದಾನಗಳೆಲ್ಲವೂ ಮೇರುಪರ್ವತಕ್ಕೆ ಸಮಾನ ವಾದವುಗಳೇ ಆಗುತ್ತವೆ. ಅಲ್ಲಿರುವ ವಿಪ್ರರೆಲ್ಲರೂ ವ್ಯಾಸಮಹರ್ಷಿಗಳಿಗೆ ಸಮಾನರೇ ಆಗಿರುತ್ತಾರೆ. ಶ್ರೀ ಜಗನ್ನಾಥಮೂರ್ತಿಯು ಮಹಾವೇದಿಗೆ ಉತ್ಸವ ಹೊರಟ ಈ ಯೋಗವು ಬಹಳ ದುರ್ಲಭವಾದುದು.

೧೬. ಶ್ರೀ ಸ್ಕಂದಸ್ವಾಮಿಯು ಅರ್ಧೋದಯವೇ ಮೊದಲಾದ ಮಹಾ ಯೋಗಗಳ ವಿಷಯವನ್ನು ಬಹಳವಾಗಿ ಹೇಳಿರುತ್ತಾನೆ. ಅವುಗಳೆಲ್ಲವೂ ಮಹಾ ವೇದೀಮಹೋತ್ಸವ ಯೋಗದ ಹದಿನಾರನೆಯ ಒಂದು ಕಲೆಗೂ ಸಮಾನವಾಗು ವುದಿಲ್ಲವು.

೧೭. ಎಲೈ ವಿಪ್ರರೇ! ಇನ್ನು ಮುಂದೆ ಯಾವುದನ್ನು ಮಾಡಿದರೆ ಆಜೀವ

**ದಿವಿಸ್ಥಾ ನರಕಸ್ಥಾ ವಾ ತಿರ್ಯಗ್ಯೋನಿಗತಾಸ್ತಥಾ ।**
**ತಥಾ ಮನುಷ್ಯಜಾತಿಸ್ಥಾಃ ಸರ್ವೇ ಪಿತೃಪಿತಾಮಹಾಃ ॥ ೧೮ ॥**
**ಶತಂ ಪುರುಷವಿಖ್ಯಾತಾ ಯಂ ವಾಂಛಂತಿ ಸುತೈಃ ಕೃತಂ ।**
**ತಂ ವೋ ವಿಧಿಂ ಪ್ರವಕ್ಷ್ಯಾಮಿ ಶೃಣುಧ್ವಂ ಮುನಯೋ ವರಂ ॥ ೧೯ ॥**
**ಮಘಾ ವೈ ಪಿತೃನಕ್ಷತ್ರಂ ಪಿತೄಣಾಂ ಪ್ರೀತಿದಂ ಪರಂ ।**
**ತತ್ರ ಶ್ರಾದ್ಧಂ ತು ಪ್ರೀಣಾತಿ ದತ್ತಂ ಪುತ್ರೈರ್ಮುದಾನ್ವಿತೈಃ ॥ ೨೦ ॥**
**ಪಂಚಮೀ ಚ ತಿಥಿಶ್ರೇಷ್ಠಾ ಶ್ರಾದ್ಧೇಽಭ್ಯುದಯಕಾರಿಣೀ ।**
**ಉಭಯೋರ್ಯದಿ ಸಂಯೋಗೋ ಮಹಾಪುಣ್ಯತಮಾ ತಿಥಿಃ ॥ ೨೧ ॥**
**ಯಸ್ಯಾಂ ಶ್ರಾದ್ಧೇ ಕೃತೇ ಪುತ್ರೈಃ ಪಿತೄಣಾಮುದ್ಧೃತಿರ್ಭವೇತ್ ।**
**ಸರ್ವತೀರ್ಥಮಯೇ ತಸ್ಮಿನ್ ಸನ್ನಿಧೌ ಮುರವೈರಿಣಃ ॥ ೨೨ ॥**
**ಶ್ರಾದ್ಧಂ ಚೇಚ್ಛ್ರದ್ಧಯಾ ಕುರ್ಯಾನ್ನೀಲಕಂಠನೃಸಿಂಹಯೋಃ ।**
**ಮಧ್ಯೇ ಮಧ್ಯತಮೇ ದೇಶೇ ಯೋಗೇ ಪರಮದುರ್ಲಭೇ ॥ ೨೩ ॥**

---

ಪರ್ಯಂತ ಗಯಾ ಶ್ರಾದ್ಧಗಳಿಂದಲೂ ದೊರಕದ ಮಹತ್ಫಲವು ದೊರಕುತ್ತದೆಯೋ ಆ ಪಿತೃಶ್ರಾದ್ಧದ ವಿಷಯವನ್ನು ನಿಮಗೆ ಹೇಳುವೆನು ಆಲಿಸಿರಿ.

೧೮-೧೯. ದೇವಲೋಕದಲ್ಲಿರಲಿ, ನರಕಲೋಕದಲ್ಲಿರಲಿ, ತಿರ್ಯಕ್ ಜಾತಿಗಳಲ್ಲಿ ಜನ್ಮವೆತ್ತಿರಲಿ, ಅಥವಾ ಮನುಷ್ಯರಾಗಿಯೇ ಜನಿಸಿರಲಿ ಶತಪುರುಷರೆಂದು ವಿಖ್ಯಾತರಾದ ಸಮಸ್ತ ಪಿತೃಪಿತಾಮಹರೂ ಮಕ್ಕಳಿಂದ ಯಾವುದನ್ನು ಬಯಸುತ್ತಾರೆಯೋ ಅಂತಹ ಉತ್ತಮ ಕರ್ಮ ವಿಧಾನವನ್ನೀಗ ನಿಮಗೆ ತಿಳಿಸುತ್ತೇನೆ, ಕೇಳಿರಿ.

೨೦. ಮಘಾ ನಕ್ಷತ್ರವು ಪಿತೃ ನಕ್ಷತ್ರವೆಂದು ಪ್ರಸಿದ್ಧವಾಗಿರುವುದು. ಅದು ಪಿತೃಗಳಿಗೆ ಅತ್ಯಂತ ಪ್ರೀತಿಕರವಾದುದು. ಆ ನಕ್ಷತ್ರಯೋಗದಲ್ಲಿ ಮಕ್ಕಳಾದವರು ಸಂತೋಷಭರಿತರಾಗಿ ಶ್ರಾದ್ಧವನ್ನು ಮಾಡಿದರೆ ಪಿತೃಗಳು ಸುಪ್ರೀತರಾಗುತ್ತಾರೆ.

೨೧-೨೨. ಈ ಶ್ರಾದ್ಧವನ್ನು ಮಾಡುವುದಕ್ಕೆ ಪಂಚಮೀತಿಥಿಯು ಬಹಳ ಶ್ರೇಷ್ಠವಾದುದು. ಇದು ಕರ್ತನಿಗೆ ಅಭ್ಯುದಯವನ್ನುಂಟುಮಾಡುವಂತಹುದು. ಮಖಾ ನಕ್ಷತ್ರ ಮತ್ತು ಪಂಚಮಿ ಇವೆರಡೂ ಕೂಡಿಬಂದುದಾದರೆ ಅದು ಮಹಾ ಪುಣ್ಯಕರವಾದ ತಿಥಿಯೆನಿಸುತ್ತದೆ. ಆ ದಿನ ಪುತ್ರರಾದವರು ಪಿತೃಶ್ರಾದ್ಧವನ್ನು ಮಾಡಿದುದಾದರೆ ಪಿತೃಗಳು ಉದ್ಧಾರವಾಗುತ್ತಾರೆ. ಈ ಶ್ರಾದ್ಧವನ್ನು ಇಂದ್ರದ್ಯುಮ್ನಸರಸ್ತೀರದಲ್ಲಿ ಶ್ರೀಜಗನ್ನಾಥಸನ್ನಿಧಿಯಲ್ಲಿ ಮಾಡಬೇಕು.

೨೩-೨೪. ಎಲೈ ವಿಪ್ರರೇ! ಈ ತೀರ್ಥಶ್ರಾದ್ಧವನ್ನು ಆ ಸರಸ್ತೀರದಲ್ಲಿ ಶ್ರೀನೀಲಕಂಠ ನೃಸಿಂಹಮೂರ್ತಿಗಳ ನಡುವಣ ಪಾವನ ಪ್ರದೇಶದಲ್ಲಿ

ಪುರುಷಾಂಛತಮುದ್ಧೃತ್ಯ ಬ್ರಹ್ಮಲೋಕೇ ಮಹೀಯತೇ ।
ಪ್ರಶಸ್ಯಃ ಕುತಪಃ ಕಾಲೋ ಮಂದೀಭೂತದಿವಾಕರಃ ॥ ೨೪ ॥
ಪಿತೄನುದ್ದಿಶ್ಯ ವಾ ದದ್ಯಾದಶಕ್ತಃ ಕನಕಂ ಶುಚಿಃ ।
ತರ್ಪಯಿತ್ವಾ ತಿಲೈಃ ಸಮ್ಯಕ್ಕೃತಿಂ ಪ್ರೀತಿಮುತ್ತಮಾಂ ॥ ೨೫ ॥
ಅಥವಾ ಭೋಜಯೇದ್ವಿಪ್ರಾನ್ ಭೋಜ್ಯಮೌಲ್ಯಾನಿ ವಾ ದದೇತ್ ।
ಏಕಸ್ಮೈ ವಾ ಗುಣವತೇ ಸಹಸ್ರಂ ಭೋಜನಂ ದದೇತ್ ॥ ೨೬ ॥
ಗುಣಾಗುಣವಿವೇಕಸ್ತು ನಾತ್ರ ಯೋಗೇ ವಿಧೀಯತೇ ।
ತಸ್ಮಿನ್ಸುದುರ್ಲಭೇ ಯೋಗೇ ಸರ್ವೇ ಮುನಿಸಮಾ ದ್ವಿಜಾಃ ॥ ೨೭ ॥
ಆಷಾಢಸ್ಯ ಸಿತೇ ಪಕ್ಷೇ ಪಂಚಮೀ ಪಿತೃದೈವತಂ ।
ನಕ್ಷತ್ರಂ ಜಗದೀಶಸ್ಯ ಮಹಾವೇದೀಸಮಾಗಮಃ ॥ ೨೮ ॥
ಯಾತೇ ಯದಾ ತ್ರಯಃ ಸ್ಯುಶ್ಚೇದಿಂದ್ರದ್ಯುಮ್ನಸರೋವರೇ ।
ಚತುಷ್ಪಾದಃ ಸ್ಮೃತೋ ಯೋಗಃ ಪಿತೄಣಾಮಕ್ಷಯಪ್ರದಃ ॥ ೨೯ ॥

---

ಈ ಮಹಾ ಯೋಗದಲ್ಲಿ ಶ್ರದ್ಧೆಯಿಂದ ಮಾಡಿದುದಾದರೆ ಶತಪುರಷರೆಂದು ಪ್ರಖ್ಯಾತರಾದ ಪಿತೃಗಳನ್ನುದ್ಧರಿಸಿ ತಾನೂ ಸಹ ಬ್ರಹ್ಮಲೋಕವನ್ನು ಸೇರಿ ಸುಖಿಸುತ್ತಾನೆ. ಸೂರ್ಯನು ಮಂದಪ್ರಭನಾಗಿರುವ ಕಾಲವು ಕುತಪಕಾಲ ವೆನಿಸುತ್ತದೆ.

೨೫. ಎಲೈ ವಿಪ್ರರೇ! ಇಂದ್ರದ್ಯುಮ್ನಸರಸ್ತೀರದಲ್ಲಿ ಶ್ರಾದ್ಧವನ್ನು ಮಾಡಲಶಕ್ತನಾದವನು ಶ್ರದ್ಧಾಭಕ್ತಿಗಳಿಂದ ಪಿತೃದೇವತೆಗಳಿಗೆ ತಿಲತರ್ಪಣ ವನ್ನುಮಾಡಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧ ಪ್ರತ್ಯಾಮ್ನಾಯವಾಗಿ ಸುವರ್ಣದಾನ ವನ್ನು ಮಾಡಿದುದಾದರೆ ಪಿತೃಗಳಿಗೆ ಪ್ರೀತಿಯುಂಟಾಗುತ್ತದೆ.

೨೬. ಅಥವಾ, ಮಾನವನು ತಿಲತರ್ಪಣವನ್ನುಮಾಡಿ, ಗುಣವಂತನಾದ ಒಬ್ಬ ಬ್ರಾಹ್ಮಣನಿಗಾಗಲಿ, ಸಹಸ್ರ ಬ್ರಾಹ್ಮಣರಿಗೇ ಆಗಲಿ ಭೋಜನದ ಮೌಲ್ಯ ವನ್ನು ಕೊಡಬಹುದು.

೨೭. ಮಹಾಪುಣ್ಯಪ್ರದವಾದ ಆ ಮಹಾವೇದೀ ಮಹೋತ್ಸವ ಮಹಾ ಯೋಗ ಸಮಯದಲ್ಲಿ ನೆರದಿರುವ ಬ್ರಾಹ್ಮಣ ಸಮುದಾಯದಲ್ಲಿ ಯಾರೂ ಗುಣಾವಗುಣಗಳನ್ನೆಣಿಸಬಾರದು. ಆ ಸಮಯದಲ್ಲಿ ಅಲ್ಲಿ ಸೇರಿರುವ ಬ್ರಾಹ್ಮಣ ರೆಲ್ಲರೂ ಮುನಿಗಳಿಗೆ ಸಮಾನರಾದವರೇ!

೨೮–೨೯. ಎಲೈ ದ್ವಿಜೋತ್ತಮರೇ! ಆಷಾಢಮಾಸದ ಶುಕ್ಲ ಪಕ್ಷದ ಪಂಚಮೀತಿಥಿಯು ಪಿತೃದೇವತಾಕವಾದುದು. ಅಂದಿನ ದಿನವೇ ಜಗನ್ನಾಥ ಸ್ವಾಮಿಯ ಮಹಾವೇದೀ ಮಹೋತ್ಸವದ ನಕ್ಷತ್ರವೂ ಸೇರಿದುದಾದರೆ ಉತ್ತಮೋತ್ತಮವು. ಆಷಾಢಮಾಸ, ಶುಕ್ಲಪಕ್ಷದಲ್ಲಿ ಬರುವ ಪಿತೃಪಂಚಮಿ,

**ಪಿತೃಕಾರ್ಯೇ ನ ಸೀದಂತಿ ನಿರೂಪ್ಯ ಶ್ರಾದ್ಧಮತ್ರ ವೈ ।**
**ಶೃಣುಧ್ವಮುಸ್ಯ ವಿಪ್ರಾ ವೈ ಪ್ರಸಂಗಾಚ್ಚ ಬ್ರವೀಮಿ ವಃ ॥ ೩೦ ॥**
**ನಭಸ್ಯ ದರ್ಶೇ ಯಃ ಕುರ್ಯಾಚ್ಚತುರ್ಷ್ವಪಿ ಯುಗಾದಿಷು ।**
**ಶ್ರಾದ್ಧಂ ಪಿತೄನ್ಸಮುದ್ದಿಶ್ಯ ಅಶ್ವಮೇಧಾಂಗಸಂಭವೇ ॥ ೩೧ ॥**
**ಗಯಾಶ್ರಾದ್ಧಸಹಸ್ರಸ್ಯ ಶ್ರದ್ಧಯಾ ವಿಹಿತಸ್ಯ ವೈ ।**
**ಫಲಂ ಯದ್ಧಿ ಸಮಂ ತ್ವಸ್ಯ ನಾತ್ರ ಕಾರ್ಯಾ ವಿಚಾರಣಾ ॥ ೩೨ ॥**
**ದಾನಂ ಹೋಮೋ ಜಪಶ್ಚಾಪಿ ಸರ್ವಪಾಪಾಪನೋದನಃ ।**
**ದಿನಾನಿ ಸಪ್ತ ಯಾನ್ಯತ್ರ ಕೃಷ್ಣೋ ವಸತಿ ಮಂಡಪೇ ॥ ೩೩ ॥**
**ಏಕಸ್ಮಾದುತ್ತರಂ ಶ್ರೇಯೋ ಯತ್ತಸ್ಮಾದುತ್ತರೋತ್ತರಂ ।**
**ಆಷಾಢಶುಕ್ಲತೃತೀಯಾಯಾಂ ಪ್ರಾತಃಸ್ನಾನಂ ಸಮಾಚರೇತ್ ॥ ೩೪ ॥**

---

ಮಹೋತ್ಸವ ಮತ್ತು ನಕ್ಷತ್ರ ಇವು ಮೂರೂ ಇಂದ್ರದ್ಯುಮ್ನಸರೋವರದಲ್ಲಿ ಸೇರಿಬಂದುದಾದರೆ ಅದು ಪಿತೃಗಳಿಗೆ ಅಕ್ಷಯಲೋಕಪ್ರದವಾದ ಚತುಷ್ಪಾದ್ಧರ್ಮದ ಮಹಾಯೋಗವೆನಿಸುತ್ತದೆ.

೩೦. ಎಲೈ ವಿಪ್ರರೇ! ಈ ಕ್ಷೇತ್ರದಲ್ಲಿರುವ ಇಂದ್ರದ್ಯುಮ್ನ ಸರಸ್ತೀರದಲ್ಲಿ ಶ್ರಾದ್ಧವನ್ನು ಮಾಡಿದರೆ ಅದು ಅತ್ಯುತ್ತಮವಾದ ಫಲಗಳನ್ನು ಕೊಡುತ್ತದೆ. ಈಗ ಉಚಿತವಾದ ಪ್ರಸಂಗವು ಬಂದಿರುವುದರಿಂದ ನಿಮಗೆ ಬೇರೊಂದು ವಿಷಯವನ್ನು ತಿಳಿಸುವೆನು; ಕೇಳಿರಿ.

೩೧–೩೨. ಕೃತ, ತ್ರೇತಾ, ದ್ವಾಪರ, ಕಲಿಗಳೆಂಬ ನಾಲ್ಕುಯುಗಗಳಲ್ಲಿಯೂ ಪ್ರತಿ ವರ್ಷದ ಭಾದ್ರಪದ ಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿನ ಭಕ್ತಿಶ್ರದ್ಧೆಗಳಿಂದ ಪುತ್ರರಾದವರು ಮಾಡಿದ ಪಿತೃಶ್ರಾದ್ಧಕ್ಕಿಂತಲೂ, ಅಶ್ವಮೇಧಯಾಗಾಂಗವಾಗಿ ಉದ್ಭವಿಸಿದ ಈ ಇಂದ್ರದ್ಯುಮ್ನಸರೋವರದ ತೀರದಲ್ಲಿ ಮಾಡಿದ ಶ್ರಾದ್ಧವು ಉತ್ತಮವಾದುದೇ ಅಲ್ಲದೆ, ಒಂದು ಸಹಸ್ರಗಯಾಶ್ರಾದ್ಧಗಳನ್ನು ಶ್ರದ್ಧೆಯಿಂದ ಮಾಡಿದುದರಿಂದುಂಟಾದ ಫಲವನ್ನು ದೊರಕಿಸುತ್ತದೆಯೆಂಬ ವಿಷಯದಲ್ಲಿ ಯಾವ ವಿಚಾರವೂ ಇರುವುದಿಲ್ಲವು.

೩೩. ಶ್ರೀ ಜಗನ್ನಾಥ ಪ್ರಭುವು ಏಳುದಿನಗಳ ಕಾಲ ನೆಲಸಿರುವ ಸಮಯದಲ್ಲಿ ಮಾನವರೆಸಗುವ ದಾನ, ಹೋಮ, ಜಪಗಳು ಸಮಸ್ತಪಾಪಗಳನ್ನೂ ನಾಶಗೊಳಿಸುವಂತಹುವು. ಇವುಗಳಲ್ಲಿ ಒಂದಕ್ಕಿಂತಲೂ ಇನ್ನೊಂದು ಅಧಿಕಾಧಿಕವಾದ ಫಲಗಳನ್ನು ಕೊಡುವಂತಹವು.

೩೪–೩೫. ಎಲೈ ವಿಪ್ರರೇ! ಈಗ ನಿಮಗೊಂದು ವ್ರತದ ವಿಚಾರವನ್ನು ತಿಳಿಸುತ್ತೇನೆ. ಸಾವಧಾನಮನಸ್ಕರಾಗಿ ಕೇಳಿರಿ. ಆಷಾಢ ಶುಕ್ಲ ತೃತೀಯಾ ದಿನದಲ್ಲಿ ವ್ರತವನ್ನು ಕೈಕೊಳ್ಳಲಪೇಕ್ಷಿಸಿರುವ ಮಾನವನು ಪ್ರಾತಃ ಸ್ನಾನವನ್ನು

ಇಂದ್ರದ್ಯುಮ್ನತಟೇ ದೇಶೇ ನೃಸಿಂಹಕ್ಷೇತ್ರ ಉತ್ತಮೇ ।
ವ್ರತಮೇತತ್ತು ಗೃಹ್ಣೀಯಾತ್ಸಂಕಲ್ಪ್ಯ ವಿಧಿವನ್ನರಃ ॥ ೩೫ ॥
ವನಜಾಗರಣಂ ನಾಮ ಭಗವತ್ಪ್ರೀತಿವರ್ಧನಂ ।
ಸರ್ವಪಾಪಪ್ರಶಮನಂ ಸರ್ವವ್ರತಫಲಪ್ರದಂ ॥ ೩೬ ॥
ದಿನಾನಿ ಸಪ್ತ ಮೌನೀ ಸ್ಯಾತ್ಕೃತತ್ರಿಷವಣಕ್ರಿಯಃ ।
ಕುಂಭೇ ಚ ಪೂಜಯೇದ್ದೇವಂ ತ್ರಿಸಂಧ್ಯಂ ಭಕ್ತಿಭಾವಿತಃ ॥ ೩೭ ॥
ಗೋಘೃತೇನಾಥ ತೈಲೇನ ತಿಲಜೇನ ಪ್ರದೀಪಯೇತ್ ।
ಅಹರ್ನಿಶಂ ಹರೇರಗ್ರೇ ರಕ್ಷೇತ್ತಂ ಯತ್ನತೋ ವ್ರತೀ ॥ ೩೮ ॥
ದಿವಾ ದಿವಾ ವಸೇನ್ಮೌನೀ ರಾತ್ರೌ ರಾತ್ರೌ ಚ ಜಾಗೃಯಾತ್ ।
ಮಂತ್ರಂ ಭಾಗವತಂ ಜಪ್ಯಾನ್ನಿತ್ಯಕೃತ್ಯಾಂತರೇ ವ್ರತೀ ॥ ೩೯ ॥
ಉಪವಾಸಪರೋ ಭೂತ್ವಾ ಸಪ್ತಾಹಾನಿ ನಯೇದ್ವ್ರತೀ ।
ಅಷ್ಟಮೇ ಪ್ರಾತರುತ್ಥಾಯ ಪ್ರತಿಷ್ಠಾಂ ಕಾರಯೇದ್ದಿನೇ ॥ ೪೦ ॥

---

ಮುಗಿಸಿಕೊಂಡು, "ಇಂದ್ರದ್ಯುಮ್ನಸರೋವರದ ಬಳಿಯಿರುವ ಉತ್ತಮವಾದ ಶ್ರೀನೃಸಿಂಹಕ್ಷೇತ್ರದಲ್ಲಿ ಈ ವ್ರತವನ್ನು ಕೈಗೊಳ್ಳುವೆ"ನೆಂದು ವಿಧ್ಯುಕ್ತವಾಗಿ ಸಂಕಲ್ಪಮಾಡಬೇಕು.

೩೬. ಈ ವ್ರತದ ಹೆಸರು ವನಜಾಗರಣವೆಂದು. ಇದು ಭಗವಂತನಿಗೆ ಅತ್ಯಂತಪ್ರಿಯಂಕರವಾದುದು. ಸಕಲಪಾಪಗಳನ್ನೂ ನಿವಾರಣೆಮಾಡತಕ್ಕುದು. ಸಮಸ್ತ ವ್ರತಗಳ ಫಲವನ್ನೂ ದೊರಕಿಸುವಂತಹುದು.

೩೭. ಈ ವ್ರತವನ್ನು ಕೈಕೊಳ್ಳುವ ಮಾನವನು ಮೂರು ಕಾಲಗಳಲ್ಲಿಯೂ ಸ್ನಾನಾಹ್ನಿಕಗಳನ್ನು ಮಾಡಿಕೊಂಡು ಮೌನವಾಗಿರಬೇಕು. ಮುಚ್ಚಂಜೆಗಳಲ್ಲಿಯೂ ಭಕ್ತಿಭರಿತನಾಗಿ ಕುಂಭದಲ್ಲಿ ಆವಾಹಿಸಿರುವ ಶ್ರೀಜಗನ್ನಾಥನನ್ನು ಪೂಜಿಸಬೇಕು.

೩೮. ಆಕಳ ತುಪ್ಪ ಅಥವಾ ಎಳ್ಳೆಣ್ಣೆಯ ನಂದಾದೀಪವನ್ನು ಶ್ರೀಹರಿಯ ಸನ್ನಿಧಿಯಲ್ಲಿ ಸ್ಥಾಪಿಸಿ, ಹಗಲಿರುಳೂ ಅದು ನಂದಿ ಹೋಗದಂತೆ ಕಾಪಾಡುತ್ತಿರಬೇಕು.

೩೯. ಪ್ರತಿದಿನದ ಹಗಲೂ ಮೌನವನ್ನಾಚರಿಸುತ್ತಿದ್ದು, ಪ್ರತಿರಾತ್ರಿಯಲ್ಲಿಯೂ ಜಾಗರಣೆಯನ್ನು ಮಾಡಬೇಕು. ಪ್ರತಿದಿನವೂ ನಿತ್ಯಕರ್ಮಗಳನ್ನು ಆಚರಿಸಿಯಾದ ಮೇಲೆ ವ್ರತಿಯು ಭಗವತ್ಸಂಬಂಧವಾದ ಶ್ರೀಮಂತ್ರವನ್ನು ಜಪಿಸಬೇಕು.

೪೦. ಈ ರೀತಿ ವ್ರತಿಯು ಏಳು ದಿನಗಳಕಾಲ ವ್ರತವನ್ನು ಮಾಡತಕ್ಕದ್ದು. ಎಂಟನೆಯ ದಿನ ಬೆಳಿಗಿನ ಝಾವಕ್ಕೆದ್ದು ಅಂದಿನ ಹಗಲಿನಲ್ಲಿಯೇ ಶ್ರೀ

**ತಸ್ಮಿನ್ನೇವ ತೀರ್ಥವರೇ ಸ್ನಾತ್ವಾಗತ್ಯ ಗೃಹಂ ಪುನಃ ।**
**ಮಂಡಲೇ ಸರ್ವತೋ ಭದ್ರೇ ಪೂರ್ವೇ ಕುಂಭಂ ನಿವೇಶಯೇತ್ ॥ ೪೧ ॥**
**ತತ್ರಾವಾಹ್ಯ ಹೃಷೀಕೇಶಂ ಪೂಜಯೇದುಪಚಾರಕೈಃ ।**
**ತಸ್ಯ ಪಶ್ಚಿಮದೇಶೇ ಚ ಸ್ಥಂಡಿಲೇ ವಿಧಿಸಂಸ್ಕೃತೇ ॥ ೪೨ ॥**
**ಅಗ್ನಿಂ ಪ್ರಣೀಯ ಗೃಹ್ಯೋಕ್ತವಿಧಿನಾ ಬ್ರಾಹ್ಮಣಾವೃತಃ ।**
**ಅಗ್ನಿಕಾರ್ಯಂ ಪ್ರಕುರ್ವೀತ ಸಮಿದಾಜ್ಯಚರೂಂಸ್ತಥಾ ॥ ೪೩ ॥**
**ಸಹಸ್ರಂ ಜುಹುಯಾದಗ್ನೌ ಪ್ರತ್ಯೇಕಂ ವಾ ಶತಂ ಶತಂ ।**
**ಗಾಯತ್ರೀ ವೈಷ್ಣವೀ ಯಾ ವೈ ತಯೋಹೋಮವಿಧಿಃ ಸ್ಮೃತಃ ॥ ೪೪ ॥**
**ಸಂಪ್ರಾಶ್ಯ ದಕ್ಷಿಣಾಂ ದದ್ಯಾದ್ಧೇನುಂ ವಸ್ತ್ರಂ ಹಿರಣ್ಯಕಂ ।**
**ವಿಪ್ರಾಂಶ್ಚ ಭೋಜಯೇದಂತೇ ಪ್ರೀತಯೇ ವಿಶ್ವಸಾಕ್ಷಿಣಃ ॥ ೪೫ ॥**
**ವ್ರತರಾಜಮಿಮಂ ಕೃತ್ವಾ ವಿಧಿನಾನೇನ ಭೋ ದ್ವಿಜಾಃ ।**
**ಚತುರ್ವರ್ಗಾನವಾಪ್ನೋತಿ ಯೋ ಯಃ ಕಾಮಾನಭೀಪ್ಸ್ಯತಿ ॥ ೪೬ ॥**

---

ಜಗನ್ನಾಥ ಮೂರ್ತಿಯನ್ನು ಪ್ರತಿಷ್ಠಿಸಬೇಕು. ಈ ವಿಧಾನವನ್ನು ಹೇಳುತ್ತೇನೆ; ಕೇಳಿರಿ.

೪೧. ಎಲೈ ವಿಪ್ರರೇ! ಅದೇ ಇಂದ್ರದ್ಯುಮ್ನಸರೋವರದಲ್ಲಿಯೇ ಸ್ನಾನ ವನ್ನು ಮಾಡಿ ಮನೆಗೆ ಬಂದು ಸರ್ವತೋಭದ್ರ ಮಂಡಲವನ್ನು ರಚಿಸಿ ಅಲ್ಲಿ ಪೂರ್ವಕ್ಕೆ ಹಿಂದೆ ಹೇಳಿದ ಕುಂಭವನ್ನಿಡತಕ್ಕುದು.

೪೨–೪೪. ಆ ಕುಂಭದಲ್ಲಿ ಶ್ರೀ ಹೃಷೀಕೇಶನನ್ನು ಆವಾಹನೆಮಾಡಿ ಪೂರ್ವೋಕ್ತವಿಧಾನವನ್ನನುಸರಿಸಿ ಪೂಜಿಸಬೇಕು. ಅದಕ್ಕೆ ಪಶ್ಚಿಮದಿಕ್ಕಿಗೆ ವಿಧಿಸಂಸ್ಕೃತವಾದ ಸ್ಥಂಡಿಲದಲ್ಲಿ ಗೃಹ್ಯೋಕ್ತವಿಧಿಯನ್ನನುಸರಿಸಿ ಅಗ್ನಿಯನ್ನು ಪ್ರಣಯನಮಾಡಿ ಸಮಿತ್ತು ಆಜ್ಯ ಚರುಗಳಿಂದ ವಿಷ್ಣುಗಾಯತ್ರೀ ಮಂತ್ರವನ್ನು ಪುರಶ್ಚರಣೆಮಾಡಿಕೊಂಡು ಬೇರೆಬೇರೆಯಾಗಿಯೋ ಅಥವಾ ನೂರು ನೂರಕ್ಕೆ ಒಮ್ಮೊಮ್ಮೆಯಾಗಿಯೋ ಹೋಮಮಾಡಬೇಕು.

೪೫. ಹೋಮಶೇಷವನ್ನು ಪ್ರಾಶನಮಾಡಿದ ಬಳಿಕ ಋತ್ವಿಕ್ಕುಗಳಿಗೂ ಬ್ರಹ್ಮನಿಗೂ ದಕ್ಷಿಣೆಗಳನ್ನೂ, ಗೋದಾನ, ವಸ್ತ್ರದಾನ, ಹಿರಣ್ಯದಾನಗಳನ್ನೂ ಕೊಡತಕ್ಕುದು. ಇದಾದ ತರುವಾಯ ವಿಶ್ವಸಾಕ್ಷಿಯಾದ ಶ್ರೀ ಪುರುಷೋ ತ್ತಮನ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೪೬. ಅಯ್ಯಾ ಬ್ರಾಹ್ಮಣೋತ್ತಮರಿರಾ! ವ್ರತರಾಜವೆನಿಸಿದ ಈ ವನಜಾ ಗರಣ ವ್ರತವನ್ನು ಮೇಲೆ ನಿರೂಪಿಸಿದ ವಿಧಿಯನ್ನನುಸರಿಸಿ ಮಾಡಿದುದಾದರೆ ಮಾನವನು ಧರ್ಮಾದಿ ಚತುರ್ವಿಧ ಪುರುಷಾರ್ಥಗಳನ್ನು ಪಡೆಯುವುದೇ ಅಲ್ಲದೆ ಅವನು ಬಯಸುವ ಯಾವ ಬಯಕೆಯಾದರೂ ಈಡೇರುತ್ತದೆ.

ನಾರೀ ವಾ ಶ್ರದ್ಧಯಾ ಯುಕ್ತಾ ಕುರ್ಯಾದ್ವೇದೀಮಹೋತ್ಸವಂ ।
ಸಾ ಹಿ ತತ್ಫಲಮಾಪ್ನೋತಿ ಯಾ ಕುರ್ಯಾದ್ವ್ರತಮುತ್ತಮಂ ॥ ೪೭ ॥
ಯಾತ್ರಾಕರ್ತುಃ ಫಲಂ ಯಾದೃಗ್ವ್ರತಕರ್ತುಶ್ಚ ತತ್ಫಲಂ ।
ಭವತೇ ವೈ ದ್ವಿಜಶ್ರೇಷ್ಠಾಃ ಕಥಿತಂ ವೋ ಮುದಾನ್ವಿತಾಃ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಮಹಾವೇದೀಮಹೋತ್ಸವಪ್ರಭಾವವರ್ಣನಂ "ನಾಮ ಚತುಸ್ತ್ರಿಂಶೋಽಧ್ಯಾಯಃ

---

೪೭. ಮಹಾವೇದೀಮಹೋತ್ಸವವನ್ನಾಗಲಿ ಈ ವನಜಾಗರವ್ರತವನ್ನಾಗಲಿ ಮಾಡುವ ಸ್ತ್ರೀಯೂ ಸಹ ಅದಕ್ಕೆ ಹೇಳಿರುವ ಫಲವನ್ನು ಪಡೆಯುತ್ತಾಳೆ.

೪೮. ಶ್ರೀಜಗನ್ನಾಥಯಾತ್ರೆಯನ್ನು ಮಾಡಿದ ನರನಿಗೆ ಯಾವ ಫಲವು ದೊರಕುವುದೋ ಅದೇ ಫಲವೇ ಈ ವ್ರತನ್ನಾಚರಿಸಿದವರಿಗೂ ದೊರಕುತ್ತದೆ. ಪುರಾಣಶ್ರವಣದಿಂದ ಆನಂದಗೊಂಡಿರುವ ನಿಮಗೆ ಈ ವ್ರತರಾಜದ ವಿಚಾರವನ್ನಿಂತು ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಮಹಾವೇದೀಮಹೋತ್ಸವಪ್ರಭಾವ ವರ್ಣನ"ವೆಂಬ ಮುವ್ವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚತ್ರಿಂಶೋಽಧ್ಯಾಯಃ

## ರಥರಕ್ಷಾಕರಣವಿಧಾನವರ್ಣನಂ

**ಜೈಮಿನಿರುವಾಚ :—**

**ಅತಃ ಪರಂ ಪ್ರವಕ್ಷ್ಯಾಮಿ ರಥರಕ್ಷಾಕರಂ ವಿಧಿಂ ।**
**ಭೂತಪ್ರೇತಾದಯೋ ಘೋರಾ ದಾರುಣಾನ್ಯದ್ಭುತಾನಿ ಚ ॥ ೧ ॥**
**ನ ಬಾಧಂತೇ ರಥಾನ್ಯೇನ ಮುನಯೋ ವಶ್ಚ ಯನ್ಮತಂ ।**
**ಪ್ರತ್ಯಹಂ ಪೂಜಯೇದ್ದೇವಾನ್ ಕೃಷ್ಣಾದೀನ್ ಧ್ವಜಸಂಸ್ಥಿತಾನ್ ॥ ೨ ॥**
**ಗಂಧಪುಷ್ಪಾಕ್ಷತೈರ್ಮಾಲ್ಯೈರುಪಹಾರೈರನುತ್ತಮೈಃ ।**
**ಗೀತನೃತ್ಯಾದಿಕೈಶ್ಚೈವ ಧೂಪದೀಪನಿವೇದನೈಃ ॥ ೩ ॥**
**ದಿಕ್ಪಾಲೇಭ್ಯೋ ಬಲಿಂ ದದ್ಯಾತ್ಪಾಯಸಾನ್ನೇನ ಚಾನ್ವಹಂ ।**
**ಭೂತಪ್ರೇತಪಿಶಾಚೇಭ್ಯೋ ದದ್ಯಾಚ್ಚ ಬಲಿಮುತ್ತಮಂ ॥ ೪ ॥**
**ರಕ್ಷೇಚ್ಚ ಯತ್ನತಸ್ತಾನ್ವೈ ರಥಾನಾರೋಹಣೋಚಿತಾನ್ ।**
**ಯಥಾ ನ ಕಶ್ಚಿದಾರೋಹೇನ್ನರೋ ಗ್ರಾಮ್ಯಪಶುಸ್ತಥಾ ।**
**ಪಕ್ಷಿಣಶ್ಚ ವಿಶೇಷೇಣ ಯೇಷಾಂ ವಾಸೋ ನ ಶೋಭನಃ ॥ ೫ ॥**

---

## ಕನ್ನಡದ ಅನುವಾದ

### ರಥರಕ್ಷಾಕರಣವಿಧಾನವರ್ಣನ

೧–೨. ಜೈಮಿನಿಯು ಹೇಳುತ್ತಾನೆ:—ಎಲೈ ವಿಪ್ರರೇ! ಇನ್ನು ಮೇಲೆ ರಥಗಳನ್ನು ರಕ್ಷಣೆ ಮಾಡುವ ವಿಧಾನವನ್ನು ನಿರೂಪಿಸುವೆನು. ಇದರಿಂದ ಘೋರರೂಪರಾದ ಭೂತಪ್ರೇತಾದಿಗಳೂ, ಅದ್ಭುತಗಳಾದ ವಿಪತ್ತುಗಳೂ ಆ ರಥಗಳನ್ನು ಬಾಧಿಸಲಾರವು. ಮಹರ್ಷಿಗಳಿರಾ! ಇದು ನಿಮಗೂ ಅಭಿಮತವಾಗಿಯೇ ಇರುವುದು. ರಥೋತ್ಸವಕಾಲದಲ್ಲಿ ಪ್ರತಿ ಪ್ರಾತಃಕಾಲದಲ್ಲಿಯೂ ರಥಧ್ವಜಗಳಲ್ಲಿ ನೆಲೆಗೊಂಡಿರುವ ಶ್ರೀಕೃಷ್ಣನೇ ಮೊದಲಾದ ದೇವತೆಗಳನ್ನು ಪೂಜಿಸಬೇಕು.

೩. ಗಂಧ, ಪುಷ್ಪ, ಅಕ್ಷತೆ, ಪುಷ್ಪಮಾಲೆಗಳಿಂದಲೂ, ಅಸದೃಶಗಳಾದ ಉಪಹಾರಗಳಿಂದಲೂ, ಸಂಗೀತ ನೃತ್ಯಾದಿ ಸೇವೆಗಳಿಂದಲೂ, ಧೂಪದೀಪಗಳ ಸಮರ್ಪಣೆಗಳಿಂದಲೂ ಆ ದೇವತೆಗಳಿಗೆ ಅರ್ಚನೆಯನ್ನು ಮಾಡಬೇಕು.

೪. ಪ್ರತಿದಿನವೂ ಅಷ್ಟದಿಕ್ಪಾಲಕರಿಗೆ ಪಾಯಸಾನ್ನವನ್ನುಮಾಡಿ ಬಲಿಯನ್ನರ್ಪಿಸಬೇಕು. ಭೂತಗಳಿಗೂ, ಪ್ರೇತಗಳಿಗೂ, ಪಿಶಾಚಗಳಿಗೂ ಹಾಗೆಯೇ ಉತ್ತಮಾಹಾರದಿಂದ ಬಲಿಪ್ರದಾನವನ್ನು ಮಾಡಬೇಕು.

೫. ದೇವತೆಗಳ ಆರೋಹಣಕ್ಕೆ ಉಚಿತಗಳಾದ ಆ ರಥಗಳನ್ನು ಬಹಳ ಪ್ರಯಾಸದಿಂದ ಕಾಪಾಡಬೇಕು. ಅವುಗಳನ್ನು ಯಾವ ಮನುಷ್ಯನೇ ಆಗಲಿ

ಅಷ್ಟಮೇಽಹ್ನಿ ಪುನಃ ಕೃತ್ವಾ ದಕ್ಷಿಣಾಭಿಮುಖಾನ್ರಥಾನ್ ।
ವಿಭೂಷಯೇದ್ವಸ್ತ್ರಮಾಲ್ಯಪತಾಕೈಶ್ಚಾಮರಾದಿಭಿಃ ॥ ೬ ॥
ನವಮ್ಯಾಂ ವಾಸಯೇದ್ದೇವಾಂಸ್ತೇಷು ಪ್ರಾತಸ್ಸಮೃದ್ಧಿಮತ್ ॥ ೭ ॥
ದಕ್ಷಿಣಾಭಿಮುಖಾ ಯಾತ್ರಾ ವಿಷ್ಣೋರೇಷಾ ಸುದುರ್ಲಭಾ ।
ಯಾತ್ರಾ ಪ್ರಯತ್ನತಃ ಸಾ ಹಿ ಭಕ್ತಿಶ್ರದ್ಧಾಸಮನ್ವಿತೈಃ ॥ ೮ ॥
ಯಥಾ ಪೂರ್ವಾ ತಥಾ ಚೇಯಂ ದ್ವೇ ಚ ಮುಕ್ತಿಪ್ರದಾಯಕೇ ।
ಯಾತ್ರಾಪ್ರವೇಶೌ ದೇವಸ್ಯ ಏಕ ಏವೋತ್ಸವೋ ಮತಃ ॥ ೯ ॥
ಪುರಾವಿದೋ ವದಂತ್ಯೇತಾಂ ಯಾತ್ರಾಂ ನವದಿನಾತ್ಮಿಕಾಂ ।
ಏಷಾ ತ್ರ್ಯವಯವಾ ಯಾತ್ರಾ ಸಂಪೂರ್ಣಾ ಯೈರುಪಾಸಿತಾ ॥ ೧೦ ॥
ಸುಸಂಪೂರ್ಣಫಲಸ್ತೇಷಾಂ ಮಹಾವೇದೀಮಹೋತ್ಸವಃ ॥ ೧೧ ॥

---

ನಾಯಿಗಳೇ ಮುಂತಾದ ಗ್ರಾಮ್ಯ ಪಶುಗಳಾಗಲಿ ಆರೋಹಿಸದಿರುವಂತೆ ಜಾಗ್ರತೆಯಾಗಿರಬೇಕು. ಹಾಗೆಯೇ ಕಾಕಘೂಕಾದಿ ಯಾವ ಪಕ್ಷಿಗಳು ಕುಳಿತು ಅಮಂಗಳವನ್ನುಂಟುಮಾಡುವುವೊ, ಆ ಪಕ್ಷಿಗಳು ರಥಗಳ ಮೇಲೆ ಕುಳಿತುಕೊಳ್ಳದಂತೆ ವಿಶೇಷ ಜಾಗರೂಕತೆಯಿಂದಿರಬೇಕು.

೬. ಎಂಟನೆಯ ದಿನದ ಪ್ರಾತಃಕಾಲದಲ್ಲಿ ಮತ್ತೆ ಆ ರಥಗಳನ್ನೆಲ್ಲ ದಕ್ಷಿಣಾಭಿಮುಖಗಳನ್ನಾಗಿ ತಿರುಗಿಸಿ ವಸ್ತ್ರಗಳು, ಪುಷ್ಪಮಾಲೆಗಳು ಪತಾಕೆಗಳು, ಚಾಮರಗಳು ಮುಂತಾದುವುಗಳಿಂದ ಅವುಗಳನ್ನಲಂಕರಿಸಬೇಕು.

೭. ಒಂಭತ್ತನೆಯ ದಿನದ ಪ್ರಾತಃಕಾಲದಲ್ಲಿ ದೇವತೆಗಳನ್ನು ಅತ್ಯಂತ ವೈಭವದಿಂದ ರಥಾರೋಹಣಮಾಡಿಸಬೇಕು.

೮–೯. ದಕ್ಷಿಣಾಭಿಮುಖವಾದ ಈ ಮಹಾವಿಷ್ಣುವಿನ ರಥೋತ್ಸವವು ಮಾನವರಿಗೆ ಅತ್ಯಂತ ದುರ್ಲಭವಾದುದು. ಆದುದರಿಂದ ಭಕ್ತಿಶ್ರದ್ಧೆಗಳಿಂದ ಕೂಡಿದ ಮಾನವರು ಅತ್ಯಂತ ಪ್ರಯತ್ನದಿಂದಲಾದರೂ ಈ ಯಾತ್ರೆಯನ್ನು ಮಾಡಲೇಬೇಕು. ಪೂರ್ವದಿಕ್ಕಿನ ಯಾತ್ರೆಯು ಎಂತೊ, ಅಂತೆಯೇ ಇದೂ ಪುಣ್ಯಪ್ರದವಾಗಿರುವುದು. ಇವುಗಳೆರಡೂ ಮೋಕ್ಷವನ್ನು ಕೊಡುವುವುಗಳಾಗಿರುವುವು. ದೇವೇಶ್ವರನಾದ ಪುರುಷೋತ್ತಮನ ಯಾತ್ರಾಪ್ರವೇಶಗಳೆರಡೂ ಒಂದೇ ಉತ್ಸವದ ಅಂಗಗಳೆಂದು ಹೇಳಲಾಗಿರುವುದು.

೧೦–೧೧. ಇತಿಹಾಸಜ್ಞರಾದವರು ಈ ಯಾತ್ರೆಯು ಒಂಭತ್ತು ದಿನಗಳು ನಡೆಯತಕ್ಕದ್ದೆಂದು ಹೇಳುವರು. ಈ ವಿಧವಾಗಿ ಮೂರು ಅವಯವಗಳಿಂದ ಕೂಡಿದ ಸಂಪೂರ್ಣಯಾತ್ರೆಯನ್ನು ಯಾರು ಶ್ರದ್ಧೆಯಿಂದ ಉಪಾಸನೆಮಾಡುವರೊ, ಅವರು ಸಂಪೂರ್ಣಫಲವನ್ನು ಪಡೆದು ಮಹಾವೇದಿಯ ಮಹೋತ್ಸವದಲ್ಲಿ ಭಾಗಿಗಳಾಗುವರು.

ಗುಂಡಿಚಾಮಂಡಪಾತ್ಕೃಷ್ಣಮಾಯಾಂತಂ ದಕ್ಷಿಣಾಮುಖಂ ।
ರಥಸ್ಥಂ ಬಲಿನಂ ಭದ್ರಾಂ ಪಶ್ಯಂತೋ ಮುಕ್ತಿಭಾಗಿನಃ ॥ ೧೨ ॥
ಉತ್ತರಾಭಿಮುಖಾಂ ದೃಷ್ಟ್ವಾ ಲಭಂತೇ ಯಾದೃಶಂ ಫಲಂ ।
ರಾಮಾದೀನ್ ಸ್ಯಂದನಸ್ಥಾನೇ ಪಶ್ಯಂತ್ಯೇವಂ ಮಹೋದಯಾನ್ ।
ಯಾದೃಶಂ ಫಲಮಾಪ್ನುಯುಸ್ತಾದೃಶಂ ದಕ್ಷಿಣಾಮುಖಾನ್ ॥ ೧೩ ॥
ಪದಾ ಯಾಂತಂ ರಥೇ ಯಾಂತಂ ಯಃ ಪಶ್ಯೇದ್ದಕ್ಷಿಣಾಮುಖಂ ।
ತಸ್ಯ ಜನ್ಮ ಕೃತಾರ್ಥಂ ಸ್ಯಾದ್ವಾಜಿಮೇಧಃ ಪದೇ ಪದೇ ॥ ೧೪ ॥
ಸ್ತುತಿಭಿಃ ಪ್ರಣಪಾತೈಶ್ಚ ಪುಷ್ಪವೃಷ್ಟಿಭಿರೇವ ಚ ।
ನಾನಾನೃತ್ಯೋಪಹಾರೈಶ್ಚ ವ್ಯಜನಚ್ಛತ್ರಚಾಮರೈಃ ।
ಉಪಾಯನೈರ್ಬಹುವಿಧೈರುಪತಿಷ್ಠೇದ್ರಥಾಗ್ರತಃ ॥ ೧೫ ॥
ನೀಲಾಚಲಂ ಸಮಾಯಾಂತಂ ರಥಸ್ಥಂ ದಕ್ಷಿಣಾಮುಖಂ ।
ಯೇ ಪಶ್ಯಂತಿ ಹೃಷೀಕೇಶಂ ಸುಭದ್ರಾಂ ಲಾಂಗಲಾಯುಧಂ ॥ ೧೬ ॥

---

೧೨. ಗುಂಡಿಚಾಮಂಟಪದಿಂದ ರಥದಲ್ಲಿ ಕುಳಿತು ದಕ್ಷಿಣಾಭಿಮುಖನಾಗಿ ಬಿಜಯಂಗೈಯುತ್ತಿರುವ ಶ್ರೀಕೃಷ್ಣನನ್ನೂ, ಬಲರಾಮದೇವನನ್ನೂ, ಸುಭದ್ರಾದೇವಿಯನ್ನೂ ನೋಡುವವರು ಮುಕ್ತಿಭಾಜನರಾಗುವರು.

೧೩. ಉತ್ತರಾಭಿಮುಖರಾದ ಆ ದೇವತೆಗಳನ್ನು ನೋಡಿ ಯಾವ ಫಲವನ್ನು ಪಡೆಯುವರೊ, ರಥಗಳನ್ನೇರಿ ದಕ್ಷಿಣಾಭಿಮುಖರಾಗಿ ಮಹೋತ್ಸವಗಳೊಡನೆ ದಯಮಾಡಿಸುತ್ತಿರುವ ಬಲರಾಮಾದಿಗಳನ್ನು ದರ್ಶನಮಾಡುವುದರಿಂದಲೂ ಮನುಷ್ಯರು ಆ ಪುಣ್ಯವನ್ನೇ ಪಡೆಯುವರು.

೧೪. ಯಾವ ಮನುಷ್ಯನು ನರವಾಹನದಿಂದಾಗಲಿ, ರಥದಲ್ಲಿಯಾಗಲಿ ದಕ್ಷಿಣಾಭಿಮುಖನಾಗಿ ಬರುತ್ತಿರುವ ಜಗನ್ನಾಥನನ್ನು ನೋಡುವನೊ, ಅವನ ಜನ್ಮವೇ ಸಾರ್ಥಕವಾದುದು. ಅವನಿಗೆ ಯಾತ್ರೆಯ ಅಡಿಗಡಿಗೂ ಅಶ್ವಮೇಧ ಫಲವು ಲಭಿಸುವುದು.

೧೫. ಭಗವದ್ಭಕ್ತರು ಸ್ತೋತ್ರಪಾಠಗಳನ್ನೂ, ಸಾಷ್ಟಾಂಗ ಪ್ರಣಾಮಗಳನ್ನೂ, ಪುಷ್ಪಾಂಜಲಿಗಳನ್ನೂ, ಅನೇಕ ವಿಧಗಳಾದ ನೃತ್ಯಗಳನ್ನೂ, ಉಪಹಾರಗಳನ್ನೂ, ಬೀಸಣಿಗೆಗಳನ್ನೂ, ಛತ್ರಿಗಳನ್ನೂ, ಚಾಮರಗಳನ್ನೂ, ಬಹು ಪ್ರಕಾರಗಳಾದ ನೈವೇದ್ಯಗಳನ್ನೂ ಸಮರ್ಪಿಸುತ್ತ ರಥಗಳ ಮುಂಗಡೆಯಲ್ಲಿ ಹೊರಟು ಬರಬೇಕು.

೧೬–೧೭. ರಥದಲ್ಲಿ ಕುಳಿತು ದಕ್ಷಿಣಾಭಿಮುಖನಾಗಿ ನೀಲಾಚಲಕ್ಕೆ ಬಿಜಮಾಡಿಸುತ್ತಿರುವ ಶ್ರೀಕೃಷ್ಣನನ್ನೂ, ಸುಭದ್ರಾದೇವಿಯನ್ನೂ, ಭಕ್ತರ ಅಭಿಲಾಷೆಗಳನ್ನೀಡೇರಿಸುವ ಕಲ್ಪವೃಕ್ಷವಾಗಿ ದರ್ಶನಮಾತ್ರದಿಂದಲೇ ಮೋಕ್ಷವನ್ನು

**ಕಾಮಕಲ್ಪತರುಂ ಪುಂಸಾಂ ದರ್ಶನಾದೇವ ಮುಕ್ತಿದಂ ।**
**ತೇ ವ್ರಜಂತಿ ಮಹಾತ್ಮಾನೋ ವೈಕುಂಠಭವನಂ ಹರೇಃ ॥ ೧೭ ॥**
**ರಥೇನ ವಿಚರಂತಂ ತಂ ಸಿಂಧುತೀರೇ ಜನಾರ್ದನಂ ।**
**ಪಶ್ಯಂತಂ ಕರುಣಾಪಾಂಗೈಃ ಪ್ರಣತಾನ್ಪುರತೋ ನರಾನ್ ॥ ೧೮ ॥**
**ದಕ್ಷಿಣಾಭಿಮುಖಂ ಯಾಂತಂ ಪ್ರಾಸಾದಂ ನೀಲಭೂಧರೇ ।**
**ಸರ್ವತೀರ್ಥನಿಧಿಂ ಸರ್ವದಾನಕಲ್ಪತರುಂ ಹರಿಂ ॥ ೧೯ ॥**
**ಸ್ತುವಂತಃ ಪ್ರಣಮಂತಶ್ಚ ಶ್ರದ್ಧಧಾನಾಶ್ಚ ಯೇ ನರಾಃ ।**
**ನ ತೇ ಪುನರಿಹಾಯಾಂತಿ ಬ್ರಹ್ಮಲೋಕಸ್ಥಿತಾ ಧ್ರುವಂ ॥ ೨೦ ॥**
**ಮುನಯಃ ಕಥಿತೋ ವೋಽಯಂ ಮಹಾವೇದೀಮಹೋತ್ಸವಃ ।**
**ಯಸ್ಯ ಸಂಕೀರ್ತನಾದೇವ ನಿರ್ಮಲೋ ಜಾಯತೇ ನರಃ ॥ ೨೧ ॥**
**ಯಶ್ಚೇದಂ ಕೀರ್ತಯೇನ್ನಿತ್ಯಂ ಪ್ರಾತರುತ್ಥಾಯ ಮಾನವಃ ।**
**ಶೃಣುಯಾದಪಿ ಬುದ್ಧಿಸ್ಥಃ ಶಕ್ರಲೋಕಂ ವ್ರಜೇದಸೌ ॥ ೨೨ ॥**

---

ಕೊಡುವ ಹಲಾಯುಧಧರನಾದ ಬಲರಾಮದೇವನನ್ನೂ ಯಾವ ಮಹಾತ್ಮರು ನೋಡುವರೊ, ಅವರು ಶ್ರೀಹರಿಯ ನಿವಾಸವಾದ ವೈಕುಂಠವನ್ನು ಸೇರುವರು.

೧೮. ಇಂತು ಸಮುದ್ರತೀರದಲ್ಲಿ ಜನಾರ್ದನನು ರಥದಲ್ಲಿ ಕುಳಿತು ಸಂಚರಿಸುತ್ತ, ತನ್ನ ಮುಂದೆ ಪ್ರಣಾಮಗಳನ್ನು ಮಾಡುತ್ತಿರುವ ಭಕ್ತರನ್ನು ಕರುಣಾಪೂರಿತಗಳಾದ ಕಡೆಗಣ್ಣೋಟಗಳಿಂದ ನೋಡುತ್ತಿರುವನು.

೧೯. ದಕ್ಷಿಣಾಭಿಮುಖನಾಗಿ ನೀಲಾಚಲದಲ್ಲಿರುವ ತನ್ನ ಅರಮನೆಗೆ ಹೋಗುತ್ತಿರುವ ಶ್ರೀಹರಿಯು ಸಮಸ್ತ ತೀರ್ಥಗಳಿಗೂ ನಿಧಿಯೆನಿಸಿ ಭಕ್ತರ ಸಕಲಾಭೀಷ್ಟಗಳನ್ನೂ ಅನುಗ್ರಹಿಸುವ ಕಲ್ಪವೃಕ್ಷವಾಗಿರುವನು.

೨೦. ಇಂತಹ ಪರಮಾತ್ಮನನ್ನು ಶ್ರದ್ಧಾಭಕ್ತಿಗಳಿಂದ ಯಾವ ಮನುಷ್ಯರು ನೋಡಿ, ಸ್ತೋತ್ರಮಾಡಿ, ಪ್ರಣಾಮಗಳನ್ನರ್ಪಿಸುವರೊ, ಅವರು ದೇಹಪಾತವಾದ ಮೇಲೆ ಪುನಃ ಈ ಭೂಲೋಕಕ್ಕೆ ಬರುವುದಿಲ್ಲ. ಶಾಶ್ವತವಾದ ಬ್ರಹ್ಮಲೋಕದಲ್ಲಿಯೇ ವಾಸಮಾಡುತ್ತಿರುವರು.

೨೧. ಎಲೈ ಮಹಾಮುನಿಗಳಿರಾ! ಇಂತು ನಿಮಗೆ ಮಹಾವೇದೀ ಮಹೋತ್ಸವವನ್ನು ವಿಸ್ತಾರವಾಗಿ ಹೇಳಿರುವೆನು ಇದನ್ನು ಸಂಕೀರ್ತನಮಾಡುವುದರಿಂದಲೇ ಮಾನವನು ಪರಿಶುದ್ಧನಾಗುವನು.

೨೨. ಯಾವ ಮನುಷ್ಯನು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಹಾಸಿಗೆಯಿಂದೇಳುವ ಸಮಯದಲ್ಲಿ ಇದನ್ನು ಸಂಕೀರ್ತನ ಮಾಡುವನೊ, ಯಾವನು ಚಿತ್ತೈಕಾಗ್ರತೆಯುಳ್ಳವನಾಗಿ ಇದನ್ನುಕೇಳುವನೊ, ಅವರೀರ್ವರೂ ಮಹೇಂದ್ರನ ಸ್ವರ್ಗಲೋಕದಲ್ಲಿ ವಾಸಮಾಡುವರು.

ಪ್ರತ್ಯರ್ಚಾರೋಪಮಪಿ ವಾ ರಥಮಾಸ್ಥಾಪ್ಯ ಯೋ ಹರೇಃ ।
ಕುರ್ಯಾದ್ಯಾತ್ರಾಮಿಮಾಂ ಶ್ರದ್ಧಾಭಕ್ತಿಭಾವೇನ ಮಾನವಃ ॥ ೨೩ ॥
ಸೋಽಪಿ ವಿಷ್ಣೋಃ ಪ್ರಸಾದೇನ ಗುಂಡಿಚೋತ್ಸವಜಂ ಫಲಂ ।
ಪ್ರಾಪ್ಯ ವೈಕುಂಠಭವನಂ ಯಾತಿ ನಾತ್ರ ವಿಚಾರಣಾ ॥ ೨೪ ॥
ಪಶ್ಯ ಶ್ರೀರ್ಯಾವತೀ ವಿಪ್ರಾ ಭಕ್ತಿರ್ವಾ ಶ್ರದ್ಧಯಾನ್ವಿತಾ ।
ತಾವತೀಯಂ ಮಹಾಯಾತ್ರಾ ಯೋ ಯಥಾ ಕರ್ತುಮಿಚ್ಛತಿ ॥ ೨೫ ॥
ಇದಂ ಪವಿತ್ರಂ ಪರಮಂ ರಹಸ್ಯಂ ವೇಧಸೋದಿತಂ ।
ಕಾರಯಿತ್ವಾಽಥ ವಾ ದೃಷ್ಟ್ವಾ ಯನ್ನರೋ ನಾವಸೀದತಿ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ರಥರಕ್ಷಾಕರಣವಿಧಾನವರ್ಣನಂ"ನಾಮ ಪಂಚತ್ರಿಂಶೋಽಧ್ಯಾಯಃ

---

೨೩–೨೪. ಯಾವನು ಪುರುಷೋತ್ತಮಕ್ಷೇತ್ರದಲ್ಲಿರುವ ಶ್ರೀಹರಿಯ ರಥದ ಪ್ರತಿಕೃತಿಯನ್ನು ಮಾಡಿಸಿ ಶ್ರದ್ಧಾಭಕ್ತಿಭರಿತನಾಗಿ ತಾನಿರುವೆಡೆಯಲ್ಲಿಯೇ ಈ ರಥೋತ್ಸವವನ್ನು ಮಾಡಿಸುವನೊ, ಆ ಮಾನವನೂ ಸಹ ಮಹಾವಿಷ್ಣುವಿನ ಅನುಗ್ರಹದಿಂದ ಶ್ರೀ ಪುರುಷೋತ್ತಮನ ಗುಂಡಿಚಾಮಂಟಪೋತ್ಸವವನ್ನು ಪ್ರತ್ಯಕ್ಷವಾಗಿಯೇ ನೋಡಿದ ಪುಣ್ಯಫಲವನ್ನು ಪಡೆದು ವೈಕುಂಠಪದವಿಯನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹಪಡಬಾರದು.

೨೫. ಎಲೈ ಬ್ರಾಹ್ಮಣೋತ್ತಮರಿರಾ! ಯಾವನ ಐಶ್ವರ್ಯವು ಎಷ್ಟರ ಮಟ್ಟಿನದಾಗಿರುವುದೊ, ಶ್ರದ್ಧಾಸಹಿತವಾದ ಭಕ್ತಿಯು ಎಷ್ಟು ಉತ್ತಮವಾಗಿರುವುದೊ, ಯಾರು ಈ ಮಹೋತ್ಸವವನ್ನು ಹೇಗೆ ಮಾಡಲೆಳಸುವರೊ, ಹಾಗೆಯೇ ಈ ಮಹಾಯಾತ್ರೆಯು ಎಲ್ಲೆಡೆಗಳಲ್ಲಿಯೂ ನಡೆಯುತ್ತಿರುವುದನ್ನು ನೀವು ನೋಡಬಹುದು.

೨೬. ಈ ರಥಯಾತ್ರಾ ರಹಸ್ಯವು ಪರಮಪವಿತ್ರವಾದುದೆಂದು ಬ್ರಹ್ಮದೇವನೇ ನಿರೂಪಿಸಿರುವನು. ಈ ರಥೋತ್ಸವವನ್ನು ಮಾಡಿಸುವ ಮತ್ತು ನೋಡುವ ಮನುಷ್ಯನು ಎಂದಿಗೂ ಸಂಸಾರದಲ್ಲಿ ಬಳಲುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿ ಸಂವಾದದಲ್ಲಿ "ರಥರಕ್ಷಾಕರಣವಿಧಾನವರ್ಣನ"ವೆಂಬ ಮುಂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ತ್ರಿಂಶೋಽಧ್ಯಾಯಃ

## ಶ್ರೀವಿಷ್ಣು ಶಯನೋತ್ಸವವರ್ಣನಂ

**ಜೈಮಿನಿರುವಾಚ :—**

**ಅತಃ ಪರಂ ಪ್ರವಕ್ಷ್ಯಾಮಿ ಶಯನೋತ್ಸವಮುತ್ತಮಂ ।**
**ಆಷಾಢೀಮವಧಿಂ ಕೃತ್ವಾ ಹರೇಃ ಸ್ವಾಪಸ್ತು ಕರ್ಕಟೇ ॥ ೧ ॥**
**ವಾರ್ಷಿಕಾಂಶ್ಚತುರೋಮಾಸಾನ್ಯಾವತ್ಸ್ಯಾತ್ಕಾರ್ತಿಕೀ ದ್ವಿಜಾಃ ।**
**ಅಯಂ ಪುಣ್ಯತಮಃ ಕಾಲೋ ಹರೇರಾರಾಧನಂ ಪ್ರತಿ ॥ ೨ ॥**
**ಕಾಶ್ಯಾಂ ಬಹುಯುಗಂ ವಾಸಾನ್ನಿಯಮವ್ರತಸಂಸ್ಥಿತೇಃ ।**
**ಫಲಂ ಯದುಕ್ತಂ ತದ್ವಿದ್ಯಾತ್ ಕ್ಷೇತ್ರೇ ಶ್ರೀಪುರುಷೋತ್ತಮೇ ॥ ೩ ॥**
**ಚಾತುರ್ಮಾಸ್ಯಾದಿನೈಕೇನ ವಸತಃ ಸನ್ನಿಧೌ ಹರೇಃ ।**
**ವಾರ್ಷಿಕಾಣಾಂ ಚತುರ್ಣಾಂ ತು ಯಾನ್ಯಹಾನಿ ವಸನ್ನಯೇತ್ ॥ ೪ ॥**
**ಪುಣ್ಯಕ್ಷೇತ್ರೇ ಜಗನ್ನಾಥಸನ್ನಿಧೌ ನಿರ್ಮಲಾಂತರೇ ।**
**ಪ್ರತ್ಯಕ್ಷಂ ವಾಜಿಮೇಧಸ್ಯ ಸಹಸ್ರಸ್ಯ ಲಭೇತ್ಫಲಂ ॥ ೫ ॥**

---

## ಕನ್ನಡದ ಅನುವಾದ

### ಶ್ರೀವಿಷ್ಣು ಶಯನೋತ್ಸವವರ್ಣನ

೧. ಜೈಮಿನಿಯು ಹೇಳುತ್ತಾನೆ:—ಈಗ ಸರ್ವೋತ್ತಮವಾದ ವಿಷ್ಣು ಶಯನೋತ್ಸವವನ್ನು ವರ್ಣಿಸುವೆನು. ಸೌರಮಾನದ ಕಟಕ ಮಾಸದಲ್ಲಿ ಆಷಾಢ ಮಾಸದ ಶುಕ್ಲದ್ವಾದಶಿಯು ಮೊದಲುಗೊಂಡು ಶ್ರೀ ಹರಿಯ ಶಯನಕಾಲವಾಗಿರುವುದು.

೨. ಎಲೈ ವಿಪ್ರರಿರಾ! ಕಾರ್ತಿಕಮಾಸದ ಶುಕ್ಲದ್ವಾದಶಿಯವರೆವಿಗೂ ನಡೆಯುವ ವರ್ಷಕಾಲದ ನಾಲ್ಕು ಮಾಸಗಳ ಕಾಲಾವಧಿಯು ಪರಮಾತ್ಮನ ಆರಾಧನೆಗೆ ಅತ್ಯಂತ ಪುಣ್ಯತಮವಾದ ಕಾಲವಾಗಿರುವುದು.

೩–೫. ಕಾಶೀಕ್ಷೇತ್ರದಲ್ಲಿ ನಿಯಮಗಳನ್ನೂ ವ್ರತಗಳನ್ನೂ ಪಾಲಿಸುತ್ತ ಅನೇಕ ಯುಗಗಳವರೆವಿಗೂ ವಾಸಮಾಡುವುದರಿಂದ ಯಾವ ಫಲವು ಲಭಿಸುವುದೆಂದು ಶಾಸ್ತ್ರಗಳಲ್ಲಿ ಉಕ್ತವಾಗಿರುವುದೊ, ಅದನ್ನೇ ಪುರುಷೋತ್ತಮಕ್ಷೇತ್ರದಲ್ಲಿ ಶ್ರೀ ಹರಿಯ ಸನ್ನಿಧಿಯಲ್ಲಿ ಚಾತುರ್ಮಾಸ್ಯದ ಒಂದು ದಿನದ ವಾಸದಿಂದಲೇ ಪಡೆಯಬಹುದೆಂದು ತಿಳಿಯಬೇಕು. ಮನುಷ್ಯನು ವರ್ಷಾಕಾಲದ ನಾಲ್ಕು ಮಾಸಗಳಲ್ಲಿ ಈ ಪುಣ್ಯತಮವಾದ ಪುರುಷೋತ್ತಮಕ್ಷೇತ್ರದಲ್ಲಿ ನಿರ್ಮಲ ಪ್ರದೇಶವಾಗಿರುವ ಜಗನ್ನಾಥನ ಸನ್ನಿಧಿಯಲ್ಲಿ ವಾಸಿಸುತ್ತ ಎಷ್ಟು ದಿವಸಗಳನ್ನು

ಸ್ನಾತ್ವಾ ಸಿಂಧುಜಲೇ ಪುಣ್ಯೇ ದೃಷ್ಟ್ವಾ ಶ್ರೀಪುರುಷೋತ್ತಮಂ ।
ಚಾತುರ್ಮಾಸ್ಯವ್ರತೇ ತಿಷ್ಠನ್ನ ಶೋಚತಿ ಕುತಶ್ಚನ ॥ ೬ ॥
ಚಾತುರ್ಮಾಸ್ಯೇ ನಿವಸತಿ ಕ್ಷೇತ್ರೇ ಶ್ರೀಪುರುಷೋತ್ತಮೇ ।
ಸಾಕ್ಷಾದ್ವೃಷ್ಟಿರ್ಭಗವತಸ್ತದ್ದ್ವಯಂ ಮುಕ್ತಿಸಾಧನಂ ॥ ೭ ॥
ತಸ್ಮಾತ್ಸರ್ವಾಣಿ ಸಂತ್ಯಜ್ಯ ಶ್ರೌತಸ್ಮಾರ್ತಾನಿ ಮಾನವಃ ।
ಪ್ರಯತ್ನೇನ ವಸೇತ್ಪುಣ್ಯೇ ಕ್ಷೇತ್ರೇ ಶ್ರೀಪುರುಷೋತ್ತಮೇ ॥ ೮ ॥
ಭೋಗಿಭೋಗಾಸನೇ ಸುಪ್ತಶ್ಚಾತುರ್ಮಾಸ್ಯೇಷು ವೈ ಪ್ರಭುಃ ।
ಸರ್ವಕ್ಷೇತ್ರೇಷು ಸಾನ್ನಿಧ್ಯಂ ನ ಕರೋತಿ ಜಗದ್ಗುರುಃ ॥ ೯ ॥
ಅತ್ರ ಸಾಕ್ಷಾನ್ನಿವಸತಿ ಯಥಾ ವೈಕುಂಠವೇಶ್ಮನಿ ।
ದ್ವಾದಶಸ್ವಪಿ ಮಾಸೇಷು ಭಗವಾನತ್ರ ಮೂರ್ತಿಮಾನ್ ।
ಮುಕ್ತಿದಶ್ಚಾಕ್ಷುಷಾ ದೃಷ್ಟಶ್ಚಾತುರ್ಮಾಸೀ ವಿಶೇಷತಃ ॥ ೧೦ ॥

---

ಕಳೆಯುವನೊ, ಆ ಒಂದೊಂದು ದಿವಸದ ವಾಸಕ್ಕೂ ಪ್ರತ್ಯಕ್ಷವಾಗಿ ಒಂದು ಸಹಸ್ರ ಅಶ್ವಮೇಧಗಳನ್ನು ಮಾಡಿದ ಫಲವನ್ನು ಹೊಂದುವನು.

೬. ಪರಮಪವಿತ್ರವಾದ ಸಮುದ್ರದಲ್ಲಿ ಮಿಂದು ಶ್ರೀಪುರುಷೋತ್ತಮನ ದರ್ಶನವನ್ನು ಮಾಡಿ ಚಾತುರ್ಮಾಸ್ಯದ ವ್ರತವನ್ನು ನಿಯಮದಿಂದ ನೆರವೇರಿಸಿದ ಮನುಷ್ಯನು ಎಂದೆಂದಿಗೂ ಯಾವ ಕಾರಣದಿಂದಲೂ ದುಃಖಪಡುವುದಿಲ್ಲ.

೭. ಚಾತುರ್ಮಾಸ್ಯಕ್ಕಾಗಿ ಶ್ರೀಪುರುಷೋತ್ತಮಕ್ಷೇತ್ರದಲ್ಲಿ ವಾಸಮಾಡುವುದು ಮತ್ತು ಭಗವಂತನಾದ ಶ್ರೀಕೃಷ್ಣನ ಸಾಕ್ಷಾದ್ದರ್ಶನ ಈ ಎರಡೇ ಮೋಕ್ಷಕ್ಕೆ ಸುಲಭಸಾಧನಗಳಾಗಿರುವುವು.

೮. ಆದುದರಿಂದ ಮುಮುಕ್ಷುವಾದ ಮಾನವನು ಶ್ರುತಿಸ್ಮೃತಿವಿಹಿತಗಳಾದ ಸಕಲ ಕರ್ಮಗಳನ್ನು ತ್ಯಜಿಸಿಯಾದರೂ ಚಾತುರ್ಮಾಸ್ಯದ ಸಮಯದಲ್ಲಿ ಪುಣ್ಯತಮವಾದ ಶ್ರೀಪುರುಷೋತ್ತಮಕ್ಷೇತ್ರದಲ್ಲಿ ಪ್ರಯತ್ನಪೂರ್ವಕವಾಗಿ ವಾಸಮಾಡಬೇಕು.

೯-೧೦. ಸರ್ವೇಶ್ವರನೂ, ಲೋಕಗುರುವೂ ಆದ ಮಹಾವಿಷ್ಣುವು ಈ ಚಾತುರ್ಮಾಸ್ಯದ ಕಾಲದಲ್ಲಿ ಆದಿಶೇಷನ ಫಣಾಭೋಗದಲ್ಲಿ ಶಯನವನ್ನು ಮಾಡುತ್ತಿರುವುದರಿಂದ ಆಗ ಸಕಲಕ್ಷೇತ್ರಗಳಲ್ಲಿಯೂ ತನ್ನ ಸಾನ್ನಿಧ್ಯವನ್ನು ತೋರುವುದಿಲ್ಲವು. ಆದರೆ ಇಲ್ಲಿ ಮಾತ್ರ ವೈಕುಂಠದಲ್ಲಿರುವಂತೆಯೇ ಪರಮಾತ್ಮನು ಯಾವಾಗಲೂ ವಾಸಮಾಡುತ್ತಿರುವನು. ಹನ್ನೆರಡು ಮಾಸಗಳಲ್ಲಿಯೂ ಭಗವಂತನು ಇಲ್ಲಿ ಮೂರ್ತಿಗೊಂಡಿರುವನು. ಸಕಲ ಕಾಲಗಳಲ್ಲಿಯೂ, ವಿಶೇಷವಾಗಿ ಚಾತುರ್ಮಾಸ್ಯದಲ್ಲಿಯೂ ಸಾಕ್ಷಾದ್ದರ್ಶನವನ್ನು ಮಾಡುವವರಿಗೆ ಮುಕ್ತಿಯನ್ನು ಕೊಡುವನು.

ಅಷ್ಟಮಾಸನಿವಾಸೇನ ದೃಷ್ಟ್ವಾ ವಿಷ್ಣುಂ ದಿನೇದಿನೇ ।
ಯದಾಪ್ನೋತಿ ಫಲಂ ತದ್ಧಿ ಚಾತುರ್ಮಾಸ್ಯದಿನೈಕತಃ ॥ ೧೧ ॥
ಚಾತುರ್ಮಾಸ್ಯನಿವಾಸೇನ ಕ್ಷೇತ್ರೇ ಶ್ರೀಪುರುಷೋತ್ತಮೇ ।
ದಿನಂ ದಿನಂ ಮಹಾಪುಣ್ಯಂ ಸರ್ವಕ್ಷೇತ್ರನಿವಾಸಜಂ ।
ಫಲಂ ದದಾತಿ ಭಗವಾನ್ ಕ್ಷೇತ್ರೇ ವರ್ಷನಿವಾಸತಃ ॥ ೧೨ ॥
ಸರ್ವಪಾಪಪ್ರಸಕ್ತೋಽಪಿ ಸರ್ವಾಚಾರಚ್ಯುತೋಽಪಿ ಚ ।
ಸರ್ವಧರ್ಮಬಹಿರ್ಭೂತೋ ನಿವಸೇತ್ಪುರುಷೋತ್ತಮೇ ॥ ೧೩ ॥
ಚಾತುರ್ಮಾಸ್ಯಮಥೈಕಂ ಯಃ ಕುರ್ಯಾದ್ವೈ ಪಾಪಕೃನ್ನರಃ ।
ವಿಹಾಯ ಸರ್ವಪಾಪಾನಿ ಬಹಿರಂತಶ್ಚ ನಿರ್ಮಲಃ ॥ ೧೪ ॥
ನರಸಿಂಹಪ್ರಸಾದೇನ ವೈಕುಂಠಭವನಂ ವ್ರಜೇತ್ ॥ ೧೫ ॥
ತಸ್ಮಾನ್ನರಃ ಸರ್ವಭಾವೈರ್ವಿಷ್ಣೋಃ ಶಯನ ಭಾವಿತಾನ್ ।
ವಾರ್ಷಿಕಾಂಶ್ಚತುರೋ ಮಾಸಾನ್ನಿವಸೇತ್ಪುರುಷೋತ್ತಮೇ ॥ ೧೬ ॥

---

೧೧. ಮಿಕ್ಕ ಎಂಟು ತಿಂಗಳುಗಳಲ್ಲಿಯೂ ಇಲ್ಲಿ ವಾಸಮಾಡಿ ಪ್ರತಿ ದಿನ ದಲ್ಲಿಯೂ ಮಹಾವಿಷ್ಣುವಿನ ದರ್ಶನವನ್ನು ಮಾಡುವುದರಿಂದ ಲಭಿಸುವ ಪುಣ್ಯವೇ ಚಾತುರ್ಮಾಸ್ಯದಲ್ಲಿ ಒಂದು ದಿವಸದ ದರ್ಶನಮಾತ್ರದಿಂದ ಲಭಿಸುವುದು.

೧೨. ಶ್ರೀ ಪುರುಷೋತ್ತಮ ಕ್ಷೇತ್ರದಲ್ಲಿ ಚಾತುರ್ಮಾಸ್ಯದ ನಿವಾಸದಿಂದ ದಿನದಿನಕ್ಕೂ ಸಕಲಕ್ಷೇತ್ರಗಳ ವಾಸದಿಂದುಂಟಾಗುವ ಮಹಾಪುಣ್ಯವು ಲಭಿಸು ವುದು. ಇಲ್ಲಿ ವರ್ಷಾಕಾಲದಲ್ಲಿ ವಾಸಮಾಡುವುದರಿಂದ ಭಗವಂತನು ಅಮಿತ ಫಲವನ್ನು ಕೊಡುವನು.

೧೩. ಸಕಲಪಾಪಕಾರ್ಯಗಳಲ್ಲಿಯೂ ಪ್ರಸಕ್ತನಾಗಿದ್ದರೂ, ಸಮಸ್ತ ಸದಾ ಚಾರಗಳಿಂದ ವರ್ಜಿತನಾಗಿದ್ದರೂ, ಸಕಲ ಸದ್ಧರ್ಮಗಳಿಂದ ವಿಹೀನನಾಗಿದ್ದರೂ ಮಾನವನು ಪುರುಷೋತ್ತಮಕ್ಷೇತ್ರದಲ್ಲಿ ವಾಸಮಾಡಬೇಕು.

೧೪–೧೫. ಎಂತಹ ಪಾಪಿಯಾದ ಮಾನವನಾದರೂ ಒಂದು ಸಲವಾದರೂ ಈ ಕ್ಷೇತ್ರದಲ್ಲಿ ಚಾತುರ್ಮಾಸ್ಯವ್ರತವನ್ನು ಮಾಡುವನೊ, ಅವನು ಸಕಲ ಪಾತಕಗಳನ್ನೂ ಕಳೆದುಕೊಂಡು ಬಾಹ್ಯಾಭ್ಯಂತರಗಳಲ್ಲಿ ನಿರ್ಮಲನಾಗಿ ನರಸಿಂಹ ದೇವನ ಅನುಗ್ರಹದಿಂದ ವೈಕುಂಠದಲ್ಲಿ ವಾಸಮಾಡಲು ಹೊರಟುಹೋಗು ವನು.

೧೬. ಆದಕಾರಣ ಮಹಾವಿಷ್ಣುವಿನ ಶಯನಕಾಲವೆಂದು ಪ್ರಸಿದ್ಧವಾದ ಈ ನಾಲ್ಕು ತಿಂಗಳುಗಳಲ್ಲಿ ಪ್ರತಿಯೊಬ್ಬ ಮನುಷ್ಯನೂ ಸರ್ವಪ್ರಕಾರದಿಂದಲೂ ಪುರುಷೋತ್ತಮಕ್ಷೇತ್ರದಲ್ಲಿ ವಾಸಮಾಡಬೇಕು.

**ಕುರ್ಯಾದನ್ಯನ್ನ ವಾ ಕುರ್ಯಾಜ್ಜನ್ಮಸಾಫಲ್ಯಮೃಚ್ಛತಿ ॥ ೧೭ ॥**
**ಆಷಾಢಶುಕ್ಲೈಕಾದಶ್ಯಾಂ ಕುರ್ಯಾತ್ಸ್ವಾಪಮಹೋತ್ಸವಂ ।**
**ಮಂಡಪಂ ರಚಯೇತ್ತತ್ರ ಶಯನಾಗಾರಮುತ್ತಮಂ ॥ ೧೮ ॥**
**ದೇವಸ್ಯ ಪುರತಃ ಶಯ್ಯಾಂ ರತ್ನಪಲ್ಯಂಕಿಕೋಪರಿ ।**
**ಸ್ವಾಸ್ತೀರ್ಯೋಪಧಾನಾಂ ತು ಮೃದುಚೀನೋತ್ತರಚ್ಛದಾಂ ॥೧೯॥**
**ಕರ್ಪೂರಧೂಲಿವಿಕ್ಷಿಪ್ತಾಂ ಸಾಧುಚಂದ್ರಾತಪಾಂ ಶುಭಾಂ ।**
**ಸರ್ವತೋ ವೇಷ್ಟಿತಾಂ ಛಿದ್ರರಹಿತಾಂ ಚಂದನೋಕ್ಷಿತಾಂ ॥ ೨೦ ॥**
**ಸಾಧುದ್ವಾರಾಂ ಸಮಾಂ ಸ್ನಿಗ್ಧಾಂ ನಾನಾಚಿತ್ರೋಪಶೋಭಿತಾಂ ।**
**ಏಕಂ ಸ್ವಾಪಗೃಹಂ ಕೃತ್ವಾ ನಿಶೀಥೇ ಪ್ರತಿಮಾತ್ರಯಂ ॥ ೨೧ ॥**
**ಸೌವರ್ಣಂ ರಾಜತಂ ವಾಪಿ ರೀತಿಜಂ ದಾರ್ಷದಂ ತಥಾ ।**
**ಯಥಾಶ್ರದ್ಧಂ ಪ್ರಕುರ್ವೀತ ಪ್ರಶಸ್ತಂ ಚೋತ್ತರೋತ್ತರಂ ॥ ೨೨ ॥**

---

೧೭. ಆ ಮನುಷ್ಯನು ಇತರ ಸಾಧನಗಳನ್ನು ಮಾಡಲಿ, ಮಾಡದಿರಲಿ, ಆತನ ಜನ್ಮವು ಸಾಫಲ್ಯವನ್ನು ಪಡೆಯುವುದು.

೧೮. ಆಷಾಢಮಾಸದ ಶುಕ್ಲೈಕಾದಶಿಯ ದಿನದಲ್ಲಿ ಪರಮಾತ್ಮನಿಗೆ ಶಯನಮಹೋತ್ಸವವನ್ನು ಮಾಡಿಸಬೇಕು. ಶಯನಮಂದಿರಕ್ಕಾಗಿ ಸರ್ವೋತ್ತಮವಾದ ಮಂಟಪವೊಂದನ್ನು ನಿರ್ಮಾಣಮಾಡಬೇಕು.

೧೯. ಬಳಿಕ ದೇವದೇವನ ಮುಂಗಡೆಯಲ್ಲಿ ನವರತ್ನಖಚಿತವಾದ ಮಂಚದ ಮೇಲೆ ತಲೆದಿಂಬುಗಳಿಂದ ಕೂಡಿ ಮೃದುವಾದ ಚೀನಾಂಬರದ ಹೊದಿಕೆಯುಳ್ಳ ಹಾಸಿಗೆಯೊಂದನ್ನು ಚೆನ್ನಾಗಿ ಹರಡಿರಬೇಕು.

೨೦. ಆ ಹಾಸಿಗೆಯು ಪಚ್ಚಕರ್ಪೂರದ ಧೂಳಿನಿಂದ ಧೂಸರಿತವಾಗಿ, ಪ್ರಶಾಂತನಾದ ಚಂದ್ರನ ಬೆಳದಿಂಗಳಿನಂತೆ ಶುಭ್ರವಾಗಿ, ಸುತ್ತಲೂ ಕಟ್ಟಿದ ಪರದೆಯಿಂದ ಕೂಡಿದುದಾಗಿ, ಛಿದ್ರರಹಿತವೂ ಚಂದನಸಿಕ್ತವೂ ಆಗಿರಬೇಕು.

೨೧. ಸುಲಭವಾದ ಪ್ರವೇಶಮಾರ್ಗವುಳ್ಳದ್ದಾಗಿ ಸಮವೂ, ಮನೋಹರವೂ, ಅನೇಕ ಚಿತ್ರಗಳಿಂದಲಂಕೃತವೂ ಆದ ಒಂದು ಶಯನಮಂದಿರವನ್ನು ಸಿದ್ಧಗೊಳಿಸಿ ಆ ಏಕಾದಶಿಯ ರಾತ್ರಿಯಲ್ಲಿ ಶ್ರೀ ಕೃಷ್ಣ, ಬಲರಾಮ, ಸುಭದ್ರೆಯರ ಮೂರು ವಿಗ್ರಹಗಳನ್ನು ಮಾಡಿಸಬೇಕು.

೨೨. ಅವುಗಳನ್ನು ತನ್ನ ಶ್ರದ್ಧಾನುಕೂಲ್ಯಕ್ಕನುಗುಣವಾಗಿ ಚಿನ್ನದಿಂದ್ಲಾಗಲಿ, ಬೆಳ್ಳಿಯಿಂದಾಗಲಿ, ಹಿತ್ತಾಳೆಯಿಂದಾಗಲಿ, ಕಲ್ಲಿನಿಂದಾಗಲಿ ಮಾಡಿಸಬೇಕು. ಇವುಗಳಲ್ಲಿ ಕಡೆಯದಕ್ಕಿಂತ ಮೊದಲನೆಯದು ಒಂದೊಂದೂ ಉತ್ತಮವೆನಿಸಿರುವುದು. ಕಲ್ಲಿಗಿಂತ ಹಿತ್ತಾಳೆಯೂ, ಅದಕ್ಕಿಂತ ಬೆಳ್ಳಿಯೂ, ಅದಕ್ಕಿಂತ ಚಿನ್ನವೂ ಪ್ರಶಸ್ತವೆಂದು ತಿಳಿಯಬೇಕು.

ತತ್ತ್ರಯಾಣಾಂ ಸುರಾಣಾಂ ವೈ ಪಾದಮೂಲೇ ಯಥಾ ತಥಂ ।
ನಿಧಾಯ ಪೂಜಯೇದ್ದೇವಾಂಸ್ತಚ್ಛೇಷಂ ತೇಷು ನಿಕ್ಷಿಪೇತ್ ॥ ೨೩ ॥
ಪೂಜಾಂತೇ ಭಾವಯೇದ್ದೇವಂ ತೇಷಾಂ ಕೃಷ್ಣಾದಿಭಿಃ ಸಹ ।
ಏಹ್ಯೇಹಿ ಭಗವನ್ ದೇವ ಸರ್ವಲೋಕೈಕಜೀವನ ॥ ೨೪ ॥
ಸ್ವಾಪಾರ್ಥಂ ಚತುರೋ ಮಾಸಾನ್ಸರ್ವಕಲ್ಯಾಣವೃದ್ಧಯೇ ।
ಇತಿ ಸಂಪ್ರಾರ್ಥ್ಯ ದೇವೇಶಾಂಸ್ತದಂಗಾತ್ತತ್ಸ್ರಜಾಂ ತ್ರಯಂ ॥ ೨೫ ॥
ಪ್ರತ್ಯರ್ಚಾಸು ವಿನಿಕ್ಷಿಪ್ಯ ಮಾಂಗಲ್ಯಸ್ತುತಿಗೀತಿಭಿಃ ।
ನಯೇಚ್ಛಯ್ಯಾಗೃಹದ್ವಾರಂ ವಾಸಯೇದ್ಘಟಿಕಾತ್ರಯೇ ।
ಪಂಚಾಮೃತೈಃ ಸ್ನಾಪಯೇತ್ತಾನ್ ಪೃಥಕ್ಪಲಶತಾಧಿಕೈಃ ॥ ೨೬ ॥
ಸುಗಂಧಚಂದನೈರ್ಲಿಪ್ತ್ವಾ ವಸ್ತ್ರಾಲಂಕರಣಾದಿಭಿಃ ।
ಪೂಜಯಿತ್ವಾ ಯಥಾನ್ಯಾಯಂ ಪ್ರಾಂಜಲಿರ್ಮಂತ್ರಮುಚ್ಚರೇತ್ ॥ ೨೭ ॥
ಜಗದ್ವಂದ್ಯ ಜಗನ್ನಾಥ ಜಗತ್ತ್ರಾಣ ಪರಾಯಣ ।

---

೨೩. ಆ ಮೂರು ಪ್ರತಿಮೆಗಳನ್ನೂ ದೇವಾಲಯದಲ್ಲಿರುವ ದಾರುಮಯ ಮೂರ್ತಿಗಳ ಪಾದಪ್ರದೇಶದಲ್ಲಿಟ್ಟು ಕ್ರಮವಾಗಿ ಪೂಜೆಯನ್ನುಮಾಡಿ ನಿರ್ಮಾಲ್ಯವನ್ನು ಆ ಪ್ರತಿಮೆಗಳಿಗೆ ಅಲಂಕರಿಸಬೇಕು.

೨೪–೨೭. ಇಂತು ಪೂಜೆಯನ್ನು ಸಮಗ್ರವಾಗಿ ನೆರವೇರಿಸಿ ಆ ಪ್ರತಿಮೆ ಗಳಲ್ಲಿ ಶ್ರೀ ಕೃಷ್ಣಾದಿಗಳ ಸಾನ್ನಿಧ್ಯವನ್ನು ಚಿಂತನೆ ಮಾಡಬೇಕು. "ಷಡ್ಗು ಣೈಶ್ವರ್ಯಪೂರಿತನಾದ ದೇವೋತ್ತಮನೆ! ಸಕಲಲೋಕಗಳಿಗೂ ಪ್ರಾಣಸ್ವರೂಪ ನಾದವನೆ! ನಮಗೆ ಸಮಸ್ತ ಕಲ್ಯಾಣಗಳನ್ನು ಅಭಿವೃದ್ಧಿಗೊಳಿಸಲು ನಾಲ್ಕು ತಿಂಗಳವರೆವಿಗೂ ಶಯನಮಾಡುವವನಾಗಿ ಈ ಪ್ರತಿಮೆಯಲ್ಲಿ ನಿನ್ನ ಸಾನ್ನಿಧ್ಯ ವನ್ನುಂಟುಮಾಡು." ಇಂತೆಂದು ಮೂರು ದೇವತೆಗಳನ್ನೂ ಪ್ರಾರ್ಥನೆಮಾಡಿ ಅವರ ದಾರುವಿಗ್ರಹಗಳಿಂದ ಮೂರು ಪುಷ್ಪಹಾರಗಳನ್ನು ತೆಗೆದು ಪ್ರತಿಮೆಗಳಿ ಗಲಂಕರಿಸಿ ಮಂಗಳವಾದ್ಯಗಳಿಂದಲೂ, ಸ್ತೋತ್ರಗಳಿಂದಲೂ, ಸಂಗೀತಸೇವೆ ಗಳಿಂದಲೂ ಆ ಪ್ರತಿಮೆಗಳನ್ನು ಶಯನಮಂದಿರದ ದ್ವಾರದ ಬಳಿಗೆ ಬಿಜಯ ಮಾಡಿಸಬೇಕು. ಅಲ್ಲಿ ಮೂರು ಘಳಿಗೆಗಳವರೆವಿಗೂ ಅವುಗಳನ್ನು ಕೂಡಿಸಬೇಕು. ಒಂದೊಂದು ವಿಗ್ರಹವನ್ನೂ ನೂರು ಪಲಕ್ಕೆ ಮೀರಿದ ಪಂಚಾಮೃತದಿಂದ ಸ್ನಾನ ಮಾಡಿಸಬೇಕು. ದಿವ್ಯಗಂಧ, ಚಂದನ, ಮುಂತಾದುವುಗಳಿಂದ ಅನುಲೇಪನೆ ಮಾಡಿ ವಸ್ತ್ರಗಳಿಂದಲೂ ಆಭರಣಗಳಿಂದಲೂ ಸಮಗ್ರವಾದ ಪೂಜೆಯನ್ನು ಮುಗಿಸಿ ಕೈಗಳನ್ನು ಮುಗಿದು ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು.

೨೮–೨೯. "ಲೋಕವಂದ್ಯನೆ! ಜಗದೀಶ್ವರನೆ! ಸಕಲಲೋಕಗಳ ರಕ್ಷಣೆ

**ಹಿತಾಯ ಜಗತಾಮೀಶ ಚಾತುರ್ಮಾಸಾನ್ ಘನಾಗಮಾನ್ । ॥ ೨೮ ॥**
**ಸುಪ್ತ್ವಾ ಪ್ರಶಮಯಾರಿಷ್ಟಾನ್ಶಕ್ರೇಣ ಸಹ ಪೂಜಿತಃ ।**
**ಏಹ್ಯೇಹಿ ಶಯನಾಗಾರಂ ಸುಖಮತ್ರ ಸ್ವಪ ಪ್ರಭೋ ॥ ೨೯ ॥**
**ಇತಿ ಸಂಪ್ರಾರ್ಥ್ಯ ದೇವೇಶಂ ಸ್ವಾಪಯೇತ್ಪುರುಷೋತ್ತಮಂ ॥ ೩೦ ॥**
**ಸುದೃಢಂ ಬಂಧಯೇದ್ವಾರಂ ವಿಷ್ಣೋಃ ಶಯನವೇಶ್ಮನಃ ।**
**ಸ್ವಾಪಯಿತ್ವಾ ಜಗನ್ನಾಥಂ ಲಭತೇ ಸುಖಮುತ್ತಮಂ ॥ ೩೧ ॥**
**ವಾರ್ಷಿಕಾಂಶ್ಚತುರೋಮಾಸಾನ್ ಪ್ರಸುಪ್ತೇ ವೈ ಜನಾರ್ದನೇ ।**
**ವ್ರತೈರನೇಕೈರ್ನಿಯಮೈರ್ಮಾಸಾನ್ವೈ ಚತುರಃ ಕ್ಷಿಪೇತ್ ॥ ೩೨ ॥**
**ಕಲ್ಪಸ್ಥಾಯೀ ವಿಷ್ಣುಲೋಕೇ ನರೋ ಭಕ್ತೋ ಭವೇಧ್ರುವಂ ।**
**ನಿಯಮವ್ರತಾನಿ ಗದತಃ ಶೃಣುಧ್ವಂ ಮುನಯೋ ಮಮ ॥ ೩೩ ॥**
**ಮಂಚಖಟ್ವಾದಿಶಯನಂ ವರ್ಜಯೇದ್ಭಕ್ತಿಮಾನ್ನರಃ ।**
**ಅನೃತೌ ನವ್ರಜೇದ್ಭಾರ್ಯಾಂ ಮಾಂಸಂ ಮಧು ಪರಾದನಂ ॥ ೩೪ ॥**

---

ಯಲ್ಲಿ ತತ್ಪರನಾದವನೆ! ಹದಿನಾಲ್ಕು ಲೋಕಗಳಿಗೆ ಹಿತವನ್ನುಂಟುಮಾಡುವವನಾಗಿ ನೀನು ಮೇಘಗಳು ಒಟ್ಟುಗೂಡಿ ಮಳೆಯನ್ನು ಸುರಿಸುವ ಈ ನಾಲ್ಕು ಮಾಸಗಳಲ್ಲಿಯೂ ಶಯನವನ್ನು ಮಾಡಿ ಮಹೇಂದ್ರನೊಡನೆ ನಮ್ಮ ಪೂಜೆಯನ್ನು ಕೈಕೊಂಡು ನಮ್ಮ ದುಃಖಗಳೆಲ್ಲವನ್ನೂ ಶಮನಮಾಡು. ಸ್ವಾಮಿಯೆ! ಇನ್ನು ನಿನ್ನ ಶಯನಮಂದಿರವನ್ನು ಪ್ರವೇಶಿಸಿ ಅಲ್ಲಿ ಸುಖವಾಗಿ ನಿದ್ರೆಯನ್ನು ಮಾಡುವವನಾಗು.''

೩೦-೩೧. ಇಂತೆಂದು ಪ್ರಾರ್ಥನೆಮಾಡಿ ದೇವೇಶ್ವರನಾದ ಪುರುಷೋತ್ತಮನನ್ನು ಹಾಸಿಗೆಯಮೇಲೆ ಮಲಗಿಸಬೇಕು. ಬಳಿಕ ಮಹಾವಿಷ್ಣುವಿನ ಶಯನಾಗಾರದ ಬಾಗಿಲುಗಳನ್ನು ದೃಢವಾಗಿ ಬಂಧಿಸಬೇಕು. ಈ ಪ್ರಕಾರದಿಂದ ಜಗನ್ನಾಥನ ಶಯನೋತ್ಸವವನ್ನು ನಡೆಸಲು ಮನುಷ್ಯನು ಉತ್ತಮವಾದ ಸುಖಸಂಪದಗಳನ್ನು ಪಡೆಯುವನು.

೩೨. ಶ್ರೀಮನ್ನಾರಾಯಣನು ಶಯನಮಾಡುವ ವರ್ಷಾಕಾಲದ ನಾಲ್ಕು ಮಾಸಗಳಲ್ಲಿಯೂ, ಪ್ರಾಜ್ಞನಾದ ಭಗವದ್ಭಕ್ತನು ಬಹುವಿಧಗಳಾದ ವ್ರತಗಳಿಂದಲೂ, ಉಪವಾಸಾದಿ ನಿಯಮಗಳಿಂದಲೂ ಕಾಲವನ್ನು ಕಳೆಯಬೇಕು.

೩೩. ಆ ಮಾನವನು ಭಕ್ತೋತ್ತಮನಾಗಿ ಬ್ರಹ್ಮಕಲ್ಪಾಂತ್ಯದವರೆವಿಗೂ ವಿಷ್ಣುಲೋಕದಲ್ಲಿ ವಾಸಮಾಡುವನು. ಇದು ನಿಶ್ಚಯವು. ಎಲೈ ಮಹಾಮುನಿಗಳಿರಾ! ಆ ಕಾಲದಲ್ಲಿ ಆಚರಿಸಬೇಕಾದ ನಿಯಮಗಳನ್ನೂ ವ್ರತಗಳನ್ನೂ ನಿರೂಪಿಸುವೆನು. ಶ್ರದ್ಧೆಯಿಂದ ಕೇಳಿರಿ.

೩೪. ಭಕ್ತಿಯುಕ್ತನಾದ ಮಾನವನು ಆ ಕಾಲದಲ್ಲಿ ಮಂಚ, ಖಟ್ವೆ, ಮುಂತಾದ ಉತ್ತಮಾಸನಗಳಲ್ಲಿ ಮಲಗುವುದನ್ನು ತ್ಯಜಿಸಬೇಕು. ಋತು

ಪಟೋಲಂ ಮೂಲಕಂ ಚೈವ ವಾರ್ತ್ತಾಕಂ ಚ ನ ಭಕ್ಷಯೇತ್ ।
ಅಭಕ್ಷ್ಯಂ ವರ್ಜಯೇದ್ದೂರಾನ್ಮಸೂರಂ ಸಿತಸರ್ಷಪಂ ॥ ೩೫ ॥
ರಾಜಮಾಷಾನ್ ಕುಲತ್ಥಾಂಶ್ಚ ಅಶುಧಾನ್ಯಂ ಚ ಸಂತ್ಯಜೇತ್ ।
ಶಾಕಂ ದಧಿಪಯೋಮಾಷಾನ್ಚ್ಛ್ರಾವಣಾದೌ ಕ್ರಮಾದಿಮಾನ್ ॥೩೬॥
ರಾಜಗೋಪಯತೀನ್ ತ್ಯಕ್ತ್ವಾ ನಾರೋಹೇಚ್ಚರ್ಮಪಾದುಕೇ ।
ವಾರ್ಷಿಕಾಂಶ್ಚತುರೋ ಮಾಸಾನ್ ವ್ರತೇನ ನ ನಯೇದ್ಯದಿ ।
ತಸ್ಯ ಪಾಪಸ್ಯ ಶಾಂತ್ಯರ್ಥಂ ಕಾರ್ತಿಕೇ ವಾ ವ್ರತೀ ಭವೇತ್ ॥ ೩೭ ॥
ನಮಃ ಕೃಷ್ಣಾಯ ಹರಯೇ ಕೇಶವಾಯ ನಮೋನಮಃ ।
ನಮೋಽಸ್ತು ನಾರಸಿಂಹಾಯ ವಿಷ್ಣವೇ ಪಾಪಜಿಷ್ಣವೇ ॥ ೩೮ ॥
ಸಾಯಂ ಪ್ರಾತರ್ದಿವಾಮಧ್ಯೇ ಕರ್ಮಾಂತೇಷು ಚ ಯೋಜಯೇತ್ ॥

---

ಕಾಲವಲ್ಲದ ಸಮಯದಲ್ಲಿ ಪತ್ನೀ ಸಂಪರ್ಕವನ್ನೂ, ಮಾಂಸ, ಜೇನುತುಪ್ಪ, ಪರಾನ್ನಗಳ ಭೋಜನವನ್ನೂ ಬಿಟ್ಟುಬಿಡಬೇಕು.

೩೫. ಪಡವಲಕಾಯಿ, ಮೂಲಂಗಿ, ಬದನೆಯ ಕಾಯಿಗಳನ್ನು ಆ ಸಮಯದಲ್ಲಿ ಸೇವಿಸಬಾರದು. ಅಭಕ್ಷ್ಯ ಪದಾರ್ಥಗಳು, ಕಡಲೆ, ಬಿಳಿಯ ಸಾಸುವೆಗಳನ್ನು ದೂರದಿಂದಲೇ ತ್ಯಾಗಮಾಡಬೇಕು.

೩೬–೩೭. ರಾಜಮಾಷ (ಉದ್ದು,) ಹುರುಳಿ, ಕಾರು ಧಾನ್ಯಗಳು—ಇವುಗಳನ್ನು ಸೇವಿಸಬಾರದು. ಮಹಾರಾಜರು, ಗೋಪಾಲಕರು ಮತ್ತು ಸನ್ಯಾಸಿಗಳನ್ನುಳಿದ ಎಲ್ಲರೂ ಶ್ರಾವಣವೇ ಮೊದಲಾದ ನಾಲ್ಕು ತಿಂಗಳುಗಳಲ್ಲಿಯೂ ಕ್ರಮವಾಗಿ ಸೊಪ್ಪುಗಳು, ಮೊಸರು, ಹಾಲು ಮತ್ತು ಉದ್ದುಗಳನ್ನು ಭೋಜನದಲ್ಲಿ ವರ್ಜಿಸಬೇಕು. ಆ ಸಮಯದಲ್ಲಿ ಚರ್ಮದ ಪಾದರಕ್ಷೆಗಳನ್ನು ಉಪಯೋಗಿಸಬಾರದು. ವರ್ಷಾಕಾಲದ ನಾಲ್ಕು ತಿಂಗಳುಗಳನ್ನು ಕಾರಣಾಂತರಗಳಿಂದಾಗಲಿ ಬುದ್ಧಿಪೂರ್ವಕವಾಗಿಯಾಗಲಿ ವ್ರತೋಪವಾಸಾದಿಗಳಿಂದ ಕಳೆಯದಿದ್ದರೆ, ಆ ಪಾಪದ ಶಾಂತಿಗಾಗಿ ಕಾರ್ತಿಕದ ಒಂದು ಮಾಸವನ್ನಾದರೂ ಸಮಸ್ತನಿಯಮಸಹಿತನಾಗಿ ಕಳೆಯಬೇಕು.

೩೮–೩೯. "ಸಕಲ ಜೀವರನ್ನೂ ತನ್ನ ಕಡೆಗೆ ಸೆಳೆದುಕೊಳ್ಳುವವನೂ, ಅವರ ಪಾತಕಗಳನ್ನು ಪರಿಹರಿಸುವವನೂ, ಆದ ಕೇಶವನಾದ ನಿನಗೆ ನಮಸ್ಕಾರವು! ನರಸಿಂಹರೂಪನೂ, ಸರ್ವವ್ಯಾಪಕನೂ, ಪಾಪಗಳನ್ನು ಜಯಿಸಿದವನೂ ಆದ ನಿನಗೆ ನಮಸ್ಕಾರವಿರಲಿ!" ಎಂಬ ಈ ಮಂತ್ರವನ್ನು ನಿತ್ಯವೂ ಸಾಯಂಕಾಲ, ಪ್ರಾತಃಕಾಲ, ಮಧ್ಯಾಹ್ನಗಳೆಂಬ ತ್ರಿಸಂಧ್ಯೆಗಳಲ್ಲಿಯೂ, ಪ್ರತಿಯೊಂದು ಕೆಲಸದ ಸಮಾಪ್ತಿಯಲ್ಲಿಯೂ ಜಪಿಸುತ್ತಿರಬೇಕು.

ತಸ್ಯ ಪಾಪಾನಿ ಘೋರಾಣಿ ಚಿತಾನಿ ಬಹುಜನ್ಮಸು ।
ಯದ್ವಹತ್ಯೇವ ಸರ್ವಾಣಿ ತೂಲರಾಶಿಮಿವಾನಲಃ ॥ ೪೦ ॥
ಏಕಾಹಾರೋ ಯತಾಹಾರೋ ವಿಷ್ಣುನಿರ್ಮಾಲ್ಯಭೋಜನಃ ।
ಆಷಾಢೀಮವಧಿಂ ಕೃತ್ವಾ ಕಾರ್ತಿಕ್ಯವಧಿ ಯೋ ಭವೇತ್ ।
ನಕ್ತಭೋಜೀ ಭವೇದ್ವಾಪಿ ಸ್ವರ್ಗಸ್ತಸ್ಯಾಲ್ಪಕಂ ಪದಂ ॥ ೪೧ ॥
ತೈಲಾಭ್ಯಂಗಂ ದಿವಾಸ್ವಾಪಂ ಮೃಷಾವಾದಂ ಚ ವರ್ಜಯೇತ್ ।
ಆಷಾಢಶುಕ್ಲೈಕಾದಶ್ಯಾಂ ಸಂಕ್ರಾಂತೌ ಕರ್ಕಟಸ್ಯ ವಾ ॥ ೪೨ ॥
ಆಷಾಢ್ಯಾಂ ವಾ ನರೋ ಭಕ್ತ್ಯಾ ಗೃಹ್ಣೀಯಾನ್ನಿಯಮಂ ವ್ರತೀ ।
ಸರ್ವಪಾಪಹರಂ ದೇವಂ ಪ್ರಪೂಜ್ಯ ಮಧುಸೂದನಂ ॥ ೪೩ ॥
ತದಗ್ರೇ ಪ್ರತಿಸಂಕಲ್ಪ್ಯ ವ್ರತಾರ್ಚನಜಪಾದಿಕಂ ।
ಪ್ರಾರ್ಥಯೇತ್ಪರಮಾನಂದಂ ಕೃತಾಂಜಲಿಪುಟೋ ವ್ರತೀ ॥ ೪೪ ॥

---

೪೦. ಈ ಮಂತ್ರರಾಜವು ಭಕ್ತನು ಅನೇಕ ಜನ್ಮಗಳಲ್ಲಿ ಸಂಚಯನಮಾಡಿರುವ ಘೋರಗಳಾದ ಸಮಸ್ತ ಪಾತಕಗಳನ್ನೂ ಹತ್ತಿಯ ಬೆಟ್ಟದಲ್ಲಿ ಬಿದ್ದ ಬೆಂಕಿಯ ಕಿಡಿಯಂತೆ ಕ್ಷಣಮಾತ್ರದಲ್ಲಿಯೇ ನಿರ್ಮೂಲಗೊಳಿಸುವುದು.

೪೧. ಇಂತು ಆಷಾಢಮಾಸದ ಶುಕ್ಲೈಕಾದಶಿಯು ಮೊದಲುಗೊಂಡು ಕಾರ್ತಿಕ ಶುದ್ಧ ದ್ವಾದಶಿಯವರೆವಿಗೂ ದಿವಸಕ್ಕೆ ಒಂದು ಆಹಾರವನ್ನು ಮಾತ್ರ ಮಿತವಾಗಿ ತೆಗೆದುಕೊಳ್ಳಬೇಕು. ಮತ್ತು ವಿಷ್ಣುವಿನ ಪೂಜೆಯನ್ನುಮಾಡಿ ಆತನಿಗೆ ನಿವೇದಿಸಿದ ಪ್ರಸಾದವನ್ನು ಮಾತ್ರ ಸ್ವೀಕರಿಸಬೇಕು. ಇಂತು ಯಾವನು ನಿಯಮವನ್ನನುಸರಿಸುವನೊ, ಅಥವಾ ಯಾವನು ರಾತ್ರಿಯಲ್ಲಿ ಮಾತ್ರ ಭೋಜನವನ್ನು ಮಾಡುವನೊ, ಅವನಿಗೆ ಸ್ವರ್ಗನಿವಾಸವೂ ಸಹ ಅತ್ಯಲ್ಪ ಫಲವೆಂದೇ ತಿಳಿಯಬೇಕು.

೪೨–೪೪. ಆ ಸಮಯದಲ್ಲಿ ತೈಲಾಭ್ಯಂಜನವನ್ನೂ, ಹಗಲು ನಿದ್ರೆಯನ್ನೂ, ವ್ಯರ್ಥಕಾಲಕ್ಷೇಪವನ್ನೂ, ಸರ್ವಥಾ ಮಾಡಬಾರದು. ಆಷಾಢಮಾಸದ ಶುಕ್ಲೈಕಾದಶಿಯ ದಿನದಲ್ಲಾಗಲಿ, ಕಟಕಸಂಕ್ರಾಂತಿಯ ದಿನದಲ್ಲಾಗಲಿ, ಆಷಾಢಮಾಸದ ಹುಣ್ಣಿಮೆಯಲ್ಲಾಗಲಿ ವ್ರತಾಭಿಲಾಷೆಯುಳ್ಳ ನರನು ಈ ನಿಯಮವನ್ನು ಸ್ವೀಕರಿಸಬೇಕು. ಸಕಲಪಾಪಗಳನ್ನು ಪರಿಹರಿಸುವ ದೇವನಾದ ಮಧುಸೂದನಸ್ವಾಮಿಯನ್ನು ವಿಧ್ಯುಕ್ತರೀತಿಯಿಂದ ಪೂಜಿಸಿ, ಆತನ ಇದಿರಿನಲ್ಲಿ ವ್ರತ, ಪೂಜೆ, ಜಪ ಮುಂತಾದುವುಗಳನ್ನು ಮಾಡುವುದಾಗಿ ದೃಢಸಂಕಲ್ಪವನ್ನುಮಾಡಿ ಪರಮಾನಂದವಿಗ್ರಹನಾದ ಆತನನ್ನು ಕುರಿತು ಕೈಗಳನ್ನು ಮುಗಿದುಕೊಂಡು ಭಕ್ತನಾದವನು ಪ್ರಾರ್ಥನೆಯನ್ನು ಮಾಡಬೇಕು.

ಚಾತುರ್ಮಾಸ್ಯವ್ರತಂ ದೇವ ಗೃಹೀತಂ ತ್ವತ್ಪ್ರಸಾದತಃ ।
ತವ ಪ್ರಸಾದಾನ್ನಿರ್ವಿಘ್ನಂ ಸಿದ್ಧಿಮಾಯಾತು ಕೇಶವ ॥ ೪೫ ॥
ವ್ರತೇಽಸ್ಮಿನ್ ಯದ್ಯಸಂಪೂರ್ಣೇ ಪರಲೋಕಗತಿರ್ಭವೇತ್ ।
ತನ್ಮೇ ಭವತು ಸಂಪೂರ್ಣಂ ತ್ವತ್ಪ್ರಸಾದಾದಧೋಕ್ಷಜ ॥ ೪೬ ॥
ಇತಿ ಸಂಪ್ರಾರ್ಥ್ಯ ದೇವೇಶಂ ಪೂರ್ವೋಕ್ತನಿಯಮೇ ಸ್ಥಿತಃ ।
ಯಾಪಯೇಚ್ಚತುರೋ ಮಾಸಾನ್ವಿಷ್ಣ್ವರ್ಪಿತಮತಿರ್ವ್ರತೀ ॥ ೪೭ ॥
ಪಾರಣಂ ಪ್ರತಿಮಾಸಾಂತೇ ಪ್ರೀತ್ಯೈ ಕೃಷ್ಣಸ್ಯ ಕಾರಯೇತ್ ॥ ೪೮ ॥
ಮಿಷ್ಟಾನ್ನಂ ಭೋಜಯೇದ್ವಿಪ್ರಾನ್ಪೂಜಯಿತ್ವಾ ಜಗತ್ಪತಿಂ ।
ಅಸಮರ್ಥಸ್ತು ಕಾರ್ತಿಕ್ಯಾಂ ವರಯೇದ್ವ್ರತಮುತ್ತಮಂ ॥ ೪೯ ॥
ತಸ್ಯಾಂ ಪೂಜ್ಯ ಜಗನ್ನಾಥಂ ವಹ್ನಿಸ್ಥಂ ತರ್ಪಯೇತ್ಸ್ಥಿತಃ ।
ದ್ವಿಜಾಗ್ರ್ಯಾನ್ಪಾಯಸೈರ್ಮಿಷ್ಟೈರ್ವಿಷ್ಣುಭಕ್ತ್ಯಾ ಪ್ರಪೂಜಯೇತ್ ॥ ೫೦ ॥

---

೪೫. ದೇವದೇವನಾದ ಕೇಶವನೆ! ನಿನ್ನ ಅನುಗ್ರಹದಿಂದ ಈಗ ಚಾತುರ್ಮಾಸ್ಯದ ವ್ರತವನ್ನು ಸ್ವೀಕರಿಸಿರುವೆನು. ನಿನ್ನ ಪ್ರಸಾದದಿಂದಲೇ ಈ ವ್ರತವು ನಿರ್ವಿಘ್ನವಾಗಿ ಪರಿಸಮಾಪ್ತಿಯನ್ನು ಹೊಂದಲಿ.

೪೬. ಎಲೈ ಅಧೋಕ್ಷಜನೆ! ಈ ವ್ರತವು ಕೊನೆಗಾಣದೆ ಅಸಂಪೂರ್ಣವಾಗಿಯೇ ಉಳಿದುಹೋದರೆ ನನಗೆ ಪರಲೋಕನಿವಾಸವು ಮಾತ್ರ ಉಂಟಾಗುವುದು. ಆದುದರಿಂದ ನನ್ನ ಈ ನಿಯಮವು ಸಂಪೂರ್ತಿಯನ್ನು ಹೊಂದುವಂತೆ ಪ್ರಸಾದವನ್ನು ಮಾಡು.

೪೭. ಇಂತೆಂದು ದೇವೇಶ್ವರನಲ್ಲಿ ಪ್ರಾರ್ಥನೆಯನ್ನುಮಾಡಿ ಹಿಂದೆಯೇ ಹೇಳಿದ ನಿಯಮಗಳಲ್ಲಿ ನಿರತನಾಗಿ ವ್ರತವನ್ನು ಮಾಡುವವನು ಮಹಾವಿಷ್ಣುವಿನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿ ಆ ನಾಲ್ಕು ತಿಂಗಳುಗಳ ಕಾಲವನ್ನೂ ಕಳೆಯಬೇಕು.

೪೮. ಪ್ರತಿಯೊಂದು ತಿಂಗಳ ಕೊನೆಯಲ್ಲಿಯೂ ಶ್ರೀ ಕೃಷ್ಣನ ಪ್ರೀತ್ಯರ್ಥವಾಗಿ ಪಾರಣೆಯನ್ನು ಮಾಡಿಸಬೇಕು.

೪೯. ಪಾರಣೆಯ ದಿನಗಳಲ್ಲಿ ಲೋಕೇಶ್ವರನಾದ ಮಹಾವಿಷ್ಣುವನ್ನು ಪೂಜಿಸಿ ಭಕ್ಷ್ಯಭೋಜ್ಯಸಹಿತವಾದ ಮೃಷ್ಟಾನ್ನದಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಪ್ರತಿಮಾಸದಲ್ಲಿಯೂ ಈ ಕಾರ್ಯವನ್ನು ಮಾಡಲು ಅಸಮರ್ಥನಾದರೆ ಕೃತ್ತಿಕಾಪೌರ್ಣಿಮಿಯ ದಿನದಲ್ಲಿಯಾದರೂ ಈ ಉತ್ತಮವ್ರತದ ಪಾರಣೆಯನ್ನು ನಡೆಸಬೇಕು.

೫೦. ಆ ದಿವಸದಲ್ಲಿ ಜಗನ್ನಾಥನನ್ನು ಪೂಜಿಸಿ ಅಗ್ನಿಯಲ್ಲಿ ಅಂತರ್ಯಾಮಿಯಾಗಿರುವ ಆತನನ್ನು ಆಹುತಿಗಳಿಂದ ಸಂತೋಷಗೊಳಿಸಬೇಕು. ಬ್ರಾಹ್ಮ

**ಯಥಾ ಶಕ್ತ್ಯಾ ಪ್ರದದ್ಯಾದ್ವೈ ಕನಕಂ ವಸ್ತ್ರಮೇವ ಚ ।**
**ಅಶಕ್ತಃ ಕಾರ್ತಿಕೇ ಮಾಸಿ ವ್ರತಂ ಕುರ್ಯಾತ್ಪುರೋದಿತಂ ॥ ೫೧ ॥**
**ವ್ರತಂ ಚ ವಿವಿಧಂ ವಿಷ್ಣೋಃ ಕೃಚ್ಛ್ರಚಾಂದ್ರಾಯಣಂ ತಥಾ ॥ ೫೨ ॥**
**ಪಯಃಪೀತ್ವಾ ನಯೇದ್ಯಸ್ತು ಶಾಕಾಹಾರೇಣ ವಾ ಪುನಃ ।**
**ಭುಕ್ತ್ವಾತ್ರ ವಿಪುಲಾನ್ ಭೋಗಾನ್ಪರಂ ನಿರ್ವಾಣಮೃಚ್ಛತಿ ॥ ೫೩ ॥**
**ತತ್ರಾಪಿ ಚೇದಶಕ್ತಃ ಸ್ಯಾದ್ಭೀಷ್ಮಪಂಚಕಮುತ್ತಮಂ ।**
**ಪ್ರೀತಯೇ ದೇವದೇವಸ್ಯ ವನ್ಯವೃತ್ತಿರ್ಭವೇದ್ವ್ರತೀ ॥ ೫೪ ॥**
**ಏತದ್ವ್ರತಂ ಸಮಾಖ್ಯಾತಂ ಭಗವತ್ಪ್ರೀತಿಕಾರಕಂ ।**
**ಸರ್ವಪಾಪಪ್ರಶಮನಂ ವಿಷ್ಣುಲೋಕಗತಿಪ್ರದಂ ।**
**ಧನ್ಯಂ ಯಶಸ್ಯಮಾಯುಷ್ಯಂ ಸರ್ವಕಾಮಪ್ರಸಾದನಂ ॥ ೫೫ ॥**

---

ಣೋತ್ತಮರನ್ನು ಕರೆದು ಅವರಲ್ಲಿ ವಿಷ್ಣುವು ಅಂತರ್ಗತನಾಗಿರುವನೆಂಬ ಭಾವದಿಂದ ಪಾಯಸ, ಮೃಷ್ಟಾನ್ನಾದಿಗಳನ್ನಿತ್ತು ಅವರನ್ನು ಪೂಜಿಸಿ ತೃಪ್ತಿಗೊಳಿಸಬೇಕು.

೫೧. ತನ್ನ ಶಕ್ತ್ಯನುಸಾರವಾಗಿ ಅವರಿಗೆ ಸ್ವರ್ಣವನ್ನೂ, ವಸ್ತ್ರಾಲಂಕಾರಗಳನ್ನೂ ಸಮರ್ಪಿಸಬೇಕು. ಅಶಕ್ತನಾದಲ್ಲಿ ಮೇಲೆ ಹೇಳಿದಂತೆ ಕಾರ್ತಿಕಮಾಸದಲ್ಲಿಯಾದರೂ ವ್ರತವನ್ನು ಮಾಡಬೇಕು.

೫೨. ಮಹಾವಿಷ್ಣುವಿನ ಪ್ರೀತಿಯನ್ನು ಪಡೆಯಲು ಈ ಕಾಲದಲ್ಲಿ ಮಾಡಬೇಕಾದ ಕೃಚ್ಛ್ರ, ಚಂದ್ರಾಯಣಗಳೇ ಮೊದಲಾದ ಅನೇಕ ವ್ರತಗಳಿರುವುವು.

೫೩. ಯಾವ ಮನುಷ್ಯನು ಈ ಚಾತುರ್ಮಾಸ್ಯವನ್ನು ಕೇವಲ ಹಾಲಿನ ಸೇವನೆಯಿಂದಾಗಲಿ, ಶಾಕಾಹಾರದಿಂದಾಗಲಿ ಕಳೆಯುವನೊ, ಅವನು ಈ ಲೋಕದಲ್ಲಿ ಅಪರಿಮಿತಗಳಾದ ಭೋಗಭಾಗ್ಯಗಳನ್ನನುಭವಿಸಿ ವೈರಾಗ್ಯಕ್ಕೆ ಕಾರಣವಾದ ಸಮಾಧಾನಸ್ಥಿತಿಯನ್ನು ಹೊಂದುವನು.

೫೪. ಅದನ್ನು ಮಾಡುವುದಕ್ಕೂ ಶಕ್ಯವಾಗದಿದ್ದರೆ ದೇವದೇವನ ಸಂತೋಷವನ್ನು ಪಡೆಯಲು ಭೀಷ್ಮಪಂಚಕದ (ಕಾರ್ತಿಕ ಶುದ್ಧೈಕಾದಶಿಯ ಮೊದಲು ಪೌರ್ಣಮಿಯವರೆಗಿನ) ಸರ್ವೋತ್ತಮಗಳಾದ ದಿನಗಳಲ್ಲಿಯಾದರೂ ವ್ರತವನ್ನು ಮಾಡುವವನು ಅಪಕ್ವಾಹಾರವನ್ನು ಮಾತ್ರ ಸೇವಿಸಬೇಕು.

೫೫. ಭಗವಂತನ ಪ್ರೀತಿಯನ್ನು ಪಡೆಯಲು ಉತ್ತಮೋಪಾಯವಾದ ಈ ವ್ರತವನ್ನು ನಿಮಗೆ ವಿಸ್ತಾರವಾಗಿ ತಿಳಿಸಿರುವೆನು. ಈ ನಿಯಮವು ಮಾನವನ ಸಕಲಪಾತಕಗಳನ್ನೂ ಶಮನಮಾಡಿ ವೈಕುಂಠಲೋಕವೆಂಬ ಸದ್ಗತಿಯನ್ನು ಸಂಪಾದಿಸಿಕೊಡುವುದು. ಇದೇ ವಿಪುಲೈಶ್ವರ್ಯವನ್ನೂ, ಕೀರ್ತಿಯನ್ನೂ, ದೀರ್ಘಾಯುಷ್ಯವನ್ನೂ ಕೊಟ್ಟು ಎಲ್ಲ ಬಯಕೆಗಳನ್ನೂ ಕೈಗೂಡಿಸುವುದು.

ಮುನಯಃ ಪ್ರೋಕ್ತಮೇತದ್ವೋ ರಹಸ್ಯಂ ಶೃಣುತಾತ್ ಪರಂ ।
ಏತದ್ವ್ರತಾನಿ ಚಾನ್ಯಾನಿ ವ್ರತಾನಿ ಸುಬಹೂನಿ ಚ ॥ ೫೬ ॥
ಭಗವದ್ಭಕ್ತಿಹೀನಾನಾಂ ಜಾನೀಧ್ವಂ ವಿಫಲಾನಿ ವೈ ।
ಫಲಂ ಮಹಾಕ್ರತೂನಾಂ ಯತ್ತೀರ್ಥಾನಾಂ ಫಲಮುತ್ತಮಂ ॥ ೫೭ ॥
ದಾನಾನಾಂ ತಪಸಾಂ ಚೈವ ಸಾತ್ವಿಕಾನಾಂ ಚ ಯತ್ಫಲಂ ।
ಏಕಯಾ ವಿಷ್ಣುಭಕ್ತ್ಯಾ ತತ್ಸಮಗ್ರಂ ಫಲಮಶ್ನುತೇ ॥ ೫೮ ॥
ಯೇ ಪಶ್ಯಂತಿ ಮಹಾತ್ಮಾನಃ ಶಯನೋತ್ಸವಮುತ್ತಮಂ ।
ಮಾತುರ್ಗರ್ಭೇ ನ ಸ್ವಪಂತಿ ಕಾರಯಂತಿ ಚ ಯೇ ಮಹಂ ॥ ೫೯ ॥
ಉತ್ಸವಾಂತೇ ವ್ರತಂ ಚೇದಪ್ರತಿಜ್ಞಾಯ ತದಗ್ರತಃ ।
ಪರ್ಯಾಪ್ತಂ ಪಾರಯಿತ್ವಾ ತು ಬ್ರಹ್ಮಲೋಕೇ ಮಹೀಯತೇ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಶ್ರೀವಿಷ್ಣುಶಯನೋತ್ಸವವರ್ಣನಂ"ನಾಮ ಷಟ್ತ್ರಿಂಶೋಽಧ್ಯಾಯಃ

---

೫೬. ಎಲೈ ಮಹಾಮುನಿಗಳಿರಾ! ಈ ರಹಸ್ಯವಿಷಯವನ್ನು ನಿಮಗೆ ತಿಳಿಸಿರುವೆನು. ಮತ್ತೊಂದು ವಿಷಯವನ್ನು ಕೇಳಿರಿ. ಈ ವ್ರತವಲ್ಲದೆ ಅಸಂಖ್ಯಾತಗಳಾದ ಅನೇಕ ಇತರ ವ್ರತಗಳೂ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುವು.

೫೭–೫೮. ಆದರೆ ಅವುಗಳೆಲ್ಲವೂ ಭಗವಂತನಲ್ಲಿ ಭಕ್ತಿಯಿಲ್ಲದವರಿಗೆ ನಿಷ್ಫಲಗಳೇ ಆಗುವುವು. ಮಹಾಯಜ್ಞಗಳಿಂದ ಯಾವ ಫಲವುಂಟೊ, ಸಕಲ ತೀರ್ಥಗಳ ಸೇವೆಯಿಂದ ಯಾವ ಉತ್ತಮ ಫಲವು ಲಭಿಸುವುದೊ, ಸಾತ್ವಿಕ ಬುದ್ಧಿ ಪೂರ್ವಕವಾಗಿ ಮಾಡಿದ ದಾನಗಳಿಗೂ, ತಪಸ್ಸುಗಳಿಗೂ ಯಾವ ಫಲವು ಲಭಿಸುವುದೊ, ಆ ಸಮಗ್ರ ಫಲಗಳನ್ನೆಲ್ಲವನ್ನೂ ವಿಷ್ಣುಭಕ್ತಿಯೆಂಬ ಒಂದೇ ಉಪಾಯದಿಂದ ಭಕ್ತನು ಪಡೆಯುತ್ತಾನೆ.

೫೯–೬೦. ಯಾವ ಮಹಾತ್ಮರು ಲೋಕೇಶ್ವರನ ಶಯನೋತ್ಸವವನ್ನು ದರ್ಶನಮಾಡುವರೊ, ಯಾರು ಈ ಉತ್ತಮ ಮಹೋತ್ಸವವನ್ನು ಮಾಡಿಸುವರೊ, ಅವರು ದೇಹಪಾತವಾದ ಮೇಲೆ ಪುನಃ ತಾಯಿಯ ಗರ್ಭದಲ್ಲಿ ವಾಸ ಮಾಡುವುದಿಲ್ಲ. ಆ ಪುರುಷೋತ್ತಮನ ಸನ್ನಿಧಿಯಲ್ಲಿ ಈ ವ್ರತನಿಯಮಗಳನ್ನು ಪ್ರತಿಜ್ಞಾಪೂರ್ವಕವಾಗಿ ಸ್ವೀಕರಿಸಿ, ಶಯನೋತ್ಸವದ ಅಂತ್ಯದಲ್ಲಿ ಶಾಸ್ತ್ರೋಕ್ತವಾದ ರೀತಿಯಿಂದ ವ್ರತವನ್ನು ಸಮಾಪ್ತಿಗೊಳಿಸಿ, ಪರಿಸಮಾಪ್ತಿಯ ಸೂಚಕವಾಗಿ ಯಾವನು ಪಾರಣೆಯ ಬ್ರಾಹ್ಮಣಭೋಜನವನ್ನು ಮಾಡಿಸುವನೊ, ಅವನು ಬ್ರಹ್ಮಲೋಕದಲ್ಲಿಯೂ ಮರ್ಯಾದೆಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಶ್ರೀವಿಷ್ಣುಶಯನೋತ್ಸವವರ್ಣನ"ವೆಂಬ

॥ ಶ್ರೀಃ ॥

# ಅಥ ಸಪ್ತತ್ರಿಂಶೋಽಧ್ಯಾಯಃ

## ಶ್ವೇತಮಹಾರಾಜೋಪಾಖ್ಯಾನವರ್ಣನಂ

**ಜೈಮಿನಿರುವಾಚ :—**

**ಅತಃ ಪರಂ ಪ್ರವಕ್ಷ್ಯಾಮಿ ದಕ್ಷಿಣಾಯನಮುತ್ತಮಂ ।**
**ಸಂಕ್ರಾಂತೇಃ ಪೂರ್ವಕಾಲೇ ಯಾಃ ಕಲಾ ವೈ ವಿಂಶತಿರ್ಮತಾಃ ॥ ೧ ॥**
**ಅಯನಂ ಪುಣ್ಯಕಾಲೋಽಯಂ ಪುಣ್ಯಕರ್ಮಸು ಕರ್ಮಿಣಾಂ ।**
**ಪಂಚಾಮೃತೈಸ್ತತ್ರ ದೇವಂ ಸ್ನಾಪಯೇತ್ಸ್ನಾಪಯೇದ್ದ್ವಿಜಾಃ ॥ ೨ ॥**
**ಸರ್ವಾಂಗಂ ಲೇಪಯೇದಸ್ಯಾಗುರುಕರ್ಪೂರಚಂದನೈಃ ।**
**ಸುಗಂಧಮಾಲ್ಯಾಲಂಕಾರೈಶ್ಚಾರುವಸ್ತ್ರೈಶ್ಚ ದೀಪಕೈಃ ॥ ೩ ॥**
**ನಾನಾಭಕ್ಷ್ಯೋಪಹಾರೈಶ್ಚ ಪೂಜಯೇತ್ಪರಮೇಶ್ವರಂ ।**
**ಕರ್ಪೂರಾಲತಿಕಾಮುಚ್ಚೈರ್ಮುಖಾಭ್ಯಾಶೇ ಹರೇರ್ದಂತೇತ್ ॥ ೪ ॥**

---

### ಕನ್ನಡದ ಅನುವಾದ

#### ಶ್ವೇತಮಹಾರಾಜೋಪಾಖ್ಯಾನವರ್ಣನ

೧. ಜೈಮಿನಿಯು ಹೇಳುತ್ತಾನೆ:—ಇನ್ನು ಮೇಲೆ ಸರ್ವಶ್ರೇಷ್ಠವಾದ ದಕ್ಷಿಣಾಯನದಲ್ಲಿ ಮಾಡಬೇಕಾದ ಕರ್ಮವನ್ನು ಹೇಳುವೆನು. ತುಲಾ ಸಂಕ್ರಮಣದ ಮೊದಲು ಭಗವಂತನು ಇಪ್ಪತ್ತು ಕಲೆಗಳಿಂದ ಭೂಲೋಕದಲ್ಲಿ ರುವನೆಂದು ಹೇಳುವರು.

೨. ಈ ದಕ್ಷಿಣಾಯನವು ಕರ್ಮನಿಷ್ಠರಾದವರಿಗೆ ಪುಣ್ಯಕಾರ್ಯಗಳನ್ನು ಮಾಡಲು ಉತ್ತಮಕಾಲವಾಗಿರುವುದು. ಬ್ರಾಹ್ಮಣರಿರಾ! ಶಯನೋತ್ಸವ ಸಮಯದಲ್ಲಿ ಮಾಡಿದಂತೆಯೇ ಈ ಸಮಯದಲ್ಲಿಯೂ ದೇವದೇವನ ಮೂರ್ತಿಯನ್ನು ಪಂಚಾಮೃತದಿಂದ ಅಭಿಷೇಕ ಮಾಡಿಸಬೇಕು.

೩. ಅಗುರು, ಪಚ್ಚಕರ್ಪೂರ ಮತ್ತು ಚಂದನಗಳಿಂದ ವಿಗ್ರಹದ ಅದ್ಯಂತವೂ ಲೇಪನಮಾಡಬೇಕು. ಶ್ರೀಗಂಧ, ಪುಷ್ಪಮಾಲೆಗಳು, ಆಭರಣಗಳು, ಮನೋಹರ ವಸ್ತ್ರಗಳು, ಚಿತ್ರದೀಪಗಳು ಮುಂತಾದುವುಗಳಿಂದ ಪರಮಾತ್ಮನನ್ನು ಸೇವಿಸಬೇಕು.

೪. ಸರ್ವ ಸ್ವಾಮಿಯಾದ ಆತನಿಗೆ ಬಹು ವಿಧಗಳಾದ ಭಕ್ಷ್ಯಭೋಜ್ಯಗಳ ನೈವೇದ್ಯವನ್ನು ಸಮರ್ಪಿಸಿ ಪೂಜಿಸಬೇಕು. ಆ ಶ್ರೀಹರಿಯ ಹಣೆಯಲ್ಲಿ ಪಚ್ಚಕರ್ಪೂರದ ತಿಲಕವನ್ನು ಸುಂದರವಾಗಿ ತಿದ್ದಬೇಕು.

ದೂರ್ವಾಂಕುರಾಕ್ಷತೈರ್ನೀರಾಜನೇನಾಥ ಪ್ರವಂದಯೇತ್ ।
ಮಾಂಗಲ್ಯಗೀತನೃತ್ಯಾದ್ಯೈರ್ನಾರೀ ಹುಲಹುಲಾಂ ವದೇತ್ ॥ ೫ ॥
ಪೂಜಿತಂ ಪೂಜ್ಯಮಾನಂ ಚ ಯಃ ಪಶ್ಯೇತ್ಪುರುಷೋತ್ತಮಂ ।
ಪೂಜಾಶತಗುಣಂ ಪುಣ್ಯಂ ತಸ್ಮೈ ದದ್ಯಾಜ್ಜನಾರ್ದನಃ ॥ ೬ ॥
ಅಯನೇ ದಕ್ಷಿಣೇ ತಸ್ಮಿನ್ನರ್ಚ್ಯಮಾನಂ ಶ್ರಿಯಃಪತಿಂ ।
ವಿಹಾಯ ಸರ್ವಪಾಪಾನಿ ವಿಷ್ಣುಲೋಕಂ ವ್ರಜಂತಿ ತೇ ॥ ೭ ॥
ಸ್ವಲ್ಪಾ ವಾ ಮಹತೀ ಯಾತ್ರಾ ಸರ್ವಾ ಮುಕ್ತಿಪ್ರದಾ ಹರೇಃ ।
ತಸ್ಮಿಂಸ್ತಸ್ಮಿನ್ದಿನೇ ದೃಷ್ಟೋ ಭಗವಾನ್ಮುಕ್ತಿದೋ ಧ್ರುವಂ ॥ ೮ ॥
ವಿಶ್ವಾಸಹೇತೋರ್ಮೂರ್ಖಾಣಾಂ ಯಾತ್ರಾ ಹ್ಯೇತಾಃ ಕೃಪಾವತಾ ।
ವಿಷ್ಣುನಾ ಕಥಿತಾ ವಿಪ್ರಾಃ ಪಾಪಿನಾಂ ಕಿಲ್ಬಿಷಾಪಹಾಃ ॥ ೯ ॥
ಆಯಾಸಜನಿತಂ ಪುಣ್ಯಂ ಮನ್ಯಂತೇ ಯೇ ನರಾಧಮಾಃ ।
ಲಕ್ಷ್ಮೀಪತೇರ್ಭೋಜನಾಯ ಸಂಸ್ಕಾರ್ಯೋಽತ್ರ ಮಹಾನಸಃ ॥ ೧೦ ॥

---

೫. ದೂರ್ವಾಂಕುರಗಳಿಂದಲೂ, ಅಕ್ಷತೆಗಳಿಂದಲೂ, ಉತ್ತರನೀರಾಜನವನ್ನು ಬೆಳಗಿಸಿ ಬಳಿಕ ಭಕ್ತಿಯಿಂದ ನಮಸ್ಕರಿಸಬೇಕು. ಮಂಗಳಸೂಚಕಗಳಾದ ಸಂಗೀತಗಳಿಂದಲೂ, ನೃತ್ಯಗಳಿಂದಲೂ ಸ್ತ್ರೀಯರು ಸಂತೋಷದ ಕಲಕಲ ಧ್ವನಿಯನ್ನು ಮಾಡಬೇಕು.

೬. ಈ ವಿಧವಾಗಿ ಪೂಜೆಗೊಂಡ, ಪೂಜೆಗೊಳ್ಳುತ್ತಿರುವ ಪುರುಷೋತ್ತಮ ಸ್ವಾಮಿಯನ್ನು ಯಾರು ನೋಡುವರೊ, ಅವರಿಗೆ ಜನಾರ್ದನನು ಪೂಜೆಯ ಪುಣ್ಯಕ್ಕೆ ಶತಗುಣಿತವಾದ ಪುಣ್ಯವನ್ನು ನೀಡುವನು.

೭–೮. ಯಾವನು ದಕ್ಷಿಣಾಯನದಲ್ಲಿ ಲಕ್ಷ್ಮೀರಮಣನಾದ ಜಗನ್ನಾಥನನ್ನು ಪೂಜಿಸುವನೋ, ಅವನು ಸಕಲ ಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕಕ್ಕೆ ಹೊರಡುವನು. ಆ ಕಾಲದಲ್ಲಿ ಮಾಡಿದ ಶ್ರೀಹರಿಯ ಉತ್ಸವವು ಅಲ್ಪವಾದುದಾಗಲಿ, ಹಿರಿದಾದುದಾಗಲಿ, ಭಕ್ತನಿಗೆ ಮೋಕ್ಷಪ್ರದಾಯಕವಾದುದು. ಆಯಾ ದಿವಸದ ಪೂಜೆಗಳನ್ನು ಕೈಕೊಂಡ ಸ್ವಾಮಿಯನ್ನು ನೋಡುವುದರಿಂದಲೇ ಭಗವಂತನು ಮುಕ್ತಿಯನ್ನು ಕೊಡುವುದು ದಿಟವು.

೯. ಎಲೈ ಬ್ರಾಹ್ಮಣೋತ್ತಮರಿರಾ ! ಮೂರ್ಖರಲ್ಲಿ ದೈವಭಕ್ತಿಯನ್ನುಂಟುಮಾಡುವುದಕ್ಕಾಗಿಯೇ ಪಾಪಿಗಳ ಕಲ್ಮಷಗಳನ್ನು ಕಳೆಯುವ ಈ ಯಾತ್ರೆಯೇ ಮುಂತಾದ ಉತ್ಸವಗಳೆಲ್ಲವೂ ಕೃಪಾಸಮುದ್ರವಾದ ಮಹಾ ವಿಷ್ಣುವಿನಿಂದ ನಿರೂಪಿಸಲ್ಪಟ್ಟಿರುವುವು.

೧೦–೧೧. ಕೇವಲ ದೇಹಾಯಾಸದಿಂದಲೇ ಪುಣ್ಯವು ಲಭಿಸುವುದೆಂದು ತಿಳಿಯುವವರು ಮನುಷ್ಯಾಧಮರು. ಲಕ್ಷ್ಮೀಪತಿಯ ಭೋಜನವನ್ನು ಸಿದ್ಧಗೊಳಿ

**ವೈಷ್ಣವಾಗ್ನಿಂ ಸಮಾಧಾಯ ನಿರೂಪ್ಯ ಚರುಮುತ್ತಮಂ ।**
**ವೈಶ್ವದೇವಂ ಪ್ರಕುರ್ವೀತ ಭಗವತ್ಪಾಕಸಾಧನಂ ॥ ೧೧ ॥**
**ಬ್ರಹ್ಮಣೇ ವಾಸ್ತುಪತಯೇ ಪ್ರಜಾನಾಂಪತಯೇ ತಥಾ ।**
**ವಿಷ್ಣವೇ ವಿಶ್ವಕರ್ತ್ರೇ ಚ ಶುಚ್ಯಗ್ನೌ ಜುಹುಯಾಚ್ಛುಚಿಃ ॥ ೧೨ ॥**
**ರಾಜಾಜ್ಞಾ ನಿಯುಕ್ತ ಆಚಾರ್ಯಃ ಶ್ರೌತಸ್ಮಾರ್ತಕ್ರಿಯಾಪರಃ ।**
**ದ್ವಾರಪಾಲಪ್ರಚಂಡಾಭ್ಯಾಮೈಶಾನ್ಯಾಂ ಕ್ಷೇತ್ರಪಾಲಿನೇ ॥ ೧೩ ॥**
**ದಕ್ಷಿಣೇ ಚ ವಿರೂಪಾಯ ಖಗಾನಾಂ ಪತಯೇ ತಥಾ ।**
**ದುರ್ಗಾಸರಸ್ವತೀಭ್ಯಾಂ ಚ ನೈಋರ್ತ್ಯಾಂ ವಿನಿವೇದಯೇತ್ ॥ ೧೪ ॥**
**ಮಹಾಲಕ್ಷ್ಮೀಮಹೇಂದ್ರಾಭ್ಯಾಂ ಪ್ರಾಚ್ಯಾಂ ದಿಶಿ ಬಲಿಃ ಸ್ಮೃತಃ ।**
**ವಿಷ್ಣುಪಾರಿಷದೇಭ್ಯೋಽಥ ಪಶೂನಾಂಪತಯೇ ತಥಾ ॥ ೧೫ ॥**
**ಉದೀಚ್ಯಾಂ ಬಲಿದಾನಂ ತು ನಾರದಾಯಾಥ ಪಶ್ಚಿಮೇ ।**
**ಆಗ್ನೇಯ್ಯಾಮಗ್ನಯೇ ದದ್ಯಾದ್ವಾಯವ್ಯಾಂ ವಿಶ್ವಸಾಕ್ಷಿಣೇ ॥ ೧೬ ॥**

---

ಸುವುದಕ್ಕಾಗಿ ಉತ್ತಮವಾದ ಪಾಕಶಾಲೆಯೊಂದನ್ನು ಸಾರಿಸಿ ಗುಡಿಸಿ ಸಿದ್ಧಗೊಳಿಸಬೇಕು. ಮೊದಲು ವೈಷ್ಣವಾಗ್ನಿಯನ್ನು ನಿರ್ಮಥನಮಾಡಿಕೊಂಡು ಅದರಲ್ಲಿ ಉತ್ತಮವಾದ ಚರುದ್ರವ್ಯವನ್ನು ಹೋಮ ಮಾಡಬೇಕು ಬಳಿಕ ಭಗವಂತನ ನೈವೇದ್ಯವನ್ನು ಪಾಕಮಾಡಲು ಅನುಕೂಲವಾದ ವೈಶ್ವದೇವಾಗ್ನಿಯನ್ನು ಪ್ರಜ್ವಾಲಿತವನ್ನಾಗಿ ಮಾಡಬೇಕು.

೧೨. ವ್ರತವನ್ನು ಮಾಡುವವನು ಶುಚಿಯಾಗಿ ಪರಿಶುದ್ಧವಾದ ಆ ವೈಶ್ವದೇವಾಗ್ನಿಯಲ್ಲಿ ಬ್ರಹ್ಮನಿಗೂ, ವಾಸ್ತುಪುರುಷನಿಗೂ, ಪ್ರಜಾಪತಿಗೂ, ಲೋಕಸೃಷ್ಟಿಕರ್ತನಾದ ಮಹಾವಿಷ್ಣುವಿಗೂ ಆಹುತಿಗಳನ್ನಿತ್ತು ಹೋಮಮಾಡಬೇಕು.

೧೩–೧೪. ಯಜಮಾನನ ಅಪ್ಪಣೆಯನ್ನು ಪಡೆದು ಸಕಲ ಶ್ರೌತಸ್ಮಾರ್ತಕರ್ಮಗಳಲ್ಲಿ ನಿಷ್ಣಾತನಾದ ಆಚಾರ್ಯನು ಮೊದಲು ದ್ವಾರಪಾಲಕರಿಗೂ ಪ್ರಚಂಡರಿಗೂ ಪಾಕಶಾಲೆಯ ಈಶಾನ್ಯದಿಕ್ಕಿನಲ್ಲಿ ಕ್ಷೇತ್ರಪಾಲಕನಿಗೂ ದಿಗ್ಬಲಿಗಳನ್ನು ಕೊಡಬೇಕು. ದಕ್ಷಿಣದಲ್ಲಿ ವಿರೂಪನಿಗೂ, ಗರುಡನಿಗೂ, ನೈಋರ್ತ್ಯದಲ್ಲಿ ದುರ್ಗಾಸರಸ್ವತಿಯರಿಗೂ ಬಲಿಗಳನ್ನು ನಿವೇದನೆ ಮಾಡಬೇಕು.

೧೫–೧೬. ಮಹಾಲಕ್ಷ್ಮಿಗೂ ಮಹೇಂದ್ರನಿಗೂ ಪೂರ್ವದಿಕ್ಕಿನಲ್ಲಿ ಬಲಿಯನ್ನು ಸಮರ್ಪಿಸಬೇಕೆಂದು ಸ್ಮೃತವಾಗಿರುವುದು. ವಿಷ್ಣುಪಾರ್ಷದರಾದ ಜಯವಿಜಯರಿಗೂ, ಪಶುಪತಿಯಾದ ಮಹೇಶ್ವರನಿಗೂ ಉತ್ತರದಿಕ್ಕಿನಲ್ಲಿ ಬಲಿಯನ್ನೂ, ಪಶ್ಚಿಮದಿಕ್ಕಿನಲ್ಲಿ ನಾರದನಿಗೆ ಬಲಿಯನ್ನೂ, ಆಗ್ನೇಯ ಕೋಣದಲ್ಲಿ ಅಗ್ನಿದೇವಬಲಿಯನ್ನೂ, ಲೋಕಸಾಕ್ಷಿಯಾದ ಸೂರ್ಯನಿಗೆ ವಾಯವ್ಯದಿಕ್ಕಿನಲ್ಲಿ ಬಲಿಯನ್ನೂ ಸಮರ್ಪಿಸಬೇಕು.

ಪಂಚಶ್ವಸನರೂಪೇಭ್ಯೋ ವಿಶ್ವಕರ್ತ್ರೇಽಥ ಮಧ್ಯತಃ ।
ಆದ್ಯಂತಯೋರ್ಜಲಂ ದದ್ಯಾತ್ಪ್ರತ್ಯೇಕಂ ಬಲಿಕರ್ಮಣಿ ॥ ೧೭ ॥
ದತ್ವಾ ಬಲಿಂ ತದಗ್ನೌ ತು ಕಾರಯೇತ್ಪಾಕಮುತ್ತಮಂ ।
ಸಂಧ್ಯಾತ್ರಯೇ ಭಗವತಃ ಪೂಜಾಯೈ ಚರುಕಾರಣಾತ್ ॥ ೧೮ ॥
ಚರುಸಂಸ್ಕಾರಕಾಂಗಾನಿ ಭಕ್ಷ್ಯಭೋಜ್ಯಾದಿಕಾನಿ ವೈ ।
ನ ದೀಪ್ತಾನ್ಯೋಜಯೇತ್ತತ್ರ ಲೋಕೇ ತ್ರೈವರ್ಣಿಕೋ ನೃಪಃ ॥ ೧೯ ॥
ಆರ್ಯಾನ್ಪವಿತ್ರಾನ್ ಶೂದ್ರಾನ್ವಾ ವರ್ಣಾಂಶ್ಚ ಪರಿಸೇವಕಾನ್ ।
ಲೌಕಿಕವ್ಯವಹಾರೋಽಯಂ ಪಚತಿ ಶ್ರೀಃ ಸ್ವಯಂ ಧ್ರುವಂ ॥ ೨೦ ॥
ಭುಂಕ್ತೇ ನಾರಾಯಣೋ ನಿತ್ಯಂ ತಯಾ ಪಕ್ವಂ ಶರೀರವಾನ್ ।
ಅಮೃತಂ ತದ್ಧಿ ನೈವೇದ್ಯಂ ಪಾಪಘ್ನಂ ಮೂರ್ಧ್ನಿ ಧಾರಣಾತ್ ॥ ೨೧ ॥
ಭಕ್ಷಣಾನ್ಮದ್ಯಪಾನಾದಿಮಹಾದುರಿತನಾಶನಂ ।
ಆಘ್ರಾಣಾನ್ಮಾನಸಂ ಪಾಪಂ ದರ್ಶನಾದ್ದೃಷ್ಟಿಜಂ ತಥಾ ॥ ೨೨ ॥

---

೧೭. ಪ್ರಾಣಾಪಾನಾದಿ ಪಂಚರೂಪಗಳುಳ್ಳ ವಾಯುದೇವನಿಗೂ, ವಿಶ್ವಕರ್ತನಾದ ಬ್ರಹ್ಮನಿಗೂ ಮಧ್ಯದಲ್ಲಿ ಬಲಿದಾನವನ್ನುಮಾಡಬೇಕು. ಈ ಬಲಿಪ್ರದಾನ ಕಾಲದಲ್ಲಿ ಪ್ರತಿಯೊಂದು ಬಲಿಯನ್ನು ಕೊಡುವಾಗಲೂ ಮೊದಲಿನಲ್ಲಿಯೂ ಕಡೆಯಲ್ಲಿಯೂ ಜಲವನ್ನು ಅರ್ಪಿಸಬೇಕು.

೧೮. ಇಂತು ದಿಗ್ಬಲಿಗಳನ್ನಿತ್ತ ಬಳಿಕ ಆ ವೈಶ್ವದೇವಾಗ್ನಿಯಲ್ಲಿ ಭಗವಂತನ ಪೂಜೆಗೆ ನೈವೇದ್ಯವನ್ನು ಸಮರ್ಪಿಸಲು ಉತ್ತಮವಾದ ಪಾಕವನ್ನು ತ್ರಿಸಂಧ್ಯೆಗಳಲ್ಲಿಯೂ ಮಾಡಬೇಕು.

೧೯–೨೦. ಪಾಕಮಾಡಿದ ಭಕ್ಷ್ಯಭೋಜ್ಯಗಳೇ ಮೊದಲಾದುವುಗಳೆಲ್ಲವೂ ನಿವೇದನವೆಂಬ ಸಂಸ್ಕಾರಕ್ಕೆ ವಿಷಯಗಳಾಗಿರುವುವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜಾತಿಗಳಿಗೆ ಸೇರಿದ ಯಾವ ಯಜಮಾನನೂ ಈ ಕಾರ್ಯದಲ್ಲಿ ಶೂದ್ರರನ್ನಾಗಲಿ, ಪರಿಚಾರಿಕೆಯನ್ನು ಮಾಡುವ ಇತರ ವರ್ಣದವರನ್ನಾಗಲಿ (ಅವರು ಎಷ್ಟೇ ತೇಜಸ್ವಿಗಳೂ, ವೃದ್ಧರೂ, ಪರಿಶುದ್ಧರೂ ಆಗಿದ್ದರೂ) ನಿಯೋಜಿಸಬಾರದು. ಈ ವಿಷಯದಲ್ಲಿ ಲೋಕವ್ಯವಹಾರಾನುಗುಣವಾದ ನಡವಳಿಕೆಯು ಹೇಗಿರುವುದೆಂಬುದನ್ನು ತಿಳಿಸುತ್ತೇನೆ. ನಿಜವಾಗಿಯೂ ಲಕ್ಷ್ಮೀದೇವಿಯು ತಾನೇ ನೈವೇದ್ಯಪದಾರ್ಥಗಳನ್ನು ಸಿದ್ಧಗೊಳಿಸುವಳು.

೨೧. ಆಕೆಯು ಪಕ್ವಮಾಡಿದ ಪದಾರ್ಥಗಳನ್ನು ಶ್ರೀಮನ್ನಾರಾಯಣನೇ ಸ್ಥೂಲದೇಹವನ್ನು ಧರಿಸಿ ನಿತ್ಯವೂ ಸ್ವೀಕರಿಸುವನು. ಆದುದರಿಂದ ಆ ನೈವೇದ್ಯವು ಅಮೃತಕ್ಕೆ ಸಮಾನವಾದುದು. ಅದನ್ನು ತಲೆಯಲ್ಲಿ ಧರಿಸುವುದರಿಂದ ಸಕಲ ಪಾತಕಗಳೂ ನಾಶವನ್ನು ಹೊಂದುವುವು.

೨೨. ಆ ನೈವೇದ್ಯವನ್ನು ಭಕ್ಷಣೆಮಾಡುವುದರಿಂದ ಸುರಾಪಾನವೇ

ಆಸ್ವಾದಾತ್ತು ಕೃತಂ ಪಾಪಂ ಶ್ರಾವಣಂ ಚ ವ್ಯಪೋಹತಿ ।
ಸ್ಪರ್ಶನಾತ್ತ್ವಕ್ಕೃತಂ ಪಾಪಂ ಮಿಥ್ಯಾಭಾಷಣಜಂ ತಥಾ ॥ ೨೩ ॥
ಗಾತ್ರಲೇಪಾದ್ದಹೇತ್ಪಾಪಂ ಶಾರೀರಂ ನೈವ ಸಂಶಯಃ ॥ ೨೪ ॥
ಮಹಾಪವಿತ್ರಂ ಹಿ ಹರೇರ್ನಿವೇದಿತಂ
ನಿಯೋಜಯೇದ್ಯಃ ಪಿತೃದೇವಕರ್ಮಸು ।
ತೃಪ್ಯಂತಿ ತಸ್ಮೈ ಪಿತರಃ ಸುರಾಸ್ತಥಾ
ಪ್ರಯಾಂತಿ ಲೋಕಂ ಮಧುಸೂದನಸ್ಯ ತೇ ॥ ೨೫ ॥
ನಾತಃ ಪವಿತ್ರಂ ವಸ್ತ್ವಸ್ತಿ ಹವ್ಯಕವ್ಯೇಷು ಭೋ ದ್ವಿಜಾಃ ।
ನರಾಣಾಂ ರೂಪಮಾಸ್ಥಾಯ ತದಶ್ನಂತಿ ದಿವೌಕಸಃ ॥ ೨೬ ॥
ಅಭಿಮಾನೋ ಮಹಾಂಸ್ತತ್ರ ದೇವದೇವಸ್ಯ ಚಕ್ರಿಣಃ ।
ಶ್ವೇತೋ ನಾಮ ಮಹಾರಾಜಃ ಪುರಾ ತ್ರೇತಾಯುಗೇಽಭವತ್ ॥ ೨೭ ॥
ವ್ರತಸ್ಥೋಽಪಿ ಮಹಾಭಕ್ತಿಂ ಚಕಾರ ಪುರುಷೋತ್ತಮೇ ।
ಇಂದ್ರದ್ಯುಮ್ನೇನ ರಚಿತಭೋಗಮಾತ್ರಾನುಸಾರತಃ ॥ ೨೮ ॥

---

ಮುಂತಾದ ಮಹಾ ಪಾತಕಗಳೂ ನಾಶವಾಗುವುವು. ಅದರ ವಾಸನೆಯನ್ನು ಸೇವಿಸುವುದರಿಂದ ಮನಸ್ಸಿನ ಪಾಪಗಳೂ, ಅದನ್ನು ನೋಡುವುದರಿಂದ ದೃಷ್ಟಿಯ ಪಾಪಗಳೂ ಕಳೆಯುವುವು.

೨೩. ಅದನ್ನು ಆಸ್ವಾದಿಸುವುದರಿಂದ ನೀಚವಾಕ್ಯಶ್ರವಣರೂಪವಾದ ಶ್ರೋತ್ರೇಂದ್ರಿಯದ ಪಾತಕಗಳೂ ಕಳೆದುಹೋಗುವುವು. ಸ್ಪರ್ಶದಿಂದ ಚರ್ಮಕೃತಪಾಪಗಳೂ, ಅಸತ್ಯ ಭಾಷಣರೂಪ ಪಾತಕಗಳೂ ನಿರ್ಮಲವಾಗುವುವು.

೨೪. ಅದನ್ನು ಶರೀರಕ್ಕೆ ಲೇಪಿಸಿಕೊಳ್ಳುವುದರಿಂದ ನಿಸ್ಸಂಶಯವಾಗಿಯೂ ದೇಹಗತಗಳಾದ ಸಕಲಪಾತಕಗಳೂ ಮಾಯವಾಗುವುವು.

೨೫. ಶ್ರೀಹರಿಗೆ ನಿವೇದಿಸಿದ ಪದಾರ್ಥವು ಅತ್ಯಂತ ಪವಿತ್ರವಾದುದು. ಅದನ್ನು ಯಾವ ಮನುಷ್ಯನು ಪಿತೃಕರ್ಮದಲ್ಲಾಗಲಿ, ದೇವತಾಕಾರ್ಯಗಳಲ್ಲಾಗಲಿ ಉಪಯೋಗಿಸುವನೊ, ಆತನ ವಿಷಯದಲ್ಲಿ ಪಿತೃಗಳೂ ದೇವತೆಗಳೂ ಸಂತೋಷಗೊಂಡು ಮಧುಸೂದನನ ಲೋಕಕ್ಕೆ ತೆರಳುವರು.

೨೬. ಎಲೈ ಬ್ರಾಹ್ಮಣರಿರಾ! ಸಕಲ ಹವ್ಯಕವ್ಯಗಳಲ್ಲಿಯೂ ಈ ನೈವೇದ್ಯಕ್ಕೆ ಸಮಾನವಾದ ಪವಿತ್ರವಸ್ತುವು ಮತ್ತೊಂದಿಲ್ಲ. ದೇವತೆಗಳೂ ಸಹ ಮನುಷ್ಯರ ರೂಪಗಳನ್ನು ಧರಿಸಿ ಅದನ್ನು ಸ್ವೀಕರಿಸುವರು.

೨೭. ದೇವದೇವನಾದ ಚಕ್ರಪಾಣಿಗೆ ಆ ನೈವೇದ್ಯದಲ್ಲಿ ಅಪಾರವಾದ ಅಭಿಮಾನವಿರುವುದು. ಈ ವಿಷಯವಾಗಿ ಪೂರ್ವದಲ್ಲಿ ನಡೆದ ಚರಿತ್ರೆಯೊಂದನ್ನು ಕೇಳಿರಿ. ಮುನ್ನು ತ್ರೇತಾಯುಗದಲ್ಲಿ ಶ್ವೇತನೆಂಬ ಮಹಾರಾಜನೊಬ್ಬನಿದ್ದನು.

೨೮. ಆತನು ವೈಷ್ಣವವ್ರತದೀಕ್ಷೆಯನ್ನು ಸ್ವೀಕರಿಸಿ ಇಂದ್ರದ್ಯುಮ್ನ

ಭೋಗಾನ್ಪ್ರಕಲ್ಪಯಾಮಾಸ ಪ್ರತ್ಯಹಂ ಶ್ರೀಪತೇರ್ಮುದಾ ।
ಭಕ್ಷ್ಯಭೋಜ್ಯಾನ್ಯನೇಕಾನಿ ಷಡ್ರಸಾಂಶ್ಚ ಸುಸಂಸ್ಕೃತಾನ್ ॥ ೨೯ ॥
ಮಾಲ್ಯಾನಿ ಚ ವಿಚಿತ್ರಾಣಿ ಸುಗಂಧಮನುಲೇಪನಂ ।
ಗೀತವಾದಿತ್ರನೃತ್ಯಾನಿ ದಿವ್ಯಾನಿ ಸುಬಹೂನಿ ಚ ॥ ೩೦ ॥
ರಾಜೋಪಚಾರಾ ಬಹುಶೋಽವಸರೇಽವಸರೇ ಹರೇಃ ।
ಬಹುವಿತ್ತವ್ಯಯಾಯಾಸಭಕ್ತಿಭಾವನಿರೂಪಕಾಃ ॥ ೩೧ ॥
ತತ್ತದ್ವೈಷ್ಣವಶಾಸ್ತ್ರೋಕ್ತಚಿತ್ರಭೋಗಾಃ ಪೃಥಗ್ವಿಧಾಃ ।
ಕಲ್ಪಿತಾಸ್ತೇನ ಭೂಪೇನ ವಿದ್ವತ್ಪಂಕಜಭಾನುನಾ ॥ ೩೨ ॥
ಪ್ರಾತಃ ಪೂಜನವೇಲಾಯಾಂ ಹರಿಂ ದ್ರಷ್ಟುಂ ಜಗಾಮ ಸಃ ।
ಕಸ್ಮಿನ್ಶ್ಚಿದ್ದಿವಸೇ ರಾಜಾ ಪೂಜ್ಯಮಾನಂ ದದರ್ಶ ತಂ ॥ ೩೩ ॥
ಪ್ರಣಮ್ಯ ದೇವದೇವಂ ತು ಬದ್ಧಾಂಜಲಿಪುಟೋ ಮುದಾ ।
ಪ್ರಾಸಾದದ್ವಾರನಿಕಟೇ ತಸ್ಥಿವಾನ್ ನೃಪಸತ್ತಮಃ ॥ ೩೪ ॥

---

ಮಹಾರಾಜನು ರಚಿಸಿದ ವಿಭವದ ಮಾರ್ಗವನ್ನೇ ಅನುಸರಿಸುತ್ತ ಪುರುಷೋತ್ತಮನಲ್ಲಿ ಅಸದೃಶವಾದ ಭಕ್ತಿಯನ್ನು ಮಾಡುತ್ತಿದ್ದನು.

೨೯. ಪ್ರತಿನಿತ್ಯವೂ ಸಂತೋಷದಿಂದ ಬಹುವಿಧಗಳಾದ ಉಪಚಾರಗಳನ್ನು ಶ್ರೀಪತಿಗೆ ಮಾಡಿಸುತ್ತಿದ್ದನು. ಅನೇಕ ವಿಧಗಳಾದ ಭಕ್ಷ್ಯಭೋಜ್ಯಗಳನ್ನೂ, ಉತ್ತಮ ಸಂಸ್ಕಾರಸಹಿತಗಳಾದ ಷಡ್ರಸಪದಾರ್ಥಗಳನ್ನೂ ನೈವೇದ್ಯಕ್ಕೆ ಅಣಿಮಾಡುತ್ತಿದ್ದನು.

೩೦. ವಿಚಿತ್ರಾಕಾರಗಳುಳ್ಳ ಪುಷ್ಪಮಾಲೆಗಳನ್ನೂ, ಸುಗಂಧಸಹಿತವಾದ ಲೇಪನದ್ರವ್ಯವನ್ನೂ, ಮನೋಹರಗಳೂ ಬಹು ಪ್ರಕಾರಗಳೂ ಆದ ಸಂಗೀತ, ವಾದ್ಯ, ನೃತ್ಯಗಳೇ ಮೊದಲಾದ ಸೇವೆಗಳನ್ನೂ ನಡೆಸುತ್ತಿದ್ದನು.

೩೧. ಪ್ರತಿಯೊಂದು ಸಂದರ್ಭದಲ್ಲಿಯೂ ಶ್ರೀಹರಿಗೆ ಬಹುಶಃ ಬಹಳ ಹಣವನ್ನು ವ್ಯಯಮಾಡಿ, ದೇಹಾಯಾಸವನ್ನು ಸಹಿಸಿ ತನ್ನ ಭಕ್ತಿಭಾವದ ಆಧಿಕ್ಯವನ್ನು ಸೂಚಿಸುವ ರಾಜೋಪಚಾರಗಳನ್ನು ನಡೆಸುತ್ತಿದ್ದನು.

೩೨–೩೩. ಇಂತು ವಿದ್ವಾಂಸರೆಂಬ ಕಮಲಗಳಿಗೆ ಸೂರ್ಯಸಮನಾದ ಆ ಮಹಾರಾಜನು ಆಯಾ ವೈಷ್ಣವಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಅನೇಕ ವಿಧಗಳಾದ ವಿಚಿತ್ರ ಭೋಗಗಳನ್ನೆಲ್ಲಾ ಪುರುಷೋತ್ತಮನ ಪೂಜೆಗೆ ಕಲ್ಪಿಸಿ ಕೊಡುತ್ತಿದ್ದನು. ಒಂದಾನೊಂದು ದಿವಸ ಪ್ರಾತಃಕಾಲದಲ್ಲಿ ಪೂಜಾಸಮಯಕ್ಕೆ ಸರಿಯಾಗಿ ಆ ಮಹಾರಾಜನು ಶ್ರೀಹರಿಯ ದರ್ಶನವನ್ನು ಮಾಡಲು ಹೊರಟು ಪೂಜೆಯನ್ನು ಸ್ವೀಕರಿಸುತ್ತಿದ್ದ ಆತನನ್ನು ನೋಡಿದನು.

೩೪. ದೇವೇಶ್ವರನಾದ ಆತನಿಗೆ ನಮಸ್ಕಾರವನ್ನು ಮಾಡಿ ಆ ಮಹಾರಾಜನು

ದೃಷ್ಟ್ವಾ ಸ್ವಯಂ ವಿರಚಿತಾನುಪಚಾರಾನನುತ್ತಮಾನ್ ।
ಉಪಾಯನಸಹಸ್ರಂ ಚ ಹರೇರಗ್ರೇ ಪ್ರಕಲ್ಪಿತಂ ॥ ೩೫ ॥
ಚಿಂತಯಾಮಾಸ ಮನಸಾ ಕಿಂಚಿದ್ಧ್ಯಾನಾವಲಂಬಿತಃ ।
ಮನುಷ್ಯಕಲ್ಪಿತಂ ಭೋಗಂ ಗ್ರಹೀಷ್ಯತಿ ಹರಿಃ ಕಿಮು ॥ ೩೬ ॥
ದೇವೈರ್ದಿವ್ಯೋಪಚಾರೈರ್ಯೋ ಶಕ್ಯತೇ ನಾರ್ಚನಾವಿಧೌ ।
ಮಾನಸೈರುಪಚಾರೈರ್ಯಂ ಪೂಜಯಂತಿ ಯತವ್ರತಾಃ ॥ ೩೭ ॥
ಭಾವದುಷ್ಟೋ ಬಹಿರ್ಯೋಗೋ ನ ಮುದೇ ತಸ್ಯ ನಿಶ್ಚಿತಂ ।
ಇತ್ಥಂ ಸಂಚಿಂತಯನ್ರಾಜಾ ದಿವ್ಯಾಸನಗತಂ ವಿಭುಂ ॥ ೩೮ ॥
ಭುಂಜಾನಮನ್ನಪಾನಾಢ್ಯಂ ಶ್ರಿಯಾ ಸುಪರಿವೇಷಿತಂ ।
ದಿವ್ಯಸ್ರಜಾಲಂಕೃತಯಾ ದಿವ್ಯಗಂಧದುಕೂಲಯಾ ॥ ೩೯ ॥
ಅನರ್ಘ್ಯರತ್ನಮಂಜೀರಶಿಂಜಿತೇನ ಸುರಾಲಯಂ ।
ಪೂರಯಂತ್ಯಾ ಸ್ವರ್ಣದರ್ವ್ಯಾ ದದತ್ಯಾ ಸಾದರಂ ರಸಾನ್ ॥ ೪೦ ॥

---

ಸಂತೋಷದಿಂದ ಅಂಜಲಿಬದ್ಧನಾಗಿ ಭಗವಂತನ ಪ್ರಾಸಾದದ ಹೆಬ್ಬಾಗಿಲಿನ ಸಮೀಪದಲ್ಲಿಯೇ ನಿಂತುಕೊಂಡಿದ್ದನು.

೩೫–೩೬. ಅಸದೃಶಗಳಾದ ಉಪಚಾರಗಳನ್ನು ಅರ್ಚಕರು ಮಾಡುತ್ತಿದ್ದುದನ್ನೂ ಶ್ರೀಹರಿಯ ಮುಂಗಡೆಯಲ್ಲಿ ಸಿದ್ಧಗೊಳಿಸಿದ್ದ ಸಹಸ್ರವಿಧಗಳಾದ ನೈವೇದ್ಯ ಪದಾರ್ಥಗಳನ್ನೂ ರಾಜನು ತಾನೇ ನೋಡುತ್ತಿದ್ದನು. ಈ ವೈಭವವನ್ನು ಕಂಡು ಧ್ಯಾನಾಸಕ್ತನಾಗಿದ್ದ ರಾಜನು ಕೆಲವು ಕಾಲದ ಮೇಲೆ ತನ್ನ ಮನಸ್ಸಿನಲ್ಲಿಯೇ ಯೋಚಿಸತೊಡಗಿದನು. "ಮನುಷ್ಯರು ಸಿದ್ಧಗೊಳಿಸಿರುವ ಈ ಉಪಾಯನಗಳನ್ನೆಲ್ಲ ಶ್ರೀಹರಿಯು ನಿಜವಾಗಿಯೂ ಸ್ವೀಕರಿಸುವನೆ?

೩೭. "ದೇವತೆಗಳು ತಮ್ಮ ದಿವ್ಯೋಪಚಾರಗಳಿಂದ ಪೂಜಿಸಿ ಯಾವನನ್ನು ಕಾಣದಿರುವರೊ, ಅಂತಹ ಪರಮಾತ್ಮನನ್ನು ನಿಯತವ್ರತರಾದ ಕರ್ಮಸನ್ಯಾಸಿಗಳು ಮಾನಸಿಕೋಪಚಾರಗಳಿಂದಲೇ ಪೂಜೆ ಮಾಡುವರು.

೩೮. "ಮನುಷ್ಯರಿಗೆ ಸಹಜವಾದ ದುಷ್ಟಭಾವನೆಗಳೂ, ಅಂತಃಶುದ್ಧಿಯಿಲ್ಲದ ಬಹಿರಾಡಂಬರಗಳೂ ನಿಶ್ಚಯವಾಗಿಯೂ ಆತನಿಗೆ ಸಂತೋಷವನ್ನು ಉಂಟುಮಾಡಲಾರವು." ಇಂತೆಂದು ಯೋಚಿಸುತ್ತಿರುವಂತೆಯೇ ಆ ಮಹಾರಾಜನು ಲೋಕೇಶ್ವರನು ದಿವ್ಯಾಸನವನ್ನಲಂಕರಿಸಿ ಕುಳಿತಿದ್ದುದನ್ನು ಕಂಡನು.

೩೯. ದೇವಲೋಕದ ಪಾರಿಜಾತಗಳ ಮಾಲೆಯಿಂದಲೂ ದಿವ್ಯ ಸುಗಂಧಾಢ್ಯವಾದ ವಸ್ತ್ರದಿಂದಲೂ ಅಲಂಕೃತಳಾದ ಲಕ್ಷ್ಮೀದೇವಿಯು ಅನ್ನಪಾನಾದಿಗಳನ್ನು ಭೋಜನಮಾಡುತ್ತಿರುವ ಸ್ವಾಮಿಗೆ ಸೇವೆಗೈಯುತ್ತಿದ್ದಳು.

೪೦. ಆಕೆಯು ಅಮೂಲ್ಯಗಳೂ ರತ್ನಖಚಿತಗಳೂ ಆದ ಕಾಲ್ಗಡಗಗಳ

ಭಗವತ್ಪ್ರತಿರೂಪೈಶ್ಚ ಭುಂಜಾನೈಃ ಪರಿವೇಷ್ಟಿತಂ ।
ದೃಷ್ಟ್ವಾ ಕೃತಾರ್ಥಮಾತ್ಮಾನಂ ಮನ್ಯಮಾನಸ್ತದದ್ಭುತಂ ॥ ೪೧ ॥
ಪೋನ್ಮೀಲಿತಾಕ್ಷಃ ಸ ಪುನಃ ಪ್ರಾಗ್ದೃಷ್ಟಂ ಸಮುವೈಕ್ಷತ ।
ಅತಃ ಪ್ರಭೃತಿ ರಾಜಾಽಸೌ ಪರಾಂ ನಿರ್ವತಿಮಾಪ್ತವಾನ್ ॥ ೪೨ ॥
ನಿವೇದಿತಾಶೀರ್ವ್ರತವಾಂಶ್ಚಚಾರ ಸುಮಹತ್ತಪಃ ।
ಅಕಾಲಮೃತ್ಯುನಾಶಾಯ ಸ್ವರಾಜ್ಯೇಽಮೃತಯುಕ್ತಯೇ ॥ ೪೩ ॥
ಮಂತ್ರರಾಜಂ ಜಪನ್ನಿತ್ಯಂ ಶ್ರಿತಾನಾಂ ಕಲ್ಪಪಾದಪಂ ।
ದದರ್ಶ ಶತವರ್ಷಾಂತೇ ನೃಹರಿಂ ದುರಿತಾಪಹಂ ॥ ೪೪ ॥
ಯೋಗಾಸನಾಬ್ಜನಿಲಯಂ ವಾಮಾಂಗಾವಸ್ಥಯಾ ಶ್ರಿಯಾ ।
ದಿವ್ಯಾಲಂಕೃತಸರ್ವಾಂಗಂ ಸ್ಫಟಿಕಾಮಲವಿಗ್ರಹಂ ॥ ೪೫ ॥

---

ಧ್ವನಿಯಿಂದ ದೇವಲೋಕವನ್ನೂ ತುಂಬುತ್ತಾ ಆದರಪೂರ್ವಕವಾಗಿ ತನ್ನ ಪತಿಗೆ ಚಿನ್ನದ ಸೌಟನಿಂದ ಷಡ್ರಸೋಪೇತವಾದ ಪದಾರ್ಥಗಳನ್ನು ಬಡಿಸುತ್ತಿದ್ದಳು.

೪೧. ಭಗವಂತನ ರೂಪಾಂತರಗಳೆಂಬಂತೆ ತೋರುತ್ತಿರುವ ಅನೇಕ ಪಾರ್ಷದರು ಸುತ್ತಲೂ ಕುಳಿತು ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಈ ಅದ್ಭುತ ವ್ಯಾಪಾರವನ್ನು ನೋಡಿ ಶ್ವೇತಮಹಾರಾಜನು ತಾನೇ ಧನ್ಯನಾದೆನೆಂದು ಚಿಂತಿಸಿದನು.

೪೨. ಕಣ್ಣುಗಳನ್ನು ಮುಚ್ಚಿ ತೆರೆಯುವಷ್ಟರಲ್ಲಿಯೇ ಆ ದೃಶ್ಯವು ಮಾಯವಾಗಿ ಪುನಃ ಮೊದಲಿನಂತೆ ಪೂಜಾದೃಶ್ಯವನ್ನೇ ನೋಡುತ್ತಿದ್ದನು. ಆ ದಿವಸದಿಂದ ಆತನು ಸಂಸಾರದಲ್ಲಿ ತೀವ್ರವಾದ ವೈರಾಗ್ಯವನ್ನು ಹೊಂದಿದನು.

೪೩–೪೪. ಬ್ರಾಹ್ಮಣೋತ್ತಮರಿಂದ ಆಶೀರ್ವಾದವನ್ನು ಸ್ವೀಕರಿಸಿ ನಿಯಮಸಹಿತನಾಗಿ ಮಹತ್ತರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು. ತನ್ನ ಅಕಾಲಮರಣವನ್ನು ಕಳೆದು ತನ್ನ ದೇಶದಲ್ಲಿ ಮೃತರಾದವರು ಮೋಕ್ಷವನ್ನು ಪಡೆಯಬೇಕೆಂಬ ಸದುದ್ದೇಶದಿಂದ ಆಶ್ರಿತರಿಗೆ ಕಲ್ಪವೃಕ್ಷದಂತಿರುವ ಅಷ್ಟಾಕ್ಷರಿಯೆಂಬ ಮಂತ್ರರಾಜವನ್ನು ನಿತ್ಯವೂ ಜಪಿಸುತ್ತಿದ್ದನು. ಇಂತು ಒಂದು ನೂರು ವರ್ಷಗಳು ಕಳೆಯಲು ಆತನು ಸಕಲ ಕಲ್ಮಷನಾಶನನಾದ ನರಸಿಂಹಸ್ವಾಮಿಯನ್ನು ನೋಡುವವನಾದನು.

೪೫–೪೬. ದೇವದೇವನು ಯೋಗಾಭ್ಯಾಸಕ್ಕೆ ಅನುಕೂಲವಾದ ಪದ್ಮಾಸನ ವನ್ನು ಹಾಕಿಕೊಂಡು ಎಡದೊಡೆಯಲ್ಲಿ ಶ್ರೀದೇವಿಯನ್ನು ಕೂಡಿಸಿಕೊಂಡಿದ್ದನು. ಎಲ್ಲ ಅವಯವಗಳಲ್ಲಿಯೂ ದಿವ್ಯಾಲಂಕಾರಗಳನ್ನು ಧರಿಸಿ ಸ್ಫಟಿಕದಂತೆ ನಿರ್ಮಲವಾದ ದೇಹದಿಂದೊಪ್ಪುತ್ತಿದ್ದನು. ದೇವತೆಗಳು, ಸಿದ್ಧರು, ಮುಕ್ತರೇ

ತ್ರಿದಶೈಃ ಸಿದ್ಧಮುಖ್ಯೈಶ್ಚ ಸ್ತೂಯಮಾನಂ ಸ್ಮಿತಾನನಂ ।
ಭ್ರಾಂತೋ ವಿಸ್ಮಯಭೀತಿಭ್ಯಾಂ ಹರ್ಷಗದ್ಗದಯಾ ಗಿರಾ ।
ಪ್ರಸೀದ ನಾಥೇತಿ ಲಪನ್ಸ್ಪಪಾತ ಧರಣೀತಲೇ ॥ ೪೬ ॥
ತಪಃಕೃಶಂ ತಂ ಪ್ರಣತಂ ದೃಷ್ಟ್ವಾ ಮನುಜಕೇಸರೀ ।
ಅಕಲ್ಮಷಂ ಕ್ಷಿತಿಪತಿಂ ವಿವಕ್ಷುರ್ಭಕ್ತವತ್ಸಲಃ ॥ ೪೭ ॥

ಶ್ರೀ ಭಗವಾನುವಾಚ :—

ಉತ್ತಿಷ್ಠ ವತ್ಸ ಭಕ್ತ್ಯಾ ತೇ ಪ್ರಸನ್ನಂ ವಿದ್ಧಿ ಮಾಂ ಪ್ರಭುಂ ।
ಮಯಿ ಪ್ರಸನ್ನೇ ನಾಲಭ್ಯಂ ವರಂ ತತ್ಪ್ರಾರ್ಥ್ಯತಾಂ ಭವಾನ್ ॥ ೪೮ ॥
ಶ್ರುತ್ವೇತ್ಥಂ ಭಗವದ್ವಾಕ್ಯಂ ಸಮುತ್ತಸ್ಥೌ ತತೋ ನೃಪಃ ।
ಬದ್ಧಾಂಜಲಿಪುಟೋ ನಮ್ರೋ ಭಕ್ತ್ಯೋವಾಚ ಜನಾರ್ದನಂ ॥ ೪೯ ॥

ಶ್ವೇತ ಉವಾಚ—

ಸ್ವಾಮಿನ್ಯದಿ ಪ್ರಸಾದಸ್ತೇ ಮಯಿ ಜಾತಃ ಸುದುರ್ಲಭಃ ।
ಸಾರೂಪ್ಯಮಥ ಸಂಪ್ರಾಪ್ಯ ಸ್ಥಾಸ್ಯಾಮಿ ತವ ಸನ್ನಿಧೌ ॥ ೫೦ ॥

---

ಮುಂತಾದವರಿಂದ ಸ್ತುತಿ ಪಾಠಗಳನ್ನು ಕೇಳುತ್ತ ಮುಗುಳ್ನಗೆಯಿಂದ ಕೂಡಿದ ಆತನ ಮುಖಕಮಲವನ್ನು ಕಂಡು ವಿಸ್ಮಯದಿಂದಲೂ, ಭಯದಿಂದಲೂ ದಿಗ್ಭ್ರಾಂತನಾಗಿ ಸಂತೋಷದಿಂದ ಕಂಠವು ಗದ್ಗದಿತವಾಗುತ್ತಿರಲು ಆ ಶ್ವೇತ ರಾಜನು "ಸ್ವಾಮಿಯೆ! ನನ್ನಲ್ಲಿ ಪ್ರಸನ್ನನಾಗು" ಎಂದು ಪ್ರಾರ್ಥಿಸುತ್ತ ಆತನ ಮುಂದೆ ಭೂಮಿಯಲ್ಲಿ ಬಿದ್ದನು.

೪೭. ತಪಸ್ಸಿನಿಂದ ಕ್ಷೀಣಶರೀರನೂ, ನಿಷ್ಕಲ್ಮಷನೂ ಆದ ಆ ಮಹಾರಾಜನು ಭೂಮಿಯಲ್ಲಿ ಸಾಷ್ಟಾಂಗನಮಸ್ಕಾರವನ್ನು ಮಾಡುತ್ತಿರುವುದನ್ನು ಭಕ್ತವತ್ಸಲನಾದ ನರಹರಿಯು ಕಂಡು ಆತನನ್ನು ಕುರಿತು ಹೇಳತೊಡಗಿದನು.

೪೮. ಭಗವಂತನು ಹೇಳುತ್ತಾನೆ:—"ವತ್ಸ! ಮೇಲಕ್ಕೇಳು. ನಿನ್ನ ಭಕ್ತ್ಯತಿಶಯದಿಂದ ಪ್ರಭುವಾದ ನಾನು ಪ್ರಸನ್ನನಾಗಿರುವೆನೆಂಬುದನ್ನು ತಿಳಿ. ನಾನು ಪ್ರಸನ್ನನಾಗಿರಲು ನಿನಗೆ ಅಲಭ್ಯವಾದುದು ಯಾವುದೂ ಇರುವುದಿಲ್ಲವು. ಆದುದರಿಂದ ನಿನಗೆ ಬೇಕಾದುದನ್ನು ಕೇಳಿಕೊ."

೪೯. ಇಂತೆಂದ ಭಗವಂತನ ವಾಕ್ಯವನ್ನು ಕೇಳಿ ಮಹಾರಾಜನು ನೆಲದಿಂದ ಮೇಲಕ್ಕೆದ್ದನು. ಆತನು ಅಂಜಲಿಬಂಧವನ್ನು ಮಾಡಿ ವಿನಯದಿಂದಲೂ ಭಕ್ತಿಯಿಂದಲೂ ಕೂಡಿದವನಾಗಿ ಜನಾರ್ದನನನ್ನು ಕುರಿತು ಪ್ರಾರ್ಥಿಸಿ ಕೊಂಡನು.

೫೦. ಶ್ವೇತನು ಹೇಳುತ್ತಾನೆ:—"ಎಲೈ ಸ್ವಾಮಿಯೆ! ಅತ್ಯಂತ ದುರ್ಲಭವಾದ ನಿನ್ನ ಅನುಗ್ರಹವು ನನ್ನ ಮೇಲೆ ಉಂಟಾಗಿರುವುದಾದರೆ ಸಾರೂಪ

ಸ್ಥಾಸ್ಯೇ ಯಾವನ್ನೃಪತ್ವೇಽಹಂ ಮದ್ರಾಜ್ಯೇ ನೋ ಜನಃ ಕ್ವಚಿತ್ ।
ಅಕಾಲೇ ಮ್ರಿಯತಾಂ ಜಂತುಃ ಕಾಲೇ ಚೇನ್ಮುಕ್ತಿಮಾಪ್ನುಯಾತ್ ॥೫೧॥
ತಚ್ಛ್ರುತ್ವಾ ಭಗವಾನ್ ಪ್ರಾಹ ಶ್ವೇತರಾಜಾನಮುತ್ತಮಂ ॥ ೫೨ ॥
ಶ್ವೇತ ತೇ ವಾಂಛಿತಂ ಭೂಯಾತ್ತಿಷ್ಠ ತ್ವಂ ಮಮ ದಕ್ಷಿಣೇ ।
ಭುಕ್ತ್ವಾ ವರ್ಷಸಹಸ್ರಂ ತು ಸ್ವರಾಜ್ಯಂ ಸುಸಮೃದ್ಧಿಮತ್ ॥ ೫೩ ॥
ಮಮ ನಿರ್ಮಾಲ್ಯಭೋಗೇನ ಕ್ಷೀಣಶೇಷಾಘಸಂಚಯಃ ।
ಸುನಿರ್ಮಲಾಂತಃಕರಣೋ ಮತ್ಸಾಯುಜ್ಯಮವಾಪ್ಸ್ಯಸಿ ॥ ೫೪ ॥
ವಟಸಾಗರಯೋರ್ಮಧ್ಯೇ ಮುಕ್ತಿಸ್ಥಾನೇ ಸುದುರ್ಲಭೇ ।
ಮದೀಯಾದ್ಯಾವತಾರಸ್ಯ ವಿಷ್ಣೋರ್ಮತ್ಸ್ಯಸ್ವರೂಪಿಣಃ ॥ ೫೫ ॥
ಸಮ್ಮುಖೀನೋ ವಸ ತ್ವಂ ಹಿ ಸ್ಫಟಿಕಾಮಲವಿಗ್ರಹಃ ।
ಖ್ಯಾತಿಂ ಯಾಸ್ಯಸಿ ಭೂಲೋಕೇ ಶ್ವೇತಮಾಧವಸಂಜ್ಞಯಾ ॥ ೫೬ ॥

---

ನಾಮುಕವಾದ ಮೋಕ್ಷವನ್ನು ಪಡೆದು ನಾನು ನಿರಂತರವೂ ನಿನ್ನ ಸನ್ನಿಧಿಯಲ್ಲಿಯೇ ಇರುವಂತೆ ವರವನ್ನು ಕೊಡು.

೫೧. ನಾನು ರಾಜನಾಗಿ ರಾಜ್ಯವನ್ನಾಳುತ್ತಿರುವವರೆಗೂ ನನ್ನ ರಾಜ್ಯದಲ್ಲಿ ಯಾವ ಜನರೂ ಅಕಾಲಮರಣವನ್ನು ಹೊಂದದಿರಲಿ. ಕಾಲಮೃತ್ಯುವಿಗೆ ಸಿಕ್ಕಿದ ಪ್ರತಿಯೊಂದು ಪ್ರಾಣಿಯೂ ಮೋಕ್ಷಪದವಿಯನ್ನು ಹೊಂದಬೇಕು.''

೫೨. ಈ ಪ್ರಾರ್ಥನೆಗಳನ್ನು ಕೇಳಿ ಭಗವಂತನು ಉತ್ತಮನಾದ ಶ್ವೇತ ಮಹಾರಾಜನನ್ನು ಕುರಿತು ಹೇಳತೊಡಗಿದನು.

೫೩. '' ಅಯ್ಯಾ ಶ್ವೇತರಾಜನೆ! ನಿನ್ನ ಇಷ್ಟಾರ್ಥವೇ ನೆರವೇರಲಿ. ಒಂದು ಸಾವಿರ ವರ್ಷಗಳವರೆವಿಗೂ ಸಕಲಸಮೃದ್ಧಿಗಳಿಂದ ಕೂಡಿದ ನಿನ್ನ ರಾಜ್ಯವನ್ನಾಳಿ ಬಳಿಕ ವೈಕುಂಠದಲ್ಲಿ ನನ್ನ ಬಲಗಡೆ ಪರಿಚಾರಕನಾಗಿ ನಿಂತಿರುವೆ.

೫೪. ನಿನ್ನಲ್ಲಿರುವ ಅಲ್ಪಾವಶಿಷ್ಟಗಳಾದ ಪಾಪಗಳ ಸಮೂಹವು ನನ್ನ ನಿರ್ಮಾಲ್ಯದ ಸೇವನೆಯಿಂದ ಮಾಯವಾಗುವುದು. ಆದುದರಿಂದ ಅತ್ಯಂತ ಪರಿಶುದ್ಧವಾದ ಅಂತಃಕರಣವುಳ್ಳವನಾಗಿ ನೀನು ನನ್ನ ಸಾಯುಜ್ಯವನ್ನು ಪಡೆಯುವೆ.

೫೫–೫೬. ವಟವೃಕ್ಷ ಮತ್ತು ಸಮುದ್ರಗಳ ಮಧ್ಯದಲ್ಲಿರುವ ಪ್ರದೇಶವು ಮುಕ್ತಿಸ್ಥಾನವೆಂದು ಪ್ರಸಿದ್ಧವಾಗಿ ಸಾಧಾರಣ ಮಾನವರಿಗೆ ಅತ್ಯಂತ ದುರ್ಲಭವಾಗಿರುವುದು. ಅಲ್ಲಿ ಮಹಾವಿಷ್ಣುವಾದ ನನ್ನ ಮೊದಲನೆಯ ಅವತಾರವಾದ ಮತ್ಸ್ಯಮೂರ್ತಿಯ ಸಮ್ಮುಖದಲ್ಲಿ ನೀನು ಸ್ಫಟಿಕನಿರ್ಮಲದೇಹವುಳ್ಳವನಾಗಿ ವಾಸಮಾಡು. ಮುಂದೆ ಶ್ವೇತಮಾಧವನೆಂಬ ಹೆಸರಿನಿಂದ ನೀನೂ ಭೂಮಂಡಲದಲ್ಲಿ ವಿಸ್ತಾರವಾದ ಪ್ರಖ್ಯಾತಿಯನ್ನು ಪಡೆಯುವೆ.

**ಯುವಯೋರಂತರಾಲೇ ಯೇ ಪ್ರಾಣಾಂಸ್ತ್ಯಕ್ಷ್ಯಂತಿ ಮಾನವಾಃ ।**
**ತಿರ್ಯಂಚೋಽಪಿ ಚ ಕೀಟಾ ವಾ ಧ್ರುವಂ ತೇ ಮುಕ್ತಿಮಾಪ್ನುಯುಃ ॥**
**ಅಮರಾ ಯತ್ರ ಮರಣಮಿಚ್ಛಂತಿ ಕಿಮು ಮಾನವಾಃ ।**
**ತವೋತ್ತರಸ್ಯಾಂ ದಿಶಿ ಯತ್ಸರಃ ಪಾಪನಿಬರ್ಹಣಂ ॥ ೫೮ ॥**
**ತತ್ರ ಸ್ನಾತ್ವಾ ಉಪಸ್ಪೃಶ್ಯ ತದೀಯೇ ದಕ್ಷಿಣೇ ತಟೇ ।**
**ಉಭಯೋರ್ದೃಷ್ಟಿಪೂತಃ ಸಂಸ್ತ್ಯಕ್ತ್ವಾ ಪ್ರಾಣಾನ್ವಿಮುಚ್ಯತೇ ॥ ೫೯ ॥**
**ಆಸಮಂತಾದಿದಂ ಕ್ಷೇತ್ರಂ ಯತ್ರ ತತ್ರಾಪಿ ಮುಕ್ತಿದಂ ।**
**ಮೂಢಾತ್ಮಾನಾಂ ವಿಶ್ವಸಿತುಂ ಪ್ರಧಾನಂ ಸ್ಥಾನಮೀರಿತಂ ॥ ೬೦ ॥**
**ತವ ರಾಜ್ಯೇ ತು ಯೇ ಲೋಕಾ ಮಮ ನಿರ್ಮಾಲ್ಯಭೋಜನಾಃ ।**
**ಮೃತಿರಾಕಾಲಿಕೀ ತೇಷಾಂ ನ ಕದಾಚಿದ್ಭವಿಷ್ಯತಿ ॥ ೬೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಶ್ವೇತಮಹಾರಾಜೋಪಾಖ್ಯಾನವರ್ಣನಂ" ನಾಮ ಸಪ್ತತ್ರಿಂಶೋಽಧ್ಯಾಯಃ**

---

೫೭. ನಿಮ್ಮಿಬ್ಬರ ಮಧ್ಯದಲ್ಲಿರುವ ಪುಣ್ಯಭೂಮಿಯಲ್ಲಿ ಪ್ರಾಣವನ್ನು ತ್ಯಜಿಸುವ ಮನುಷ್ಯರಾಗಲಿ, ಪಶುಪಕ್ಷಿಗಳೇ ಮುಂತಾದ ತಿರ್ಯಗ್ಜಂತುಗಳಾಗಲಿ, ಕೀಟಗಳೇ ಆಗಲಿ ಖಂಡಿತವಾಗಿಯೂ ಮೋಕ್ಷವನ್ನು ಹೊಂದುವರು.

೫೮. ಮರಣರಹಿತರಾದ ದೇವತೆಗಳೂ ಸಹ ಅಲ್ಲಿ ಮರಣವನ್ನು ಅಪೇಕ್ಷಿಸುವರೆಂದಮೇಲೆ ಮನುಷ್ಯರ ಮಾತನ್ನು ಹೇಳಲೇಕೆ? ನಿನಗೆ ಉತ್ತರ ದಿಕ್ಕಿನಲ್ಲಿರುವ ಸರೋವರವು ಸಕಲ ಪಾತಕಗಳನ್ನೂ ನಾಶಗೊಳಿಸುವುದು.

೫೯–೬೦. ಅದರಲ್ಲಿ ಸ್ನಾನವನ್ನು ಮಾಡಿ ಆಚಮನಪೂರ್ವಕವಾಗಿ ಅದರ ದಕ್ಷಿಣತೀರದಲ್ಲಿ ಕುಳಿತು ಶ್ವೇತಮಾಧವ–ಮತ್ಸ್ಯಮೂರ್ತಿಗಳಿಬ್ಬರ ಸನ್ನಿಧಿಯಲ್ಲಿ ಯಾವನು ಪ್ರಾಣಗಳನ್ನು ಬಿಡುವನೊ, ಅವನಿಗೆ ಮೋಕ್ಷವು ನಿಶ್ಚಯವು. ಈ ಕ್ಷೇತ್ರವು ತುದಿಮೊದಲೆನ್ನದೆ ಎಲ್ಲೆಡೆಗಲ್ಲಿಯೂ ಮೋಕ್ಷದಾಯಕವಾಗಿರುವುದು. ಆದರೂ ಮೂಢಮಾನವರಿಗೆ ದೇವನಾದ ನನ್ನಲ್ಲಿ ವಿಶ್ವಾಸವನ್ನುಂಟುಮಾಡಲು ಈ ಸ್ಥಾನವು ಬಹಳ ಮುಖ್ಯವಾದುದೆಂದು ಹೇಳಲ್ಪಟ್ಟಿರುವುದು.

೬೧. ನಿನ್ನ ರಾಜ್ಯದಲ್ಲಿರುವ ಯಾವ ಜನರು ನನ್ನ ನೈವೇದ್ಯಶೇಷವನ್ನು ಭೋಜನ ಮಾಡುತ್ತಿರುವರೊ, ಅವರಿಗೆ ಯಾವಾಗಲೂ ಅಕಾಲಮೃತ್ಯುವು ಸಂಭವಿಸುವುದಿಲ್ಲವು."

**ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಹಾತ್ಮ್ಯೆಯ ಜೈಮಿನಿಋಷಿ ಸಂವಾದದಲ್ಲಿ "ಶ್ವೇತಮಹಾರಾಜೋಪಾಖ್ಯಾನವರ್ಣನ" ವೆಂಬ ಮುವ್ವತ್ತೇಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥಾಷ್ಟತ್ರಿಂಶೋಽಧ್ಯಾಯಃ

## ದಮನಕ ವೃತ್ತಾಂತನಿರೂಪಣಂ

ಜೈಮಿನಿರುವಾಚ :—

ಇತಿ ದತ್ವಾ ವರಂ ತಸ್ಮೈ ಶ್ವೇತರಾಜಾಯ ವೈ ಪುರಾ ।
ಜಗಾಮಾಂತರ್ಹಿತೋ ವಿಪ್ರಾಃ ಪ್ರಾಸಾದಾಂತಃಸ್ಥಿತೋ ಹರಿಃ ॥ ೧ ॥
ಸಮಸ್ತಜಗತಾಂ ಯಾ ಶ್ರೀಃ ಸೃಷ್ಟಿಸ್ಥಿತಿವಿನಾಶಕೃತ್ ।
ವೈಷ್ಣವೀ ಶಕ್ತಿರತುಲಾ ಪರಿವೇಷಣಕಾರಿಣೀ ॥ ೨ ॥
ಸುಧೋಪಮಂ ಸುಪಕ್ವಾನ್ನಂ ಭುಂಕ್ತೇ ನಾರಾಯಣಃ ಪ್ರಭುಃ ।
ತದುಚ್ಛಿಷ್ಟೋಪಭೋಗೋ ಹಿ ಸರ್ವಾಘಕ್ಷಯಕಾರಕಃ ॥ ೩ ॥
ನ ತಾದೃಶಸಮಂ ಪುಣ್ಯಂ ವಸ್ತ್ವಸ್ತಿ ಪೃಥಿವೀತಲೇ ।
ಪಾಪಸಂಸ್ಕಾರಕರ್ತ್ರೂಣಾಂ ಸಂಪರ್ಕಸ್ತು ನ ದುಷ್ಯತಿ ॥ ೪ ॥
ಪದ್ಮಾಯಾಃ ಸನ್ನಿಧಾನೇನ ಸರ್ವೇ ತೇ ಶುಚಯಃ ಸ್ಮೃತಾಃ ।
ವಿಷ್ಣ್ವಾಲಯಗತಂ ತದ್ಧಿ ನಿರ್ಮಾಲ್ಯಂ ಪತಿತಾದಯಃ ॥ ೫ ॥

---

## ಕನ್ನಡದ ಅನುವಾದ

### ದಮನಕನವೃತ್ತಾಂತ ನಿರೂಪಣ

೧. ಜೈಮಿನಿಯು ಹೇಳುತ್ತಾನೆ:—ಎಲೈ ಬ್ರಾಹ್ಮಣರಿರಾ! ಇಂತು ಶ್ರೀಮನ್ನಾರಾಯಣನು ಹಿಂದೆ ಶ್ವೇತಮಹಾರಾಜನಿಗೆ ವರವನ್ನು ಕೊಟ್ಟು ಅಂತರ್ಧಾನವನ್ನು ಹೊಂದಿ ತನ್ನ ಪ್ರಾಸಾದವನ್ನು ಪ್ರವೇಶಿಸಿ ನಿಂತನು.

೨. ಹದಿನಾಲ್ಕು ಲೋಕಗಳ ಸೃಷ್ಟಿ, ಸ್ಥಿತಿ, ಲಯಗಳನ್ನುಂಟು ಮಾಡುವವಳೂ, ಮಹಾ ವಿಷ್ಣುವಿನ ಅಪಾರವಾದ ಶಕ್ತಿಸ್ವರೂಪಿಣಿಯೂ ಆದ ಲಕ್ಷ್ಮೀದೇವಿಯೇ ಆತನ ನೈವೇದ್ಯಕ್ಕೆ ಸಹಾಯಕಳಾಗಿರುವಳು.

೩. ಸರ್ವೇಶ್ವರನಾದ ಶ್ರೀಮನ್ನಾರಾಯಣನು ಅಮೃತಕ್ಕೆ ಸಮಾನವಾದ ಆ ಸುಪಕ್ವಾನ್ನವನ್ನು ಸ್ವೀಕರಿಸುವನು. ಆತನ ನೈವೇದ್ಯಶೇಷವನ್ನು ಸ್ವೀಕರಿಸುವುದರಿಂದ ಸಕಲ ಪಾಪಗಳೂ ನಾಶವನ್ನು ಹೊಂದುವುವು.

೪. ಆ ನೈವೇದ್ಯಶೇಷಕ್ಕೆ ಸಮಾನವಾದ ಪುಣ್ಯವಸ್ತುವು ಭೂಲೋಕದಲ್ಲಿ ಮತ್ತೊಂದಿಲ್ಲವು. ತಮ್ಮ ಪಾತಕಗಳನ್ನು ಕಳೆದುಕೊಳ್ಳಲು ಅಪೇಕ್ಷಿಸುವ ಪಾಪಿಗಳ ಸಂಪರ್ಕದಿಂದಲೂ ಅದು ಅಪರಿಶುದ್ಧವಾಗುವುದಿಲ್ಲ.

೫–೮. ಶ್ರೀಮಹಾಲಕ್ಷ್ಮಿಯ ನಿತ್ಯಸಾನ್ನಿಧ್ಯವು ಅಲ್ಲಿರುವುದರಿಂದ ಆ ಪದಾರ್ಥಗಳೆಲ್ಲವೂ ಪರಿಶುದ್ಧಗಳೆಂದು ಸ್ಮೃತಿಗಳು ಹೇಳುವುವು. ಆ ನಿರ್ಮಾಲ್ಯವು

F

**ಸ್ಪೃಶಂತಿ ಚೇನ್ನ ದುಷ್ಟಂ ತದ್ಯಥಾ ವಿಷ್ಣುಸ್ತಥೈವ ತತ್ ।**
**ವ್ರತಸ್ಥಾ ವಿಧವಾಶ್ಚೈವ ಸರ್ವೇ ವರ್ಣಾಶ್ರಮಾಸ್ತಥಾ ॥ ೬ ॥**
**ತತ್ಪ್ರಾಶನೇನ ಪೂಯಂತೇ ದೀಕ್ಷಿತಾಶ್ಚಾಗ್ನಿಹೋತ್ರಿಣಃ ।**
**ದರಿದ್ರಃ ಕೃಪಣೋ ವಾಪಿ ಗೃಹಸ್ಥಃ ಪ್ರಭುರೇವ ವಾ ॥ ೭ ॥**
**ಸ್ವದೇಶ್ಯಾಃ ಪರದೇಶ್ಯಾ ವಾ ಸರ್ವೇ ತತ್ರ ಸಮಾಗತಾಃ ।**
**ನಾಭಿಮಾನಂ ಪ್ರಕುರ್ವೀರನ್ವಿಷ್ಣೋರ್ನಿರ್ಮಾಲ್ಯಭಕ್ಷಣೇ ॥ ೮ ॥**
**ಭಕ್ತ್ಯಾ ಲೋಭಾತ್ಕೌತುಕಾದ್ವಾ ಕ್ಷುಧಾಸಂಶಮನೇನ ವಾ ।**
**ಆಕಂಠಭಕ್ಷಿತಂ ತದ್ಧಿ ಪುನಾತಿ ಸಕಲಾಂಹಸಃ ॥ ೯ ॥**
**ಸರ್ವರೋಗೋಪಶಮನಂ ಪುತ್ರಪೌತ್ರಪ್ರವರ್ಧನಂ ।**
**ದಾರಿದ್ರ್ಯಹರಣಂ ಶ್ರೇಷ್ಠಂ ವಿದ್ಯಾಯುಃಶ್ರೀಪ್ರದಂ ಶುಭಂ ॥ ೧೦ ॥**
**ಪಕ್ಷಪಾತೋ ಮಹಾಂಸ್ತತ್ರ ವಿಷ್ಣೋರಮಿತತೇಜಸಃ ।**
**ನಿಂದಂತಿ ಯೇ ತದಮೃತಂ ಮೂಢಾಃ ಪಂಡಿತಮಾನಿನಃ ॥ ೧೧ ॥**

---

ವಿಷ್ಣುದೇವಾಲಯಗತವಾಗಿರುವುದರಿಂದ ಪತಿತರೇ ಮೊದಲಾದವರು ಮುಟ್ಟಿದರೂ ದುಷ್ಟವಾಗಲಾರದು. ಮಹಾವಿಷ್ಣುವು ಹೇಗೆ ನಿತ್ಯಶುದ್ಧನೊ, ಹಾಗೆಯೇ ಆ ನಿರ್ಮಾಲ್ಯವೂ ನಿತ್ಯಶುದ್ಧವಾದುದು. ವ್ರತೋಪವಾಸನಿರತರೂ, ವಿಧವಾಸ್ತ್ರೀಯರೂ, ಸಕಲ ವರ್ಣಾಶ್ರಮಗಳವರೂ, ಯಜ್ಞದೀಕ್ಷೆಯನ್ನು ಸ್ವೀಕರಿಸಿದವರೂ, ಅಗ್ನಿಹೋತ್ರನಿರತರೂ, ಸಕಲ ಜನರೂ ಆ ನಿರ್ಮಾಲ್ಯದ ಸೇವನೆಯಿಂದ ಪುನೀತರಾಗುವರು ದರಿದ್ರರು, ಲೋಭಿ, ಗೃಹಸ್ಥ, ಮಹಾರಾಜ, ದೇಶನಿವಾಸಿಗಳು, ಪರದೇಶೀಯರು ಮುಂತಾಗಿ ಅಲ್ಲಿಗೆ ಬಂದು ಸೇರುವ ಸಕಲರೂ ಆ ಮಹಾ ವಿಷ್ಣುವಿನ ನಿರ್ಮಾಲ್ಯವನ್ನು ಸೇವಿಸುವ ವಿಷಯದಲ್ಲಿ ಅಹಂಕಾರವನ್ನಾಗಲಿ ಸಂಕೋಚವನ್ನಾಗಲಿ ಎಂದಿಗೂ ಮಾಡಬಾರದು.

೯. ಭಕ್ತಿಯಿಂದಾಗಲಿ, ಲೋಭದಿಂದಾಗಲಿ, ಕುತೂಹಲದಿಂದಾಗಲಿ, ಹಸಿವನ್ನು ಕಳೆಯುವ ಆತುರದಿಂದಾಗಲಿ ಆಕಂಠಪೂರ್ತಿಯಾಗಿ ಸೇವಿಸಿದ ನಿರ್ಮಾಲ್ಯವು ಸಕಲ ಪಾಪಗಳನ್ನೂ ಕಳೆಯುವುದು.

೧೦. ಆ ನೈವೇದ್ಯವು ಸೇವಿಸಿದವರ ಸಕಲ ರೋಗಗಳನ್ನೂ ಹೋಗಲಾಡಿಸುವುದು. ಪುತ್ರಪೌತ್ರಾದಿ ಸಂತಾನವನ್ನು ಅಭಿವೃದ್ಧಿಗೊಳಿಸುವುದು. ದಾರಿದ್ರ್ಯವನ್ನು ಕಳೆದು ಸರ್ವಶ್ರೇಷ್ಠವೂ ಮಂಗಳಪ್ರದವೂ ಆಗಿ ವಿದ್ಯೆಯನ್ನೂ, ದೀರ್ಘಾಯುಷ್ಯವನ್ನೂ, ಐಶ್ವರ್ಯವನ್ನೂ ದೊರೆಯಿಸುವುದು.

೧೧. ಆ ನೈವೇದ್ಯದ ವಿಷಯದಲ್ಲಿ ಅಪರಿಮಿತ ತೇಜೋರಾಶಿಯಾದ ಮಹಾವಿಷ್ಣುವಿಗೆ ಅಧಿಕವಾದ ಅಭಿಮಾನವಿರುವುದು. ಅಮೃತೋಪಮವಾದ ಅದನ್ನು

ಸ್ವಯಂ ದಂಡಧರಸ್ತೇಷು ಸಹತೇ ನಾಪರಾಧಿನಃ ।
ಯೇಷಾಮತ್ರ ಸ ದಂಡಶ್ಚೇದ್ಧ್ರುವಾ ತೇಷಾಂ ಹಿ ದುರ್ಗತಿಃ ॥ ೧೨ ॥
ಕುಂಭೀಪಾಕೇ ಮಹಾಘೋರೇ ಪಚ್ಯಂತೇ ತೇಽತಿದಾರುಣೇ ।
ನ ವಿಕ್ರಯಃ ಕ್ರಯೋ ವಾಪಿ ಪ್ರಶಸ್ತಸ್ಯ ಭೋ ದ್ವಿಜಾಃ ॥ ೧೩ ॥
ನಿರ್ಮಾಲ್ಯಂ ಜಗದೀಶಸ್ಯ ನಾಶಿತ್ವಾಶ್ನಾಮಿ ಕಿಂಚನ ।
ಇತಿ ಸತ್ಯಪ್ರತಿಜ್ಞೋ ಯಃ ಪ್ರತ್ಯಹಂ ತಚ್ಚ ಭಕ್ಷಯೇತ್ ॥ ೧೪ ॥
ಸರ್ವಪಾಪವಿನಿರ್ಮುಕ್ತಃ ಶುದ್ಧಾಂತಃಕರಣೋ ನರಃ ।
ಸ ಶುದ್ಧಂ ವೈಷ್ಣವಸ್ಥಾನಂ ಕ್ರಮಾದ್ಯಾತಿ ನ ಸಂಶಯಃ ॥ ೧೫ ॥
ಚಿರಸ್ಥಮಪಿ ಸಂಶುಷ್ಕಂ ನೀತಂ ವಾ ದೂರದೇಶತಃ ।
ಯಥಾ ಯಥೋಪಯುಕ್ತಂ ತತ್ಸರ್ವಂ ಪಾಪಾಪನೋದನಂ ॥ ೧೬ ॥
ಕುಕ್ಕುರಸ್ಯ ಮುಖಾದ್ಭ್ರಷ್ಟಂ ತದನ್ನಂ ಪತಿತಂ ಯದಿ ।
ಬ್ರಾಹ್ಮಣೇನಾಪಿ ಭೋಕ್ತವ್ಯಮಿತರೇಷಾಂ ತು ಕಾ ಕಥಾ ॥ ೧೭ ॥

---

ಯಾರು ನಿಂದಿಸುವರೊ, ಅವರು ಗರ್ವದಿಂದ ತಾವೇ ಪಂಡಿತರೆಂದು ಹೇಳಿಕೊಂಡು ತಿರುಗುವ ಮೂರ್ಖರೆಂದೇ ತಿಳಿಯಬೇಕು.

೧೨. ಅಂತಹ ಅಪರಾಧಿಗಳನ್ನು ಯಮಧರ್ಮರಾಜನು ಸಹಿಸಲಾರದೆ ತಾನೇ ದಂಡನೆಗೆ ಗುರಿಮಾಡುವನು. ಅಲ್ಲಿ ಯಾರಿಗೆ ದಂಡವಾಗುವುದೋ, ಅವರಿಗೆ ನಿಶ್ಚಯವಾಗಿಯೂ ದುರ್ಗತಿಯು ತಪ್ಪುವುದಿಲ್ಲ.

೧೩. ಆ ಜನರು ಮಹಾ ಘೋರವೂ, ಅತ್ಯಂತ ದುಸ್ಸಹವೂ ಆದ ಕುಂಭೀಪಾಕವೆಂಬ ನರಕದಲ್ಲಿ ಬಿದ್ದು ಯಾತನೆಗಳನ್ನನುಭವಿಸುವರು. ಎಲೈ ಬ್ರಾಹ್ಮಣರಿರಾ! ಆ ಪ್ರಸಾದವನ್ನು ಹಣಕ್ಕಾಗಿ ಮಾರುವುದಾಗಲಿ ಕೊಳ್ಳುವುದಾಗಲಿ ಪ್ರಶಸ್ತವಲ್ಲವು.

೧೪. ಸತ್ಯಪ್ರತಿಜ್ಞನಾದ ಮಾನವನು "ಮೊದಲು ಜಗನ್ನಾಥನ ನಿರ್ಮಾಲ್ಯವನ್ನು ಸೇವಿಸದೆ ಮತ್ತೊಂದು ಪದಾರ್ಥವನ್ನು ತಿನ್ನುವುದಿಲ್ಲ" ಎಂಬ ಪ್ರತಿಜ್ಞೆಯನ್ನು ಮಾಡಿ ಪ್ರತಿದಿವಸವೂ ಅದನ್ನು ಸ್ವೀಕರಿಸಬೇಕು.

೧೫. ಆ ಮಾನವನು ಸಕಲ ಪಾಪಗಳಿಂದಲೂ ಪರಿಶುದ್ಧನಾಗಿ ಅಂತಃಕರಣವು ನಿರ್ಮಲವಾಗಲು ಸಕಲ ದೋಷವರ್ಜಿತವಾದ ವೈಷ್ಣವಲೋಕವನ್ನು ಕ್ರಮವಾಗಿ ಪಡೆಯುವುದರಲ್ಲಿ ಸಂದೇಹವಿಲ್ಲವು.

೧೬. ಬಹಳ ಕಾಲದ್ದಾಗಲಿ, ಒಣಗಿಹೋದದ್ದಾಗಲಿ, ಬಹಳ ದೂರದೇಶದಿಂದ ತಂದುದಾಗಲಿ, ಯಾವ ವಿಧದಿಂದ ಲಭಿಸಿದುದಾದರೂ ಜಗನ್ನಾಥನ ಪ್ರಸಾದವು ಪಾಪಗಳನ್ನು ನಾಶಗೊಳಿಸುವುದು.

೧೭. ನಾಯಿಯ ಮುಖದಿಂದ ಬಿದ್ದ ಎಂಜಲಾದರೂ, ಪರಮಾತ್ಮನ

**ಉಪೋಷ್ಯ ತಿಷ್ಠತಾ ವಾಪಿ ನೋಪವಾಸಂ ಚ ಕುರ್ವತಾ ।**
**ಅಶುಚಿರ್ವಾಪ್ಯನಾಚಾರೋ ಮನಸಾ ಪಾಪಮಾಚರೇತ್ ।**
**ಪ್ರಾಪ್ತಮಾತ್ರೇಣ ಭೋಕ್ತವ್ಯಂ ನಾತ್ರ ಕಾರ್ಯಾ ವಿಚಾರಣಾ ॥ ೧೮ ॥**
**ನೈವೇದ್ಯಾನ್ನಂ ಜಗದ್ಭರ್ತುರ್ಗಾಂಗಂ ವಾರಿ ಸಮಂ ದ್ವಯಂ ।**
**ದೃಷ್ಟೇಃ ಸ್ವರ್ಗಾದಿ ಸಂಪ್ರಾಪ್ತಿರ್ಭಕ್ಷಣಾಚ್ಚಾಘನಾಶನಂ ॥ ೧೯ ॥**
**ಜಗದ್ಧಾತ್ರ್ಯಾ ಹಿ ಯತ್ಪಕ್ವಂ ವೈಷ್ಣವೇಽಗ್ನೌ ಸುಸಂಸ್ಕೃತೇ ।**
**ಭುಂಕ್ತೇಽನ್ವಹಂ ಚಕ್ರಪಾಣಿರ್ಯುಗಮನ್ವಂತರಾದಿಷು ॥ ೨೦ ॥**
**ಸಪ್ತದ್ವೀಪಧರಾಮಧ್ಯೇ ಸಾನ್ನಿಧ್ಯಂ ನೇದೃಶಂ ಹರೇಃ ।**
**ಯಾದೃಶಂ ನೀಲಗೋತ್ರೇಽಸ್ಮಿನ್ವ್ಯಾಜಮಾನುಷಚೇಷ್ಟಿತಂ ॥ ೨೧ ॥**
**ದಾರುರೂಪಂ ಪರಂ ಬ್ರಹ್ಮ ಸರ್ವಚಾಕ್ಷುಷಗೋಚರಂ ।**
**ಪ್ರಕಾಶತೇ ಭೋ ಮುನಯೋ ನ ದೃಷ್ಟಂ ನ ಶ್ರುತಂ ಕ್ವಚಿತ್ ॥ ೨೨ ॥**

---

ಪ್ರಸಾದವು ಬ್ರಾಹ್ಮಣೋತ್ತಮರಿಗೂ ಸೇವ್ಯವಾದುದೆಂದ ಮೇಲೆ ಇತರ ವರ್ಣದವರನ್ನು ಕುರಿತು ಬೇರೆ ಹೇಳಬೇಕೆ?

೧೮. ಉಪವಾಸವನ್ನು ಮಾಡುತ್ತಿರುವವನಾಗಲಿ, ಭೋಜನವನ್ನು ಮಾಡಿದವನಾಗಲಿ, ಶೌಚಾಚಾರವರ್ಜಿತನಾಗಲಿ, ವರ್ಣಾಶ್ರಮಧರ್ಮಗಳನ್ನು ತ್ಯಜಿಸಿದವನಾಗಲಿ, ಮಾನಸಿಕಗಳಾದ ಪಾಪಗಳನ್ನು ಮಾಡಿದವನಾಗಲಿ, ಪುರುಷೋತ್ತಮನ ಪ್ರಸಾದವನ್ನು ಸಿಕ್ಕಿದೊಡನೆಯೇ ಸೇವಿಸಬೇಕು. ಈ ವಿಷಯದಲ್ಲಿ ಸಂದೇಹಪಡಬಾರದು.

೧೯. ಜಗನ್ನಾಥನ ನೈವೇದ್ಯರೂಪವಾದ ಅನ್ನವೂ, ಗಂಗಾನದಿಯ ಜಲವೂ ಸಮಾನಪ್ರಭಾವವುಳ್ಳವುಗಳಾಗಿರುವುವು. ದರ್ಶನಮಾತ್ರದಿಂದಲೇ ಸ್ವರ್ಗಾದಿ ಸಕಲ ಭೋಗಗಳನ್ನೊದಗಿಸುವುವು. ಸೇವನೆ ಮಾಡುವುದರಿಂದ ಸಕಲ ಪಾತಕಗಳೂ ಮಾಯವಾಗುವುವು.

೨೦. ಸಂಸ್ಕಾರವನ್ನು ಹೊಂದಿದ ವೈಷ್ಣವಾಗ್ನಿಯಲ್ಲಿ ಲೋಕೇಶ್ವರಿಯಾದ ಲಕ್ಷ್ಮೀದೇವಿಯು ಪಕ್ವಮಾಡಿದ ಅನ್ನವನ್ನೇ ಯುಗಮನ್ವಂತರಾದಿ ಸಕಲ ಕಾಲಗಳಲ್ಲಿಯೂ ಚಕ್ರಪಾಣಿಯಾದ ಶ್ರೀಹರಿಯು ಪ್ರತಿದಿನದಲ್ಲಿಯೂ ಸ್ವೀಕರಿಸುವನು.

೨೧. ಕಾರಣಾಂತರಗಳಿಂದ ಲೀಲಾಮಾನುಷದಾರುದೇಹವನ್ನು ತಳೆದು ಈ ನೀಲಾಚಲದಲ್ಲಿ ನೆಲಸಿರುವ ಜಗನ್ನಾಥನ ಸಾನ್ನಿಧ್ಯಕ್ಕೆ ಸಮಾನವಾದ ದೇವತಾ ಸನ್ನಿಧಿಯು ಸಪ್ತದ್ವೀಪಗಳನ್ನೊಳಕೊಂಡ ಈ ಭೂಮಂಡಲದಲ್ಲಿ ಮತ್ತೆ ಯಾವ ಕ್ಷೇತ್ರದಲ್ಲಿಯೂ ಇಲ್ಲವು.

೨೨. ಎಲೈ ಮಹಾಮುನಿಗಳಿರಾ! ಪರಾತ್ಪರವಾದ ಬ್ರಹ್ಮವಸ್ತುವೇ ಮರದ

ತಸ್ಮೈ ಪ್ರವೃತ್ತಿರೂಪಾಯ ಬ್ರಹ್ಮಣೇ ಪರಮಾತ್ಮನೇ ।
ಪ್ರವೃತ್ತಿರೂಪಾ ಶಕ್ತಿಃ ಶ್ರೀಃ ಪ್ರವರ್ತಯತಿ ಯದ್ಧವಿಃ ॥ ೨೩ ॥
ತದಶ್ನಾತಿ ಜಗನ್ನಾಥಸ್ತಚ್ಛೇಷಂ ದುರಿತಾಪಹಂ ।
ಕಿಮತ್ರ ಚಿತ್ರಂ ಭೋ ವಿಪ್ರಾ ಯದುಕ್ತಂ ಮುಕ್ತಿಕಾರಣಂ ॥ ೨೪ ॥
ನಾಲ್ಪಪುಣ್ಯವತಾಂ ತತ್ರ ವಿಶ್ವಾಸಶ್ಚ ಪ್ರಜಾಯತೇ ।
ವೇದಾಚಾರಪ್ರಧಾನೇಷು ಯುಗೇ ಹ್ಯೇತತ್ಪ್ರಕೀರ್ತಿತಂ ॥ ೨೫ ॥
ಮಹಿಮಾನಂ ನ ವೇದಾಸ್ಯ ವಿಶೇಷಾಚ್ಛ್ರೂಯತಾಂ ಕಲೌ ।
ಘೋರೇ ಕಲಿಯುಗೇ ತಸ್ಮಿಂಸ್ತ್ರಿಪಾದೋ ಧರ್ಮವಿಪ್ಲವಃ ॥ ೨೬ ॥
ಧರ್ಮಃ ಸ್ಯಾದೇಕಪಾದಸ್ತು ಕ್ವಚಿತ್ತಸ್ಯ ಭಯಾಚ್ಚರೇತ್ ।
ಸರ್ವೇಽನೃತಪ್ರಧಾನಾ ಹಿ ದಾಂಭಿಕಾಃ ಶಠವೃತ್ತಯಃ ॥ ೨೭ ॥

---

ವ್ಯೆಯುಳ್ಳದಾಗಿ ಇಲ್ಲಿ ಸಕಲರಿಗೂ ಸ್ಥೂಲನೇತ್ರಗಳಿಗೇ ಗೋಚರವಾಗಿ ಪ್ರಕಾಶಿಸುತ್ತಿರುವುದು. ಇಂತಹ ಅದ್ಭುತವು ಮತ್ತೆಲ್ಲಿಯೂ ನೋಡಿದುದಿಲ್ಲ, ಕೇಳಿದುದೂ ಇಲ್ಲ.

೨೩. ಪ್ರವೃತ್ತಿರೂಪನೂ, ಸರ್ವವ್ಯಾಪಿಯೂ ಆದ ಪರಮಾತ್ಮನಿಗೆ ಆತನ ಪ್ರವೃತ್ತಿ ರೂಪವಾದ ಶಕ್ತಿಯೆನಿಸಿದ ಮಹಾ ಲಕ್ಷ್ಮಿಯೇ ಉಚಿತವಾದ ಭೋಜನೋಪಕರಣಗಳನ್ನು ಸಿದ್ಧಗೊಳಿಸುವಳು.

೨೪. ಅವುಗಳನ್ನೇ ಲೋಕೇಶ್ವರನಾದ ಜಗನ್ನಾಥನು ಭೋಜನ ಮಾಡುವನು. ಎಲೈ ಬ್ರಾಹ್ಮಣರಿರಾ! ಆತನ ಭುಕ್ತಶೇಷವೇ ಸಕಲಪಾತಕಗಳನ್ನು ನಿರ್ಮೂಲಗೊಳಿಸಿ ಮೋಕ್ಷ ಸಾಮ್ರಾಜ್ಯವನ್ನು ಕೈಗೂಡಿಸುವುದೆಂದು ನಾನು ಹೇಳಿದುದರಲ್ಲಿ ಆಶ್ಚರ್ಯವೇನಿರುವುದು?

೨೫. ಸ್ವಲ್ಪವಾದ ಪುಣ್ಯವನ್ನು ಮಾಡಿದವರಿಗೆ ಈ ವಿಷಯದಲ್ಲಿ ವಿಶ್ವಾಸ ಉಂಟಾಗುವುದೇ ಇಲ್ಲವು. ವೈದಿಕ ಕರ್ಮಾಚಾರಗಳೇ ಪ್ರಧಾನಗಳಾಗಿದ್ದ ಹಿಂದಿನ ಯುಗಗಳಲ್ಲಿ ಈ ವಿಷಯವು ಬಹುವಾಗಿ ಪ್ರಖ್ಯಾತವಾಗಿದ್ದಿತು.

೨೬. ಆದರೆ ಈ ಕಲಿಯುಗದಲ್ಲಿ ವಿಶೇಷವಾಗಿ ಶ್ರೀಪುರುಷೋತ್ತಮನ ಮಹಿಮೆಯನ್ನು ಬಲ್ಲವರೇ ಇಲ್ಲವು. ಭಯಂಕರವಾದ ಈ ಕಲಿಯುಗದಲ್ಲಿ ಧರ್ಮದ ಮೂರು ಪಾದಗಳೂ ನಾಶವನ್ನು ಹೊಂದಿರುವುವು.

೨೭. ಸನಾತನ ಧರ್ಮವು ಒಂದೇ ಕಾಲಿನ ಮೇಲೆ ನಿಂತಿರುವುದಾಗಿ ಬಲಶಾಲಿಯಾದ ಅಧರ್ಮಕ್ಕೆ ಹೆದರುತ್ತ ಒಮ್ಮೊಮ್ಮೆ ಸ್ವಲ್ಪವಾಗಿ ನಡೆಯುತ್ತಿರುವುದು. ಈ ಕಲಿಯುಗದಲ್ಲಿ ಸಕಲಮಾನವರೂ ಅನೃತವನ್ನೇ ಮುಂದು ಮಾಡಿಕೊಂಡು ಅಹಂಕಾರದಿಂದ ಮೂರ್ಖರಾಗಿಯೂ ಪ್ರವರ್ತಿಸುತ್ತಿರುವರು.

**ಪ್ರಾಯಶ್ಚ ಧರ್ಮವಿಮುಖಾ ಜಿಹ್ವೋಪಸ್ಥಪರಾಯಣಾಃ ।**
**ನ ಧ್ಯಾಯಂತಿ ತಪಸ್ಯಂತಿ ವ್ರತಯಂತಿ ಕದಾಚನ ॥ ೨೮ ॥**
**ಅಧರ್ಮಬಹುಲಾಃ ಸರ್ವೇ ಹಿಂಸಕಾ ಲೋಲುಪಾಃ ಪರಂ ।**
**ಪರೇಷಾಂ ಪರಿವಾದೇನ ತುಷ್ಯಂತಿ ಸ್ವಕೃತಂ ವಿನಾ ॥ ೨೯ ॥**
**ಪ್ರಸಂಗಾತ್ಕೌತುಕಾದ್ವಾಪಿ ನಿಘ್ನಂತಿ ಪರಕರ್ಮ ವೈ ।**
**ಕ್ಷುದ್ರಕಾರ್ಯಾಶಯಾತ್ಸ್ವಸ್ಯ ಪರಕಾರ್ಯಪ್ರಬಾಧಕಾಃ ॥ ೩೦ ॥**
**ಧರ್ಮಲಬ್ಧಾಂ ಸ್ತ್ರಿಯಂ ರಮ್ಯಾಮವಜ್ಞಾಯ ಸ್ವವೇಶ್ಮನಿ ।**
**ಪರಯೋಷಿತಿ ನಿಂದ್ಯಾಯಾಂ ಪ್ರಸಕ್ತಾಃ ಪಶುಚೇಷ್ಟಿತಾಃ ॥ ೩೧ ॥**
**ಅಗ್ನಿಹೋತ್ರಾದಿಕಂ ವಾಪಿ ವ್ರತಂ ನಾನ್ಯತ್ಕ್ವಚಿತ್ಕ್ವಚಿತ್ ।**
**ಜೀವಿಕಾ ತದ್ದ್ವಿಜಾತೀನಾಂ ಏಷಾಂ ವಾ ಪಾರಲೌಕಿಕಂ ॥ ೩೨ ॥**

---

೨೮. ಪ್ರಾಯಿಕವಾಗಿ ಜನರೆಲ್ಲರೂ ಧರ್ಮಕಾರ್ಯಗಳಲ್ಲಿ ವಿಮುಖರಾಗಿರುವರು. ಜಿಹ್ವೇಂದ್ರಿಯಗುಹ್ಯೇಂದ್ರಿಯಗಳನ್ನು ತೃಪ್ತಿಗೊಳಿಸುವುದರಲ್ಲಿಯೇ ನಿರತರಾಗಿರುವರು. ಧ್ಯಾನವನ್ನಾಗಲಿ, ತಪಸ್ಸನ್ನಾಗಲಿ, ವ್ರತೋಪವಾಸಗಳನ್ನಾಗಲಿ ಎಂದಿಗೂ ಮಾಡುವುದಿಲ್ಲವು.

೨೯. ಸರ್ವರೂ ಅಧರ್ಮಭೂಯಿಷ್ಠಗಳಾದ ಕೆಲಸಗಳಲ್ಲಿಯೇ ತೊಡಗಿ ಪ್ರಾಣಿಹಿಂಸೆಯಲ್ಲಿಯೂ, ತೀವ್ರವಾದ ಇಂದ್ರಿಯಲೋಲುಪತೆಯಲ್ಲಿಯೂ ನಿರತರಾಗಿ ಇತರರನ್ನು ನಿಂದಿಸುವುದರಿಂದಲೇ ಸಂತೋಷಗೊಳ್ಳುವರಲ್ಲದೆ ತಾವು ಮಾತ್ರ ಯಾವ ಕಾರ್ಯವನ್ನು ಮಾಡಲೂ ಮುಂದುವರೆಯುವುದಿಲ್ಲ.

೩೦. ಪ್ರಾಸಂಗಿಕವಾಗಿಯಾಗಲಿ, ಕೇವಲ ಕುತೂಹಲದಿಂದಾಗಲಿ ಪರರ ಸತ್ಕರ್ಮಗಳನ್ನು ಕೆಡಿಸುವುದರಲ್ಲಿಯೇ ದೃಷ್ಟಿಯುಳ್ಳವರು. ತಾವು ಕೇವಲ ಕ್ಷುದ್ರಕಾರ್ಯಗಳಲ್ಲಿಯೇ ನಿರತರಾಗಿರುವುದರಿಂದ ಇತರರು ಕೈಕೊಳ್ಳುವ ಮಹತ್ಕಾರ್ಯಗಳಿಗೂ ಅಸೂಯೆಯಿಂದ ಪ್ರತಿಬಂಧಕಗಳನ್ನು ತಂದೊಡ್ಡುವರು.

೩೧. ಧರ್ಮವಿವಾಹಿತಳೂ ಮನೋಹರಳೂ ಆದ ಪತ್ನಿಯು ಮನೆಯಲ್ಲಿ ಅನುಕೂಲಳಾಗಿರಲು ಅವಳನ್ನು ತ್ಯಜಿಸಿ ಪಶುಕ್ರೀಡಾಸಕ್ತರಾಗಿ ನೀಚಳಾದ ಪರಸ್ತ್ರೀಯಲ್ಲಿಯೇ ಅಭಿಲಾಷೆಯುಳ್ಳವರಾಗುವರು.

೩೨. ಅಗ್ನಿಹೋತ್ರಾದಿ ಸತ್ಕರ್ಮವಾಗಲಿ, ವ್ರತನಿಯಮವಾಗಲಿ ಒಂದೊಂದುವೇಳೆಯೇ ಆಕಸ್ಮಾತ್ತಾಗಿ ನಡೆಯುವುವಲ್ಲದೆ ಸರ್ವಕಾಲದಲ್ಲಿಯೂ ನಡೆಯುವುದಿಲ್ಲ. ಅವುಗಳನ್ನೂ ಸಹ ಜೀವನೋಪಾಯದ ದೃಷ್ಟಿಯಿಂದಲೂ ಪರಲೋಕಗಳ ಭಯದಿಂದಲೂ ಕೆಲವು ಬ್ರಾಹ್ಮಣರು ಮಾತ್ರ ಅನುಷ್ಠಿಸುವರೇ ಹೊರತು ಇತರರು ಮಾಡುವುದೇ ಇಲ್ಲವು.

ಅವ್ರತಾಧೀತವೇದೇನ ಅನ್ಯಾಯೋಪಾರ್ಜಿತಧನೇನ ಚ ।
ವಿತ್ತಶಾಠ್ಯೇನ ಚ ಕೃತಂ ನ ತಥಾ ಫಲದಾಯಿ ತತ್ ॥ ೩೩ ॥
ಪ್ರಾಯಃ ಕಲಿಯುಗೇ ಭೂಪಾಃ ಪ್ರಜಾವನಪರಾಙ್ಮುಖಾಃ ।
ಕರಾದಾನಪರಾ ನಿತ್ಯಂ ಪಾಪಿಷ್ಠಾಶ್ಚೌರ್ಯವೃತ್ತಯಃ ॥ ೩೪ ॥
ವರ್ಣಸಂಕರಿಣಃ ಸರ್ವೇ ಶೂದ್ರಪ್ರಾಯಾ ಕಲೌ ಯುಗೇ ।
ಹರ್ತಾರಃ ಪಾರ್ಥಿವಾ ಏವ ಶೂದ್ರಾಶ್ಚ ನೃಪಸೇವಕಾಃ ॥ ೩೫ ॥
ಶ್ರೌತಸ್ಮಾರ್ತಾದಿಕಂ ಕರ್ಮ ನ ತಥಾ ಸದನುಷ್ಠಿತಂ ।
ಯುಗೇ ಚತುರ್ಥೇ ಭೋ ವಿಪ್ರಾಃ ಪರಲೋಕಾಯ ಕಲ್ಪಿತೇ ॥ ೩೬ ॥
ದಾನಧರ್ಮಪರೋ ಹ್ಯೇಷ ನಾನ್ಯೋ ಧರ್ಮಃ ಪ್ರಶಸ್ಯತೇ ।
ಕರ್ಮಣಾ ಮನಸಾ ವಾಚಾ ಹಿತಮಿಚ್ಛೇದ್ದ್ವಿಜನ್ಮನಾಂ ॥ ೩೭ ॥

---

೩೩. ವ್ರತನಿಯಮಗಳಿಲ್ಲದೆ ಅಧ್ಯಯನಮಾಡಿದ ವೇದಗಳಿಂದಲೂ, ಅನ್ಯಾಯಗಳಿಂದಾರ್ಜಿಸಿದ ಧನದಿಂದಲೂ, ಹಣವಿರುವುದೆಂಬ ಮದದಿಂದಲೂ ಮಾಡಿದ ಕಾರ್ಯಗಳೆಂದಿಗೂ ಉತ್ತಮಫಲಗಳನ್ನು ಕೊಡಲಾರವು.

೩೪. ಕಲಿಯುಗದಲ್ಲಿ ರಾಜರೆಲ್ಲರೂ ಪ್ರಾಯಿಕವಾಗಿ ಪ್ರಜಾರಕ್ಷಣ ಕಾರ್ಯಗಳಲ್ಲಿ ವಿಮುಖರಾಗಿರುವರು. ಅವರ ಆಸಕ್ತಿಯೆಲ್ಲವೂ ಸರ್ವೋಪಾಯಗಳಿಂದಲೂ ಪ್ರಜೆಗಳಿಂದ ಕಪ್ಪಕಂದಾಯಗಳನ್ನು ಸೆಳೆಯುವುದರಲ್ಲಿರುವುದು. ಅವರು ನಿರಂತರವೂ ಪಾಪಕಾರ್ಯಗಳಲ್ಲಿಯೇ ನಿರತರಾಗಿ ಇತರರ ಐಶ್ವರ್ಯದ ಚೌರ್ಯವನ್ನೇ ವೃತ್ತಿಯನ್ನಾಗಿ ಅವಲಂಬಿಸಿರುವರು.

೩೫. ಚಾತುರ್ವರ್ಣ್ಯದವರೂ ಪರಸ್ಪರ ಸ್ತ್ರೀಯರನ್ನು ಸೇರಿ ವರ್ಣಸಾಂಕರ್ಯಗಳನ್ನುಂಟುಮಾಡುವರು. ಕಲಿಯುಗದಲ್ಲಿ ಸಕಲ ಮನುಷ್ಯರೂ ಶೂದ್ರಸಮಾನರಾಗಿರುವರು. ರಾಜರು ಪರಸ್ವಹರಣದಲ್ಲಿ ಉದ್ಯುಕ್ತರಾಗಿರಲು ಶೂದ್ರರು ಅವರ ಸೇವಾವೃತ್ತಿಯಲ್ಲಿರುವರು.

೩೬. ಎಲೈ ಬ್ರಾಹ್ಮಣರಿರಾ! ಜೀವರಿಗೆ ಪಾರಲೌಕಿಕ ಸುಖದುಃಖಗಳನ್ನು ಅನುಭವಕ್ಕೆ ತಂದು ತೋರಿಸುವುದಕ್ಕಾಗಿ ಕಲ್ಪಿತವಾದ ಈ ಕಲಿಯುಗದಲ್ಲಿ ವೈದಿಕಗಳಾದ ಯಜ್ಞಾದಿಗಳಾಗಲಿ, ಸ್ಮಾರ್ತಗಳಾದ ಪೂರ್ತಾದಿಕರ್ಮಗಳಾಗಲಿ ಶಾಸ್ತ್ರೋಕ್ತರೀತಿಯಲ್ಲಿ ಅನುಷ್ಠಾನಮಾಡಲ್ಪಡಲಾರವು.

೩೭. ಈ ಕಲಿಯುಗದಲ್ಲಿ ದಾನಮಾಡುವುದೇ ಸರ್ವೋತ್ತಮವಾದ ಧರ್ಮವೆನಿಸಿರುವುದು. ಇತರ ಯಾವ ಧರ್ಮಗಳೂ ಪ್ರಶಂಸೆಯನ್ನು ಪಡೆಯಲಾರವು. ಆದುದರಿಂದ ಮನೋವಾಕ್ಕರ್ಮಗಳಾದ ತ್ರಿಕರಣಗಳ ಶುದ್ಧಿಯನ್ನು ಹೊಂದಿ ಬ್ರಾಹ್ಮಣರಿಗೆ ಹಿತವನ್ನು ಬಯಸಬೇಕು.

ಇತಿ ಹೋವಾಚ ಭಗವಾನ್ಬ್ರಾಹ್ಮಣೋ ಮಾಮಕೀ ತನುಃ ।
ಬ್ರಾಹ್ಮಣಾ ಯಸ್ಯ ಸಂತುಷ್ಟಾಃ ಸಂತುಷ್ಟಸ್ತಸ್ಯ ಚಾಪ್ಯಹಂ ॥ ೩೮ ॥
ಉಭಯತ್ರ ಸಮೋ ಭೂಯಾದ್ಬ್ರಾಹ್ಮಣೇ ಚ ಜನಾರ್ದನೇ ।
ಯದ್ವದಂತಿ ದ್ವಿಜಾ ವಾಕ್ಯಂ ತತ್ಸ್ವಯಂ ಭಗವಾನ್ ವದೇತ್ ॥ ೩೯ ॥
ಯಥಾ ಯಥಾ ವರ್ತಮಾನೋ ವರ್ಣಾನಾಂ ಬ್ರಾಹ್ಮಣೋ ಗುರುಃ ।
ಭಗವಾನಪಿ ದೇವೇಶಃ ಸ ಸಾಕ್ಷಾದ್ಬ್ರಾಹ್ಮಣಪ್ರಿಯಃ ॥ ೪೦ ॥
ಸದಾವತಾರಂ ಕುರುತೇ ಬ್ರಾಹ್ಮಣಾರ್ಥಂ ಜನಾರ್ದನಃ ।
ತತ್ಪಾಲನಾರ್ಥಂ ದುಷ್ಟಾನ್ವೈ ನಿಗೃಹ್ಣಾತಿ ಯುಗೇ ಯುಗೇ ॥ ೪೧ ॥
ಸಸರ್ಜ ಬ್ರಾಹ್ಮಣಾನಗ್ರೇ ಸೃಷ್ಟ್ಯಾದೌ ಚ ಚತುರ್ಮುಖಃ ।
ಸರ್ವೇ ವರ್ಣಾಃ ಪೃಥಕ್ಪಶ್ಚಾತ್ತೇಷಾಂ ವಂಶೇಷು ಜಜ್ಞಿರೇ ॥ ೪೨ ॥
ತಸ್ಮಾತ್ಕಲಿಯುಗೇ ತಸ್ಮಿನ್ಬ್ರಾಹ್ಮಣೋ ವಿಷ್ಣುರೇವ ಚ ।
ಉಭೌ ಗತಿಶ್ಚ ಸರ್ವೇಷಾಂ ಬ್ರಾಹ್ಮಣಾನಾಂ ಹರಿರ್ಗತಿಃ ॥ ೪೩ ॥

---

೩೮. ಮುನ್ನು ಭಗವಂತನು ಇಂತೆಂದು ಸಂದೇಶವನ್ನು ಸಾರಿರುವನು. "ಬ್ರಾಹ್ಮಣನೇ ನನಗೆ ಶರೀರಭೂತನಾಗಿರುವನು. ಯಾವನಲ್ಲಿ ಬ್ರಾಹ್ಮಣರು ಸಂತುಷ್ಟರಾಗಿರುವರೊ, ಅವನಲ್ಲಿ ನಾನೂ ಸಹ ಸಂತೋಷಗೊಳ್ಳುವೆನು."

೩೯. ಸದ್ಬ್ರಾಹ್ಮಣ ಮತ್ತು ಭಗವಂತ ಇವರಿಬ್ಬರಲ್ಲಿಯೂ ಸಮಾನವಾದ ಭಕ್ತಿ ಶ್ರದ್ಧೆಗಳನ್ನಿಡಬೇಕು. ಬ್ರಾಹ್ಮಣರು ಯಾವ ಮಾತನ್ನು ಹೇಳುವರೊ, ಅದನ್ನೇ ಭಗವಂತನೂ ಅನುಮೋದಿಸುವನೆಂದು ತಿಳಿಯಬೇಕು.

೪೦. ಹೇಗೆ ಹೇಗೆ ವ್ಯವಹಾರಗಳನ್ನು ನಡೆಸುತ್ತಿದ್ದರೂ ಬ್ರಾಹ್ಮಣನು ಸಕಲವರ್ಣದವರಿಗೂ ಪೂಜ್ಯಸ್ಥಾನೀಯನು. ದೇವದೇವೋತ್ತಮನಾದ ಭಗವಂತನೂಕೂಡ ಸಾಕ್ಷಾತ್ತಾಗಿ ಬ್ರಾಹ್ಮಣಾಭಿಮಾನಿಯಾಗಿರುವನು.

೪೧. ಬ್ರಾಹ್ಮಣರಿಗೋಸ್ಕರವಾಗಿಯೇ ಜನಾರ್ದನನು ಯಾವಾಗಲೂ ಅವತಾರಗಳನ್ನೆತ್ತುತ್ತಿರುವನು. ಅವರನ್ನು ರಕ್ಷಿಸುವುದಕ್ಕಾಗಿಯೇ ಆತನು ಪ್ರತಿಯೊಂದು ಯುಗದಲ್ಲಿಯೂ ಹುಟ್ಟಿ ದುಷ್ಟರನ್ನು ನಿಗ್ರಹಿಸುತ್ತಿರುವನು.

೪೨. ಜಗತ್ಸೃಷ್ಟಿಯ ಕಾಲದಲ್ಲಿ ಚತುರ್ಮುಖನು ಮೊದಲು ಬ್ರಾಹ್ಮಣರನ್ನೇ ಸೃಷ್ಟಿಮಾಡಿದನು. ಬಳಿಕ ಅವರ ವಂಶಗಳಲ್ಲಿಯೇ ಮಿಕ್ಕ ವರ್ಣಗಳವರೆಲ್ಲರೂ ಬೇರೆ ಬೇರೆಯಾಗಿ ಹುಟ್ಟಿದರು.

೪೩. ಆದುದರಿಂದ ಈ ಕಲಿಯುಗದಲ್ಲಿ ಸಕಲ ಮಾನವರಿಗೂ ಬ್ರಾಹ್ಮಣರು ಮತ್ತು ಶ್ರೀಹರಿ ಇವರೀರ್ವರೇ ಗತಿದಾಯಕರಾಗಿರುವರು. ಬ್ರಾಹ್ಮಣರಿಗೂ ಶ್ರೀಹರಿಯೇ ಮುಕ್ತಿದಾಯಕನು.

ಹರಿರೇವಾತ್ರ ಸರ್ವೇಷಾಂ ಗತಿಃ ಪ್ರಾಪ್ತೇ ಕಲೌ ಯುಗೇ ।
ಶಾಲಗ್ರಾಮಾದಿಕೇ ಕ್ಷೇತ್ರೇ ಸ್ಮರ್ಯತೇ ಕೀರ್ತ್ಯತೇಽಪಿ ಚ ॥ ೪೪ ॥
ತಸ್ಮಿನ್ನೀಲಾಚಲೇ ಪುಣ್ಯೇ ಕ್ಷೇತ್ರೇ ಕ್ಷೇತ್ರಜ್ಞವರ್ಷ್ಮಣಿ ।
ಜೀವಭೂತಃ ಸ ಸರ್ವೇಷಾಂ ದಾರುವ್ಯಾಜಶರೀರಭೃತ್ ॥ ೪೫ ॥
ಕಲಿಕಲ್ಮಷನಾಶಾಯ ಪ್ರಾಯೋ ದುಷ್ಕೃತಕರ್ಮಣಾಂ ।
ದರ್ಶನಸ್ತವನೋಚ್ಛಿಷ್ಟಭೋಜನೈರ್ಮುಕ್ತಿದಾಯಕಃ ॥ ೪೬ ॥
ಉಚ್ಛಿಷ್ಟೇನ ಪರೇಶಸ್ಯ ವ್ಯಾಪ್ತಂ ಯಸ್ಯ ಕಲೇವರಂ ।
ತದಾಹಾರಂ ತದಾತ್ಮಾ ಹಿ ಲಿಪ್ಯತೇ ನ ಸ ಪಾತಕೈಃ ॥ ೪೭ ॥
ನಿವೇದನೀಯಮನ್ಯಾಸು ಮೂರ್ತಿಷ್ವೀಶಸ್ಯ ವರ್ತತೇ ।
ಪಾವನಂ ತದಪಿ ಪ್ರೋಕ್ತಮುಚ್ಛಿಷ್ಟಂ ತು ವಿಯೋಜಕಂ ॥ ೪೮ ॥
ಭುಂಕ್ತೇ ತ್ವತ್ರೈವ ಭಗವಾನ್ಪಶ್ಯತ್ಯನ್ಯತ್ರ ಚಕ್ಷುಷಾ ।
ಪುರಾಽಯಂ ಪ್ರಾರ್ಥಿತೋ ದೇವೋ ಯೋಗಿಭಿಃ ಪರಿವೇಷ್ಟಿತೈಃ ॥ ೪೯ ॥

---

೪೪. ಭಯಂಕರವಾದ ಈಕಲಿಯು ಪ್ರಾಪ್ತವಾಗಿರಲು ಶ್ರೀಮನ್ನಾರಾಯಣನೊಬ್ಬನೇ ಸಕಲಜೀವರಿಗೂ ಸದ್ಗತಿಯನ್ನು ಕೊಡುವವನು. ಸಾಲಗ್ರಾಮಕ್ಷೇತ್ರವೇ ಮೊದಲಾದ ಪ್ರದೇಶಗಳಲ್ಲಿ ಆತನಿರುವನೆಂದು ಸ್ಮೃತಿಗಳು ಹೇಳುತ್ತಿರುವುವು ಮತ್ತು ಸ್ತೋತ್ರಮಾಡುತ್ತಿರುವುವು.

೪೫. ಸಕಲರ ದೇಹಾದಿ ಸಂಘಾತಗಳಲ್ಲಿ ಅಂತರ್ಯಾಮಿಯಾಗಿ ಕ್ಷೇತ್ರಜ್ಞನೆನಿಸಿದ ಪರಮಾತ್ಮನಿಗೆ ದೇಹವೆನಿಸಿರುವ ನೀಲಾಚಲವೆಂಬ ಈ ಪುಣ್ಯಕ್ಷೇತ್ರದಲ್ಲಿಯಾದರೊ, ಎಲ್ಲರಲ್ಲಿಯೂ ಜೀವಭೂತನಾಗಿರುವ ಆತನೇ ಕಾರಣಾಂತರದಿಂದ ಮರದ ದೇಹವುಳ್ಳವನಾಗಿ ನೆಲಸಿರುವನು.

೪೬. ಅನೇಕ ದುಷ್ಕೃತ್ಯಗಳನ್ನು ಮಾಡಿರುವ ಮಾನವರ ಕಲಿಕಲ್ಮಷಗಳನ್ನು ಕಳೆಯುವುದಕ್ಕಾಗಿಯೇ ಆತನು ಇಲ್ಲಿ ಸನ್ನಿಹಿತನಾಗಿರುವನು. ಆತನ ದರ್ಶನದಿಂದಲೂ, ಸ್ತೋತ್ರದಿಂದಲೂ, ನೈವೇದ್ಯಸೇವನೆಯಿಂದಲೂ ಜನರಿಗೆ ಮೋಕ್ಷವನ್ನು ಕೊಡುವನು.

೪೭. ಯಾವನ ದೇಹವು ದೇವೇಶ್ವರನಾದ ಜಗನ್ನಾಥನ ನೈವೇದ್ಯದಿಂದ ಸರ್ವತ್ರದಲ್ಲಿಯೂ ವ್ಯಾಪ್ತವಾಗಿರುವುದೊ, ಆತನ ಆಹಾರವಾಗಲಿ, ಆತನ ಅಂತಃಕರಣವಾಗಲಿ ಎಂದಿಗೂ ಪಾತಕಗಳ ಸಂಪರ್ಕವನ್ನೇ ಹೊಂದಲಾರವು.

೪೮. ಇತರ ಕ್ಷೇತ್ರಗಳಲ್ಲಿರುವ ಪರಮಾತ್ಮನ ವಿಗ್ರಹಗಳಿಗೆ ನಿವೇದನೆ ಮಾಡಿದ ಪದಾರ್ಥವೇ ಪಾವನವೆಂದು ಆಯಾ ಕ್ಷೇತ್ರಮಹಿಮೆಗಳಲ್ಲಿ ಹೇಳಲ್ಪಟ್ಟಿರುವುದು. ಆದರೆ ಪುರುಷೋತ್ತಮ ಕ್ಷೇತ್ರದಲ್ಲಿ ಮಾತ್ರ ಉಚ್ಛಿಷ್ಟವೇ ಮುಕ್ತಿದಾಯಕವೆಂದು ಪ್ರಸಿದ್ಧವಾಗಿರುವುದು.

೪೯-೫೦. ಕಾರಣವೇನೆಂದರೆ ಇತರ ಸ್ಥಳಗಳಲ್ಲಿ ಭಗವಂತನು ನೈವೇದ್ಯ

ನಿರ್ಮಾಲ್ಯೋಚ್ಛಿಷ್ಟಭೋಗೇನ ತವ ಮಾಯಾಂ ಜಯೇಮಹಿ ।
ಅತ್ಯಂತಸ್ತಿಮಿತಾಕ್ಷಾಣಾಮನಾಯಾಸೇನ ಮುಕ್ತಿದಃ ॥ ೫೦ ॥
ಶಯನಾಸನಭೋಗಾದ್ಯೈ ರಮತೇ ಚ ಶ್ರಿಯಾ ಸಹ ।
ಅತ್ರ ಚೇಷ್ಟಾ ಭಗವತೋ ವೇದಾರ್ಥ ಇತಿ ಧಾರ್ಯತಾಂ ॥ ೫೧ ॥
ಸಮತಿಕ್ರಾಂತವೇದೋ ಹಿ ನ ಕದಾಚಿತ್ಪ್ರವರ್ತತೇ ।
ವೇದರಕ್ಷಾರ್ಥಮೇವಾಸ್ಯ ಸಂಭವೋ ಹಿ ಯುಗೇ ಯುಗೇ ॥ ೫೨ ॥
ಪ್ರಮಾಣಭೂತೋ ಭಗವಾನ್ನಿರುದ್ಧಂ ಕಥಮಾಚರೇತ್ ।
ತಸ್ಮಿನ್ನಿರುದ್ಧಂ ಚರತಿ ಜಗದೇವ ತಥಾ ಭವೇತ್ ॥ ೫೩ ॥
ಆಚಾರೇಣ ಹಿ ವೇದಾರ್ಥೋ ನಿಯತೋ ಧಾಮತಾಂ ಗತಃ ।
ಮಧ್ಯದೇಶಭವಃ ಪೂರ್ವಯಾತ್ರಾಗಚ್ಛದ್ದ್ವಿಜೋತ್ತಮಃ ॥ ೫೪ ॥

---

ವನ್ನು ಕಣ್ಣುಗಳಿಂದ ಮಾತ್ರ ನೋಡುವನು. ಆದರೆ ಇಲ್ಲಿ ಮಾತ್ರ ತಾನೇ ಸಾಕ್ಷಾತ್ತಾಗಿ ಭೋಜನಮಾಡುವನು. ಪೂರ್ವದಲ್ಲಿ ದೇವದೇವನ ಪರಿವಾರ ದಲ್ಲಿದ್ದ ಯೋಗಿವರ್ಯರೆಲ್ಲರೂ ಆತನನ್ನು ಕುರಿತು "ಈ ಕ್ಷೇತ್ರದಲ್ಲಿ ಮಾತ್ರ ನಿನ್ನ ನಿರ್ಮಾಲ್ಯವನ್ನೂ ಉಚ್ಛಿಷ್ಟವನ್ನೂ ಸೇವಿಸುವುದರಿಂದ ನಿನ್ನ ಮಾಯೆಯನ್ನು ನಾವು ಜಯಿಸುವಂತೆ ಅನುಗ್ರಹಿಸು" ಎಂಬುದಾಗಿ ಪ್ರಾರ್ಥಿಸಿದರು. ಈ ಸ್ಥಳದಲ್ಲಿ ಏಕಾಗ್ರಮನಸ್ಸಿನಿಂದ ಸೇವಿಸುವವರಿಗೆ ಪರಮಾತ್ಮನು ಸುಲಭವಾಗಿಯೇ ಮೋಕ್ಷ ವನ್ನು ದಯೆಪಾಲಿಸುವನು.

೫೧. ಶಯನ, ಆಸನ, ಭೋಗ, ಭೋಜನಾದಿಗಳನ್ನು ಮಾಡುತ್ತ ಇಲ್ಲಿ ಲಕ್ಷ್ಮೀಸಮೇತನಾಗಿ ಪರಮಾತ್ಮನು ತನ್ನ ಲೀಲೆಗಳನ್ನು ತೋರುತ್ತಿರುವನು. ಇಲ್ಲಿ ನಡೆಯುತ್ತಿರುವ ಭಗವಂತನ ವ್ಯಾಪಾರಗಳೆಲ್ಲವೂ ವೇದಗಳ ಅಂತರಾರ್ಥ ಗಳೆಂದು ಭಕ್ತರು ತಿಳಿಯಬೇಕು.

೫೨. ಆತನು ತನ್ನ ಆಜ್ಞಾರೂಪಗಳಾದ ವೇದಗಳ ನಿಯಮಗಳನ್ನನುಸರಿಸಿ ನಡೆಯುವನಲ್ಲದೆ ಎಂದಿಗೂ ಅತಿಕ್ರಮಿಸಿ ವರ್ತಿಸುವುದಿಲ್ಲ. ಸನಾತನಗಳಾದ ಆ ವೇದಗಳನ್ನೂ ದುಷ್ಟರ ಆಕ್ರಮಣದಿಂದ ರಕ್ಷಿಸುವುದಕ್ಕಾಯೇ ಭಗವಂತನು ಯುಗಯುಗಗಳಲ್ಲಿಯೂ ಅವತಾರಗಳನ್ನು ತಳೆಯುತ್ತಿರುವನಷ್ಟೆ.

೫೩. ವೇದಗಳ ಪ್ರಾಮಾಣ್ಯಕ್ಕೆ ಮೂಲಸ್ತಂಭದಂತಿರುವ ಆತನು ವೇದ ಗಳಿಗೆ ವಿರುದ್ಧವಾಗಿ ಹೇಗೆ ನಡೆದುಕೊಳ್ಳಬಲ್ಲನು? ಆತನೇ ವೇದವಿರುದ್ಧವಾಗಿ ನಡೆಯುವವನಾದರೆ ಲೋಕವೂ ಆತನನ್ನೇ ಅನುಸರಿಸಿ ನಡೆಯುವುದು.

೫೪–೫೫. ಆಚಾರವ್ಯವಹಾರಗಳಿಂದ ನಿಶ್ಚಿತವಾದ ವೇದಾರ್ಥವೇ ಸ್ವರೂಪ ವಾಗಿರುವ ಪರಮೇಶ್ವರನೇ ಇಲ್ಲಿ ನೀಲಾಚಲಕ್ಷೇತ್ರವಾಗಿ ನೆಲಸಿರುವನು. ಪೂರ್ವಕಾಲದಲ್ಲಿ ಮಧ್ಯದೇಶದಲ್ಲಿ ಜನಿಸಿದ ಬ್ರಾಹ್ಮಣೋತ್ತಮನೊಬ್ಬನು

**ಶಿಷ್ಟಾಚಾರೈಃ ಸುವಿಮಲಃ ಶಾಸ್ತ್ರಾರ್ಥಪರಿನಿಷ್ಠಿತಃ ।**
**ಸದಾ ಶಾಂತಃ ಸದಾ ದಾಂತಃ ಕಾಯವಾಙ್ಮನಸೈರ್ಗೃಹೀ ॥ ೫೫ ॥**
**ಸ ತೀರ್ಥವಿಧಿನಾ ದೇವಂ ಸಮಭ್ಯರ್ಚ್ಯ ಚ ಸಾಗ್ನಿಕಃ ।**
**ತ್ರಿರಾತ್ರಮಾತ್ರೋಷಿತವಾನ್ವಿಷ್ಣ್ವರ್ಚನಕರಃ ಶುಚಿಃ ॥ ೫೬ ॥**
**ಯಜ್ಞಶೇಷಂ ಗೃಹಸ್ಥಾನಾಂ ಭೋಕ್ತವ್ಯಮಿತಿ ಶಾಸ್ತ್ರತಃ ।**
**ದೇವೋಚ್ಛಿಷ್ಟಂ ನ ಜಗ್ರಾಹ ಅನ್ಯಪಾಕಾಭಿಶಂಕಯಾ ॥ ೫೭ ॥**
**ದೈವತೈರತ್ರ ಸಂಸ್ಕಾರ್ಯೋ ದೇವಯೋಗ್ಯಃ ಕಥಂ ಭವೇತ್ ।**
**ಅಯೋಗ್ಯತ್ವಾಚ್ಚ ನೈವೇದ್ಯಮಗ್ರಾಹ್ಯಂ ಚ ಭವೇದ್ಧ್ರುವಮ್ ॥ ೫೮ ॥**
**ಅಗೃಹೀತೇ ಚ ನೈವೇದ್ಯೇ ಶ್ರೋತ್ರಿಯೇಣ ತದಾ ದ್ವಿಜಾಃ ।**
**ಸರ್ವೇ ಚ ತಸ್ಯಾನುಚರಾ ನಾಭುಂಜಂತ ನಿವೇದಿತಮ್ ॥ ೫೯ ॥**
**ತತಃ ಸ ವ್ಯಾಧಿಸಮ್ಮಗ್ನೋ ವಿಹ್ವಲೀಭೂತವಿಗ್ರಹಃ ।**
**ಸಕುಟುಂಬೋಽಭವನ್ಮೂಕೋ ಭಗವದ್ದ್ರೋಹಸಂಯುತಃ ॥ ೬೦ ॥**

---

ಯಾತ್ರಾರ್ಥಿಯಾಗಿ ಇಲ್ಲಿಗೆ ಬಂದನು. ಆತನು ಸಕಲಸದಾಚಾರಗಳಲ್ಲಿಯೂ ನಿರತನಾಗಿ ಪರಿಶುದ್ಧನಾಗಿದ್ದನು. ಸಕಲಶಾಸ್ತ್ರಾರ್ಥಗಳಲ್ಲಿಯೂ ನಿಶ್ಚಯಜ್ಞಾನವನ್ನು ಪಡೆದಿದ್ದನು. ಯಾವಾಗಲೂ ಅಂತರಿಂದ್ರಿಯ ಬಾಹ್ಯೇಂದ್ರಿಯಗಳನ್ನು ನಿಗ್ರಹಿಸಿ ಮನೋವಾಕ್ಕಾಯಗಳನ್ನು ಸ್ವಾಧೀನಗೊಳಿಸಿದ ಗೃಹಸ್ಥನಾಗಿದ್ದನು.

೫೬–೫೭. ಆತನು ಆಹಿತಾಗ್ನಿಯಾಗಿ ಇಲ್ಲಿಗೆ ಬಂದು ತೀರ್ಥಕ್ಷೇತ್ರಗಳಲ್ಲಿ ಮಾಡಬೇಕಾದ ಸಕಲಕರ್ಮಗಳಿಂದಲೂ ಜಗನ್ನಾಥನನ್ನಾರಾಧಿಸಿ ಶೌಚಾಚಾರಪರನಾಗಿ ಮಹಾವಿಷ್ಣುವಿನ ಪೂಜೆಯನ್ನೇ ಮಾಡುತ್ತ ಇಲ್ಲಿ ಮೂರು ರಾತ್ರಿಗಳು ವಾಸಮಾಡಿದನು. ಗೃಹಸ್ಥರಾದವರು ಪಂಚಯಜ್ಞಗಳ ಶೇಷವನ್ನು ಮಾತ್ರ ಭೋಜನಮಾಡಬೇಕೆಂಬ ಶಾಸ್ತ್ರನಿಯಮವನ್ನನುಸರಿಸುತ್ತಿದ್ದ ಆತನು ಪರಾನ್ನವೆಂಬ ಅನುಮಾನದಿಂದ ಜಗನ್ನಾಥನ ಉಚ್ಛಿಷ್ಟವನ್ನು ಸೇವಿಸುತ್ತಿರಲಿಲ್ಲ.

೫೮. "ದೇವತೆಗಳಿಂದ ಇಲ್ಲಿ ಸಂಸ್ಕಾರವನ್ನು ಪಡೆಯಬೇಕಾದ ನೈವೇದ್ಯವು ಪರಮಾತ್ಮನ ಸೇವೆಗೆ ಹೇಗೆ ಯೋಗ್ಯವಾದೀತು? ಅಯೋಗ್ಯವಾದ ಈ ನೈವೇದ್ಯವು ಶಿಷ್ಟರಿಂದ ಪರಿಗ್ರಹಿಸಲ್ಪಡಬಾರದೆಂಬುದು ನಿಶ್ಚಯವು."

೫೯. ಎಲೈ ಬ್ರಾಹ್ಮಣರಿರಾ! ಇಂತು ಯೋಚಿಸಿ ಆ ಬ್ರಾಹ್ಮಣನು ಜಗನ್ನಾಥನ ನೈವೇದ್ಯವನ್ನು ಗ್ರಹಣಮಾಡದಿದ್ದುದರಿಂದ ಆತನ ಅನುಚರರೆಲ್ಲರೂ ಸಹ ಭಗವಂತನ ನೈವೇದ್ಯವನ್ನು ಭೋಜನಮಾಡುತ್ತಿರಲಿಲ್ಲ.

೬೦. ಆ ಕಾರಣದಿಂದ ಕುಟುಂಬಸಹಿತನಾದ ಆ ಶಾಂಡಿಲ್ಯನಾಮಕನಾದ ಬ್ರಾಹ್ಮಣನು ವ್ಯಾಧಿಪೀಡಿತನಾಗಿ ಆತನ ದೇಹವೆಲ್ಲವೂ ಶಿಥಿಲವಾಗುತ್ತ ಬಂದಿತು. ಭಗವಂತನಲ್ಲಿ ದ್ರೋಹವನ್ನೆಣಿಸಿದ ಕಾರಣ ಆತನು ಮೂಗನೂ ಆದನು.

ಮನಸಾ ಚಿಂತಯಂತ್ಯೇವಂ ನಿರ್ನಿಮಿತ್ತಂ ಕಥಂ ನು ಮೇ ।
ಕುಟುಂಬಸಹಿತಸ್ಯಾಭೂತ್ಪೀಡಾ ಸರ್ವಾಂಗಭಂಜಿನೀ ॥ ೬೧ ॥
ಏವಂ ಚಿಂತಯಮಾನಸ್ಯ ತ್ರಿರಾತ್ರಾಂತೇಽಭವನ್ಮತಿಃ ।
ನೇದೃಶೀ ವ್ಯಾಧಿಪೀಡಾ ಚ ಸರ್ವೇಷಾಮೇಕದಾ ಭವೇತ್ ॥ ೬೨ ॥
ಕೋ ವಾ ದ್ರೋಹಃ ಕೃತೋಽಸ್ಮಾಭಿರೇತಸ್ಮಿನ್ಪುರುಷೋತ್ತಮೇ ।
ನ ಬುದ್ಧಿಪೂರ್ವಕಃ ಕಿಂ ಸ್ಯಾತ್ತತೋ ಮೇ ವ್ಯಾಧಿಕಾರಣಂ ॥ ೬೩ ॥
ಮುಹುರಿತ್ಥಂ ಚಿಂತಯಿತ್ವಾ ದಧ್ಯೌ ನಾರಾಯಣಂ ಪ್ರಭುಂ ।
ಧ್ಯಾನಾವಸಾನೇ ತುಷ್ಟಾವ ಶಾಸ್ತ್ರತತ್ತ್ವಾರ್ಥದರ್ಶಕಃ ॥ ೬೪ ॥

ಶಾಂಡಿಲ್ಯ ಉವಾಚ—

ಚತುರ್ದಶಾಪಿ ಯಾ ವಿದ್ಯಾ ಧರ್ಮನಿರ್ಣಯಹೇತವಃ ।
ತಾಃ ಸರ್ವಾಸ್ತವ ವಾಕ್ಯಾನಿ ಮುಖಪದ್ಮವಿನಿರ್ಗತಾಃ ॥ ೬೫ ॥
ತಾಭಿರೇವಾಚರೇದ್ಧರ್ಮಮಿತಿ ಶಾಸ್ತ್ರಾರ್ಥನಿರ್ಣಯಃ ।
ತಸ್ಯ ಧರ್ಮಸ್ಯ ರಕ್ಷಾರ್ಥಮವತಾರೋ ಯುಗೇ ಯುಗೇ ।
ತಮುಲ್ಲಂಘ್ಯ ವರ್ತಮಾನೋ ಭವದ್ದ್ರೋಹಕರೋ ಧ್ರುವಂ ॥ ೬೬ ॥

---

೬೧. ಅವನು ಮನಸ್ಸಿನಲ್ಲಿಯೇ ಇಂತು ಯೋಚಿಸತೊಡಗಿದನು. "ಕುಟುಂಬಸಹಿತನಾದ ನನಗೆ ನಿಷ್ಕಾರಣವಾಗಿಯೇ ದೇಹದ ಸಕಲಾವಯವಗಳನ್ನು ಶಿಥಿಲಗೊಳಿಸುವ ಈ ಉಪದ್ರವವು ಹೇಗೆ ಪ್ರಾಪ್ತವಾಯಿತು?"

೬೨–೬೩. ಇಂತು ಯೋಚಿಸುತ್ತ ಮೂರು ರಾತ್ರಿಗಳು ಕಳೆದಮೇಲೆ ಆ ಬ್ರಾಹ್ಮಣನಿಗೆ ಮನಸ್ಸಿನಲ್ಲಿ ಚಿಂತೆಯುಂಟಾಯಿತು. "ನನ್ನ ಪರಿವಾರದವರಿಗೆಲ್ಲ ಒಮ್ಮೆಯೇ ಈ ವಿಧವಾದ ರೋಗದ ಪೀಡೆಯು ನಿಷ್ಕಾರಣವಾಗಿ ಸಂಭವಿಸಿರಲಾರದು. ಅಥವಾ ಈ ಪುರುಷೋತ್ತಮನ ವಿಷಯದಲ್ಲಿ ನಾವು ಯಾವುದಾದರೂ ದ್ರೋಹವನ್ನು ಮಾಡಿರುವೆವೆ? ಬುದ್ಧಿಪೂರ್ವಕವಾಗಿಯಂತೂ ವ್ಯಾಧಿಯನ್ನುಂಟುಮಾಡುವ ಯಾವ ಭಗವದ್ದ್ರೋಹವನ್ನೂ ನಾವು ಮಾಡಿರುವುದಿಲ್ಲ."

೬೪. ಪುನಃ ಪುನಃ ಇಂತು ಯೋಚಿಸುತ್ತ ಸರ್ವೇಶ್ವರನಾದ ಜಗನ್ನಾಥನನ್ನು ಕುರಿತು ಧ್ಯಾನಮಾಡತೊಡಗಿದನು. ಧ್ಯಾನವು ಮುಗಿದ ಮೇಲೆ ಸಕಲ ಶಾಸ್ತ್ರಗಳ ಅಂತರಾರ್ಥವನ್ನು ತಿಳಿದ ಆತನು ಮನಸ್ಸಿನಲ್ಲಿಯೇ ಸ್ತೋತ್ರ ಮಾಡಿದನು.

೬೫. ಶಾಂಡಿಲ್ಯನು ಹೇಳುತ್ತಾನೆ:—"ಧರ್ಮಾಧರ್ಮಗಳನ್ನು ನಿರ್ಣಯಿಸುವುದಕ್ಕೆ ಕಾರಣಗಳಾದ ಯಾವ ಚತುರ್ದಶವಿದ್ಯೆಗಳಿರುವುವೊ, ಅವುಗಳೆಲ್ಲವೂ ನಿನ್ನ ಮುಖಕಮಲದಿಂದಲೇ ಹೊರಟ ವಾಕ್ಯಗಳ ರೂಪದಿಂದಿರುವುವು.

೬೬. ಅವುಗಳ ಆಧಾರದಿಂದಲೇ ಧರ್ಮಸೂಕ್ಷ್ಮಗಳನ್ನು ತಿಳಿದು ಆಚರಿಸ

ಅಹಂ ತೇ ದೇವದೇವೇಶ ಕರ್ಮಣಾ ಮನಸಾ ಗಿರಾ ।
ಧರ್ಮಶಾಸ್ತ್ರಮತಿಕ್ರಮ್ಯ ನ ವರ್ತೇಽಪ್ಯರ್ಥಕಾಮಯೋಃ ॥ ೬೭ ॥
ಅನೇಕಜನ್ಮಸಾಹಸ್ರೈಃ ಸಂಚಿತಂ ಪಾಪಸಂಚಯಂ ।
ದಗ್ಧುಮತ್ರಾಗತೋ ದೇವ ತ್ವದ್ದರ್ಶನದವಾಗ್ನಿನಾ ॥ ೬೮ ॥
ಕೋಽಪರಾಧಃ ಕೃತೋ ದೇವ ತ್ವಚ್ಛಾಸ್ತ್ರಪಥಿವರ್ತಿನಾ ।
ಸರ್ವಾಂಗಂ ಬಾಧತೇ ಯಸ್ಮಾದುಗ್ರೋ ವ್ಯಾಧಿರಹೇತುಕಃ ॥ ೬೯ ॥
ಜ್ಞಾನತೋಽಜ್ಞಾನತೋ ವಾಪಿ ತ್ವತ್ಪಾದಸರಸೀರುಹೇ ।
ಕೃತೋಽಪರಾಧೋ ಯೋ ದೇವ ತಂ ಕ್ಷಮಸ್ವ ಕೃಪಾಂಬುಧೇ ।
ಭೂಮೌ ಸ್ಖಲಿತಪಾದಾನಾಂ ಭೂಮಿರೇವಾವಲಂಬನಂ ॥ ೭೦ ॥
ತ್ವಯಿ ಜಾತಾಪರಾಧಾನಾಂ ತ್ವಮೇವ ಶರಣಂ ಪ್ರಭೋ ।
ತವಾಪರಾಧಜಂ ಪಾಪಂ ತ್ವಮೇವ ಚ ಕ್ಷಮಸ್ವ ಮೇ ॥ ೭೧ ॥

---

ಬೇಕೆಂಬುದೇ ಶಾಸ್ತ್ರಾರ್ಥಗಳ ಸಿದ್ಧಾಂತವಾಗಿರುವುದು. ಆ ಧರ್ಮವನ್ನು ಸಂರಕ್ಷಿಸುವುದಕ್ಕಾಗಿಯೇ ನೀನು ಪ್ರತಿಯೊಂದು ಯುಗದಲ್ಲಿಯೂ ಅವತಾರಗಳನ್ನು ಪಡೆಯುತ್ತಿರುವೆ, ನಿನ್ನ ಆಜ್ಞಾರೂಪವಾದ ಧರ್ಮಶಾಸ್ತ್ರವನ್ನು ಅತಿಕ್ರಮಿಸಿ ವ್ಯವಹಾರಗಳನ್ನು ನಡೆಸುವವನು ನಿಜವಾಗಿಯೂ ನಿನಗೆ ದ್ರೋಹವನ್ನೆಣಿಸಿದವನಾಗುವನು.

೬೭. ದೇವದೇವೋತ್ತಮನೆ! ನಾನಾದರೊ ಕರ್ಮದಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಧರ್ಮಶಾಸ್ತ್ರವನ್ನತಿಕ್ರಮಿಸಿಯಾಗಲಿ, ಅರ್ಥಕಾಮಗಳ ಅಭಿಲಾಷೆಯಿಂದಾಗಲಿ ಎಂದೂ ವರ್ತಿಸಲಿಲ್ಲವು.

೬೮. ಸ್ವಾಮಿಯೇ! ಅನೇಕ ಸಹಸ್ರ ಪೂರ್ವಜನ್ಮಗಳಲ್ಲಿ ಗಳಿಸಿದ ಪಾಪಗಳ ಹೊರೆಯನ್ನು ನಿನ್ನ ದರ್ಶನವೆಂಬ ಕಾಳ್ಗಿಚ್ಚಿನಲ್ಲಿ ಸುಟ್ಟುಹಾಕಬೇಕೆಂಬ ಕುತೂಹಲದಿಂದ ಇಲ್ಲಿಗೆ ಯಾತ್ರಾರ್ಥಿಯಾಗಿ ಬಂದೆನು.

೬೯. ನಿನ್ನ ಶಾಸ್ತ್ರಾಜ್ಞೆಗಳನ್ನನುಸರಿಸಿ ನಡೆಯುತ್ತಿರುವ ನಾನು ನಿನಗೆ ಯಾವ ಅಪರಾಧವನ್ನು ಮಾಡಿರುವೆನು? ನಿಷ್ಕಾರಣವಾಗಿಯೇ ಸಂಭವಿಸಿರುವ ಈ ಭಯಂಕರವ್ಯಾಧಿಯು ನನ್ನ ಸರ್ವಾಂಗಗಳನ್ನೂ ಪೀಡಿಸುತ್ತಿರುವುದು.

೭೦. ಕರುಣಾಸಮುದ್ರನಾದ ಸ್ವಾಮಿಯೆ! ಜ್ಞಾನಪೂರ್ವಕವಾಗಿಯಾಗಲಿ, ಅಜ್ಞಾನದಿಂದಲಾಗಲಿ ನಿನ್ನ ಪಾದಕಮಲಗಳಲ್ಲಿ ಯಾವುದಾದರೂ ಅಪರಾಧಗಳನ್ನು ಮಾಡಿದ್ದರೆ ಅವುಗಳೆಲ್ಲವನ್ನೂ ಕ್ಷಮಿಸುವವನಾಗು. ಭೂಮಿಯ ಮೇಲೆ ಮುಗ್ಗರಿಸಿದವರಿಗೆ ಭೂಮಿಯೇ ಶರಣವಲ್ಲವೆ?

೭೧–೭೨. ಅಂತೆಯೇ ನಿನಗೆ ಅಪರಾಧವನ್ನು ಮಾಡಿದವರಿಗೂ ಸಹ ನೀನೇ ಶರಣ್ಯನಾಗಿರುವೆ. ನಾನು ನಿನ್ನ ವಿಷಯದಲ್ಲಿ ಯಾವ ಅಪರಾಧವನ್ನಾದರೂ

ವಹ್ನಿಸಂತಾಪತೋ ನಶ್ಯೇದ್ವಹ್ನಿಸಂತಾಪಜೋ ವ್ರಣಃ ।
ತದಿಮಾಂ ದುರ್ದಶಾಂ ದೇವ ಪ್ರಾರಬ್ಧಾಂ ಪಾಪಬೀಜಜಾಂ ।
ಲೀಲಾಪಾಂಗೇನ ಶಮಯ ಅಪವರ್ಗೈಕಹೇತುನಾ ॥ ೭೨ ॥
ಮಾಮುದ್ಧರ ಜಗನ್ನಾಥ ಪತಿತಂ ಶೋಕಸಾಗರೇ ।
ತ್ವದ್ದರ್ಶನಪಥಂ ಯಾತಃ ಕಿಂ ನು ಶೋಚ್ಯೋ ಭವೇನ್ನರಃ ॥ ೭೩ ॥
ನಿಸರ್ಗಕರುಣಾಂಬೋಧೇ ಯಸ್ತ್ವದ್ದೃಷ್ಟಿಪಥಂ ಗತಃ ।
ಸದಾನಂದಾಬ್ಧಿಸಂಮಗ್ನೋ ನ ಶೋಚತಿ ನ ಕಾಂಕ್ಷತಿ ॥ ೭೪ ॥
ನಾಲ್ಪಭಾಗ್ಯೋ ಹ್ಯಹಂ ದೇವ ತ್ವಾಮುದ್ವೀಕ್ಷ್ಯಂ ಸ್ವಚಕ್ಷುಷಾ ।
ಅಪವರ್ಗಾಂತರೋ ಯೋ ಮೇ ಧ್ರುವಮೇಷಾ ವಿಭೀಷಿಕಾ ॥ ೭೫ ॥
ತತ್ಪ್ರಸೀದ ಜಗನ್ನಾಥ ಸೇವಕಂ ದ್ರೋಹಿಣಂ ಸದಾ ।
ಸೇವ್ಯಸೇವಕಸಂಬಂಧಾದಪರಾಧಂ ಕ್ಷಮಸ್ವ ಮೇ ॥ ೭೬ ॥

---

ಮಾಡಿದ್ದರೆ ಲೋಕೇಶ್ವರನಾದ ನೀನೇ ಅದನ್ನು ಮನ್ನಿಸಿ ನನ್ನನ್ನು ಕಾಪಾಡಬೇಕು. ಅಗ್ನಿಯತಾಪದಿಂದ ದೇಹದಲ್ಲಿ ಉಂಟಾದ ವ್ರಣವು ಅಗ್ನಿಯ ಪ್ರಯೋಗದಿಂದಲೇ ನಾಶವನ್ನು ಹೊಂದುವುದಲ್ಲವೆ? ಎಲೈ ದೇವನೆ! ಆದುದರಿಂದ ನನ್ನ ಪಾಪರಾಶಿ ಯೆಂಬ ಬೀಜದಿಂದ ಉತ್ಪನ್ನವಾದ ಈ ದುರವಸ್ಥೆಯನ್ನು ಮೋಕ್ಷಮಾರ್ಗೈಕ ಹೇತುವಾದ ನಿನ್ನ ಕೃಪಾಕಟಾಕ್ಷದಿಂದ ಕೊನೆಗಾಣಿಸುವವನಾಗು.

೭೩. ಜಗನ್ನಾಥನೆ! ದುಃಖಸಮುದ್ರದಲ್ಲಿ ಬಿದ್ದು ಬಳಲುತ್ತಿರುವ ನನ್ನನ್ನು ಉದ್ಧರಿಸು. ನಿನ್ನ ಕೃಪಾಕಟಾಕ್ಷವೀಕ್ಷಣಕ್ಕೆ ಪಾತ್ರನಾದ ಯಾವ ಮನುಷ್ಯನು ತಾನೆ ಶೋಕಮೋಹಗಳಿಗೆ ಸಿಕ್ಕಬಹುದು?

೭೪. ಸಹಜವಾಗಿಯೇ ಪ್ರವಹಿಸುತ್ತಿರುವ ಕರುಣಾರಸಕ್ಕೆ ಸಮುದ್ರ ಪ್ರಾಯನಾದ ನಿನ್ನ ದೃಷ್ಟಿಗೆ ಬಿದ್ದ ಪುಣ್ಯಮಾನವನು ಯಾವಾಗಲೂ ಆನಂದ ಸಾಗರದಲ್ಲಿಯೇ ಮುಳುಗಿದ್ದು ಎಂದಿಗೂ ದುಃಖಗೊಳ್ಳುವುದಿಲ್ಲ. ಬೇರೆಯಾವು ದನ್ನೂ ಅಪೇಕ್ಷಿಸುವುದಿಲ್ಲ.

೭೫. ಓ ದೇವೇಶ್ವರನೆ! ಈ ಸ್ಥೂಲನೇತ್ರಗಳಿಂದಲೇ ನಿನ್ನನ್ನು ನೋಡು ತ್ತಿರುವೆನಾದುದರಿಂದ ನಾನು ಭಾಗ್ಯಹೀನನೆಂದಿಗೂ ಆಗಿರಲಾರೆನು. ಆದುದ ರಿಂದ ನನ್ನನ್ನು ಭಯಗೊಳಿಸುವುದಕ್ಕಾಗಿ ಪ್ರಾಪ್ತವಾಗಿರುವ ಈ ವ್ಯಾಧಿಯು ಮೋಕ್ಷಮಾರ್ಗದ ಮಧ್ಯದಲ್ಲುಂಟಾದ ಆತಂಕವೆಂದೇ ತಿಳಿಯುವೆನು.

೭೬. ಎಲೈ ಜಗನ್ನಾಥನೇ! ನಿನ್ನ ಸೇವಕನಾಗಿ ಅಜ್ಞಾನದಿಂದ ನಿನ್ನ ಆಜ್ಞೆಯನ್ನು ಮೀರಿ ನಡೆದಿದ್ದರೆ ನನ್ನನ್ನು ಮನ್ನಿಸಿ ಪ್ರಸನ್ನನಾಗು. ನಿನಗೂ ನನಗೂ ಸ್ವಾಮಿ ಭೃತ್ಯಸಂಬಂಧವಿರುವುದರಿಂದ ನನ್ನ ಅಪರಾಧವನ್ನು ನೀನು ಕ್ಷಮಿಸಬೇಕು.''

ಇತಿ ಸ್ತುವಾಂತೇ ತಸ್ಯಾಶು ದೇಹಪೀಡಾಗಮತ್ತದಾ ।
ದದರ್ಶ ಸೋಽಥ ಗೋವಿಂದಂ ನೃಸಿಂಹಂ ಭಕ್ತವತ್ಸಲಂ ॥ ೭೭ ॥
ದಿವ್ಯಸಿಂಹಾಸನಾರೂಢಂ ದಿವ್ಯಾಲಂಕಾರಭೂಷಿತಂ ।
ಆದದಾನಂ ಶ್ರಿಯಾ ದತ್ತಂ ಪರಮಾನ್ನಂ ಪರಾಂಬುಜೇ ॥ ೭೮ ॥
ಗ್ರಾಸಾವಶೇಷಂ ಪಾತ್ರೇಷು ಕ್ಷಿಪಂತಂ ಚ ಮುಹುರ್ಮುಹುಃ ॥ ೭೯ ॥
ಯಾವದ್ದತ್ತಂ ವಸ್ತುಜಾತಂ ತಾವದಶ್ನಂತಮುತ್ತರಂ ।
ವಿಲಾಸಸಸ್ಮಿತಾಪಾಂಗಂ ಹಸ್ತೇ ಲಕ್ಷ್ಮ್ಯೈಪವರ್ಜಿತಂ ॥ ೮೦ ॥
ತಂ ದೃಷ್ಟ್ವಾ ವಿಸ್ಮಯಾವಿಷ್ಟಃ ಶಾಂಡಿಲ್ಯಃ ಸ ದ್ವಿಜೋತ್ತಮಃ ।
ಸಸ್ಮಾರಾತ್ಮಕೃತಂ ದ್ರೋಹಂ ನೈವೇದ್ಯಾಗ್ರಹಣೇ ಸ್ಥಿತಂ ॥ ೮೧ ॥
ಕ್ವಾಹಂ ಪ್ರಾದೇಶಿಕಃ ಪ್ರಾಜ್ಞಃ ಸರ್ವಜ್ಞಾನನಿಧಿರ್ಭವಾನ್ ।
ಕ್ವ ತ್ವಂ ಮಹದಹಂಕಾರಭೂತತತ್ವವಿಸರ್ಜಕಃ ॥ ೮೨ ॥
ತ್ವನ್ಮಾಯಯಾ ಮೂಢಮನಸೋ ಜಾನೀಯುಃ ಕಥಮೀಶ ತೇ ।
ನಿರಂಕುಶಾಮನಿರ್ವಾಚ್ಯಾಮಿಚ್ಛಾಂ ಸೃಷ್ಟಿಲಯಾತ್ಮಿಕಾಂ ॥ ೮೩ ॥

---

೭೭. ಇಂತೆಂದು ಶಾಂಡಿಲ್ಯಬ್ರಾಹ್ಮಣನು ಸ್ತೋತ್ರಮಾಡುತ್ತಿರಲು ಆತನಿಗೆ ರೋಗಪೀಡೆಯು ಅಧಿಕವಾಗಿ ನಿದ್ರಾಸಕ್ತನಾದನು. ಆ ನಿದ್ರಾವಸ್ಥೆಯಲ್ಲಿಯೇ ಅವನು ಭಕ್ತವತ್ಸಲನೂ, ಗೋವಿಂದನೂ ಆದ ನರಸಿಂಹಸ್ವಾಮಿಯನ್ನು ಕಂಡನು.

೭೮. ಆ ಶ್ರೀಮನ್ನಾರಾಯಣನು ದಿವ್ಯಸಿಂಹಾಸನದಲ್ಲಿ ಮಂಡಿಸಿ ದಿವ್ಯಾಲಂಕಾರಗಳಿಂದ ಭೂಷಿತನಾಗಿ ಮಹಾಲಕ್ಷ್ಮಿಯು ಭಕ್ತಿಯಿಂದ ಸಮರ್ಪಿಸುತ್ತಿರುವ ಪರಮಾನ್ನವನ್ನು ತನ್ನ ಕರಕಮಲಗಳಿಂದ ಸ್ವೀಕರಿಸುತ್ತಿದ್ದನು.

೭೯–೮೧. ಆಕೆಯು ಯಾವ ಯಾವ ಪದಾರ್ಥಗಳನ್ನು ನೀಡುತ್ತಿದ್ದಳೊ, ಅವುಗಳನ್ನೆಲ್ಲ ಲೀಲಾನ್ವಿತವಾದ ಮಂದಸ್ಮಿತದಿಂದ ಕೂಡಿದ ಕಡೆಗಣ್ಣುಗಳಿಂದ ನೋಡಿ ಯಥಾಸಾವಕಾಶವಾಗಿ ಒಂದು ತುತ್ತನ್ನು ಮಾತ್ರ ಬಿಟ್ಟು ಊಟ ಮಾಡುತ್ತ, ಮತ್ತೆ ಮತ್ತೆ ಭುಕ್ತಾವಶೇಷವನ್ನು ಆಯಾ ಪಾತ್ರೆಗಳಲ್ಲಿಯೇ ಹಾಕುತ್ತಿದ್ದನು. ಇಂತಹ ಭಗವಂತನನ್ನು ಕಂಡು ಬ್ರಾಹ್ಮಣೋತ್ತಮನಾದ ಶಾಂಡಿಲ್ಯನು ಆಶ್ಚರ್ಯದಿಂದ ಕೂಡಿದ ಮನಸ್ಸುಳ್ಳವನಾಗಿ ತಾನು ನೈವೇದ್ಯವನ್ನು ಸ್ವೀಕರಿಸದೆ ಇದ್ದುದರಿಂದ ಉಂಟಾದ ಮಹಾಪರಾಧವನ್ನು ಸ್ಮರಿಸಿಕೊಂಡನು.

೮೨. "ಅಲ್ಪಪ್ರಮಾಣದ ದೇಹವುಳ್ಳ ಕಿಂಚಿಜ್ಞನಾದ ನಾನೆಷ್ಟರಮಾತ್ರದವನು? ಸಕಲಜ್ಞಾನಗಳಿಗೂ ಸಮುದ್ರಪ್ರಾಯನಾಗಿ ಮಹತ್ತು, ಅಹಂಕಾರ, ಪಂಚಮಹಾಭೂತಗಳೇ ಮೊದಲಾದ ತತ್ತ್ವಗಳನ್ನು ಇಚ್ಛಾಮಾತ್ರದಿಂದ ಸೃಜಿಸುವ ಅಪ್ರತಿಮ ಪರಾಕ್ರಮವಂತನಾದ ನೀನೆಲ್ಲಿ?

೮೩. ಸರ್ವಸ್ವತಂತ್ರನಾದ ಭಗವಂತನೆ! ನಿನ್ನ ಮಾಯೆಯಿಂದ ಮೋಹ

ಇತಿ ಸ್ತುವಂತಂ ನೃಹರಿಸ್ತೇನೈವೋಚ್ಛಿಷ್ಟಪಾಣಿನಾ ।
ಸಿಷೇಚ ಗ್ರಾಸಶಿಷ್ಟಾಂಶ್ಚ ಸರ್ವಾಂಗೇ ದ್ವಿಜಸತ್ತಮಂ ॥ ೮೪ ॥
ತೈಃ ಸಿಕ್ತೈರ್ಬ್ರಾಹ್ಮಣಃ ಸದ್ಯಃ ಸುಧಾಸೇಕೋಪಮೈರ್ಮುದಾ ।
ಬಭೌ ದಿವ್ಯವಪುಃ ಶ್ರೀಮಾನ್ ಜೀವನ್ಮುಕ್ತೋ ಯಥಾ ಮುನಿಃ ॥ ೮೫ ॥
ಮಹಿಮಾನಂ ಹಿ ಭಕ್ತೇಸ್ತು ಭಕ್ತಾ ಏವ ವಿಜಾನತೇ ।
ಮಹತೀಂ ಸೂತಿಪೀಡಾಂ ತು ವಂಧ್ಯಾ ನಾನುಭವೇತ್ಕ್ವಚಿತ್ ॥ ೮೬ ॥
ಇತ್ಯುದೀರ್ಯ ಸ್ವಯಂ ಗಾತ್ರಾದುಚ್ಛಿಷ್ಟಂ ಪರಮಾತ್ಮನಃ ।
ಭುಕ್ತ್ವಾ ಕೃತಾರ್ಥಮಾತ್ಮಾನಂ ಮೇನೇ ಶ್ರೋತ್ರಿಯಪುಂಗವಃ ॥ ೮೭ ॥
ಸಾಧಾರಣಂ ಧರ್ಮಶಾಸ್ತ್ರಂ ಕ್ಷೇತ್ರೇಽಸ್ಮಿನ್ನ ವಿಚಾರ್ಯತೇ ।
ಅಯಂ ತು ಪರಮೋ ಧರ್ಮೋ ಯೋ ದೇವೇನ ಪ್ರಕೀರ್ತಿತಃ ॥ ೮೮ ॥
ಆಚಾರಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ।
ಇತ್ಥಂ ಸಂಚಿಂತಯನ್ವಿಪ್ರಃ ಕುಟುಂಬಾರ್ಥೇಽವಶೇಷಿತಂ ॥ ೮೯ ॥

---

ಗೊಂಡ ಮನಸ್ಸುಳ್ಳ ಅಲ್ಪಮಾನವರು ನಿರಂಕುಶವೂ, ಅನಿರ್ದೇಶ್ಯವೂ, ಸೃಷ್ಟಿ ಸ್ಥಿತಿಲಯಗಳಿಗೆ ಕಾರಣವೂ ಆದ ನಿನ್ನ ಇಚ್ಛಾಶಕ್ತಿಯನ್ನು ಹೇಗೆ ತಿಳಿಯ ಬಲ್ಲರು ?”

೮೪. ಇಂತೆಂದು ಭಕ್ತಿಯಿಂದ ಸ್ತೋತ್ರಮಾಡುತ್ತಿದ್ದ ಆ ಬ್ರಾಹ್ಮಣೋತ್ತಮನನ್ನು ಕಂಡು ನರಸಿಂಹಸ್ವಾಮಿಯು ತನ್ನ ಉಚ್ಛಿಷ್ಟಹಸ್ತದಿಂದಲೇ ಮೇಲಕ್ಕೆತ್ತಿ ಕೈಯ ಎಂಜಲಿನಿಂದಲೇ ಆತನ ಶರೀರವನ್ನೆಲ್ಲ ತಡವಿದನು.

೮೫. ಅಮೃತಬಿಂದುಗಳಿಗೆ ಸಮಾನಗಳಾದ ಆ ಉಚ್ಛಿಷ್ಟಕಣಗಳಿಂದ ಆ ಬ್ರಾಹ್ಮಣೋತ್ತಮನು ಸಕಲ ರೋಗಗಳನ್ನೂ ಕಳೆದುಕೊಂಡು ದಿವ್ಯವಾದ ಶರೀರವುಳ್ಳವನಾಗಿ ಜೀವನ್ಮುಕ್ತನಾದ ಮಹಾಮುನಿಯಂತೆ ಸಕಲೈಶ್ವರ್ಯ ಸಂಪನ್ನನಾಗಿ ಕಂಗೊಳಿಸುತ್ತಿದ್ದನು.

೮೬. “ಭಕ್ತಿಯ ಮಹಿಮೆಯನ್ನು ಭಗವದ್ಭಕ್ತರು ಮಾತ್ರ ತಿಳಿಯುವರೇ ಹೊರತು ಇತರರು ತಿಳಿಯಲಾರರು. ಹೆರಿಗೆಯ ಮಹಾದುಃಖವನ್ನು ಬಂಜೆಯಾದವಳಿಂದಿಗಾದರೂ ಅನುಭವಿಸಿ ತಿಳಿಯ ಬಲ್ಲಳೆ?”

೮೭. ಇಂತೆಂದು ಹೇಳಿ ಬ್ರಾಹ್ಮಣಮುಖ್ಯನಾದ ಆ ಶಾಂಡಿಲ್ಯನು ತನ್ನ ದೇಹದಿಂದಲೇ ಪರಮಾತ್ಮನ ಉಚ್ಛಿಷ್ಟವನ್ನು ತೆಗೆದು ಸೇವಿಸಿ ಶ್ರೋತ್ರಿಯನಾದ ತನ್ನ ಜನ್ಮವು ಸಾರ್ಥಕವಾಯಿತೆಂದು ತಿಳಿದುಕೊಂಡನು.

೮೮. ಸಾಧಾರಣವಾದ ಧರ್ಮಶಾಸ್ತ್ರಗಳನ್ನು ಪುರುಷೋತ್ತಮ ಕ್ಷೇತ್ರದಲ್ಲಿ ಅನುಸರಿಸಬೇಕಾದುದಿಲ್ಲವು. ದೇವ ದೇವನು ನಿರೂಪಿಸಿರುವ ಉಚ್ಛಿಷ್ಟ ಭಕ್ಷಣವೇ ಇಲ್ಲಿ ಸರ್ವೋತ್ತಮವಾದ ಧರ್ಮವಾಗಿರುವುದು.

೮೯–೯೦. “ಸದಾಚಾರಗಳಿಗೆ ಧರ್ಮವೇ ಮೂಲಭೂತವಾಗಿರುವುದು.

ಆಜಹಾರ ಸ್ವಯಂ ಮುಷ್ಟ್ಯಾ ಧ್ಯಾನಭಂಗಮವಾಪ ಚ ।
ಪ್ರಬುದ್ಧಶ್ಚಿಂತಯಾಮಾಸ ಸ್ವಪ್ನಂ ತಂ ವಿಸ್ಮಿತಾಶಯಃ ॥ ೯೦ ॥
ಅಯಮೇವ ಮಮ ದ್ರೋಹೋ ಹ್ಯವಜ್ಞಾಸಿಷಮೀಶ್ವರಂ ।
ನೈವೇದ್ಯಾಶನಮಾಹಾತ್ಮ್ಯಮಜಾನನ್ಪರಮಾದ್ಭುತಂ ॥ ೯೧ ॥
ಅಷ್ಟಾದಶಚತುರ್ದಶಬ್ರಹ್ಮಾಂಡಂ ಯತ್ಪದಾಂಬುಜಂ ।
ಧರ್ಮದ್ರವೇಷು ಪ್ರಕ್ಷಾಲ್ಯ ಅಪುನಾತ್ಸ್ವಂ ತದಂಬುನಾ ॥ ೯೨ ॥
ಯಮರ್ಚಯಂತಿ ಶಕ್ರಾದ್ಯಾ ದಿವ್ಯಭೋಗೈರನುತ್ತಮೈಃ ।
ಸ ಮಾನುಷ್ಯಕೃತಂ ಭುಂಕ್ತೇ ಕ್ಷೇತ್ರೇಽಸ್ಮಿನ್ಮಹದದ್ಭುತಂ ॥ ೯೩ ॥
ಇತ್ಯಾಶ್ಚರ್ಯಪರಸ್ತೇನ ಸ್ವಪ್ನಲಬ್ಧೇನ ವೈ ದ್ವಿಜಾಃ ।
ನೈವೇದ್ಯೇನ ಕುಟುಂಬಂ ಸ್ವಂ ಮಾರ್ಜಯಾಮಾಸ ಸಾದರಂ ॥ ೯೪ ॥

---

ಆ ಧರ್ಮಕ್ಕೆ ಶ್ರೀಮನ್ನಾರಾಯಣನೇ ಪ್ರವರ್ತಕನೂ, ಸ್ವಾಮಿಯೂ ಆಗಿರುವನು.'' ಇಂತೆಂದು ಯೋಚಿಸುತ್ತ ಶಾಂಡಿಲ್ಯನು ತನ್ನ ಕುಟುಂಬದವರಿಗೆ ಕೊಡುವುದಕ್ಕಾಗಿ ಒಂದು ಹಿಡಿಯಷ್ಟು ಪ್ರಸಾದವನ್ನು ತೆಗೆದುಕೊಂಡು ಬರುತ್ತಿದ್ದನು. ಕನಸಿನ ಈ ಪರಿಸ್ಥಿತಿಯಲ್ಲಿಯೇ ಆತನಿಗೆ ಎಚ್ಚರಿಕೆಯಾಯಿತು. ಜಾಗ್ರತನಾದ ಮೇಲೆ ಆತನು ತಾನು ಕಂಡ ಸ್ವಪ್ನವನ್ನೇ ಕುರಿತು ಚಿಂತಿಸುತ್ತ ಆಶ್ಚರ್ಯಭರಿತವಾದ ಮನಸ್ಸುಳ್ಳವನಾದನು.

೯೧. "ಇದೇ ನನ್ನ ಭಗವದ್ದ್ರೋಹವು. ಇಂದಿನವರೆವಿಗೆ ನಾನು ಲೋಕೇಶ್ವರನನ್ನು ಅವಜ್ಞೆಮಾಡಿದ್ದೆನು. ಅದ್ಭುತಮಹಿಮೆಯಿಂದ ಕೂಡಿದ ಆತನ ನೈವೇದ್ಯದ ಸೇವನೆಯ ಮಹತ್ತ್ವವನ್ನು ಇಂದಿನವರೆವಿಗೂ ನಾನು ತಿಳಿಯಲಿಲ್ಲ.

೯೨–೯೩. ಹದಿನೆಂಟು ಪುರಾಣಗಳಲ್ಲಿಯೂ ಹದಿನಾಲ್ಕು ವಿದ್ಯೆಗಳಲ್ಲಿಯೂ ಪ್ರಖ್ಯಾತವಾಗಿರುವ ಬ್ರಹ್ಮಾಂಡವು ಆತನ ಪಾದಕಮಲಗಳನ್ನು ಧರ್ಮವೆಂಬ ಜಲದಿಂದ ತೊಳೆದು ಆ ಪಾದೋದಕವನ್ನು ತನ್ನ ಶಿರದಲ್ಲಿ ಧರಿಸಿ ಪಾವನವೆನಿಸಿರುವುದಲ್ಲವೆ. ಇಂದ್ರನೇ ಮೊದಲಾದ ದೇವತೆಗಳೂ ತಮ್ಮ ಅನುಪಮಗಳಾದ ದೇವಲೋಕದ ಭೋಗದ್ರವ್ಯಗಳನ್ನರ್ಪಿಸಿ ಯಾವನನ್ನು ಪೂಜಿಸುತ್ತಿರುವರೊ, ಆತನೇ ಈ ಕ್ಷೇತ್ರದಲ್ಲಿ ಮನುಷ್ಯರು ಸಮರ್ಪಿಸುವ ನೈವೇದ್ಯಗಳನ್ನು ಸ್ವತಃ ಭೋಜನಮಾಡುವುದು ಮಹಾದ್ಭುತವಾದ ಪ್ರಸಂಗವಾಗಿರುವುದು.''

೯೪. ಇಂತೆಂದು ಆ ಬ್ರಾಹ್ಮಣೋತ್ತಮನು ವಿಸ್ಮಯಗೊಂಡನು. ಎಲೈ ಬ್ರಾಹ್ಮಣರಿರಾ! ಬಳಿಕ ಸ್ವಪ್ನಾವಸ್ಥೆಯಲ್ಲಿ ನೋಡಿದ ಮಾಹಾತ್ಮ್ಯೆಯನ್ನು ಜ್ಞಾಪಿಸಿಕೊಂಡು ಜಗನ್ನಾಥನ ನೈವೇದ್ಯದಿಂದ ಆದರ ಪೂರ್ವಕವಾಗಿ ತನ್ನ ಸಂಸಾರದವರೆಲ್ಲರ ದೇಹಗಳನ್ನೂ ಲೇಪಿಸಿದನು.

ತತಃ ಸರ್ವೇ ನೀರುಜಾಸ್ತೇ ಸುವಾಕ್ಯಾದ್ಧೃಷ್ಟಮಾನಸಾಃ ।
ಪುನರ್ಜನ್ಮಮನ್ಯಮಾನಾಃ ಶಶಂಸುಃ ಕ್ಷೇತ್ರಮುತ್ತಮಂ ॥ ೯೫ ॥
ನಾಸ್ಯಸ್ಯ ಸದೃಶಂ ಕ್ಷೇತ್ರಂ ಸಪ್ತದ್ವೀಪಾವನೀತಲೇ ।
ಯತ್ರ ಸ್ವೋಚ್ಛಿಷ್ಟದಾನೇನ ಪಾಪಾನ್ಮೋಚಯತೇ ನರಾನ್ ॥ ೯೬ ॥
ಪುರುಷೋತ್ತಮಮಾಹಾತ್ಮ್ಯಂ ಕ್ಷೇತ್ರಂ ಪರಮದುರ್ಲಭಂ ।
ಯತಃ ಸ್ವರ್ಗಶ್ಚ ಭೋಗಶ್ಚ ಮುಕ್ತಿಶ್ಚೈವ ಕರೇ ಸ್ಥಿತಾ ॥ ೯೭ ॥
ಆರ್ತಾನಾಂ ಭವಕಾಂತಾರೇ ಭಾಗ್ಯಾದತ್ರ ಸಮೀಯುಷಾಂ ।
ನಾನಾಭೋಗೋಪತೃಪ್ತಾನಾಂ ಮುಕ್ತಿಮಾರ್ಗಃ ಸುಖಂ ಭವೇತ್ ॥೯೮॥
ಇತ್ಥಂ ತೇ ಹರ್ಷಮಾಪನ್ನಾಃ ಪ್ರಲಪಂತಃ ಪರಸ್ಪರಂ ।
ಯಥೇಷ್ಟಂ ಭೋಜಯಾಮಾಸುರನ್ಯೋನ್ಯಂ ಚ ನಿವೇದಿತಂ ॥ ೯೯ ॥
ತತಸ್ತೇ ನಿರ್ಮಲಾ ವಿಪ್ರಾಸ್ತರುಣಾದಿತ್ಯವರ್ಚಸಃ ।
ದೇವಾ ಇವ ಬಭುಃ ಸರ್ವೇ ನಿಷ್ಪಾಪಾ ನಿರ್ಗತಜ್ವರಾಃ ॥ ೧೦೦ ॥

---

೯೫. ಅಷ್ಟು ಮಾತ್ರದಿಂಲೇ ಅವರೆಲ್ಲರೂ ಆರೋಗದೃಢಕಾಯರಾದರು. ಮೂಗರಾಗಿದ್ದವರೂ ಮಾತನಾಡಲು ಶಕ್ತರಾಗಿ ಸಂತುಷ್ಟಮಾನಸರಾದರು. ತಮಗೆಲ್ಲ ಪುನರ್ಜನ್ಮವೇ ಲಭಿಸಿತೆಂದು ತಿಳಿದು ಆ ಉತ್ತಮಕ್ಷೇತ್ರವನ್ನು ಬಹುವಾಗಿ ಪ್ರಶಂಸೆಮಾಡಿದರು.

೯೬. ಸಪ್ತದ್ವೀಪಗಳಿಂದೊಡಗೂಡಿದ ಸಮಸ್ತಭೂಮಂಡಲದಲ್ಲಿಯೂ ಈ ಪುರುಷೋತ್ತಮ ಕ್ಷೇತ್ರಕ್ಕೆ ಸಮಾನವಾದ ಮತ್ತೊಂದು ಕ್ಷೇತ್ರವಿಲ್ಲ. ಇಲ್ಲಿ ತನ್ನ ಉಚ್ಛಿಷ್ಟವನ್ನು ಕೊಡುವ ಮಾತ್ರದಿಂದಲೇ ಪರಮಾತ್ಮನು ಸೇವನೆ ಮಾಡುವವರ ಸಕಲ ಪಾತಕಗಳನ್ನೂ ಕಳೆದು ಸಂರಕ್ಷಿಸುವನು.

೯೭. ಪುರುಷೋತ್ತಮನ ಮಾಹಾತ್ಮ್ಯದಿಂದ ಪ್ರಖ್ಯಾತಿಯನ್ನು ಪಡೆದಿರುವ ಈ ಕ್ಷೇತ್ರದ ಸೇವೆಯು ಜನರಿಗೆ ಅತ್ಯಂತ ದುರ್ಲಭವಾಗಿರುವುದು. ಇಲ್ಲಿ ಸ್ವರ್ಗಾದಿ ಆಮುಷ್ಮಿಕ ಭೋಗಗಳೂ, ಪುತ್ರಾದಿ ಐಹಿಕಭೋಗಗಳೂ, ವೈಕುಂಠ ರೂಪವಾದ ಮೋಕ್ಷಪದವಿಯೂ ಕರತಲಾಮಲಕಗಳಾಗಿರುವುವು.

೯೮. ಸಂಸಾರವೆಂಬ ಭಯಂಕರವಾದ ಅರಣ್ಯದಲ್ಲಿ ತೊಳಲಿ ಬಳಲಿ, ಪೂರ್ವದಲ್ಲಿ ಮಾಡಿದ ಸ್ವಲ್ಪಪುಣ್ಯ ವಿಶೇಷದಿಂದ ಇಲ್ಲಿಗೆ ಬಂದು ಸೇರಿ, ಬಹುವಿಧಗಳಾದ ಕ್ಷಣಿಕಭೋಗಗಳಿಂದ ನಿವೃತ್ತವಾದ ಮನಸ್ಸುಳ್ಳವರಿಗೆ ಇಲ್ಲಿ ಮುಕ್ತಿಯ ಮಾರ್ಗವು ಸುಲಭವಾಗಿ ಲಭಿಸುವುದು.

೯೯. ಇಂತೆಂದು ಅವರೆಲ್ಲರೂ ಸಂತೋಷವನ್ನು ಹೊಂದಿದವರಾಗಿ ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತ, ತಮ್ಮ ತಮ್ಮ ನೈವೇದ್ಯಗಳನ್ನು ಅನ್ಯೋನ್ಯವಾಗಿ ವಿನಿಮಯಮಾಡಿಕೊಳ್ಳುತ್ತ ಯಥೇಷ್ಟವಾಗಿ ಸೇವಿಸಿದರು.

೧೦೦. ಬಳಿಕ ಆ ಬ್ರಾಹ್ಮಣರೆಲ್ಲರೂ ಪರಿಶುದ್ಧರೂ, ಬಾಲಸೂರ್ಯ

ನೈವೇದ್ಯಾಶನಮಾಹಾತ್ಮ್ಯಂ ಕಥಿತಂ ವೋ ದ್ವಿಜೋತ್ತಮಾಃ ।
ಶ್ರುತ್ವಾಪಿ ಮಹತಃ ಪಾಪಾನ್ಮುಚ್ಯತೇ ಪಾಪಕೃತ್ತಮಃ ॥ ೧೦೧ ॥
ನಿರ್ಮಾಲ್ಯಗ್ರಹಣಸ್ಯಾಸ್ಯ ಫಲಂ ವಕ್ತುಂ ನ ಶಕ್ನುಮಃ ।
ಸಾಕ್ಷಾದ್ಬ್ರಹ್ಮಸ್ವರೂಪೇಣ ಧ್ರಿಯತೇ ವಪುಷಾ ಹಿ ತಂ ॥ ೧೦೨ ॥
ಪುಷ್ಪಚಂದನಮಾಲ್ಯಾದಿ ಯದಂಗ್ಯೈರುಪಧಾರ್ಯತೇ ।
ಅಪನೀತಂ ಯಥಾಕಾಲೇ ನಿರ್ಮಾಲ್ಯಂ ತತ್ಪ್ರಕೀರ್ತಿತಂ ॥ ೧೦೩ ॥
ಧಾರಣಂ ಶಿರಸಾ ತಸ್ಯ ತೇನಾಂಗೇ ಚಾಪಿ ಮಾರ್ಜನಂ ।
ಸಾರ್ಧಾನಾಂ ಕೋಟಿ ತೀರ್ಥಾನಾಮಭಿಷೇಕಫಲಪ್ರದಂ ।
ಭಕ್ಷಣಂ ಗುರುತಲ್ಪಾದಿಪಾತಕೌಘವಿನಾಶನಂ ॥ ೧೦೪ ॥
ಲೇಪ್ಯಾ ಮೂರ್ತಿರಿಯಂ ವಿಷ್ಣೋರನ್ಯೇಭ್ಯೋ ಲೇಪ ಉತ್ತಮಃ ।
ಶ್ರೀಖಂಡಾಗುರುಕರ್ಪೂರಕಸ್ತೂರೀ ಕುಂಕುಮಾದಿಭಿಃ ॥ ೧೦೫ ॥

---

ಸಮಾನತೇಜಸ್ಸಿನಿಂದ ಕೂಡಿದವರೂ, ಪಾಪಲೇಪವಿಲ್ಲದವರೂ, ರೋಗಾದ್ಯುಪದ್ರವರಹಿತರೂ ಆಗಿ ದೇವತೆಗಳಂತೆ ಪ್ರಕಾಶಿಸುತ್ತಿದ್ದರು.

೧೦೧. ಬ್ರಾಹ್ಮಣೋತ್ತಮರಿರಾ! ಪುರುಷೋತ್ತಮನ ನೈವೇದ್ಯವನ್ನು ಸ್ವೀಕರಿಸುವುದರ ಮಾಹಾತ್ಮ್ಯವನ್ನು ನಿಮಗೆ ವರ್ಣಿಸಿರುವೆನು. ಎಂತಹ ಘೋರಪಾತಕಗಳನ್ನು ಮಾಡಿದವನಾದರೂ ಈ ನೈವೇದ್ಯಮಾಹಾತ್ಮ್ಯೆಯನ್ನು ಕೇಳಲು ತನ್ನ ಮಹಾ ಪಾತಕಗಳಿಂದ ಮುಕ್ತನಾಗುವನು.

೧೦೨. ಜಗನ್ನಾಥನ ನಿರ್ಮಾಲ್ಯವನ್ನು ಸೇವಿಸುವುದರ ಫಲವನ್ನು ಸಮಗ್ರವಾಗಿ ತಿಳಿಸಲು ನಾವು ಶಕ್ತರಲ್ಲ. ನಿರ್ಮಾಲ್ಯವೆಂದರೆ ಸಾಕ್ಷಾತ್ತಾಗಿ ಬ್ರಹ್ಮಸ್ವರೂಪವಾದ ಪರಮಾತ್ಮವಸ್ತುವೇ ಸ್ಥೂಲರೂಪವನ್ನು ಪಡೆದಿರುವುದೆಂದು ತಿಳಿಯಬೇಕು.

೧೦೩. ಯಾವ ಪುಷ್ಪಗಳು, ಚಂದನ, ಮಾಲೆಗಳೇ ಮೊದಲಾದ ಪದಾರ್ಥಗಳು ಪರಮಾತ್ಮನ ದೇಹದಲ್ಲಿ ಧರಿಸಲ್ಪಟ್ಟು ಉಚಿತಕಾಲದಲ್ಲಿ ವಿಸರ್ಜಿಸಲ್ಪಡುವುವೋ ಅವುಗಳೆಲ್ಲ ನಿರ್ಮಾಲ್ಯಗಳೆಂದು ಕರೆಯಲ್ಪಡುವುವು.

೧೦೪. ಅವುಗಳನ್ನು ತಲೆಯಲ್ಲಿ ಧರಿಸುವುದರಿಂದಲೂ, ಶರೀರದಲ್ಲಿ ಲೇಪನೆಮಾಡಿಕೊಳ್ಳುವುದರಿಂದಲೂ ಒಂದೂವರೆ ಕೋಟಿ ತೀರ್ಥಗಳಲ್ಲಿ ಸ್ನಾನ ಮಾಡಿದ ಸತ್ಫಲವು ಲಭಿಸುವುದು. ನೈವೇದ್ಯವನ್ನು ಭಕ್ಷಣಮಾಡಲು ಗುರುತಲ್ಪಗಮನವೇ ಮೊದಲಾದ ಮಹಾ ಪಾತಕಗಳ ಸಮೂಹಗಳು ನಾಶವನ್ನು ಹೊಂದುವುವು.

೧೦೫. ಮಹಾವಿಷ್ಣುವಿನ ಈ ಮೂರ್ತಿಯು ಲೇಪ್ಯಮೂರ್ತಿಯೆಂದು ಪ್ರಸಿದ್ಧವಾಗಿರುವುದು. ಇತರ ಸೇವೆಗಳಿಗಿಂತಲೂ ಶ್ರೀಖಂಡ, ಅಗುರು,

ಪ್ರಪಿಷ್ಟಲೇಪಸ್ನೇಹೇನ ಚಂದನಾಗುರುದಾರುಣಾ ।
ಶರೀರೇ ವಾಸುದೇವಸ್ಯ ಇಂದ್ರದ್ಯುಮ್ನೇನ ಕಾರಿತಃ ॥ ೧೦೬ ॥
ಪ್ರತ್ಯಹಂ ಭೋ ದ್ವಿಜಶ್ರೇಷ್ಠಾ ವರ್ಷಾಂತೇ ಚಾಪನೀಯತೇ ।
ಲೇಪ್ಯಾನಾಂ ಲೇಪನಿರ್ಮೋಕೇ ದರ್ಶನಂ ನ ಪ್ರಶಸ್ಯತೇ ॥ ೧೦೭ ॥
ಅಂತರಾ ಚೇತ್ಪತೇಲ್ಲೇಪಃ ಪಿಷ್ಟಂ ಲಿಂಪೇತ್ಪುನಶ್ಚ ತಂ ।
ನಾನ್ಯಲೇಪಃ ಪ್ರಶಸ್ತೋ ಹಿ ಸ ವಿಷ್ಣೋರಂಗಸಂಮತಃ ॥ ೧೦೮ ॥
ಚಂದನಾರ್ದ್ರಶರೀರಂ ಚ ದೃಷ್ಟ್ವಾ ವಿಷ್ಣುಂ ಪುರಾ ಕಿಲ ।
ಸೌಗಂಧ್ಯಾಲ್ಲೋಭಯಾಮಾಸ ನೃಪಪುತ್ರಃ ಸ ಮೂಢಧೀಃ ॥ ೧೦೯ ॥
ತಸ್ಯ ಪ್ರೀತ್ಯೈ ನಿಯುಕ್ತಸ್ತು ಆಕೃಷ್ಯಾಂಗಾತ್ತ್ರಲೇಪನಂ ।
ದದೌ ನೃಪಕುಮಾರಾಯ ಸ ಲಿಲಿಂಪೇ ಹೃದಿ ಸ್ವಕೇ ॥ ೧೧೦ ॥

---

ಪಚ್ಚಕರ್ಪೂರ, ಕಸ್ತೂರಿ, ಕುಂಕುಮಗಳೇ ಮುಂತಾದ ಸುಗಂಧ ದ್ರವ್ಯಗಳ ಲೇಪನವೇ ಪ್ರಶಸ್ತವಾಗಿರುವುದು.

೧೦೬. ಪೂರ್ವದಲ್ಲಿ ಶ್ರೀ ವಾಸುದೇವನ ದೇಹಕ್ಕೆ ಇಂದ್ರದ್ಯುಮ್ನ ಮಹಾರಾಜನು ಶ್ರೀಗಂಧ, ಅಗುರುಗಳ ಗಂಧಯುಕ್ತವಾದ ಪಿಷ್ಟಲೇಪವನ್ನು ಮಾಡಿಸುವವನಾದನು.

೧೦೭. ಎಲೈ ಬ್ರಾಹ್ಮಣಶ್ರೇಷ್ಠರಿರಾ! ಈ ಲೇಪವು ಪ್ರತಿದಿನದಲ್ಲಿಯೂ ನಡೆಯುತ್ತಿರುವುದು. ವರ್ಷಾಂತ್ಯದಲ್ಲಿ ಈ ಸಕಲವೂ ವಿಸರ್ಜಿತವಾಗುವುದು. ಇಂತು ಲೇಪಗಳನ್ನು ವಿಸರ್ಜಿಸಿರುವ ಸಮಯದಲ್ಲಿ ಪರಮಾತ್ಮನ ದರ್ಶನವು ಪ್ರಶಸ್ತವಾದುದಲ್ಲ.

೧೦೮. ಮಧ್ಯಕಾಲದಲ್ಲಿ ಲೇಪವು ಯಾವಾಗಲಾದರೂ ಕಳಚಿಹೋದರೆ ಆ ಸ್ಥಳವನ್ನು ಪಿಷ್ಟಲೇಪದಿಂದ ಪೂರ್ತಿಗೊಳಿಸಬೇಕು. ಇತರ ಪದಾರ್ಥಗಳ ಲೇಪವನ್ನು ಮಾಡುವುದು ಯುಕ್ತವಲ್ಲ. ಅದೊಂದೇ ಮಹಾ ವಿಷ್ಣುವಿಗೆ ಸಮ್ಮತ ವಾಗಿರುವುದು.

೧೦೯. ಪೂರ್ವಕಾಲದಲ್ಲಿ ಚಂದನ ಲೇಪನವು ಆರ್ದ್ರವಾಗಿರಲು ಮಹಾ ವಿಷ್ಣುವನ್ನು ಕಂಡು ಒಬ್ಬಾನೊಬ್ಬ ರಾಜಪುತ್ರನು ಮೂಢಬುದ್ಧಿಯುಳ್ಳವನಾಗಿ ಸುವಾಸನೆಯ ಲೋಭದಿಂದ ಆ ಗಂಧದ್ರವ್ಯವನ್ನಪೇಕ್ಷಿಸಿದನು.

೧೧೦. ಆತನಿಗೆ ಸಂತೋಷವನ್ನುಂಟುಮಾಡಲು ಅರ್ಚಕನೊಬ್ಬನು ಹಸಿಯ ಗಂಧವನ್ನೇ ಭಗವಂತನ ವಿಗ್ರಹದಿಂದ ತೆಗೆದು ಆ ರಾಜಕುಮಾರನಿಗೆ ಕೊಟ್ಟನು. ಆತನೂ ಸಂತೋಷದಿಂದ ಅದನ್ನು ತನ್ನ ಎದೆಯಲ್ಲಿ ಲೇಪಿಸಿ ಕೊಂಡನು.

ತಾವತ್ಪ್ರದೇಶಃ ಕುಷ್ಠಂ ವೈ ಶ್ವೇತಂ ತಸ್ಯಾಭವತ್ಕ್ಷಣಾತ್ ।
ಸ ಆಸೀತ್ಕುಷ್ಠಪಾಣಿಸ್ತು ತಸ್ಮೈ ಯೋ ದತ್ತವಾನ್ಕಿಲ ॥ ೧೧೧ ॥
ತತೋ ವರ್ಷಾವಧಿಸ್ಥಾಯೀ ಲೇಪಃ ಪುಣ್ಯತಮಃ ಸ್ಮೃತಃ ।
ನಿರ್ಮಾಲ್ಯಾನಾಂ ಪ್ರದಾನಂ ತದ್ಘ್ರಾಣಾದಂಹೋವಿನಾಶನಂ ॥ ೧೧೨ ॥
ಪುರಾ ದಮನಕಂ ದೈತ್ಯಂ ಸಮುದ್ರೋದಕಚಾರಿಣಂ ।
ಬಾಧಿತಾರಂ ಜನಾನಾಂ ವೈ ಮಾಯಾಬಲಪರಾಕ್ರಮಂ ॥ ೧೧೩ ॥
ಭಗವಾನಪಿ ಮಾಯಾವೀ ಪಿತಾಮಹನಿದೇಶತಃ ।
ಮತ್ಸ್ಯಾವತಾರೇಣ ವಿಭುಃ ಪ್ರವಿಶ್ಯ ವರುಣಾಲಯಂ ॥ ೧೧೪ ॥
ಅನ್ವಿಷ್ಯಾಕೃಷ್ಯವೇಲಾಯಾಂ ನಿಷ್ಪಿಪೇಷ ಮಹೀತಲೇ ।
ಮಧೋಃ ಶುಕ್ಲಚತುರ್ದಶ್ಯಾಂ ಪತಿತೋ ದಾನವೋತ್ತಮಃ ॥ ೧೧೫ ॥
ಭಗವತ್ಕರಸಂಪರ್ಕಾತ್ಸುಗಂಧಿರಭವತ್ತೃಣಂ ।
ತಸ್ಯೈವ ನಾಮ್ನಾ ತಂ ಸಮ್ಯಗ್ಜಗ್ರಾಹಾಶ್ಚರ್ಯಮಾನಸಃ ॥ ೧೧೬ ॥

---

೧೧೧. ಆ ಕ್ಷಣದಲ್ಲಿಯೇ ಆತನಿಗೆ ಅಷ್ಟು ಪ್ರದೇಶವೂ ಶ್ವೇತಕುಷ್ಠ ರೋಗದಿಂದ ಆವೃತವಾಯಿತು. ಯಾವ ಅರ್ಚಕನು ಆತನಿಗೆ ಆದ್ರ್ರಗಂಧವನ್ನು ಕೊಟ್ಟಿದ್ದನೊ, ಆತನ ಕೈಗೂ ಕುಷ್ಠರೋಗವು ಹತ್ತಿಕೊಂಡಿತು.

೧೧೨. ಆದುದರಿಂದ ಒಂದು ವರ್ಷದವರೆವಿಗೂ ಭಗವಂತನ ವಿಗ್ರಹದ ಮೇಲಿರುವ ಲೇಪವೇ ಪರಮಪುಣ್ಯತಮವೆಂದು ಹೇಳಲ್ಪಟ್ಟಿರುವುದು. ಅದೇ ನಿರ್ಮಾಲ್ಯಗಳಲ್ಲೆಲ್ಲ ಮುಖ್ಯವಾದುದು. ಆಘ್ರಾಣಮಾತ್ರದಿಂದಲೇ ಸಕಲ ಪಾತಕಗಳನ್ನೂ ನಾಶಗೊಳಿಸುವುದು.

೧೧೩–೧೧೫. ಮುನ್ನು ದಮಕನೆಂಬ ರಾಕ್ಷಸನು ಸಮುದ್ರದ ಜಲದಲ್ಲಿ ಸಂಚರಿಸುತ್ತ ತನ್ನ ಮಾಯಾಮೂಲಕವಾಗಿ ಬಲಪರಾಕ್ರಮದಿಂದ ಸಕಲ ಲೋಕಗಳ ನಿವಾಸಿಗಳನ್ನೂ ಹಿಂಸೆಗೊಳಿಸುತ್ತಿರಲು, ಬ್ರಹ್ಮದೇವನ ಪ್ರಾರ್ಥನೆ ಯನ್ನಂಗೀಕರಿಸಿ ಮಾಯಾವಿಯಾದ ಭಗವಂತನೂ ಕೂಡ ಮಹಾ ಮತ್ಸ್ಯದ ರೂಪವನ್ನು ತಳೆದು ಸಮುದ್ರವನ್ನು ಪ್ರವೇಶಿಸಿ ಆ ರಾಕ್ಷಸನನ್ನು ಹುಡುಕಿ ಹಿಡಿದು ತೀರಕ್ಕೆ ಸೆಳೆದುಕೊಂಡು ಬಂದು ಅವನ ಶರೀರವನ್ನು ನುಗ್ಗುನುಚ್ಚಾಗಿ ಮಾಡಿದನು. ಇಂತು ಚೈತ್ರಮಾಸದ ಶುಕ್ಲ ಚತುರ್ದಶಿಯ ದಿನದಲ್ಲಿ ಆ ದಮನಕನೆಂಬ ರಾಕ್ಷಸಶ್ರೇಷ್ಠನು ನಿಗ್ರಹಿಸಲ್ಪಟ್ಟನು.

೧೧೬. ಭಗವಂತನ ಹಸ್ತಗಳ ಸ್ಪರ್ಶದಿಂದ ಆ ಪ್ರದೇಶದಲ್ಲಿದ್ದ ತೃಣವೆಲ್ಲವೂ ಸುಗಂಧಸಹಿತವಾದುದಾಯಿತು. ಪರಮಾತ್ಮನು ಆಶ್ಚರ್ಯಭರಿತನಾಗಿ ಆ ರಾಕ್ಷಸನ ಹೆಸರನ್ನೇ ಅದಕ್ಕೆ ಕೊಟ್ಟು ಅದನ್ನು ತನ್ನ ಅಲಂಕಾರವಸ್ತುವಾಗಿ ಸ್ವೀಕರಿಸಿದನು.

ಮಾಲಾಂ ಕೃತ್ವಾ ಹೃತ್ಪ್ರದೇಶೇ ಮಿಲಿತಾಂ ವನಮಾಲಯಾ ।
ಅಚಿಂತಯತ್ತಸ್ಯ ಗಂಧಂ ಯಾವದ್ವಸ್ತು ಚಿರಸ್ಥಿತಂ ॥ ೧೧೭ ॥
ತಸ್ಯಾಪಿ ಗಂಧಃ ಸರ್ವೇಷಾಂ ಪುಷ್ಪಾಣಾಂ ಸೌರಭಾಪಹಃ ।
ವರ್ಣಸ್ತು ಭಗವನ್ಮೂರ್ತೇಸ್ತುಲ್ಯೋಽಭೂತ್ಸ ಸುಶೋಭನಃ ॥ ೧೧೮ ॥
ತಸ್ಯ ಮಾಲಾ ಭಗವತಃ ಪರಮಪ್ರೀತಿಕಾರಿಣೀ ।
ಶುಷ್ಕಾ ಪರ್ಯುಷಿತಾ ವಾಪಿ ನ ದುಷ್ಟಾ ಭವತಿ ಕ್ವಚಿತ್ ॥ ೧೧೯ ॥
ತಸ್ಯ ಸುಗ್ರಥಿತಾಂ ಮಾಲಾಂ ದತ್ವಾ ದಮನಕಾರಯೇ ।
ಉತ್ಪಾದಯೇನ್ಮಹಾಪ್ರೀತಿಂ ವಿಷ್ಣೋರ್ಯಾ ಮುಕ್ತಿದಾಯಿನೀ ॥ ೧೨೦ ॥
ಅಂಗಾಪಕರ್ಷಿತಾಂ ಮಾಲಾಂ ಭಕ್ತ್ಯಾ ಯೋ ಧಾರಯೇನ್ನರಃ ।
ಹಯಮೇಧಸಹಸ್ರಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೧೨೧ ॥
ತುಲಸೀಕಲ್ಪಿತಾಂ ಮಾಲಾಂ ವಿಷ್ಣೋರಂಗಾಪಕರ್ಷಿತಾಂ ।
ಧಾರಯೇನ್ಮೂರ್ಧ್ನಿ ಕಂಠೇ ಚ ಭಕ್ತ್ಯೋ ಯೋ ವಿನ್ಯಸೇದ್ಧೃದಿ ।
ತಾವತ್ಸಂಖ್ಯಂ ವಾಜಿಮೇಧಫಲಮವ್ಯಗ್ರಮಶ್ನುತೇ ॥ ೧೨೨ ॥

---

೧೧೭. ಅದರಿಂದ ಮಾಲೆಯನ್ನು ಮಾಡಿ ತನ್ನ ಹೃದಯಪ್ರದೇಶದಲ್ಲಿರುವ ತುಳಸಿಯ ವನಮಾಲೆಯೊಡನೆ ಅದನ್ನು ಸೇರಿಸಿದನು. ಭೌತಿಕ ವಸ್ತುಗಳು ಪ್ರಪಂಚದಲ್ಲಿರುವವರೆವಿಗೂ ಆ ದಮನಕ ಸುಗಂಧವು ಚಿರಸ್ಥಾಯಿಯಾಗಿರಬೇಕೆಂದು ತನ್ನ ಮನಸ್ಸಿನಲ್ಲಿಯೇ ಸಂಕಲ್ಪಮಾಡಿದನು.

೧೧೮. ಆ ದಮನಕದ ಸುವಾಸನೆಯು ಸಕಲ ಪುಷ್ಪಗಳ ಸೌರಭವನ್ನೂ ಸೂರೆಗೊಳ್ಳುವುದಾಯಿತು. ಮತ್ತು ಅದರ ಬಣ್ಣವೂ ಭಗವಂತನ ಶರೀರದ ಕಾಂತಿಯನ್ನು ಹೋಲುವುದಾಗಿ ಪರಮಶೋಭನವೆನಿಸಿತು.

೧೧೯. ಆ ದಮನಕದಳಗಳಿಂದ ರಚಿಸಲ್ಪಟ್ಟ ಮಾಲೆಯು ಶ್ರೀ ಪುರುಷೋತ್ತಮನಿಗೆ ಅತ್ಯಂತ ಸಂತೋಷವನ್ನುಂಟುಮಾಡುವುದು. ಶುಷ್ಕವಾದುದಾದರೂ, ಹಿಂದಿನ ದಿವಸದ್ದಾದರೂ ಅದು ಎಂದಿಗೂ ದೋಷಯುಕ್ತವಾಗಲಾರದು.

೧೨೦. ದಮನಕಾಸುರವೈರಿಯಾದ ಭಗವಂತನಿಗೆ ದಮನಕದಿಂದಲೇ ಚೆನ್ನಾಗಿ ರಚಿಸಲ್ಪಟ್ಟ ಮಾಲೆಯನ್ನು ಸಮರ್ಪಿಸಲು, ಭಕ್ತನಿಗೆ ಮೋಕ್ಷವನ್ನು ಕೊಡುವಂತಹ ಸಂತೋಷವನ್ನು ಮಹಾ ವಿಷ್ಣುವಿನಲ್ಲಿ ಉಂಟುಮಾಟುವುದು.

೧೨೧. ಭಗವಂತನ ದೇಹದಿಂದ ತೆಗೆದ ನಿರ್ಮಾಲ್ಯಮಾಲೆಯನ್ನು ಯಾವ ಮನುಷ್ಯನು ಭಕ್ತಿಯುಕ್ತನಾಗಿ ಧರಿಸುವನೊ, ಅವನು ಒಂದು ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೧೨೨. ಮಹಾವಿಷ್ಣುವಿನ ವಿಗ್ರಹದಿಂದ ತೆಗೆದ ತುಳಸೀದಳಗಳ

ನಿರ್ಮಾಲ್ಯತುಲಸೀಪತ್ರಂ ಯಾವದ್ಭಕ್ಷಯತೇ ಹರೇಃ ।
ತಾವಜ್ಜನ್ಮಸಹಸ್ರಂ ತು ವಿಷ್ಣುಲೋಕೇ ಮಹೀಯತೇ ॥ ೧೨೩ ॥
ಹರೇರ್ನೈವೇದ್ಯಮನ್ನಂ ಚ ತುಲಸೀದಲಮಿಶ್ರಿತಂ ।
ಪ್ರತಿಗ್ರಾಸಂ ಸೋಮಪಾನಂ ಫಲಂ ತತ್ಸಮಮಶ್ನುತೇ ॥ ೧೨೪ ॥
ಯಾವಜ್ಜೀವಂ ತು ಭುಂಜಾನೋ ಧ್ರುವಂ ಮೋಕ್ಷಮವಾಪ್ನುಯಾತ್ ॥
ಅರ್ಘ್ಯಶೇಷಾದಿಕಂ ವಿಷ್ಣೋಸ್ತಥಾ ಚಾಚಮನೋದಕಂ ।
ಪಾದೋದಕಂ ಸ್ನಾನವಾರಿ ಪ್ರತ್ಯೇಕಂ ಪಾಪನಾಶನಂ ॥ ೧೨೬ ॥
ಸರ್ವತೀರ್ಥಾಭಿಷೇಕಾಣಾಂ ಫಲದಂ ಗ್ರಹನಾಶನಂ ।
ಅಲಕ್ಷ್ಮೀಪಾಪರಕ್ಷೋಘ್ನಂ ಭೂತವೇತಾಲನಾಶನಂ ॥ ೧೨೭ ॥
ಶವಾದ್ಯಮೇಧ್ಯಸಂಸ್ಪರ್ಶದೋಷನಾಶನಮುತ್ತಮಂ ।
ಸರ್ವದೀಕ್ಷಾವ್ರತಫಲಪ್ರದಮೈಶ್ವರ್ಯವರ್ಧನಂ ॥ ೧೨೮ ॥

---

ಮಾಲೆಯನ್ನು ತಲೆಯಲ್ಲಿಯಾಗಲಿ, ಕಂಠದಲ್ಲಿಯಾಗಲಿ, ವಕ್ಷಸ್ಥಳದಲ್ಲಿಯಾಗಲಿ ಯಾವ ಭಕ್ತನು ಧರಿಸುವನೊ, ಆ ಮಾಲೆಯಲ್ಲಿರುವ ದಳಗಳ ಸಂಖ್ಯೆಗನುಗುಣವಾದ ಅಶ್ವಮೇಧಗಳನ್ನು ಮಾಡಿದ ಪುಣ್ಯವನ್ನು ಅವನು ಶಾಶ್ವತವಾಗಿ ಪಡೆಯುವನು.

೧೨೩. ಭಾಗವತೋತ್ತಮನಾದವನು ಶ್ರೀಹರಿಯ ನಿರ್ಮಾಲ್ಯದ ಎಷ್ಟು ತುಲಸೀದಳಗಳನ್ನು ಭಕ್ಷಿಸುವನೊ, ಅಷ್ಟು ಸಹಸ್ರವರ್ಷಗಳವರೆವಿಗೂ ವಿಷ್ಣುಲೋಕದಲ್ಲಿ ಮಹಾ ವೈಭವಯುಕ್ತನಾಗಿ ವಾಸಮಾಡುವನು.

೧೨೪. ಶ್ರೀಹರಿಗೆ ನಿವೇದನೆಮಾಡಿದ ಅನ್ನವನ್ನು ತುಲಸೀದಳಗಳೊಡನೆ ಸ್ವೀಕರಿಸಲು, ಒಂದೊಂದು ಕವಳವೂ ಒಂದು ಯಜ್ಞದಲ್ಲಿ ಸೋಮಪಾನವನ್ನು ಮಾಡಿದುದಕ್ಕೆ ಸಮಾನವಾದ ಫಲವನ್ನು ದೊರಕಿಸುವುದು.

೧೨೫. ಆಜೀವಪರ್ಯಂತವೂ ಶ್ರೀಹರಿಯ ನೈವೇದ್ಯವನ್ನೇ ಭೋಜನ ಮಾಡುವವನು ನಿಶ್ಚಯವಾಗಿಯೂ ಶಾಶ್ವತವಾದ ಮೋಕ್ಷಪದವಿಯನ್ನು ಪಡೆಯುವನು.

೧೨೬. ಮಹಾವಿಷ್ಣುವಿನ ಅರ್ಚನೆಯಲ್ಲಿ ಉಪಯೋಗಿಸಿದ ಅರ್ಘ್ಯೋದಕದ ಶೇಷವೂ, ಆಚಮನೋದಕವೂ, ಪಾದೋದಕವೂ, ಸ್ನಾನಜಲವೂ ಬೇರೆಬೇರೆಯಾಗಿಯೇ ಸಕಲ ಪಾತಕಗಳನ್ನೂ ನಾಶಗೊಳಿಸುವ ಮಹಿಮೆಯುಳ್ಳವುಗಳಾಗಿರುವುವು.

೧೨೭–೧೨೯. ಈ ಒಂದೊಂದು ನಿರ್ಮಾಲ್ಯವೂ ಸಕಲ ತೀರ್ಥಸ್ನಾನಗಳ ಪುಣ್ಯವನ್ನು ಕೊಡುವುದು. ಸಕಲ ಗ್ರಹಪೀಡೆಗಳನ್ನೂ ನಾಶಗೊಳಿಸುವುದು.

**ಅಕಾಲಮೃತ್ಯುಹರಣಂ ವ್ಯಾಧಿವ್ಯೂಹನಿಬರ್ಹಣಂ ।**
**ಸುರಾಪಮಾಂಸಭಕ್ಷ್ಯಾದಿಪಾಪಸಂಘವಿನಾಶನಂ ॥ ೧೨೯ ॥**
**ಏತೈರಾಪ್ಲುತದೇಹಸ್ತು ಶೃಣುಯಾದ್ಯದಿ ಸೂತಕಂ ।**
**ನಾಶೌಚಂ ವಿದ್ಯತೇ ತಸ್ಯ ಸರ್ವಕರ್ಮಾಧಿಕಾರಿಣಃ ॥ ೧೩೦ ॥**
**ಯಾವಜ್ಜೀವಂ ಪ್ರತಿಜ್ಞಾಯ ಯಸ್ತ್ವೇತಾನ್ಯೇಕಮೇವ ವಾ ।**
**ಗೃಹ್ಣೀಯಾದ್ಭೂರಿ ವಾ ಸ್ವಲ್ಪಂ ಮುಚ್ಯೇದ್ವಿಷ್ಣೋಃ ಪ್ರಸಾದತಃ॥ ೧೩೧ ॥**
**ಏವಂ ತತ್ರ ವಸನ್ ದೇವೋ ಲೋಕಾನುಗ್ರಹಕಾಂಕ್ಷಯಾ ।**
**ರಮಮಾಣಃ ಶ್ರಿಯಾ ಸಾರ್ಧಮನಾಯಾಸವಿಮೋಚಕಃ ॥ ೧೩೨ ॥**

---

ದಾರಿದ್ರ್ಯ, ಪಾಪ, ರಾಕ್ಷಸ ಬಾಧೆಗಳನ್ನೂ ಕಳೆಯುವುದು. ಭೂತ ಭೇತಾಳಾದಿ ದುಸ್ಸ್ವರನ್ನು ನಾಶಗೊಳಿಸುವುದು. ಶವ ಮುಂತಾದ ಅಶುಚಿ ಪದಾರ್ಥಗಳ ಸಂಸ್ಪರ್ಶದಿಂದುಂಟಾದ ದೋಷಗಳನ್ನು ದೂರಮಾಡಲು ಉತ್ತಮೋಪಾಯ ವಾಗಿರುವುದು. ಸಕಲ ದೀಕ್ಷೆಗಳನ್ನೂ ವ್ರತಗಳನ್ನೂ ಸಮಗ್ರಗೊಳಿಸಿದ ಫಲವನ್ನು ಕೊಡುವುದು. ಪುತ್ರಪೌತ್ರಾದಿ ಸಕಲೈಶ್ವರ್ಯಗಳನ್ನೂ ಕೈಗೂಡಿ ಸುವುದು. ಅಕಾಲಮೃತ್ಯುವನ್ನು ಪರಿಹರಿಸುವುದು. ರೋಗಗಳ ಸಮೂಹವನ್ನು ಚೆದರಿಸುವುದು. ಸುರಾಪಾನ, ಮಾಂಸಭಕ್ಷಣ ಮುಂತಾದ ಮಹಾ ಪಾಪ ಕೋಟಿಗಳನ್ನು ನಾಶಮಾಡುವುದು. ಎಲೈ ವಿಪ್ರರೇ! ಶ್ರೀಜಗನ್ನಾಥಸ್ವಾಮಿಯ ನಿರ್ಮಾಲ್ಯ ಪುಷ್ಪಸೇವನೆಯ ಮಹಾತ್ಮ್ಯವಿಂತಹುದು.

೧೩೦. ಈ ನಿರ್ಮಾಲ್ಯೋದಕಗಳಿಂದ ಪ್ರೋಕ್ಷಿಸಲ್ಪಟ್ಟ ದೇಹವುಳ್ಳ ಭಗವದ್ಭಕ್ತನು ಬಂಧುಮರಣಾದಿವಾರ್ತೆಯನ್ನು ಕೇಳಿದರೂ ಆತನಿಗೆ ಆಶೌಚ ವೆಂಬುದಿರುವುದಿಲ್ಲವು. ನಿತ್ಯದಂತೆಯೇ ಆತನು ಸಮಸ್ತ ಶ್ರೌತಸ್ಮಾರ್ತಕರ್ಮ ಗಳಿಗೂ ಅಧಿಕಾರಿಯಾಗಿರುವನು. ಅಂತಹವನು ಮೃತಾಶೌಚ, ಜಾತಾಶೌಚ ದೋಷಗಳಿಂದ ದೂರನಾಗಿ ನಿತ್ಯಶುದ್ಧನಾಗುತ್ತಾನೆ.

೧೩೧. ಯಾವನು ಪ್ರತಿಜ್ಞಾಪೂರ್ವಕವಾಗಿ ಪ್ರತಿನಿತ್ಯವೂ ಇವುಗಳೆಲ್ಲ ವನ್ನಾಗಲಿ, ಯಾವುದಾದರೊಂದನ್ನಾಗಲಿ, ಹೆಚ್ಚಾಗಿಯೊ, ಸ್ವಲ್ಪವಾಗಿಯೊ, ಆಜೀವಪರ್ಯಂತವೂ ಸೇವಿಸುತ್ತಿರುವನೊ, ಆತನು ಮಹಾ ವಿಷ್ಣುವಿನ ಅನುಗ್ರಹದಿಂದ ಮುಕ್ತನಾಗುವನು.

೧೩೨. ಎಲೈ ಬ್ರಾಹ್ಮಣರಿರಾ! ಇಂತು ಲೋಕಾನುಗ್ರಹವನ್ನು ಮಾಡಬೇಕೆಂಬ ಕುತೂಹಲದಿಂದ ದೇವೋತ್ತಮನಾದ ಜಗನ್ನಾಥನು ಪುರುಷೋ ತ್ತಮಕ್ಷೇತ್ರದಲ್ಲಿ ವಾಸಮಾಡುತ್ತ ಲಕ್ಷ್ಮೀದೇವಿಯೊಡನೆ ರಮಿಸುತ್ತಿರು ವವನಾಗಿ ಸಕಲ ಭಕ್ತರಿಗೂ ಅನಾಯಾಸವಾಗಿಯೇ ಮೋಕ್ಷವನ್ನು ಅನುಗ್ರಹಿ ಸುತ್ತಿರುವನು.

ನಿರ್ಮಾಲ್ಯಪಾದಾಂಬುನಿವೇದನೀಯ
ದಾನೈಸ್ತದಾಲೋಕನತತ್ಪ್ರಣಾಮೈಃ ।
ಪೂಜೋಪಹಾರೈಶ್ಚ ವಿಮುಕ್ತಿದಾತಾ
ಕ್ಷೇತ್ರೋತ್ತಮೇಽಸ್ಮಿನ್ಪುರುಷೋತ್ತಮಾಖ್ಯೇ ॥ ೧೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ
ಸಂವಾದೇ "ದಮನಕವೃತ್ತಾಂತ ನಿರೂಪಣಂ"ನಾಮ
ಅಷ್ಟತ್ರಿಂಶೋಽಧ್ಯಾಯಃ

---

೧೩೩. ಸರ್ವೋತ್ತಮವಾದ ಈ ಪುರುಷೋತ್ತಮಕ್ಷೇತ್ರದಲ್ಲಿ ನಿರ್ಮಾಲ್ಯ, ಪಾದೋದಕ, ನೈವೇದ್ಯ ದಾನದಿಂದಲೂ, ದರ್ಶನದಿಂದಲೂ, ನಮಸ್ಕಾರಗಳಿಂದಲೂ, ಪೂಜಾದ್ರವ್ಯಸಮರ್ಪಣೆಯಿಂದಲೂ ಭಗವಂತನು ತನ್ನ ಭಕ್ತರಿಗೆ ಮೋಕ್ಷಪದವಿಯನ್ನು ಕೊಡುತ್ತಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ
ಮಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ದಮನಕ ವೃತ್ತಾಂತ ನಿರೂಪಣ"ವೆಂಬ
ಮುವ್ವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಚತ್ವಾರಿಂಶೋಽಧ್ಯಾಯಃ

## ಚಾತುರ್ವರ್ಣ್ಯವಿಧಿವರ್ಣನಂ

ಮುನಯ ಊಚುಃ:—

**ಮುನೇ ತ್ವತ್ತಃ ಶ್ರುತಂ ಸಮ್ಯಙ್ಮಾಹಾತ್ಮ್ಯಂ ಜಗದೀಶಿತುಃ ।**
**ನಿರ್ಮಾಲ್ಯಪ್ರಭೃತೀನಾಂ ಚ ಯಥಾವದನುಪೂರ್ವಶಃ ॥ ೧ ॥**
**ಶ್ರೋತುಮಿಚ್ಛಾಮಹೇ ಬ್ರಹ್ಮನ್ಯಾತ್ರಾಂತರಫಲಾನಿ ವೈ ।**
**ಶೃಣ್ವತಾಂ ತತ್ತ್ವತೋ ಬ್ರೂಹಿ ಯಥೋದ್ದೇಶಃ ಕೃತಃ ಪುರಾ ॥ ೨ ॥**

ಜೈಮಿನಿರುವಾಚ :—

**ಸರ್ವಥಾ ವರ್ತತೇ ಲೋಕಹಿತಾಯ ಪುರುಷೋತ್ತಮಃ ।**
**ನಾನಾಗುಣವಿಕಾಸೈಶ್ಚ ನಾನಾರೂಪವಿಚೇಷ್ಟಿತೈಃ ॥ ೩ ॥**
**ನಾನಾರೂಪವಿಲಾಸೇನ ನಾನಾತ್ಮಾ ಚ ಜಗನ್ಮಯಃ ।**
**ಅಹಂಕಾರಂ ವಿನಾ ಕರ್ಮಫಲಂ ನೋ ದ್ವಿಜಸತ್ತಮಾಃ ॥ ೪ ॥**

---

## ಕನ್ನಡದ ಅನುವಾದ

### ಚಾತುರ್ವರ್ಣ್ಯವಿಧಿವರ್ಣನ

೧. ಮುನಿಗಳು ಪ್ರಶ್ನೆಮಾಡುತ್ತಾರೆ:—ಜೈಮಿನಿಮಹರ್ಷಿಯೆ ! ನಿನ್ನಿಂದ ನಾವೆಲ್ಲರೂ ಜಗನ್ನಾಥನ ಮಾಹಾತ್ಮ್ಯವನ್ನು ವಿಸ್ತಾರವಾಗಿ ಕೇಳಿರುವೆವು ಮತ್ತು ನಿರ್ಮಾಲ್ಯವೇ ಮೊದಲಾದ ಪದಾರ್ಥಗಳನ್ನು ಸೇವಿಸುವುದರಿಂದ ಲಭಿಸುವ ಫಲಗಳನ್ನೂ ಕ್ರಮವಾಗಿಯೂ ಯಥಾವತ್ತಾಗಿಯೂ ತಿಳಿದುಕೊಂಡೆವು.

೨. ಈಗ ನಾವು ಪರಮಾತ್ಮನ ಯಾತ್ರಾದಿ ಸೇವೆಗಳ ಕ್ರಮಗಳನ್ನೂ ಅವುಗಳ ಫಲಗಳನ್ನೂ ಕೇಳಲು ಕುತೂಹಲವುಳ್ಳವರಾಗಿರುವೆವು. ಬ್ರಾಹ್ಮಣೋತ್ತಮನೆ ! ಪೂರ್ವದಲ್ಲಿ ಈ ವಿಷಯದಲ್ಲಿ ಯಾವ ನಿರ್ಣಯವಾಗಿರುವುದೆಂಬುದನ್ನು ಕೇಳಲಿಚ್ಛಿಸುತ್ತಿರುವ ನಮಗೆ ಯಥಾರ್ಥವಾಗಿ ನಿರೂಪಿರುವವನಾಗು.

೩–೪. ಜೈಮಿನಿಯು ಹೇಳುತ್ತಾನೆ:—ಸರ್ವಪ್ರಕಾರದಿಂದಲೂ ಪುರುಷೋತ್ತಮನು ಲೋಕಹಿತಕ್ಕಾಗಿಯೇ ಸಕಲ ವ್ಯವಹಾರಗಳನ್ನೂ ನಡೆಸುತ್ತಿರುವನು. ಸತ್ವರಜಸ್ತಮೋಗುಣಗಳಿಂದಲೂ, ಅವುಗಳ ಸಂಕರದಿಂದಲೂ, ಅನೇಕ ವಿಧಗಳಿಂದ ವ್ಯಾಪಾರಗಳನ್ನು ಮಾಡುತ್ತ ಜಗನ್ಮಯನಾದ ಪರಮಾತ್ಮನು ಸರ್ವಾಂತರ್ಯಾಮಿಯಾಗಿ ನಾನಾ ರೂಪಗಳಾದ ಲೀಲೆಗಳನ್ನು ತೋರಿಸುತ್ತಿರುವನು. ಬ್ರಾಹ್ಮಣಶ್ರೇಷ್ಠರಿರಾ ! ಅಹಂಕಾರವಿಲ್ಲದೆ ಮನುಷ್ಯನಿಗೆ ಕರ್ಮಫಲದ ಲೇಪವಿರುವುದಿಲ್ಲವಷ್ಟೆ.

ಅಹಂಕಾರೇಣ ಬಧ್ಯನ್ತೇ ಕಾರಾಗಾರೇ ಭವಾಭಿದೇ ।
ಬುದ್ಧ್ಯಹಂಕಾರಯುಕ್ತಸ್ತು ಯತ್ಕರ್ಮಾರಭತೇ ನರಃ ॥ ೫ ॥
ತಸ್ಯ ತದ್ಗುಣಮಾಪ್ನೋತಿ ಫಲಂ ಶುಭಮಥಾಪರಂ ।
ಬುದ್ಧಿಸ್ತು ತ್ರಿವಿಧಾ ತೇಷಾಂ ಗುಣಭೇದೇನ ಭಾವಿತಾ ॥ ೬ ॥
ತತ್ರ ಯೇ ಸಾತ್ವಿಕಾಃ ಸಂತಃ ಫಲಾವಾಪ್ತಿಪರಾಙ್ಮುಖಾಃ ।
ಭಗವತ್ಪ್ರೀತಯೇ ಕರ್ಮ ಕುರ್ವತೇ ತೇ ಮುಮುಕ್ಷವಃ ॥ ೭ ॥
ಪರಸ್ಯ ಸ್ಪರ್ಧಯಾ ಕೀರ್ತ್ಯೈ ಫಲಮುದ್ದಿಶ್ಯ ವಾ ಪುನಃ ।
ಬಹುವಿತ್ತವ್ಯಯಾಯಾಸ್ಯೈಃ ರಾಜಸಂ ಕರ್ಮ ತನ್ವತೇ ॥ ೮ ॥
ಗತಾನುಗತಿಕಾ ಯೇ ಚ ದೃಷ್ಟಾರ್ಥೈಕಪರಾಯಣಾಃ ।
ಪ್ರಸಂಗಾತ್ಫಲಮಿಚ್ಛಂತಸ್ತಾಮಸಂ ಕರ್ಮ ಕುರ್ವತೇ ॥ ೯ ॥
ಸಾತ್ವಿಕಾನಾಂ ಜಗನ್ನಾಥಃ ಸರ್ವದಾ ಸರ್ವಭಾವನಃ ।
ಧ್ಯಾತೋ ದೃಷ್ಟಃ ಸ್ಮೃತೋ ವಾಪಿ ಮುಕ್ತಿದಾತಾ ಸ ಸಂಶಯಃ ॥ ೧೦ ॥

---

೫–೬. ಅಹಂಕಾರದಿಂದಲೇ ಸಕಲ ಜಂತುಗಳೂ ಸಂಸಾರವೆಂಬ ಕಾರಾಗೃಹದಲ್ಲಿ ಬಂಧಿಸಲ್ಪಟ್ಟಿರುವುವು. ಬುದ್ಧಿ ಮತ್ತು ಅಹಂಕಾರಗಳಿಂದ ಕೂಡಿದ ಮನುಷ್ಯನು ಯಾವ ಕರ್ಮವನ್ನು ಪ್ರಾರಂಭಿಸುವನೊ, ಅದಕ್ಕನು ಗುಣವಾದ ಶುಭಾಶುಭ ಫಲಗಳನ್ನೇ ಅವನು ಅನುಭವಿಸುವನು. ಸಕಲ ಮನುಷ್ಯರಿಗೂ ಪ್ರಕೃತಿಯ ತ್ರಿಗುಣಗಳ ಭೇದವನ್ನನುಸರಿಸಿ ಬುದ್ಧಿಯೂ ಸಹ ಮೂರು ವಿಧವಾಗಿರುವುದೆಂದು ಹೇಳಲ್ಪಟ್ಟಿರುವುದು.

೭. ಅವರಲ್ಲಿ ಯಾರು ಸಾತ್ವಿಕರಾಗಿರುವರೊ, ಅವರು ಫಲಸಂಪಾದನೆಯಲ್ಲಿ ಅಭಿಲಾಷೆಯನ್ನಿಡದೆ ಮೋಕ್ಷವೊಂದನ್ನೇ ಧ್ಯೇಯವನ್ನಾಗಿಟ್ಟುಕೊಂಡು ಭಗವಂತನ ಪ್ರೀತಿಗಾಗಿಯೇ ಸಕಲ ಕರ್ಮಗಳನ್ನೂ ಮಾಡುತ್ತಿರುವರು.

೮. ಇತರರೊಡನೆ ಸ್ಪರ್ಧಿಸಿಯಾಗಲಿ, ಕೀರ್ತಿಸಂಪಾದನೆಗಾಗಲಿ, ಫಲಾಭಿಸಂಧಿಯಿಂದಲಾಗಲಿ, ಅಪರಿಮಿತವಾದ ಧನವ್ಯಯದಿಂದಲೂ, ದೇಹಾಯಾಸದಿಂದಲೂ ಕರ್ಮಗಳನ್ನು ಮಾಡುವವರೇ ರಾಜಸರು.

೯. ಯುಕ್ತಾಯುಕ್ತವಿವೇಚನೆಯಿಲ್ಲದವರಾಗಿ ಮೂಢಾಗ್ರಹದಿಂದ ಪರರನ್ನೇ ಅನುಕರಿಸುತ್ತ, ಕಣ್ಣಿಗೆ ಕಾಣುವ ಐಹಿಕ ಫಲಗಳಲ್ಲಿಯೇ ಆಸಕ್ತಿಯನ್ನಿಟ್ಟುಕೊಂಡು, ಪ್ರಸಂಗವಶದಿಂದ ಫಲಗಳನ್ನೂ ಅಪೇಕ್ಷಿಸುವವರೇ ತಾಮಸ ಕರ್ಮಗಳನ್ನು ಮಾಡುವವರಾದ ಮೂರನೆಯ ಬಗೆಯವರು.

೧೦. ಸಾತ್ವಿಕರಾದ ಪುರುಷರು ನಿರಂತರವೂ ಜಗನ್ನಾಥನನ್ನೇ ಧ್ಯಾನಿಸುತ್ತಲೂ, ನೋಡುತ್ತಲೂ, ಸ್ಮರಿಸುತ್ತಲೂ, ಇರುವುದರಿಂದ ಸಕಲರ ಅಂತರ್ಹೃದಯಗಳನ್ನು ಬಲ್ಲ ಆತನು ಅವರಿಗೆ ಮೋಕ್ಷವನ್ನು ಕೊಡುವನೆಂಬುದರಲ್ಲಿ ಸಂದೇಹವಿಲ್ಲ.

ರಾಜಸಾಸ್ತಾಮಸಾ ಯೇ ವೈ ಮೂಢಾತ್ಮಾನಃ ಫಲೈಷಿಣಃ ।
ಉತ್ಸವಾದಿಕೃತಂ ಕರ್ಮ ಮನ್ಯಂತೇ ಫಲದಾಯಿ ತೇ ॥ ೧೧ ॥
ಸಂಭೂಯ ಬಹವೋ ವಿಪ್ರಾ ಆರಭಂತೇಽಲ್ಪಕಂ ವಿಧಿಂ ।
ಬಹುಲಾಯಾಸದುಃಖಂ ಯತ್ಕರ್ಮ ತೇಷಾಂ ಫಲಪ್ರದಂ ॥ ೧೨ ॥
ತೇಷಾಮುದ್ಧರಣಾರ್ಥಾಯ ವಿಶ್ವಾಸಾಯ ದುರಾತ್ಮನಾಂ ।
ಯಾತ್ರಾ ನಾನಾವಿಧಾ ವಿಪ್ರಾ ವರ್ಷೇ ವರ್ಷೇ ಪ್ರವರ್ತಯೇತ್ ॥ ೧೩ ॥
ಜನ್ಮಸ್ನಾನಂ ಮಹಾವೇದ್ಯಾ ಉತ್ಸವಶ್ಚ ಪ್ರಕೀರ್ತಿತಃ ।
ಮಹಾಯಾತ್ರಾದ್ವಯಂ ಪುಂಸಾಂ ಕೀರ್ತನಾತ್ಪಾಪನಾಶನಂ ॥ ೧೪ ॥
ದರ್ಶನಂ ದಕ್ಷಿಣಾಮೂರ್ತೇಸ್ತಥಾ ಚ ಶಯನೋತ್ಸವಃ ।
ಸರ್ವಪಾಪಹರಶ್ಚೈಷಾಮುತ್ಸವೋ ದಕ್ಷಿಣಾಯನೇ ॥ ೧೫ ॥
ಅತಃ ಪರಂ ಪ್ರವಕ್ಷ್ಯಾಮಿ ಪಾರ್ಶ್ವಸ್ಯ ಪರಿವರ್ತನಂ ।
ಶಯಿತಸ್ಯ ಜಗದ್ಭರ್ತುಃ ಪರಿವರ್ತಯಿತುರ್ಯುಗಂ ॥ ೧೬ ॥

---

೧೧. ಮೂಢಾತ್ಮರೂ ಫಲಾಪೇಕ್ಷೆಯುಳ್ಳವರೂ ಆದ ರಾಜಸತಾಮಸ ಜನರು ಪರಮಾತ್ಮನ ಯಾತ್ರಾದ್ಯುತ್ಸವಗಳಲ್ಲಿ ಭಾಗವಹಿಸಿದ ಮಾತ್ರದಿಂದಲೇ ಫಲಗಳನ್ನಪೇಕ್ಷಿಸುತ್ತಿರುವರು.

೧೨. ಬ್ರಾಹ್ಮಣರಿರಾ! ಅನೇಕ ಜನರು ಕೂಡಿಕೊಂಡು ಅಲ್ಪವಿಧಿಯುಳ್ಳದ್ದಾದರೂ ಬಹಳ ಆಯಾಸದುಃಖಗಳಿಂದ ಕೂಡಿರುವ ಯಾವ ಕರ್ಮವನ್ನು ಮಾಡುವರೊ, ಅದು ಮಾತ್ರ ಅವರಿಗೆ ಸತ್ಫಲಗಳನ್ನು ಕೊಡುವುದು.

೧೩. ವಿಪ್ರಾಗ್ರಣಿಗಳಿರಾ! ಅಂತಹ ಸಾತ್ವಿಕಭಕ್ತರ ಉದ್ಧಾರೋಪಾಯವಾಗಿಯೂ, ದುರ್ಬುದ್ಧಿಯುಳ್ಳ ರಾಜಸತಾಮಸ ಜನರಲ್ಲಿ ಭಗವದ್ಭಕ್ತಿಯನ್ನುಂಟುಮಾಡುವುದಕ್ಕಾಗಿಯೂ ಪ್ರತಿ ವರ್ಷದಲ್ಲಿಯೂ ಬಹು ವಿಧಗಳಿಂದ ಯಾತ್ರೆಗಳನ್ನು ನಡೆಸುತ್ತಿರಬೇಕು.

೧೪-೧೫. ಜನ್ಮಸ್ನಾನವು ಮತ್ತು ಮಹಾವೇದಿಯ ಉತ್ಸವವು ಇವುಗಳೆರಡೂ ಪ್ರಶಸ್ತಗಳೆಂದು ಹೇಳಲ್ಪಟ್ಟಿರುವುವು. ಈ ಎರಡು ಮಹಾಯಾತ್ರೆಗಳನ್ನು ಮನುಷ್ಯನು ಸಂಕೀರ್ತಿಸಿದ ಮಾತ್ರದಿಂದಲೇ ಸಕಲ ಪಾತಕಗಳೂ ನಾಶವನ್ನು ಹೊಂದುವುವು. ದಕ್ಷಿಣಾಮೂರ್ತಿಯ ದರ್ಶನವು, ಮತ್ತು ಪರಮಾತ್ಮನ ಶಯನೋತ್ಸವವೆಂಬ ಉತ್ಸವದ್ವಯವೂ ದಕ್ಷಿಣಾಯನದಲ್ಲಿ ನಡೆದು ಭಕ್ತರಿಗೆ ಸಕಲ ಪಾಪಗಳನ್ನೂ ಪರಿಹರಿಸುವುದು.

೧೬. ಬಳಿಕ ಪರಮಾತ್ಮನ ಪಾರ್ಶ್ವಪರಿವರ್ತನವೆಂಬ ಉತ್ಸವವನ್ನು ವರ್ಣಿಸುವೆನು. ಜಗನ್ನಾಥನು ಶಯನಮಾಡುತ್ತಿರಲು ಯುಗಪರಿವರ್ತನವಾಗುವ ಸಮಯದಲ್ಲಿ ಈ ಉತ್ಸವವನ್ನು ನಡೆಸಬೇಕು.

ನಭಸ್ಯ ವಿಮಲೇ ಪಕ್ಷೇ ಸಂಪ್ರಾಪ್ತೇ ಹರಿವಾಸರೇ ।
ವಿಷ್ಣೋಃ ಸ್ವಾಪಗೃಹದ್ವಾರೇ ಶನೈರ್ಗತ್ವಾ ಪ್ರವಿಶ್ಯ ಚ ॥ ೧೭ ॥
ನಮಸ್ಕೃತ್ವಾ ಜಗನ್ನಾಥಂ ಪರ್ಯಂಕೇ ಶಯಿತಂ ಮುದಾ ।
ಅವಚ್ಛಾದ್ಯ ಶನೈರ್ಗತ್ವಾ ಪೂಜಯೇದುಪಚಾರಕೈಃ ॥ ೧೮ ॥
ಪ್ರಣಮ್ಯ ಭಕ್ತ್ಯಾ ತತ್ಪಾದೌ ಗುಹ್ಯೋಪನಿಷದೈಃ ಸ್ತುವನ್ ।
ಮಂತ್ರಂ ಚೇಮಂ ಪಠನ್ ದೇವಂ ಸ್ವಾಪಯೇದುತ್ತರಾಮುಖಂ ॥ ೧೯ ॥
ದೇವದೇವ ಜಗನ್ನಾಥ ಕಲ್ಪಾನಾಂ ಪರಿವರ್ತಕ ।
ಪರಿವೃತ್ತಮಿದಂ ಸರ್ವಂ ಯೇನ ಸ್ಥಾವರಜಂಗಮಂ ॥ ೨೦ ॥
ಯದಿಚ್ಛಾಚೇಷ್ಟಿತೈರೇವ ಜಾಗ್ರತ್ಸ್ವಪ್ನಸುಷುಪ್ತಿಭಿಃ ।
ಜಗದ್ಧಿತಾಯ ಸುಪ್ತೋಽಸಿ ಪಾರ್ಶ್ವೇನ ಪರಿವರ್ತಯ ॥ ೨೧ ॥
ಪರಿವರ್ತನಕಾಲೋಽಯಂ ಜಗತಃ ಪಾಲನಾಯ ತೇ ।
ತವಾಜ್ಞಯಾಽಯಂ ಶಕ್ರೋಽಪಿ ಧ್ವಜೇ ತಿಷ್ಠನ್ಸಮುತ್ಸುಕಃ ॥ ೨೨ ॥

---

೧೭-೧೮. ಶ್ರಾವಣಮಾಸದ ಕೃಷ್ಣಪಕ್ಷದ ಏಕಾದಶಿಯು ಪ್ರಾಪ್ತವಾಗಲು ಮಹಾ ವಿಷ್ಣುವಿನ ಶಯನಮಂದಿರದ ಬಾಗಿಲಿನ ಬಳಿಗೆ ಬಂದು ಮೆಲ್ಲಗೆ ಒಳಹೊಕ್ಕು ಪರ್ಯಂಕದಲ್ಲಿ ಸಂತೋಷದಿಂದ ಪವಡಿಸಿರುವ ಜಗನ್ನಾಥನಿಗೆ ನಮಸ್ಕರಿಸಿ ಮಂದಗತಿಯಿಂದ ಆತನ ಹೊದಿಕೆಯನ್ನು ತೆಗೆದು ಪೂಜೋಪಚಾರ ಗಳಿಂದ ಸೇವಿಸಬೇಕು.

೧೯. ಭಕ್ತಿಯುಕ್ತನಾಗಿ ನಮಸ್ಕಾರವನ್ನು ಮಾಡಿ ಉಪನಿಷದ್ವಾಕ್ಯಗಳಿಂದ ಸ್ತುತಿಸುತ್ತ ಆತನ ಪಾದಗಳನ್ನು ಹಿಡಿದುಕೊಂಡು ಮುಂದೆ ಹೇಳುವ ಮಂತ್ರವನ್ನು ಪಠಿಸುತ್ತ ಉತ್ತರಾಭಿಮುಖನನ್ನಾಗಿ ಮಾಡಿ ಮಲಗಿಸಬೇಕು.

೨೦. ದೇವದೇವನೆ! ನೀನೇ ಕಲ್ಪಗಳನ್ನು ಯಥಾಕ್ರಮವಾಗಿ ಪರಿವರ್ತನೆ ಮಾಡುವವನು. ನಿನ್ನಿಂದಲೇ ಸ್ಥಾವರಜಂಗಮಾತ್ಮಕವಾದ ಸಕಲ ಬ್ರಹ್ಮಾಂಡವೂ ಸಹ ಸರ್ವತ್ರದಲ್ಲಿಯೂ ಆವೃತವಾಗಿರುವುದು.

೨೧. ನಿನ್ನ ಇಚ್ಛಾರೂಪಗಳಾದ ಚೇಷ್ಟೆಗಳಿಂದಲೇ ಜಾಗ್ರತ್ಸ್ವಪ್ನಸುಷು ಪ್ತಿಗಳೆಂಬ ಮೂರು ಅವಸ್ಥೆಗಳೂ ಉಂಟಾಗುತ್ತಿರುವುದರಿಂದ ನೀನು ಲೋಕ ಹಿತದ ದೃಷ್ಟಿಯಿಂದಲೇ ಮಲಗಿಕೊಂಡಿರುವೆ. ಈಗ ಪಾರ್ಶ್ವವನ್ನು ಪರಿವರ್ತಿಸಿ ಕೊಳ್ಳುವವನಾಗು.

೨೨-೨೩. ಲೋಕಪಾಲನ ಕಾರ್ಯಕ್ರಮದಲ್ಲಿ ನೀನು ಪಕ್ಕಕ್ಕೆ ಹೊರಳುವ ಸಮಯವು ಪ್ರಾಪ್ತವಾಗಿರುವುದು. ನಿನ್ನ ಅಪ್ಪಣೆಯಂತೆ ಮಹೇಂದ್ರನೂ ಸಹ ಧ್ವಜದಲ್ಲಿ ನಿಂತು ಔತ್ಸುಕ್ಯದಿಂದ ನಿನ್ನ ಪಾದಕಮಲಗಳನ್ನು ನೋಡಲೆಳಸು

**ದೃಷ್ಟ್ವಾ ತ್ವತ್ಪಾದಕಮಲಂ ವಿಮುಂಚನ್ಸಲಿಲೈರ್ಜಲಂ ।**
**ಮಹೀತಲಂ ಪ್ಲಾವಯತಿ ಪ್ರಜಾಪಾಲನಹೇತುಕಂ ॥ ೨೩ ॥**
**ಇತಿ ಸಂಪ್ರಾರ್ಥ್ಯ ದೇವೇಶಂ ವೀಪ್ಸಯಾ ತೋಷಯೇತ್ತತಃ ।**
**ವ್ಯಜನೈಶ್ಚಾಮರೈಶ್ಚೈವ ವೀಜಯೇದನುಕಲ್ಪಕೃತ್ ॥ ೨೪ ॥**
**ಸುಗಂಧಚಂದನೈರಸ್ಯ ಸರ್ವಾಂಗಂ ಪರಿಲೇಪಯೇತ್ ।**
**ಸ್ವಾದೂನಿಕ್ಷುವಿಕಾರಾಂಶ್ಚ ವಿಕೃತೈಃ ಪಾಯಸೈಸ್ತಥಾ ॥ ೨೫ ॥**
**ಯಾವಕಾನಿ ಚ ಹೃದ್ಯಾನಿ ಫಲಾನಿ ವಿವಿಧಾನಿ ವೈ ।**
**ಸ್ವಾದೂಪದಂಶಾನನ್ಯಾಂಶ್ಚ ಘೃತಾಪೂಪಾನ್ ಸಪಾಯಸಾನ್ ॥ ೨೬ ॥**
**ಪಕ್ವತಾಂಬೂಲಪತ್ರಾಣಿ ಸೋಪಸ್ಕಾರಾಣಿ ಚ ದ್ವಿಜಾಃ ।**
**ಶಯ್ಯಾಗೃಹದ್ವಾರಿ ವಿಭೋಃ ಶನೈರ್ಭಕ್ತ್ಯಾ ನಿವೇದಯೇತ್ ॥ ೨೭ ॥**
**ತಸ್ಮಿನ್ ದಿನೇ ಹರೇ ರೂಪಂ ಭವೇದ್ಯದಿ ಮಹಾಫಲಂ ।**
**ದೇವಮುದ್ದಿಶ್ಯ ಯಃ ಕುರ್ಯಾತ್ಸರ್ವಮಕ್ಷಯತಾಂ ವ್ರಜೇತ್ ॥ ೨೮ ॥**

---

ತ್ತಿರುವನು. ಮತ್ತು ಪ್ರಜೆಗಳ ಜೀವನ ಯಾತ್ರೆಗೆ ಕಾರಣವಾದ ಜಲವನ್ನು ಮೇಘಗಳಿಂದ ಸುರಿಸುತ್ತ ಭೂಮಿಯೆಲ್ಲವನ್ನೂ ನೆನೆಯಿಸುತ್ತಿರುವನು.

೨೪. ಇಂತೆಂದು ಪ್ರಾರ್ಥನೆಯನ್ನು ಮಾಡಿ ಪುನಃ ಪುನಃ ಸ್ತೋತ್ರಗಳಿಂದ ಆತನನ್ನು ಸಂತೋಷಗೊಳಿಸಬೇಕು. ಮತ್ತು ಕಲ್ಪೋಕ್ತವಿಧಿಯನ್ನನುಸರಿಸಿ ಬೀಸಣಿಗೆಗಳಿಂದಲೂ, ಚಾಮರಗಳಿಂದಲೂ ಗಾಳಿಯನ್ನು ಹಾಕಬೇಕು.

೨೫-೨೭. ಸುಗಂಧಯುಕ್ತಗಳಾದ ಚಂದನಾದಿ ದ್ರವ್ಯಗಳಿಂದ ಪರಮಾತ್ಮನ ಸರ್ವಾಂಗಗಳನ್ನೂ ಚೆನ್ನಾಗಿ ಲೇಪಿಸಬೇಕು. ರುಚಿಕರಗಳಾದ ಕಬ್ಬಿನ ರಸಗಳಿಂದಲೂ, ವಿವಿಧಗಳಾದ ಪಾಯಸಗಳಿಂದಲೂ, ಹೃದ್ಯಗಳಾದ ಶಾಲ್ಯನ್ನಗಳಿಂದಲೂ, ಬಹು ವಿಧಗಳಾದ ಫಲಗಳಿಂದಲೂ, ಇತರ ವಿಧಗಳಾದ ಉಪ್ಪಿನಕಾಯಿಗಳೇ ಮುಂತಾದ ಸ್ವಾದೂಪದಂಶಗಳಿಂದಲೂ, ಪಾಯಸದಲ್ಲಿ ನೆನೆಯಿಸಿದ ಘೃತಾಪೂಪಗಳಿಂದಲೂ, ಸುಗಂಧಾಢ್ಯಗಳಾದ ಅಡಿಕೆ, ಸುಣ್ಣಗಳೊಡನೆ ವೀಳೆಯದೆಲೆಗಳಿಂದಲೂ ಕೂಡಿದ ನೈವೇದ್ಯವನ್ನು ಸಿದ್ಧಗೊಳಿಸಬೇಕು. ಎಲೈ ಬ್ರಾಹ್ಮಣೋತ್ತಮರಿರಾ! ಇವುಗಳೆಲ್ಲವನ್ನೂ ಮೆಲ್ಲಮೆಲ್ಲಗೆ ಶಯನಾಗಾರದ ಬಾಗಿಲಿಗೆ ತೆಗೆದುಕೊಂಡು ಹೋಗಿ ಭಕ್ತಿಯಿಂದ ಪರಮಾತ್ಮನಿಗೆ ನಿವೇದಿಸಬೇಕು.

೨೮. ಆ ದಿನದಲ್ಲಿ ಶ್ರೀ ಹರಿಯ ದರ್ಶನವುಂಟಾದರೆ ಮಹಾ ಫಲವು ಲಭಿಸುವುದು. ದೇವೋತ್ತಮನನ್ನು ಉದ್ದೇಶಿಸಿ ಯಾವ ಮನುಷ್ಯನು ಅಂದು ಯಾವ ಸೇವೆಯನ್ನೇ ಮಾಡಿದರೂ ಅದು ಅಕ್ಷಯಫಲದಾಯಕವಾಗಿ ಪರಿಣಮಿಸುವುದು.

ಸ್ನಾನಂ ದಾನಂ ಜಪೋ ಹೋಮಸ್ತಪೋ ಜಾಗರಣಂ ತಥಾ ।
ಉಪವಾಸಶ್ಚ ನಿಯಮೋ ವ್ರತಾಂತೇ ದ್ವಿಜತರ್ಪಣಂ ॥ ೨೯ ॥
ಸಾಂಗಂ ವ್ರತಮಿದಂ ಕೃತ್ವಾ ವಿಷ್ಣುಲೋಕಮವಾಪ್ನುಯಾತ್ ।
ಯಂ ಯಂ ಕಾಮಯತೇ ಚಿತ್ತೇ ತಂ ತಮಾಪ್ನೋತ್ಯಸಂಶಯಂ ॥ ೩೦ ॥
ಅಯಂ ವಃ ಕಥಿತೋ ವಿಪ್ರಾಃ ಪಾರ್ಶ್ವಪರ್ಯಾಯಣೋತ್ಸವಃ ।
ಅನಾಯಾಸೇನ ಲೋಕಾನಾಮಕ್ಷಯಃ ಸುಖದಾಯಕಃ ॥ ೩೧ ॥
ಅತಃ ಪರಂ ವೈ ಶೃಣುತ ಉತ್ಥಾಪನಮಹೋತ್ಸವಂ ।
ಪೂಜಯಿತ್ವಾ ಜಗನ್ನಾಥಂ ಕೌಮುದ್ಯಾಖ್ಯೇ ಮಹೋತ್ಸವೇ ॥ ೩೨ ॥
ಅಕ್ಷಕ್ರೀಡಾದಿಭಿಃ ಪುಷ್ಪವಸ್ತ್ರಮಾಲ್ಯಾನುಲೇಪನೈಃ ।
ತತೋಽಸ್ಮಿನ್ಪೌರ್ಣಮಾಸ್ಯಾಯಾಂ ರಾತ್ರಾವುತ್ಸವಸಂಯುತಂ ॥ ೩೩ ॥
ನಾರಿಕೇಲಾದಿಭಿರ್ದ್ರವ್ಯೈಃ ಪಿಷ್ಟಕೈರರ್ಚಯೇದ್ಧರಿಂ ।
ತತಃ ಪ್ರಭಾತೇ ಸಂಕಲ್ಪ್ಯ ಕಾರ್ತಿಕೇ ವ್ರತಮುತ್ತಮಂ ॥ ೩೪ ॥

---

೨೯–೩೦ ಈ ವ್ರತದಲ್ಲಿ ಮಾಡಬೇಕಾದ ಮುಖ್ಯ ಕಾರ್ಯಗಳೆಂದರೆ ಪ್ರಾತಃಸ್ನಾನ, ದಾನ, ಜಪ, ಹೋಮ, ತಪಸ್ಸು, ರಾತ್ರಿಯಲ್ಲಿ ಜಾಗರಣೆಯು, ಉಪವಾಸವು ಮತ್ತು ವ್ರತಸಮಾಪ್ತಿಯಾದಮೇಲೆ ಬ್ರಾಹ್ಮಣ ಭೋಜನವು. ಈ ವ್ರತವನ್ನು ಸಾಂಗವಾಗಿ ಮಾಡಿದ ಮಾನವನು ವಿಷ್ಣುಲೋಕವನ್ನು ಹೊಂದುವನು. ಮತ್ತು ಮನಸ್ಸಿನಲ್ಲಿ ಯಾವ ಯಾವ ಅಭಿಲಾಷೆಗಳನ್ನು ಇಟ್ಟುಕೊಂಡಿರುವನೊ, ಅವುಗಳನ್ನೆಲ್ಲ ನಿಸ್ಸಂದೇಹವಾಗಿಯೂ ಪಡೆಯುವನು.

೩೧. ಎಲೈ ವಿಪ್ರರಿರಾ! ಇಂತು ನಿಮಗೆ ಮಹಾ ವಿಷ್ಣುವಿನ ಪಾರ್ಶ್ವ ಪರಿವರ್ತನದ ಮಹೋತ್ಸವವನ್ನು ಕಥನಮಾಡಿರುವೆನು. ಅನಾಯಾಸದಿಂದಲೇ ಸಕಲ ಮಾನವರಿಗೂ ನಾಶರಹಿತವಾದ ಸೌಖ್ಯವನ್ನು ಈ ಮಹೋತ್ಸವವು ದರ್ಶನಮಾತ್ರದಿಂದಲೇ ಕೈಗೂಡಿಸುವುದು.

೩೨–೩೩. ಬಳಿಕ ನಿರೂಪಿಸುವ ಉತ್ಥಾಪನ ಮಹೋತ್ಸವವನ್ನು ಕೇಳಿರಿ. ಕೌಮುದಿಯೆಂಬ ಮಹೋತ್ಸವದಲ್ಲಿ ಲೋಕೇಶ್ವರನನ್ನು ಪೂಜಿಸಬೇಕು. ಈ ಉತ್ಸವವನ್ನು ಆಶ್ವಯುಜ ಮಾಸದ ಪೌರ್ಣಮಿಯಲ್ಲಿ ದ್ಯೂತಕ್ರೀಡೆ, ಪುಷ್ಪ, ವಸ್ತ್ರ, ಮಾಲ್ಯ, ಅನುಲೇಪನಾದಿಗಳಿಂದ ಪ್ರಾರಂಭಿಸಿ ಆ ಹುಣ್ಣಿಮೆಯ ದಿನದ ರಾತ್ರಿಯಲ್ಲಿ ಭಗವಂತನಿಗೆ ಉತ್ಸವವನ್ನು ವೈಭವದಿಂದ ನಡೆಸಬೇಕು.

೩೪. ತೆಂಗಿನಕಾಯಿಯೇ ಮುಂತಾದ ಪದಾರ್ಥಗಳಿಂದಲೂ ಪಿಷ್ಟಗಳಿಂದಲೂ ಶ್ರೀಹರಿಯ ಪೂಜೆಯನ್ನು ಮಾಡಬೇಕು. ಬಳಿಕ ಸೂರ್ಯೋದಯವಾಗಲು ಕಾರ್ತಿಕಮಾಸದಲ್ಲಿ ಉತ್ತಮ ವ್ರತವನ್ನು ನೆರವೇರಿಸುವಂತೆ ಪರಮಾತ್ಮನಲ್ಲಿ ಸಂಕಲ್ಪ ಮಾಡಬೇಕು.

**ವ್ರತೇನ ತೇನೈವ ನಯೇದ್ಯಾವದೇಕಾದಶೀ ಸಿತಾ ।**
**ತಸ್ಯಾಮುತ್ಥಾಪಯೇದ್ದೇವಂ ಸುಸುಪ್ತಂ ಜಗದೀಶ್ವರಂ ॥ ೩೫ ॥**
**ಪೂರ್ವವತ್ಪೂಜಯಿತ್ವಾ ತು ನಿಶಾಮಧ್ಯೇ ಜಗದ್ಗುರುಂ ।**
**ಉತ್ಥಾಪಯೇದಿಮಂ ಮಂತ್ರಮಾಹ್ವಯನ್ಪ್ರನಕೈರ್ಮುದಾ ॥ ೩೬ ॥**
**ಉತ್ತಿಷ್ಠ ದೇವದೇವೇಶ ತೇಜೋರಾಶೇ ಜಗತ್ಪತೇ ।**
**ವೀಕ್ಷಸ್ವ ಸಕಲಂ ದೇವ ಪ್ರಸುಪ್ತಂ ತವ ಮಾಯಯಾ ॥ ೩೭ ॥**
**ಪ್ರಫುಲ್ಲಪುಂಡರೀಕಶ್ರೀಹಾರಿಣಾ ನಯನೇನ ವೈ ।**
**ತ್ವಯಾ ದೃಷ್ಟಂ ಜಗದಿದಂ ಪಾವಿತ್ರ್ಯಂ ಪರಮೇಷ್ಯತಿ ॥ ೩೮ ॥**
**ಶ್ರೌತಸ್ಮಾರ್ತಾಃ ಕ್ರಿಯಾಃ ಸರ್ವಾಃ ಪ್ರವರ್ತನ್ತೇ ತತೋ ಧ್ರುವಂ ।**
**ಇತ್ಯುತ್ಥಾಪ್ಯ ಜಗನ್ನಾಥಂ ವೇಣುವೀಣಾದಿಕಸ್ವನೈಃ ॥ ೩೯ ॥**
**ಬಂದಿಮಾಗಧಸೂತಾನಾಂ ಸ್ತುತಿಭಿರ್ಮಂಗಲಸ್ವನೈಃ ।**
**ಶಂಖಕಾಹಾಲಮುರಜವಾದನೈರ್ನೃತ್ಯಗೀತಕೈಃ ॥ ೪೦ ॥**

---

೩೫. ಮತ್ತು ಆ ಪೂಜಾವ್ರತಗಳಿಂದಲೇ ಕಾರ್ತಿಕ ಶುಕ್ಲೈಕಾದಶಿಯ ಪರ್ಯಂತವೂ ದಿವಸಗಳನ್ನು ಕಳೆಯಬೇಕು. ಅಂದಿನ ದಿವಸ ನಿದ್ರಿಸುತ್ತಿರುವ ಲೋಕೇಶ್ವರನನ್ನು ಯೋಗಮಾಯಾರೂಪವಾದ ನಿದ್ರೆಯಿಂದಲೇ ಎಚ್ಚರಗೊಳಿಸಬೇಕು.

೩೬. ಮೇಲೆ ಹೇಳಿದಂತೆಯೇ ಮಧ್ಯರಾತ್ರಿಯಲ್ಲಿ ಜಗನ್ನಾಥನಿಗೆ ಪೂಜೆಯನ್ನು ಮಾಡಿ ಮುಂದೆ ಹೇಳುವ ಮಂತ್ರವನ್ನು ಮೆಲ್ಲಗೆ ಪಠಿಸುತ್ತ ಸಂತೋಷದಿಂದ ಆತನನ್ನು ಸುಖ ನಿದ್ರೆಯಿಂದ ಎಚ್ಚರಗೊಳಿಸಬೇಕು.

೩೭. ದೇವದೇವೇಶ್ವರನೆ! ತೇಜೋರಾಶಿಯೆ! ಲೋಕೇಶ್ವರನೆ! ಮೇಲಕ್ಕೇಳುವವನಾಗು. ಸ್ವಾಮಿಯೆ! ನಿನ್ನ ಮಾಯೆಯಿಂದ ಮೋಹಿತವಾಗಿ ನಿದ್ರಿಸುತ್ತಿರುವ ಸಕಲ ಬ್ರಹ್ಮಾಂಡವನ್ನೂ ಕೃಪಾದೃಷ್ಟಿಯಿಂದ ನೋಡು.

೩೮–೩೯. ಅರಳಿದ ಕೆಂದಾವರೆಯನ್ನು ಧಿಕ್ಕರಿಸುವ ನಿನ್ನ ಕಣ್ಣುಗಳಿಂದ ನೋಡಲ್ಪಡಲು ಈ ಸಕಲ ಪ್ರಪಂಚವೂ ಅತ್ಯಧಿಕವಾದ ಪವಿತ್ರತೆಯನ್ನು ಪಡೆಯುವುದು. ಆದರಿಂದ ಲೋಕದಲ್ಲಿ ಸಕಲ ಶ್ರೌತಸ್ಮಾರ್ತಕರ್ಮಗಳೂ ಅಭಿವೃದ್ಧಿಯನ್ನು ಹೊಂದುವುದು ನಿಶ್ಚಯವು. ಇಂತೆಂದು ಜಗನ್ನಾಥನನ್ನು ವೇಣು, ವೀಣಾದಿ ವಾದ್ಯಗಳ ಇಂಚರಗಳಿಂದ ಪ್ರಬೋಧಗೊಳಿಸಬೇಕು.

೪೦. ವಂದಿ ಮಾಗಧರ ಸ್ತೋತ್ರಪಾಠಗಳಿಂದಲೂ ಸೂತರ ಮಂಗಳಾಶಾಸನಗಳಿಂದಲೂ, ಶಂಖ, ಕಹಳೆ, ಮುರಜಗಳೇ ಮುಂತಾದ ವಾದ್ಯಗಳ ಧ್ವನಿಗಳಿಂದಲೂ, ನೃತ್ಯಸಹಿತಗಳಾದ ಸಂಗೀತಗಳಿಂದಲೂ ಆತನನ್ನು ನಿದ್ರೆಯಿಂದ ಎಚ್ಚರಿಸಬೇಕು.

ಜಯಶಬ್ದೈಸ್ತಥಾ ಸ್ತೋತ್ರೈರ್ನಯೇತ್ತಂ ನೃತ್ಯಮಂಡಪಂ ।
ಸುಗಂಧತೈಲೇನಾಭ್ಯಜ್ಯ ಸ್ನಾಪಯೇತ್ಪುರುಷೋತ್ತಮಂ ॥ ೪೧ ॥
ಪಂಚಾಮೃತೈರ್ನಾರಿಕೇಲರಸೈಃ ಫಲರಸೈಸ್ತಥಾ ।
ಸುಗಂಧಾಮಲಕೇನಾಥ ಯವಕಲ್ಕೇನ ಲೇಪಯೇತ್ ॥ ೪೨ ॥
ಘರ್ಷಯೇತ್ತುಲಸೀಚೂರ್ಣೈರ್ಲೇಪಯೇದ್ಗಂಧಚಂದನೈಃ ।
ಪುಷ್ಪಾಧಿವಾಸಿತೈಸ್ತೋಯೈಸ್ತಥಾ ಕರ್ಪೂರವಾಸಿತೈಃ ॥ ೪೩ ॥
ಕುಶೋದಕೈ ರತ್ನತೋಯೈಸ್ತಥಾ ಗಂಧೋದಕೈಸ್ತಥಾ ।
ಸ್ನಾಪ್ಯಮಾನಂ ತಥಾ ದೇವಂ ಯೇ ಪಶ್ಯಂತಿ ಮುದಾನ್ವಿತಾಃ ॥ ೪೪ ॥
ಕ್ಷಾಲಯಂತಿ ದೃಢಂ ಪಂಕಂ ಬಹುಜನ್ಮೋಪಪಾದಿತಂ ।
ತತಃ ಶ್ರೀಜಗದೀಶಸ್ಯ ಕ್ರೋಡೇ ಸಂವಾಸಯೇದ್ದ್ವಿಜಃ ॥ ೪೫ ॥
ಆಪಾದಾನ್ಮೂರ್ಧಪರ್ಯಂತಂ ಸರ್ವಾಂಗಂ ಪರಿಲೇಪಯೇತ್ ।
ಕುಂಕುಮಾಗುರುಕಸ್ತೂರೀಕರ್ಪೂರೈಶ್ಚಂದನಾನ್ವಿತೈಃ ॥ ೪೬ ॥
ಪಾಟಲೋದಕಸಂಪಿಷ್ಟೈಃ ಕಾಲಾಗುರುರಸಾಪ್ಲುತೈಃ ।
ದತ್ವಾ ಚ ಮಾಲತೀಮಾಲಾಂ ಚಂದ್ರಚೂರ್ಣೇನ ಸಂಯುತಾಂ ॥ ೪೭ ॥

---

೪೧. ಜಯಕಾರಗಳಿಂದಲೂ ಸ್ತೋತ್ರಗಳಿಂದಲೂ ಜಗನ್ನಾಥನನ್ನು ನೃತ್ಯ ಮಂಟಪಕ್ಕೆ ಕರೆದುಕೊಂಡು ಬಂದು ಸುಗಂಧಯುಕ್ತವಾದ ತೈಲದಿಂದ ಅಭ್ಯಂಜನಸ್ನಾನವನ್ನು ಮಾಡಿಸಬೇಕು.

೪೨. ಪಂಚಾಮೃತ, ಎಳನೀರು, ಫಲರಸಗಳಿಂದಲೂ, ಸುಗಂಧಸಹಿತವಾದ ಆಮಲಕತೈಲದಿಂದಲೂ ದೇಹವನ್ನು ತೊಡೆದು ಯವಕಲ್ಕದಿಂದ ಅವುಗಳನ್ನುಜ್ಜಿ ಕಳೆಯಬೇಕು.

೪೩–೪೫. ತುಲಸೀಕಾಷ್ಠಗಳ ಚೂರ್ಣದಿಂದ ಮೈಯನ್ನುಜ್ಜಿ ಶ್ರೀಗಂಧ ಚಂದನಗಳನ್ನು ಲೇಪನೆಮಾಡಿ ಪುಷ್ಪಸಾರಗಳಿಂದಲೂ, ಕರ್ಪೂರಚೂರ್ಣ ದಿಂದಲೂ, ಕುಶಾಗ್ರಗಳಿಂದಲೂ, ರತ್ನೋದಕಗಳಿಂದಲೂ ಕೂಡಿದ ಪರಿಮಳೋ ದಕಗಳಿಂದ ಭಗವಂತನಿಗೆ ಉತ್ತರ ಸ್ನಾನವನ್ನು ಮಾಡಿಸಬೇಕು. ಈ ವಿಧವಾಗಿ ಸ್ನಾನವನ್ನು ಮಾಡುತ್ತಿರುವ ಪುರುಷೋತ್ತಮನನ್ನು ಯಾವ ಮಾನವರು ಸಂತೋಷಗೊಂಡು ನೋಡುತ್ತಿರುವರೊ, ಅವರು ಹಿಂದಿನ ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಅಪ್ರಕ್ಷಾಳ್ಯಗಳಾದ ದೋಷಗಳನ್ನೂ ಕಳೆದುಕೊಳ್ಳುವರು. ಬಳಿಕ ಜಗದೀಶ್ವರನಿಗೆ ನಡುವಿನಲ್ಲಿ ಉತ್ತಮವಾದ ಪೀತಾಂಬರವನ್ನುಡಿಸಬೇಕು.

೪೬–೪೭. ಕುಂಕುಮ, ಅಗುರು, ಕಸ್ತೂರಿ, ಚಂದನಾದಿ ದ್ರವ್ಯಗಳನ್ನು ಕೇಸರಿಯ ನೀರಿನಲ್ಲಿ ಅರೆದು ಕಾಲಾಗುರುವಿನ ರಸದಲ್ಲಿ ಬೆರಸಿ ಅದನ್ನು ಪರಮಾತ್ಮನ ಕಾಲುಗಳಿಂದ ತಲೆಯವರಿವಿಗೂ ಸರ್ವಾಂಗಗಳಿಗೂ ಲೇಪನೆ

**ಮಹೋಪಚಾರೈಃ ಸಂಪೂಜ್ಯ ವಿಷ್ಣುಂ ನೀರಾಜಯೇತ್ತತಃ ।**
**ಕೃತಾಂಜಲಿಪುಟೋ ಭೂತ್ವಾ ಪ್ರಾರ್ಥಯೇತ್ಪರಯಾ ಮುದಾ ॥ ೪೮ ॥**
**ಚರಾಚರಮಿದಂ ಸರ್ವಂ ತ್ವದೇಕಶರಣಂ ವಿಭೋ ।**
**ಅನುಗ್ರಹಾಮೃತಾಲೋಕೈಃ ಪಾವಯಸ್ವ ಜಗದ್ಗುರೋ ॥ ೪೯ ॥**
**ನೃತ್ಯಗೀತೈಃ ಪ್ರೇಕ್ಷಣಕೈಃ ರಾತ್ರಿಶೇಷಂ ಸಮಾಪಯೇತ್ ।**
**ಶಯನಾದುತ್ಥಿತಂ ದೇವಂ ಯಃ ಪಶ್ಯತಿ ಗದಾಧರಂ ॥ ೫೦ ॥**
**ನಿದ್ರಾಂ ಮೋಹಮಯೀಂ ಭಿತ್ವಾ ಜ್ಯೋತಿಃ ಶಾಂತಂ ವ್ರಜೇತ ಸಃ ।**
**ಸರ್ವಾನ್ಕಾಮಾನವಾಪ್ನೋತಿ ಯಾನ್ಯಾನ್ಕಾಮಯತೇ ಹೃದಿ ॥ ೫೧ ॥**
**ಅಶ್ವಮೇಧಸಹಸ್ರಸ್ಯ ಫಲಂ ಸಾಗ್ರಂ ಲಭೇತ ವೈ ।**
**ಕಪಿಲಾಲಂಕೃತಾಧೇನುಕೋಟಿದಾನಫಲಂ ತಥಾ ॥ ೫೨ ॥**

---

ಮಾಡಬೇಕು. ಮತ್ತು ಕರ್ಪೂರಚೂರ್ಣದಿಂದ ಸುವಾಸಿತವಾದ ಮಾಲತೀ ಪುಷ್ಪಗಳ ವನಮಾಲೆಯನ್ನು ಸಮರ್ಪಿಸಬೇಕು.

೪೮. ಬಳಿಕ ಬಹು ವಿಧಗಳಾದ ನೈವೇದ್ಯಗಳಿಂದ ಪೂಜೆಯನ್ನು ಮಾಡಿ ಮಹಾವಿಷ್ಣುವಿಗೆ ಮಂಗಳಾರತಿಯನ್ನು ಬೆಳಗಬೇಕು. ಸಂತೋಷದಿಂದ ದೇವದೇವನ ಮುಂದುಗಡೆಯಲ್ಲಿ ನಿಂತು ಅಂಜಲಿಬಂಧವನ್ನು ಮಾಡಿಕೊಂಡು ಪ್ರಾರ್ಥನೆಯನ್ನು ಮಾಡಬೇಕು.

೪೯. ಸರ್ವವ್ಯಾಪಿಯಾದ ಸ್ವಾಮಿಯೆ! ಚರಾಚರಾತ್ಮಕವಾದ ಈ ಬ್ರಹ್ಮಾಂಡವೆಲ್ಲವೂ ನಿನ್ನೊಬ್ಬನ ಅಧೀನದಲ್ಲಿರುವುದಲ್ಲವೆ. ಆದುದರಿಂದ ಲೋಕಗುರುವಾದ ನೀನೇ ಅನುಗ್ರಹೋನ್ಮುಖವಾದ ನಿನ್ನ ಅಮೃತದೃಷ್ಟಿಯಿಂದ ಅದನ್ನು ಪಾವನಗೊಳಿಸು.

೫೦-೫೧. ಇಂತೆಂದು ಬೇಡಿಕೊಂಡು ಆ ರಾತ್ರಿಯ ಶೇಷವನ್ನು ನೃತ್ಯ, ಗೀತ, ನಾಟಕಾದಿಗಳಿಂದ ಜಾಗರಣೆಯನ್ನು ಮಾಡಿ ಕಳೆಯಬೇಕು. ಇಂತು ಚಾತುರ್ಮಾಸ್ಯದ ಶಯನದಿಂದ ಏಳುವ ದೇವೋತ್ತಮನ ಉತ್ಥಾಪನೋತ್ಸವವನ್ನು ಯಾವನು ನೋಡುವನೊ, ಅವನು ಮೋಹಮೂಲಕವಾದ ಸಂಸಾರವೆಂಬ ನಿದ್ರೆಯನ್ನು ಕಳೆದುಕೊಂಡು ಶಾಂತರೂಪವೂ ತೇಜಸ್ಸಂಪನ್ನವೂ ಆದ ವೈಕುಂಠವನ್ನು ಸೇರುವನು. ಮತ್ತು ಯಾವ ಯಾವ ಅಪೇಕ್ಷೆಗಳನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವನೊ, ಅವುಗಳೆಲ್ಲವನ್ನೂ ಪಡೆಯುವನು.

೫೨. ಆ ಮಾನವನು ಒಂದು ಸಹಸ್ರ ಅಶ್ವಮೇಧಗಳನ್ನು ಸಮಗ್ರವಾಗಿ ಮಾಡಿದ ಫಲವನ್ನೂ, ಒಂದು ಕೋಟಿ ಕಪಿಲೆ ಗೋವುಗಳನ್ನು ಅಲಂಕಾರ ಸಹಿತವಾಗಿ ದಾನಮಾಡಿದ ಪುಣ್ಯವನ್ನೂ ಪಡೆಯುವನು.

**ಪುಣ್ಯಂ ಚಾಪ್ನೋತಿ ಪರಮಂ ಸರ್ವತೀರ್ಥಾಭಿಷೇಕಜಂ ।**
**ಕಾರ್ತಿಕ್ಯಾಂ ಪಾರಣಂ ಕುರ್ಯಾಚ್ಚಾತುರ್ಮಾಸ್ಯವ್ರತಸ್ಯ ವೈ ॥ ೫೩ ॥**
**ದಾಮೋದರಸ್ಯ ಪ್ರತಿಮಾಂ ಸ್ವರ್ಣನಿಷ್ಕೇಣ ನಿರ್ಮಿತಾಂ ।**
**ಯಥಾಶಕ್ತಿಕೃತಾಂ ವಾಪಿ ಶಾಲಗ್ರಾಮಶಿಲಾಸ್ಥಿತಾಂ ॥ ೫೪ ॥**
**ಚಕ್ರಮೂರ್ತಿಂ ಭಗವತಃ ಪೂಜಯೇತ್ಪ್ರಯತಾತ್ಮವಾನ್ ।**
**ರಚಯೇನ್ಮಂಡಪಂ ಶುಭ್ರಮೇಕದೇಶಂ ಗೃಹಸ್ಯ ವಾ ॥ ೫೫ ॥**
**ಅಲಂಕುರ್ಯಾತ್ಪುಷ್ಪದಾಮಚಾಮರೈಃ ಸವಿತಾನಕೈಃ ।**
**ಭೂಮಿಭಿತ್ತೀಃ ಸುಧಾಲೇಪೈಃ ಸ್ತಂಭಾಂಶ್ಚಿತ್ರದುಕೂಲಕೈಃ ॥ ೫೬ ॥**
**ಕಾಲಾಗುರೂಣಾಂ ಧೂಪೈಶ್ಚ ಧೂಪಯೇತ್ತದ್ಗೃಹಂ ಶುಭಂ ।**
**ತನ್ಮಧ್ಯೇ ಮಂಡಲಂ ಕುರ್ಯಾತ್ಸ್ವಸ್ತಿಕಂ ವರ್ಣಕೈಃ ಶುಭೈಃ ॥ ೫೭ ॥**
**ತದಂತಃ ಸ್ಥಾಪಯೇತ್ ಖಟ್ವಾಂ ಕರಿದಂತಮಯೀಂ ಶುಭಾಂ ।**
**ಪಟ್ಟತೂಲೀಂ ತದುಪರಿ ವಾಸಯೇತ್ಪುರುಷೋತ್ತಮಂ ॥ ೫೮ ॥**

---

೫೩. ಮತ್ತು ಸಕಲ ತೀರ್ಥಗಳಲ್ಲಿ ಸ್ನಾನವನ್ನು ಮಾಡಿದ ಮಹತ್ತರವಾದ ಪುಣ್ಯವನ್ನೂ ಪಡೆಯುವನು. ಈ ಚಾತುರ್ಮಾಸ್ಯ ವ್ರತದ ಪಾರಣೆಯನ್ನು ಕಾರ್ತಿಕಮಾಸದ ಹುಣ್ಣಿಮೆಯ ದಿವಸದಲ್ಲಿ ಮಾಡಬೇಕು.

೫೪–೫೫. ನಿಷ್ಕಪ್ರಮಾಣದ ಚಿನ್ನದಿಂದಲಾಗಲಿ, ಶಕ್ತ್ಯನುಸಾರವಾಗಿ ಇತರ ಲೋಹಗಳಿಂದಲಾಗಲಿ ಮಾಡಿದ ದಾಮೋದರನ ಪ್ರತಿಮೆಯನ್ನು ಸಾಲಗ್ರಾಮಶಿಲೆಯಲ್ಲಿ ಸ್ಥಾಪಿಸಿ ಇಂದ್ರಿಯಸಂಯಮಸಹಿತನಾಗಿ ಭಗವಂತನ ಆ ಚಕ್ರಮೂರ್ತಿಯನ್ನು ಆ ದಿವಸದಲ್ಲಿ ಪೂಜಿಸಬೇಕು. ಅದಕ್ಕಾಗಿ ಬೇರೆ ಮಂಟಪವನ್ನು ರಚಿಸಬೇಕು. ಅಥವ ಮನೆಯ ಒಂದು ಭಾಗವನ್ನೇ ಪೂಜೆಗಾಗಿ ಪರಿಶುದ್ಧಗೊಳಿಸಬೇಕು.

೫೬–೫೭. ಅದನ್ನು ಹೂವುಗಳ ದಂಡೆಗಳಿಂದಲೂ, ಚಾಮರಗಳಿಂದಲೂ, ಪತಾಕೆಗಳಿಂದಲೂ ಅಲಂಕಾರ ಮಾಡಿ ನೆಲವನ್ನೂ ಗೋಡೆಗಳನ್ನೂ ಸುಣ್ಣದಿಂದ ತೊಡೆದು ಕಂಬಗಳನ್ನೆಲ್ಲ ಬಣ್ಣಬಣ್ಣಗಳ ವಸ್ತ್ರಗಳಿಂದ ಆಚ್ಛಾದಿಸಿ ಶೃಂಗರಿಸಬೇಕು. ಆ ಪವಿತ್ರಗೃಹಕ್ಕೆ ಕಾಲಾಗುರುಗಳಿಂದ ಹೊಗೆಯನ್ನು ಹಾಕಿ ಅದರ ಮಧ್ಯದಲ್ಲಿ ವಿವಿಧ ವರ್ಣಗಳ ತಂಡುಲಾದಿಗಳಿಂದ ಸ್ವಸ್ತಿಕಮಂಡಲವನ್ನು ರಚಿಸಬೇಕು.

೫೮. ಆ ಮಂಡಲದ ಮಧ್ಯದಲ್ಲಿ ಆನೆಯ ದಂತದಿಂದ ಮಾಡಲ್ಪಟ್ಟ ಸರ್ವಾಂಗ ಸುಂದರವಾದ ಮಂಚವನ್ನು ಸ್ಥಾಪಿಸಬೇಕು. ಅದರ ಮೇಲೆ ಹಂಸತೂಲಿಕಾತಲ್ಪವನ್ನು ವಿಸ್ತರಿಸಿ ಅದರಲ್ಲಿ ಶ್ರೀ ಪುರುಷೋತ್ತಮನನ್ನು ಕೂಡಿಸಬೇಕು.

ದಾಮೋದರಾಕೃತಿಂ ಶಂಖಪದ್ಮಪಾಣಿಂ ಚತುರ್ಭುಜಂ ।
ಲಕ್ಷ್ಮೀಮಾಲಿಂಗ್ಯ ಪದ್ಮಸ್ಥಾಂ ಕ್ರೋಡಸ್ಥಾಂ ವಾಮಪಾಣಿನಾ ॥ ೫೯ ॥
ಭಕ್ತೇಭ್ಯೋ ದಾತುಮುದ್ಯಂತಂ ವರಂ ದಕ್ಷಿಣಪಾಣಿನಾ ।
ಸುನಾಸಂ ಸುಲಲಾಟಂ ಚ ಸುನೇತ್ರಂ ಸುಶ್ರುತಿದ್ವಯಂ ॥ ೬೦ ॥
ವಿಶಾಲವಕ್ಷಸಂ ದೇವಂ ಸರ್ವಲಾವಣ್ಯಸಂಯುತಂ ।
ಸರ್ವಾಲಂಕಾರರುಚಿರಂ ದಿವ್ಯ ಪೀತನಿಚೋಲಿನಂ ॥ ೬೧ ॥
ಲಕ್ಷ್ಮೀಂ ಪದ್ಮಕರಾಂ ವಾಪಿ ತಾಂಬೂಲಂ ದದತೀಂ ತಥಾ ।
ಪಂಚಾಮೃತೈಃ ಸ್ನಾಪಯಿತ್ವಾ ವಾಸೋಯುಗ್ಮೇನ ವೇಷ್ಟಯೇತ್ ॥ ೬೨ ॥
ಪೂಜಯೇದುಪಚಾರೈಸ್ತಂ ಯಥಾವಿಭವವಿಸ್ತರೈಃ ।
ತಾಮ್ರದೀಪಾನ್ಮೃಣ್ಮಯಾನ್ವಾ ಜ್ವಾಲಯೇದ್ಗವ್ಯಸರ್ಪಿಷಾ ॥ ೬೩ ॥
ತೈಲೇನ ವಾ ಶತಂ ದೀಪವೃಕ್ಷಾಂಶ್ಚೈವ ಪ್ರದಾಪಯೇತ್ ।
ಬ್ರಹ್ಮಾಣಂ ನಾರದಾದೀಂಶ್ಚ ದೇವರ್ಷೀಂಸ್ತತ್ರ ಪೂಜಯೇತ್ ॥ ೬೪ ॥

---

೫೯-೬೦. ಆ ದಾಮೋದರನ ವಿಗ್ರಹವು ನಾಲ್ಕು ಭುಜಗಳುಳ್ಳದಾಗಿ ಮೇಲಿನ ಎರಡು ಕೈಗಳಲ್ಲಿ ಶಂಖ ಪದ್ಮಗಳನ್ನು ಧರಿಸಿ ಮತ್ತೊಂದು ಎಡಗೈಯಿಂದ ಪದ್ಮಾಲಯೆಯಾಗಿ ತೊಡೆಯಮೇಲೆ ಕುಳಿತಿರುವ ಲಕ್ಷ್ಮೀ ದೇವಿಯನ್ನು ಆಲಿಂಗಿಸಿಕೊಂಡು ಬಲಗೈಯಲ್ಲಿ ಭಕ್ತರಿಗೆ ವರಗಳನ್ನು ನೀಡಲು ಎತ್ತಿದ ವರದ ಮುದ್ರೆಯಿಂದ ಕೂಡಿದುದಾಗಿರಬೇಕು. ಮತ್ತು ಸುಂದರಗಳಾದ ನಾಸಿಕ, ಲಲಾಟ, ನೇತ್ರಗಳು ಮತ್ತು ಕಿವಿಗಳಿಂದ ಕಂಗೊಳಿಸುತ್ತಿರುವ ಮುಖವುಳ್ಳದುದಾಗಿರಬೇಕು.

೬೧. ಸ್ವಾಮಿಯು ವಿಶಾಲವಾದ ವಕ್ಷಸ್ಥಳವುಳ್ಳವನಾಗಿ ಸರ್ವಾಂಗ ಸೌಂದರ್ಯಯುತನಾಗಿ, ಸಮಸ್ತಾಭರಣಗಳನ್ನು ಧರಿಸಿ ಶೋಭಿಸುತ್ತ ದಿವ್ಯವಾದ ಪೀತಾಂಬರವನ್ನುಟ್ಟು ಮೆರೆಯುತ್ತಿರಬೇಕು.

೬೨. ಬಳಿಕ ಪದ್ಮಹಸ್ತೆಯಾಗಿ ಸ್ವಾಮಿಗೆ ತಾಂಬೂಲವನ್ನು ಅರ್ಪಿಸುತ್ತ ಇರುವಂತೆ ಮಹಾಲಕ್ಷ್ಮಿಯ ವಿಗ್ರಹವನ್ನು ಮಾಡಿ ಪಂಚಾಮೃತಗಳಿಂದ ಸ್ನಾನವನ್ನುಮಾಡಿಸಿ ವಸ್ತ್ರಯುಗ್ಮವನ್ನು ತೊಡಿಸಬೇಕು.

೬೩. ಇಂತು ಭಗವಂತನನ್ನು ಸ್ವಶಕ್ತ್ಯನುಸಾರವಾದ ವಿಭವದಿಂದ ಉಪಚಾರಮಾಡಿ ಪೂಜಿಸಬೇಕು. ದೇವರ ಮುಂದುಗಡೆಯಲ್ಲಿ ತಾಮ್ರ ಅಥವ ಮಣ್ಣಿನ ಹಣತೆಗಳಲ್ಲಿ ಹಸುವಿನ ತುಪ್ಪದಿಂದ ದೀಪಗಳನ್ನು ಹಚ್ಚಿಡಬೇಕು.

೬೪. ಅಥವ ಎಣ್ಣೆಯ ನೂರು ನೂರು ದೀಪಗಳ ವೃಕ್ಷಗಳನ್ನು ಮಾಡಿ ಅರ್ಪಿಸಬೇಕು. ಬಳಿಕ ಬ್ರಹ್ಮದೇವನನ್ನೂ ನಾರದನೇ ಮೊದಲಾದ ದೇವರ್ಷಿಗಳನ್ನೂ ಪೂಜಿಸಬೇಕು.

ದಾಮೋದರಸ್ವರೂಪಾನ್ವೈ ಬ್ರಾಹ್ಮಣಾನಪಿ ಪೂಜಯೇತ್ ।
ವಸ್ತ್ರಯುಗ್ಮೈರ್ಮಾಲ್ಯಗಂಧೈರ್ಭಕ್ಷ್ಯಭೋಜ್ಯಫಲೈಸ್ತಥಾ ॥ ೬೫ ॥
ತೀರ್ಥರಾಜಾಭಿಷೇಕಾಂಗಂ ಪೂಜಾಕರ್ಮ ಯಥೋಚಿತಂ ।
ದಾಮೋದರಸ್ಯ ತೇನೈವ ವಿಧಿನೇಹಾರ್ಚನಂ ಭವೇತ್ ॥ ೬೬ ॥
ತದ್ವಿಷ್ಣೋರಿತಿ ಮಂತ್ರೇಣ ಬ್ರಹ್ಮಾದೀನಪಿ ಪೂಜಯೇತ್ ।
ವೇಣುವೀಣಾದಿಕೈರ್ಗೀತೈಃ ಪುರಾಣಪಠನೇನ ಚ ॥ ೬೭ ॥
ಮಹೋತ್ಸವಂ ಪ್ರಕುರ್ವೀತ ತತೋ ಜಾಗರಣೇನ ಚ ।
ತತಃ ಪ್ರಭಾತೇ ವಿಮಲೇಽಗ್ನಿಕಾರ್ಯಂ ಚ ಸಮಾಚರೇತ್ ॥ ೬೮ ॥
ಅಷ್ಟಾಕ್ಷರೇಣ ಮಂತ್ರೇಣ ಸಮಿದಾಜ್ಯಚರೂನಪಿ ।
ಲಾಜಾನ್ಮಧುಸಮಿನ್ಮಿಶ್ರಾನ್ ಜುಹುಯಾಚ್ಚ ತತಃ ಶ್ರಿಯೇ ॥ ೬೯ ॥
ಸೂಕ್ತೇನಾಷ್ಟೋತ್ತರಶತಂ ಬ್ರಹ್ಮಾದೀನಾಂ ತದಂತತಃ ।
ಅಷ್ಟಾಹುತೀರ್ವೈ ಜುಹುಯಾತ್ಕ್ರಮಾದೇಕೈಕಶಸ್ತಿಲೈಃ ॥ ೭೦ ॥

---

೬೫. ಬ್ರಾಹ್ಮಣೋತ್ತಮರನ್ನು ಬರಮಾಡಿಕೊಂಡು ಅವರನ್ನು ಪರಮಾತ್ಮ ಸ್ವರೂಪರೆಂದೇ ಭಾವಿಸಿ ವಸ್ತ್ರದ್ವಯಗಳಿಂದಲೂ, ಪೂಮಾಲೆಗಳಿಂದಲೂ, ಸುಗಂಧದ್ರವ್ಯಗಳಿಂದಲೂ, ಭಕ್ಷ್ಯ, ಭೋಜ್ಯ, ಫಲಸಹಿತಗಳಾದ ಭೋಜನ ಗಳಿಂದಲೂ ತೃಪ್ತಿಗೊಳಿಸಬೇಕು.

೬೬. ಮತ್ತು ದಾಮೋದರನಿಗೆ ಗಂಗೋದಕದ ಅಭಿಷೇಕವೇ ಮುಖ್ಯಾಂಗವಾದ ಪೂಜೆಯನ್ನು ಯಥೋಚಿತರೀತಿಯಲ್ಲಿ ಮಾಡಬೇಕು. ಈ ಅರ್ಚನೆಯೇ ವಿಧ್ಯುಕ್ತವಾದುದಾಗುವುದು.

೬೭. "ತದ್ವಿಷ್ಣೋಃ ಪರಮಂ ಪದಂ" ಇತ್ಯಾದಿ ಮಂತ್ರದಿಂದ ಬ್ರಹ್ಮಾದಿ ದೇವತೆಗಳನ್ನೂ ಪೂಜೆಮಾಡಬೇಕು. ವೇಣು, ವೀಣಾದಿ ವಾದ್ಯ ಶ್ರವಣದಿಂದಲೂ. ಸಂಗೀತಗಳಿಂದಲೂ, ಪುರಾಣಪಠನಗಳಿಂದಲೂ ಪೂಜೆಯನ್ನು ಸಮಗ್ರಗೊಳಿಸಬೇಕು.

೬೮–೬೯. ಇಂತು ಜಾಗರಣೆಯನ್ನು ಮಾಡಿ ರಾತ್ರಿಯನ್ನು ಕಳೆಯುತ್ತ ಮಹೋತ್ಸವವನ್ನು ನಡೆಸಿ ನಿರ್ಮಲವಾದ ಸೂರ್ಯೋದಯವಾಗಲು ಔಪಾಸನೆ ಹೋಮಾದಿಗಳನ್ನು ಮಾಡಬೇಕು. ಮಹಾವಿಷ್ಣುವಿನ ಅಷ್ಟಾಕ್ಷರೀಮಂತ್ರದಿಂದ ಸಮಿತ್ತುಗಳು, ಆಜ್ಯ, ಚರು, ಲಾಜಾಕ್ಷತೆಗಳು, ಮಧುಲೇಪಿತಗಳಾದ ಸಮಿತ್ತು ಗಳಿಂದ ಐಶ್ವರ್ಯಕಾಮನಾದ ಮನುಷ್ಯನು ಅಗ್ನಿಯಲ್ಲಿ ಹೋಮಮಾಡಬೇಕು.

೭೦. ವಿಷ್ಣು ಸೂಕ್ತದಿಂದ ನೂರೆಂಟು ಆಹುತಿಗಳನ್ನು ಕೊಟ್ಟು ಬಳಿಕ ಬ್ರಹ್ಮನೇ ಮೊದಲಾದ ದ್ವಾದಶ ವೈಷ್ಣವರಿಗೆ ಒಬ್ಬೊಬ್ಬರಿಗೂ ತಿಲದಿಂದ ಕ್ರಮವಾಗಿ ಎಂಟೆಂಟು ಆಹುತಿಗಳನ್ನು ಕೊಡಬೇಕು.

ಬ್ರಹ್ಮಾಣಂ ನಾರದಂ ದಕ್ಷಂ ವಶಿಷ್ಠಂ ಗೌತಮಂ ತಥಾ ।
ಸನತ್ಕುಮಾರಮತ್ರಿಂ ಚ ಭರದ್ವಾಜಂ ಚ ಕಶ್ಯಪಂ ॥ ೭೧ ॥
ದೂರ್ವಾಸಸಮಗಸ್ತ್ಯಂ ಚ ಮಹಾದೇವಂ ತತಃ ಪರಂ ।
ವಿಖ್ಯಾತಾ ವೈಷ್ಣವಾ ಹ್ಯೇತೇ ವಿಷ್ಣುರೂಪಾ ನ ಸಂಶಯಃ ॥ ೭೨ ॥
ಏತಾನ್ಸಂಪೂಜಯನ್ವಿಪ್ರಾನ್ವಿಷ್ಣುಃ ಪ್ರೀಣಾತಿ ತತ್ಕ್ಷಣಾತ್ ।
ಹೋಮಾನ್ತೇ ಪ್ರಾಶನಂ ಕೃತ್ವಾ ದದ್ಯಾದಾಚಾರ್ಯದಕ್ಷಿಣಾಂ ॥ ೭೩ ॥
ಸುವರ್ಣಭೂಷಿತಾಂ ಧೇನುಂ ವಸ್ತ್ರಂ ಧಾನ್ಯಂ ಚ ಭಕ್ತಿತಃ ।
ಪ್ರೀತಯೇ ವಾಸುದೇವಸ್ಯ ಭೋಜಯೇದ್ದ್ವಿಜಪುಂಗವಾನ್ ॥ ೭೪ ॥
ಸರ್ವೋಪಚಾರಸಹಿತಂ ದದ್ಯಾದ್ದಾಮೋದರಂ ತತಃ ॥ ೭೫ ॥
ಓಂ ದಾಮೋದರ ಜಗನ್ನಾಥ ತ್ವನ್ಮಯಂ ವಿಶ್ವಮೇವ ಹಿ ।
ತ್ವದಾಧಾರಮಿದಂ ಸರ್ವಂ ತ್ವಂ ಧರ್ಮಃ ಸರ್ವಭಾವನಃ ।
ತ್ವತ್ಪ್ರಸಾದಾದ್ವ್ರತಂ ಚೀರ್ಣಂ ಸುಸಂಪೂರ್ಣಂ ತದಸ್ತು ಮೇ ॥ ೭೬ ॥

---

೭೧–೭೨. ಬ್ರಹ್ಮದೇವನು, ನಾರದನು, ದಕ್ಷನು, ವಸಿಷ್ಠನು, ಗೌತಮನು, ಸನತ್ಕುಮಾರನು, ಅತ್ರಿಯು, ಭರದ್ವಾಜನು, ಕಶ್ಯಪನು, ದೂರ್ವಾಸ ಮಹರ್ಷಿಯು, ಅಗಸ್ತ್ಯನು, ಮಹೇಶ್ವರನು ಈ ಹನ್ನೆರಡು ಜನರೂ ವೈಷ್ಣವರೆಂಬ ಪ್ರಖ್ಯಾತಿಯನ್ನು ಪಡೆದಿರುವರು. ಇವರೆಲ್ಲರೂ ಮಹಾವಿಷ್ಣುವಿನ ರೂಪಗಳೇ ಎಂಬುದರಲ್ಲಿ ಸಂದೇಹವಿಲ್ಲ.

೭೩. ಈ ಬ್ರಾಹ್ಮಣೋತ್ತಮರನ್ನು ಪೂಜಿಸಲು ಮಹಾವಿಷ್ಣುವು ಕ್ಷಣ ಮಾತ್ರದಲ್ಲಿ ಸಂತೋಷವನ್ನು ಪಡೆಯುವನು. ಇಂತು ಹೋಮವನ್ನು ಮಾಡಿ ಹೋಮಶೇಷವನ್ನು ಪ್ರಾಶನಮಾಡಿ ಬಳಿಕ ಆಚಾರ್ಯದಕ್ಷಿಣೆಯನ್ನು ಕೊಡಬೇಕು.

೭೪. ಕೊಂಬು ಗೊರಸುಗಳಲ್ಲಿ ಚಿನ್ನದ ಆಭರಣಗಳುಳ್ಳ ಆಕಳನ್ನೂ, ವಸ್ತ್ರವನ್ನೂ, ಧಾನ್ಯರಾಶಿಯನ್ನೂ ಪುರೋಹಿತನಿಗೆ ಭಕ್ತಿಯಿಂದ ಸಮರ್ಪಿಸಿ ಶ್ರೀ ವಾಸುದೇವನು ಸುಪ್ರೀತನಾಗುವುದಕ್ಕಾಗಿ ಬ್ರಾಹ್ಮಣಶ್ರೇಷ್ಠರಿಗೆ ಉತ್ತಮ ಭೋಜನವನ್ನು ಮಾಡಿಸಬೇಕು.

೭೫. ಮತ್ತು ಸಕಲ ವಸ್ತ್ರಾಲಂಕಾರಗಳಿಂದ ಭೂಷಿತವಾದ ದಾಮೋದರನ ಪ್ರತಿಮೆಯನ್ನು ಬಳಿಕ ದಾನಮಾಡಬೇಕು.

೭೬. ದಾನ ಮಂತ್ರವು ಈ ರೀತಿಯಾಗಿರುವುದು. ದಾಮೋದರನೆ! ಲೋಕೇಶ್ವರನೆ! ವಿಶ್ವವೆಲ್ಲವೂ ನಿನ್ನಿಂದ ವ್ಯಾಪಿತವಾಗಿಯೇ ಇರುವುದಲ್ಲವೆ. ಇದೆಲ್ಲವೂ ನಿನ್ನ ಆಧಾರದಮೇಲೆಯೇ ನಿಂತಿರುವುದು. ನೀನೇ ಸಕಲ ಪ್ರಪಂಚದ ಭಾವನೆಗೆ ಆಧಾರಸ್ತಂಭವಾಗಿರುವ ಧರ್ಮದ ಸ್ವರೂಪನಾಗಿರುವೆ. ನಿನ್ನ

ದಾಮೋದರಃ ಪ್ರದಾತಾ ಚ ಗೃಹೀತಾ ಚ ವೃಷಧ್ವಜಃ ।
ಪ್ರದೀಯತೇ ಜಗನ್ನಾಥಃ ಪ್ರೀಯತಾಂ ಮೇ ಜಗದ್ಗುರುಃ ॥ ೭೭ ॥
ಇತಿ ಮಂತ್ರಂ ಜಪನ್ ದದ್ಯಾದಾಚಾರ್ಯಾಯ ಸುರೋತ್ತಮಂ ।
ಸಮಾಪ್ಯ ಪೂಜಯೇದ್ಭಕ್ತ್ಯಾ ಸ್ತುತ್ವಾಯಾತ್ತಂ ಚ ಪ್ರಸಾದಯೇತ್ ॥೭೮॥
ಆಚಾರ್ಯೇ ಪರಿತುಷ್ಟೇ ತು ತುಷ್ಟೋ ಭವತಿ ಮಾಧವಃ ।
ತತ್ತದ್ದ್ರವ್ಯಾಣಿ ಚ ತತೋ ದದ್ಯಾದ್ವಿಪ್ರೇಭ್ಯ ಏವ ಹಿ ॥ ೭೯ ॥
ತತಃ ಸ್ವಯಂ ವೈ ಭುಂಜೀತ ಇಷ್ಟೈಃ ಶಿಷ್ಟೈಃ ಸ್ವಬಂಧುಭಿಃ ।
ಚಾತುರ್ಮಾಸ್ಯವ್ರತಂ ಚೇದಂ ಪ್ರತಿಷ್ಠಾಪ್ಯ ವಿಧಾನತಃ ॥ ೮೦ ॥
ಯಥೋಕ್ತಫಲಸಂಪನ್ನೋ ವಿಷ್ಣುಲೋಕಮವಾಪ್ನುಯಾತ್ ।
ಶ್ರುತಿಸ್ಮೃತಿಪುರಾಣೇಷು ನಾತಃ ಪರತರಂ ವ್ರತಂ ॥ ೮೧ ॥
ಯೇನಾನುಷ್ಠಿತಮಾತ್ರೇಣ ಕೃತಕೃತ್ಯೋ ಭವೇನ್ನರಃ ।
ವಿಷ್ಣೋಃ ಪ್ರೀತಿಕರಂ ಯಾದೃಙ್ನ ತಥಾನ್ಯದ್ವ್ರತಂ ದ್ವಿಜಾಃ ॥ ೮೨ ॥

---

ಅನುಗ್ರಹದಿಂದ ನನ್ನ ಚಾತುರ್ಮಾಸ್ಯ ವ್ರತವು ಮುಗಿಯಿತು. ಅದು ನನಗೆ ಸಂಪೂರ್ಣ ಫಲದಾಯಕವಾಗಲಿ.

೭೭. ದಾನಮಾಡುವವನು ದಾಮೋದರನು. ಪರಿಗ್ರಹಿಸುವವನು ಮಹಾದೇವನು. ಈ ಭಾವದಿಂದ ಜಗನ್ನಾಥನ ವಿಗ್ರಹವನ್ನು ದಾನಮಾಡುತ್ತಿರುವೆನು. ಲೋಕಗುರುವಾದ ಆತನು ನನ್ನಲ್ಲಿ ಪ್ರಸನ್ನನಾಗಲಿ.

೭೮. ಇಂತೆಂಬ ಮಂತ್ರವನ್ನು ಜಪಿಸುತ್ತ ಆಚಾರ್ಯನಿಗೆ ದಾಮೋದರ ಪ್ರತಿಮೆಯನ್ನು ಅರ್ಪಿಸಬೇಕು. ವ್ರತವು ಸಾಂಗವಾಗಿ ನೆರವೇರಲು ಆಚಾರ್ಯನನ್ನು ಭಕ್ತಿಯಿಂದ ಪೂಜಿಸಿ, ಸ್ತೋತ್ರಮಾಡಿ ಆತನ ಅನುಗ್ರಹವನ್ನು ಪಡೆಯಬೇಕು.

೭೯. ಆಚಾರ್ಯನು ಸಂತೋಷಗೊಳ್ಳಲು ಶ್ರೀಮನ್ನಾರಾಯಣನೂ ಸಂತುಷ್ಟನಾಗುವನು. ಬಳಿಕ ಉಳಿದ ಬ್ರಾಹ್ಮಣರಿಗೂ ಯಥೋಚಿತವಾಗಿ ದ್ರವ್ಯವನ್ನು ವಿನಿಯೋಗಿಸಬೇಕು.

೮೦–೮೧. ಆಮೇಲೆ ಇಷ್ಟ, ಶಿಷ್ಟ, ಮಿತ್ರ, ಬಂಧುಗಳೊಡನೆ ತಾನೂ ಭೋಜನವನ್ನು ಮಾಡಬೇಕು. ಇಂತು ಚಾತುರ್ಮಾಸ್ಯ ವ್ರತವನ್ನು ವಿಧ್ಯುಕ್ತ ರೀತಿಯಿಂದ ಸಮಾಪ್ತಿಗೊಳಿಸಲು ಶಾಸ್ತ್ರೋಕ್ತಗಳಾದ ಫಲಗಳನ್ನೆಲ್ಲ ಇಲ್ಲಿ ಅನುಭವಿಸಿ ಕೊನೆಯಲ್ಲಿ ವಿಷ್ಣುಲೋಕವನ್ನು ಮಾನವನು ಪಡೆಯುವನು. ಸಕಲ ಶ್ರುತಿ, ಸ್ಮೃತಿ, ಪುರಾಣಗಳಲ್ಲಿ ಹುಡುಕಿದರೂ ಇದಕ್ಕಿಂತ ಉತ್ತಮವಾದ ವ್ರತವು ಮತ್ತೊಂದಿಲ್ಲವು.

೮೨. ಈ ವ್ರತವನ್ನು ಅನುಷ್ಠಾನಮಾಡಿದ ಮಾತ್ರದಿಂದಲೇ ಮನುಷ್ಯನು

ತಿಲಪಾತ್ರಸಹಸ್ರೈಸ್ತು ಗವಾಂ ಚೈವಾಯುತಾಯುತೈಃ ।
ಕೃಷ್ಣಾಜಿನಶತೇನಾಪಿ ಕನ್ಯಾನಾಮಯುತೇನ ಚ ॥ ೮೩ ॥
ದತ್ವಾ ಯತ್ಫಲಮಾಪ್ನೋತಿ ಕೃತ್ವೈತದ್ವ್ರತಮುತ್ತಮಂ ।
ಸಾರ್ಧತ್ರಿಕೋಟಿತೀರ್ಥಾನಾಮಭಿಷೇಕಫಲಂ ತಥಾ ॥ ೮೪ ॥
ಪ್ರಾಪ್ನೋತಿ ತತ್ಫಲಂ ವಿಪ್ರಾ ಯಂ ಯಂ ಕಾಮಯತೇ ನರಃ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಚಾತುರ್ಮಾಸ್ಯವಿಧಿವರ್ಣನಂ" ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

ಕೃತಕೃತ್ಯನಾಗುವನು. ಎಲೈ ದ್ವಿಜವರ್ಯರಿರಾ ! ಈ ವ್ರತವು ಮಹಾವಿಷ್ಣುವಿಗೆ ಪ್ರೀತಿಯನ್ನುಂಟುಮಾಡುವಂತೆ ಮತ್ತೆ ಯಾವ ವ್ರತವೂ ಮಾಡಲಾರದು.

೮೩–೮೫. ಬ್ರಾಹ್ಮಣೋತ್ತಮರಿರಾ! ಒಂದು ಸಾವಿರ ತಿಲಪಾತ್ರಗಳನ್ನೂ, ಒಂದು ಲಕ್ಷ ಕಪಿಲೆಗೋವುಗಳನ್ನೂ, ನೂರಾರು ಕೃಷ್ಣಾಜಿನಗಳನ್ನೂ, ಹತ್ತು ಸಾವಿರ ಕನ್ಯೆಯರನ್ನೂ, ದಾನಮಾಡುವುದರಿಂದಲೂ ಮೂರೂವರೆ ಕೋಟಿ ತೀರ್ಥಗಳಲ್ಲಿ ಸ್ನಾನ ಮಾಡುವುದರಿಂದಲೂ ಯಾವ ಫಲವನ್ನು ಮಾನವನು ಪಡೆಯುವನೊ, ಈ ವ್ರತವನ್ನು ಮಾಡುವುದರಿಂದ ಆ ಫಲವನ್ನೇ ಪಡೆಯುವನಲ್ಲದೆ ಇತರ ಯಾವ ಯಾವ ಅಭಿಲಾಷೆಗಳನ್ನು ಮನಸ್ಸಿನಲ್ಲಿ ತೋರಿಸುವನೊ, ಅವುಗಳನ್ನೂ ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಚಾತುರ್ಮಾಸ್ಯವಿಧಿವರ್ಣನ"ವೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತ್ವಾರಿಂಶೋಽಧ್ಯಾಯಃ

## ಪ್ರಾವರಣೋತ್ಸವವರ್ಣನಂ

ಜೈಮಿನಿರುವಾಚ :—

**ಮಾರ್ಗಶೀರ್ಷೇ ಸಿತೇ ಪಕ್ಷೇ ಷಷ್ಠ್ಯಾಂ ಪ್ರಾವರಣೋತ್ಸವಂ ।**
**ಕೃತ್ವಾ ದೃಷ್ಟ್ವಾ ನರೋ ಭಕ್ತ್ಯಾ ವೈಷ್ಣವಂ ಲೋಕಮಾಪ್ನುಯಾತ್ ॥೧॥**
**ವಿಧಾನಂ ತಸ್ಯ ವಕ್ಷ್ಯಾಮಿ ಶೃಣುಧ್ವಂ ಮುನಯೋಽಧುನಾ ।**
**ವಾಸೋಽಧಿವಾಸಂ ಕುರ್ವೀತ ಪಂಚಮ್ಯಾಂ ನಿಶಿ ಕರ್ಮವಿತ್ ॥ ೨ ॥**
**ದೇವಾಗ್ರೇ ಮಂಡಪೇ ಕುರ್ಯಾತ್ಪದ್ಮಮಷ್ಟದಲಾನ್ವಿತಂ ।**
**ದಿಕ್ಪಾಲಾನ್ಪೂಜಯೇದ್ದಿಕ್ಷು ಕ್ಷೇತ್ರಪಾಲಂ ಗಣಾಧಿಪಂ ॥ ೩ ॥**
**ಚಂಡಪ್ರಚಂಡೌ ಚ ಬಹಿಶ್ಚತುರ್ದಿಕ್ಷು ಪ್ರಪೂಜಯೇತ್ ।**
**ಮಧ್ಯೇ ಪಾತ್ರಂ ಸಮಾಧಾಯ ಪ್ರೋಕ್ಷಯೇದ್ವಸ್ತ್ರವಾರಿಣಾ ॥ ೪ ॥**
**ದ್ಯುತಾನಸ್ತ್ವೇತಿ ಮಂತ್ರೇಣ ಚ್ಛಾದಯೇದ್ದಿವ್ಯವಾಸಸಾ ।**
**ಸುಧೂಪಿತಂ ವಸ್ತ್ರಜಾತಮೇಕವಿಂಶತಿಸಂಖ್ಯಕಂ ॥ ೫ ॥**

---

### ಕನ್ನಡದ ಅನುವಾದ

### ಪ್ರಾವರಣೋತ್ಸವ ವರ್ಣನ

೧. ಜೈಮಿನಿಯು ಹೇಳುತ್ತಾನೆ :—ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಷಷ್ಠಿ ತಿಥಿಯ ದಿವಸದಲ್ಲಿ ಭಗವಂತನಿಗೆ ಪ್ರಾವರಣೋತ್ಸವವನ್ನು ಮಾಡಿಸಿದವನೂ, ಅದನ್ನು ನೋಡಿದವನೂ ಭಕ್ತಿಯುಕ್ತನಾಗಿ ವಿಷ್ಣು ಲೋಕವನ್ನು ಹೊಂದುವನು.

೨. ಮಹಾಮುನಿಗಳಿರಾ! ಅದರ ವಿಧಾನವನ್ನು ಹೇಳುವೆನು, ಶ್ರದ್ಧೆಯಿಂದ ಕೇಳಿರಿ. ಹಿಂದಿನ ಪಂಚಮಿಯ ದಿನ ಕರ್ಮಜ್ಞನಾದ ಮನುಷ್ಯನು ಕೇವಲ ವಸ್ತ್ರಗಳನ್ನೇ, ಹಾಸಿಗೆ ಹೊದಿಕೆಗಳನ್ನಾಗಿ ಮಾಡಿಕೊಂಡಿರಬೇಕು.

೩. ದೇವದೇವನ ಮುಂದುಗಡೆಯಲ್ಲಿ ಒಂದು ಮಂಟಪವನ್ನು ನಿರ್ಮಾಣ ಮಾಡಿ ಅದರಲ್ಲಿ ಎಂಟು ದಳಗಳ ಪದ್ಮವೊಂದನ್ನು ಚಿತ್ರಿಸಬೇಕು. ಎಂಟು ದಿಕ್ಕುಗಳಲ್ಲಿ ದಿಕ್ಪಾಲಕರನ್ನೂ, ಕ್ಷೇತ್ರಪಾಲಕರನ್ನೂ, ಗಣಪತಿಯನ್ನೂ ಕ್ರಮ ವಾಗಿ ಪೂಜಿಸಬೇಕು.

೪. ಆವರಣದ ಹೊರಗೆ ನಾಲ್ಕು ದಿಕ್ಕುಗಳಲ್ಲಿಯೂ ಚಂಡಪ್ರಚಂಡರೆಂಬ ದ್ವಾರಪಾಲಕರನ್ನು ಪೂಜಿಸಿ, ಮಂಡಲದ ಮಧ್ಯದಲ್ಲಿ ಕಳಶವನ್ನು ಸ್ಥಾಪಿಸಿ ಅದನ್ನು ವಸ್ತ್ರೋದಕದಿಂದ ಪ್ರೋಕ್ಷಣೆ ಮಾಡಬೇಕು.

೫. "ದ್ಯುತಾನಸ್ತ್ವ" ಎಂಬ ಮಂತ್ರದಿಂದ ಆ ಕಳಶವನ್ನು ದಿವ್ಯ

ತನ್ಮಧ್ಯೇ ಸ್ಥಾಪಯೇನ್ಮಂತ್ರಂ ವೈಷ್ಣವಂ ಚ ಸಮುಚ್ಚರನ್ ।
ಅನ್ಯೇನ ವಾಸಸಾ ತದ್ಧಿ ಸಮಾಚ್ಛಾದ್ಯ ಪ್ರಯತ್ನತಃ ॥ ೬ ॥
ಸ್ಪೃಷ್ಟ್ವಾ ಜಪೇನ್ಮಂತ್ರಮಿಮಂ ಸಂಸ್ಮರನ್ಪುರುಷೋತ್ತಮಂ ।
ಆಚ್ಛಾದಕೋ ಯೋ ಜಗತಾಂ ತೇಜಸಾ ವಿಷ್ಣುರವ್ಯಯಃ ॥ ೭ ॥
ವಸನಾತ್ತಸ್ಯ ವಸ್ತ್ರ ತ್ವಂ ವಸ ವಾಸೇ ಜಗತ್ಪತೇ ।
ಇಂದ್ರಘೋಷಸ್ತ್ವೇತಿ ರಕ್ಷಾಂ ವಿದಧ್ಯಾತ್ತಸ್ಯ ಸರ್ವತಃ ॥ ೮ ॥
ಪೂಜಯೇದ್ಗಂಧಪುಷ್ಪಾಭ್ಯಾಂ ತತೋ ದೇವಂ ಪ್ರಪೂಜಯೇತ್ ।
ಸರ್ವಲೇಪಂ ಪ್ರಕುರ್ವೀತ ನೃತ್ಯಗೀತೈರ್ನಯೇನ್ನಿಶಾಂ ॥ ೯ ॥
ತತೋಽರುಣೋದಯೇ ಕಾಲೇ ಪ್ರಾತಃಸಂಧ್ಯಾಸಮಾಪತಃ ।
ಪುನಃ ಪ್ರಪೂಜಯೇದ್ದೇವಂ ಪೂರ್ವವತ್ಸುಸಮಾಹಿತಃ ॥ ೧೦ ॥
ತತಸ್ತಂ ಪೂಜಿತಂ ವಸ್ತ್ರಸಮೂಹಂ ಬಹಿರಾನಯೇತ್ ।
ಕಾರ್ಪಾಸಪಟ್ಟಕೌಮಾಢ್ಯಂ ತಥೈವಾಚ್ಛಾದಿತಂ ದ್ವಿಜಾಃ ॥ ೧೧ ॥

---

ವಸ್ತ್ರದಿಂದ ಆಚ್ಛಾದಿಸಬೇಕು. ಬಳಿಕ ಧೂಪದ ಸುವಾಸನೆಯಿಂದ ಕೂಡಿದ ಇಪ್ಪತ್ತೊಂದು ವಸ್ತ್ರಗಳನ್ನು ಆ ಕಳಶಕ್ಕೆ ತೊಡಿಸಬೇಕು.

೬. ಅದರ ಮಧ್ಯದಲ್ಲಿ ಶ್ರೀ ನೃಸಿಂಹಮೂರ್ತಿಯನ್ನು ವಿಷ್ಣುಸೂಕ್ತ ಮಂತ್ರಗಳನ್ನುಚ್ಚರಿಸುತ್ತ ಸ್ಥಾಪನೆಮಾಡಬೇಕು. ಆ ವಿಗ್ರಹವನ್ನೂ ಸಹ ಪ್ರಯತ್ನಪೂರ್ವಕವಾಗಿ ಬೇರೊಂದು ವಸ್ತ್ರದಿಂದ ಆಚ್ಛಾದಿಸಬೇಕು.

೭–೮. ಬಳಿಕ ಆ ವಿಗ್ರಹವನ್ನು ಕೈಯಲ್ಲಿ ಮುಟ್ಟಿ ಪುರುಷೋತ್ತಮನನ್ನೇ ಸ್ಮರಿಸುತ್ತ ಮಂತ್ರವನ್ನುಚ್ಚರಿಸಬೇಕು. "ಯಾವ ಅವ್ಯಯನಾದ ಮಹಾ ವಿಷ್ಣುವು ತನ್ನ ತೇಜಸ್ಸಿನಿಂದ ಸಕಲ ಲೋಕಗಳನ್ನೂ ಆಚ್ಛಾದಿಸಿರುವನೊ, ಆತನನ್ನೂ ನೀನು ಆಚ್ಛಾದಿಸಿರುವೆ. ಎಲೈ ವಸ್ತ್ರವೆ! ಆದುದರಿಂದ ನೀನು ಲೋಕೇಶ್ವರನಾದ ಮಹಾವಿಷ್ಣುವಿನ ಲೋಕದಲ್ಲಿ ವಾಸಮಾಡು." ಬಳಿಕ "ಇಂದ್ರಘೋಷಸ್ತ್ವಾ" ಎಂಬ ಮಂತ್ರದಿಂದ ಆ ಕಳಶಕ್ಕೆ ಸಕಲ ದಿಕ್ಕುಗಳಲ್ಲಿಯೂ ರಕ್ಷಣೆಯನ್ನು ಮಾಡಬೇಕು.

೯. ಕಳಶವನ್ನು ಗಂಧಪುಷ್ಪಗಳಿಂದ ಪೂಜಿಸಿ ಬಳಿಕ ದೇವನನ್ನು ಪೂಜಿಸಬೇಕು. ಸರ್ವಸುಗಂಧಗಳಿಂದ ಪರಮಾತ್ಮನಿಗೆ ಲೇಪವನ್ನು ಮಾಡಿ ಆ ರಾತ್ರಿಯನ್ನು ನೃತ್ಯಗೀತಾದಿ ಕಲಾಪಗಳಿಂದ ಜಾಗರಣೆಯಲ್ಲಿ ಕಳೆಯಬೇಕು.

೧೦. ಅರುಣೋದಯ ಕಾಲದಲ್ಲಿ ಎದ್ದು ಸ್ನಾನಸಂಧ್ಯಾವಂದನಾದಿಗಳನ್ನು ಪೂರೈಸಿಕೊಂಡು ಮುನ್ನಿನಂತೆಯೇ ಪ್ರಶಾಂತಚಿತ್ತನಾಗಿ ಶ್ರೀನೃಸಿಂಹಸ್ವಾಮಿಗೆ ಪುನಃ ಪೂಜೆಯನ್ನು ಮೇಲೆ ಹೇಳಿದ ವಿಧಾನದಿಂದ ಮಾಡಬೇಕು.

೧೧. ಬ್ರಾಹ್ಮಣರಿರಾ! ಬಳಿಕ ವಸ್ತ್ರ ಸಮೂಹದಿಂದಾಚ್ಛಾದಿತವಾದ

ಛತ್ರಧ್ವಜಪತಾಕಾಭಿಶ್ಚಾಮರಾಂದೋಲನೈಸ್ತಥಾ ।
ಗೀತವಾದಿತ್ರನೃತ್ಯೈಶ್ಚ ಪ್ರಸೂನೋತ್ಕಿರಣೇನ ಚ ॥ ೧೨ ॥
ಪ್ರಾಸಾದಂ ತ್ರಿಃ ಪರಿಭ್ರಮ್ಯ ದೇವಂ ತ್ರಿರ್ಭ್ರಾಮಯೇತ್ತತಃ ।
ಆಚ್ಛಾದಿತಂ ತದಾಕೃಷ್ಯ ಸಂಸ್ಕುರ್ಯಾದ್ವೀಕ್ಷಣಾದಿಭಿಃ ॥ ೧೩ ॥
ಸಪ್ತಭಿಃ ಸಪ್ತಭಿರ್ದೇವಾನ್ವಾಸೋಭಿಃ ಪರಿವೇಷ್ಟಯೇತ್ ।
ಮುಖವರ್ಜಂ ತು ಸರ್ವಾಂಗಂ ಶೀತಪ್ರಾವರಣೈರ್ದ್ವಿಜಾಃ ॥ ೧೪ ॥
ತಾಂಬೂಲಂ ಚ ನಿವೇದ್ಯಾಥ ಕರ್ಪೂರಲತಿಕಾಂ ತಥಾ ।
ದೂರ್ವಾಕ್ಷತೈಃ ಪ್ರಪೂಜ್ಯಾಥ ಕುರ್ಯಾನ್ನೀರಾಜನಂ ವಿಭೋಃ ॥ ೧೫ ॥
ಹಿಮಾಗಮೇ ನೃಸಿಂಹಂ ಯೇ ಪ್ರಾವೃಣ್ವಂತಿ ಸುಚೇಲಕೈಃ ।
ಪಶ್ಯಂತಿ ಪ್ರಾವೃತಿಂ ಯೇ ವಾ ನ ತೇಷಾಂ ಮೋಹಸಂವೃತಿಃ ।
ತೇ ದ್ವಂದ್ವವಾತಶೀತೋತ್ಥಭಯಂ ನಾಪ್ನುವತೇ ಕ್ವಚಿತ್ ॥ ೧೬ ॥

---

ಕಳಶವನ್ನೂ, ಹತ್ತಿ, ರೇಷ್ಮೆ, ಉಣ್ಣೆಗಳ ವಸ್ತ್ರಗಳಿಂದಾವೃತನಾದ ನೃಸಿಂಹ ಸ್ವಾಮಿಯ ವಿಗ್ರಹವನ್ನೂ ಮಂಟಪದ ಹೊರಗಿನ ಪ್ರಾಸಾದಕ್ಕೆ ಬಿಜ ಮಾಡಿಸಬೇಕು.

೧೨. ಛತ್ರ, ಧ್ವಜ, ಪತಾಕೆಗಳು, ಚಾಮರ, ಪಲ್ಲಕ್ಕಿಗಳಿಂದಲೂ, ಸಂಗೀತ, ವಾದ್ಯ, ನೃತ್ಯಗಳಿಂದಲೂ, ಪುಷ್ಪಗಳನ್ನೆರಚುವುದರಿಂದಲೂ ಮಹೋತ್ಸವವನ್ನು ನಡೆಸಬೇಕು.

೧೩. ಇಂತು ಪ್ರಾಸಾದವನ್ನು ಮೂರುಸಲ ಪ್ರದಕ್ಷಿಣೆಗೈದು ಬಳಿಕ ಮೂಲವಿಗ್ರಹದ ದೇವಾಲಯುವನ್ನೂ ಮೂರುಸಲ ಪ್ರದಕ್ಷಿಣೆ ಮಾಡಿಸಬೇಕು. ಬಳಿಕ ವಸ್ತ್ರಾಚ್ಛಾದಿತವಾದ ನೃಸಿಂಹ ವಿಗ್ರಹವನ್ನು ಕಳಶದಿಂದ ಹೊರಕ್ಕೆ ತೆಗೆದು ವೀಕ್ಷಣಾದಿಕ್ರಿಯೆಗಳಿಂದ ಸಂಸ್ಕಾರಮಾಡಬೇಕು.

೧೪. ಆವಾಹಿತರಾದ ದೇವತೆಗಳಲ್ಲಿ ಪ್ರತಿಯೊಬ್ಬರನ್ನೂ ಏಳು ಏಳು ವಸ್ತ್ರಗಳಿಂದ ಆಚ್ಛಾದಿಸಬೇಕು. ದ್ವಿಜಶ್ರೇಷ್ಠರಿರಾ! ದೇವತೆಗಳಿಗೆ ಶೀತಬಾಧೆ ಯಾಗದಂತೆ ಮುಖವೊಂದನ್ನು ಬಿಟ್ಟು ಉಳಿದ ಸರ್ವಾಂಗಗಳನ್ನೂ ವಸ್ತ್ರಗಳಿಂದ ಹೊದ್ದಿಸಬೇಕು.

೧೫. ಬಳಿಕ ತಾಂಬೂಲವನ್ನೂ ಕರ್ಪೂರಲತೆಯನ್ನೂ ಸಮರ್ಪಿಸಿ, ದೂರ್ವಾಕ್ಷತೆಗಳಿಂದ ನಾಮಪೂಜೆಯನ್ನುಮಾಡಿ ಕೊನೆಯಲ್ಲಿ ಪರಮಾತ್ಮನಿಗೆ ಉತ್ತರನೀರಾಜನವನ್ನು ಮಾಡಬೇಕು.

೧೬. ಈ ವಿಧವಾಗಿ ಹೇಮಂತರ್ತುವಿನ ಪ್ರಾರಂಭದಲ್ಲಿ ನೃಸಿಂಹ ವಿಗ್ರಹವನ್ನು ಯಾರು ದಿವ್ಯ ವಸ್ತ್ರಗಳಿಂದಾಚ್ಛಾದಿಸುವರೊ, ಮತ್ತು ಯಾರು ಆಚ್ಛಾದಿತನಾದ ಪರಮಾತ್ಮನನ್ನು ನೋಡುವರೊ, ಅವರಿಗೆ ಪುನಃ ಮೋಹ

ವಿಷ್ಣೋರ್ದೇವಾಧಿದೇವಸ್ಯ ಇಮಂ ಪ್ರಾವರಣೋತ್ಸವಂ ।
ಭಕ್ತ್ಯಾ ಯೇ ವೈ ಪ್ರಪಶ್ಯಂತಿ ಸರ್ವಾನ್ಕಾಮಾನವಾಪ್ನುಯುಃ ॥ ೧೭ ॥
ಭಗವಂತಂ ಸಮುದ್ದಿಶ್ಯ ಬ್ರಾಹ್ಮಣೇಭ್ಯಃ ಪ್ರದಾಪಯೇತ್ ।
ಗುರುಭ್ಯಶ್ಚಾನ್ಯದೇವೇಭ್ಯೋ ದೀನಾನಾಥೇಭ್ಯ ಏವ ಚ ॥ ೧೮ ॥
ಶೀತಪ್ರಾವರಣಂ ದದ್ಯಾತ್ಸತ್ಕೃತ್ಯ ಪರಯಾ ಮುದಾ ।
ದದಾತಿ ಭಗವಾನ್ಪ್ರೀತಸ್ತಸ್ಮೈ ವರಮನುತ್ತಮಂ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಪ್ರಾವರಣೋತ್ಸವವರ್ಣನಂ" ನಾಮ ಚತ್ವಾರಿಂಶೋಽಧ್ಯಾಯಃ

---

ಪಾಶದಲ್ಲಿ ಬಂಧನವುಂಟಾಗುವುದಿಲ್ಲ. ಅವರೆಂದಿಗೂ ಸುಖದುಃಖಾದಿ ದ್ವಂದ್ವಗಳನ್ನೂ, ಶೀತವಾತಗಳಿಂದುಂಟಾಗುವ ಭಯವನ್ನೂ ಎಲ್ಲಿಯೂ ಹೊಂದುವುದಿಲ್ಲ.

೧೭. ದೇವತೆಗಳಿಗೆ ಅಧಿದೇವನಾದ ಮಹಾವಿಷ್ಣುವಿನ ಈ ವಿಧವಾದ ಪ್ರಾವರಣೋತ್ಸವವನ್ನು ಯಾರು ಭಕ್ತಿಭಾವಸಮನ್ವಿತರಾಗಿ ನೋಡುವರೊ, ಅವರು ಸಕಲ ಇಷ್ಟಾರ್ಥಗಳನ್ನೂ ಪಡೆಯುವರು.

೧೮. ಭಗವಂತನ ಪ್ರೀತಿಯನ್ನು ಪಡೆಯುವ ಸದುದ್ದೇಶದಿಂದ ಆಚಾರ್ಯನಾದವನು ಕರ್ತೃವಿನ ಕೈಗಳಿಂದ ಬ್ರಾಹ್ಮಣರಿಗೂ, ಗುರುಗಳಿಗೂ, ಇತರ ದೇವತೆಗಳಿಗೂ, ದೀನಾನಾಥರಿಗೂ ವಸ್ತ್ರದಾನಗಳನ್ನೂ ಮಾಡಿಸಬೇಕು.

೧೯. ಭಗವದ್ಭಕ್ತನಾದವನು ಅವರೆಲ್ಲರನ್ನೂ ಆದರದಿಂದ ಬರಮಾಡಿ ಕೊಂಡು ಅತ್ಯಂತ ಸಂತೋಷದಿಂದ ಸತ್ಕಾರವನ್ನು ಮಾಡಿ ಶೀತಕಾಲಕ್ಕೆ ತಕ್ಕ ವಸ್ತ್ರಗಳನ್ನು ಸಮರ್ಪಿಸಬೇಕು. ಇದರಿಂದ ಸುಪ್ರೀತನಾದ ಭಗವಂತನು ಆತನಿಗೆ ಅಲಭ್ಯವಾದ ವರವನ್ನೂ ಸಹ ಕೊಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಪ್ರಾವರಣೋತ್ಸವವರ್ಣನ"ವೆಂಬ ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಚತ್ವಾರಿಂಶೋಽಧ್ಯಾಯಃ

### ಪುಷ್ಯಾಭಿಷೇಕವಿಧಿವರ್ಣನಂ

ಜೈಮಿನಿರುವಾಚ :—

ಪುಷ್ಯಸ್ನಾನೋತ್ಸವಂ ವಕ್ಷ್ಯೇ ಯಥೋಕ್ತಂ ಬ್ರಹ್ಮಣಾ ಪುರಾ ।
ಪುಷ್ಯರ್ಕ್ಷೇಣ ಚ ಸಂಯುಕ್ತಾ ಪೌರ್ಣಮಾಸೀ ಯದಾ ಭವೇತ್ ॥ ೧ ॥
ಪೌಷೇ ಮಾಸಿ ತಥಾ ಕುರ್ಯಾತ್ಪುಷ್ಯಸ್ನಾನೋತ್ಸವಂ ಹರೇಃ ।
ಏಕಾದಶ್ಯಾಂ ಪ್ರಕುರ್ವೀತ ಐಶಾನ್ಯಾಮಂಕುರಾರ್ಪಣಂ ॥ ೨ ॥
ತತಃ ಪ್ರತಿದಿನಂ ಕುರ್ಯಾತ್ಪ್ರತಿಮಾಯಾಂ ಹರೇರ್ಗೃಹೇ ।
ನೃತ್ಯಗೀತೋಪಹಾರೈಶ್ಚ ಪ್ರತಿರಾತ್ರಂ ಬಲಿಂ ಹರೇತ್ ॥ ೩ ॥
ಚತುರ್ದಶೀನಿಶಾಯಾಂ ತು ಕುಂಭಾನಾಮಧಿವಾಸನಂ ।
ಏಕಾಶೀತಿಪ್ರಮಾಣಾನಾಂ ತಥಾ ಸ್ವರ್ಣಮಯಾನ್ಛುಭಾನ್ ॥ ೪ ॥

---

### ಕನ್ನಡದ ಅನುವಾದ

#### ಪುಷ್ಯಾಭಿಷೇಕವಿಧಿವರ್ಣನ

೧. ಜೈಮಿನಿಯು ಹೇಳುತ್ತಾನೆ :—ಪೂರ್ವದಲ್ಲಿ ಬ್ರಹ್ಮದೇವನು ನಿರೂಪಿಸಿರುವ ಪ್ರಕಾರದಿಂದ ಪುಷ್ಯಸ್ನಾನವನ್ನು ಮಾಡಿಸುವ ಮಹೋತ್ಸವವನ್ನು ಈಗ ವಿವರಿಸುವೆನು. ಈ ಉತ್ಸವವನ್ನು ಪುಷ್ಯ ನಕ್ಷತ್ರದಿಂದ ಕೂಡಿರುವ ಹುಣ್ಣಿಮೆಯ ದಿನದಲ್ಲಿ ಮಾಡಬೇಕು.

೨. ಆದುದರಿಂದ ಪುಷ್ಯಮಾಸದಲ್ಲಿಯೇ ಶ್ರೀಹರಿಗೆ ಪುಷ್ಯಾಭಿಷೇಕೋತ್ಸವವನ್ನು ಮಾಡಿಸಬೇಕು. ಶುಕ್ಲೈಕಾದಶಿಯ ದಿನವೇ ಮಂಟಪದ ಈಶಾನ್ಯ ದಿಗ್ಭಾಗದಲ್ಲಿ ಅಂಕುರಾರ್ಪಣವನ್ನು ಮಾಡಬೇಕು.

೩. ಅಂದು ಮೊದಲುಗೊಂಡು ಪ್ರತಿ ದಿವಸವೂ ಶ್ರೀಹರಿಯ ಮಂಟಪದಲ್ಲಿ ನೃತ್ಯ, ಗೀತ, ನೈವೇದ್ಯಗಳಿಂದ ಪೂಜೆಯನ್ನು ಮಾಡಿ ಪ್ರತಿ ರಾತ್ರಿಯಲ್ಲಿಯೂ ವಿಶೇಷವಾದ ಬಲಿಯನ್ನು ಅರ್ಪಿಸಬೇಕು.

೪–೫. ಚತುರ್ದಶಿಯ ರಾತ್ರಿಯಲ್ಲಿ ಕಳಶಗಳ ಸ್ಥಾಪನೆಯನ್ನು ಮಾಡಬೇಕು. ಎಂಭತ್ತೊಂದು ಪಲ ಪ್ರಮಾಣದಿಂದ ಒಂದೊಂದು ಚಿನ್ನದ

ಗವ್ಯಸರ್ಪಿಃಪ್ರಪೂರ್ಣಾಂಶ್ಚ ಸ್ಥಾಪಯೇದೇಕವಿಂಶತಿಂ ।
ಕಾರಯೇತ್ಸರ್ವತೋಭದ್ರಂ ಮಂಡಲಂ ಪುರತೋ ಹರೇಃ ॥ ೫ ॥
ತನ್ಮಧ್ಯೇ ಬೃಹದಾಧಾರಂ ಸ್ಥಾಪಯೇದ್ದರ್ಪಣಂ ಶುಭಂ ।
ರಾತ್ರೌ ಜಾಗರಣಂ ಕುರ್ಯಾದ್ಗೀತನೃತ್ಯಾದಿವಿಸ್ತರೈಃ ॥ ೬ ॥
ಪ್ರಭಾತೇ ವಹ್ನಿಕಾರ್ಯಂ ಚ ಕುರ್ಯಾತ್ತದ್ದೈವತಂ ದ್ವಿಜಾಃ ।
ಪಾಲಾಶೀಭಿಃ ಸಮಿದ್ಭಿಸ್ತು ಚರುಣಾ ಸರ್ಪಿಷಾ ತಥಾ ॥ ೭ ॥
ಬ್ರಹ್ಮವಿಷ್ಣುಶಿವೇಭ್ಯಸ್ತು ಪ್ರತ್ಯೇಕಂ ತು ಸಹಸ್ರಕಂ ।
ಸ್ವಲಿಂಗಮಂತ್ರೈರ್ಜುಹುಯಾತ್ತದಂತೇ ಪುರುಷೋತ್ತಮಂ ॥ ೮ ॥
ಪೂಜಯೇದುಪಚಾರೈಸ್ತೈರಾದರ್ಶಪ್ರತಿಬಿಂಬಿತಂ ।
ತತಃ ಪುರುಷಸೂಕ್ತೇನ ಕುಂಭಾಂಸ್ತಾನಭಿಮಂತ್ರಯೇತ್ ॥ ೯ ॥
ತೇನೈವಾಚ್ಛಿದ್ರಧಾರೇಣ ಸ್ನಾಪಯೇತ್ಪುರುಷೋತ್ತಮಂ ।
ಪಾವಮಾನೀಯಸೂಕ್ತೈರ್ದೇವಾನ್ಶ್ರೀಸೂಕ್ತೇನ ತತಃ ಪರಂ ॥ ೧೦ ॥

---

ಕಳಶವನ್ನು ಸುಂದರವಾಗಿ ಮಾಡಿಸಿ ಅಂತಹ ಇಪ್ಪತ್ತೊಂದು ಕಳಶಗಳನ್ನು ಆಕಳಿನ ತುಪ್ಪದಿಂದ ತುಂಬಿ ಸ್ಥಾಪನೆಯನ್ನು ಮಾಡಬೇಕು. ಬಳಿಕ ಶ್ರೀಹರಿಯ ಮುಂಗಡೆಯಲ್ಲಿ ಸರ್ವತೋಭದ್ರವಾದ ಮಂಡಲವನ್ನು ಮಾಡಿಸಬೇಕು.

೬. ಆ ಮಂಡಲದ ಮಧ್ಯದಲ್ಲಿ ದೊಡ್ಡ ವಿಸ್ತಾರವುಳ್ಳ ಒಂದು ದರ್ಪಣವನ್ನು ಸ್ವಾಮಿಗೆ ಅಭಿಮುಖವಾಗಿ ನಿಲ್ಲಿಸಬೇಕು. ಆ ರಾತ್ರಿಯನ್ನು ಗೀತನೃತ್ಯಾದಿ ಸೇವೆಗಳನ್ನು ನಡೆಸುತ್ತ ಜಾಗರಣೆಯಲ್ಲಿಯೇ ಕಳೆಯಬೇಕು.

೭. ಎಲೈ ಬ್ರಾಹ್ಮಣರಿರಾ! ಸೂರ್ಯೋದಯ ಸಮಯದಲ್ಲಿ ಪಲಾಶ ವೃಕ್ಷದ ಸಮಿತ್ತುಗಳಿಂದಲೂ, ಚರುವಿನಿಂದಲೂ, ಆಜ್ಯದಿಂದಲೂ ಅಗ್ನಿಯಲ್ಲಿ ವಿಷ್ಣುದೇವತೆಗೆ ಸಂಬಂಧಿಸಿದ ಹೋಮಗಳನ್ನು ಮಾಡಬೇಕು.

೮-೯. ಬ್ರಹ್ಮ, ವಿಷ್ಣು, ಮಹೇಶ್ವರರಾದ ತ್ರಿಮೂರ್ತಿಗಳಿಗೂ ಅವರವರಿಗುಚಿತಗಳಾದ ಮಂತ್ರಗಳಿಂದ ಒಬ್ಬೊಬ್ಬರಿಗೂ ಒಂದುಸಾವಿರ ಆಹುತಿಗಳನ್ನಿತ್ತು ಹೋಮಗಳನ್ನು ಮಾಡಿ, ಬಳಿಕ ಕನ್ನಡಿಯಲ್ಲಿ ಪ್ರತಿಬಿಂಬಿಸಿರುವ ಪುರುಷೋತ್ತಮನ ರೂಪವನ್ನೇ ಸರ್ವೋಪಚಾರಗಳಿಂದ ಪೂಜಿಸಬೇಕು. ಆಮೇಲೆ ಪುರುಷಸೂಕ್ತದ ಮಂತ್ರಗಳಿಂದ ಕಳಶಗಳನ್ನು ಅಭಿಮಂತ್ರಣ ಮಾಡಬೇಕು.

೧೦. ಆ ಕಳಶಗಳ ಘೃತದ ಸಂತತ ಧಾರೆಯಿಂದಲೇ ಶ್ರೀ ಪುರುಷೋತ್ತಮನಿಗೆ ಸ್ನಾನವನ್ನು ಮಾಡಿಸಬೇಕು. ಪವಮಾನಸೂಕ್ತಗಳಿಂದಲೂ ಶ್ರೀಸೂಕ್ತಗಳಿಂದಲೂ ಮೊದಲು ಸಕಲ ದೇವತೆಗಳಿಗೂ ಅಭಿಷೇಕವನ್ನು ಮಾಡಬೇಕು.

ಸರ್ಪಿಃಕುಂಭೈಃ ಸ್ನಾಪಯೇಚ್ಚ ಗಾಯತ್ರ್ಯಾ ಚ ತತಃ ಪರಂ ।
ವೈಷ್ಣವ್ಯಾ ಗಂಧತೋಯೇನ ಶ್ರೀಸೂಕ್ತೇನ ಸಮರ್ಚಯೇತ್ ॥ ೧೧ ॥
ಸಹಸ್ರಧಾರಯಾ ದೇವಂ ತತೋ ನಿರ್ಮಾಲ್ಯಮುತ್ಸೃಜೇತ್ ।
ದೇವಾಂಗಂ ಲೇಪಯೇದ್ಗಂಧೈಶ್ಚಂದನೇನ ಚ ವಿಗ್ರಹೇ ॥ ೧೨ ॥
ಯಥಾಸ್ಥಾನಂ ಯಥಾಶೋಭಮಲಂಕಾರಾಂಶ್ಚ ಯೋಜಯೇತ್ ।
ಸುಗಂಧಸುಮನೋಮಾಲ್ಯೈರ್ಭೂಷಯೇತ್ತದನಂತರಂ ॥ ೧೩ ॥
ಅಷ್ಟಾಯುಧಾನಿ ದೇವಸ್ಯ ಚಕ್ರಾದೀನಿ ನ್ಯಸೇತ್ಪುರಃ ।
ರತ್ನಚ್ಛತ್ರಂ ಸಮುಚ್ಛ್ರಿತ್ಯ ಪೂಜಯೇತ್ಪುರುಷೋತ್ತಮಂ ॥ ೧೪ ॥
ಲಕ್ಷ್ಮ್ಯಾ ಯುಕ್ತಂ ಪುನರ್ವಿಪ್ರಾ ಉಪಹಾರೈಃ ಸಮೃದ್ಧಿಮತ್ ।
ಶಂಖೇಷು ಪೂರ್ಯಮಾಣೇಷು ಸ್ನಿಗ್ಧಗಂಭೀರನಾದಿಷು ॥ ೧೫ ॥
ಚಾಮರಾಂದೋಲವ್ಯಗ್ರಾಸು ವೇಶ್ಯಾಸು ರುಚಿರಾಸು ಚ ।
ಮಾಂಗಲ್ಯಗೀತನೃತ್ಯಾದ್ಯೈಃ ಸ್ತುತಿಪಾಠೇಷು ವಂದಿನಾಂ ॥ ೧೬ ॥

---

೧೧. ಬಳಿಕ ವಿಷ್ಣು ಗಾಯತ್ರಿಯ ಮಂತ್ರಗಳನ್ನುಚ್ಚರಿಸುತ್ತ ಭಗವಂತನಿಗೆ ಆಜ್ಯಸ್ನಾನವನ್ನು ಮಾಡಿಸಿ ಶ್ರೀಸೂಕ್ತಮಂತ್ರಗಳಿಂದ ಗಂಧೋದಕವನ್ನು ಅರ್ಪಿಸಿ ಪೂಜಿಸಬೇಕು.

೧೨. ಇಂತು ಸಹಸ್ರ ಧಾರೆಗಳಿಂದ ದೇವದೇವನಿಗೆ ಅಭಿಷೇಕವನ್ನು ಮಾಡಿಸಿದ ಮೇಲೆ ನಿರ್ಮಾಲ್ಯವನ್ನು ತೆಗೆದುಹಾಕಬೇಕು. ಸುಗಂಧಗಳಿಂದಲೂ ಚಂದನದಿಂದಲೂ ವಿಗ್ರಹದ ಸರ್ವಾಂಗಗಳನ್ನೂ ಲೇಪಿಸಬೇಕು.

೧೩. ಅನಂತರದಲ್ಲಿ ವಿಗ್ರಹವು ಶೋಭಿಸುವಂತೆ ಅನೇಕ ಆಭರಣಗಳನ್ನು ಉಚಿತ ಅಂಗಗಳಲ್ಲಿ ತೊಡಿಸಿ ಸೌಗಂಧ್ಯಯುಕ್ತಗಳಾದ ಪುಷ್ಪಮಾಲಿಕೆಗಳಿಂದ ಪುರುಷೋತ್ತಮನನ್ನು ಅಲಂಕರಿಸಬೇಕು.

೧೪. ಶಂಖಚಕ್ರಗಳೇ ಮುಂತಾದ ಮಹಾವಿಷ್ಣುವಿನ ಎಂಟು ಆಯುಧಗಳನ್ನೂ ಆತನ ಮುಂದುಗಡೆ ಇರಿಸಬೇಕು. ನವರತ್ನಮಯವಾದ ಛತ್ರವನ್ನೆತ್ತಿ ಹಿಡಿದು ಪುರುಷೋತ್ತಮನನ್ನು ಪೂಜೆಮಾಡಬೇಕು.

೧೫. ಬ್ರಾಹ್ಮಣೋತ್ತಮರಿರಾ! ಸ್ನಿಗ್ಧವಾಗಿಯೂ ಗಂಭೀರವಾಗಿಯೂ ನಾದವನ್ನು ಕೊಡುವ ಶಂಖಗಳನ್ನು ಪಾರ್ಶ್ವಗತರಾದವರು ಧ್ವನಿಗೈಯುತ್ತಿರಲು ಲಕ್ಷ್ಮೀಸಮೇತನಾದ ಸ್ವಾಮಿಯನ್ನು ಸಮೃದ್ಧವಾದ ನೈವೇದ್ಯದಿಂದ ಸಂತೋಷಗೊಳಿಸಬೇಕು.

೧೬. ಸುಂದರಿಯರಾದ ವೇಶ್ಯಾಸ್ತ್ರೀಯರು ಚಾಮರಗಳನ್ನಿಕ್ಕುವುದರಲ್ಲಿಯೇ ಆಸಕ್ತರಾಗಿರಲು, ವಂದಿಮಾಗಧರು ಮಂಗಳಾಶಾಸನಗಳನ್ನೂ,

**ಜಯಶಬ್ದಂ ಪ್ರಕುರ್ವತ್ಸು ದ್ವಿಜಾತಿಷು ಮುಹುರ್ಮುಹುಃ ।**
**ದೂರ್ವಾಕ್ಷತಾಂಜಲಿಭಿಸ್ತ್ರಿಭಿಃ ಸಂಪೂಜ್ಯ ಕೇಶವಂ ॥ ೧೭ ॥**
**ಗೋಸರ್ಪಿರ್ದೀಪಕೈಃ ಸ್ವರ್ಣಪಾತ್ರಕೈರತಿನಿರ್ಮಲೈಃ ।**
**ನೀರಾಜಯೇಜ್ಜಗನ್ನಾಥಂ ಕರ್ಪೂರಯುತವರ್ತಿಭಿಃ ॥ ೧೮ ॥**
**ಸ್ವರ್ಣಪಾತ್ರಸ್ಥಿತಂ ಚಾರು ತಾಂಬೂಲಂ ಸುಪರಿಷ್ಕೃತಂ ।**
**ಶನೈಃಶನೈರ್ಮುಖಾಭ್ಯಾಶೇ ಪ್ರತ್ಯೇಕಂ ವಿನಿವೇದಯೇತ್ ॥ ೧೯ ॥**
**ಆಚಾರ್ಯೇ ದಕ್ಷಿಣಾಂ ದದ್ಯಾದ್ಬ್ರಾಹ್ಮಣಾಂಶ್ಚೈವ ಪೂಜಯೇತ್ ॥ ೨೦ ॥**
**ಪುಷ್ಯಸ್ನಾನೋತ್ಸವಂ ಪುಣ್ಯಂ ಯೇ ಪಶ್ಯಂತಿ ಮುದಾನ್ವಿತಾಃ ।**
**ಸಂಪೂರ್ಣಸರ್ವಕಾಮಾಸ್ತೇ ವ್ರಜೇಯುರ್ವೈಷ್ಣವಂ ಪದಂ ॥ ೨೧ ॥**
**ರಾಜ್ಯಭ್ರಷ್ಟೋ ಲಭೇದ್ರಾಜ್ಯಂ ಸಾರ್ವಭೌಮಂ ಚ ವಿಂದತಿ ।**
**ಅಪುತ್ರಾ ಮೃತವತ್ಸಾ ವಾ ಪುತ್ರಂ ದೀರ್ಘಾಯುಷಂ ಲಭೇತ್ ॥ ೨೨ ॥**

---

ಸಂಗೀತಗಳನ್ನೂ, ನೃತ್ಯಗಳನ್ನೂ, ಸ್ತೋತ್ರಪಾಠಗಳನ್ನೂ ಸಮರ್ಪಿಸುತ್ತಿರಬೇಕು.

೧೭. ಅಲ್ಲಿ ನೆರೆದ ಬ್ರಾಹ್ಮಣೋತ್ತಮರೆಲ್ಲರೂ ಅಡಿಗಡಿಗೆ ಜಯಕಾರಗಳನ್ನು ಮಾಡುತ್ತಿರಲು ಭಕ್ತನಾದವನು ಅಂಜಲಿಯಲ್ಲಿ ಮೂರುಸಲ ದೂರ್ವಾಕ್ಷತೆಗಳನ್ನು ತೆಗೆದುಕೊಂಡು ಕೇಶವನಿಗೆ ಪೂಜೆಯನ್ನು ಮಾಡಬೇಕು.

೧೮. ಅತಿಸ್ವಚ್ಛಗಳಾದ ಚಿನ್ನದ ಹಣತೆಗಳಲ್ಲಿ ಹಸುಗಳ ತುಪ್ಪದ ದೀಪಗಳನ್ನು ಹಚ್ಚಿ ಕರ್ಪೂರದಿಂದಲೂ ವರ್ತಿಗಳಿಂದಲೂ ಜಗನ್ನಾಥನಿಗೆ ನೀರಾಜನವನ್ನು ಬೆಳಗಿಸಬೇಕು.

೧೯. ಸುವರ್ಣದ ತಟ್ಟೆಯಲ್ಲಿ ಸರ್ವೋಪಸ್ಕರಗಳಿಂದ ಕೂಡಿದ ತಾಂಬೂಲವನ್ನಿರಿಸಿ ಒಂದೊಂದೆಲೆಯನ್ನು ಪ್ರತ್ಯೇಕವಾಗಿ ಮೆಲ್ಲಮೆಲ್ಲಗೆ ಪರಮಾತ್ಮನ ಮುಖದ ಹತ್ತಿರಕ್ಕೆ ತೋರಿಸಿ ನೈವೇದ್ಯವನ್ನು ಮಾಡಬೇಕು.

೨೦. ಬಳಿಕ ಆಚಾರ್ಯನಿಗೆ ದಕ್ಷಿಣೆಯನ್ನಿತ್ತು ಬ್ರಾಹ್ಮಣರನ್ನು ಉಚಿತ ಸತ್ಕಾರಗಳಿಂದ ಪೂಜಿಸಬೇಕು.

೨೧. ಪುಷ್ಯ ಪೌರ್ಣಮಿಯ ದಿವಸದ ಈ ಅಭಿಷೇಕದ ಮಹೋತ್ಸವವನ್ನು ಯಾರು ಸಂತೋಷಗೊಂಡು ನೋಡುವರೊ, ಅವರು ಸಕಲ ಮನೋರಥಗಳನ್ನೂ ಪಡೆದವರಾಗಿ ವಿಷ್ಣುಲೋಕವನ್ನು ಕುರಿತು ತೆರಳುವರು.

೨೨. ರಾಜ್ಯಭ್ರಷ್ಟನಾದ ದೊರೆಯು ಈ ವ್ರತದ ಆಚರಣೆಯಿಂದ ರಾಜ್ಯವನ್ನು ಹಿಂದಕ್ಕೆ ಪಡೆದು ಸಾರ್ವಭೌಮ ಪದವಿಯನ್ನೂ ಹೊಂದುವನು. ಪುತ್ರಹೀನಳಾದ ಸ್ತ್ರೀಯುಳೂ, ಮೃತಪುತ್ರಳಾದವಳೂ, ದೀರ್ಘಾಯುಷ್ಯವಂತರಾದ ಪುತ್ರರನ್ನು ಪಡೆಯುವರು.

**ದಾರಿದ್ರ್ಯನಾಶನಂ ಧನ್ಯಂ ಬ್ರಹ್ಮವರ್ಚಸಕಾರಣಂ ।**
**ಪುಷ್ಯಸ್ನಾನಂ ಕೀರ್ತಿತಂ ವಃ ಶ್ರುಣುಧ್ವಂ ಚೋತ್ತರಾಯಣಂ ॥ ೨೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಪುಷ್ಯಾಭಿಷೇಕವಿಧಿವರ್ಣನಂ" ನಾಮ ಏಕಚತ್ವಾರಿಂಶೋಽಧ್ಯಾಯಃ**

---

೨೩. ಈ ವ್ರತವು ದಾರಿದ್ರ್ಯನಾಶಕವೂ, ಧನಪ್ರಾಪಕವೂ, ಬ್ರಹ್ಮವರ್ಚಸ್ಸನ್ನು ವೃದ್ಧಿಗೊಳಿಸುವುದೂ ಆಗಿರುವುದು. ಇಂತಹ ಸರ್ವೋತ್ತಮವಾದ ಪುಷ್ಯಾಭಿಷೇಕ ವ್ರತವನ್ನು ನಿರೂಪಿಸಿರುವೆನು. ಮುಂದೆ ಉತ್ತರಾಯಣ ಪುಣ್ಯಕಾಲದಲ್ಲಿ ಮಾಡಬೇಕಾದ ಕಾರ್ಯವನ್ನು ನಿರೂಪಿಸುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯಿಂದ ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಪುಷ್ಯಾಭಿಷೇಕವಿಧಿವರ್ಣನ"ವೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಚತ್ವಾರಿಂಶೋಽಧ್ಯಾಯಃ

## ಮಕರಸಂಕ್ರಮವಿಧಿವರ್ಣನಂ

ಜೈಮಿನಿರುವಾಚ :—

**ಮೃಗರಾಶಿಂ ಸಂಕ್ರಮತಿ ಯದಾ ಭಾಸ್ವಾನ್ದ್ವಿಜೋತ್ತಮಾಃ ।**
**ಉತ್ತರಾಶಾಂ ಜಿಗಮಿಷುಸ್ತದಾ ಸ್ಯಾದುತ್ತರಾಯಣಂ ॥ ೧ ॥**
**ತಸ್ಯ ಸಂಕ್ರಮಣಾರ್ಥಂ ಚ ಯಾವತ್ತ್ರ್ಯಿಂಶತಿಃ ಕಲಾಃ ।**
**ಮಹಾಪುಣ್ಯತಮಃ ಕಾಲಃ ಪಿತೃದೇವದ್ವಿಜಪ್ರಿಯಃ ॥ ೨ ॥**
**ತತ್ರ ಸ್ನಾತ್ವಾ ವಿಧಾನೇನ ತೀರ್ಥರಾಜಜಲೇ ನರಃ ।**
**ನಾರಾಯಣಂ ಸಮಭ್ಯರ್ಚ್ಯ ಕಲ್ಪವೃಕ್ಷಂ ಪ್ರಣಮ್ಯ ಚ ॥ ೩ ॥**
**ಪ್ರವಿಶ್ಯ ದೇವತಾಗಾರಂ ಕೃತ್ವಾ ತಂ ತ್ರಿಃ ಪ್ರದಕ್ಷಿಣಾಂ ।**
**ಮಂತ್ರರಾಜೇನ ಸಂಪೂಜ್ಯ ದೇವಂ ಶ್ರೀಪುರುಷೋತ್ತಮಂ ॥ ೪ ॥**
**ತಥಾ ಬಲಂ ಸುಭದ್ರಾಂ ಚ ಸ್ವಮಂತ್ರೇಣ ಪ್ರಪೂಜಯೇತ್ ।**
**ದೃಷ್ಟ್ವೋತ್ತರಾಯಣೇ ದೇವಂ ಮುಚ್ಯತೇ ದೇಹಬಂಧನಾತ್ ॥ ೫ ॥**

---

### ಕನ್ನಡದ ಅನುವಾದ

#### ಮಕರಸಂಕ್ರಾಂತಿವಿಧಿವರ್ಣನ

೧. ಜೈಮಿನಿಯು ಹೇಳುತ್ತಾನೆ:—ಬ್ರಾಹ್ಮಣಾಗ್ರಣಿಗಳಿರಾ! ಸೂರ್ಯನು ತನ್ನ ಸಂಚಾರ ಕ್ರಮದಲ್ಲಿ ಯಾವಾಗ ಮಕರರಾಶಿಯನ್ನು ದಾಟುವವನಾಗಿ ಉತ್ತರದಿಕ್ಕಿಗೆ ಹೋಗಲು ಪ್ರಾರಂಭಿಸುವನೊ, ಆ ಸಮಯಕ್ಕೆ ಉತ್ತರಾಯಣ ವೆಂದು ಹೆಸರು.

೨. ಆ ಸಂಕ್ರಮಣಕಾಲದ ಪೂರ್ವ ಅರ್ಧವಾದ ಇಪ್ಪತ್ತು ಕಲೆಗಳ ಕಾಲವೇ ಮಹಾಪುಣ್ಯಪ್ರದವಾದ ಕಾಲವೆನಿಸಿ ಪಿತೃಗಳಿಗೂ, ದೇವತೆಗಳಿಗೂ, ಬ್ರಾಹ್ಮಣರಿಗೂ ಅತ್ಯಂತ ಪ್ರಿಯವಾಗಿರುವುದು.

೩-೫. ಆ ಕಾಲದಲ್ಲಿ ಸಮುದ್ರದಲ್ಲಿ ಸ್ನಾನವನ್ನು ವಿಧ್ಯುಕ್ತ ವಿಧಾನದಿಂದ ಮಾಡಿ ಮನುಷ್ಯನು ಶ್ರೀಮನ್ನಾರಾಯಣನನ್ನು ಪೂಜಿಸಿ, ಕಲ್ಪವೃಕ್ಷಕ್ಕೆ ನಮಸ್ಕರಿಸಿ, ಪುರುಷೋತ್ತಮನ ದೇವಾಲಯವನ್ನು ಪ್ರವೇಶಿಸಿ, ಆತನಿಗೆ ಮೂರು ಸಲ ಪ್ರದಕ್ಷಿಣೆಯನ್ನು ಮಾಡಿ, ದೇವೇಶ್ವರನಾದ ಆತನನ್ನು ಮಂತ್ರ ರಾಜದಿಂದ ಸಮರ್ಚಿಸಿ, ಬಳಿಕ ಬಲಭದ್ರದೇವನನ್ನೂ ಸುಭದ್ರಾದೇವಿಯನ್ನೂ ಅವರವರ ಮಂತ್ರಗಳಿಂದ ಪೂಜಿಸಬೇಕು. ಉತ್ತರಾಯಣ ಪುಣ್ಯಕಾಲದಲ್ಲಿ ಶ್ರೀ ಜಗನ್ನಾಥನನ್ನು ನೋಡಲು ಶರೀರ ಬಂಧನಗಳೆಲ್ಲವೂ ಮನುಷ್ಯನಿಗೆ ಕಳೆದು ಹೋಗುವುವು.

ವಿಧಾನಂ ತಸ್ಯ ವಕ್ಷ್ಯಾಮಿ ಶ್ರುಣುಧ್ವಂ ಪಾವನಂ ಮಹತ್ ।
ಸಂಕ್ರಾಂತೇಃ ಪೂರ್ವದಿವಸೇ ನವಾಂ ಶಾಲಿಂ ಸುಕುಟ್ಟಿತಾಂ ।
ಪ್ರಾಸಾದಪೂರ್ವದೇಶೇ ಚ ಸ್ಥಾಪಯಿತ್ವಾಧಿವಾಸಯೇತ್ ॥ ೬ ॥
ನವೇನ ವಾಸಸಾವೇಷ್ಟ್ಯ ದೂರ್ವಾಸರ್ಷಪಪುಷ್ಪಕೈಃ ।
ಪೂಜಯಿತ್ವಾ ಮಂತ್ರಯೇದ್ವೈ ಕೃಷ್ಣಸ್ತ್ವಾಮಭಿರಕ್ಷತು ॥ ೭ ॥
ತಸ್ಮಿನ್ನೇವ ನಿಶಾಯಾಮೇ ವ್ಯತೀತೇ ಜಗದೀಶಿತುಃ ।
ಪ್ರತ್ಯರ್ಚಾಂ ಸನ್ನಿಧೌ ನೀತ್ವಾ ಭಾವಯೇದೇಕತಾಧಿಯಾ ॥ ೮ ॥
ಉಪಚಾರಾವಶಿಷ್ಟಾಭ್ಯಾಂ ಪೂಜಯೇದ್ವೈ ಸಮಾಹಿತಃ ।
ತತೋ ನಿರ್ಮಾಲ್ಯವಸನಮಾಲಾಮಸ್ಯಾಂ ವಿಧಾಪಯೇತ್ ॥ ೯ ॥
ಮಹಾಸಮೃದ್ಧ್ಯಾ ತಾಮರ್ಚಾಂ ತ್ರಿರ್ದೇವಾನ್ಭ್ರಮಯೇತ್ತತಃ ।
ಆಂದೋಲಿಕಾಯಾಮಾರೋಪ್ಯ ಪ್ರಾಸಾದದ್ವಾರಮಾನಯೇತ್ ॥ ೧೦ ॥
ತ್ರಿವಿಕ್ರಮಂ ತ್ರಿಕ್ರಮೇಣ ತ್ರೈಲೋಕ್ಯಕ್ರಮಣಂ ವಿಭುಂ ।
ವಿಡಂಬಯಂತಂ ತಾಂ ಲೀಲಾಂ ಪ್ರಾಸಾದಂ ಭ್ರಾಮಯೇಚ್ಚ ತಂ॥ ೧೧ ॥

---

೬. ಆ ಕರ್ಮಕ್ಕೆ ವಿಧಾನವನ್ನು ತಿಳಿಸುವೆನು. ಪರಮ ಪಾವನವೂ ಮಹತ್ತ್ವಪ್ರಾಪಕವೂ ಆದ ಅರ್ಚನ ವಿಧಿಯನ್ನು ಕೇಳಿರಿ. ಮಕರ ಸಂಕ್ರಮಣಕ್ಕೆ ಪೂರ್ವದಿವಸದಲ್ಲಿ ಕೈಯಿಂದ ಕುಟ್ಟಿ ಶುದ್ಧವಾದ ಹೊಸ ಅಕ್ಕಿಯನ್ನು ತೆಗೆದು ಕೊಂಡು ಪ್ರಾಸಾದದ ಪೂರ್ವ ದಿಗ್ಭಾಗದಲ್ಲಿ ರಾಶಿಯನ್ನು ಹಾಕಿ ಅದನ್ನು ಉತ್ತಮವಾದ ವಸ್ತ್ರದಿಂದ ಆಚ್ಛಾದಿಸಬೇಕು.

೭. ಇಂತು ನೂತನವಸ್ತ್ರದಿಂದ ಅದನ್ನು ಹೊದಿಸಿ ಎಳೆಯ ಗರಿಕೆ, ಸಾಸುವೆ ಮತ್ತು ಹೂವುಗಳಿಂದ ಪೂಜಿಸಿ "ಶ್ರೀ ಕೃಷ್ಣನು ನಿನ್ನನ್ನು ಸಂರಕ್ಷಿಸಲಿ" ಎಂಬುದಾಗಿ ಮಂತ್ರವನ್ನುಚ್ಚರಿಸಬೇಕು.

೮. ಆ ದಿನದಲ್ಲಿಯೇ ರಾತ್ರಿಯ ಒಂದು ಯಾಮವು ಕಳೆಯಲು ಜಗನ್ನಾಥನ ವಿಗ್ರಹವನ್ನು ಜಗನ್ನಾಥನ ಸಮೀಪಕ್ಕೆ ತೆಗೆದುಕೊಂಡು ಹೋಗಿ ಮೂರ್ತಿಗಳೆರಡನ್ನೂ ಏಕತ್ವಬುದ್ಧಿಯಿಂದಲೇ ಭಾವಿಸಬೇಕು.

೯. ಬಳಿಕ ಸಮಾಹಿತಮನಸ್ಕನಾಗಿ ಉಳಿದ ಉಪಚಾರಗಳಿಂದ ಅವುಗಳೆರಡನ್ನೂ ಪೂಜೆಮಾಡಬೇಕು. ಮತ್ತು ಪರಮಾತ್ಮನ ನಿರ್ಮಾಲ್ಯ ವಸ್ತ್ರವನ್ನೂ ಪುಷ್ಪಮಾಲೆಯನ್ನೂ ಆ ವಿಗ್ರಹಕ್ಕೆ ಹೊದಿಸಬೇಕು.

೧೦. ಅತ್ಯಂತ ವೈಭವದಿಂದ ಇತರ ದೇವತೆಗಳನ್ನೂ ಆ ವಿಗ್ರಹಕ್ಕೆ ಪ್ರದಕ್ಷಿಣೆಮಾಡಿಸಬೇಕು, ಮತ್ತು ಜಗನ್ನಾಥನ ವಿಗ್ರಹವನ್ನು ಉತ್ತಮವಾದ ಪಲ್ಲಕ್ಕಿಯಲ್ಲಿರಿಸಿ ಪ್ರಾಸಾದದ ಮಹಾದ್ವಾರದ ಬಳಿಗೆ ಕರೆದುತರಬೇಕು.

೧೧. ಹಿಂದೆ ವಾಮನಾವತಾರವನ್ನೆತ್ತಿ ಮೂರು ಪಾದಗಳಿಂದ ಮೂರು

ತ್ರಿರಂತೇ ಪುನರಂಕೇ ಚ ಸುಸಮ್ಯುದ್ಧ್ಯಾ ಶನೈಃ ಶನೈಃ ॥ ೧೨ ॥
ದೀಪಿಕಾಶತಸಂರುದ್ಧತಮಸೋಽವರಣಾಂತರೇ ।
ಛತ್ರಧ್ವಜಪತಾಕಾಭಿರ್ನೃತ್ಯವಾದಿತ್ರಗೀತಕೈಃ ॥ ೧೩ ॥
ತದ್ದರ್ಶನಪರಿಕ್ಷೀಣಪಾತಕಾನಾಂ ಮಹಾತ್ಮನಾಂ ।
ನ ಚ ಚಿಹ್ನಂ ಶರೀರೇಽಸ್ಯ ನವಾಂಗೇ ಭ್ರಮಣಂ ತತಃ ॥ ೧೪ ॥
ಅನುಯಾಂತಿ ತದಾ ಯೇ ತಂ ಮಹೇ ಯಾಂತಂ ತ್ರಿವಿಕ್ರಮಂ ।
ಲಭಂತೇ ವಾಜಿಮೇಧಸ್ಯ ಫಲಂ ತೇ ವೈ ಪದೇ ಪದೇ ॥ ೧೫ ॥
ಪ್ರಥಮಭ್ರಮಣಂ ದೃಷ್ಟ್ವಾ ಮುಚ್ಯತೇ ಪಂಚಪಾತಕೈಃ ।
ಮಲಿನೀಕರಣೈರ್ಮುಚ್ಯೇದ್ದ್ವಿತೀಯಂ ಭ್ರಮಣಂ ದ್ವಿಜಾಃ ॥ ೧೬ ॥
ಅಪಾತ್ರೀಕರಣೈರ್ದೃಷ್ಟ್ವಾ ತೃತೀಯಂ ಭ್ರಮಣಂ ಧ್ರುವಂ ।
ಉಪಪಾತಕಪಾಪೈಶ್ಚ ಚತುರ್ಥಂ ಮುಚ್ಯತೇ ತತಃ ॥ ೧೭ ॥

---

ಲೋಕಗಳನ್ನೂ ಆಕ್ರಮಣಮಾಡಿದ ಸರ್ವವ್ಯಾಪಿಯಾದ ಆತನ ಲೀಲೆಯನ್ನೇ ವಿಡಂಬನೆ ಮಾಡುತ್ತಿರುವಂತೆ ಆ ವಿಗ್ರಹವನ್ನು ಪ್ರಾಸಾದದಲ್ಲಿ ಪ್ರದಕ್ಷಿಣೆ ಮಾಡಿಸಬೇಕು.

೧೨–೧೩. ಇಂತು ಪಲ್ಲಕ್ಕಿಯಲ್ಲಿ ಮೂರು ಪ್ರದಕ್ಷಿಣೆಗಳನ್ನು ಮಾಡಿಸಿದ ಮೇಲೆ ಭಕ್ತನು ತಾನೇ ಆ ಪ್ರತಿಮೆಯನ್ನು ಕೈಗಳಲ್ಲಿ ತೆಗೆದುಕೊಂಡು ಮೆಲ್ಲ ಮೆಲ್ಲನೆ ಹೆಜ್ಜೆಗಳನ್ನು ಹಾಕುತ್ತ, ನೂರಾರು ದೀಪಗಳಿಂದ ಹೋಗಲಾಡಿಸಲ್ಪಟ್ಟ ಅಂಧಕಾರವುಳ್ಳ ಆ ಆವರಣದೊಳಗೆ ಛತ್ರ, ಧ್ವಜ, ಪತಾಕೆಗಳು, ನೃತ್ಯ, ವಾದ್ಯಘೋಷಗಳು, ಸಂಗೀತಗಳು ಮುಂತಾದ ವೈಭವಗಳಿಂದ ನಾಲ್ಕನೆಯ ಪ್ರದಕ್ಷಿಣೆಯನ್ನು ಮಾಡಿಸಬೇಕು.

೧೪. ಈ ಮಹೋತ್ಸವದ ದರ್ಶನದಿಂದ ಸಕಲ ಪಾತಕಗಳನ್ನೂ ಕಳೆದುಕೊಂಡ ಮಹಾತ್ಮರಿಗೆ ಲಿಂಗದೇಹವಾಗಲಿ ನವಾಂಗಸಹಿತವಾದ ಸ್ಥೂಲದೇಹವಲ್ಲಿ ಭ್ರಮಣವಾಗಲಿ ಇರುವುದಿಲ್ಲವು.

೧೫. ಈ ಮಹೋತ್ಸವದಲ್ಲಿ ಪ್ರದಕ್ಷಿಣೆಯನ್ನು ಮಾಡುತ್ತಿರುವ ತ್ರಿವಿಕ್ರಮ ಸ್ವಾಮಿಯನ್ನು ಯಾರು ಹಿಂಬಾಲಿಸುವರೊ, ಅವರು ಒಂದೊಂದು ಹೆಜ್ಜೆಗೂ ಅಶ್ವಮೇಧಯಜ್ಞದ ಫಲವನ್ನು ಗಳಿಸುವರು.

೧೬. ಮೊದಲನೆಯ ಪ್ರದಕ್ಷಿಣೆಯನ್ನು ನೋಡಲು ಮನುಷ್ಯನು ಪಂಚ ಮಹಾ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವನು. ಬ್ರಾಹ್ಮಣರಿರಾ! ಎರಡನೆಯದನ್ನು ನೋಡಲು ದೇಹಚಿತ್ತಗಳನ್ನು ಮಲಿನಮಾಡುವ ಪದಾರ್ಥಗಳ ಸಹವಾಸವು ಕಳೆದುಹೋಗುವುದು.

೧೭. ಮೂರನೆಯ ಪ್ರದಕ್ಷಿಣೆಯ ದರ್ಶನದಿಂದ ಖಂಡಿತವಾಗಿಯೂ

ಪುನಃ ಪ್ರಭಾತೇ ದೇವೇಶಂ ಪ್ರಲಿಂಪೇದ್ಗಂಧಚಂದನೈಃ ।
ವಸ್ತ್ರಾಲಂಕಾರಮಾಲ್ಯೈಶ್ಚ ಭೂಷಯಿತ್ವಾ ಯಥಾವಿಧಿ ॥ ೧೮ ॥
ಪೂಜಯೇದುಪಚಾರೈಸ್ತಂ ಯಥಾಶಕ್ತಿ ಸಮೃದ್ಧಿಮತ್ ।
ನೀರಾಜಯಿತ್ವಾ ದೇವೇಶಂ ತಂದುಲಾನಧಿವಾಸಿತಾನ್ ॥ ೧೯ ॥
ಸ್ಥಾಲೀಷು ಶಾತಕುಂಭಾಸು ದಧಿಖಂಡಾಜ್ಯಮಿಶ್ರಿತಾನ್ ।
ಸನಾರಿಕೇಲಶಕಲಾನ್ಶೃಂಗಬೇರದಲಾನ್ವಿತಾನ್ ॥ ೨೦ ॥
ಪ್ರಾಸಾದಂ ತ್ರಿಃ ಪರಿಭ್ರಮ್ಯ ನಯೇದ್ದೇವಸಮೀಪತಃ ।
ಪಙ್ಕ್ತಿಶಃ ಸ್ಥಾಪಯೇದಗ್ರೇ ಗಂಧಪುಷ್ಪಾಕ್ಷತಾನ್ವಿತಾನ್ ॥ ೨೧ ॥
ಜೀವನಂ ಸರ್ವಭೂತಾನಾಂ ಜನಕಸ್ತ್ವಂ ಜಗತ್ಪ್ರಭೋ ।
ತ್ವನ್ಮಯಾಃ ಶಾಲಯೋ ಹ್ಯೇತೇ ತ್ವಯೈವ ಜನಿತಾಃ ಪ್ರಭೋ ॥ ೨೨ ॥
ಲೋಕಾನುಗ್ರಹಣಾರ್ಥಾಯ ಗೃಹೀತೋಚಿತವಿಗ್ರಹ ।
ತವ ಪ್ರೀತ್ಯೈ ಕೃತಾನೇತಾನ್ಗೃಹಾಣ ಪರಮೇಶ್ವರ ॥ ೨೩ ॥

---

ಅಪಾತ್ರರಲ್ಲಿ ದಾನಧರ್ಮಗಳನ್ನು ಮಾಡಿದ ಪಾತಕವು ನಾಶವಾಗುವುದು. ನಾಲ್ಕನೆಯ ಪ್ರದಕ್ಷಿಣೆಯನ್ನು ನೋಡುವುದರಿಂದ ಮನುಷ್ಯನು ಉಪಪಾತಕಗಳೇ ಮೊದಲಾದ ಸಕಲ ಕಲ್ಮಷಗಳಿಂದಲೂ ದೂರನಾಗಿ ಮೋಕ್ಷವನ್ನು ಪಡೆಯುವನು.

೧೮. ಮಾರನೆಯ ದಿನದ ಸೂರ್ಯೋದಯವಾಗಲು ದೇವೇಶ್ವರನನ್ನು ದಿವ್ಯಗಂಧಚಂದನಾದಿಗಳಿಂದ ಲೇಪನಮಾಡಿ ಯಥಾವಿಧಿಯಾಗಿ ವಸ್ತ್ರಗಳಿಂದಲೂ ಆಭರಣಗಳಿಂದಲೂ, ಪುಷ್ಪಮಾಲೆಗಳಿಂದಲೂ ಪೂಜಿಸಬೇಕು

೧೯–೨೨. ಮತ್ತು ತನ್ನ ಶಕ್ತ್ಯನುಸಾರವಾಗಿ ಸಲಕರಣೆಗಳಿಂದ ಉಪಚಾರಗಳನ್ನುಮಾಡಿ ದೇವದೇವನ ಪೂಜೆಯನ್ನು ಮಾಡಬೇಕು. ಬಳಿಕ ಆತನಿಗೆ ಉತ್ತರನೀರಾಜನವನ್ನು ಬೆಳಗಿಸಿ ಚಿನ್ನದ ಪಾತ್ರೆಗಳನ್ನು ಅಕ್ಕಿಯ ತಟ್ಟೆಗಳಲ್ಲಿರಿಸಿ ಅವುಗಳಲ್ಲಿ ಮೊಸರು, ಬೆಣ್ಣೆ, ತುಪ್ಪ, ಮುಂತಾದುವುಗಳನ್ನೂ, ತೆಂಗಿನಕಾಯಿಯ ಹೋಳುಗಳನ್ನೂ, ಶುಂಠಿಯ ಚೂರುಗಳನ್ನೂ ತೆಗೆದುಕೊಂಡು ಪ್ರಾಸಾದಕ್ಕೆ ಮೂರು ಪ್ರದಕ್ಷಿಣೆಗಳನ್ನುಮಾಡಿ ದೇವನ ಸನ್ನಿಧಿಗೆ ಹೋಗಿ ಅವುಗಳನ್ನು ಗಂಧ, ಪುಷ್ಪ, ಅಕ್ಷತೆಗಳಿಂದ ಪೂಜಿಸಿ ದೇವರ ಮುಂದೆ ಸಾಲು ಸಾಲಾಗಿ ಸ್ಥಾಪನೆ ಮಾಡಬೇಕು. ಲೋಕೇಶ್ವರನೆ! ನೀನೇ ಸಕಲ ಪ್ರಾಣಿಗಳಿಗೂ ಪ್ರಾಣನೂ, ಪಿತಾಮಹನೂ ಆಗಿರುವೆ. ಈ ಶಾಲಿಧಾನ್ಯಗಳೂ ನಿನ್ನ ಅಂಶದಿಂದ ಕೂಡಿದುವೇ ಆಗಿರುವುವು. ಸರ್ವಸ್ವಾಮಿಯಾದ ನಿನ್ನಿಂದಲೇ ಇವುಗಳೂ ಜನಿಸಿರುವುವು.

೨೩–೨೫. ನೀನು ಲೋಕಗಳನ್ನು ಉದ್ಧರಿಸುವುದಕ್ಕಾಗಿಯೇ ಕಾಲೋಚಿತಗಳಾದ ಅವತಾರಗಳನ್ನು ತಳೆಯುತ್ತಿರುವೆ: ನಿನ್ನನ್ನು ಸಂತೋಷಗೊಳಿಸು

**ತ್ವಯಿ ತುಷ್ಟೇ ಜಗತ್ಸರ್ವಮನೇನ ಪ್ರಭವಿಷ್ಯತಿ ।**
**ಸ್ವಾಹಾಕಾರಸ್ವಧಾಕಾರವಷಟ್ಕಾರಾ ದಿವೌಕಸಾಂ ॥ ೨೪ ॥**
**ಆಪ್ಯಾಯನಾ ಭವಿಷ್ಯಂತಿ ತೈರೇವಾಪ್ಯಾಯಿತಂ ಜಗತ್ ।**
**ರಕ್ಷ ಸರ್ವಂ ಜಗನ್ನಾಥ ತ್ವನ್ಮಯಂ ಸಚರಾಚರಂ ॥ ೨೫ ॥**
**ಇತಿ ಸಂಪ್ರಾರ್ಥ್ಯ ದೇವೇಶಂ ಶಾಲಿಸ್ತಂಬಾನ್ನಿವೇದಯೇತ್ ।**
**ತನ್ಮಯಾನ್ಭಕ್ಷ್ಯಭೋಜ್ಯಾಂಶ್ಚ ದಧಿಕುಂಭಾನ್ಸುಗಂಧಿನಃ ॥ ೨೬ ॥**
**ಕರ್ಪೂರಖಂಡಮರಿಚಚೂರ್ಣಯುಕ್ತಾನ್ನಿವೇದಯೇತ್ ।**
**ಬ್ರಾಹ್ಮಣಾನ್ಪೂಜಯೇದ್ಭಕ್ತ್ಯಾ ದೇವದೇವಪುರಃಸ್ಥಿತಾನ್ ॥ ೨೭ ॥**
**ತೇಭ್ಯಃ ಪ್ರದದ್ಯಾದ್ಭಕ್ತ್ಯಾ ತಾನ್ಶಾಲ್ಯಾದೀನ್ಭಗವದ್ಧಿಯಾ ।**
**ಇಮಂ ಮಹೋತ್ಸವಂ ವಿಪ್ರಾಃ ಪುರಾಕಲ್ಪೇ ಚ ಕಶ್ಯಪಃ ॥ ೨೮ ॥**
**ಸ ಚ ಸೃಷ್ಟಿಂ ವಿನಿರ್ಮಾಯ ಭಗವತ್ಪ್ರೀತಯೇಽಕರೋತ್ ।**
**ಯೇ ಪಶ್ಯಂತ್ಯುತ್ಸವಂ ಚೈನಂ ಕಶ್ಯಪೇನ ವಿನಿರ್ಮಿತಂ ॥ ೨೯ ॥**

---

ವುದಕ್ಕಾಗಿಯೇ ಮಾಡಿರುವ ಈ ಪರಿಚರ್ಯೆಗಳೆಲ್ಲವನ್ನೂ ಪರಮೇಶ್ವರನಾದ ನೀನು ಸ್ವೀಕರಿಸು. ನೀನೊಬ್ಬನು ಸಂತುಷ್ಟನಾಗಲು ನಿನ್ನ ಸಂತೋಷದಿಂದ ಈ ಜಗತ್ತೆಲ್ಲವೂ ಸಂತೋಷಗೊಳ್ಳುವುದು. ನಿನ್ನ ಅನುಗ್ರಹದಿಂದಲೇ ದೇವಲೋಕ ವಾಸಿಗಳಾದ ದೇವತೆಗಳಿಗೂ ಪಿತೃಗಳಿಗೂ ಸ್ವಾಹಾಕಾರಗಳೂ, ಸ್ವಧಾಕಾರ ಗಳೂ, ವಷಟ್ಕಾರಗಳೂ ಮನಸ್ಸಮಾಧಾನವನ್ನುಂಟುಮಾಡುವುವು. ಅವರಿಂದಲೇ ಲೋಕವೆಲ್ಲವೂ ತೃಪ್ತಿಯನ್ನು ಹೊಂದುವುದು. ಜಗನ್ನಾಥನೆ! ನಿನ್ನ ವಿಭೂತಿ ರೂಪವಾದ ಚರಾಚರಾತ್ಮಕವಾದ ಸಕಲ ಬ್ರಹ್ಮಾಂಡವನ್ನೂ ಸಂರಕ್ಷಿಸು.

೨೬. ಇಂತೆಂದು ಭಗವಂತನನ್ನು ಪ್ರಾರ್ಥಿಸಿ ಆತನಿಗೆ ಭತ್ತದ ತೆನೆಗಳನ್ನೂ, ಅಕ್ಕಿಯಿಂದ ಮಾಡಿದ ಭಕ್ಷ್ಯಭೋಜ್ಯಗಳನ್ನೂ ಸುಗಂಧಸಹಿತಗಳಾದ ಮೊಸರಿನ ಭಾಂಡಗಳನ್ನೂ ನೈವೇದ್ಯಮಾಡಬೇಕು.

೨೭. ಪಚ್ಚಕರ್ಪೂರಚೂರ್ಣವು, ಮೆಣಸು, ಮುಂತಾದುವುಗಳಿಂದ ಕೂಡಿದ ಪದಾರ್ಥಗಳನ್ನೂ ಪರಮಾತ್ಮನಿಗರ್ಪಿಸಿ ದೇವದೇವನಾದ ಆತನ ಸಮ್ಮುಖ ದಲ್ಲಿಯೇ ಕುಳಿತಿರುವ ಬ್ರಾಹ್ಮಣೋತ್ತಮರಿಗೆ ಭಕ್ತಿಯಿಂದ ಭೋಜನವನ್ನು ಉತ್ತಮ ರೀತಿಯಿಂದ ಮಾಡಿಸಬೇಕು.

೨೮–೩೦. ಅವರಲ್ಲಿಯೇ ಭಗವಂತನು ಅಂತರ್ಯಾಮಿಯಾಗಿರುವನೆಂಬ ದೃಢನಿಶ್ಚಯದಿಂದ ಆ ಅಕ್ಕಿಯೇ ಮೊದಲಾದ ಸಕಲ ಸಂಭಾರಗಳನ್ನೂ ಆ ಬ್ರಾಹ್ಮಣರಿಗೇ ವಿಭಾಗಮಾಡಬೇಕು. ಎಲೈ ಬ್ರಾಹ್ಮಣರಿರಾ! ಈ ಮಹೋ ತ್ಸವವನ್ನು ಪೂರ್ವಕಲ್ಪದಲ್ಲಿ ಕಶ್ಯಪಬ್ರಹ್ಮನು ಜಗತ್ಸೃಷ್ಟಿಯನ್ನುಮಾಡಿದ ಕಾಲದಲ್ಲಿ ಶ್ರೀಮನ್ನಾರಾಯಣನನ್ನು ಸಂತೋಷಗೊಳಿಸಲು ಮಾಡಿದನು.

ಸರ್ವದಾ ಸರ್ವಕಾಮೈಸ್ತೇ ಪೂರ್ಣಾಃ ಶೋಚಂತಿ ನ ದ್ವಿಜಾಃ ।
ಉಷಿತ್ವಾ ತ್ರಿದಶೈಸ್ಸಾರ್ಧಂ ಕಲ್ಪಾಂತೇ ಮೋಕ್ಷಮಾಪ್ನುಯುಃ ॥ ೩೦ ॥
ಮಹಾನಸಸ್ಯ ಸಂಸ್ಕಾರಂ ವಹ್ನೇಃ ಸಂಸ್ಕಾರಮೇವ ಚ ।
ಅತ್ರಾಪಿ ಕುರ್ಯಾನ್ಮುನಯೋ ವೈಶ್ವದೇವಂ ದಿನೇ ದಿನೇ ॥ ೩೧ ॥
ಆಧಾನಸಂಸ್ಕೃತೇ ವಹ್ನೌ ಭಗವದ್ಭುಕ್ತಯೇ ರಮಾ ।
ಪ್ರತ್ಯಹಂ ಪಾಕಮಾಧತ್ತೇ ದಿವ್ಯರೂಪಾ ತಿರೋಹಿತಾ ॥ ೩೨ ॥
ಅಸ್ಮಿನ್ಮಹಾಪುಣ್ಯತಮ ಉತ್ಸವೇ ಪರಮಾತ್ಮನಃ ।
ತುಲಾಪುರುಷದಾನಾದಿ ಕೋಟಿಕೋಟಿಗುಣಂ ಭವೇತ್ ॥ ೩೩ ॥
ಸ್ನಾನಂ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ಸರ್ವಮಕ್ಷಯತಾಂ ಯಾತಿ ಹ್ಯುತ್ಸವೇ ಚೋತ್ತರಾಯಣೇ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಮಕರಸಂಕ್ರಮವಿಧಿವರ್ಣನಂ"ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

ಕಶ್ಯಪನಿಂದ ಪ್ರಚಾರಕ್ಕೆ ತರಲ್ಪಟ್ಟ ಈ ಉತ್ಸವವನ್ನು ಯಾರು ಭಕ್ತಿಯಿಂದ ನೋಡುವರೊ, ಅವರು ಯಾವಾಗಲೂ ಸಕಲಾಭೀಷ್ಟಗಳನ್ನು ಪಡೆದು ಎಂದಿಗೂ ದುಃಖಗಳಿಗೊಳಗಾಗುವುದಿಲ್ಲ. ಮತ್ತು ದೇವತೆಗಳೊಡನೆ ಸ್ವರ್ಗಲೋಕದಲ್ಲಿ ವಾಸಮಾಡಿ ಕಲ್ಪದ ಅಂತ್ಯದಲ್ಲಿ ಮೋಕ್ಷವನ್ನು ಪಡೆಯುವರು.

೩೧. ಎಲೈ ಮಹಾ ಮುನಿಗಳಿರಾ! ಈ ವ್ರತದಲ್ಲಿಯೂ ಪಾಕಶಾಲೆಯ ಶುದ್ಧಿಯನ್ನೂ, ಅಗ್ನಿಯ ಸಂಸ್ಕಾರವನ್ನೂ ಪ್ರತಿನಿತ್ಯವೂ ವೈಶ್ವದೇವಾಗ್ನಿಯ ಪರಿಚರ್ಯೆಯನ್ನೂ ದೀಕ್ಷಿತನು ಸಾಂಗವಾಗಿ ಮಾಡುತ್ತಿರಬೇಕು.

೩೨. ಇಂತು ಆಧಾನಸಂಸ್ಕಾರವನ್ನು ಪಡೆದ ಅಗ್ನಿಯಲ್ಲಿ ದಿವ್ಯ ಸುಂದರಿಯಾದ ಶ್ರೀ ಮಹಾ ಲಕ್ಷ್ಮಿಯು ಭಗವಂತನ ಉಪಹಾರಕ್ಕಾಗಿ ಅಂತರ್ಹಿತಳಾಗಿಯೇ ಪ್ರತಿದಿನವೂ ಪಾಕವನ್ನು ಸಿದ್ಧಗೊಳಿಸುತ್ತಿರುವಳು.

೩೩–೩೪. ಉತ್ತರಾಯಣ ಪುಣ್ಯಕಾಲದ ಪರಮಪಾವನವಾದ ಈ ಮಹೋತ್ಸವದ ಸಮಯದಲ್ಲಿ ಭಗವತ್ಪ್ರೀತಿಗಾಗಿ ಮಾಡಲ್ಪಟ್ಟ ಪುರುಷತುಲಾಭಾರ ದಾನವೇ ಮೊದಲಾದ ಸತ್ಕರ್ಮಗಳೆಲ್ಲವೂ ಕೋಟಿಕೋಟಿಗುಣಿತವಾದ ಫಲವನ್ನು ಕೊಡುವುವು. ಮಕರಸಂಕ್ರಮಣೋತ್ಸವದ ಕಾಲದಲ್ಲಿ ಮಾಡಿದ ಸ್ನಾನ, ದಾನ, ತಪಸ್ಸು, ಹೋಮ, ವೇದಾಧ್ಯಯನ, ಪಿತೃತರ್ಪಣಗಳು ಮುಂತಾದ ಕರ್ಮಗಳೆಲ್ಲವೂ ಅಕ್ಷಯಫಲದಾಯಕಗಳಾಗುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಮಕರಸಂಕ್ರಾಂತಿವಿಧಿವರ್ಣನ"ವೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಚತ್ವಾರಿಂಶೋಽಧ್ಯಾಯಃ

## ದೋಲಾರೋಹಣವರ್ಣನಂ

ಜೈಮಿನಿರುವಾಚ :—

**ಫಾಲ್ಗುನೇ ಮಾಸಿ ಕುರ್ವೀತ ದೋಲಾರೋಹಣಮುತ್ತಮಂ ।**
**ಯತ್ರ ಕ್ರೀಡತಿ ಗೋವಿಂದೋ ಲೋಕಾನುಗ್ರಹಣಾಯ ವೈ ॥ ೧ ॥**
**ಪ್ರತ್ಯರ್ಚಾಂ ದೇವದೇವಸ್ಯ ಗೋವಿಂದಾಖ್ಯಾಂ ತು ಕಾರಯೇತ್ ।**
**ಪ್ರಾಸಾದಪುರತಃ ಕುರ್ಯಾತ್ಷೋಡಶಸ್ತಂಭಮುಚ್ಛ್ರಿತಂ ॥ ೨ ॥**
**ಚತುರಸ್ರಂ ಚತುರ್ದ್ವಾರಂ ಮಂಡಪಂ ವೇದಿಕಾನ್ವಿತಂ ।**
**ಚಾರುಚಂದ್ರಾತಪಂ ಮಾಲ್ಯಚಾಮರಧ್ವಜಶೋಭಿತಂ ॥ ೩ ॥**
**ಭದ್ರಾಸನಂ ವೇದಿಕಾಯಾಂ ಶ್ರೀಪರ್ಣೀಕಾಷ್ಠನಿರ್ಮಿತಂ ।**
**ಫಲ್ಗೂತ್ಸವಂ ಪ್ರಕುರ್ವೀತ ಪಂಚಾಹಾನಿ ತ್ರ್ಯಹಾನಿ ವಾ ॥ ೪ ॥**
**ಫಾಲ್ಗುನ್ಯಾಂ ಪೂರ್ವತೋ ವಿಪ್ರಾಶ್ಚತುರ್ದಶ್ಯಾಂ ನಿಶಾಮುಖೇ ।**
**ವಹ್ನ್ಯುತ್ಸವಂ ಪ್ರಕುರ್ವೀತ ದೋಲಾಮಂಡಪಪೂರ್ವತಃ ॥ ೫ ॥**

---

### ಕನ್ನಡದ ಅನುವಾದ

#### ದೋಲಾರೋಹಣೋತ್ಸವ ವರ್ಣನ

೧. ಜೈಮಿನಿಯು ನಿರೂಪಿಸುತ್ತಾನೆ :—ಫಾಲ್ಗುನಮಾಸದಲ್ಲಿ ಸರ್ವೋತ್ತಮವೆನಿಸಿದ ದೋಲಾಹರಣ ಮಹೋತ್ಸವವನ್ನು ನಡೆಸಬೇಕು. ಆ ಕಾಲದಲ್ಲಿ ಗೋವಿಂದನು ಲೋಕಾನುಗ್ರಹಕ್ಕೋಸ್ಕರ ಕ್ರೀಡಿಸುತ್ತಿರುವನು.

೨. ಗೋವಿಂದರೂಪಿಯಾದ ದೇವೋತ್ತಮನ ಪ್ರತಿಮೆಯೊಂದನ್ನು ಉತ್ತಮ ರೀತಿಯಿಂದ ಮಾಡಿಸಿ ಜಗನ್ನಾಥನ ಪ್ರಾಸಾದದ ಮುಂದುಗಡೆಯಲ್ಲಿ ಹದಿನಾರು ಕಂಬಗಳನ್ನೊಳಗೊಂಡ ಉನ್ನತವಾದ ಮಂಟಪವನ್ನು ನಿರ್ಮಾಣ ಮಾಡಬೇಕು.

೩. ಆ ಮಂಟಪವು ಚೌಕವಾಗಿದ್ದು ನಾಲ್ಕು ದಿಕ್ಕುಗಳಿಗೂ ನಾಲ್ಕು ಹೆಬ್ಬಾಗಿಲುಗಳಿಂದಲೂ ಕೂಡಿ ಮಧ್ಯದಲ್ಲಿ ಜಗುಲಿಯುಳ್ಳದ್ದಾಗಿ ಚಂದ್ರಕಾಂತ ಶಿಲೆಯಲ್ಲಿ ಕಟ್ಟಲ್ಪಟ್ಟು ಪೂಮಾಲೆಗಳಿಂದಲೂ, ಚಾಮರಗಳಿಂದಲೂ, ಧ್ವಜ ಪತಾಕೆಗಳಿಂದಲೂ ಶೋಭಿಸುತ್ತಿರಬೇಕು.

೪. ಮಧ್ಯೆಯಿರುವ ವೇದಿಕೆಯಮೇಲೆ ಕಮಲಕಾಷ್ಠಗಳಿಂದ ನಿರ್ಮಿತವಾದ ಭದ್ರಾಸನವನ್ನಿರಿಸಿ ಐದು ದಿನಗಳಾಗಲಿ ಮೂರು ದಿನಗಳಾಗಲಿ ಫಾಲ್ಗುನೋತ್ಸವವನ್ನು ನೆರವೇರಿಸಬೇಕು.

೫. ಬ್ರಾಹ್ಮಣರಿರಾ! ಫಾಲ್ಗುನಮಾಸದ ಪೌರ್ಣಮಿಯ ಹಿಂದಿನ

**ಗೋವಿಂದಾನುಗೃಹೀತಂ ತು ಯಾತ್ರಾಂಗಂ ತತ್ಪ್ರಕೀರ್ತಿತಂ ।**
**ಆಚಾರ್ಯವರಣಂ ಕೃತ್ವಾ ವಹ್ನಿಂ ನಿರ್ಮಥನೋದ್ಭವಂ ॥ ೬ ॥**
**ಭೂಮಿಂ ಸಂಸ್ಕೃತ್ಯ ವಿಧಿವತ್ತೃಣರಾಶಿಂ ಮಹೋಚ್ಛ್ರಯಂ ।**
**ಸುಸಮಂ ಕಾರಯಿತ್ವಾ ತು ವಹ್ನಿಂ ತತ್ರ ವಿನಿಕ್ಷಿಪೇತ್ ॥ ೭ ॥**
**ಪೂಜಯಿತ್ವಾ ವಿಧಾನೇನ ಕೂಶ್ಮಾಂಡವಿಧಿನಾ ಹುನೇತ್ ।**
**ಗೋವಿಂದಂ ಪೂಜಯಿತ್ವಾ ತು ಭ್ರಾಮಯೇತ್ಸ ತತೋ ವಿಭುಂ ।**
**ಯತ್ನಾತ್ತಂ ರಕ್ಷಯೇದ್ವಹ್ನಿಂ ಯಾವದ್ಯಾತ್ರಾ ಸಮಾಪ್ಯತೇ ॥ ೮ ॥**
**ಪ್ರಾತರ್ಯಾಮೇ ಚತುರ್ದಶ್ಯಾಂ ಗೋವಿಂದಪ್ರತಿಮಾಂ ಶುಭಾಂ ॥ ೯ ॥**
**ವಾಸಯಿತ್ವಾ ಹರೇರಗ್ರೇ ಪೂಜಯೇತ್ಪುರುಷೋತ್ತಮಂ ।**
**ಉಪಚಾರಾವಶಿಷ್ಟೈಸ್ತು ಪ್ರತ್ಯರ್ಚಾಮಪಿ ಪೂಜಯೇತ್ ॥ ೧೦ ॥**
**ತತೋಽವರೋಪ್ಯ ವಸನಂ ಮಾಲಾಂ ಚ ದ್ವಿಜಸತ್ತಮಾಃ ।**
**ಅರ್ಚಾಯಾಂ ವಿನ್ಯಸೇನ್ಮಂತ್ರೀ ಪರಂ ಜ್ಯೋತಿರ್ವಿಭಾವಯನ್ ॥ ೧೧ ॥**

---

ಚತುರ್ದಶಿಯ ಸಾಯಂಕಾಲದಲ್ಲಿ ದೋಲಾಮಂಟಪದ ಪೂರ್ವದಿಕ್ಕಿನಲ್ಲಿ ಅಗ್ನಿದೇವನ ಉತ್ಸವವನ್ನು ಮಾಡಬೇಕು.

೬. ಈ ಆಗ್ನ್ಯಾಧಾನ ಕಾರ್ಯವೂ ಗೋವಿಂದನಿಗೆ ಪ್ರೀತಿಕಾರಕವಾಗಿ ಉತ್ಸವದ ಅಂಗವಾಗಿ ಪರಿಗಣಿಸಲ್ಪಟ್ಟಿರುವುದು. ಮೊದಲು ಉತ್ತಮನಾದ ಬ್ರಾಹ್ಮಣನೊಬ್ಬನನ್ನು ಆಚಾರ್ಯನಾಗಿ ಸ್ವೀಕರಿಸಿ ಆತನ ಕೈಯಲ್ಲಿ ಅರಣಿ ಕಾಷ್ಠಗಳ ನಿರ್ಮಥನದಿಂದ ಅಗ್ನಿಯನ್ನು ಸಂಪಾದಿಸಬೇಕು.

೭–೮. ಕಲ್ಪದಲ್ಲಿ ಹೇಳಿರುವಂತೆ ಭೂಮಿಯನ್ನು ಸಂಶೋಧಿಸಿ ಅದರಲ್ಲಿ ಮಹಾ ಪವಿತ್ರವಾದ ಹುಲ್ಲಿನ ರಾಶಿಯನ್ನು ಸಮವಾಗಿ ವಿಸ್ತರಿಸಿ ಬಳಿಕ ಅಗ್ನಿಯನ್ನು ಅದರಲ್ಲಿಡಬೇಕು. ವಿಧಾನೋಕ್ತವಾಗಿ ಅಗ್ನಿಯನ್ನು ಪೂಜಿಸಿ ಕೂಶ್ಮಾಂಡ ಸೂಕ್ತಾದಿಗಳಿಂದ ವಿಧಿಹೋಮಗಳನ್ನು ಮಾಡಬೇಕು. ಬಳಿಕ ಗೋವಿಂದನನ್ನು ಪೂಜಿಸಿ ಸ್ವಾಮಿಯನ್ನು ಅಲ್ಲಿಂದ ಕದಲಿಸಬೇಕು. ಮತ್ತು ಮಹೋತ್ಸವವು ಸಂಪೂರ್ಣವಾಗುವವರೆವಿಗೂ ಜಾಗರೂಕತೆಯಿಂದ ಆ ಯಜ್ಞೇಶ್ವರನನ್ನು ರಕ್ಷಿಸುತ್ತಿರಬೇಕು.

೯–೧೦. ಚತುರ್ದಶೀ ದಿವಸದ ಪ್ರಾತಃಕಾಲದ ಮೊದಲನೆಯ ಯಾಮದಲ್ಲಿ ಸರ್ವಲಕ್ಷಣಲಕ್ಷಿತವಾದ ಗೋವಿಂದ ಪ್ರತಿಮೆಯನ್ನು ಉತ್ತಮ ವಸ್ತ್ರದಿಂದಲಂಕರಿಸಿ ಜಗನ್ನಾಥನ ಸಮ್ಮುಖದಲ್ಲಿರಿಸಿ ಪುರುಷೋತ್ತಮನನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಪೂಜೆಮಾಡಿ ಮಿಕ್ಕ ದ್ರವ್ಯಗಳಿಂದ ಆ ಪ್ರತಿಮೆಯನ್ನೂ ಪೂಜಿಸಬೇಕು.

೧೧. ಬಳಿಕ ಪುರೋಹಿತನು ಪುರುಷೋತ್ತಮನ ವಿಗ್ರಹದಿಂದ ವಸ್ತ್ರ

**ತತಃ ಸಾ ಪ್ರತಿಮಾ ಸಾಕ್ಷಾಜ್ಜಾಯತೇ ಪುರುಷೋತ್ತಮಃ ।**
**ರತ್ನಾಂದೋಲಿಕಯಾ ತಾಂ ವೈ ನಯೇತ್ಸ್ನಾನಸ್ಯ ಮಂಡಪಂ ॥ ೧೨ ॥**
**ತತ್ರ ನಾನಾತೂರ್ಯನಾದೈಃ ಶಂಖಧ್ವನಿಪುರಃಸರಂ ।**
**ಜಯಶಬ್ದೈಸ್ತಥಾ ಸ್ತೋತ್ರೈಃ ಪುಷ್ಪವೃಷ್ಟಿಭಿರೇವ ಚ ॥ ೧೩ ॥**
**ಛತ್ರಧ್ವಜಪತಾಕಾಭಿಶ್ಚಾಮರೈರ್ವ್ಯಜನೈಸ್ತಥಾ ।**
**ನಿರಂತರಂ ದೀಪಿಕಾಭಿಸ್ತದಾ ಕುರ್ಯಾನ್ಮಹೋತ್ಸವಂ ॥ ೧೪ ॥**
**ಆಗಚ್ಛಂತಿ ತದಾ ದೇವಾಃ ಪಿತಾಮಹಪುರೋಗಮಾಃ**
**ದ್ರಷ್ಟುಂ ಚರ್ಷಿಗಣೈಃ ಸಾರ್ಧಂ ಗೋವಿಂದಸ್ಯ ಮಹೋತ್ಸವಂ ॥ ೧೫ ॥**
**ಭದ್ರಾಸನೇಽಧಿವಾಸ್ಯೈವ ಪೂಜಯೇದುಪಚಾರಕೈಃ ।**
**ಮಹಾಸ್ನಾನಸ್ಯ ವಿಧಿನಾ ಸ್ನಪನಂ ತಸ್ಯ ಕಾರಯೇತ್ ॥ ೧೬ ॥**
**ಪಂಚಾಮೃತೈಶ್ಚ ಸರ್ವೈಶ್ಚ ತೇಷಾಮನ್ಯತಮೇನ ವಾ ।**
**ಸ್ನಾನಾಂತೇ ಗಂಧತೋಯೇನ ಶ್ರೀಸೂಕ್ತೇನಾಭಿಷೇಚಯೇತ್ ॥ ೧೭ ॥**

---

ವೊಂದನ್ನೂ ಪುಷ್ಪಮಾಲೆಯೊಂದನ್ನೂ ತೆಗೆದುಕೊಂಡು ಪರಂಜ್ಯೋತಿಯಾದ ಶ್ರೀ ಹರಿಯನ್ನೇ ಸ್ಮರಿಸುತ್ತ ಅವುಗಳನ್ನು ಆ ಪ್ರತಿಮೆಗೆ ಅಲಂಕರಿಸಬೇಕು.

೧೨. ಅದರಿಂದ ಆ ಪ್ರತಿಮೆಯು ಸಾಕ್ಷಾತ್ತಾಗಿ ಪುರುಷೋತ್ತಮನ ನಿವಾಸವೇ ಆಗುವುದು. ಅದನ್ನು ರತ್ನಮಯವಾದ ಪಲ್ಲಕ್ಕಿಯಲ್ಲಿ ಕೂಡಿಸಿ ಸ್ನಾನಮಂಟಪಕ್ಕೆ ಕರೆದುಕೊಂಡು ಹೋಗಬೇಕು.

೧೩–೧೪. ಅಲ್ಲಿ ಬಹು ವಿಧಗಳಾದ ಮಂಗಳವಾದ್ಯಗಳು ಮೊಳಗುತ್ತಿರಲು ಶಂಖಗಳು ಧ್ವನಿಗೈಯ್ಯುತ್ತಿರಲು, ನೆರೆದಿರುವ ಬ್ರಾಹ್ಮಣರು ಜಯಕಾರಗಳನ್ನೂ, ಸ್ತೋತ್ರಪಾಠಗಳನ್ನೂ ಹೇಳುತ್ತ ಪುಷ್ಪಾಂಜಲಿಗಳನ್ನೆರಚುತ್ತಿರಲು, ಛತ್ರ, ಧ್ವಜ, ಪತಾಕೆಗಳು, ಚಾಮರಗಳು, ಬೀಸಣಿಗೆಗಳಿಂದಲೂ ಅಖಂಡದೀಪಗಳಿಂದಲೂ ಮಂಟಪದಲ್ಲಿ ವೈಭವದ ಮಹೋತ್ಸವವನ್ನು ನೆರವೇರಿಸಬೇಕು.

೧೫. ಈ ಗೋವಿಂದ ಮಹೋತ್ಸವವನ್ನು ನೋಡಲು ಬ್ರಹ್ಮದೇವನೇ ಮೊದಲಾದ ಸಕಲ ದೇವತೆಗಳೂ ಮಹರ್ಷಿ ಸಮೂಹಗಳೊಡನೆ ಆ ಸಮಯದಲ್ಲಿ ಅಲ್ಲಿ ಬಂದು ನೆರೆದಿರುವರು.

೧೬–೧೭. ಬಳಿಕ ಗೋವಿಂದನನ್ನು ಪಲ್ಲಕ್ಕಿಯಿಂದಿಳಿಸಿ ಉತ್ತಮಾಸನದಲ್ಲಿ ಕುಳ್ಳಿರಿಸಿ ಸಕಲೋಪಚಾರಗಳಿಂದಲೂ ಪೂಜೆಯನ್ನು ಮಾಡಿ ಮಹಾಭಿಷೇಕದ ವಿಧಾನದಿಂದ ಆತನಿಗೆ ಸ್ನಾನವನ್ನು ಮಾಡಿಸಬೇಕು. ಮೊದಲು ಪಂಚಾಮೃತದ ಸಕಲ ದ್ರವ್ಯಗಳಿಂದಾಗಲಿ, ಅವುಗಳಲ್ಲಿ ಲಭ್ಯಗಳಾದ ಹಲವಿಂದಲಾಗಲಿ ಅಭಿಷೇಕವನ್ನು ಮಾಡಿ ಸ್ನಾನವಾದ ಮೇಲೆ ಶ್ರೀಸೂಕ್ತ ಮಂತ್ರಗಳನ್ನು ಪಠಿಸುತ್ತ ಗಂಧೋದಕದಿಂದ ಅಭಿಷೇಕವನ್ನು ಮಾಡಬೇಕು.

ಸಂಪ್ರೋಕ್ಷ್ಯ ಭೂಷಯೇದ್ದೇವಂ ವಸ್ತ್ರಾಲಂಕಾರಮಾಲ್ಯಕೈಃ ।
ನೀರಾಜಯಿತ್ವಾ ಸಂಪೂಜ್ಯ ಪ್ರಾಸಾದಂ ಪರಿವೇಷ್ಟಯೇತ್ ॥ ೧೮ ॥
ಸಪ್ತಕೃತ್ವಸ್ತತೋ ದೇವಂ ದೋಲಾಮಂಡಪಮಾನಯೇತ್ ।
ಸುಸಂಸ್ಕೃತಾಯಾಂ ರಥ್ಯಾಯಾಂ ಪತಾಕಾತೋರಣಾದಿಭಿಃ ।
ಅಧೋದೇಶೇ ಮಂಡಪಂ ತಂ ಸಪ್ತಶೋ ಭ್ರಾಮಯೇತ್ಪುನಃ ॥ ೧೯ ॥
ಊರ್ಧ್ವದೇಶೇ ಪುನಃ ಸಪ್ತ ಸ್ತಂಭವೇದ್ಯಾಂ ಚ ಸಪ್ತ ವೈ ।
ಯಾತ್ರಾವಸಾನೇ ಚ ಪುನರ್ಭ್ರಾಮಯೇದೇಕವಿಂಶತಿಂ ॥ ೨೦ ॥
ಇಯಂ ಲೀಲಾ ಭಗವತಃ ಪಿತಾಮಹಮುಖೇರಿತಾ ।
ರಾಜರ್ಷಿಣೇಂದ್ರದ್ಯುಮ್ನೇನ ಕಾರಿತಾ ಪೂರ್ವಮೇವ ಹಿ ॥ ೨೧ ॥
ಫಲಪುಷ್ಪೋಪಪನ್ನೈಶ್ಚ ಶಾಖಿಭಿಃ ಪರಿಕಲ್ಪಿತೇ ।
ವೃಂದಾವನಾಂತರೇ ರಮ್ಯೇ ಮತ್ತಭ್ರಮರರಾವಿಣಿ ॥ ೨೨ ॥

---

೧೮. ಬಳಿಕ ವಿಗ್ರಹಕ್ಕೆ ಸಂಪ್ರೋಕ್ಷಣೆಯನ್ನು ಮಾಡಿ ವಸ್ತ್ರಗಳು, ಆಭರಣಗಳು, ಪುಷ್ಪಮಾಲೆಗಳಿಂದ ಗೋವಿಂದನನ್ನು ಅಲಂಕರಿಸಬೇಕು. ಉತ್ತರನೀರಾಜನವನ್ನು ಬೆಳಗಿಸಿ ಪುನಃ ಪೂಜೆಯನ್ನು ಮಾಡಿ ಪ್ರಾಸಾದದ ಪ್ರದಕ್ಷಿಣೆಯನ್ನು ಮಾಡಿಸಬೇಕು.

೧೯. ಇಂತು ಏಳು ಪ್ರದಕ್ಷಿಣೆಗಳನ್ನು ಮಾಡಿದ ಮೇಲೆ ಸ್ವಾಮಿಯನ್ನು ಉಯ್ಯಾಲೆಯ ಮಂಟಪಕ್ಕೆ ಬಿಜಮಾಡಿಸಬೇಕು. ಪತಾಕೆಗಳಿಂದಲೂ ತೋರಣಗಳಿಂದಲೂ ಅಲಂಕರಿಸಲ್ಪಟ್ಟು ಸಾರಿಸಿ ಗುಡಿಸಲ್ಪಟ್ಟ ಮಾರ್ಗದಲ್ಲಿ ದೇವನ ಉತ್ಸವವನ್ನು ತಂದು ಮಂಟಪದ ಸುತ್ತಲೂ ಭೂಮಿಯಲ್ಲಿ ಏಳು ಪ್ರದಕ್ಷಿಣೆಗಳನ್ನು ಮಾಡಿಸಬೇಕು.

೨೦. ಬಳಿಕ ಮೇಲುಗಡೆಯಲ್ಲಿ ಏಳುಪ್ರದಕ್ಷಿಣೆಗಳನ್ನೂ ಸ್ತಂಭಗಳಿಂದೊಡಗೂಡಿದ ವೇದಿಕೆಗೆ ಏಳು ಪ್ರದಕ್ಷಿಣೆಗಳನ್ನೂ ಮಾಡಿಸಿ ಉತ್ಸವದ ಅಂತ್ಯದಲ್ಲಿ ಪುನಃ ಇಪ್ಪತ್ತೊಂದು ಪ್ರದಕ್ಷಿಣೆಗಳನ್ನು ಪ್ರಾಸಾದ ಮಂಟಪಗಳಿಗೆ ಮಾಡಿಸಬೇಕು.

೨೧. ಈ ವಿಧವಾದ ಭಗವಂತನ ಲೀಲೆಯ ಉತ್ಸವದ ಕ್ರಮವು ಲೋಕಪಿತಾಮಹನಾದ ಬ್ರಹ್ಮನ ಮುಖದಿಂದ ಮೊದಲು ಪ್ರಕಾಶವನ್ನು ಹೊಂದಿತು. ರಾಜರ್ಷಿಯಾದ ಇಂದ್ರದ್ಯುಮ್ನನಿಂದ ಪೂರ್ವಕಾಲದಲ್ಲಿ ಆಚರಿಸಲ್ಪಟ್ಟಿತು.

೨೨. ಫಲಪುಷ್ಪಭಾರಗಳಿಂದ ನೆಲಕ್ಕೆ ಬಗ್ಗಿರುವ ಮರಗಳಿಂದ ತುಂಬಿದ ರಮ್ಯವಾದ ಬೃಂದಾವನದ ಮಧ್ಯದಲ್ಲಿಯೂ ಈ ಉತ್ಸವವನ್ನು ಮಾಡಬಹುದು. ಆ ವನವು ಮದಿಸಿದ ಭ್ರಮರಗಳ ಧ್ವನಿಯಿಂದ ಕೂಡಿದುದಾಗಿರಬೇಕು.

ಕೋಕಿಲಾರಾವಮಧುರೇ ನಾನಾಪಕ್ಷಿಗಣಾಕುಲೇ ।
ನಾನೋಪಶೋಭಾರಚಿತನಾನಾಗುರುಸುಧೂಪಿತೇ ॥ ೨೩ ॥
ಪ್ರಫುಲ್ಲಕೇತಕೀಷಂಡಗಂಧಾಮೋದಿದಿಗಂತರೇ ।
ಮಲ್ಲಿಕಾಶೋಕಪುನ್ನಾಗಚಂಪಕೈರುಪಶೋಭಿತೇ ॥ ೨೪ ॥
ತತ್ಕಾನನಾಂತರ್ಘಟಿತೇ ಮಂಡಪೇ ಚಾರುತೋರಣೇ ।
ಭೂಷಿತೇ ಮಾಲ್ಯವಸನಚಾಮರೈರುಪಶೋಭಿತೇ ॥ ೨೫ ॥
ರತ್ನಖಟ್ವಾಂದೋಲಿಕಾಯಾಂ ತನ್ಮಧ್ಯೇ ವಾಸಯೇತ್ಪ್ರಭುಂ ।
ಸದ್ರತ್ನಮುಕುಟಂ ತಾರಹಾರಶೋಭಿತವಕ್ಷಸಂ ॥ ೨೬ ॥
ಅನರ್ಘ್ಯರತ್ನಘಟಿತಕುಂಡಲೋದ್ಭಾಸಿತಶ್ರುತಿಂ ।
ಯಥಾಸ್ಥಾನಂ ಯಥಾಶೋಭಂ ದಿವ್ಯಾಲಂಕಾರಮಂಜುಲಂ ॥ ೨೭ ॥
ವಿಕಚಾಂಬುಜಮಧ್ಯಸ್ಥಂ ವಿಶ್ವಧಾತ್ರ್ಯಾ ಶ್ರಿಯಾ ಯುತಂ ॥ ೨೮ ॥

---

೨೩. ಕೋಗಿಲೆಗಳ ಇಂಚರದಿಂದ ಮಧುರವಾದುದೂ, ಬಹು ವಿಧ ಪಕ್ಷಿಗಳಿಂದ ಮನೋಹರವೂ, ಬಹುವಿಧಾಲಂಕಾರಸಹಿತವೂ, ಅಗುರು ಮೊದಲಾದ ಸುಗಂಧ ದ್ರವ್ಯಗಳ ಸುವಾಸನಾಯುತವೂ ಆಗಿರಬೇಕು.

೨೪. ಬಿರಿದ ಕೇದಿಗೆಯ ಮೆಳೆಗಳ ಸುಗಂಧದಿಂದ ದಿಗಂತರಗಳನ್ನೂ ವ್ಯಾಪಿಸುತ್ತ, ಮಲ್ಲಿಗೆ, ಅಶೋಕ, ಪುನ್ನಾಗ, ಸಂಪಿಗೆಯ ವೃಕ್ಷಗಳಿಂದ ಶೋಭಿಸುತ್ತಿರಬೇಕು.

೨೫. ಇಂತಹ ಉತ್ತಮವಾದ ಉದ್ಯಾನವನದ ಮಧ್ಯದಲ್ಲಿ ಮಂಟಪವೊಂದನ್ನು ರಚಿಸಿ, ಅದನ್ನು ಮನೋಹರಗಳಾದ ತೋರಣಗಳಿಂದಲಂಕರಿಸಿ, ಪುಷ್ಪಮಾಲೆಗಳಿಂದಲೂ, ವಸ್ತ್ರಗಳಿಂದಲೂ, ಚಾಮರಗಳಿಂದಲೂ ಶೋಭಿಸುತ್ತಿರುವಂತೆ ಮಾಡಬೇಕು.

೨೬. ಆ ಮಂಟಪದ ಮಧ್ಯದಲ್ಲಿ ನವರತ್ನಮಯವಾದ ಮಂಚವನ್ನೊಳಕೊಂಡ ಉಯ್ಯಾಲೆಯಲ್ಲಿ ಶ್ರೀ ಗೋವಿಂದನನ್ನು ಕೂಡಿಸಬೇಕು. ಸ್ವಾಮಿಯು ಉತ್ತಮ ರತ್ನಗಳ ಕಿರೀಟವನ್ನು ಧರಿಸಿ ಮುತ್ತುಗಳ ಹಾರಗಳಿಂದ ಶೋಭಿಸುವ ವಕ್ಷಸ್ಥಳವುಳ್ಳವನಾಗಿರಬೇಕು.

೨೭. ಅಮೂಲ್ಯಗಳಾದ ರತ್ನಗಳನ್ನೊಳಕೊಂಡ ಕುಂಡಲಗಳಿಂದ ಕಾಂತಿಯುಕ್ತಗಳಾದ ಕಿವಿಗಳಿಂದಲೂ, ಉಚಿತ ಸ್ಥಾನಗಳಲ್ಲಿದ್ದು ಪ್ರಕಾಶಿಸುತ್ತಿರುವ ದಿವ್ಯಾಲಂಕಾರಗಳಿಂದಲೂ ಶೋಭಿಸುತ್ತಿರಬೇಕು.

೨೮. ಅರಳಿದ ಸಹಸ್ರದಳ ಪದ್ಮದ ಮಧ್ಯದಲ್ಲಿ ಲೋಕನಾಯಕಿಯಾದ ಲಕ್ಷ್ಮೀದೇವಿಯೊಡನೆ ಸ್ವಾಮಿಯು ಸುಖಾಸೀನನಾಗಿರಬೇಕು.

ಶಂಖಚಕ್ರಗದಾಪದ್ಮಧಾರಿಣಂ ವನಮಾಲಿನಂ ।
ಸುಪ್ರಸನ್ನಂ ಸುನಾಸಂ ತಂ ಪೀನವಕ್ಷಃಸ್ಥಲೋಜ್ಜ್ವಲಂ ॥ ೨೯ ॥
ಪುರೋ ವ್ಯೋಮಸ್ಥಿತೈರ್ದೇವೈರ್ಬ್ರಹ್ಮಾದ್ಯೈರ್ನತಮಸ್ತಕೈಃ ।
ಕೃತಾಂಜಲಿಪುಟೈರ್ಭಕ್ತ್ಯಾ ಜಯಶಬ್ದೈರಭಿಷ್ಟುತಂ ॥ ೩೦ ॥
ಗಂಧರ್ವೈರಪ್ಸರೋಭಿಶ್ಚ ಕಿನ್ನರೈಃ ಸಿದ್ಧಚಾರಣೈಃ ।
ಹಾಹಾಹುಹೂಪ್ರಭೃತಿಭಿಃ ಸತ್ವರಂ ದಿವ್ಯಗಾಯನೈಃ ॥ ೩೧ ॥
ಅಹಂಪೂರ್ವಿಕಯಾ ನೃತ್ಯಗೀತವಾದಿತ್ರಕಾರಿಭಿಃ ।
ನೇತ್ರಾಂಬುಜಸಹಸ್ರೈಶ್ಚ ಪೂಜ್ಯಮಾನಂ ಮುದಾನ್ವಿತೈಃ ॥ ೩೨ ॥
ಕಿರದ್ಭಿಃ ಸರ್ವತೋ ದಿಕ್ಷು ಗಂಧಚಂದನಜಂ ರಜಃ ।
ಉಪವೇಶ್ಯಾಥ ಗೋವಿಂದಂ ಪೂಜಯೇದುಪಚಾರಕೈಃ ॥ ೩೩ ॥
ವಲ್ಲವೀವೃಂದಮಧ್ಯಸ್ಥಂ ಕದಂಬತರುಮೂಲಗಂ ।
ಹಾವಹಾಸ್ಯವಿಲಾಸೈಶ್ಚ ಕ್ರೀಡಮಾನಂ ವನಾಂತರೇ ॥ ೩೪ ॥

---

೨೯. ಶಂಖ, ಚಕ್ರ, ಗದಾ, ಪದ್ಮಗಳನ್ನು ಚತುರ್ಹಸ್ತಗಳಲ್ಲಿ ಧರಿಸಿ, ವನಮಾಲಾವಿಭೂಷಿತನಾಗಿ, ಪ್ರಸನ್ನವದನನೂ, ಸುಂದರನಾಸಿಕನೂ, ಪೀನೋನ್ನತವಾದ ವಕ್ಷಸ್ಥಳವುಳ್ಳವನೂ ಆಗಿರಬೇಕು.

೩೦. ತನ್ನ ಮುಂದೆ ಆಕಾಶದಲ್ಲಿ ಬ್ರಹ್ಮಾದಿದೇವತೆಗಳು ತಲೆಗಳನ್ನು ಬಗ್ಗಿಸಿ ಭಕ್ತಿಯಿಂದ ಅಂಜಲಿಬಂಧವನ್ನು ಮಾಡಿಕೊಂಡು ನಿಂತು ಜಯಕಾರಗಳಿಂದ ಪರಮಾತ್ಮನನ್ನು ಸ್ತೋತ್ರಮಾಡುತ್ತಿರಬೇಕು.

೩೧. ಗಂಧರ್ವರು, ಅಪ್ಸರರು, ಕಿನ್ನರರು, ಸಿದ್ಧರು, ಚಾರಣರು, ಹಾಹಾ ಹುಹುಗಳೇ ಮುಂತಾದವರು ಸಂಭ್ರಮದಿಂದ ದಿವ್ಯಗಾನಗಳನ್ನು ಮಾಡುತ್ತಿರಬೇಕು.

೩೨. ಮತ್ತು "ನಾನು ಮುಂದು, ತಾನು ಮುಂದು" ಎಂಬದಾಗಿ ಸಂತೋಷಗೊಂಡು ನೃತ್ಯ, ಗೀತ, ವಾದ್ಯ ಘೋಷಗಳನ್ನು ಮಾಡುತ್ತ ತಮ್ಮ ಸಾವಿರಾರು ನೇತ್ರಕಮಲಗಳಿಂದ ಆತನನ್ನು ಪೂಜಿಸುತ್ತಿರಬೇಕು.

೩೩. ಇಂತಹ ಮಹಾ ವೈಭವದಿಂದ ಕೂಡಿದವನನ್ನಾಗಿ ಪರಮಾತ್ಮನನ್ನು ಧ್ಯಾನಿಸುತ್ತ ಹತ್ತು ದಿಕ್ಕುಗಳಲ್ಲಿಯೂ ಶ್ರೀಗಂಧ ಚಂದನಗಳ ಧೂಳಿಯನ್ನು ಎರಚಿ ಗೋವಿಂದನನ್ನು ದೋಲಾಯಂತ್ರದಲ್ಲಿ ಕುಳ್ಳಿರಿಸಿ ಸಕಲೋಪಚಾರಗಳಿಂದಲೂ ಪೂಜೆ ಮಾಡಬೇಕು.

೩೪–೩೫. ಜಗನ್ನಾಥನು ಗೋಪಸ್ತ್ರೀಯರ ಮಧ್ಯದಲ್ಲಿದ್ದು ಕದಂಬ ವೃಕ್ಷದ ಬುಡವನ್ನಾಶ್ರಯಿಸಿ ವನ ಮಧ್ಯದಲ್ಲಿ ತನ್ನ ಹಾವಭಾವ ವಿಲಾಸಗಳಿಂದ ಕ್ರೀಡಿಸುತ್ತ ಗೋಪಿಕೆಯರಿಂದಲೂ ಗೋಪಾಲಕರಿಂದಲೂ ಲೀಲೆಯಿಂದ

**ಗೋಪೀಭಿಶ್ಚೈವ ಗೋಪಾಲೈರ್ಲೀಲಾಂದೋಲಿತಯಾನಗಂ ।**
**ಚಿಂತಯಿತ್ವಾ ಜಗನ್ನಾಥಂ ವಿಕಿರೇದ್ಗಂಧಚೂರ್ಣಕೈಃ ॥ ೩೫ ॥**
**ಸಕರ್ಪೂರೈ ರಕ್ತಪೀತಶುಕ್ಲೈರ್ದಿಕ್ಷು ಸಮಂತತಃ ।**
**ದಿವ್ಯೈರ್ವಸ್ತ್ರೈರ್ದಿವ್ಯಮಾಲ್ಯೈ ರ್ದಿವ್ಯೈರ್ಗಂಧೈಃ ಸುಧೂಪಕೈಃ ॥ ೩೬ ॥**
**ಚಾಮರಾಂದೋಲನೈರ್ಗೀತೈಃ ಸ್ತುತಿಭಿಶ್ಚ ಸಮರ್ಚಿತಂ ।**
**ಆಂದೋಲಯೇದ್ದೋಲಿಕಾಸ್ಥಂ ಸಪ್ತವಾರಾನ್ಶನೈಃಶನೈಃ ॥ ೩೭ ॥**
**ತದಾ ಪಶ್ಯಂತಿ ಯೇ ಕೃಷ್ಣಂ ಮುಕ್ತಿಸ್ತೇಷಾಂ ನ ಸಂಶಯಃ ।**
**ಬ್ರಹ್ಮಹತ್ಯಾದಿಪಾಪಾನಾಂ ಪಂಚಕಾನಾಂ ಕ್ಷಯೋ ಭವೇತ್ ॥ ೩೮ ॥**
**ತ್ರಿರೇವಂ ದೋಲಯೇದ್ದೇವಂ ಸರ್ವಪಾಪಾಪನೋದನಂ ।**
**ಭಕ್ತ್ಯಾನುಗ್ರಾಹಕಂ ಪುಂಸಾಂ ಭುಕ್ತಿಮುಕ್ತ್ಯೇಕಕಾರಣಂ ॥ ೩೯ ॥**
**ಲೀಲಾವಿಚೇಷ್ಟಿತಂ ಯಸ್ಯ ಕೃತ್ರಿಮಂ ಸಹಜಂ ತಥಾ ।**
**ಅಂಹಃಸಂಘಕ್ಷಯಕರಂ ಮೂಲಾವಿದ್ಯಾನಿವರ್ತಕಂ ॥ ೪೦ ॥**

---

ಆಡಿಸಲ್ಪಡುತ್ತಿರುವ ಉಯ್ಯಾಲೆಯಲ್ಲಿ ಕುಳಿತಿರುವವನನ್ನಾಗಿ ಧ್ಯಾನಿಸಿ ಗೋವಿಂದ ವಿಗ್ರಹವನ್ನು ಗಂಧಚೂರ್ಣದಿಂದ ಪ್ರೋಕ್ಷಿಸಬೇಕು.

೩೬–೩೭. ರಕ್ತ, ಪೀತ, ಶ್ವೇತವರ್ಣಗಳ ಕರ್ಪೂರ ಸಹಿತಗಳಾದ ಚೂರ್ಣಗಳಿಂದ ಸುತ್ತಲೂ ದಿಕ್ಕುಗಳನ್ನು ವಾಸನೆಗೊಳಿಸಿ ದಿವ್ಯವಸ್ತ್ರಗಳಿಂದಲೂ, ದಿವ್ಯ ಮಾಲೆಗಳಿಂದಲೂ, ಉತ್ತಮ ಧೂಪದ್ರವ್ಯಗಳಿಂದಲೂ, ಚಾಮರಗಳ ಸೇವೆಯಿಂದಲೂ, ಸಂಗೀತದಿಂದಲೂ, ಸ್ತೋತ್ರಗಳಿಂದಲೂ ವಿಧಿವತ್ತಾಗಿ ಪೂಜೆಯನ್ನು ಮಾಡಿ ಉಯ್ಯಾಲೆಯಲ್ಲಿರುವ ಲೋಕೇಶ್ವರನನ್ನು ಮೆಲ್ಲಮೆಲ್ಲಗೆ ಏಳು ಸಲ ತೂಗಬೇಕು.

೩೮. ಆ ಸಮಯದಲ್ಲಿ ಯಾರು ಶ್ರೀ ಕೃಷ್ಣನನ್ನು ನೋಡುವರೊ, ಅವರಿಗೆ ಮೋಕ್ಷವು ಲಭಿಸುವುದರಲ್ಲಿ ಸಂದೇಹವೇ ಇಲ್ಲ. ಬ್ರಹ್ಮಹತ್ಯೆಯೇ ಮೊದಲಾದ ಪಂಚಮಹಾಪಾತಕಗಳೂ ನಾಶವನ್ನು ಹೊಂದುವುವು.

೩೯. ಈ ರೀತಿಯಾಗಿ ಭಗವಂತನಿಗೆ ಮೂರು ಆಂದೋಲನೋತ್ಸವಗಳನ್ನು ಮಾಡಿಸಲು ಮಾನವನ ಸಕಲ ಪಾತಕಗಳೂ ಕಳೆದುಹೋಗುವುವು. ಈ ಉತ್ಸವ ವೊಂದನ್ನೇ ಭಕ್ತಿಯಿಂದ ಮಾಡಲು ಪರಮಾತ್ಮನ ಅನುಗ್ರಹವನ್ನು ಪಡೆದು ಭುಕ್ತಿಮುಕ್ತಿಗಳನ್ನು ಸಂಪಾದಿಸುವ ಏಕಮಾತ್ರ ಸಾಧನವಾಗಿರುವುದು.

೪೦. ಯಾವ ಪರಮಾತ್ಮನ ಲೀಲಾವಿನೋದಗಳು ಕೃತ್ರಿಮಗಳಾದರೂ ಸಹಜಗಳಾಗಿಯೇ ತೋರುತ್ತಿರುವುವೊ, ಆತನಿಗೆ ಮಾಡಿಸಿದ ಉತ್ಸವವು ಪಾಪಸಮೂಹಗಳನ್ನು ನಾಶಗೊಳಿಸಿ ಸಂಸಾರಕ್ಕೆ ಕಾರಣವಾದ ಮೂಲಾ ವಿದ್ಯೆಯನ್ನು ಪರಿಹರಿಸುವುದು.

ಪಶ್ಯನ್ದ್ವಿತೀಯಂ ಹರತಿ ಗೋಹತ್ಯಾದ್ಯುಪಪಾತಕಂ ।
ಹರತ್ಯಶೇಷಪಾಪಾನಿ ತೃತೀಯೇ ನಾತ್ರ ಸಂಶಯಃ ॥ ೪೧ ॥
ದೃಷ್ಟ್ವಾ ದೋಲಾಯಿತಂ ದೇವಂ ಸರ್ವಪಾಪೈಃ ಪ್ರಮುಚ್ಯತೇ ।
ಆಧ್ಯಾತ್ಮಿಕೈರಾಧಿಭೌತೈರಾಧಿದೈವೈರ್ವಿಮುಚ್ಯತೇ ॥ ೪೨ ॥
ಇಮಾಂ ಯಾತ್ರಾಂ ಕಾರಯಿತ್ವಾ ಚಕ್ರವರ್ತೀ ಭವೇನ್ನೃಪಃ ।
ಬ್ರಾಹ್ಮಣಸ್ತು ಚತುರ್ವೇದೀ ಜ್ಞಾನವಾನ್ಜಾಯತೇ ಧ್ರುವಂ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ
ಸಂವಾದೇ "ದೋಲಾರೋಹಣವರ್ಣನಂ" ನಾಮ
ತ್ರಿಚತ್ವಾರಿಂಶೋಽಧ್ಯಾಯಃ

---

೪೧. ಎರಡನೆಯ ಯಾತ್ರೆಯನ್ನು ನೋಡುವುದರಿಂದ ಗೋಹತ್ಯೆಯೇ ಮುಂತಾದ ಉಪಪಾತಕಗಳೆಲ್ಲವೂ ನಿರ್ಮೂಲವಾಗಿ ಮೂರನೆಯ ದೋಲೋತ್ಸವವನ್ನು ನೋಡಲು ಸಕಲ ಪಾಪಗಳೂ ನಿಶ್ಶೇಷವಾಗುವುದರಲ್ಲಿ ಸಂಶಯವಿಲ್ಲವು.

೪೨. ಉಯ್ಯಾಲೆಯಲ್ಲಿ ತೂಗುತ್ತಿರುವ ಜಗನ್ನಾಥನನ್ನು ನೋಡಿದ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ತಾಪತ್ರಯಗಳನ್ನೂ ಕಳೆದುಕೊಳ್ಳುವನು.

೪೩. ಈ ದೋಲಯಾತ್ರೆಯನ್ನು ಜಗನ್ನಾಥನಿಗೆ ಮಾಡಿಸಲು ರಾಜನು ಚಕ್ರವರ್ತಿಯಾಗುವನು. ಬ್ರಾಹ್ಮಣನು ನಾಲ್ಕು ವೇದಗಳಲ್ಲಿ ನಿಷ್ಣಾತನಾಗಿ ಸಂಪೂರ್ಣ ಜ್ಞಾನವನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀಪುರುಷೋತ್ತಮಕ್ಷೇತ್ರ
ಮಾಹಾತ್ಮ್ಯೆಯ ಜೈಮಿನಿಋಷಿಸಂವಾದದಲ್ಲಿ "ದೋಲಾರೋಹಣೋತ್ಸವವರ್ಣನ"
ವೆಂಬ ನಲವತ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಶ್ಚತ್ವಾರಿಂಶೋಽಧ್ಯಾಯಃ

## ಜ್ಯೇಷ್ಠಪಂಚಕವ್ರತವರ್ಣನಂ

ಜೈಮಿನಿರುವಾಚ :—

ಅತ್ರ ವಃ ಕಥಯಿಷ್ಯಾಮಿ ವ್ರತಂ ಸಾಂವತ್ಸರಂ ಪರಂ ।
ಸಂವತ್ಸರಸ್ಯಾದಿದಿನೇ ಪೌರ್ಣಮಾಸ್ಯಾಂ ತು ಫಾಲ್ಗುನೇ ॥ ೧ ॥
ಅನಾದಿದೇವಸ್ಯ ಹರೇರ್ಮೂರ್ತಯೋ ದ್ವಾದಶೈವ ಯಾಃ ।
ವಿಷ್ಣ್ವಾದಿನಾಮಪ್ರಥಿತಾಃ ಪ್ರತಿಮಾಸಂ ಪ್ರಪೂಜಯೇತ್ ॥ ೨ ॥
ಏಕೈಕಾಂ ಮೂರ್ತಿಮೇತಾಸಾಂ ಮಾಸೇಷು ದ್ವಾದಶಸ್ವಪಿ ।
ಪ್ರತ್ಯಹಂ ಪೂಜಯೇತ್ಪುಷ್ಪೈಃ ಫಲೈರ್ದ್ವಾದಶಭಿಸ್ತಥಾ ॥ ೩ ॥
ಅಶೋಕೋ ಮಲ್ಲಿಕಾ ಚೈವ ಪಾಟಲಂ ಚ ಕದಂಬಕಂ ।
ಕರವೀರಂ ಜಾತಿಪುಷ್ಪಂ ಮಾಲತೀ ಶತಪತ್ರಕಂ ॥ ೪ ॥
ಉತ್ಪಲಂ ಚೈವ ವಾಸಂತೀ ಕುಂದಂ ಪುನ್ನಾಗಕಂ ತಥಾ ।
ಏತಾನಿ ಕ್ರಮಶೋ ದತ್ಯಾತ್ಕುಸುಮಾನಿ ಹರೇರ್ಮುದಾ ॥ ೫ ॥

---

### ಕನ್ನಡದ ಅನುವಾದ

#### ಜ್ಯೇಷ್ಠಪಂಚಕವ್ರತ ವರ್ಣನ

೧. ಜೈಮಿನಿಯು ಹೇಳುತ್ತಾನೆ:— ಇನ್ನು ನಿಮಗೆ ಸಂವತ್ಸರದಲ್ಲಿ ನಿರಂತರವೂ ಮಾಡಬೇಕಾದ ಉತ್ತಮ ವ್ರತವೊಂದನ್ನು ನಿರೂಪಿಸುವೆನು. ಈ ಸಂವತ್ಸರಕ್ಕೆ ಫಾಲ್ಗುನಮಾಸದ ಪೌರ್ಣಮಿಯ ದಿನವೇ ಪ್ರಥಮ ದಿವಸ ವಾಗಿರುವುದು.

೨–೩. ಅಂದು ಮೊದಲುಗೊಂಡು ಆದ್ಯಂತರಹಿತನೂ ದೇವದೇವನೂ ಆದ ಶ್ರೀಹರಿಯ ವಿಷ್ಣ್ವಾದಿ ದ್ವಾದಶನಾಮಗಳಿಂದ ಯಾವ ರೂಪಗಳು ಪ್ರಸಿದ್ಧಗಳಾಗಿ ರುವುವೊ, ಅವುಗಳಲ್ಲಿ ಒಂದೊಂದು ರೂಪವನ್ನು ಒಂದೊಂದು ಮಾಸದಲ್ಲಿ ಪೂಜಿಸ ಬೇಕು. ಸಂವತ್ಸರದ ಹನ್ನೆರಡು ಮಾಸಗಳಲ್ಲಿಯೂ ಒಂದೊಂದು ಮೂರ್ತಿಯನ್ನು ಪ್ರತಿನಿತ್ಯವೂ ಪೂಜೆಮಾಡಿ, ಪ್ರತಿಯೊಂದು ತಿಂಗಳಲ್ಲಿಯೂ ಒಂದು ವಿಧವಾದ ಪುಷ್ಪದಿಂದಲೂ, ಒಂದು ವಿಧವಾದ ಫಲದಿಂದಲೂ ಪೂಜೆಯನ್ನು ಮುಗಿಸಬೇಕು.

೪–೫. ಅಶೋಕ, ಮಲ್ಲಿಗೆ, ಪಾಟಲ, ಕದಂಬ, ಕರವೀರ, ಜಾತಿಪುಷ್ಪ, ಮಾಲತಿ, ಶತಪತ್ರ, ಕಮಲ, ಉತ್ಪಲ, ವಾಸಂತೀ, ಕುಂದ, ಪುನ್ನಾಗ ಈ ಹನ್ನೆರಡು ಬಗೆಯ ಪುಷ್ಪಗಳಲ್ಲಿ ಒಂದೊಂದನ್ನು ಒಂದೊಂದು ತಿಂಗಳಲ್ಲಿ ಸಂತೋಷದಿಂದ ಶೇಖರಿಸಿ ಪೂಜೆಮಾಡಬೇಕು.

ದಾಡಿಮಂ ನಾರಿಕೇಲಂ ಚ ಆಮ್ರಂ ಚ ಪನಸಂ ತಥಾ ।
ಖರ್ಜೂರಂ ತೃಣರಾಜಂ ಚ ಪ್ರಾಚೀನಾಮಲಕಂ ತಥಾ ॥ ೬ ॥
ಶ್ರೀಫಲಂ ನಾಗರಂಗಂ ಚ ಕ್ರಮುಕಂ ಕರಮಂಗಕಂ ।
ಜಾತೀಫಲಂ ಚ ಕ್ರಮಶಃ ಫಲಾನ್ಯೇತಾನಿ ನೈ ದದೇತ್ ॥ ೭ ॥
ಭಕ್ಷ್ಯಭೋಜ್ಯಾನಿ ಚೋಷ್ಯಾಣಿ ಲೇಹ್ಯಾನಿ ಮಧುರಾಣಿ ಚ ।
ಆಸನಾದ್ಯುಪಚಾರಾಂಶ್ಚ ದತ್ವಾ ಸ್ತುತ್ವಾ ಜಗದ್ಗುರುಂ ॥ ೮ ॥
ಸರ್ವವ್ಯಾಪಿನ್ಜಗನ್ನಾಥ ಭೂತಭವ್ಯಭವತ್ಪ್ರಭೋ ।
ತ್ರಾಹಿ ಮಾಂ ಪುಂಡರೀಕಾಕ್ಷ ವಿಷ್ಣೋ ಸಂಸಾರಸಾಗರಾತ್ ॥ ೯ ॥
ಏಕಾರ್ಣವಜಲೇ ರೌದ್ರೇ ನಿರಾಲಂಬೇ ಪುರಾ ಮಧುಂ ।
ಅವಧೀರ್ವಿಶ್ವರಕ್ಷಾರ್ಥಂ ಮಧುಸೂದನ ರಕ್ಷ ಮಾಂ ॥ ೧೦ ॥
ತ್ರೀನ್ವಿಕ್ರಮಾನ್ಕ್ರಮಿತ್ವಾ ಯೋ ಹತ್ವಾ ದೈತ್ಯಬಲಂ ಮಹತ್ ।
ತ್ರೈಲೋಕ್ಯಂ ಪಾಲಯಾಮಾಸ ತ್ರಿವಿಕ್ರಮ ನಮೋಽಸ್ತು ತೇ ॥ ೧೧ ॥
ಕೃತ್ವಾ ವಾಮನಕಂ ರೂಪಮೃಗ್ಯಜುಸ್ಸಾಮಗರ್ಭಕಂ ।
ಮೋಹಯಿತ್ವಾದ್ಭುತಂ ರೂಪಂ ತಸ್ಮೈ ಮಾಯಾವಿನೇ ನಮಃ ॥ ೧೨ ॥

---

೬–೭. ದಾಡಿಮ, ನಾರಿಕೇಳ, ಆಮ್ರ, ಪನಸ, ಖರ್ಜೂರ, ತೃಣರಾಜ, ಆಮಲಕ, ಶ್ರೀಫಲ, ನಾಗರಂಗ, ಕ್ರಮುಕ, ಕರಮಂಗಕ, ಜಾತೀಫಲ ಈ ಹನ್ನೆರಡು ಫಲಗಳಲ್ಲಿ ಒಂದೊಂದು ಜಾತಿಯನ್ನು ಒಂದೊಂದು ತಿಂಗಳಿನಲ್ಲಿ ನೈವೇದ್ಯ ಮಾಡಬೇಕು.

೮. ಬಳಿಕ ಭಕ್ಷ್ಯಗಳು, ಭೋಜ್ಯಗಳು, ಚೋಷ್ಯಗಳು, ಲೇಹ್ಯಗಳನ್ನೂ ಸಿಹಿ ಪದಾರ್ಥಗಳನ್ನೂ, ಸುಖಾಸನಾದಿಗಳನ್ನೂ ಭಕ್ತಿಯಿಂದ ಸಮರ್ಪಿಸಿ ಲೋಕಗುರುವಾದ ಶ್ರೀ ಕೃಷ್ಣನನ್ನು ಸ್ತೋತ್ರಮಾಡಬೇಕು.

೯. ಸರ್ವವ್ಯಾಪಿಯೆ! ಲೋಕೇಶ್ವರನೆ! ಭೂತಭವ್ಯ ಭವಿಷ್ಯತ್ಕಾಲಗಳನ್ನು ನಡೆಸುವ ಸ್ವಾಮಿಯೆ! ಕಮಲನೇತ್ರನಾದ ಮಹಾ ವಿಷ್ಣುವೆ! ನನ್ನನ್ನು ಈ ಸಂಸಾರಸಮುದ್ರದಿಂದ ಕಡೆಹಾಯಿಸು.

೧೦. ಏಕಾಕಾರವಾಗಿಯೂ, ಭಯಂಕರವಾಗಿಯೂ, ನಿರಾಧಾರವಾಗಿಯೂ ಇರುವ ಸಮುದ್ರ ಜಲದಲ್ಲಿ ಲೋಕರಕ್ಷಣಾಪೇಕ್ಷೆಯಿಂದ ಮಧುವೆಂಬ ರಾಕ್ಷಸನನ್ನು ಸಂಹರಿಸಿದ ಮಧುಸೂದನನೆ! ನನ್ನನ್ನು ರಕ್ಷಿಸು.

೧೧. ಮೂರು ಹೆಜ್ಜೆಗಳಿಂದ ಬ್ರಹ್ಮಾಂಡವೆಲ್ಲವನ್ನೂ ವ್ಯಾಪಿಸಿ ಅಸಂಖ್ಯಾತವಾದ ರಾಕ್ಷಸಸೈನ್ಯವೆಲ್ಲವನ್ನೂ ನಿಗ್ರಹಿಸಿ, ಮೂರು ಲೋಕಗಳನ್ನೂ ಕಾಪಾಡಿದ ತ್ರಿವಿಕ್ರಮನೆ! ನಿನಗೆ ನಮಸ್ಕಾರವು.

೧೨. ಋಗ್ಯಜುಸ್ಸಾಮಗಳೆಂಬ ವೇದತ್ರಯಾತ್ಮಕವಾದ ವಾಮನ ರೂಪ

ಯಃ ಶ್ರಿಯಂ ಧಾರಯೇನ್ನಿತ್ಯಂ ಹೃದಿ ಭಕ್ತೇಭ್ಯ ಏವ ಚ ।
ದದಾತ್ಯಪಿ ಶ್ರಿಯಂ ತಸ್ಮೈ ಶ್ರೀಧರಾಯ ನಮೋಽಸ್ತು ತೇ ॥ ೧೩ ॥
ಇಂದ್ರಿಯಾಣಾಮಧಿಷ್ಠಾತಾ ಯಃ ಸರ್ವೇಷಾಂ ಸದಾ ಪ್ರಭುಃ ।
ಸುಖೈಕಹೇತುರ್ಭಕ್ತಾನಾಂ ಹೃಷೀಕೇಶ ನಮೋಽಸ್ತು ತೇ ॥ ೧೪ ॥
ಯನ್ನಾಭಿಪದ್ಮಸಂಭೂತಂ ಜಗದೇತಚ್ಚರಾಚರಂ ।
ವಿಧಾತುರಾಸನಂ ನಿತ್ಯಂ ಪದ್ಮನಾಭ ನಮೋಽಸ್ತು ತೇ ॥ ೧೫ ॥
ಯಸ್ಯೈತತ್ತ್ರಿಗುಣೈರ್ಬದ್ಧಂ ಜಗದೇತಚ್ಚರಾಚರಂ ।
ದಾಮ್ನಾ ಬದ್ಧಃ ಸ ಗೋಪ್ಯಾ ತು ದಾಮೋದರ ನಮೋಽಸ್ತು ತೇ ॥೧೬॥
ತ್ರೈಲೋಕ್ಯವಿಪ್ಲವಕರಂ ಹತವಾನ್ಕೇಶಿದಾನವಂ ।
ಈಶಿತಾ ಸರ್ವಸೌಖ್ಯಾನಾಂ ತ್ರಾಹಿ ಕೇಶವ ಮಾಂ ಪ್ರಭೋ ॥ ೧೭ ॥

---

ವನ್ನು ಸ್ವೀಕರಿಸಿ, ಆ ಅದ್ಭುತ ರೂಪದಿಂದ ಬಲಿಚಕ್ರವರ್ತಿಯನ್ನು ಭ್ರಾಂತಿಗೊಳಿಸಿದ ಮಾಯಾವಿಯಾದ ನಿನಗೆ ನಮಸ್ಕರಿಸುವೆನು.

೧೩. ನಿರಂತರವೂ ಲಕ್ಷ್ಮಿಯನ್ನು ಹೃದಯದಲ್ಲಿಯೇ ಧರಿಸಿದವನೂ, ಭಕ್ತರಿಗೆ ಸಕಲೈಶ್ವರ್ಯಗಳನ್ನು ಅನುಗ್ರಹಿಸುವವನೂ ಆದ ಶ್ರೀಧರರೂಪನಾದ ನಿನಗೆ ನಮಸ್ಕಾರವಿರಲಿ.

೧೪. ಯಾವನು ಏಕಾದಶೇಂದ್ರಿಯಗಳಿಗೆ ಅಧಿಷ್ಠಾತನಾಗಿರುವನೊ, ಮತ್ತು ಸರ್ವಕಾಲದಲ್ಲಿಯೂ ಸಕಲಜೀವರಿಗೂ ಸ್ವಾಮಿಯಾಗಿರುವನೊ, ಭಕ್ತರಿಗೆ ಸೌಖ್ಯವನ್ನುಂಟುಮಾಡುವ ಏಕಾಂತಕಾರಣನೊ, ಅಂತಹ ಹೃಷೀಕೇಶನಿಗೆ ನಮಸ್ಕಾರವು.

೧೫. ಯಾವನ ನಾಭೀಕಮಲದಿಂದ ಚರಾಚರಾತ್ಮಕವಾದ ಈ ಸಕಲ ಬ್ರಹ್ಮಾಂಡವೂ ಉದ್ಭವಿಸಿರುವುದೊ, ಯಾವನ ನಾಭೀಕಮಲವೇ ಚತುರ್ಮುಖ ಬ್ರಹ್ಮನಿಗೆ ಆಸನವಾಗಿರುವುದೊ, ಅಂತಹ ಪದ್ಮನಾಭನಾದ ನಿನಗೆ ನಮಸ್ಕರಿಸುವೆನು.

೧೬. ಯಾವನ ತ್ರಿಗುಣಾತ್ಮಕವಾದ ಮಾಯೆಯಿಂದ ಸ್ಥಾವರಜಂಗಮ ಸಹಿತವಾದ ಈ ಜಗತ್ತೆಲ್ಲವೂ ಸಂಬದ್ಧವಾಗಿರುವುದೊ, ಯಾವನು ಗೋಪೀದೇವಿಯ ಹಗ್ಗದಿಂದ ಕಟ್ಟಲ್ಪಟ್ಟನೊ, ಆ ದಾಮೋದರನಾದ ನಿನಗೆ ವಂದಿಸುವೆನು.

೧೭. ಮೂರು ಲೋಕಗಳಿಗೂ ಮಹಾಸಂಕಟವನ್ನುಂಟುಮಾಡುತ್ತಿದ್ದ ಕೇಶಿಯೆಂಬ ರಾಕ್ಷಸನನ್ನು ಸಂಹರಿಸಿದವನೂ, ಸಕಲ ಸೌಖ್ಯಗಳನ್ನು ಕೊಡುವ ಸ್ವತಂತ್ರ ಪ್ರಭುವಾದವನೂ ಆದ ಕೇಶವನೆ! ನನ್ನನ್ನು ಸಂರಕ್ಷಿಸು.

ಸೃಷ್ಟ್ವಾ ಸಸರ್ಜ ಭೂತಾನಿ ಜಗತಾಮಾದಿಕಾರಣಂ ।
ಅಚಿಂತ್ಯಮಹಿಮನ್ವಿಷ್ಣೋ ನಾರಾಯಣ ನಮೋಽಸ್ತು ತೇ ॥ ೧೮ ॥
ಮಾಯಯಾ ಯಸ್ಯ ವಿಶ್ವಂ ವೈ ಮೋಹಿತಂ ಯದನಾದ್ಯಯಾ ।
ಸರ್ವಧರ್ಮಸ್ವರೂಪಾಯ ಮಾಧವಾಯ ನಮೋ ನಮಃ ॥ ೧೯ ॥
ಜ್ಞಾನಿನಾಂ ಜ್ಞಾನಗಮ್ಯಸ್ತ್ವಮಗತೀನಾಂ ಗತಿಪ್ರದಃ ।
ಸಂಪೂರ್ಣಮಸ್ತು ಗೋವಿಂದ ತ್ವತ್ಪ್ರಸಾದಾದ್ವ್ರತಂ ಮಮ ॥ ೨೦ ॥
ಪ್ರತಿಮಾಸಂ ಪೂಜನಾಂತೇ ಮಂತ್ರೈರೇತೈಃ ಕೃತಾಂಜಲಿಃ ।
ಪ್ರಾರ್ಥಯೇತ್ಪರಯಾ ಭಕ್ತ್ಯಾ ಭಜನಾಂತೇ ಜನಾರ್ದನಂ ॥ ೨೧ ॥
ಏವಂ ಸಂವತ್ಸರಂ ನೀತ್ವಾ ವ್ರತಂ ವೈ ಮೂರ್ತಿಪಂಜರಂ ।
ಸಂಪೂರ್ಣಫಲಸಿದ್ಧ್ಯರ್ಥಂ ಪ್ರತಿಷ್ಠಾವಿಧಿಮಾಚರೇತ್ ॥ ೨೨ ॥
ಸುವರ್ಣನಿರ್ಮಿತಾ ವಿಷ್ಣೋರ್ಮೂರ್ತಯೋ ದ್ವಾದಶೈವ ತು ।
ಯಥಾಶಕ್ತಿ ಕೃತಾಃ ಸ್ಥಾಪ್ಯಾಃ ಕುಂಭೇಷು ದ್ವಾದಶಸ್ವಪಿ ॥ ೨೩ ॥

---

೧೮. ಲೋಕಸೃಷ್ಟಿಕರ್ತನಾದವನೂ, ಹದಿನಾಲ್ಕು ಲೋಕಗಳಿಗೆ ಆದಿಕಾರಣನೂ, ಅಚಿಂತ್ಯಮಹಿಮನೂ, ಸರ್ವವ್ಯಾಪಿಯೂ ಆದ ನಾರಾಯಣನೆ! ನಿನಗೆ ನಮಿಸುವೆನು.

೧೯. ಯಾವನ ಅನಾದಿಯಾದ ಮಾಯೆಯಿಂದ ವಿಶ್ವವೆಲ್ಲವೂ ಸಮ್ಮೋಹಿತವಾಗಿರುವುದೊ, ಯಾವನು ಸರ್ವಧರ್ಮಗಳ ಸ್ವರೂಪನೇ ಆಗಿರುವನೊ, ಅಂತಹ ಮಾಧವನಾದ ನಿನಗೆ ಮತ್ತೆ ಮತ್ತೆ ನಮಸ್ಕರಿಸುವೆನು.

೨೦. ಜ್ಞಾನಿಗಳ ಜ್ಞಾನಕ್ಕೆ ನೀನೇ ವಿಷಯವಾಗಿರುವೆ. ಗತಿಯನ್ನು ಕಾಣದವರಿಗೆ ನೀನೇ ಸದ್ಗತಿದಾಯಕನು. ಗೋವಿಂದನೆ! ನಿನ್ನ ಅನುಗ್ರಹದಿಂದ ಈ ನನ್ನ ವ್ರತವು ನಿರ್ವಿಘ್ನವಾಗಿ ಸಮಾಪ್ತಿಗೊಳ್ಳಲಿ.

೨೧. ಪ್ರತಿಮಾಸದಲ್ಲಿಯೂ ದಿನದಿನದ ಪೂಜೆಯು ಮುಗಿದ ಮೇಲೆ ಅಂಜಲಿಬಂಧವನ್ನು ಮಾಡಿಕೊಂಡು ಅತ್ಯಂತಭಕ್ತಿಯಿಂದ ಭಜನೆಯೊಡನೆ ಜನಾರ್ದನನನ್ನು ಮೇಲೆ ಹೇಳಿದ ಸ್ತೋತ್ರಗಳಿಂದ ಪ್ರಾರ್ಥಿಸಿಕೊಳ್ಳಬೇಕು.

೨೨. ಈ ರೀತಿಯಾಗಿ ಮೂರ್ತಿ ಸಮೂಹಕ್ಕೆ ಸಂಬಂಧಿಸಿದ ವ್ರತವನ್ನಾಚರಿಸುತ್ತ ಒಂದು ಸಂವತ್ಸರವನ್ನು ಕಳೆದು ವ್ರತದ ಸಂಪೂರ್ಣಫಲವನ್ನು ಪಡೆಯುವುದಕ್ಕಾಗಿ ಪ್ರತಿಷ್ಠಾವಿಧಿಯನ್ನಾಚರಿಸಬೇಕು.

೨೩. ಅದರ ಕ್ರಮವನ್ನು ತಿಳಿಸುವೆನು. ಚಿನ್ನದಿಂದಾಗಲಿ, ಯಥಾಶಕ್ತಿಯಾಗಿ ಇತರ ಲೋಹಗಳಿಂದಾಗಲಿ ಮಾಡಲ್ಪಟ್ಟ ವಿಷ್ಣುವಿನ ಹನ್ನೆರಡು ಮಾಸಾವತಾರಮೂರ್ತಿಗಳನ್ನೂ ಹನ್ನೆರಡು ಕಳಶಗಳಲ್ಲಿ ಸ್ಥಾಪನೆಮಾಡಬೇಕು.

ಆಮ್ರಪತ್ರಾಚ್ಛಾದಿತೇಷು ಸಾಕ್ಷಾತ್ತೇಷು ಪೃಥಕ್ಪೃಥಕ್ ।
ಶ್ವೇತವಸ್ತ್ರಾವನದ್ಧೇಷು ಗಂಧಪಲ್ಲವವಾರಿಷು ॥ ೨೪ ॥
ಅಷ್ಟದಿಕ್ಷು ಚತುರ್ದಿಕ್ಷು ಸರ್ವತೋಭದ್ರಮಂಡಲೇ ।
ಸ್ಥಾಪನೀಯಾಶ್ಚ ತೇ ಕುಂಭಾಸ್ತೇಷು ಪೂಜ್ಯಾಶ್ಚ ಮೂರ್ತಯಃ ॥ ೨೫ ॥
ದ್ವಾದಶಾಕ್ಷರಮಂತ್ರೇಣ ಉಪಚಾರೈಃ ಪೃಥಕ್ಪೃಥಕ್ ।
ಪಂಚಾಮೃತೈಶ್ಚ ಸ್ನಪನಂ ಸರ್ವೇಷಾಮಾದಿತೋ ದ್ವಿಜಾಃ ॥ ೨೬ ॥
ಗೀತವಾದಿತ್ರನೃತ್ಯಾದ್ಯೈಸ್ತಥಾ ಬ್ರಾಹ್ಮಣಪೂಜನೈಃ ।
ವಸ್ತ್ರಯುಗ್ಮೈರ್ದ್ವಾದಶಭಿಶ್ಛತ್ರೋಪಾನದ್ಯುಗೈಸ್ತಥಾ ॥ ೨೭ ॥
ವ್ಯಜನೈರುದಕುಂಭೈಶ್ಚ ಶಯನೀಯೈಃ ಸಪೀಠಕೈಃ ।
ಗಂಧೈರ್ಮಾಲ್ಯೈಃ ಸತಾಂಬೂಲೈರ್ಮುದ್ರಿಕಾಕುಂಡಲೈಸ್ತಥಾ ॥ ೨೮ ॥
ಪ್ರದೀಪಾಃ ಸರ್ಪಿಷಾ ಜ್ವಾಲ್ಯಾ ದ್ವಾದಶ ದ್ವಾದಶ ಕ್ರಮಾತ್ ।
ನೀತ್ವಾ ತ್ರಿಯಾಮಾಮಿತ್ಥಂ ವೈ ಪ್ರಭಾತೇ ವಹ್ನಿಕರ್ಮ ಚ ॥ ೨೯ ॥

---

೨೪. ಆ ಕಲಶಗಳು ಮಾವಿನೆಲೆಗಳಿಂದಾವೃತಗಳಾಗಿ, ಬೇರೆ ಬೇರೆಯಾಗಿ ಬಿಳಿಯ ವಸ್ತ್ರಗಳಿಂದಾಚ್ಛಾದಿತಗಳಾಗಿ ಸುಗಂಧಯುಕ್ತವಾದ ಪಲ್ಲವೋದಕದಿಂದ ತುಂಬಿದುವಾಗಿರಬೇಕು.

೨೫. ಒಳಗೆ ವಲಯದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಹೊರಗೆ ಎಂಟು ದಿಕ್ಕುಗಳಲ್ಲಿಯೂ ಈ ಕಳಶಗಳನ್ನು ಸರ್ವತೋಭದ್ರವೆಂಬ ಮಂಡಲದ ಪ್ರದೇಶದಲ್ಲಿ ಸ್ಥಾಪಿಸಿ ಅವುಗಳಲ್ಲಿ ಮೂರ್ತಿಗಳನ್ನು ಪೂಜಿಸಬೇಕು.

೨೬. ಬ್ರಾಹ್ಮಣರಿರಾ! ಮೊದಲು ದ್ವಾದಶಾಕ್ಷರದ ಮಂತ್ರದಿಂದ ಬೇರೆ ಬೇರೆಯಾಗಿ ಒಂದೊಂದು ಕಳಶಕ್ಕೂ ಷೋಡಶೋಪಚಾರಗಳಿಂದ ಪೂಜೆಯನ್ನು ಮಾಡಿ ಪಂಚಾಮೃತಗಳಿಂದ ಅಭಿಷೇಕವನ್ನು ಮಾಡಬೇಕು.

೨೭–೨೮. ಬಳಿಕ ಸಂಗೀತ, ವಾದ್ಯ, ನೃತ್ಯಗಳಿಂದಲೂ, ಬ್ರಾಹ್ಮಣ ಸಂತರ್ಪಣೆಗಳಿಂದಲೂ, ವ್ರತವನ್ನು ಸಾಂಗಗೊಳಿಸಬೇಕು. ಹನ್ನೆರಡು ಜನ ಬ್ರಾಹ್ಮಣರನ್ನು ಬರಮಾಡಿಕೊಂಡು ಒಬ್ಬೊಬ್ಬರಿಗೂ ಎರಡೆರಡು ವಸ್ತ್ರಗಳನ್ನೂ, ಛತ್ರಗಳನ್ನೂ, ಪಾದರಕ್ಷೆಗಳನ್ನೂ, ಬೀಸಣಿಗೆಗಳನ್ನೂ, ಜಲಕುಂಭಗಳನ್ನೂ, ಹಾಸಿಗೆಗಳನ್ನೂ, ಆಸನಗಳನ್ನೂ, ಸುಗಂಧಗಳನ್ನೂ, ಪುಷ್ಪಮಾಲೆಗಳನ್ನೂ, ತಾಂಬೂಲಗಳನ್ನೂ, ಉಂಗುರಗಳನ್ನೂ, ಕುಂಡಲಗಳನ್ನೂ ದಾನಮಾಡಬೇಕು.

೨೯. ಬಳಿಕ ಒಂದೊಂದು ಕಳಶಕ್ಕೂ ಕ್ರಮವಾಗಿ ಹನ್ನೆರಡು ತುಪ್ಪದ ದೀಪಗಳನ್ನು ಹಚ್ಚಿಸಬೇಕು. ಇಂತು ರಾತ್ರಿಯ ಮೂರು ಯಾಮಗಳಲ್ಲಿಯೂ ಪೂಜೆಯನ್ನುಮಾಡಿ ನಾಲ್ಕನೆಯ ಯಾಮವು ಕಳೆದು ಸೂರ್ಯೋದಯವಾಗುವ ಸಮಯಕ್ಕೆ ಸರಿಯಾಗಿ ಔಪಾಸನೆಯನ್ನು ಮಾಡಬೇಕು.

ಸಮಿದಾಜ್ಯಚರೂಣಾಂ ವೈ ಪ್ರತಿದೇವಂ ಶತತ್ರಯಂ ।
ಅಷ್ಟೋತ್ತರಸಹಸ್ರಂ ತು ತಿಲೈರ್ವ್ಯಾಹೃತಿಭಿಸ್ತತಃ ॥ ೩೦ ॥
ಹೋಮಾಂತೇ ಪ್ರಾಶನಂ ಕೃತ್ವಾ ದದ್ಯಾದಾಚಾರ್ಯದಕ್ಷಿಣಾಂ ।
ಕಪಿಲಾ ಧೇನವೋ ದೇಯಾಃ ಸಾಲಂಕಾರಾಶ್ಚ ದ್ವಾದಶ ॥ ೩೧ ॥
ಶತಂ ಚತುಶ್ಚತ್ವಾರಿಂಶದ್ಬ್ರಾಹ್ಮಣಾನ್ಭೋಜಯೇತ್ತತಃ ।
ತದ್ದೇವವೃಂದಂ ಸಘಟಂ ಸವಿತಾನಂ ಸಚಾಮರಂ ॥ ೩೨ ॥
ಸರ್ವೋಪಚಾರಸಹಿತಮಾಚಾರ್ಯಾಯ ನಿವೇದಯೇತ್ ।
ವ್ರತರಾಜಮಿಮಂ ಕೃತ್ವಾ ಸರ್ವಾನ್ಕಾಮಾನವಾಪ್ನುಯಾತ್ ॥ ೩೩ ॥
ಗುಂಡಿಚಾದ್ಯಾಸ್ತು ಯಾ ಯಾತ್ರಾ ವಿಷ್ಣೋರ್ದ್ವಾದಶ ಕೀರ್ತಿತಾಃ ।
ತಾಸಾಂ ದರ್ಶನಜಂ ಪುಣ್ಯಂ ವ್ರತೇನಾನೇನ ಲಭ್ಯತೇ ॥ ೩೪ ॥
ಐಂದ್ರಂ ಪದಂ ಸಾರ್ವಭೌಮಂ ಚಕ್ರವರ್ತಿತ್ವಮೇವ ಚ ।
ಅಷ್ಟೈಶ್ವರ್ಯಮವಾಪ್ನೋತಿ ದೇವದೇವಪ್ರಸಾದತಃ ॥ ೩೫ ॥

---

೩೦. ಪ್ರತಿಯೊಬ್ಬ ಮೂರ್ತಿಗೂ ಮುನ್ನೂರರ ಸಂಖ್ಯೆಯ ಆಹುತಿಗಳನ್ನು ಸಮಿತ್ತು, ಆಜ್ಯ ಮತ್ತು ಚರುದ್ರವ್ಯಗಳಿಂದ ಅಗ್ನಿಯಲ್ಲಿ ಸಮರ್ಪಿಸಿದ ಬಳಿಕ ತಿಲಧಾನ್ಯದಿಂದ ಒಂದು ಸಾವಿರದೆಂಟು ವ್ಯಾಹೃತಿ ಹೋಮಗಳನ್ನುಮಾಡಬೇಕು.

೩೧. ಇಂತು ಹೋಮವನ್ನು ಮುಗಿಸಿ ಹುತಶೇಷವನ್ನು ಸ್ವೀಕರಿಸಿ ಆಚಾರ್ಯನಿಗೆ ದಕ್ಷಿಣೆಯನ್ನು ಕೊಡಬೇಕು. ಅದರ ವಿವರವನ್ನು ತಿಳಿಸುವೆನು. ಸರ್ವಭೂಷಣಭೂಷಿತಗಳಾಗಿರುವ ಹನ್ನೆರಡು ಕಪಿಲೆಯಾಕಳುಗಳನ್ನು ಆಚಾರ್ಯನಿಗೆ ಗುರುದಕ್ಷಿಣೆಯಾಗಿ ಕೊಡಬೇಕು.

೩೨–೩೩. ವ್ರತಸಮಾಪ್ತಿಯಾಗಲು ನಾಲ್ಕುಸಾವಿರದ ನಾಲ್ಕುನೂರು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಕಳಶ, ವಸ್ತ್ರ, ಚಾಮರಗಳೊಡನೆ ದ್ವಾದಶ ಪ್ರತಿಮೆಗಳನ್ನೂ ಸರ್ವೋಪಚಾರಪೂರ್ವಕವಾಗಿ ಆಚಾರ್ಯನಿಗೆ ದಾನಮಾಡಬೇಕು. ಈ ಸರ್ವೋತ್ತಮವಾದ ವ್ರತವನ್ನು ಮಾಡಿದ ಮನುಷ್ಯನು ಸಕಲ ಇಷ್ಟಾರ್ಥಗಳನ್ನೂ ಪಡೆದು ಸುಖಿಸುವನು.

೩೪. ಈ ವ್ರತವನ್ನು ಮಾಡುವುದರಿಂದ ಪುರುಷೋತ್ತಮ ಕ್ಷೇತ್ರದಲ್ಲಿ ಜಗನ್ನಾಥನ ಗುಂಡಿಚ ಮಂಟಪಯಾತ್ರೆಯೇ ಮೊದಲಾದ ಹನ್ನೆರಡು ಮಹೋತ್ಸವಗಳನ್ನೂ ನೋಡಿದ ಪುಣ್ಯವು ಭಗವದ್ಭಕ್ತನಿಗೆ ಲಭಿಸುವುದು.

೩೫. ಆತನು ಭಗವಂತನ ಅನುಗ್ರಹಕ್ಕೆ ಪಾತ್ರನಾಗಿ ಮಹೇಂದ್ರಪದವಿಯನ್ನೂ, ಸಾರ್ವಭೌಮವನ್ನೂ, ಚಕ್ರವರ್ತಿತ್ವವನ್ನೂ, ಅಷ್ಟೈಶ್ವರ್ಯಗಳ ಸಮೃದ್ಧಿಯನ್ನೂ ಪಡೆಯುವನು.

ಏತನ್ಮಹಾಪುಣ್ಯತಮಂ ನಾರದಃ ಕೃತವಾನ್ವ್ರತಂ ।
ಕೃತ್ವಾ ದ್ವಾದಶವರ್ಷಾಣಿ ಜೀವನ್ಮುಕ್ತೋಽಭವನ್ಮುನಿಃ ॥ ೩೬ ॥
ಅನ್ಯೇ ಚ ವೈಷ್ಣವಾ ಯೇ ವೈ ಚಕ್ರುಸ್ತೇ ಬಹುಶಃ ಪುರಾ ।
ವ್ರತಂ ನಾತಃ ಪರತರಂ ಭಗವತ್ಪ್ರೀತಿಕಾರಕಂ ॥ ೩೭ ॥
ಧರ್ಮ್ಯಂ ಯಶಸ್ಯಮಾಯುಷ್ಯಂ ಬ್ರಾಹ್ಮಣ್ಯಂ ವಂಶವರ್ಧನಂ ।
ಭವಂತೋಽಪಿ ಯತಾತ್ಮಾನಃ ಕುರ್ವಂತು ವ್ರತಮುತ್ತಮಂ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಜ್ಯೇಷ್ಠಪಂಚಕವ್ರತವರ್ಣನಂ" ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೩೬. ಪರಮಪುಣ್ಯಪ್ರದವಾದ ಈ ಮಹಾವ್ರತವನ್ನು ಪೂರ್ವದಲ್ಲಿ ನಾರದ ಮಹರ್ಷಿಯು ಮಾಡಿದನು. ಹನ್ನೆರಡು ವರ್ಷಗಳ ಪರ್ಯಂತವೂ ಈ ವ್ರತವನ್ನಾಚರಿಸಿ ಆ ಮಹರ್ಷಿಯು ಜೀವನ್ಮುಕ್ತ ಪದವಿಯನ್ನು ಹೊಂದಿದನು.

೩೭. ಪೂರ್ವಕಾಲದಲ್ಲಿ ಪ್ರಸಿದ್ಧರಾದ ಇತರ ವೈಷ್ಣವರೂ ಸಹ ಅನೇಕ ಸಲ ಈ ವ್ರತವನ್ನು ನೆರವೇರಿಸಿರುವರು. ಭಗವಂತನಿಗೆ ಸಂತೋಷವನ್ನುಂಟು ಮಾಡಲು ಇದಕ್ಕಿಂತ ಉತ್ತಮವಾದ ವ್ರತವು ಬೇರೊಂದಿಲ್ಲ.

೩೮. ಬ್ರಾಹ್ಮಣೋತ್ತಮರಿರಾ! ಈ ವ್ರತವು ಧರ್ಮಸಹಿತವು. ಯಶಸ್ಕಾರಕವು. ಆಯುಷ್ಯವರ್ಧಕವು, ಬ್ರಹ್ಮತೇಜೋವಿವರ್ಧಕವು. ಪುತ್ರಪೌತ್ರಾದಿ ವಂಶ ವಿಸ್ತಾರಕಾರಣವು. ಆದುದರಿಂದ ನೀವುಗಳೂ ಸಹ ಸಂಯತೇಂದ್ರಿಯರಾಗಿ ಈ ಉತ್ತಮ ವ್ರತವನ್ನಾಚರಿಸಿರಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯೆಯ ಜೈಮಿನಿಋಷಿ ಸಂವಾದದಲ್ಲಿ "ಜ್ಯೇಷ್ಠಪಂಚಕವ್ರತವರ್ಣನ"ವೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಚತ್ವಾರಿಂಶೋಽಧ್ಯಾಯಃ

## ದಮನಕಭಂಜನವಿಧಿವರ್ಣನಂ

ಮುನಯ ಊಚುಃ:—

**ಮುನೇ ವ್ರತಮಿದಂ ಪುಣ್ಯಂ ಶ್ರುತಂ ವೈ ಮೂರ್ತಿಪಂಜರಂ ।**
**ಅಂತಃಪ್ರಮೋದಜನನಂ ಮಹಿಮ್ನಾ ಚ ಮಹತ್ತರಂ ॥ ೧ ॥**
**ಯಾತ್ರಾ ದ್ವಾದಶ ಪುಣ್ಯಾ ವೈ ಉದ್ದಿಷ್ಟಾ ಭಗವತ್ಪ್ರಿಯಾಃ ।**
**ತಾಸಾಂ ದ್ವೇ ಅವಶಿಷ್ಟೇ ನಃ ಕಥಯಸ್ವ ಮಹಾಮುನೇ ॥ ೨ ॥**

ಜೈಮಿನಿರುವಾಚ:—

**ವಾಸಂತಿಕಾಂ ಸಮಾಖ್ಯಾಸ್ಯೇ ಯಾತ್ರಾಂ ದಮನಭಂಜಿಕಾಂ ।**
**ಯಸ್ಯಾಂ ಕೃತಾಯಾಂ ದೃಷ್ಟಾಯಾಂ ಪ್ರೀಣಾತಿ ಪುರುಷೋತ್ತಮಃ ॥ ೩ ॥**
**ಪುರಾ ಯತ್ಕಥಿತಂ ವಿಪ್ರಾಸ್ತೃಣಂ ದಮನಕಾಹ್ವಯಂ ।**
**ಚೈತ್ರಶುಕ್ಲ ತ್ರಯೋದಶ್ಯಾಮಾಹರೇತ್ತತ್ಸಮೂಲಕಂ ॥ ೪ ॥**

---

## ಕನ್ನಡದ ಅನುವಾದ

### ದಮನಕಭಂಜನವಿಧಿವರ್ಣನ

೧. ಮುನಿಗಳು ಪ್ರಶ್ನೆಮಾಡುತ್ತಾರೆ —ಜೈಮಿನಿ ಮಹರ್ಷಿಯೆ! ದ್ವಾದಶ ಮೂರ್ತಿಗಳ ಕೂಟದ ಈ ಉತ್ತಮ ವ್ರತವನ್ನು ನಿನ್ನಿಂದ ನಾವು ಕೇಳಿದೆವು. ಈ ವ್ರತವು ಮನಸ್ಸಿನಲ್ಲಿ ಸಂತೋಷವನ್ನುಂಟುಮಾಡುತ್ತಿರುವುದೇ ಅಲ್ಲದೆ ಮಹಿಮೆಯಿಂದಲೂ ಮಹತ್ತರವಾಗಿರುವುದು.

೨. ಪೂರ್ವದಲ್ಲಿ ನೀನು ಭಗವತ್ಪ್ರೀತಿಕರಗಳಾದ ಹನ್ನೆರಡು ವ್ರತಗಳಿರುವುವೆಂದು ನಿರೂಪಿಸಿದೆಯಲ್ಲವೆ. ಅವುಗಳಲ್ಲಿ ಇದುವರೆವಿಗೆ ಹತ್ತನ್ನು ಮಾತ್ರ ವಿವರಿಸಿರುವೆ. ಮಹಾಮುನಿಯೆ! ಈಗ ಉಳಿದಿರುವ ಎರಡನ್ನೂ ನಮಗೆ ಕಥನಮಾಡುವವನಾಗು.

೩. ಜೈಮಿನಿಯು ಹೇಳುತ್ತಾನೆ:—ವಸಂತಕಾಲದಲ್ಲಿ ಮಾಡಬೇಕಾದ ದಮನಭಂಜಕವೆಂಬ ಉತ್ತಮವ್ರತವೊಂದಿರುವುದು. ಅದನ್ನೀಗ ನಿರೂಪಿಸುವೆನು. ಆ ಉತ್ಸವವನ್ನು ಮಾಡುವುದರಿಂದಲೂ ನೋಡುವುದರಿಂದಲೂ ಪುರುಷೋತ್ತಮನು ಸಂತೋಷಗೊಳ್ಳುವನು.

೪. ವಿಪ್ರರಿರಾ! ಹಿಂದೆ ನಿಮಗೆ ದಮನಕವೆಂಬ ತೃಣದ ವಿಷಯವನು

ತನ್ಮಧ್ಯೇ ಮಂಡಲಂ ಕುರ್ಯಾತ್ಸುಶುಭಂ ಪದ್ಮಸಂಜ್ಞಿತಂ ।
ತದಂತರ್ವಾಸಯೇದ್ದೇವಪ್ರತ್ಯರ್ಚಾಂ ಪ್ರತಿಪೂಜಿತಾಂ ॥ ೫ ॥
ಯುಕ್ತಾಂ ಶ್ರೀಸತ್ಯಭಾಮಾಭ್ಯಾಂ ಪೂಜಯೇದ್ವಿಧಿವಚ್ಚ ತಾಃ ।
ಅರ್ಧರಾತ್ರೇ ತು ಕರ್ಮೇದಂ ದೇವದೇವಸ್ಯ ಕಾರಯೇತ್ ॥ ೬ ॥
ಪುರಾ ನಿಶೀಥೇಽಪಿ ವಿಭುರ್ಬಭಂಜ ದಮನಾಸುರಂ ।
ಭಙ್ಕ್ತ್ವಾ ಲೇಭೇ ಪರಾಂ ಪ್ರೀತಿಂ ತದಂಗೋತ್ಥಂ ಚ ತತ್ತೃಣಂ ॥ ೭ ॥
ತಸ್ಯಾಮೇವ ತ್ರಯೋದಶ್ಯಾಂ ತೃಣಂ ದೈತ್ಯಂ ವಿಭಾವಯೇತ್ ।
ಕೃತಾಂಜಲಿಪುಟೋ ಭೂತ್ವಾ ವಾಕ್ಯಂ ಚೇದಮುದಾಹರೇತ್ ॥ ೮ ॥
ಅವಧೀರ್ದಮನಂ ದೈತ್ಯಂ ಪುರಾ ತ್ರೈಲೋಕ್ಯಕಂಟಕಂ ।
ಸ ಏವೇತ್ಥಂ ಪರಿಣತಃ ಪುರತಸ್ತವ ತಿಷ್ಠತಿ ॥ ೯ ॥

---

ಹೇಳಿದೆನಲ್ಲವೆ. ಅದನ್ನು ಚೈತ್ರಮಾಸದ ಶುಕ್ಲಪಕ್ಷದ ತ್ರಯೋದಶಿಯ ದಿನದಲ್ಲಿ ಮೂಲಸಹಿತವಾಗಿ ಕಿತ್ತು ತಂದು ಸಿದ್ಧಗೊಳಿಸಬೇಕು.

೫. ಆ ತೃಣಗಳನ್ನು ಸುತ್ತಲೂ ಹರಡಿ ಅವುಗಳ ಮಧ್ಯದಲ್ಲಿ ಪದ್ಮಾಕಾರವಾದ ಪವಿತ್ರವಾದ ಮಂಡಲವನ್ನು ರಚಿಸಬೇಕು. ಈ ಮಂಡಲದ ಮಧ್ಯದಲ್ಲಿ ಪೂಜೆಗಾಗಿ ಸಿದ್ಧಗೊಳಿಸಿರುವ ದೇವದೇವನ ಪ್ರತಿಮೆಯನ್ನು ಸ್ಥಾಪಿಸಬೇಕು.

೬. ಶ್ರೀದೇವಿ ಮತ್ತು ಸತ್ಯಭಾಮೆಯರೊಡನಿರುವ ಜಗನ್ನಾಥನನ್ನು ಇಂತು ಸ್ಥಾಪಿಸಿ ವಿಧಿಪ್ರಕಾರವಾಗಿ ಅವರೆಲ್ಲರಿಗೂ ಸಕಲ ಪೂಜೆಗಳನ್ನೂ ಮಾಡಬೇಕು. ಈ ಉತ್ಸವವನ್ನು ದೇವೋತ್ತಮನಿಗೆ ಅರ್ಧರಾತ್ರಿಯ ಸಮಯದಲ್ಲಿ ಮಾಡಬೇಕು.

೭. ಪೂರ್ವದಲ್ಲಿ ಅರ್ಧರಾತ್ರಿಯಲ್ಲಿಯೇ ಲೋಕೇಶ್ವರನು ದಮನಕನೆಂಬ ರಾಕ್ಷಸನನ್ನು ನಿಗ್ರಹಿಸಿದನು. ದುಷ್ಟನಿಗ್ರಹವನ್ನುಮಾಡಿ ಅತ್ಯಂತ ಸಂತುಷ್ಟನಾದನು. ಆ ರಾಕ್ಷಸನ ದೇಹದಿಂದಲೇ ದಮನವೆಂಬ ತೃಣವು ಉತ್ಪನ್ನವಾಯಿತು.

೮. ಆ ತ್ರಯೋದಶಿಯ ತಿಥಿಯ ದಿನದಲ್ಲಿ ತೃಣವನ್ನು ರಾಕ್ಷಸನೆಂದೇ ಭಾವಿಸಬೇಕು. ಮತ್ತು ಸ್ವಾಮಿಯ ಎದುರಿಗೆ ಅಂಜಲಿಬಂಧವನ್ನು ಮಾಡಿ ನಿಂತು ಮುಂದೆ ಹೇಳುವ ವಾಕ್ಯಗಳಿಂದ ವಿಜ್ಞಾಪನೆಯನ್ನು ಮಾಡಿಕೊಳ್ಳಬೇಕು.

೯. ಪೂರ್ವದಲ್ಲಿ ನೀನು ತ್ರಿಲೋಕಕಂಟಕನಾಗಿದ್ದ ದಮನಕನೆಂಬ ದೈತ್ಯನನ್ನು ನಿಗ್ರಹಿಸಿದೆ ಆತನೇ ಈ ತೃಣರೂಪವನ್ನು ಸ್ವೀಕರಿಸಿಕೊಂಡು ನಿನ್ನ ಮುಂದೆ ಇರುವನು.

ಅಸ್ಯೋತ್ಪತ್ತೌ ತದಾ ಪ್ರೀತಿರಾಸೀದ್ಯಾ ತವ ಮಾಧವ ।
ಅಧುನಾಪಿ ತಥೈವಾಸ್ತಾಂ ಪ್ರೀತಿರ್ದಮನಭಂಜನೇ ॥ ೧೦ ॥
ಇತ್ಯುಕ್ತ್ವಾ ತೃಣಮೇಕೇಂ ತು ಕರೇ ದೇವಸ್ಯ ದಾಪಯೇತ್ ।
ತತೋಽವಶಿಷ್ಟಾಂ ರಾತ್ರಿಂ ಚ ನೃತ್ಯಗೀತಾದಿಭಿರ್ನಯೇತ್ ॥ ೧೧ ॥
ತತಶ್ಚಾಭ್ಯುದಿತೇ ಸೂರ್ಯೇ ದೇವಂ ತೃಣಪುರಃಸರಂ ।
ನಯೇಚ್ಚ ಜಗದೀಶಸ್ಯ ಸಮೀಪಂ ದ್ವಿಜಸತ್ತಮಾಃ ॥ ೧೨ ॥
ಉಪಚಾರೈರ್ಜಗನ್ನಾಥಂ ಪೂಜಯೇತ್ಪೂರ್ವವತ್ತತಃ ।
ಹಿರಣ್ಯಕಶಿಪುಂ ಹತ್ವಾ ಹ್ಯಂತ್ರಮಾಲಾಂ ತದಂಗಜಾಂ ॥ ೧೩ ॥
ಕೃತ್ವಾ ಕಂಠೇ ಯಥಾ ಪ್ರೀಣಾಸ್ತಥೇದಂ ದಮನಂ ತೃಣಂ ।
ತವ ಪ್ರೀತ್ಯೈ ತು ಭಗವನ್ಮಯಾ ದತ್ತಂ ತವಾಂತಿಕೇ ॥ ೧೪ ॥
ಇತ್ಯುಚ್ಚಾರ್ಯ ಹರೇರ್ಮೂರ್ಧ್ನಿ ದದ್ಯಾದ್ಗಂಧತೃಣಂ ಶುಭಂ ।
ತದಾ ದೃಷ್ಟ್ವಾ ಹರೇರ್ವಕ್ತ್ರಪದ್ಮಂ ಪ್ರೀತಿಕರಂ ಮುದಾ ।
ಭವದುಃಖಪರಿಕ್ಷೀಣಃ ಸುಖಮಾಪ್ನೋತ್ಯನುತ್ತಮಂ ॥ ೧೫ ॥

---

೧೦. ಲಕ್ಷ್ಮೀರಮಣನೆ! ರಾಕ್ಷಸವಧೆಯ ಕಾಲದಲ್ಲಿ ಈ ತೃಣವುಂಟಾದಾಗ ನಿನಗೆ ಯಾವ ಸಂತೋಷವುಂಟಾಯಿತೊ, ಆ ಪ್ರೀತಿಯೇ ಈಗ ದಮನ ಭಂಜನವನ್ನು ಮಾಡುವ ಕಾಲದಲ್ಲಿಯೂ ನಿನಗೆ ಉಂಟಾಗಲಿ.

೧೧. ಇಂತೆಂದು ದೇವದೇವನ ಒಂದು ಕೈಯಲ್ಲಿ ತೃಣವೊಂದನ್ನು ಸಮರ್ಪಿಸಬೇಕು. ಬಳಿಕ ಉಳಿದ ರಾತ್ರಿಯನ್ನು ನೃತ್ಯಗೀತಾದಿಗಳಿಂದ ಜಾಗರಣೆಯನ್ನು ಮಾಡಿ ಕಳೆಯಬೇಕು.

೧೨. ಬಳಿಕ ಸೂರ್ಯೋದಯವಾಗಲು ತೃಣಹಸ್ತನಾಗಿರುವ ಆ ಮೂರ್ತಿಯನ್ನೇ ಜಗನ್ನಾಥನ ಸಮ್ಮುಖಕ್ಕೆ ಬಿಜಮಾಡಿಸಬೇಕು.

೧೩–೧೪. ಬಳಿಕ ಮುನ್ನಿನಂತೆಯೇ ಜಗನ್ನಾಥನನ್ನು ಸರ್ವೋಪಚಾರಗಳಿಂದ ಪೂಜೆಮಾಡಿ ಈ ಮಂತ್ರವನ್ನು ಹೇಳಬೇಕು. "ಹಿರಣ್ಯಕಶಿಪುವನ್ನು ಸಂಹರಿಸಿ ಅವನ ದೇಹದಲ್ಲಿದ್ದ ಕರುಳುಗಳ ಮಾಲೆಯನ್ನು ಕೊರಳಿನಲ್ಲಿ ಧರಿಸಿ ನೀನು ಯಾವ ಸಂತೋಷವನ್ನು ಹೊಂದಿದೆಯೊ, ಆ ನಿನ್ನ ಪ್ರೀತಿಗೆ ಪಾತ್ರನಾಗಲು ನಾನು ಭಗವಂತನಾದ ನಿನಗೆ ಈ ದಮನತೃಣವನ್ನು ಸಮರ್ಪಿಸುತ್ತಿರುವೆನು."

೧೫. ಇಂತೆಂದು ಹೇಳಿ ಸುಗಂಧಯುಕ್ತವೂ ಪವಿತ್ರವೂ ಆದ ಆ ತೃಣವನ್ನು ಶ್ರೀ ಹರಿಯ ತಲೆಯಲ್ಲಿ ಅಲಂಕರಿಸಬೇಕು. ಆಗ ಜಗನ್ನಾಥನ ಪ್ರೀತಿಕರವಾದ ಮುಖಕಮಲವನ್ನು ಯಾವನು ಸಂತೋಷದಿಂದೀಕ್ಷಿಸುವನೊ, ಅವನು ಸಂಸಾರದ ದುಃಖವನ್ನು ಕಳೆದುಕೊಂಡು ಅಸದೃಶವಾದ ಸೌಖ್ಯವನ್ನು ಪಡೆಯುವನು.

**ಗೃಹೀತ್ವಾ ಮೂರ್ಧ್ನಿ ತಚ್ಛಾಖಾಂ ವಿಷ್ಣುಮೂರ್ಧ್ನೋಽಪಕರ್ಷಿತಾಂ ।**
**ಸರ್ವಪಾಪವಿನಿರ್ಮುಕ್ತೋ ವಸೇದ್ವಿಷ್ಣುಪುರೇ ಧ್ರುವಂ ॥ ೧೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ದಮನಕಭಂಜನವಿಧಿವರ್ಣನಂ" ನಾಮ ಪಂಚಚತ್ವಾರಿಂಶೋಽಧ್ಯಾಯಃ**

---

೧೬. ಮಹಾವಿಷ್ಣುವಿನ ತಲೆಯಿಂದ ತೆಗೆದ ದಮನಕದ ಕಾಷ್ಠವನ್ನು ಯಾವನು ತನ್ನ ತಲೆಯಲ್ಲಿ ಧರಿಸುವನೊ, ಅವನು ಸಮಸ್ತ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದಿ ಶಾಶ್ವತವಾಗಿ ವೈಕುಂಠದಲ್ಲಿ ನೆಲಸಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ದಮನಕಭಂಜನವಿಧಿವರ್ಣನ"ವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್ಚತ್ವಾರಿಂಶೋಽಧ್ಯಾಯಃ

## ಅಕ್ಷಯತೃತೀಯೋತ್ಸವವರ್ಣನಂ

ಜೈಮಿನಿರುವಾಚ :—

**ಅತಃ ಪರಂ ಪ್ರವಕ್ಷ್ಯಾಮಿ ಯಾತ್ರಾಮಕ್ಷಯಮೋಕ್ಷದಾಂ ।**
**ಅನಾಯಾಸೇನ ಮೂಢಾನಾಂ ವಾಸನಾಬದ್ಧಚೇತಸಾಂ ॥ ೧ ॥**
**ವೈಶಾಖಸ್ಯಾಮಲೇ ಪಕ್ಷೇ ದ್ವಿತೀಯಾರಾತ್ರಿಮಧ್ಯತಃ ।**
**ಮಂಡಪಂ ಚ ಚತುಷ್ಕೋಣಂ ಸುಧಾಲಿಪ್ತಂ ಸವೇದಿಕಂ ॥ ೨ ॥**
**ಸುಧೌತವಾಸಸಾ ಕುರ್ಯಾತ್ಪ್ರತಿಸೀರಾಸಮಂ ತತಃ ।**
**ಸಾಧುಸೋಪಾನಸಂಯುಕ್ತಂ ಚಾರುಚಂದ್ರಾತಪಾನ್ವಿತಂ ॥ ೩ ॥**
**ತನ್ಮಧ್ಯೇ ವಿನ್ಯಸೇನ್ನೂನಂ ಸಾಧು ಭದ್ರಾಸನೋತ್ತಮಂ ।**
**ತಸ್ಮಿನ್ನಿಚೋಲಸಂಛನ್ನೇ ವಿನ್ಯಸೇತ್ಸ್ವರ್ಣಭಾಜನಂ ॥ ೪ ॥**
**ತಸ್ಯ ಪಶ್ಚಿಮಭಾಗೇ ವೈ ಸ್ವಾಸೀನೋ ಬ್ರಾಹ್ಮಣಃ ಶುಚಿಃ ।**
**ಪಾತ್ರಾಂತರೇ ತು ಗೃಹ್ಣೀಯಾಚ್ಚಂದನಂ ಪಂಚವಿಂಶತಿಂ ॥ ೫ ॥**

---

## ಕನ್ನಡದ ಅನುವಾದ

### ಅಕ್ಷಯತೃತೀಯೋತ್ಸವವರ್ಣನ

೧. ಜೈಮಿನಿಯು ಹೇಳುತ್ತಾನೆ:—ಇನ್ನು ಮೂಢರಾಗಿ ಪೂರ್ವಕರ್ಮ ವಾಸನೆಗಳಿಂದ ಕೂಡಿದವರಿಗೂ ಸಹ ಅನಾಯಾಸವಾಗಿಯೇ ಶಾಶ್ವತವಾದ ಮೋಕ್ಷವನ್ನು ದೊರಕಿಸುವಂತಹ ವ್ರತವೊಂದನ್ನು ವಿಸ್ತರಿಸುವೆನು.

೨. ವೈಶಾಖಮಾಸದ ಶುಕ್ಲಪಕ್ಷದ ದ್ವಿತೀಯಾ ದಿವಸದ ಮಧ್ಯರಾತ್ರಿಯಲ್ಲಿ ಚತುಷ್ಕೋಣವೂ, ಸುಧಾಲೇಪಿತವೂ, ವೇದಿಕಾಸಹಿತವೂ ಆದ ಉತ್ತಮ ಮಂಟಪವೊಂದನ್ನು ರಚಿಸಬೇಕು.

೩. ಆ ಮಂಟಪವು ಒಗೆದು ಶುಭ್ರವಾದ ವಸ್ತ್ರದಿಂದಲಂಕೃತವಾಗಿ ಸೂರ್ಯನಿಗಭಿಮುಖವಾಗಿರುವಂತೆ ಮಾಡಲ್ಪಟ್ಟಿರಬೇಕು. ನಯವಾದ ಸೋಪಾನಗಳುಳ್ಳದ್ದಾಗಿ ಸುಂದರವಾದ ಚಂದ್ರಕಾಂತಶಿಲೆಯಿಂದ ನಿರ್ಮಿತವಾಗಿರಬೇಕು.

೪. ಅದರ ಮಧ್ಯಭಾಗದಲ್ಲಿ ಸರ್ವಾಲಂಕಾರಸಹಿತವಾದ ಭದ್ರಾಸನವೊಂದನ್ನು ಪ್ರತಿಷ್ಠಿಸಿರಬೇಕು. ಆ ಆಸನವನ್ನು ಸುತ್ತಲೂ ಬಟ್ಟೆಯ ಪರದೆಗಳಿಂದ ಮುಚ್ಚಿ ಅದರಲ್ಲಿ ಚಿನ್ನದ ಕಳಶವೊಂದನ್ನು ಸ್ಥಾಪಿಸಬೇಕು.

೫. ಆ ಮಂಟಪದ ಪಶ್ಚಿಮದಿಕ್ಕಿನಲ್ಲಿ ಬ್ರಾಹ್ಮಣನು ಶುಚಿಯಾಗಿ ಉಚಿತಾ

**ಸುಪಿಷ್ಟಂ ಕೃಷ್ಣಸ್ನೇಹಸ್ಯ ಗೃಹ್ಣೀಯಾಚ್ಚ ಪಲಾಧಿಕಂ ।**
**ಅಗುರ್ವರ್ಧಂ ಕುಂಕುಮಂ ಚ ಕುಂಕುಮಾರ್ಧಂ ಚ ಸಿಲ್ಹಕಂ ॥ ೬ ॥**
**ಕಸ್ತೂರಿಕಾಕರ್ಪೂರಯೋಃ ಪ್ರಮಾಣಂ ಸಿಲ್ಹಸಮ್ಮಿತಂ ।**
**ಸರ್ವಮೇಕತ್ರ ಸಂಪಿಷ್ಯಾತ್ಪಾಟಲೋದ್ಭವವಾರಿಣಾ ॥ ೭ ॥**
**ಪಲದ್ವಯಂ ತತೋ ದದ್ಯಾದಗುರುಸ್ನೇಹಮುತ್ತಮಂ ।**
**ಏಕತ್ರ ಲೋಡಿತಾಂ ಕೃತ್ವಾ ಪೂರ್ವಪಾತ್ರೇ ನಿಧಾಪಯೇತ್ ॥ ೮ ॥**
**ಆಚ್ಛಾದ್ಯ ಕೇತಕೀಪತ್ರೈರ್ವೇಷ್ಟಯೇಚ್ಚೀನವಾಸಸಾ ।**
**ಗಂಧಸ್ತೇ ಸೋಮಮಂತ್ರೇಣ ರಕ್ಷೇದ್ಗರುಡಮುದ್ರಯಾ ॥ ೯ ॥**
**ಏವಂ ತು ಮಂಡಪೇ ತಸ್ಮಿನ್ನಾಧಿವಾಸಂ ನಿಧಾಪಯೇತ್ ।**
**ಅರುಣೋದಯಕಾಲೇಽಥ ನಯೇತ್ಕೃಷ್ಣಸ್ಯ ಸನ್ನಿಧಿಂ ॥ ೧೦ ॥**
**ಶಂಖಚಾಮರಛತ್ರಾದ್ಯೈರ್ಭ್ರಾಮಯಿತ್ವಾ ಸುರಾಲಯಂ ।**
**ದೇವಾಗ್ರೇ ಸ್ಥಾಪಯಿತ್ವಾ ಚ ಪೂಜಯೇತ್ಪುರುಷೋತ್ತಮಂ ॥ ೧೧ ॥**

---

ಸನದಲ್ಲಿ ಕುಳಿತುಕೊಂಡು ಬೇರೊಂದು ಪಾತ್ರೆಯಲ್ಲಿ ಇಪ್ಪತ್ತೈದು ಪಲಗಳ ಪ್ರಮಾಣದ ಚಂದನವನ್ನು ತೆಗೆದುಕೊಳ್ಳಬೇಕು.

೬. ಅದಕ್ಕೆ ಒಂದು ಪಲದ ಹೆಚ್ಚಿನ ಕೃಷ್ಣಾಗುರುವಿನ ಪಿಷ್ಟವನ್ನು ಸೇರಿಸಬೇಕು. ಅಗುರುವಿನ ಪ್ರಮಾಣದ ಅರ್ಧದಷ್ಟು ಕುಂಕುಮವನ್ನೂ, ಕುಂಕುಮದ ಅರ್ಧಪ್ರಮಾಣದಷ್ಟು ಸಿಹ್ಲಕಧೂಪದ ಧೂಳಿಯನ್ನೂ ಬೆರಸಬೇಕು.

೭. ಕಸ್ತೂರಿ ಮತ್ತು ಪಚ್ಚಕರ್ಪೂರಗಳ ಪ್ರಮಾಣವು ಸಿಹ್ಲಕದಂತೆಯೇ ಇರಬೇಕು. ಈ ದ್ರವ್ಯಗಳೆಲ್ಲವನ್ನೂ ಪಾಟಲೋದಕದಿಂದ ಒಂದಾಗಿ ಅರೆದು ಲೇಪವನ್ನು ಮಾಡಬೇಕು.

೮–೯. ಬಳಿಕ ಎರಡು ಪಲದಷ್ಟು ಅಗರುತೈಲವನ್ನು ಅದಕ್ಕೆ ಸೇರಿಸಿ ಚೆನ್ನಾಗಿ ಬೆರೆಯುವಂತೆ ಆಲೋಡನಮಾಡಿ ಮೇಲೆ ಹೇಳಿದ ಪಾತ್ರೆಯಲ್ಲಿ ಶೇಖರಿಸಿಡಬೇಕು. ಆ ಕಳಶವನ್ನು ಕೇದಿಗೆಯ ಗರಿಗಳಿಂದ ಆಚ್ಛಾದಿಸಿ ರೇಷ್ಮೆಯ ವಸ್ತ್ರವನ್ನು ಹೊದಿಸಬೇಕು. ಪರಮಾತ್ಮನಿಗರ್ಪಿಸಲ್ಪಡುವ ಈ ಗಂಧವನ್ನು ಸೋಮಮಂತ್ರದಿಂದಲೂ ಗರುಡ ಮುದ್ರೆಯಿಂದಲೂ ಅಭಿರಕ್ಷಿಸಬೇಕು.

೧೦. ಇಂತು ಕಳಶವನ್ನು ವಸ್ತ್ರಾದಿಗಳೊಡನೆ ಮಂಟಪಮಧ್ಯದಲ್ಲಿ ಸ್ಥಾಪಿಸಬೇಕು. ಅರುಣೋದಯಕಾಲವಾಗಲು ಅದನ್ನು ಜಗನ್ನಾಥನ ಸನ್ನಿಧಿಗೆ ತೆಗೆದುಕೊಂಡು ಹೋಗಬೇಕು.

೧೧. ಶಂಖ, ಚಾಮರ, ಛತ್ರ ಮುಂತಾದ ಮರ್ಯಾದೆಗಳಿಂದ ದೇವಾಲಯಕ್ಕೆ ಪ್ರದಕ್ಷಿಣೆಯನ್ನು ಮಾಡಿಸಿ ದೇವರ ಸಮ್ಮುಖದಲ್ಲಿರಿಸಿ ಬಳಿಕ ಪುರುಷೋತ್ತಮನ ಪೂಜೆಯನ್ನು ಮಾಡಬೇಕು.

ಉದ್ಘಾಟಯೇತ್ತತೋ ವಸ್ತ್ರಂ ದಿವ್ಯದೃಷ್ಟ್ಯಾವಲೋಕಯೇತ್ ।
ಪ್ರೋಕ್ಷಿತಂ ಮಂತ್ರರಾಜೇನ ಸಂಸ್ಕುರ್ಯಾತ್ತಾಡನಾದಿಭಿಃ ॥ ೧೨ ॥
ಗಂಧಪುಷ್ಪಾಕ್ಷತೈಃ ಪೂಜ್ಯ ಶ್ರಿಯಃ ಸೂಕ್ತೇನ ಲೇಪಯೇತ್ ।
ಶ್ರೀಶಸ್ಯ ಸರ್ವಗಾತ್ರೇಷು ಮೃದುಸ್ಪರ್ಶಂ ಶನೈಃ ಶನೈಃ ॥ ೧೩ ॥
ವೈಷ್ಣವಾ ಜಯಶಬ್ದೈಸ್ತಂ ವರ್ಧಯಂತಿ ತದಾ ಹರಿಂ ।
ನಾನಾಸೂಕ್ತೋಪನಿಷದೈರ್ವಿದ್ವಾಂಸಸ್ತಂ ಸ್ತುವಂತಿ ವೈ ॥ ೧೪ ॥
ವೇಣುವೀಣಾದಿಕೈರ್ನೃತ್ಯಗೀತವಾದ್ಯೈರನೇಕಶಃ ।
ವ್ಯಜನೈಶ್ಚಾಮರೈಶ್ಛತ್ರೈರನ್ಯೈರ್ನಾನೋಪಹಾರಕೈಃ ॥ ೧೫ ॥
ಸಂತೋಷಯನ್ಜಗನ್ನಾಥಂ ತೃತೀಯಾದೌ ವಿಲೇಪಯೇತ್ ।
ಯಸ್ಯ ಚಿಂತನಮಾತ್ರೇಣ ತಾಪಾ ನಶ್ಯಂತಿ ದೇಹಿನಾಂ ॥ ೧೬ ॥
ಸೋಽಸೌ ಸಂದರ್ಶನಾತ್ತಾಪಾನ್ನೃಣಾಂ ಹಂತಿ ತದಾ ದ್ವಿಜಾಃ ।
ಅಚಿಂತ್ಯಾ ಮಹಿಮಾ ವಿಷ್ಣೋರೀದೃಕ್ತಾದೃಕ್ತಯಾ ಸದಾ ॥ ೧೭ ॥

---

೧೨. ಬಳಿಕ ದೇವರ ವಸ್ತ್ರವನ್ನು ತೆಗೆದುಹಾಕಿ ಆತನನ್ನು ದಿವ್ಯ ದೃಷ್ಟಿಯಿಂದ ನೋಡಬೇಕು. ಮತ್ತು ಮಂತ್ರರಾಜವನ್ನುಚ್ಚರಿಸುತ್ತ ಅಂಗುಳಿತಾಡನದೊಡನೆ ಗಂಧೋದಕದ ಪ್ರೋಕ್ಷಣೆಯನ್ನು ಮಾಡಬೇಕು.

೧೩. ಗಂಧ, ಪುಷ್ಪ ಅಕ್ಷತೆಗಳಿಂದ ಜಗನ್ನಾಥನನ್ನು ಪೂಜಿಸಿ ಶ್ರೀ ಸೂಕ್ತದ ಮಂತ್ರಗಳನ್ನು ಪಠಿಸುತ್ತ ಮೃದುಹಸ್ತದಿಂದ ಮೆಲ್ಲಮೆಲ್ಲಗೆ ಶ್ರೀಪತಿಯ ಸರ್ವ ದೇಹದಲ್ಲಿಯೂ ಮೇಲೆ ಹೇಳಿದ ಕಳಶದ ಗಂಧವನ್ನು ಲೇಪಿಸಬೇಕು.

೧೪. ಆಗ ವಿಷ್ಣುಭಕ್ತರು ಜಯಕಾರಗಳಿಂದ ಶ್ರೀಹರಿಗೆ ಅಭಿವೃದ್ಧಿಯನ್ನು ಕೋರುತ್ತಿರಲು ವಿದ್ವಾಂಸರು ಅನೇಕ ಉಪನಿಷತ್ಸಾರಗಳನ್ನು ಹೊರಗೆಡಹುವ ಉತ್ತಮ ಕಾವ್ಯಪಾಠಗಳಿಂದ ಆತನನ್ನು ಸ್ತೋತ್ರಮಾಡುತ್ತಿರಬೇಕು.

೧೫–೧೬. ವೇಣು, ವೀಣೆ, ಮುಂತಾದ ವಾದ್ಯಗಳಿಂದಲೂ, ನೃತ್ಯಗೀತಗಳಿಂದಲೂ ಬಹುವಿಧಗಳಾದ ಬೀಸಣಿಗೆಗಳಿಂದಲೂ, ಚಾಮರಗಳಿಂದಲೂ, ಛತ್ರಗಳೇ ಮೊದಲಾದ ಇತರ ಸೇವೆಗಳಿಂದಲೂ ಬಹುವಿಧ ನೈವೇದ್ಯಗಳಿಂದಲೂ ಜಗನ್ನಾಥನಿಗೆ ಸಂತೋಷವನ್ನುಂಟುಮಾಡಬೇಕು. ತೃತೀಯಾತಿಥಿಯ ಪ್ರಾರಂಭದಲ್ಲಿ ಲೇಪವನ್ನು ಮಾಡಬೇಕು. ಈ ಉತ್ಸವವನ್ನು ಚಿಂತಿಸುವ ಮಾತ್ರದಿಂದಲೇ ಜೀವರ ಸಕಲ ಪಾತಕಗಳೂ ನಾಶವನ್ನು ಹೊಂದುವುವು.

೧೭. ವಿಪ್ರರಿರಾ! ಆ ಪರಮಾತ್ಮನು ಗಂಧಲೇಪನ ಸಮಯದಲ್ಲಿ ಸಂದರ್ಶನ ಮಾತ್ರದಿಂದಲೇ ಮಾನವರ ತ್ರಿವಿಧತಾಪಗಳನ್ನೂ ನಿರ್ಮೂಲಗೊಳಿಸುವನು. ಮಹಾವಿಷ್ಣುವಿನ ಮಹಿಮೆಯು ಯಾವಾಗಲೂ ಇಷ್ಟು ಅಷ್ಟೆಂದು ನಿರೂಪಿಸಲಾರದಷ್ಟು ಅಚಿಂತ್ಯವಾಗಿರುವುದು.

ತತಃ ಸೂಕ್ಷ್ಮಾಂಬರೈರ್ಮಾಲ್ಯೈರ್ಭಕ್ಷ್ಯಭೋಜ್ಯಾದಿಪಾನಕೈಃ ।
ದ್ರವ್ಯೈರ್ನಾನಾವಿಧೈರ್ಹೃದ್ಯೈರ್ಗವ್ಯೈರಾವರ್ತಿತೈಃ ಶುಭೈಃ ॥ ೧೮ ॥
ತತಃ ಸಂಪೂಜಯೇದ್ದೇವಂ ತಾಂಬೂಲೈಶ್ಚ ಸುಸಂಸ್ಕೃತೈಃ ।
ತಸ್ಮಿನ್ಕಾಲೇ ತು ಯೇ ಕೃಷ್ಣಂ ಭಕ್ತ್ಯಾ ಪಶ್ಯಂತಿ ಮಾನವಾಃ ॥ ೧೯ ॥
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ।
ವಿಷ್ಣೋಃ ಸ್ವರೂಪಮಾಸಾದ್ಯ ವಿಷ್ಣುಲೋಕೇ ವಸಂತಿ ವೈ ॥ ೨೦ ॥
ಪುರಾ ಕಲಿಯುಗೇ ವಿಪ್ರಾ ದಕ್ಷೋನಾಮ ಪ್ರಜಾಪತಿಃ ।
ಆಧ್ಯಾತ್ಮಿಕಾದಿಸಂತಾಪೈಃ ಸುದೀನಾನ್ವೀಕ್ಷ್ಯ ಮಾನವಾನ್ ॥ ೨೧ ॥
ತತ್ರ ಗತ್ವಾ ಕೃಪಾಯುಕ್ತೋ ಮಹಿಮಾನಂ ಚಕಾರ ವೈ ।
ಯಥಾವಿಧಿ ಮಯಾ ಪ್ರೋಕ್ತಂ ಸ ಏವ ಪ್ರಥಮಂ ದ್ವಿಜಾಃ ॥ ೨೨ ॥
ಪ್ರಲಿಪ್ಯ ಚಂದನೇನಾಂಗೇ ಮಾಧವಾಮಲಪಕ್ಷಕೇ ।
ತೃತೀಯಾಯಾಂ ಜಗನ್ನಾಥಂ ಸ್ತುತಿನೇತಾಂ ಮುದಾ ಜಗೌ ॥ ೨೩ ॥

---

೧೮. ಬಳಿಕ ನಯವಾದ ವಸ್ತ್ರಗಳಿಂದಲೂ, ಪುಷ್ಪಮಾಲೆಗಳಿಂದಲೂ, ಭಕ್ಷ್ಯಭೋಜ್ಯಗಳಿಂದಲೂ, ಪಾನಕಾದಿ ಪಾನೀಯಗಳಿಂದಲೂ, ನಾನಾವಿಧಗಳಾದ ಇತರ ಕಾಲೋಚಿತ ಪದಾರ್ಥಗಳಿಂದಲೂ, ಹೃದ್ಯಗಳೂ ಪವಿತ್ರಗಳೂ ಆದ ಆಕಳಿನ ಹಾಲು, ಬೆಣ್ಣೆ, ಮೊಸರು, ತುಪ್ಪ ಮುಂತಾದುವುಗಳಿಂದಲೂ ಭಗವಂತನನ್ನು ಪೂಜಿಸಬೇಕು.

೧೯–೨೦. ಬಳಿಕ ಸರ್ವೋಪಸ್ಕರಗಳಿಂದ ಕೂಡಿದ ತಾಂಬೂಲಗಳನ್ನು ದೇವದೇವನಿಗೆ ಸಮರ್ಪಿಸಬೇಕು. ಆ ಸಮಯದಲ್ಲಿ ಶ್ರೀ ಕೃಷ್ಣನನ್ನು ಯಾವ ಮಾನವರು ಭಕ್ತಿಯಿಂದ ನೋಡುವರೊ, ಅವರು ನೂರು ಕೋಟಿ ಕಲ್ಪಗಳಾದರೂ ಪುನಃ ಈ ಸಂಸಾರದಲ್ಲಿ ಜನನವನ್ನು ಪಡೆಯುವುದಿಲ್ಲ. ಅವರೆಲ್ಲರೂ ವಿಷ್ಣುವಿನ ಸಾರೂಪ್ಯಮೋಕ್ಷವನ್ನು ಪಡೆದು ವೈಕುಂಠಲೋಕದಲ್ಲಿಯೇ ವಾಸ ಮಾಡುತ್ತಿರುವರು.

೨೧. ಎಲೈ ವಿಪ್ರೋತ್ತಮರಿರಾ! ಪೂರ್ವದಲ್ಲಿ ದಕ್ಷನಾಮಕನಾದ ಪ್ರಜಾಪತಿಯು ಕಲಿಯುಗದಲ್ಲಿ ಹುಟ್ಟಿದ ಮನುಷ್ಯರೆಲ್ಲರೂ ಆಧ್ಯಾತ್ಮಿಕಾದಿ ತಾಪತ್ರಯಗಳಿಗೆ ಸಿಲುಕಿ ಅತ್ಯಂತ ದೀನರಾಗಿರುವುದನ್ನು ಕಂಡು ದುಃಖಿತನಾದನು.

೨೨. ಅವರಲ್ಲಿ ಕೃಪೆಯುಳ್ಳವನಾಗಿ ಜಗನ್ನಾಥ ಕ್ಷೇತ್ರಕ್ಕೆ ಹೋಗಿ ನಾನು ಮೇಲೆ ಹೇಳಿರುವಂತೆ ಯಥಾವಿಧಿಯಾಗಿ ಈ ಮಹೋತ್ಸವವನ್ನು ನಡೆಸಿದನು. ಎಲೈ ಬ್ರಾಹ್ಮಣರಿರಾ! ಆತನೇ ಈ ಉತ್ಸವವನ್ನು ಪ್ರಥಮದಲ್ಲಿ ನಡೆಸಿದವನು.

೨೩. ವೈಶಾಖ ಮಾಸದ ಶುಕ್ಲಪಕ್ಷ ತೃತೀಯೆಯಲ್ಲಿ ಸ್ವಾಮಿಯ ಅಂಗಗಳಿಗೆಲ್ಲ ಚಂದನಗಂಧವನ್ನು ಲೇಪನೆಮಾಡಿ ಸಂತೋಷದಿಂದ ಜಗನ್ನಾಥನನ್ನು ಕುರಿತು ಈ ರೀತಿಯಾಗಿ ಸ್ತೋತ್ರ ಮಾಡತೊಡಗಿದನು.

ದಕ್ಷ ಉವಾಚ :—

ದೇವದೇವ ಜಗನ್ನಾಥ ಸಹಜಾನಂದ ನಿರ್ಮಲ ।
ಸಂಸಾರಾರ್ಣವಸಂಮಗ್ನಾನ್ನಾಸ್ತ್ರಾಹಿ ನಃ ಪರಮೇಶ್ವರ ॥ ೨೪ ॥
ನಾನಾವಿಧೈಶ್ಚ ಸಂತಾಪೈಃ ಸಂತಪ್ತಾನ್ಮಾನವಾನಿಮಾನ್ ।
ಮಮಾನುಕ್ರೋಶಬುದ್ಧ್ಯಾ ವೈ ಶುಭದೃಷ್ಟ್ಯಾಮೃತೇನ ಚ ॥ ೨೫ ॥
ಸಂತರ್ಪಯ ತೃಣಾನ್ವೃಷ್ಟ್ಯಾಕೃಷ್ಣಮೇಘ ನಮೋಽಸ್ತು ತೇ ।
ಕಲಿಕಲ್ಮಷಸಂಮೂಢಾನುದ್ಧರ್ತುಂ ಜಗತಾಂ ಪತೇ ॥ ೨೬ ॥
ಅವತಾರೋಽಯಮೇತಸ್ಮಿನ್ನೀಲಾಚಲಗುಹಾಂತರೇ ।
ಚಿರಕಾಲಪ್ರರೂಢಾನಾಂ ದುಸ್ತ್ಯಜಾನಾಂ ಮಹಾಂಹಸಾಂ ॥ ೨೭ ॥
ರಾಶಿಂ ದಗ್ಧುಂ ತ್ವಮೇವೇಶೋ ದೀನಾನಾಥಕೃಪಾಕರ ।
ತ್ವದ್ದರ್ಶನಮಹಾಯೋಗೇ ಯಮಾದ್ಯಷ್ಟಾಂಗವರ್ಜಿತೇ ॥ ೨೮ ॥
ಯೇಷಾಂ ಮತಿಃ ಸಮುತ್ಪನ್ನಾ ಚತುರ್ವರ್ಗೈಕಸಾಧನೇ ।
ನ ತೇ ಶೋಚಂತಿ ದುಷ್ಪಾರೇ ಭವಾರಣ್ಯೇ ಮಹಾಭಯೇ ॥ ೨೯ ॥

---

೨೪. ದಕ್ಷನು ಹೇಳುತ್ತಾನೆ:—ದೇವದೇವನೆ! ಜಗನ್ನಾಥನೆ! ಆನಂದ ಸ್ವರೂಪನೆ! ನಿಷ್ಕಲ್ಮಷನೆ! ಪರಮೇಶ್ವರನಾದ ನೀನು ಸಂಸಾರವೆಂಬ ಅಗಾಧ ವಾದ ಸಮುದ್ರದಲ್ಲಿ ಬಿದ್ದು ಮುಳುಗುತ್ತಿರುವ ನಮ್ಮನ್ನು ರಕ್ಷಿಸು.

೨೫–೨೯. ಅನೇಕ ವಿಧಗಳಾದ ಸಂತಾಪಗಳಿಂದ ಈ ಮಾನವರು ಪರಿತಪಿಸುತ್ತಿರುವರು. ನನ್ನಲ್ಲಿ ಅನುಕಂಪ ಬುದ್ಧಿಯುಳ್ಳವನಾಗಿ ನೀನು ಕಾಲಮೇಘವು ಜಲಧಾರೆಗಳಿಂದ ಒಣಗುತ್ತಿರುವ ಹುಲ್ಲುಗಳನ್ನು ತೃಪ್ತಿಗೊಳಿಸುವಂತೆ ಇವರನ್ನೂ ಅಮೃತಮಯಗಳಾದ ನಿನ್ನ ಶುಭಕಟಾಕ್ಷಪಾತಗಳಿಂದ ಸಂತೋಷಗೊಳಿಸು. ನಿನಗೆ ನಮಸ್ಕರಿಸುವೆನು. ತ್ರಿಲೋಕೇಶ್ವರನೆ! ನೀಲಾಚಲದಲ್ಲಿರುವ ಈ ಗುಹೆಯಲ್ಲಿ ನಿನ್ನ ಅವತಾರವೇ ಕಲಿಕಲ್ಮಷಗಳ ಸಂಪರ್ಕದಿಂದ ಮೂಢರಾಗಿರುವ ಜನರನ್ನು ಉದ್ಧರಿಸುವುದಕ್ಕಾಗಿಯೇ ಆಗಿರುವುದು. ಅನಾದಿಕಾಲದಿಂದ ಆತ್ಮನಿಗೆ ಅಂಟಿಕೊಂಡು ನಿಂತು ತ್ಯಜಿಸಲು ಕಷ್ಟತರಗಳಾದ ಮಹಾಪಾತಕಗಳ ರಾಶಿಯನ್ನು ಸುಟ್ಟುಹಾಕಲು ನೀನೊಬ್ಬನೇ ಸಮರ್ಥನಾಗಿರುವೆ. ದೀನರಲ್ಲಿಯೂ ಅನಾಥರಲ್ಲಿಯೂ ಕೃಪಾನ್ವಿತನಾಗಿರುವೆ. ಯಮನಿಯಮಾದಿ ಅಷ್ಟಾಂಗರಹಿತರಾಗಿದ್ದರೂ ಯಾರಿಗೆ ಚತುರ್ವಿಧಪುರುಷಾರ್ಥಗಳಿಗೆ ಏಕಾಂತಸಾಧನವಾದ ನಿನ್ನ ಮಹೋತ್ಸವದ ದರ್ಶನವನ್ನು ಮಾಡಬೇಕೆಂಬ ಬುದ್ಧಿಯುಂಟಾಗಿರುವುದೊ, ಅವರು ದಾಟಲಸಾಧ್ಯವೂ ಮಹಾಭಯಂಕರವೂ ಆದ ಸಂಸಾರವೆಂಬ ಅರಣ್ಯದಲ್ಲಿಯೂ ದುಃಖಗೊಳ್ಳುವುದಿಲ್ಲ.

ಕರ್ಮಾನಪೇಕ್ಷಂ ದೇವೇಶ ನಾತ್ಮಜ್ಞಾನಂ ವಿಮೋಚಕಂ ।
ಇದಂ ತೇ ದರ್ಶನಂ ನಾಥ ವಿನಾ ಕರ್ಮಾಪಿ ಮೋಚಯೇತ್ ॥ ೩೦ ॥
ಜಯ ಕೃಷ್ಣ ಜಯೇಶಾನ ಜಯಾಕ್ಷರ ಜಯಾವ್ಯಯ ।
ಪ್ರಸೀದಾನುಗೃಹಾಣೇಮಾನ್ದೀನಾನ್ಮೂಢಾನ್ವಿಚೇತಸಃ ॥ ೩೧ ॥
ಇತಿ ಸ್ತುತ್ವಾ ದಂಡಪಾತಂ ಪಪಾತ ಚರಣಾಂಬುಜೇ ।
ಪ್ರಸೀದೇಶ ಪ್ರಸೀದೇಶ ಪ್ರಸೀದೇಶೇತಿ ಘೋಷಯನ್ ॥ ೩೨ ॥
ತತೋ ಜಗಾದ ಭಗವಾನ್ಸುಸ್ವರೇಣ ಪ್ರಜಾಪತಿಂ ।
ಉತ್ತಿಷ್ಠ ವತ್ಸ ತೇ ದತ್ತಂ ದುರ್ಲಭಂ ಯದ್ವರಂ ತ್ವಯಾ ॥ ೩೩ ॥
ಕಾಂಕ್ಷಿತಂ ಮತ್ಪ್ರಸಾದೇನ ಭವಿಷ್ಯತಿ ನ ಸಂಶಯಃ ।
ಮದನುಗ್ರಹೋಽಲ್ಪಪುಣ್ಯಾನಾಂ ದುರ್ಲಭೋ ವಿದಿತಸ್ತವ ॥ ೩೪ ॥
ಮದಂಗಜಾತೋಽಸ್ತಿ ಭವಾನ್ಮಾಂ ತ್ವಂ ಪ್ರಾರ್ಥಿತವಾನಸಿ ।
ಮಮೋತ್ಸವೇನ ಸಂತೋಷ್ಯಂ ತತಸ್ತೇ ಪ್ರದದಾಮ್ಯಹಂ ॥ ೩೫ ॥

---

೩೦. ದೇವದೇವನೆ! ಯಜ್ಞಯಾಗಾದಿ ಕರ್ಮಗಳ ನಿರಪೇಕ್ಷೆಯಿಂದ ಕೂಡಿದ ಆತ್ಮಜ್ಞಾನವು ಮನುಷ್ಯನಿಗೆ ಮೋಕ್ಷವನ್ನು ದೊರಕಿಸಲಾರದು. ಆದರೆ ಲೋಕೇಶ್ವರನಾದ ನಿನ್ನ ದರ್ಶನವಾದರೊ, ಯಾವ ಸಾಧನವೂ ಇಲ್ಲದೆಯೇ ಮುಕ್ತಿಯನ್ನು ಕೊಡುವುದು.

೩೧. ಶ್ರೀ ಕೃಷ್ಣನೆ! ಲೋಕೇಶ್ವರನೆ! ನಾಶರಹಿತನೆ! ಜರಾವರ್ಜಿತನೆ! ಜಯಶೀಲನಾಗು. ದೀನರೂ, ಬುದ್ಧಿಹೀನರೂ, ಗತಸತ್ವರೂ ಆಗಿರುವ ಈ ಮಾನವರಲ್ಲಿ ಪ್ರಸನ್ನನಾಗಿ ಅನುಗ್ರಹವನ್ನುಮಾಡು.

೩೨. ಇಂತೆಂದು ಸ್ತೋತ್ರವನ್ನು ಮಾಡಿ "ಸ್ವಾಮಿಯೆ! ನನಗೆ ಪ್ರಸನ್ನನಾಗು" ಎಂಬುದಾಗಿ ಮತ್ತೆ ಮತ್ತೆ ಗಟ್ಟಿಯಾಗಿ ಪ್ರಾರ್ಥಿಸುತ್ತ ಜಗನ್ನಾಥನ ಪಾದಕಮಲಗಳಲ್ಲಿ ದಕ್ಷಪ್ರಜಾಪತಿಯು ಬಿದ್ದು ಹೊರಳುತ್ತಿದ್ದನು.

೩೩–೩೪. ಆಗ ಭಗವಂತನು ಮೃದುಮಧುರವಾದ ವಾಣಿಯಿಂದ ಪ್ರಜೇಶ್ವರನನ್ನು ಕುರಿತು ಇಂತೆಂದನು. ಕುಮಾರನೆ! ಮೇಲಕ್ಕೇಳು. ನೀನು ಅಪೇಕ್ಷಿಸಿದ ಅತ್ಯಂತ ದುರ್ಲಭವಾದ ವರವನ್ನೂ ಸಹ ನಿನಗೆ ಕೊಟ್ಟಿರುವೆನು ನನ್ನ ಅನುಗ್ರಹದಿಂದ ನೀನು ಪ್ರಾರ್ಥಿಸಿದಂತೆ ನಡೆಯುವುದರಲ್ಲಿ ಸಂದೇಹ ವಿಲ್ಲವು. ನನ್ನ ಅನುಗ್ರಹವು ಕ್ಷೀಣಪುಣ್ಯರಾದವರಿಗೆ ದುರ್ಲಭವಾದುದೆಂಬ ವಿಷಯವು ನಿನಗೆ ತಿಳಿದೇ ಇರುವುದು.

೩೫. ನೀನು ನನ್ನ ಶರೀರದಿಂದಲೇ ಉದ್ಭವಿಸಿರುವೆ. ನನ್ನನ್ನೇ ಪ್ರಾರ್ಥಿಸುತ್ತಿರುವೆ. ನನ್ನ ಮಹೋತ್ಸವವನ್ನು ನೆರವೇರಿಸಿರುವೆಯಾದುದರಿಂದ ಪಾರಿತೋಷಕವಾಗಿ ನಿನಗೆ ಒಂದು ವರವನ್ನು ಕೊಡುವೆನು.

ಇಮಾಮಕ್ಷಯಯಾತ್ರಾಂ ಯೇ ಭಕ್ತ್ಯಾ ಪಶ್ಯಂತಿ ಹರ್ಷಿತಾಃ ।
ತಸ್ಮಿನ್ಕಾಲೇ ಯದಿಚ್ಛಂತಿ ಮನಸಾ ತದವಾಪ್ನುಯುಃ ॥ ೩೬ ॥
ಯಥಾ ಸಂತಾಪಹರಣಂ ಚಂದನೇನಾನುಲೇಪನಂ ।
ತಥೋತ್ಸವೋಽಯಂ ಮೇ ದಕ್ಷ ಸಂತಾಪತ್ರಯನಾಶನಃ ॥ ೩೭ ॥
ಮತ್ಪ್ರೇರಿತಮತಿಸ್ತ್ವಂ ಹಿ ಉತ್ಸವಂ ಕೃತವಾನಸಿ ।
ಸಂಕಲ್ಪಿತೋಽಯಂ ಮನಸಾ ದೀನೋದ್ಧೃತ್ಯೈ ಮಯಾ ಧ್ರುವಂ ॥ ೩೮ ॥
ತ್ವಯಾಭಿಕಾಂಕ್ಷಿತಂ ಸರ್ವಂ ದಾಸ್ಯಾಮ್ಯೇವ ಪ್ರಜಾಪತೇ ।
ದ್ವಾದಶೈತಾ ಮಹಾಯಾತ್ರಾ ಗುಂಡಿಚಾದ್ಯಾಸ್ತು ಪಾವನಾಃ ॥ ೩೯ ॥
ಏಕೈಕಾ ಮುಕ್ತಿದಾ ಸರ್ವಾ ಧರ್ಮಕಾಮಾರ್ಥವರ್ಧನಾಃ ॥ ೪೦ ॥
ತಾಸಾಮೇಕತಮಾಂ ವಾಪಿ ಯೋ ಭಕ್ತ್ಯಾ ಚಾವಲೋಕಯೇತ್ ।
ಏಕಯಾಪಿ ಭವಾಬ್ಧಿಂ ಸ ತೀರ್ತ್ವಾ ವಿಷ್ಣುಪದಂ ವ್ರಜೇತ್ ॥ ೪೧ ॥

---

೩೬. ಭಕ್ತಿಯಿಂದಲೂ ಸಂತೋಷದಿಂದಲೂ ಕೂಡಿದ ಯಾವ ಭಕ್ತರು ಅಕ್ಷಯ ತೃತೀಯೆಯ ಈ ಮಹೋತ್ಸವವನ್ನು ನೋಡುವರೊ, ಅವರು ದರ್ಶನ ಕಾಲದಲ್ಲಿ ಅಪೇಕ್ಷಿಸಿದ ಅರ್ಥಗಳೆಲ್ಲವೂ ಅವರಿಗೆ ಕೈಗೂಡುವುವು.

೩೭. ದಕ್ಷಪ್ರಜಾಪತಿಯೆ! ಈ ಚಂದನದ ಅನುಲೇಪನವು ಹೇಗೆ ಸಂತಾಪವನ್ನು ನಾಶಗೊಳಿಸುವುದೊ, ಹಾಗೆಯೇ ನನಗೆ ಸಲ್ಲಿಸುವ ಈ ಉತ್ಸವವೂ ತ್ರಿವಿಧತಾಪಗಳನ್ನೂ ಭಜಕರಿಗೆ ನಾಶಗೊಳಿಸುವುದು.

೩೮. ನನ್ನ ಪ್ರೇರಣೆಯನ್ನು ಹೊಂದಿದ ಬುದ್ಧಿಯಿಂದಲೇ ನೀನು ಈ ಮಹೋತ್ಸವವನ್ನು ಮಾಡಿರುವೆ. ದೀನರನ್ನು ಉದ್ಧರಿಸಬೇಕೆಂಬ ನನ್ನ ಸಂಕಲ್ಪಕ್ಕನುಸಾರವಾದ ಬುದ್ಧಿಯಿಂದಲೇ ನೀನು ವ್ಯಾಪಾರವನ್ನು ನಡೆಸಿರುವೆಯೆಂಬುದು ನಿಶ್ಚಯವು.

೩೯. ಪ್ರಜೇಶ್ವರನೆ! ನೀನು ಅಪೇಕ್ಷಿಸಿದುದನ್ನೆಲ್ಲ ನೀಡುವೆನು. ಗುಂಡಿಚ ಯಾತ್ರೆಯೇ ಮೊದಲಾದ ನನ್ನ ಹನ್ನೆರಡು ಮಹಾಯಾತ್ರೆಗಳೂ ಪರಮ ಪವಿತ್ರಗಳಾಗಿರುವುವು.

೪೦. ಇವುಗಳಲ್ಲಿ ಒಂದೊಂದನ್ನು ನಡೆಸಿದರೂ ಮುಕ್ತಿಯು ಸಿಕ್ಕುವುದು. ಎಲ್ಲವನ್ನೂ ಸಮಗ್ರವಾಗಿ ನೆರವೇರಿಸಲು ಧರ್ಮ, ಅರ್ಥ, ಕಾಮಗಳೆಲ್ಲವನ್ನೂ ಕೈಗೂಡಿಸುವುವು.

೪೧. ಅವುಗಳಲ್ಲಿ ಒಂದೇ ಒಂದನ್ನಾದರೂ ಯಾವನು ಭಕ್ತಿ ಶ್ರದ್ಧೆಗಳಿಂದ ನೋಡಿ ಸಂತೋಷಿಸುವನೊ, ಅವನು ಆ ಒಂದರಿಂದಲೇ ಸಂಸಾರ ಸಾಗರವನ್ನು ಹಾಟಿ ವೈಕುಂಠವನ್ನು ಸೇರುವನು.

ಜೈಮಿನಿರುವಾಚ :—

ಇತ್ಯುದೀರ್ಯ ಪ್ರಜಾನಾಥಂ ಭಗವಾನ್ಸ ತಿರೋದಧೇ ॥ ೪೨ ॥
ದಕ್ಷಃ ಪ್ರಜಾಪತಿಃ ಸೋಽಪಿ ಶ್ರದ್ದಧಾನಸ್ತದಾಜ್ಞಯಾ ।
ಸಂವತ್ಸರಂ ಗಿರೌ ಸ್ಥಿತ್ವಾ ಸಂದದರ್ಶ ಮಹೋತ್ಸವಾನ್ ॥ ೪೩ ॥
ಸರ್ವಜ್ಞೋ ಬ್ರಾಹ್ಮಣೋ ಭೂತ್ವಾ ಕೌಶಿಕಸ್ಯ ಕುಲೋತ್ತಮೇ ।
ಲೋಕಾನ್ಪ್ರವರ್ತಯಾಮಾಸ ಯಥಾವಿಧಿ ಮಹೇಷು ಸಃ ॥ ೪೪ ॥
ವಿಶ್ವಾಸಾಯಾಲ್ಪಬುದ್ಧೀನಾಂ ಯಾತ್ರಾ ವೈ ಪರಿಕೀರ್ತಿತಾಃ ।
ಅಯಂ ಚ ಸಾಕ್ಷಾತ್ಪರಮಬ್ರಹ್ಮರೂಪೀ ಜಗದ್ಗುರುಃ ।
ಪ್ರಸಾದಿತಃ ಸುರೇಶೇನ ಲೋಕಾನುಗ್ರಹಣಾಯ ವೈ ॥ ೪೫ ॥
ಯಥಾ ತಥಾ ದೃಷ್ಟಿಪಥಂ ಯಾತೋ ಮುಕ್ತಿಪ್ರದೋ ಭವೇತ್ ।
ಸರ್ವಾನ್ಕಾಮಾನ್ದದಾತ್ಯೇವ ನಾರೀಣಾಂ ನಾತ್ರ ಸಂಶಯಃ ॥ ೪೬ ॥
ಸತ್ಯಪ್ರತಿಜ್ಞೋ ಭಗವಾಂಸ್ತತ್ರಾಸ್ತೇ ಮಧುಸೂದನಃ ।
ಶೋಕಂ ತರತಿ ಯಂ ದೃಷ್ಟ್ವಾ ಭವಪಾಥೋಧಿಸಂಭವಂ ॥ ೪೭ ॥

---

೪೨. ಜೈಮಿನಿಯು ಹೇಳುತ್ತಾನೆ —ಇಂತೆಂದು ಭಗವಂತನು ಪ್ರಜಾಪತಿಯಾದ ದಕ್ಷನಿಗೆ ವರವನ್ನು ಕೊಟ್ಟು ಆತನು ನೋಡುತ್ತಿರುವಂತೆಯೇ ಅಂತರ್ಧಾನವನ್ನು ಹೊಂದಿದನು.

೪೩. ದಕ್ಷಬ್ರಹ್ಮನೂ ಸಹ ಪರಮಾತ್ಮನ ಅಪ್ಪಣೆಯನ್ನು ಶಿರಸಾವಹಿಸಿ ಶ್ರದ್ಧಾನ್ವಿತನಾಗಿ ನೀಲಾಚಲದಲ್ಲಿ ಒಂದು ವರ್ಷದವರೆವಿಗೂ ನೆಲಸಿದ್ದು ಪರಮಾತ್ಮನ ಸಕಲ ಮಹೋತ್ಸವಗಳನ್ನೂ ದರ್ಶನಮಾಡಿದನು.

೪೪. ಅದರ ಫಲವಾಗಿ ಉತ್ತಮವಾದ ಕೌಶಿಕವಂಶದಲ್ಲಿ ಸರ್ವಜ್ಞನಾದ ಬ್ರಾಹ್ಮಣನಾಗಿ ಜನ್ಮವನ್ನು ತಳೆದು ಸಕಲ ಜನರನ್ನೂ ಯಥಾವಿಧಿಯಾದ ಮಹೋತ್ಸವಗಳನ್ನು ನಡೆಸುವುದರಲ್ಲಿ ಆಸಕ್ತರನ್ನಾಗಿ ಮಾಡಿದನು.

೪೫. ಈ ಜಗನ್ನಾಥನೇ ಸಾಕ್ಷಾತ್ತಾಗಿ ಲೋಕಗುರುವಾದ ಪರಬ್ರಹ್ಮವಸ್ತುವಾಗಿರುವನು. ಲೋಕಾನುಗ್ರಹಕ್ಕಾಗಿಯೇ ಶ್ರೀ ಮಹಾವಿಷ್ಣುವು ಈ ರೂಪವನ್ನು ಭೂಮಂಡಲದಲ್ಲಿ ಅನುಗ್ರಹಿಸಿರುವನು.

೪೬. ಪ್ರಯತ್ನಪೂರ್ವಕವಾಗಿಯಾಗಲಿ ಆಕಸ್ಮಿಕವಾಗಿಯಾಗಲಿ ಮನುಷ್ಯನು ಸ್ವಾಮಿಯ ದೃಷ್ಟಿಪಥಕ್ಕೆ ಬಿದ್ದನೆಂದರೆ ಸಾಕು. ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು. ತನ್ನ ದರ್ಶನವನ್ನು ಮಾಡುವ ಸ್ತ್ರೀಯರಿಗೂ ಸಹ ಸ್ವಾಮಿಯು ಸಕಲಾಭೀಷ್ಟಗಳನ್ನೂ ಕೊಡುವನೆಂಬುದರಲ್ಲಿ ಸಂದೇಹವಿಲ್ಲವು.

೪೭. ಭಗವಂತನಾದ ಮಧುಸೂದನನು ಇಲ್ಲಿ ಸತ್ಯಪ್ರತಿಜ್ಞನೆಂಬ ಬಿರುದನ್ನು ಪಡೆದು ನೆಲಸಿರುವನು. ಆತನನ್ನು ನೋಡಿದ ಮಾತ್ರದಿಂದಲೇ

**ಕಿಂ ವ್ರತೈಃ ಕಿಂ ತಪೋದಾನೈಃ ಕಿಂ ಕೃಚ್ಛ್ರೈಃ ಕ್ರತುಭಿಸ್ತಥಾ ।**
**ಕಿಮಷ್ಟಾಂಗೇನ ಯೋಗೇನ ಕಿಂ ಸಾಂಖ್ಯೇನ ಪರೇಣ ಚ ॥ ೪೮ ॥**
**ತೀರ್ಥರಾಜಜಲೇ ಸ್ನಾತ್ವಾ ಕ್ಷೇತ್ರೇ ಶ್ರೀಪುರುಷೋತ್ತಮೇ ।**
**ನ್ಯಗ್ರೋಧಮೂಲವಸತೌ ವಸಂತಂ ಚರ್ಮಚಕ್ಷುಷಾ ।**
**ದೃಷ್ಟ್ವಾ ದಾರುಮಯಂ ಬ್ರಹ್ಮ ದೇಹಬಂಧಾತ್ಪ್ರಮುಚ್ಯತೇ ॥ ೪೯ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ
ಸಂವಾದೇ "ಅಕ್ಷಯತೃತೀಯೋತ್ಸವವರ್ಣನಂ" ನಾಮ
ಷಟ್ಚತ್ವಾರಿಂಶೋಽಧ್ಯಾಯಃ

---

ಮಾನವನು ಸಂಸಾರ ಸಮುದ್ರದ ಮಜ್ಜನದುಃಖವನ್ನು ನೀಗುವನು.

೪೮. ವ್ರತೋಪವಾಸಗಳಿಂದಲೂ, ತಪಸ್ಸುಗಳಿಂದಲೂ, ದಾನಗಳಿಂದಲೂ, ಕೃಚ್ಛ್ರಾದಿ ಪ್ರಾಯಶ್ಚಿತ್ತಗಳಿಂದಲೂ, ಯಜ್ಞಯಾಗಾದಿಗಳಿಂದಲೂ, ಅಷ್ಟಾಂಗ ಸಹಿತವಾದ ಯೋಗದಿಂದಲೂ, ಅದಕ್ಕೂ ಹೆಚ್ಚಿನದಾದ ಸಾಂಖ್ಯದಿಂದಲೂ ಮನುಷ್ಯನಿಗಾಗಬೇಕಾದುದೇನು ?

೪೯. ಶ್ರೀ ಪುರುಷೋತ್ತಮ ಕ್ಷೇತ್ರವನ್ನು ಸೇರಿ ತೀರ್ಥರಾಜವೆನಿಸಿದ ಸಮುದ್ರದಲ್ಲಿ ಸ್ನಾನವನ್ನುಮಾಡಿ ಮಾನವರು ಆಲದಮರದ ಬುಡದಲ್ಲಿ ದಾರುಮಯಶರೀರನಾಗಿ ವಾಸಮಾಡುತ್ತಿರುವ ಪರಬ್ರಹ್ಮ ವಸ್ತುವನ್ನು ನೋಡಲು ದೇಹಪಾಶದಿಂದ ಬಿಡುಗಡೆಯನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ
ಮಾಹಾತ್ಮ್ಯದ ಜೈಮಿನಿ ಋಷಿಸಂವಾದದಲ್ಲಿ "ಅಕ್ಷಯತೃತೀಯೋತ್ಸವವರ್ಣನ"ವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಚತ್ವಾರಿಂಶೋಽಧ್ಯಾಯಃ

## ಭಗವದುಪಾಸನಾವಿಧಿವರ್ಣನಂ

ಮುನಯ ಊಚುಃ :—

ಭಗವನ್ಸರ್ವಶಾಸ್ತ್ರಜ್ಞ ಶ್ರುತಂ ಪರಮಮದ್ಭುತಂ ।
ಯಾತ್ರಾರೂಪಂ ಭಗವತೋ ಮಾಹಾತ್ಮ್ಯಂ ಪಾಪನಾಶನಂ ॥ ೧ ॥
ಯಥಾಯಂ ಪೂಜಿತೋ ದೇವಃ ಕರ್ಮಿಭಿಃ ಸರ್ವಕಾಮದಃ ।
ಭೂತ್ಯುಪಾಸನಯಾ ಭೂತಿಪ್ರದೋ ಬ್ರೂಹಿ ತಥಾ ಹಿ ನಃ ॥ ೨ ॥

ಜೈಮಿನಿರುವಾಚ :—

ಸರ್ವಾ ವಿಭೂತಯೋ ವಿಷ್ಣೋರ್ಜಗತ್ಯಸ್ಮಿಂಶ್ಚರಾಚರಾಃ ।
ಭೂತಿಪ್ರದೋ ವಿಭೂತಿಶ್ಚ ಸ ಏಕಃ ಪರಮೇಶ್ವರಃ ॥ ೩ ॥
ಯಥಾ ಯಥೋಪಚರತಿ ತಥಾ ವೈ ಜಾಯತೇ ನರಃ ।
ಏತಾವದಸ್ಯ ಮಹಿಮಾ ಪರಿಮಾತುಂ ನ ಶಕ್ಯತೇ ॥ ೪ ॥
ಯೋ ಯಥಾ ಸಮುಪಾಸ್ತೇ ತಂ ತಥಾ ವೈ ಫಲಮಾಪ್ನುಯಾತ್ ।
ಏಕಃ ಪಂಥಾಃ ಚತುರ್ಣಾಂ ವೈ ಧರ್ಮಾದೀನಾಂ ಸ ದಾರವಃ ॥ ೫ ॥

---

## ಕನ್ನಡದ ಅನುವಾದ

### ಭಗವದುಪಾಸನಾವಿಧಿ ವರ್ಣನ

೧. ಮುನಿಗಳು ಪ್ರಶ್ನೆಮಾಡುತ್ತಾರೆ :—ಸಕಲಶಾಸ್ತ್ರಾರ್ಥಗಳನ್ನೂ ತಿಳಿದ ಜೈಮಿನಿ ಮಹರ್ಷಿಯೆ! ಪರಮಾದ್ಭುತವೂ, ಪಾಪನಾಶಕವೂ ಆದ ಭಗವಂತನ ಮಹೋತ್ಸವರೂಪವಾದ ಮಾಹಾತ್ಮ್ಯೆಯನ್ನು ಕೇಳಿದೆವು.

೨. ಇನ್ನು ಈ ದೇವೇಶ್ವರನು ಯಾವ ಯಾವ ಪೂಜಾವಿಧಾನಗಳಿಂದ ಕಾಮ್ಯ ಫಲಾಸಕ್ತರಿಗೆ ಕಾಮ್ಯ ಭೋಗಗಳನ್ನೂ, ವಿಭೂತ್ಯುಪಾಸಕರಿಗೆ ಅಷ್ಟೈಶ್ವರ್ಯಗಳನ್ನೂ ಹೇಗೆ ಕೊಡುವನೆಂಬುದನ್ನು ನಮಗೆ ವಿವರಿಸು.

೩. ಜೈಮಿನಿಯು ಹೇಳುತ್ತಾನೆ :—ಈ ಬ್ರಹ್ಮಾಂಡದಲ್ಲಿರುವ ಸ್ಥಾವರ ಜಂಗಮ ಪದಾರ್ಥಗಳೆಲ್ಲವೂ ಮಹಾವಿಷ್ಣುವಿನ ವಿಭೂತಿರೂಪಗಳೇ ಆಗಿರುವವು. ಒಬ್ಬನಾದ ಪರಮೇಶ್ವರನೇ ಭೂತಿಪ್ರದನೂ ವಿಭೂತಿ ಸಹಿತನೂ ಆಗಿರುವನು.

೪. ಯಾವ ಮನುಷ್ಯನು ಆತನನ್ನು ಹೇಗೆ ಆರಾಧಿಸುವನೊ, ಆ ಆರಾಧನೆಗನುಗುಣವಾದ ಜನ್ಮವನ್ನೇ ಆತನು ಪಡೆಯುವನು. ಪರಮಾತ್ಮನ ಮಹಿಮೆಯು ಇಷ್ಟೇಸರಿಯೆಂದು ನಿಶ್ಚಯಿಸಿ ಹೇಳಲು ಯಾರಿಗೂ ಶಕ್ಯವಲ್ಲ.

೫. ಯಾವನು ಮಹಾವಿಷ್ಣುವನ್ನು ಹೇಗೆ ಉಪಾಸನೆಮಾಡುವನೊ,

ಧರ್ಮಸ್ಯ ಪಂಥಾ ಗಹನಃ ಸಂಕೀರ್ಣೋ ಬಹುಶಾಸನೈಃ ।
ತತ್ತ್ವಾವಧಾರಣೇ ನಾಸ್ಯ ಕ್ಷಮಃ ಕೋಽಪಿ ದ್ವಿಜೋತ್ತಮಾಃ ॥ ೬ ॥
ಅರ್ಥಕಾಮೌ ಹಿ ತನ್ಮೂಲಾವಿತ್ಥಂ ಸ್ಥೂಲಗತೀ ಸದಾ ।
ತೇಷಾಂ ತ್ರಯಾಣಾಂ ಭಗವಾನನಾಯಾಸೇನ ವೃದ್ಧಿಕೃತ್ ॥ ೭ ॥
ಧರ್ಮೋ ಹಿ ಭಗವಾನ್ವಿಷ್ಣುರ್ಧರ್ಮಮೂಲಮಿದಂ ಜಗತ್ ।
ಧರ್ಮಸ್ಯ ಜಗತಶ್ಚಾಪಿ ಪ್ರಭುರೇಷ ಜನಾರ್ದನಃ ॥ ೮ ॥
ಪುರುಷಾರ್ಥಮಯೋ ತಸ್ಮಿನ್ಭಕ್ತಿರ್ಯಸ್ಯ ಪ್ರತಿಷ್ಠಿತಾ ।
ಸ ಸರ್ವಕಾಮತೃಪ್ತಾತ್ಮಾ ನ ಶೋಚತಿ ನ ಕಾಂಕ್ಷತಿ ॥ ೯ ॥
ತ್ರೈಲೋಕ್ಯೈಶ್ವರ್ಯದಾತಾಸೌ ಶಕ್ರರೂಪೋ ಹ್ಯುಪಾಸಿತಃ ।
ಭಾವಿತೋ ಧಾತೃರೂಪೇಣ ವಂಶವೃದ್ಧಿಕರೋ ಹರಿಃ ॥ ೧೦ ॥

---

ಹಾಗೆಯೇ ಫಲವನ್ನೂ ಸಹ ಪಡೆಯುವನು. ಸರ್ವೇಶ್ವರನಾದ ಒಬ್ಬನೇ ದಾರುಮಯಶರೀರವನ್ನು ತಳೆದು ನಿಂತು ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಮಾರ್ಗಗಳಿಗೂ ಏಕಲಕ್ಷ್ಯನಾಗಿರುವನು.

೬. ಧರ್ಮದ ಮಾರ್ಗವು ಅತ್ಯಂತ ಕಠಿನವಾಗಿಯೂ ಅನೇಕ ಕರ್ತವ್ಯಾಕರ್ತವ್ಯರೂಪ ಶಾಸನಗಳಿಂದ ಕೂಡಿದುದಾಗಿಯೂ ಇರುವುದು. ಬ್ರಾಹ್ಮಣ ಶ್ರೇಷ್ಠರಿರಾ! ಅದರ ತತ್ತ್ವವನ್ನು ಕೂಲಂಕಷವಾಗಿ ತಿಳಿಯಲು ಯಾವ ಮನುಷ್ಯನೂ ಸಾಮರ್ಥ್ಯವನ್ನು ಪಡೆದಿರಲಾರನು.

೭. ಸ್ಥೂಲಭೋಗಗಳನ್ನೊದಗಿಸುವ ಅರ್ಥಕಾಮಗಳೆರಡೇ ಯಾವಾಗಲೂ ಸಾಧಾರಣವಾಗಿ ಧರ್ಮಾಚರಣೆಗೆ ಕಾರಣಗಳಾಗಿರುವುವು. ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳನ್ನೂ ಭಗವಂತನು ಅನಾಯಾಸವಾಗಿಯೇ ವೃದ್ಧಿಗೊಳಿಸುತ್ತಿರುವನು.

೮. ಅಷ್ಟೈಶ್ವರ್ಯಸಂಪನ್ನನಾದ ಮಹಾವಿಷ್ಣುವು ಧರ್ಮಸ್ವರೂಪನೇ ಆಗಿರುವನು. ಈ ಪ್ರಪಂಚವೂ ಧರ್ಮಮೂಲವುಳ್ಳದುದೇ ಆಗಿರುವುದು. ಜನಾರ್ದನನಾದರೊ ಧರ್ಮ ಮತ್ತು ಜಗತ್ತುಗಳೆರಡಕ್ಕೂ ಸ್ವಾಮಿಯಾಗಿರುವನು.

೯. ಸಕಲ ಪುರುಷಾರ್ಥಗಳ ಪ್ರಾಪ್ಯವಸ್ತುವಾದ ಆತನಲ್ಲಿ ಯಾವನಿಗೆ ದೃಢವಾದ ಭಕ್ತಿಯು ನೆಲಸಿರುವುದೊ, ಅವನು ಸಮಸ್ತಾಭಿಲಾಷೆಗಳ ಲಾಭದಿಂದ ಸಂತುಷ್ಟಾಂತರಂಗನಾಗಿ ಶೋಕವನ್ನಾಗಲಿ ಕ್ಷುದ್ರಾಶೆಯನ್ನಾಗಲಿ ಮಾಡಲಾರನು.

೧೦. ಮಹೇಂದ್ರನ ರೂಪದಿಂದ ಉಪಾಸಿತನಾದ ಆತನು ಮೂರು ಲೋಕಗಳ ಐಶ್ವರ್ಯವನ್ನೂ ಕೊಡುವನು. ಆ ಶ್ರೀಹರಿಯೇ ಪ್ರಜಾಪತಿಯಾದ ಬ್ರಹ್ಮದೇವನಾಗಿ ಉಪಾಸಿಸಲ್ಪಟ್ಟರೆ ವಂಶವೃದ್ಧಿಯನ್ನು ಅನುಗ್ರಹಿಸುವನು.

ಸನತ್ಕುಮಾರರೂಪೇಣ ದೀರ್ಘಮಾಯುಃ ಪ್ರಯಚ್ಛತಿ ।
ವೃತ್ತಿಸಂಪತ್ಪ್ರದೋ ಹ್ಯೇಷ ಪೃಥುರೂಪೇಣ ಭಾವಿತಃ ॥ ೧೧ ॥
ಗಂಗಾದಿತೀರ್ಥಫಲದೋ ವಾಚಸ್ಪತಿರುಪಾಸಿತಃ ।
ಅಂತಸ್ತಮಃ ಪ್ರಣುದತಿ ಭಾಸ್ವದ್ರೂಪೇಣ ಭಾವಿತಃ ॥ ೧೨ ॥
ಸೌಭಾಗ್ಯಮತುಲಂ ದದ್ಯಾದಮೃತಾಂಶುರುಪಾಸಿತಃ ।
ವಿದ್ಯಾಷ್ಟಾದಶತತ್ವಜ್ಞೋ ವಾಕ್ಪತಿತ್ವೇನ ಭಾವಯನ್ ॥ ೧೩ ॥
ವಾಜಿಮೇಧಾದಿಯಜ್ಞಾನಾಂ ಫಲದೋಽಯಂ ಸನಾತನಃ ।
ಯಜ್ಞೇಶ್ವರಸ್ವರೂಪೇಣ ಭಾವಿತೋಽಯಂ ಜಗನ್ಮಯಃ ॥ ೧೪ ॥
ಧ್ಯಾತಃ ಕುಬೇರರೂಪೇಣ ಸಮೃದ್ಧಿಮತುಲಾಂ ದದೇತ್ ॥ ೧೫ ॥
ಏವಂ ದಯಾಂಬುಧಿರಸೌ ತಸ್ಮಿನ್ನೀಲಾಚಲೇ ವಸನ್ ।
ದೀನಾನಾಥಾನುಗ್ರಹಾಯ ದಾರುವ್ಯಾಜಶರೀರವಾನ್ ॥ ೧೬ ॥
ಪ್ರಯಾತ ತತ್ರ ಭೋ ವಿಪ್ರಾ ವಸಧ್ವಂ ಸುಸಮಾಹಿತಾಃ ।
ಶ್ರೀಶಪಾದಾಬ್ಜಯುಗಲಂ ಶರಣಂ ತತ್ರ ಪ್ರಪದ್ಯಥ ॥ ೧೭ ॥

---

೧೧. ಸನತ್ಕುಮಾರ ಸ್ವರೂಪದಿಂದ ದೀರ್ಘಾಯುಷ್ಯವನ್ನು ಕೊಡುವನು. ಅಗ್ನಿಯ ಸ್ವರೂಪದಿಂದ ಧ್ಯಾನಿಸಲ್ಪಡಲು ಈತನೇ ಉದ್ಯೋಗವನ್ನೂ ಐಶ್ವರ್ಯವನ್ನೂ ಭಕ್ತರಿಗೆ ಉಂಟುಮಾಡುವನು.

೧೨. ಈತನೇ ಬ್ರಹ್ಮದೇವನೆಂಬುದಾಗಿ ತಿಳಿದು ಉಪಾಸನೆಯನ್ನುಮಾಡಲು ಗಂಗಾದಿ ಸಕಲತೀರ್ಥಗಳ ಸೇವೆಯ ಫಲವನ್ನು ಕೊಡುವನು. ಸೂರ್ಯಸ್ವರೂಪನೆಂದು ಭಾವಿಸುವ ಜನರ ಮನಸ್ಸಿನ ತಮಸ್ಸೆಲ್ಲವನ್ನೂ ಪರಿಹರಿಸುವನು.

೧೩–೧೪. ಚಂದ್ರನೆಂಬ ಭಾವನೆಯಿಂದ ಉಪಾಸನೆಮಾಡಲು ಅಸದೃಶವಾದ ಸೌಭಾಗ್ಯವನ್ನನುಗ್ರಹಿಸುವನು. ಬೃಹಸ್ಪತಿಯ ರೂಪದಿಂದ ಆತನನ್ನು ಧ್ಯಾನಿಸಿದ ಮನುಷ್ಯನಾದರೊ ಹದಿನೆಂಟು ವಿದ್ಯೆಗಳಲ್ಲಿ ಗೂಢತತ್ತ್ವಗಳನ್ನು ತಿಳಿದವನಾಗುವನು. ಜಗನ್ಮಯನೂ, ಅನಾದಿನಿಧನನೂ ಆದ ಈತನನ್ನು ಯಜ್ಞೇಶ್ವರಸ್ವರೂಪದಿಂದ ಉಪಾಸಿಸಲು ಅಶ್ವಮೇಧವೇ ಮುಂತಾದ ಸಕಲ ಯಜ್ಞಗಳ ಫಲಗಳನ್ನೂ ಕೈಗೂಡಿಸುವನು.

೧೫. ಕುಬೇರರೂಪದಿಂದ ಧ್ಯಾನಿಸಲ್ಪಟ್ಟರೆ ಅತುಲವಾದ ಸರ್ವಸಂಪತ್ಸಮೃದ್ಧಿಯನ್ನು ದಾನಮಾಡುವನು.

೧೬. ಇಂತಹ ಕರುಣಾಸಮುದ್ರನಾದ ಸ್ವಾಮಿಯು ವ್ಯಾಜಾಂತರದಿಂದ ದಾರುಮಯ ಶರೀರನಾಗಿ ದೀನಾನಾಥರನ್ನು ಅನುಗ್ರಹಿಸುವ ಸಲುವಾಗಿಯೇ ಆ ನೀಲಾಚಲದಲ್ಲಿ ನೆಲಸಿರುವನು.

೧೭. ಎಲೈ ಬ್ರಾಹ್ಮಣರಿರಾ! ನೀವೆಲ್ಲರೂ ಅಲ್ಲಿಗೆ ತೆರಳಿರಿ. ಅಲ್ಲಿ ಸಮಾ

**ಐಹಿಕಾಮುಷ್ಮಿಕಾನ್ಭೋಗಾನ್ಲಭ್ಧ್ವಂ ಯದಿ ಶಾಶ್ವತಾನ್ ।**
**ಅಂತೇ ಮುಕ್ತಿಂ ಚ ಕೈವಲ್ಯಾಂ ಯಥೇಚ್ಛಂ ತತ್ರ ಸ್ಪ್ರಾಪ್ನುತ ॥ ೧೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಭಗವದುಪಾಸನಾವಿಧಿವರ್ಣನಂ" ನಾಮ ಸಪ್ತಚತ್ವಾರಿಂಶೋಽಧ್ಯಾಯಃ**

---

ಹಿತಮನಸ್ಕರಾಗಿ ವಾಸಮಾಡಿರಿ. ಲಕ್ಷ್ಮೀರಮಣನ ಪಾದಕಮಲಗಳ ದ್ವಂದ್ವವನ್ನೇ ಶರಣುಹೊಂದಿರಿ.

೧೮. ನೀವು ಶಾಶ್ವತಗಳಾದ ಐಹಿಕಾಮುಷ್ಮಿಕಗಳಾದ ಭೋಗಾನುಭವಗಳನ್ನಾಗಲಿ, ದೇಹಾವಸಾನದ ಕಾಲದಲ್ಲಿ ಕೈವಲ್ಯರೂಪವಾದ ಮೋಕ್ಷವನ್ನಾಗಲಿ ಅಪೇಕ್ಷಿಸುವಿರಾದರೆ ಆಗ್ರಹಪೂರ್ವಕವಾಗಿ ಆ ಕ್ಷೇತ್ರವನ್ನು ಹೋಗಿ ಸೇರಿರಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಭಗವದುಪಾಸನಾವಿಧಿವರ್ಣನ"ವೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟಚತ್ವಾರಿಂಶೋಽಧ್ಯಾಯಃ

## ಇದ್ರದ್ಯುಮ್ನಶ್ವೇತರಾಜ ಸಂವಾದವರ್ಣನಂ

ಮುನಯ ಊಚುಃ :—

ಪ್ರಾಸಾದಸ್ಯ ಪ್ರತಿಷ್ಠಾಂತ ಇಂದ್ರದ್ಯುಮ್ನಾಯ ಯದ್ವರಾನ್ ।
ಆಜ್ಞಾಪಯಾಮಾಸ ಹರಿರ್ಯಾತ್ರಾಸ್ತಾ ದ್ವಾದಶಾಪಿ ಚ ॥ ೧ ॥
ತ್ವತ್ಸಕಾಶಾಚ್ಛ್ರುತಂ ಸರ್ವಂ ತತಃ ಸ ಪೃಥಿವೀಪತಿಃ ।
ಕಿಂ ಚಕಾರ ಮಹಾಬುದ್ಧಿರ್ವಿಷ್ಣುಭಕ್ತೋಽಪ್ಯವಸ್ಥಿತಃ ॥ ೨ ॥

ಜೈಮಿನಿರುವಾಚ :—

ವರಾನ್ಲಬ್ಧ್ವಾ ಜಗನ್ನಾಥಾತ್ಸಾಕ್ಷಾದ್ಬ್ರಹ್ಮಸ್ವರೂಪಿಣಃ ।
ಕೃತಕೃತ್ಯಂ ಸ ಮೇನೇ ವಾ ಆತ್ಮಾನಂ ನರಪುಂಗವಃ ॥ ೩ ॥
ಯಥಾಜ್ಞಂ ಕಾರಯಿತ್ವಾ ವೈ ಯಾತ್ರಾಸ್ತಾಃ ಪುಣ್ಯಮೋಕ್ಷದಾಃ ।
ಬಹೂಪಚಾರೈರ್ಬಹುಧಾ ಸಮಭ್ಯರ್ಚ್ಯ ಜಗದ್ಗುರುಂ ॥ ೪ ॥
ಗಾಲರಾಜಂ ಸಮಾದಿಶ್ಯ ದೇವಸ್ಯಾಜ್ಞಾಂ ಯಥಾವಿಧಿ ।
ಇದಂ ಪ್ರೋವಾಚ ಮಧುರಂ ಧರ್ಮನ್ಯಾಯಸಮಾಯುತಂ ॥ ೫ ॥

---

## ಕನ್ನಡದ ಅನುವಾದ

### ಇಂದ್ರದ್ಯುಮ್ನ ಶ್ವೇತರಾಜಸಂವಾದ ವರ್ಣನ

೧–೨. ಮುನಿಗಳು ಪ್ರಶ್ನೆ ಮಾಡುತ್ತಾರೆ:—ಪ್ರಾಸಾದವನ್ನು ನಿರ್ಮಾಣ ಮಾಡಿದ ಮೇಲೆ ಇಂದ್ರದ್ಯುಮ್ನಮಹಾರಾಜನಿಗೆ ಶ್ರೀ ಹರಿಯು ವರಗಳನ್ನು ಕೊಟ್ಟ ವಿವರವನ್ನೂ, ಹನ್ನೆರಡು ಉತ್ಸವಗಳನ್ನು ಮಾಡುವಂತೆ ಆಜ್ಞಾಪಿಸಿದ ಪ್ರಕಾರವನ್ನೂ ನಿನ್ನಿಂದ ಸಮಗ್ರವಾಗಿ ಕೇಳಿರುವೆವು. ಅನಂತರದಲ್ಲಿ ಮಹಾ ಪ್ರಾಜ್ಞನೂ ವಿಷ್ಣುಭಕ್ತನೂ ಆದ ಆ ಭೂಪತಿಯು ಅಲ್ಲಿ ನಿಂತು ಮತ್ತೇನನ್ನು ಮಾಡಿದನೆಂಬುದನ್ನು ನಮಗೆ ನಿರೂಪಿಸುವವನಾಗು.

೩. ಜೈಮಿನಿಯು ಹೇಳುತ್ತಾನೆ:—ಸಾಕ್ಷಾತ್ಪರಬ್ರಹ್ಮಸ್ವರೂಪನಾದ ಜಗನ್ನಾಥನಿಂದ ವರಗಳನ್ನು ಪಡೆದು ಆ ಮಹಾರಾಜನು ತಾನು ಕೃತಕೃತ್ಯತೆ ಯನ್ನು ಪಡೆದಂತೆ ಭಾವಿಸಿಕೊಂಡನು.

೪–೫. ಪರಮಾತ್ಮನ ಅಪ್ಪಣೆಯಂತೆಯೇ ಪುಣ್ಯವನ್ನೂ ಮೋಕ್ಷವನ್ನೂ ಕೊಡುವಂತಹ ಸಕಲ ಉತ್ಸವಗಳನ್ನೂ ಮಾಡಿಸಿ, ಲೋಕಗುರುವಾದ ಆತನನ್ನು ಅನೇಕ ಉಪಚಾರಗಳಿಂದ ಬಹು ವಿಧವಾಗಿ ಆರಾಧಿಸಿ, ಗಾಲರಾಜನನ್ನು ಕರೆಸಿಕೊಂಡು ಧರ್ಮದಿಂದಲೂ, ನ್ಯಾಯದಿಂದಲೂ ಕೂಡಿರುವ ಮಧುರ

ಇಂದ್ರದ್ಯುಮ್ನ ಉವಾಚ :—

ರಾಜನ್ಬಹುಶ್ರುತೋಽಸಿ ತ್ವಂ ಧರ್ಮನಿಷ್ಠಾಮುಪಾಗತಃ ।
ಭಗವತ್ಯಪಿ ಭಕ್ತಿಸ್ತೇ ಕರ್ಮಣಾ ಮನಸಾ ಗಿರಾ ॥ ೬ ॥
ನ ಹ್ಯೇಕಸ್ಯೋಪದೇಶಾಯ ಭಗವಾನನುಶಾಸ್ತಿ ವೈ ।
ಚರಾಚರಗುರುರ್ಹ್ಯೇಷ ವಿಶ್ವಂ ತಚ್ಛಿಷ್ಯತಾಂ ಗತಂ ॥ ೭ ॥
ಮಮಾನುಗ್ರಹಲಕ್ಷ್ಯೇಣ ಅವತೀರ್ಣೋ ಜಗತ್ಪತಿಃ ।
ಉದ್ಧೃತ್ಯೈ ದೀನಮನಸಾಮತ್ರಾಪಿ ಸ್ಥಾಸ್ಯತೇ ಚಿರಾತ್ ॥ ೮ ॥
ಭಕ್ತ್ಯಾ ಚ ಶ್ರದ್ಧಯಾ ಯುಕ್ತ ಏತದಾಜ್ಞಾಂ ಪ್ರವರ್ತಯ ।
ಪ್ರತಿಮಾವ್ಯವಹಾರೇಣ ನೈನಂ ಜಾನೀಹಿ ಭೂಮಿಪ ॥ ೯ ॥
ಪ್ರತ್ಯಕ್ಷಂ ತೇ ಯಥಾ ಜಾತಂ ತ್ರೈಲೋಕ್ಯಂ ಭೂಮಿಮಾಗತಂ ।
ಪ್ರಾಸಾದಾಂತಃಪ್ರವೇಶೇ ಹಿ ಯಸ್ಯಾಸ್ಯ ಜಗದೀಶಿತುಃ ॥ ೧೦ ॥

---

ವಾಕ್ಯಗಳಿಂದ ಆತನಿಗೆ ಸ್ವಾಮಿಯ ಅಪ್ಪಣೆಯ ಕ್ರಮವನ್ನು ಯಥಾವಿಧಿಯಾಗಿ ಉಪದೇಶಿಸಿದನು.

೬. ಇಂದ್ರದ್ಯುಮ್ನನು ಹೇಳುತ್ತಾನೆ :—ಮಹಾರಾಜ! ನೀನು ಬಹುವಾಗಿ ವೇದಶಾಸ್ತ್ರಗಳನ್ನು ಕೇಳಿರುವೆ. ಧರ್ಮಾಚರಣೆಯಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿರುವೆ. ಕರ್ಮದಿಂದಲೂ, ಮನಸ್ಸಿನಿಂದಲೂ, ಮಾತುಗಳಿಂದಲೂ ಭಗವಂತನಲ್ಲಿ ನಿನ್ನ ಭಕ್ತಿಯು ಅಸದೃಶವಾಗಿರುವುದು.

೭. ಲೋಕೇಶ್ವರನು ಒಬ್ಬೊಬ್ಬರನ್ನು ಮಾತ್ರ ಉದ್ಧರಿಸುವುದಕ್ಕಾಗಿ ಧರ್ಮೋಪದೇಶವನ್ನು ಮಾಡುವುದಿಲ್ಲ. ಆತನು ಸಕಲ ಚರಾಚರಗಳಿಗೂ ಶಿಕ್ಷಕನಾಗಿರುವನಲ್ಲವೆ. ಆದುದರಿಂದ ಆತನು ನಮಗೆ ಅನುಗ್ರಹಿಸಿರುವ ಈ ಧರ್ಮವು ಸಕಲರಿಗೂ ಉಪದೇಶಿಸಲ್ಪಡಲಿ.

೮. ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ ಜಗನ್ನಾಥನು ಭೂಲೋಕದಲ್ಲಿ ಅವತರಿಸಿರುವನು ; ದೀನಮನಸ್ಕರಾದ ಸಕಲರನ್ನೂ ಉದ್ಧಾರಮಾಡುವುದಕ್ಕಾಗಿಯೇ ಇಲ್ಲಿ ಬಹಳಕಾಲ ನೆಲಸಿರುವನು.

೯. ಭೂಪಾಲಕನೆ! ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಕೂಡಿದವನಾಗಿ ಆತನ ಅಪ್ಪಣೆಯನ್ನು ಲೋಕದಲ್ಲಿ ವಿಶಾಲಗೊಳಿಸಲಿರುವ ಈತನನ್ನು ಕೇವಲ ಮರದ ಗೊಂಬೆಯೆಂದು ಎಂದೆಂದಿಗೂ ನೀನು ತಿಳಿಯಬೇಡ.

೧೦. ಜಗದೀಶ್ವರನಾದ ಈತನು ಪ್ರಾಸಾದದೊಳಗೆ ಪ್ರವೇಶವನ್ನು ಮಾಡಿದುದರಿಂದ ಸಕಲ ಬ್ರಹ್ಮಾಂಡವೂ ಭೂಲೋಕದಲ್ಲಿ ಕ್ರೋಡೀಕೃತವಾಗಿ ನಿನಗೆ ಪ್ರತ್ಯಕ್ಷವಾಗಿ ಕಾಣುತ್ತಿರುವುದೆಂದು ನಿಶ್ಚಯಿಸಿಕೊಳ್ಳುವವನಾಗು.

ಪಿತಾಮಹಾದ್ಯಾಸ್ತ್ರಿದಶಾಃ ಸರ್ವೇ ಯುಗಪದಾಗತಾಃ ।
ವಿಶ್ವಮೂರ್ತ್ಯಾ ವಯಂ ಸರ್ವೇ ಜಾತಾ ವೈ ನಷ್ಟಚೇತನಾಃ ॥ ೧೧ ॥
ಚರಾಚರಮಯೋ ಹ್ಯೇಷ ಸಾಕ್ಷಾದ್ದಾರುಸ್ವರೂಪಧೃಕ್ ।
ಕಲ್ಪವೃಕ್ಷಮಿಮಂ ವಿದ್ಧಿ ಭೂಗತಂ ಸರ್ವಕಾಮದಂ ॥ ೧೨ ॥
ಉಪಾಸ್ಯೈನಂ ಹಿ ಲಭತೇ ಯೋ ಯಥಾ ಕಾಮನಾಫಲಂ ।
ಯತಯೋ ಬಹುಧಾ ಯಂ ಹಿ ಯತಯೋ ನ ವಿದಂತಿ ವೈ ।
ತಮಃಪಾರೇ ಪ್ರತಿಷ್ಠಂತಂ ಕಿಂಚಿಜ್ಜ್ಯೋತಿಸ್ಸ್ವರೂಪಿಣಂ ॥ ೧೩ ॥
ಯತೀನಾಂ ಧರ್ಮನಿಷ್ಠಾನಾಂ ಶುದ್ಧಾನಾಮೂರ್ಧ್ವರೇತಸಾಂ ।
ಅನನ್ಯಭಕ್ತಿಯುಕ್ತಾನಾಮೇಕಃ ಪಂಥಾಸ್ತು ಯೋಗಿನಾಂ ॥ ೧೪ ॥
ಗ್ರೀಷ್ಮೇ ಶೀತೇ ಗಭೀರೇ ವೈ ನಿಮಜ್ಜ್ಯ ಸಲಿಲಾಶಯೇ ।
ಪರಾಂ ನಿರ್ವೃತಿಮಾಪ್ನೋತಿ ತಥಾಸ್ಮಿನ್ಕರುಣಾಂಬುಧೌ ॥ ೧೫ ॥

---

೧೧. ಇಲ್ಲಿಗೆ ಬ್ರಹ್ಮದೇವನೇ ಮೊದಲಾದ ಸಕಲದೇವತೆಗಳೂ ಏಕಕಾಲದಲ್ಲಿಯೇ ಬಂದು ನೆಲಸಿರುವರು. ಕ್ಷೀಣಸತ್ವರಾದ ನಾವುಗಳೂ ಕೂಡ ವಿಶ್ವಮೂರ್ತಿಯಾದ ಆತನಿಂದಲೇ ಉದ್ಭವಿಸಿರುವೆವು.

೧೨. ಸಕಲ ಚರಾಚರಮಯನಾದ ಮಹಾವಿಷ್ಣುವೇ ಈ ರೀತಿಯಾದ ಮರದ ವಿಗ್ರಹದ ಸ್ವರೂಪವನ್ನು ಧರಿಸಿ ಸ್ಥೂಲನೇತ್ರಗಳಿಗೂ ಗೋಚರನಾಗಿರುವನು. ಸಮಸ್ತ ಕಾಮಿತಾರ್ಥಗಳನ್ನೂ ಕೊಡುವ ಕಲ್ಪವೃಕ್ಷವೇ ಈ ಸ್ವರೂಪವಾಗಿ ಭೂಮಿಗೆ ಬಂದಿರುವುದೆಂದು ತಿಳಿ.

೧೩. ಈತನನ್ನು ಸೇವಿಸಿದ ಯಾವ ಮನುಷ್ಯನಾದರೂ ತನ್ನ ಸಕಲಾಭೀಷ್ಟಗಳನ್ನೂ ಪಡೆಯುವನು. ಸಂಸಾರವೆಂಬ ತಮಸ್ಸಿಗೆ ಅತೀತನಾಗಿ ಅನಿರ್ವಾಚ್ಯವಾದ ಜ್ಯೋತಿಯ ಸ್ವರೂಪವನ್ನು ಹೊಂದಿರುವ ಈತನನ್ನು ಯತಿಗಳೂ ಬಹುವಿಧ ಸಾಧನೆಗಳಿಂದಲೂ ತಿಳಿಯಲಾರರು.

೧೪. ಇಂದ್ರಿಯಸಂಯಮಸಹಿತರೂ, ಧರ್ಮೈಕತತ್ಪರರೂ, ಪರಿಶುದ್ಧರೂ, ಅಖಂಡಬ್ರಹ್ಮಚರ್ಯಯುಕ್ತರೂ, ಪರಮಾತ್ಮನಲ್ಲಿಯೇ ಅನನ್ಯಗತಿಕವಾದ ಭಕ್ತಿಯುಳ್ಳವರೂ ಆದ ಯೋಗಿಗಳಿಗೆ ಈತನೊಬ್ಬನೇ ಪ್ರಾಪ್ಯನಾಗಿರುವನು.

೧೫. ಗ್ರೀಷ್ಮರ್ತುವಿನಲ್ಲಿ ಆಳವಾದ ಶೀತಲೋದಕವುಳ್ಳ ಸರೋವರದಲ್ಲಿ ನಿಂತಿರುವ ಮನುಷ್ಯನು ಹೇಗೆ ಅಪರಿಮಿತ ಸೌಖ್ಯವನ್ನು ಪಡೆಯುವನೊ, ಹಾಗೆಯೇ ಭಕ್ತನೂ ಈತನ ಕರುಣಾಸಮುದ್ರದಲ್ಲಿ ಓಲಾಡುತ್ತ ನಿರ್ವೃತಿಯನ್ನು ಹೊಂದುವನು.

ತ್ರಿತಾಪದುಃಖಂ ತ್ಯಜತಿ ಸಂಪ್ರಾಪ್ತೇ ಪುರುಷೋತ್ತಮೇ ॥ ೧೬ ॥
ನ ಮಾತಾ ನ ಪಿತಾ ಮಿತ್ರಂ ನ ಪತ್ನೀ ನ ಸುತಸ್ತಥಾ ।
ಶರಣಾಗತದೀನಾನಾಂ ಯಥಾಯಮುಪಕಾರಕಃ ॥ ೧೭ ॥
ತದೇನಂ ಪರಿಸೇವಸ್ವ ಭುಕ್ತಿಮುಕ್ತಿಫಲಪ್ರದಂ ।
ಪೌರೈಃ ಪ್ರಜಾಭಿರ್ಯಾತ್ರಾಸ್ತಾಃ ಸಮೃದ್ಧಂ ಪರಿವರ್ತಯ ॥ ೧೮ ॥
ಸಾಧಾರಣೋ ಧರ್ಮಪಂಥಾ ನೃಪಾಣಾಂ ನೃಪಸತ್ತಮ ।
ಪ್ರವರ್ತಿತಶ್ಚ ಪೂರ್ವೇಣ ಪಾಲ್ಯತೇಽನಂತರೇಣ ಸಃ ॥ ೧೯ ॥
ನೃಸಿಂಹಂ ಭಜ ರಾಜೇಂದ್ರ ಉಪಚಾರೈರ್ಮಹದ್ಧಿಭಿಃ ।
ಪೂಜಯಸ್ವ ತ್ರಿಸಂಧ್ಯಂ ತಂ ಪರಂ ನಿರ್ವಾಣಮಾಪ್ನುಹಿ ॥ ೨೦ ॥
ಸ್ವಕೃತಾದುತ್ತಮಂ ಪ್ರಾಹುಃ ಪರಕೃತ್ಯೋಽಪರಕ್ಷಣಂ ।
ಪಾಲಯೇತ್ಪರದತ್ತಂ ಯಃ ಸ್ವದತ್ತಾದುತ್ತಮಂ ಹಿ ತತ್ ॥ ೨೧ ॥

---

೧೬. ಪುರುಷೋತ್ತಮನ ಲಾಭವಾಗಲು ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ತಾಪಗಳೆಲ್ಲವೂ ಕಳೆದುಹೋಗುವುವು.

೧೭. ಶರಣಾಗತರಾದ ದೀನಜನರಿಗೆ ಈ ಜಗನ್ನಾಥನು ಹೇಗೆ ಉಪಕಾರವನ್ನು ಮಾಡುವನೊ, ಹಾಗೆ ತಾಯಿಯಾಗಲಿ, ತಂದೆಯಾಗಲಿ, ಹೆಂಡತಿಯಾಗಲಿ, ಮಗನಾಗಲಿ ಮಾಡಲಾರರು.

೧೮. ಆದುದರಿಂದ ಐಹಿಕಾಮುಷ್ಮಿಕಸೌಖ್ಯಗಳೆರಡನ್ನೂ ನೀಡುವ ಈ ಸ್ವಾಮಿಯನ್ನೇ ಸೇವಿಸುತ್ತಿರು. ನಿನ್ನ ರಾಜಧಾನಿಯ ಪ್ರಜೆಗಳೊಡನೆ ಕೂಡಿ ದ್ವಾದಶೋತ್ಸವಗಳನ್ನೂ ಉಚಿತ ವೈಭವಗಳಿಂದ ನಡೆಸುತ್ತಿರು.

೧೯. ರಾಜೇಂದ್ರನೆ! ಸಾಮಾನ್ಯವಾಗಿ ರಾಜಧರ್ಮವು ಮೊದಲು ಹುಟ್ಟಿದವರಿಂದ ಮೇಲ್ಪಟ್ಟಿಯಾಗಿ ನಿಯಮಿಸಲ್ಪಡುವುದು. ಅನಂತರದಲ್ಲಿ ಹುಟ್ಟುವ ರಾಜರೂ ಸಹ ಆ ದಾರಿಯಲ್ಲಿಯೇ ನಡೆದು ಆ ಧರ್ಮಗಳನ್ನೇ ಪಾಲಿಸುತ್ತಿರುವರು.

೨೦. ಮಹಾರಾಜನೆ! ನರಸಿಂಹಸ್ವಾಮಿಯನ್ನು ನಿನ್ನ ಸಕಲೈಶ್ವರ್ಯ ಸಮೃದ್ಧಿಯಿಂದಲೂ ಉಪಚರಿಸಿ ಸೇವಿಸುತ್ತಿರು. ಆತನನ್ನು ತ್ರಿಸಂಧ್ಯೆಗಳಲ್ಲಿಯೂ ಪೂಜಿಸುತ್ತಿರಲು ಶಾಶ್ವತವಾದ ಸೌಖ್ಯವನ್ನು ಪಡೆಯುವೆ.

೨೧. ತಾನು ಹೊಸದಾಗಿ ಧರ್ಮಗಳನ್ನು ಪ್ರಾರಂಭಿಸುವುದಕ್ಕಿಂತ ಇತರರು ಮಾಡಿದ ಧರ್ಮಗಳನ್ನು ನಡೆಸಿಕೊಂಡು ಬರುವುದು ಉತ್ತಮವೆಂದು ಬಲ್ಲವರು ಹೇಳುತ್ತಿರುವರು. ಪರರು ಮಾಡಿದ ದಾನಗಳನ್ನು ನಡೆಸಿಕೊಂಡು ಬರುವವನಿಗೆ ತಾನು ದಾನಗಳನ್ನು ಮಾಡಿದುದಕ್ಕಿಂತಲೂ ಹೆಚ್ಚಿನ ಫಲವು ಲಭಿಸುವುದು.

ಜೈಮಿನಿರುವಾಚ :—
ಕೃತಾಂಜಲಿಪುಟಃ ಸೋಽಥ ಶ್ವೇತೋ ನೃಪತಿಸತ್ತಮಃ ।
ಮೂರ್ಧ್ನಿ ಜಗ್ರಾಹ ತದ್ವಾಕ್ಯಂ ಮಾಲಾಮಿವ ಗುಣಾನ್ವಿತಾಂ ॥ ೨೨ ॥
ಇಂದ್ರದ್ಯುಮ್ನೋಽಪಿ ರಾಜರ್ಷಿಃ ಪ್ರಸಾದ್ಯ ಪುರುಷೋತ್ತಮಂ ।
ನಾರದೇನ ಸಹ ಶ್ರೀಮಾನ್ಬ್ರಹ್ಮಲೋಕಂ ಜಗಾಮ ಹ ॥ ೨೩ ॥
ಏತದ್ವಃ ಕಥಿತಂ ಪುಣ್ಯಂ ಕ್ಷೇತ್ರಮಾಹಾತ್ಮ್ಯಮುತ್ತಮಂ ।
ತತ್ರ ನಿತ್ಯೋಷಿತಸ್ಯಾಪಿ ಮಾಹಾತ್ಮ್ಯಂ ಬ್ರಹ್ಮದಾರುಣಃ ॥ ೨೪ ॥
ಯಶ್ಚೈತಚ್ಛೃಣುಯಾದ್ಭಕ್ತ್ಯಾ ವಾಚ್ಯಮಾನಂ ದ್ವಿಜೋತ್ತಮಾಃ ।
ಅಶ್ವಮೇಧಸಹಸ್ರಸ್ಯ ಫಲಂ ಸೋಽವಿಕಲಂ ಲಭೇತ್ ॥ ೨೫ ॥
ಅರ್ಧೋದಯಸ್ತು ಯೋ ಯೋಗಃ ಸ್ಕಂದೇನ ಪರಿಕೀರ್ತಿತಃ ।
ತತ್ಕೋಟಿಗುಣಿತಂ ಪುಣ್ಯಂ ವಿಷ್ಣೋರ್ಮಾಹಾತ್ಮ್ಯಕೀರ್ತನಾತ್ ॥ ೨೬ ॥
ಪ್ರಾತಃ ಪ್ರಾತರ್ಯಃ ಶೃಣುಯಾತ್ಕಪಿಲಾಶತದೋ ಭವೇತ್ ।
ಗಾಂಗೈಃ ಪುಷ್ಕರಜೈಸ್ತೋಯೈರಭಿಷೇಕಫಲಂ ಲಭೇತ್ ॥ ೨೭ ॥

---

೨೨. ಜೈಮಿನಿಯು ಹೇಳುತ್ತಾನೆ.—ಶ್ವೇತನೆಂಬ ಮಹಾರಾಜಶ್ರೇಷ್ಠನು ಅಂಜಲಿಬಂಧವನ್ನು ಮಾಡಿಕೊಂಡು ಸದ್ಗುಣಾನ್ವಿತವಾದ ಪುಷ್ಪಮಾಲೆಯಂತೆ ಮನೋಹರವಾಗಿರುವ ಇಂದ್ರದ್ಯುಮ್ನನ ಮಾತುಗಳನ್ನು ಕೇಳಿ ಅವುಗಳನ್ನು ಶಿರಸಾ ಧಾರಣ ಮಾಡಿದನು.

೨೩. ಬಳಿಕ ರಾಜರ್ಷಿಯಾದ ಇಂದ್ರದ್ಯುಮ್ನನೂ ಪುರುಷೋತ್ತಮನನ್ನು ಪ್ರಸನ್ನನಾಗಿ ಮಾಡಿಕೊಂಡು ಸಕಲಸೌಭಾಗ್ಯಯುತನಾಗಿ ನಾರದಮಹರ್ಷಿ ಯೊಡನೆ ಬ್ರಹ್ಮಲೋಕವನ್ನು ಕುರಿತು ಪ್ರಯಾಣಮಾಡಿದನು.

೨೪. ಎಲೈ ಬ್ರಾಹ್ಮಣರಿರಾ! ಇಂತು ನಿಮಗೆ ಪುಣ್ಯಪ್ರದವೂ ಸರ್ವೋತ್ತಮವೂ ಆದ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೆಯನ್ನೂ, ಅಲ್ಲಿಯೇ ನಿತ್ಯವೂ ವಾಸಮಾಡುತ್ತಿರುವ ದಾರುಮಯನಾದ ಜಗನ್ನಾಥನ ಮಾಹಾತ್ಮ್ಯೆಯನ್ನೂ ವಿಸ್ತರಿಸಿರುವೆನು.

೨೫. ವಿಪ್ರೋತ್ತಮರಿರಾ! ಈ ಮಾಹಾತ್ಮ್ಯದ ಕಥನವು ನಡೆಯುತ್ತಿರಲು ಯಾವನು ಭಕ್ತಿಯುಕ್ತನಾಗಿ ಶ್ರವಣ ಮಾಡುವನೊ, ಅವನು ಅಖಂಡವಾಗಿ ಒಂದು ಸಾವಿರ ಅಶ್ವಮೇಧಯಜ್ಞಗಳನ್ನು ಮಾಡಿದ ಪುಣ್ಯವನ್ನು ಪಡೆಯುವನು.

೨೬. ಪೂರ್ವದಲ್ಲಿ ಷಣ್ಮುಖನು ಬಹುವಾಗಿ ಪ್ರಶಂಸೆಮಾಡಿದ ಅರ್ಧೋದಯಪುಣ್ಯಕಾಲವನ್ನು ಆಚರಿಸುವುದರಿಂದ ಯಾವ ಪುಣ್ಯವು ಲಭಿಸುವುದೊ, ಅದರ ಕೋಟಿಯಷ್ಟು ಪುಣ್ಯವು ಮಹಾವಿಷ್ಣುವಿನ ಈ ಮಾಹಾತ್ಮ್ಯವನ್ನು ಹೇಳುವುದರಿಂದ ಪ್ರಾಪ್ತವಾಗುವುದು.

೨೭. ಪ್ರತಿದಿನದ ಪ್ರಾತಃಕಾಲದಲ್ಲಿಯೂ ಈ ಚರಿತ್ರೆಯನ್ನು ಯಾವನು

ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಸಂತಾನವರ್ಧನಂ ।
ಸ್ವರ್ಗಪ್ರತಿಷ್ಠಾಗತಿದಂ ಸರ್ವಪಾಪಾಪನೋದನಂ ॥ ೨೮ ॥
ಏತದ್ರಹಸ್ಯಮಾಖ್ಯಾತಂ ಪುರಾಣೇಷು ಸುಗೋಪಿತಂ ।
ವೈಷ್ಣವೇಭ್ಯೋ ವಿನಾನ್ಯೇಷು ನ ತು ವಾಚ್ಯಂ ಕದಾಚನ ॥ ೨೯ ॥
ಕುತರ್ಕೋಪಹತಾ ಯೇ ಚ ದುರಧೀತಶ್ರುತಾಗಮಾಃ ।
ನಾಸ್ತಿಕಾ ದಾಂಭಿಕಾ ನಿತ್ಯಂ ಪರದೋಷೋಪದರ್ಶಿನಃ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಇಂದ್ರದ್ಯುಮ್ನ ಶ್ವೇತರಾಜಸಂವಾದವರ್ಣನಂ" ನಾಮ ಅಷ್ಟಚತ್ವಾರಿಂಶೋಽಧ್ಯಾಯಃ

---

ಕೇಳುವನೊ, ಅವನು ಒಂದುನೂರು ಕಪಿಲೆಯಾಕಳುಗಳನ್ನು ದಾನಮಾಡಿದ ಫಲವನ್ನೂ, ಗಂಗೋದಕ, ಪುಷ್ಕರೋದಕಗಳಿಂದ ಪರಮಾತ್ಮನಿಗೆ ಅಭಿಷೇಕವನ್ನು ಮಾಡಿಸಿದ ಫಲವನ್ನೂ ಏಕಕಾಲದಲ್ಲಿಯೇ ಪಡೆಯುವನು.

೨೮. ಈ ಪುಣ್ಯಚರಿತ್ರೆಯು ಐಶ್ವರ್ಯಪ್ರದವೂ, ಯಶಃಪ್ರದವೂ, ದೀರ್ಘಾಯುಷ್ಯಕಾರಕವೂ, ಪಾವನವೂ, ಸಂತಾನವರ್ಧಕವೂ, ಸ್ವರ್ಗಲೋಕಾವಾಸದಾಯಕವೂ, ಸಮಸ್ತ ಪಾತಕಪರಿಹಾರಕವೂ ಆಗಿರುವುದು.

೨೯. ಪುರಾಣಗಳಲ್ಲಿ ಬಹು ಗೋಪ್ಯವಾಗಿಡಲ್ಪಟ್ಟಿರುವ ಈ ರಹಸ್ಯವನ್ನು ಈಗ ನಿಮಗೆ ವಿಸ್ತರಿಸಿ ಹೇಳಿರುವೆನು. ಇದನ್ನು ವಿಷ್ಣುಭಕ್ತರಲ್ಲದ ಇತರರಲ್ಲಿ ಎಂದಿಗೂ ನಿರೂಪಿಸಬಾರದು.

೩೦. ಯಾವ ಮನುಷ್ಯರು ಶುಷ್ಕತರ್ಕದಲ್ಲಿಯೇ ನಿರತರಾಗಿರುವರೊ, ಅಕ್ರಮದಿಂದ ವೇದಗಳ ಶ್ರವಣಾಧ್ಯಯನಗಳನ್ನು ಮಾಡಿರುವರೊ, ನಾಸ್ತಿಕವಾದವನ್ನವಲಂಬಿಸಿರುವರೊ, ದಂಭಾಹಂಕಾರಯುತರಾಗಿರುವರೊ, ನಿತ್ಯವೂ ಇತರರ ದೋಷಗಳನ್ನೇ ಎತ್ತಿ ಹೇಳುತ್ತಿರುವರೊ, ವಿಷ್ಣುವಿನಲ್ಲಿ ಭಕ್ತಿಯಿಲ್ಲದಿರುವರೊ, ವ್ಯರ್ಥಜೀವನವನ್ನು ನಡೆಸುತ್ತಿರುವರೊ, ಅವರ ಕಡೆಯಿಂದ ಈ ಪವಿತ್ರಚರಿತ್ರೆಯನ್ನು ಯಾವಾಗಲೂ ಸಂರಕ್ಷಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಇಂದ್ರದ್ಯುಮ್ನ–ಶ್ವೇತರಾಜಸಂವಾದ ವರ್ಣನ"ವೆಂಬ ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶತ್ತಮೋಽಧ್ಯಾಯಃ

### ಪುರಾಣಶ್ರವಣವಿಧಿವರ್ಣನಂ

ಮುನಯ ಊಚುಃ:—

ಭಗವನ್ಜೈಮಿನೇ ಸರ್ವಂ ವೇದವೇದಾಂಗಪಾರಗ ।
ತ್ವದನುಗ್ರಹತೋಽಸ್ಮಾಭಿರ್ಮಾಹಾತ್ಮ್ಯಂ ಜಗದೀಶಿತುಃ ॥ ೧ ॥
ಕ್ಷೇತ್ರರಾಜಸ್ಯ ತಸ್ಯೈವ ಯಾತ್ರಾಣಾಂ ಚೈವ ಸರ್ವಶಃ ।
ಭಗವದ್ಭೋಜನೋಚ್ಛಿಷ್ಟಪ್ರಾಶನಾದಿ ಫಲಂ ತಥಾ ॥ ೨ ॥
ಇಂದ್ರದ್ಯುಮ್ನಸ್ಯ ರಾಜ್ಞೋ ವೈ ವೃತ್ತಾಂತಮತಿದುರ್ಲಭಂ ।
ನೀಲಮಾಧವರೂಪಂ ತು ದಾರುಬ್ರಹ್ಮಪ್ರಕಾಶನಂ ॥ ೩ ॥
ಶ್ರುತಂ ತ್ವದ್ವದನಾಂಭೋಜಾದ್ಗಲಿತಂ ತದ್ಯಥಾವಿಧಿ ।
ಇದಾನೀಂ ಶ್ರೋತುಮಿಚ್ಛಾಮಸ್ತ್ವತ್ತೋ ಹಿ ವದತಾಂ ವರ ॥ ೪ ॥
ಸರ್ವಂ ವಿಸ್ತರತೋ ಬ್ರಹ್ಮನ್ವಯಂ ಸರ್ವೇ ಮುದಾನ್ವಿತಾಃ ।
ಪುರಾಣಶ್ರವಣಸ್ಯೈವ ಯದುಕ್ತಂ ಫಲಮೇವ ತತ್ ॥ ೫ ॥

---

### ಕನ್ನಡದ ಅನುವಾದ

#### ಪುರಾಣಶ್ರವಣವಿಧಿವರ್ಣನ

೧–೫. ಮುನಿಗಳು ಪ್ರಶ್ನೆಮಾಡುತ್ತಾರೆ:—ಸರ್ವಜ್ಞನಾದ ಜೈಮಿನಿ ಮಹರ್ಷಿಯೆ! ನೀನು ಸಕಲ ವೇದಗಳಲ್ಲಿಯೂ ವೇದಾಂತಗಳಲ್ಲಿಯೂ ಪಾರಾಂಗತನಾಗಿರುವೆ. ನಿನ್ನ ಅನುಗ್ರಹದಿಂದ ಜಗನ್ನಾಥನ ಮಾಹಾತ್ಮ್ಯವನ್ನೂ, ಪುರುಷೋತ್ತಮಕ್ಷೇತ್ರದ ಮಹಿಮೆಯನ್ನೂ, ಆ ಪರಮಾತ್ಮನ ನಾನಾವಿಧಗಳಾದ ಮಹೋತ್ಸವಗಳ ವಿವರಗಳನ್ನೂ, ಭಗವಂತನ ನೈವೇದ್ಯದ ಉಚ್ಛಿಷ್ಟವನ್ನು ಸೇವಿಸುವುದರ ಪುಣ್ಯವನ್ನೂ, ಅತ್ಯಂತ ದುರ್ಲಭವಾದ ಇಂದ್ರದ್ಯುಮ್ನ ಮಹಾರಾಜನ ಸಮಗ್ರವೃತ್ತಾಂತವನ್ನೂ, ಪರಬ್ರಹ್ಮವಸ್ತುವಾದ ನೀಲಮಾಧವ ಸ್ವಾಮಿಯು ದಾರುಮಯಮೂರ್ತಿಯಾಗಿ ನಿಂತಿರುವುದನ್ನೂ, ನಿನ್ನ ಮುಖ ಕಮಲದ ಅಮೃತವಾಕ್ಯಗಳಿಂದ ಯಥಾವಿಧಿಯಾಗಿ ಕೇಳಿರುವೆವು. ಕಥಕರಲ್ಲಿ ಸರ್ವೋತ್ತಮನಾದ ಬ್ರಾಹ್ಮಣನೆ! ನಾವೆಲ್ಲರೂ ಅತ್ಯಂತ ಸಂತೋಷದಿಂದ ಕೂಡಿರುವೆವು. ಈಗ ನಿನ್ನಿಂದ ಪುರಾಣಶ್ರವಣಕ್ಕೆ ಯಾವ ಫಲವು ಶಾಸ್ತ್ರಗಳಲ್ಲಿ ನಿರ್ದಿಷ್ಟವಾಗಿರುವುದೊ, ಅದೆಲ್ಲವನ್ನೂ ವಿಸ್ತಾರವಾಗಿ ಕೇಳಲು ಕುತೂಹಲವುಳ್ಳ ವರಾಗಿರುವೆವು.

ಕೋ ವಾ ತಸ್ಯ ವಿಧಿಶ್ಚೈವ ಕೇನ ವಾ ಸ್ಯಾತ್ತು ಸಾಂಗಕಂ ।
ಅಸ್ಮಾಸು ಚೇದನುಕ್ರೋಶೋ ಯಥಾವದ್ವಕ್ತುಮರ್ಹಸಿ ॥ ೬ ॥

ಜೈಮಿನಿರುವಾಚ :—

ಸಾಧು ಸಾಧು ಮುನಿಶ್ರೇಷ್ಠಾ ಯತ್ಪೃಷ್ಟಂ ಪರಯಾ ಮುದಾ ।
ತತ್ರ ಮೇ ಪ್ರೀತಿರತುಲಾ ಜಾತಾ ರೋಮಾಂಚಕಾರಿಣೀ ॥ ೭ ॥
ತದ್ವಃ ಸರ್ವಂ ಪ್ರವಕ್ಷ್ಯಾಮಿ ಶೃಣುಧ್ವಂ ಸಾವಧಾನತಃ ।
ಪುರಾಣಶ್ರವಣಾರಂಭೇ ಯಥಾವಿಭವಮಾತ್ಮನಃ ॥ ೮ ॥
ಆದೌ ಸಂಕಲ್ಪ್ಯ ವಿಧಿವದ್ಬ್ರಾಹ್ಮಣಂ ಶುದ್ಧವಂಶಜಂ ।
ಅವ್ಯಂಗಾವಯವಂ ಶಾಂತಂ ಸ್ವಶಾಖಂ ಸ್ವಪುರೋಧಸಂ ॥ ೯ ॥
ಸರ್ವಶಾಸ್ತ್ರಾರ್ಥತತ್ತ್ವಜ್ಞಂ ಭೂಷಣೈರತಿಶೋಭನೈಃ ।
ವಸ್ತ್ರಚಂದನಮಾಲ್ಯಾದ್ಯೈರ್ಗಣುಯಾತ್ಪ್ರಾತಸಂಶ್ರುತೌ ॥ ೧೦ ॥

---

೬. ಪುರಾಣಶ್ರವಣವನ್ನು ಮಾಡುವ ವಿಧಾನವು ಯಾವುದು? ಯಾರಿಂದ ಇದನ್ನು ಸಾಂಗವಾಗಿ ಶ್ರವಣ ಮಾಡಬಹುದು? ಈ ವಿಷಯವನ್ನು ನಮ್ಮಲ್ಲಿ ನಿನಗೆ ಅಭಿಮಾನವಿದ್ದರೆ ಯಥಾವತ್ತಾಗಿ ನಿರೂಪಿಸಬೇಕು.

೭. ಜೈಮಿನಿಯು ಹೇಳುತ್ತಾನೆ:—ಮುನಿಶ್ರೇಷ್ಠರಿರಾ! ನೀವು ಅತ್ಯಂತ ಸಂತೋಷದಿಂದ ಕೇಳಿದ ಈ ಪ್ರಶ್ನೆಗಾಗಿ ನಿಮಗೆ ಸಾಧುವಾದಗಳಿರಲಿ. ಈ ವಿಷಯದಲ್ಲಿ ಮೈನವಿರನ್ನೆಬ್ಬಿಸುವ ಅಸದೃಶವಾದ ಪ್ರೀತಿಯು ನಿಮ್ಮಲ್ಲಿ ಉಂಟಾಗುತ್ತಿರುವುದು.

೮. ನೀವು ಪ್ರಶ್ನೆಮಾಡಿದ ವಿಷಯವನ್ನು ಆಮೂಲಾಗ್ರವಾಗಿ ಹೇಳುವೆನು. ಸಮಾಹಿತಚಿತ್ತರಾಗಿ ಕೇಳಿರಿ. ಪುರಾಣಶ್ರವಣವನ್ನು ಮಾಡುವುದಕ್ಕೆ ಮೊದಲು ಶ್ರೋತೃವಾದವನು ತನ್ನ ಸಂಪತ್ತಿಗನುಗುಣವಾಗಿ ಮುಂದೆ ಹೇಳುವಂತೆ ಮಾಡಬೇಕು.

೯–೧೦. ಪ್ರಥಮದಲ್ಲಿ ಸಂಕಲ್ಪವನ್ನು ಮಾಡಿಕೊಂಡು ಶಾಸ್ತ್ರೋಕ್ತವಾಗಿರುವಂತೆ ಸತ್ಕುಲಪ್ರಸೂತನೂ, ದೇಹಾವಯವಗಳಲ್ಲಿ ನ್ಯೂನಾತಿರೇಕಗಳಿಲ್ಲದವನೂ, ಶಾಂತಮೂರ್ತಿಯೂ, ತನ್ನ ಶಾಖೆಗೆ ಸೇರಿದವನೂ, ತನಗೆ ಆಚಾರ್ಯಸ್ಥಾನೀಯನೂ, ಸಕಲ ಶಾಸ್ತ್ರಗಳ ಗೂಢಾರ್ಥಗಳನ್ನು ತಿಳಿದವನೂ ಆದ ಬ್ರಾಹ್ಮಣನನ್ನು ಬರಮಾಡಿಕೊಂಡು ಆತನನ್ನು ಅತಿ ಸುಂದರಗಂಧಾಭರಣಗಳಿಂದಲೂ, ವಸ್ತ್ರಗಳಿಂದಲೂ, ಚಂದನಲೇಪನದಿಂದಲೂ, ಪುಷ್ಪಮಾಲೆಗಳೇ ಮುಂತಾದ ಉಪಚಾರಗಳಿಂದಲೂ ಪ್ರಸನ್ನಗೊಳಿಸಿ ತನಗೆ ಪುರಾಣಶ್ರವಣವನ್ನು ಮಾಡಿಸಬೇಕೆಂದು ಪ್ರಾರ್ಥಿಸಿಕೊಳ್ಳಬೇಕು.

ಕೃತಾಂಜಲಿಪುಟೋ ಭೂತ್ವಾ ತತಃ ಸಂಪ್ರಾರ್ಥಯೇದ್ದ್ವಿಜಂ ।
ತ್ವಂ ವಿಷ್ಣುರ್ವಿಷ್ಣುರೇವ ತ್ವಂ ನ ತು ಭೇದಃ ಕದಾಚನ ।
ನಿರ್ವಿಘ್ನಂ ಮೇ ಭವತ್ವೇವ ತ್ವತ್ಪ್ರಸಾದಾತ್ಪ್ರಸೀದ ಚ ॥ ೧೧ ॥
ತತೋ ವೃತಂ ಬ್ರಾಹ್ಮಣಂ ಚ ಬಹುಮೂಲ್ಯಾಸನೇ ಶುಭೇ ।
ವಾಸಯಿತ್ವಾ ಚ ತಸ್ಯೈವ ಗಲೇ ಮಾಲಾಂ ವಿನಿಕ್ಷಿಪೇತ್ ॥ ೧೨ ॥
ಮಸ್ತಕೇ ಪುಷ್ಪಗರ್ಭಂ ಚ ಚಂದನೈರನುಲೇಪಯೇತ್ ।
ಯಸ್ಮಾತ್ತಸ್ಮಿಂಶ್ಚ ಸಮಯೇ ವಿಪ್ರೋ ವ್ಯಾಸಸಮೋ ಮತಃ ॥ ೧೩ ॥
ತೇನೈವ ಬ್ರಾಹ್ಮಣೇನೈವ ಪುಸ್ತಕೇ ವಿಷ್ಣುರೂಪಕೇ ।
ಕಾರಯೇದ್ವ್ಯಾಸಪೂಜಾಂ ಚ ಶ್ರೀಖಂಡಾಗುರುಪುಷ್ಪಕೈಃ ॥ ೧೪ ॥
ನಾನೋಪಚಾರೈ ರುಚಿರೈರ್ಭಕ್ಷ್ಯಭೋಜ್ಯಾದಿಕೈರಪಿ ॥ ೧೫ ॥
ಭಕ್ತ್ಯಾ ಚಾಸನದಾನಾದಿ ವಿಧಿಃ ಕಾರ್ಯೋ ದಿನೇ ದಿನೇ ।
ಸಾಂಪ್ರತಂ ಕಥಯಾಮ್ಯೇವಂ ಶ್ರೂಯತಾಂ ಶ್ರೋತೃಲಕ್ಷಣಂ ॥ ೧೬ ॥

---

೧೧. ಬಳಿಕ ಕೈಗಳನ್ನು ಮುಗಿದು ಆ ಬ್ರಾಹ್ಮಣನನ್ನು ಮುಂದಿನ ಶ್ಲೋಕದಿಂದ ಪ್ರಾರ್ಥನೆ ಮಾಡಬೇಕು. "ನೀನೇ ಮಹಾವಿಷ್ಣುವು; ಮಹಾ ವಿಷ್ಣುವೇ ನೀನಾಗಿರುವೆ. ನಿಮ್ಮಿಬ್ಬರಲ್ಲಿಯೂ ಯಾವ ವಿಧವಾದ ಭೇದವೂ ಇರುವುದಿಲ್ಲ. ನಿನ್ನ ಅನುಗ್ರಹದಿಂದ ನನ್ನ ಪುರಾಣಶ್ರವಣವು ನಿರ್ವಿಘ್ನವಾಗಿ ನಡೆಯಲಿ. ನನ್ನಲ್ಲಿ ಪ್ರಸನ್ನನಾಗು."

೧೨. ಬಳಿಕ ಪೌರಾಣಿಕನಾಗಿ ವರಿಸಿದ ಆ ಬ್ರಾಹ್ಮಣನನ್ನು ಅನರ್ಘ್ಯವೂ ಪವಿತ್ರವೂ ಆದ ಉನ್ನತಾಸನದಲ್ಲಿ ಕುಳ್ಳಿರಿಸಿ ಆತನ ಕೊರಳಿನಲ್ಲಿ ಪುಷ್ಪಮಾಲೆಯನ್ನು ಹಾಕಬೇಕು.

೧೩. ತಲೆಯಲ್ಲಿಯೂ ಹೂವುಗಳ ಅಲಂಕಾರವನ್ನಿಟ್ಟು ದೇಹವನ್ನು ಚಂದನಗಂಧಗಳಿಂದ ಲೇಪನಮಾಡಬೇಕು. ಏಕೆಂದರೆ ಆ ಕಾಲದಲ್ಲಿ ಪೌರಾಣಿಕನಾದ ಬ್ರಾಹ್ಮಣನು ವ್ಯಾಸಮಹರ್ಷಿಗೆ ಸಮಾನನೆಂದು ಕರೆಯಲ್ಪಡುವನು.

೧೪. ಆ ಬ್ರಾಹ್ಮಣನ ಕಡೆಯಿಂದಲೇ ವಿಷ್ಣುರೂಪವಾದ ಪುರಾಣಗ್ರಂಥಕ್ಕೆ ಶ್ರೀಖಂಡ, ಅಗುರು, ಪುಷ್ಪಾದಿಗಳಿಂದ ವ್ಯಾಸಪೂಜೆಯನ್ನು ಮಾಡಿಸಬೇಕು.

೧೫-೧೬. ಇಂತು ಪ್ರತಿದಿನದಲ್ಲಿಯೂ ಆತನನ್ನು ಬಹು ವಿಧೋಪಚಾರಗಳಿಂದಲೂ ಸುರುಚಿರಗಳಾದ ಭಕ್ಷ್ಯಭೋಜ್ಯಾದಿಗಳಿಂದಲೂ ಸಂತೋಷಗೊಳಿಸಿ ಭಕ್ತಿಯಿಂದ ಆಸನದಾನವನ್ನು ಮಾಡುತ್ತಿರಬೇಕು. ಈಗ ಉತ್ತಮಶ್ರೋತೃಗಳ ಲಕ್ಷಣಗಳನ್ನು ನಿರೂಪಿಸುವೆನು, ಕೇಳಿರಿ.

**ಗತಾನುಗತಿಕಾನಾಂ ಚ ನಿವಾಸಾರ್ಥಂ ತಥಾ ದ್ವಿಜಾಃ ।**
**ಆಸನಾನಿ ಯಥಾಯೋಗ್ಯಂ ರಚಯಿತ್ವಾ ಸ್ವಯಂ ತಥಾ ॥ ೧೭ ॥**
**ಶುಭಾಸನಾಂತರಸ್ಥೋ ಹಿ ಭವೇದುತ್ಕಂಠಮಾನಸಃ ।**
**ಅಥವಾ ಸಂಸ್ಕೃತೇ ದೇಶೇ ಸರ್ವೈಃ ಸಹ ವಸೇದ್ಭುವಿ ॥ ೧೮ ॥**
**ವ್ಯಾಸಸ್ಯಾಗ್ರೇ ನಿವಸತಿರಾಸನೇ ನೋಚ್ಚ ಏವ ಚ ।**
**ಕೃತಸ್ನಾನೋ ಮುದಾ ಯುಕ್ತೋ ಧಾರಯನ್ಶುಕ್ಲವಾಸಸೀ ॥ ೧೯ ॥**
**ಆಚಾಂತಃ ಶಂಖಚಕ್ರಾದಿತಿಲಕಾನ್ವಿತವಿಗ್ರಹಃ ।**
**ಮನಸಾ ಭಾವಯೇದ್ವಿಷ್ಣುಂ ವಿಶ್ವಾಸಂ ಕಾರಯೇದ್ಭೃಶಂ ॥ ೨೦ ॥**
**ಪುರಾಣೇ ಬ್ರಾಹ್ಮಣೇ ಚೈವ ದೇವೇ ಮಂತ್ರಸ್ಯ ಕರ್ಮಣಿ ।**
**ತೀರ್ಥೇ ವೃದ್ಧಸ್ಯ ವಚನೇ ವಿಶ್ವಾಸಃ ಫಲದಾಯಕಃ ॥ ೨೧ ॥**
**ಅತೋ ಮುನಿವರಾಃ ಸರ್ವಂ ಪುಣ್ಯಂ ವಿಶ್ವಾಸಕಾರಣಂ ।**
**ಪಾಷಂಡಾದಿಕಸಂಭಾಷಂ ವೃಥಾಲಾಪಂ ಪ್ರಯತ್ನತಃ ॥ ೨೨ ॥**

---

೧೭. ಎಲೈ ವಿಪ್ರರಿರಾ! ಪುರಾಣಶ್ರವಣಕ್ಕೆ ನಿತ್ಯವೂ ಬರುತ್ತಿರುವವರ ಉಪಯೋಗಕ್ಕಾಗಿ ಯಥಾಯೋಗ್ಯಗಳಾದ ಆಸನಗಳನ್ನೊದಗಿಸಿ ತಾನೂ ಉಚಿತಾಸನದಲ್ಲಿ ಕುಳಿತುಕೊಳ್ಳಬೇಕು.

೧೮. ಇಂತು ಪವಿತ್ರವಾದ ಆಸನದಲ್ಲಿ ಕುಳಿತು ಕುತೂಹಲದಿಂದ ಕೂಡಿದ ಮನಸ್ಸಿನಿಂದ ಶ್ರವಣವನ್ನು ಮಾಡಬೇಕು. ಇಲ್ಲದಿದ್ದಲ್ಲಿ ಸುಸಂಸ್ಕೃತವಾದ ದೇಶದಲ್ಲಿ ಇತರರೊಡನೆ ನೆಲದಮೇಲೆಯೇ ಕುಳಿತುಕೊಳ್ಳಬೇಕು.

೧೯. ಉತ್ತಮ ಶ್ರೋತೃವಾದವನು ವ್ಯಾಸರೂಪಿಯಾದ ಪೌರಾಣಿಕನ ಎದುರಾಗಿ ಕುಳಿತುಕೊಳ್ಳಬೇಕು. ಆದರೆ ವ್ಯಾಸಪೀಠಕ್ಕಿಂತಲೂ ಎತ್ತರವಾದ ಆಸನದಲ್ಲಿ ಕುಳಿತುಕೊಳ್ಳಬಾರದು. ಸ್ನಾನವನ್ನು ಮಾಡಿಕೊಂಡು ಸಂತೋಷದಿಂದ ಕೂಡಿದವನಾಗಿ ಶುಭ್ರಶ್ವೇತವಸ್ತ್ರಗಳನ್ನು ಧರಿಸಬೇಕು.

೨೦. ಶುದ್ಧಾಚಮನವನ್ನು ಮಾಡಿ ಶಂಖ ಚಕ್ರಗಳೇ ಮೊದಲಾದ ವೈಷ್ಣವ ಲಾಂಛನಗಳನ್ನೂ ಹಣೆಯಲ್ಲಿ ತಿಲಕವನ್ನೂ ಧರಿಸಿ ಮನಸ್ಸಿನಲ್ಲಿಯೇ ಮಹಾವಿಷ್ಣುವನ್ನು ಧ್ಯಾನಮಾಡಬೇಕು. ಮತ್ತು ಪೌರಾಣಿಕನ ಮಾತುಗಳಲ್ಲಿ ಅತ್ಯಂತವಾದ ವಿಶ್ವಾಸವನ್ನಿಡಬೇಕು.

೨೧. ಪುರಾಣ ಗ್ರಂಥದಲ್ಲಿಯೂ, ಬ್ರಾಹ್ಮಣನಲ್ಲಿಯೂ, ದೇವರಲ್ಲಿಯೂ, ಮಂತ್ರ ಜಪದಲ್ಲಿಯೂ, ತೀರ್ಥದಲ್ಲಿಯೂ, ಜ್ಞಾನವೃದ್ಧರ ಮಾತುಗಳಲ್ಲಿಯೂ ಇಡಲ್ಪಟ್ಟ ನಂಬುಗೆಯು ಉತ್ತಮ ಫಲವನ್ನು ಕೊಡುವುದು.

೨೨–೨೩. ಮುನಿವರ್ಯರಿರಾ! ಆದುದರಿಂದ ಸಕಲ ಪುಣ್ಯಾರ್ಜನೆಗಳಿಗೂ ವಿಶ್ವಾಸವೇ ಕಾರಣವಾಗಿರುವುದು. ಪುರಾಣಶ್ರವಣವನ್ನು ಮಾಡುವ ಕಾಲದಲ್ಲಿ

ಪುರಾಣಶ್ರವಣೇ ಕಾಲೇ ಸರ್ವಚಿಂತಾಂ ಚ ವರ್ಜಯೇತ್ ।
ಅನೇನ ವಿಧಿನಾ ವಿಪ್ರಾಃ ಪ್ರತ್ಯಹಂ ಶ್ರೃಣುಯಾನ್ಮುದಾ ॥ ೨೩ ॥
ತತಃ ಪಾಠೇ ಸಮಾಪ್ತೇ ಚ ಕರತಾಲಾದಿಕೈರ್ಮುಹುಃ ।
ಜಯ ಕೃಷ್ಣ ಜಗನ್ನಾಥ ಹರ ಇತ್ಯಾದಿ ನಾಮಭಿಃ ॥ ೨೪ ॥
ವಿಸ್ತಾರಯೇದ್ಯಥಾಕಾಶೇ ಶ್ರೂಯತೇ ಶಬ್ದ ಏವ ಸಃ ।
ಏವಂ ಚ ಪ್ರತ್ಯಹಂ ಕುರ್ಯಾತ್ಪ್ರೀತಯೇ ಮುರವೈರಿಣಃ ॥ ೨೫ ॥
ತತೋ ಗ್ರಂಥಸಮಾಪ್ತೌ ಚ ವಿಷ್ಣುಪ್ರೀಣನತತ್ಪರಃ ।
ವಿಶೇಷಾದ್ವಸ್ತ್ರಮಾಲ್ಯಾದಿಚಂದನೈರ್ಭೂಷಣೈಸ್ತಥಾ ।
ಭೂಷಯೇತ್ಪರಯಾ ಭಕ್ತ್ಯಾ ವಿಪ್ರಂ ವ್ಯಾಸಸಮಂ ದ್ವಿಜಾಃ ॥ ೨೬ ॥
ಆತ್ಮಶಕ್ತ್ಯಾ ಪ್ರದದ್ಯಾಚ್ಚ ದಕ್ಷಿಣಾಂ ವೈ ಯಥಾವಿಧಿ ।
ಯೇ ಯೇ ಪ್ರದದ್ಯುರ್ಯದ್ಯಚ್ಚ ಮತ್ತಸ್ತಚ್ಛೃಣುತಾಧುನಾ ॥ ೨೭ ॥
ರಾಜಾನಃ ಕರಿಣೋ ದದ್ಯುಃ ಸಾಲಂಕಾರಾನ್ಸುಲಕ್ಷಣಾನ್ ।
ಕ್ಷತ್ರಿಯಾ ಏವಮೇವಂ ಚ ತೇ ವೈ ರಾಜಸಮಾ ಮತಾಃ ॥ ೨೮ ॥

---

ಪಾಷಂಡರೇ ಮೊದಲಾದವರೊಡನೆ ಸಂಭಾಷಣೆಯನ್ನೂ, ವ್ಯರ್ಥವಾದ ಕಾಡುಹರಟೆಯನ್ನೂ, ಲೌಕಿಕ ಚಿಂತೆಗಳನ್ನೂ ಸರ್ವಥಾ ದೂರಮಾಡಬೇಕು. ಈ ಪ್ರಕಾರದಿಂದ ಭಗವದ್ಭಕ್ತನು ಸಂತೋಷದಿಂದ ಪ್ರತಿದಿನವೂ ಪುರಾಣದ ಅನುವಾದವನ್ನು ಶ್ರವಣಮಾಡಬೇಕು.

೨೪–೨೬. ಅಂದಿನ ಕಥೆಯು ಸಮಾಪ್ತವಾಗಲು ಕರತಾಡನಗಳನ್ನು ಮಾಡುತ್ತ "ಕೃಷ್ಣ! ಜಗನ್ನಾಥ! ಶ್ರೀಹರಿ! ನಿನಗೆ ಜಯವಾಗಲಿ" ಮುಂತಾದ ಕೂಗುಗಳಿಂದ ಪರಮಾತ್ಮನ ನಾಮಗಳನ್ನುಚ್ಚರಿಸುತ್ತ ಆಕಾಶ ದಿಂದಲೂ ಪ್ರತಿಧ್ವನಿಯುಂಟಾಗುವಂತೆ ಜಯಘೋಷಗಳನ್ನು ಮಾಡಬೇಕು. ಇಂತು ಮುರವೈರಿಯಾದ ಮಹಾವಿಷ್ಣುವು ಸಂತೋಷಗೊಳ್ಳಲು ಪ್ರತಿನಿತ್ಯವೂ ಮಾಡುತ್ತಿರಬೇಕು. ಪುರಾಣ ಗ್ರಂಥದ ಅನುವಾದವು ಸಂಪೂರ್ಣವಾಗುವ ದಿನದಲ್ಲಿ ಮಹಾವಿಷ್ಣುವನ್ನು ಸಂತೋಷಗೊಳಿಸುವ ಉದ್ದೇಶದಿಂದ ವ್ಯಾಸಸದೃಶನಾದ ಆ ಪೌರಾಣಿಕ ಬ್ರಾಹ್ಮಣನನ್ನು ವಿಶೇಷವಾಗಿ ವಸ್ತ್ರಗಳಿಂದಲೂ, ಪುಷ್ಪಮಾಲೆ ಗಳಿಂದಲೂ, ಚಂದನಾದಿ ಲೇಪನದ್ರವ್ಯಗಳಿಂದಲೂ, ಆಭರಣಗಳಿಂದಲೂ ಅತ್ಯಂತ ಭಕ್ತಿಯುಕ್ತನಾಗಿ ಅರ್ಚಿಸಬೇಕು.

೨೭. ತನ್ನ ಶಕ್ತಿಗನುಸಾರವಾಗಿ ಆತನಿಗೆ ವಿಧಿವಿಹಿತವಾದ ದಕ್ಷಿಣೆಯನ್ನು ಸಮರ್ಪಿಸಬೇಕು. ಯಾವ ಯಾವ ಜನರು ಯಾವ ಪದಾರ್ಥಗಳನ್ನು ದಾನ ಮಾಡಬಹುದೆಂಬುದನ್ನು ಹೇಳುವೆನು, ಈಗ ಕೇಳಿರಿ.

೨೮. ಮಹಾರಾಜರು ಅಲಂಕಾರಸಹಿತಗಳಾಗಿಯೂ ಸರ್ವಲಕ್ಷಣಲಕ್ಷಿ

ಬ್ರಾಹ್ಮಣಾಃ ಪುಸ್ತಕಾಂಶ್ಚೈವ ವಿಷ್ಣೋರರ್ಚಾಕರಂಡಿಕಾಃ ।
ಕನಕಂ ರಜತಂ ಚೈವ ಧಾನ್ಯಂ ವಸ್ತ್ರಂ ಸ್ವಭಕ್ತಿತಃ ॥ ೨೯ ॥
ವಿಶಶ್ಚ ರತ್ನಭೂಷಾಢ್ಯಾನ್ಸಿಂಧುದೇಶೋದ್ಭವಾನಪಿ ।
ಗಾಶ್ಚ ಲಕ್ಷಣಸಂಯುಕ್ತಾಃ ಸವತ್ಸಾಶ್ಚ ಪಯಸ್ವಿನೀಃ ॥ ೩೦ ॥
ಅನ್ಯಚ್ಚ ಕನಕಾದ್ಯಂ ಚ ತ್ಯಜೇಯುರ್ಧರ್ಮತತ್ಪರಾಃ ।
ಶೂದ್ರಾಃ ಪ್ರದದ್ಯುಃ ಪರಯಾ ಮುದಾ ಸಂಯುಕ್ತಮಾನಸಾಃ ॥ ೩೧ ॥
ವಾಸಾಂಸಿ ಚ ಸುವರ್ಣಂ ಚ ಧಾನ್ಯಂ ರತ್ನಾನಿ ಗಾಸ್ತಥಾ ।
ನಾನಾಲಂಕಾರಯುಕ್ತಾಶ್ಚ ಘಟೋಧ್ನೀರ್ಬಾಲಗರ್ಭಿಣೀಃ ॥ ೩೨ ॥
ಏವಂ ವೈ ದಕ್ಷಿಣಾಂ ದದ್ಯಾದ್ಯೇನ ಸಂತುಷ್ಯತೇ ಗುರುಃ ।
ಆತ್ಮನಃ ಶಕ್ತಿತೋ ವಿಪ್ರಾಃ ವಿತ್ತಶಾಠ್ಯಂ ನ ಕಾರಯೇತ್ ॥ ೩೩ ॥

---

ತಗಳಾಗಿಯೂ ಇರುವ ಆನೆಗಳನ್ನು ಸಮರ್ಪಿಸುವರು. ಕ್ಷತ್ರಿಯರೂ ಈ ದಾನ ಕ್ರಮವನ್ನೇ ಅನುಕರಿಸಬೇಕು. ಅವರೂ ರಾಜಸದೃಶರೆಂದೇ ಪರಿಗಣಿಸಲ್ಪಡುವರು.

೨೯. ಬ್ರಾಹ್ಮಣರು ಪುಸ್ತಕಗಳನ್ನೂ ವಿಷ್ಣುವಿನ ಅರ್ಚನೆಗೆ ಅನುಕೂಲವಾದ ಸಂಪುಟಗಳನ್ನೂ, ಚಿನ್ನವನ್ನೂ, ಬೆಳ್ಳಿಯನ್ನೂ, ಧಾನ್ಯಗಳನ್ನೂ, ವಸ್ತ್ರಾಲಂಕಾರಗಳನ್ನೂ ತಮ್ಮತಮ್ಮ ಭಕ್ತಿಯಿಂದ ದಾನಮಾಡಬೇಕು.

೩೦. ವೈಶ್ಯರು ರತ್ನಾಭರಣಗಳಿಂದಲಂಕೃತಗಳಾದ ಜಾತ್ಯಶ್ವಗಳನ್ನೂ, ಲಕ್ಷಣ ಸಂಪನ್ನಗಳೂ, ಕರುಗಳುಳ್ಳವುಗಳೂ, ಹಾಲು ಕೊಡುವುವುಗಳೂ ಆದ ಆಕಳುಗಳನ್ನೂ ಪೌರಾಣಿಕನಿಗೆ ಅರ್ಪಿಸಬಹುದು.

೩೧-೩೨. ಇವುಗಳಲ್ಲದೆ ಧರ್ಮತತ್ಪರರಾದ ಅವರು ಧನಕನಕಾದಿ ಇತರ ಪದಾರ್ಥಗಳನ್ನೂ ಕೊಡಬಹುದು. ಶೂದ್ರರು ಅಪಾರವಾದ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ವಸ್ತ್ರಗಳನ್ನೂ, ಚಿನ್ನವನ್ನೂ, ಧಾನ್ಯರಾಶಿಗಳನ್ನೂ, ನವರತ್ನಗಳನ್ನೂ, ಅಲಂಕಾರಸಹಿತಗಳೂ, ಪೀನಪಯೋಧರವುಳ್ಳವುಗಳೂ, ಎಳೆಯ ವಯಸ್ಸಿನವುಗಳೂ, ಗರ್ಭವನ್ನು ಧರಿಸಿರುವುವುಗಳೂ ಆದ ಬಹುವಿಧಗಳಾದ ಗೋವುಗಳನ್ನೂ ಪೌರಾಣಿಕನಿಗೆ ಒಪ್ಪಿಸಬಹುದು.

೩೩. ಬ್ರಾಹ್ಮಣಶ್ರೇಷ್ಠರಿರಾ! ಈ ವಿಧವಾಗಿ ಆಚಾರ್ಯನು ಸಂತೋಷಗೊಳ್ಳುವಂತೆ ಶ್ರೋತೃಗಳು ಗುರುದಕ್ಷಿಣೆಯನ್ನು ಸಮರ್ಪಿಸಬೇಕು. ಪ್ರತಿಯೊಬ್ಬನೂ ತನ್ನ ಸರ್ವಶಕ್ತಿಯಿಂದಲೂ ದಾನಮಾಡಬೇಕಲ್ಲದೆ ಧನಲೋಭವನ್ನೆಂದಿಗೂ ಮಾಡಲಾಗದು.

ಶಾಂತಿಕಂ ಪೌಷ್ಟಿಕಂ ಚೈವ ವ್ರತೋದ್ವಾಹಾದಿ ಕರ್ಮ ಚ ।
ಮೋಕ್ಷಸ್ಯ ಸಾಧಕಂ ಕರ್ಮ ಪುರಾಣಶ್ರವಣಂ ತಥಾ ॥ ೩೪ ॥
ಯಜ್ಞಾದಿಕಂ ಚ ದಾನಂ ಚ ವ್ರತಂ ನಾನಾವಿಧಂ ತಥಾ ।
ಯದಿ ಚೇದ್ದಕ್ಷಿಣಾಹೀನಂ ತದಾ ಭವತಿ ನಿಷ್ಫಲಂ ॥ ೩೫ ॥
ಅಸುರಾಃ ಕರ್ಮಣಸ್ತಸ್ಯ ಹರಂತಿ ಫಲಮೇವ ತತ್ ।
ಯಥಾ ಸ್ತ್ರೀಣಾಂ ಚ ಲಾವಣ್ಯಂ ಭರ್ತೃಸ್ನೇಹವಿವರ್ಜಿತಂ ॥ ೩೬ ॥
ಯುದ್ಧಾತ್ಪಲಾಯಿತಾನಾಂ ಚ ಪೃಷ್ಠಂ ಕೃತ್ವಾ ಧನುಷ್ಮತಾಂ ।
ವಿನಾ ಧಾವನಮಶ್ವಾನಾಂ ದುಷ್ಟತ್ವಂ ಹಿ ಯಥಾ ದ್ವಿಜಾಃ ॥ ೩೭ ॥
ಮೂಕತ್ವೇನೇವ ಪಾಂಡಿತ್ಯಂ ಸರ್ವಶಾಸ್ತ್ರವಿಪಶ್ಚಿತಾಂ ।
ಹೀನಂ ದಕ್ಷಿಣಯಾ ಯದ್ಯತ್ಕರ್ಮ ತದ್ವಚ್ಚ ನಿಷ್ಫಲಂ ॥ ೩೮ ॥
ದಾನೇನ ಕ್ಷೀಯತೇ ಯಸ್ಮಾದ್ದುರಿತಾನಾಂ ಕದಂಬಕಂ ।
ದಕ್ಷಿಣೇತಿ ತಥಾ ವಿಪ್ರಾ ಗೀಯತೇ ಶಾಸ್ತ್ರವೇದಿಭಿಃ ॥ ೩೯ ॥

---

೩೪. ವ್ರತ, ವಿವಾಹಾದಿ ಕರ್ಮಗಳು ಮನುಷ್ಯನಿಗೆ ಶಾಂತಿಯನ್ನೂ ಐಹಿಕಭೋಗಗಳನ್ನೂ ಸಂಪಾದಿಸಿಕೊಡುವುವು. ಆದರೆ ಪುರಾಣಶ್ರವಣವೆಂಬ ಕರ್ಮವು ಮೋಕ್ಷವನ್ನು ಸಾಧಿಸುವ ಸದುಪಾಯವಾಗಿರುವುದು.

೩೫–೩೬. ಯಜ್ಞಾದಿಕ್ರಿಯೆಗಳಾಗಲಿ, ದಾನವಾಗಲಿ, ವ್ರತಾಚರಣೆಯಾಗಲಿ, ನಾನಾವಿಧವಾಗಿದ್ದರೂ ಗುರುದಕ್ಷಿಣಾರಹಿತಗಳಾದರೆ ಕೇವಲ ನಿಷ್ಫಲಗಳೇ ಆಗಿ ಪರಿಣಮಿಸುವುವು. ಅಂತಹ ಕರ್ಮಗಳ ಸಮಗ್ರಫಲವನ್ನೂ ದಾನವರೇ ಕಸಿದುಕೊಂಡು ಹೋಗುವರು. ಪತಿಸ್ನೇಹದಿಂದ ವರ್ಜಿತರಾದ ನಾರೀಮಣಿಯರ ಲಾವಣ್ಯದಂತೆ ಅವು ವ್ಯರ್ಥವೇ ಸರಿ.

೩೭–೩೮. ಯುದ್ಧರಂಗದಲ್ಲಿ ಬೆನ್ನುತೋರಿಸಿ ಧನುರ್ಬಾಣಗಳನ್ನು ಹಿಡಿದು ಓಡಿಹೋಗುತ್ತಿರುವ ಯೋಧರು ಹೇಗೆ ದುಷ್ಟರೊ, ಸಮಯದಲ್ಲಿ ವೇಗವಾಗಿ ಓಡದ ಕುದುರೆಯು ಹೇಗೆ ನಿರುಪಯೋಗವೊ, ಸಕಲ ಶಾಸ್ತ್ರಾರ್ಥಗಳನ್ನೂ ಕೂಲಂಕಷವಾಗಿ ತಿಳಿದ ಜ್ಞಾನಿಗಳಾಗಿದ್ದವರು ಮೂಕರಾದಲ್ಲಿ ಹೇಗೆ ಅಪ್ರಯೋಜಕರೊ ಹಾಗೆಯೇ ದಕ್ಷಿಣಾರಹಿತವಾಗಿ ಯಾವ ಯಾವ ಕರ್ಮವನ್ನು ಮಾಡಿದರೂ ನಿಷ್ಫಲವೆನಿಸುವುದು.

೩೯. ಎಲೈ ಬ್ರಾಹ್ಮಣರಿರಾ! ಯಾವುದರ ದಾನದಿಂದ ದಾತೃವಿನ ಪಾತಕಸಮೂಹಗಳು ಕ್ಷಯವನ್ನು ಹೊಂದುವುವೊ, ಅದನ್ನೇ ಶಾಸ್ತ್ರಜ್ಞರಾದವರು ದಕ್ಷಿಣೆಯೆಂಬುದಾಗಿ ಕರೆಯುವರು.

ತತೋ ವಿಪ್ರಾನ್ಭೋಜಯೇದ್ವೈ ಯಥಾಶಕ್ತಿ ಪ್ರಕಲ್ಪಿತೈಃ ।
ಕರ್ಪೂರರೇಣ ಚ ಖಂಡೇನ ಸರ್ಪಿಷಾ ಪಾಯಸೈರ್ಯುತೈಃ ॥ ೪೦ ॥
ಷಡ್ವಿಧೈರನ್ನಪಾನಾದ್ಯೈಃ ಸುಸ್ವಾದೈರಮೃತೋಪಮೈಃ ।
ತೇಭ್ಯೋಽಪಿ ಸ್ವರ್ಣವಸ್ತ್ರಾದಿ ಯಥಾಶಕ್ತ್ಯಾ ಪ್ರದಾಪಯೇತ್ ॥ ೪೧ ॥
ಏತದ್ವಃ ಕಥಿತಂ ಸರ್ವಂ ಪುರಾಣಶ್ರವಣಸ್ಯ ಚ ।
ಸಾಂಗೋಪಾಂಗವಿಧಾನಂ ಚ ಯೇನ ಸ್ಯಾತ್ಸಫಲಂ ತ್ವಿದಂ ।
ಇದಾನೀಂ ಭೋ ಮುನಿಶ್ರೇಷ್ಠಾಃ ಕಿಮನ್ಯಜ್ಜ್ಞಾತುಮಿಚ್ಛಥ ॥ ೪೨ ॥

ಮುನಯ ಊಚುಃ:—

ಅಹೋಽಸ್ಮಾಕಂ ಮಹಾಭಾಗ್ಯಂ ಯತ್ಪಾಪೌಘನಿನಾಶನಂ ।
ಪುರಾಣಶ್ರವಣಸ್ಯೈವ ಫಲಮಸ್ಮಾಭಿರೇವ ಚ ॥ ೪೩ ॥
ಸಾಂಗೋಪಾಂಗವಿಧಾನಂ ಚ ಶ್ರುತಂ ತ್ವನ್ಮುಖಪಂಕಜಾತ್ ।
ಧನ್ಯಾಃ ಸ್ಮ ಕೃತಪುಣ್ಯಾಃ ಸ್ಮ ಸಂಸಾರೇ ವಿಗತಜ್ವರಾಃ ॥ ೪೪ ॥
ಇದಾನೀಮಾತ್ಮಶಕ್ತ್ಯಾ ವೈ ದೀಯತೇ ಭವತೇ ಮುನೇ ।
ದಕ್ಷಿಣಾ ಫಲಸಂಪ್ರಾಪ್ತ್ಯೈ ಪ್ರಸನ್ನಸ್ತ್ವಂ ಗೃಹಾಣ ಚ ॥ ೪೫ ॥

---

೪೦. ಒಳಿಕ ಶಕ್ತ್ಯನುಸಾರವಾಗಿ ಪಚ್ಚಕರ್ಪೂರ, ಖಂಡಸಕ್ಕರೆ, ತುಪ್ಪ, ಪಾಯಸಾದಿಗಳಿಂದ ಕೂಡಿದ ಮೃಷ್ಟಾನ್ನದಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೪೧. ರುಚಿಕರಗಳೂ, ಅಮೃತಸಮಾನಗಳೂ, ಆದ ಆರು ವಿಧಗಳಾದ ಅನ್ನಪಾನಗಳಿಂದ ಅವರನ್ನು ಸಂತೋಷಗೊಳಿಸಿ ಯಥಾಶಕ್ತಿಯಾಗಿ ಅವರಿಗೂ ಸಹ ಸ್ವರ್ಣ, ವಸ್ತ್ರಾದಿಗಳನ್ನು ಕೊಡಿಸಬೇಕು.

೪೨. ಮುನಿಶ್ರೇಷ್ಠರಿರಾ ! ಪುರಾಣಶ್ರವಣವು ಸಾಫಲ್ಯವನ್ನು ಹೊಂದುವುದಕ್ಕಾಗಿ ಶ್ರವಣಮಾಡುವ ವಿಧಾನವನ್ನೂ ಶ್ರೋತೃಗಳು ಆಚರಿಸಬೇಕಾದ ನಿಯಮಗಳನ್ನೂ ಸಾಂಗೋಪಾಂಗವಾಗಿ ನಿಮಗೆ ವಿವರಿಸಿರುವೆನು. ಇದರಿಂದ ನಿಮ್ಮ ಜಗನ್ನಾಥಮಾಹಾತ್ಮ್ಯದ ಶ್ರವಣವೂ ಸಫಲವಾಯಿತು. ಈಗ ಮತ್ತೆ ಯಾವುದನ್ನು ತಿಳಿಯಲಪೇಕ್ಷಿಸುತ್ತಿರುವಿರಿ ?

೪೩–೪೪. ಮುನಿಗಳು ಹೇಳುತ್ತಾರೆ :—ಜೈಮಿನಿಮಹರ್ಷಿಯೆ ! ನಮ್ಮದೇ ಮಹಾಭಾಗ್ಯವು. ಸಮಸ್ತ ಪಾತಕಗಳ ಸಮೂಹವನ್ನು ನಾಶಗೊಳಿಸುವ ಪುರಾಣಶ್ರವಣದ ಮಾಹಾತ್ಮ್ಯವನ್ನೂ ಅಂಗೋಪಾಂಗಸಹಿತವಾದ ಶ್ರವಣ ವಿಧಾನವನ್ನೂ ನಿನ್ನ ಮುಖಕಮಲದಿಂದ ಕೇಳಿರುವೆವು. ನಾವೇ ಧನ್ಯತಮರು. ಪುಣ್ಯವನ್ನು ಮಾಡಿದವರು. ಇಂದು ನಮಗೆ ಸಂಸಾರದಲ್ಲಿ ಅಭಿಮಾನವು ಕಳೆದುಹೋಯಿತು.

೪೫. ಮಹಾಮುನಿಯೆ! ಈಗ ಜಗನ್ನಾಥಮಾಹಾತ್ಮ್ಯಶ್ರವಣದ ಸಂಪೂರ್ಣ

ಇತ್ಯುಕ್ತವಂತೋ ಮುನಯೋ ಹ್ಯಕಿಂಚನಾಃ
ಸಮಿತ್ಕುಶಂ ಪುಷ್ಪಫಲಾಕ್ಷತಾದಿಕಂ ।
ಕ್ಲಪ್ತ್ವಾ ಚ ತಸ್ಮೈ ಮುನಯಃ ಸುಮುಕ್ತಾಃ
ಕ್ಷೇತ್ರೋತ್ತಮಂ ಜಗ್ಮುರತಿಪ್ರಹರ್ಷಿತಾಃ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿ ಸಂವಾದೇ "ಪುರಾಣಶ್ರವಣವಿಧಿವರ್ಣನಂ" ನಾಮ ಏಕೋನಪಂಚಾಶತ್ತಮೋಽಧ್ಯಾಯಃ

## ಪುರುಷೋತ್ತಮಕ್ಷೇತ್ರಮಾಹಾತ್ಮ್ಯಂ ಸಮಾಪ್ತಂ

---

ಫಲವನ್ನು ಹೊಂದುವುದಕ್ಕಾಗಿ ನಾವು ನಮ್ಮ ಅನುಕೂಲವನ್ನನುಸರಿಸಿ ನಿನಗೆ ಗುರುದಕ್ಷಿಣೆಯನ್ನು ಸಮರ್ಪಿಸುವೆವು. ನೀನು ಪ್ರಸನ್ನಮನಸ್ಕನಾಗಿ ಅದನ್ನು ಸ್ವೀಕರಿಸಬೇಕು.

೪೬. ಇಂತೆಂದು ಬಿನ್ನವಿಸಿ ನಿಷ್ಕಿಂಚನರಾದ ಆ ಮುನಿಗಳೆಲ್ಲರೂ ಜೈಮಿನಿ ಮಹಾಮುನಿಗೆ ಸಮಿತ್ತುಗಳು, ಕುಶದರ್ಭೆಗಳು, ಪುಷ್ಪಗಳು, ಫಲಗಳು, ಲಾಜಾಕ್ಷತೆಗಳೇ ಮುಂತಾದುವುಗಳನ್ನು ಭಕ್ತಿಯಿಂದರ್ಪಿಸಿ ಸಂಸಾರಬಂಧನ ದಿಂದ ಮುಕ್ತರಾಗಿ ಅಪರಿಮಿತಾನಂದದಿಂದ ಉತ್ತಮಸ್ಥಾನವಾದ ಪುರುಷೋತ್ತಮಕ್ಷೇತ್ರವನ್ನು ಕುರಿತು ಪ್ರಯಾಣಮಾಡಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯದ ಜೈಮಿನಿಋಷಿಸಂವಾದದಲ್ಲಿ "ಪುರಾಣಶ್ರವಣವಿಧಿವರ್ಣನ"ವೆಂಬ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

## ಪುರುಷೋತ್ತಮ ಕ್ಷೇತ್ರ ಮಾಹಾತ್ಮ್ಯವು ಮುಗಿದುದು

